ಮನೋಹರ ಗ್ರಂಥಮಾಲೆಯ ರೌಪ್ಯಮಹೋತ್ಸವ ಸಂಪುಟ



# ನಡೆದು ಬಂದ ದಾರಿ

ಸಂಪುಟ ೧


ಸಂಪಾದಕರು :

ಜಿ. ಬಿ. ಜೋಶಿ

ಕೀ. ನಾ. ಕುರ್ತಕೋಟಿ



ಅಗಸ್ಟ ೧೯೫೮

ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ

# ಮೊದಲ ಮಾತು

ಅವತರಣಿಕೆ :

" ಇಂದಿನ ಅಗಸ್ಟ ೧೫ರ ಕೂಡು-ದಾರಿಯನ್ನು ಮುಟ್ಟಿ, ನಡೆದು ಬಂದ ದಾರಿಯನ್ನು ಕುತೂಹಲದಿಂದ ಹಿಂದಿರುಗಿ ಅವಲೋಕಿಸಿದಾಗ ಹಿಂದಿನ ಅನುಭವಗಳೆಲ್ಲ ಯಾರದೋ ಕಥೆಯಾಗಿ ಕಣ್ಣಿಗೆ ಕಟ್ಟುತ್ತವೆ." ಅವನ್ನೇ ಒಬ್ಬ ಪ್ರೇಕ್ಷಕನಾಗಿ ತಮ್ಮೆದುರಿಗೆ ಈಗ ನಿವೇದಿಸುತ್ತೇನೆ.

ಕಣ್ಣು ಹೊರಳಿಸಿ ೨೫ ವರ್ಷಗಳ ಹಿಂದೆ ದೃಷ್ಟಿಯನ್ನು ಚಾಚಿದಾಗ ಮೊದಲು ಎದ್ದು ಕಾಣುವುದು ಮನೋಹರ ಗ್ರಂಥಮಾಲೆಯ ಚಿತ್ರವಲ್ಲ. ಅದಕ್ಕೆ ಕಾರಣವಾದ, ಅದಕ್ಕೂ ಹಿಂದಿನ ' ಗೆಳೆಯರ ಗುಂಪಿನ ' ಚಿತ್ರ.

ಸುಮಾರು ೩೫ ವರ್ಷಗಳ ಹಿಂದೆ ರಾಷ್ಟ್ರೀಯ ಜಾಗೃತಿಯ ಗಾಳಿ ಉತ್ತರದಿಂದ ಇತ್ತ ಅದೇ ಬೀಸುತ್ತಿದ್ದಾಗ, ಉತ್ತರಕರ್ನಾಟಕದ ಧಾರವಾಡದಲ್ಲಿ ಹೊಡೆಯೊಡೆಯಲು ಬೆಳೆದು ನಿಂತ ಬೆಳೆ, ಆ ಸೋಂಕು ತಾಕಿ ಹೊಡೆಯಲ್ಲಿಯೇ ಕಾಳು ಹಿಡಿಯಿತು. ಮುಂದೆ ಹೊಡೆಯೊಡೆದು ತೆನೆ ಬಂತು ; ಅದೇ ' ಗೆಳೆಯರ ಗುಂಪು ' ಆಯಿತು. ಮೊದಲ ಕಾಳು ಹಿಡಿದವರೇ ಈಗ ಕನ್ನಡನಾಡಿಗೇ ವರಕವಿಗಳಾಗಿ ನಿಂತ ಶ್ರೀ. ದ. ರಾ. ಬೇಂದ್ರೆಯವರು. ಕಾಳಿಗೆ ಕಾಳು ಕೂಡಿಸಿಕೊಂಡರು. ಒಂದಕ್ಕೊಂದು ರಸ ಹರಿದಾಡುವಂತೆ ಮಾಡಿದರು. ಕಾಳು ತುಂಬಿದ ತೆನೆಯಾಗಿ ತಲೆಯೆತ್ತಿತು. ಅದೇ ಕನ್ನಡ ಹೊಸ ಸಾಹಿತ್ಯದ ಮೊದಲ ತೆನೆಯಾಯಿತು.

" ಹೊಸ ಕಾಲಕ್ಕನುಗುಣವಾಗಿ ಹೊಸ ಸಾಹಿತ್ಯವನ್ನು ನಿರ್ಮಿಸಲು ಸಮಾನಧರ್ಮದ ಉತ್ಸಾಹಿ ಗೆಳೆಯರ ಗುಂಪೊಂದು ಶ್ರೀ. ಬೇಂದ್ರೆಯವರ ಮೂಲಸ್ಫೂರ್ತಿಯಿಂದ ಅವರ ಸುತ್ತು ನೆರೆಯಿತು. ಅವರೇ ಅದಕ್ಕೆ ಕೇಂದ್ರವಾಗಿ ನಿಂತರು. ಹೊಸ ಕನ್ನಡಸಾಹಿತ್ಯಕ್ಕೆ ನವೋದಯದ ಕಾಲ ಆಗಲೇ ಪ್ರಾರಂಭವಾಯಿತು. ಕೆಲ ಗೆಳೆಯರು ರವೀಂದ್ರರ ಶಾಂತಿನಿಕೇತನಕ್ಕೆ ಇವರ ಪ್ರೇರಣೆಯಿಂದಲೇ ಹೋಗಿ ಬಂದರು. ರವೀಂದ್ರರ ಆ ಶಾಂತಿನಿಕೇತನದ ಕಾವ್ಯಜೀವನ, ಪಾಂಡಿಚೇರಿಯ ಶ್ರೀ. ಅರವಿಂದರ ಅಧ್ಯಾತ್ಮ ಜೀವನ, ' ಎ. ಈ. ', ' ಮೆಟರ್‌ಲಿಂಕ್ ', ಮೊದಲಾದವರ ಗ್ರಂಥಗಳಲ್ಲಿಯ ಸ್ವಪ್ನಜೀವನ ಈ ಗುಂಪಿಗೆ ವಸಂತಪ್ರೇರಣೆಯಾಗುತ್ತಿದ್ದವು. ಗುಂಪಿನ ಗೆಳೆಯರೆಲ್ಲ ಒಂದಿಲ್ಲ ಒಂದು ದೃಷ್ಟಿಯಿಂದ ಆದರ್ಶವಾದಿಗಳು, ಕನಸಿಗರು. ಹೊಸ ಸಾಹಿತ್ಯದ ರೂಪರೇಷೆಗಳು, ಅದರ ವಿವಿಧ ಛಂದೋವಿಲಾಸಗಳು, ಚೆಲುವು-ನಿಲುವುಗಳು ಆಗಲೇ ಅವರ ಕನಸಿನ ಕಣ್ಣುಗಳಿಗೆ ಗೋಚರವಾಗಿದ್ದವು.

**ಗುಂಪಿನ ಉದ್ದೇಶ, ಒಬ್ಬೊಬ್ಬರಲ್ಲಿಯೂ ಹುದುಗಿದ್ದ ಶಕ್ತಿವಿಕಾಸಕ್ಕೆ— ಅದು ಯಾವುದೇ ಇರಬಹುದು — ಅನುವು, ಅನುಕೂಲ ಒದಗಿಸಿಕೊಡುವುದೇ ಆಗಿತ್ತು. ಸಾಹಿತ್ಯಸೃಷ್ಟಿ, ಸಾಹಿತ್ಯದ ಅಭ್ಯಾಸ, ಸಾಹಿತ್ಯವಿನೋದ, ಬರೆಯುವದು, ಬರೆದದ್ದನ್ನು ಗೆಳೆಯ ರಸಿಕರಿಗೆ ಓದಿತೋರಿಸುವದು, ಪ್ರಕಟಗೊಳ**

ಸುವದು — ಇವು ಅವರ ದೈನಂದಿನ ಚಟುವಟಿಕೆಗಳಾಗಿದ್ದವು. ಆಗಿನ ಕಾಲ ಅಮೋಘವಾದ ಸೃಷ್ಟಿಕಾಲ ; ಹೊಸಗನ್ನಡಸಾಹಿತ್ಯದ ಚಾಂದ್ರಮಾನ. ಕಸ್ತು ಗಾರಿಕೆಯ ಬೆಳುದಿಂಗಳಲ್ಲಿ ಅರಳಿದ ಸಾಹಿತ್ಯಪುಷ್ಪಗಳಿಗೆ ಲೆಕ್ಕವೇ ಇಲ್ಲ. ಬೇಂದ್ರೆ ಯವರ ಗಾರುಡಿಗನ ಮೋಡಿಗೋ ಅಥವಾ ತರುಣ ಸಾಹಿತಿಗಳ ಅಂತರಂಗದ ಆಸೆಗಳ ಒತ್ತಡಕ್ಕೋ, ಹೊಸಸಾಹಿತ್ಯದ ದೈವ ಫಲವಾಗಿ ಬಂದದ್ದರಿಂದಲೋ ಸಾಹಿತ್ಯದ ಪೈರು ಹುಲುಸಾಗಿ ಬೆಳೆಯಿತು. ಮೊದಲಸೆಯ ಪ್ರತಿ ಕಾಳೂ ಒಂದೊಂದು ತೆನೆ ಬಿಟ್ಟಿತು.

ಸಾಹಿತ್ಯಸೃಷ್ಟಿ ಅವರಿಗೆ ಲೀಲೆಯಾಗಿತ್ತು. 'ಲೀಲೆಯುಲಿ ಯಾವುದೂ ನಿಫಲ ವಲ್ಲ' ಎಂಬ ತಿಳಿವಳಿಕೆಯೂ ಅವರಿಗಿತ್ತು. ಗೆಳೆಯರ ಗುಂಪಿನ ಪ್ರಥಮ ಕವನ ಸಂಕಲನ 'ಹಕ್ಕಿ ಹಾರುತಿದೆ' ಹೊಸಗನ್ನಡ ಕಾವ್ಯದ ನಾಂದಿಯಾಗಿದೆ. ಆದರೂ ಗುಂಪಿನ ಸಿದ್ಧಿಗಳನ್ನೆಲ್ಲ ಇತಿಹಾಸವಾಗಿ ನಿರೂಪಿಸಲು, ಒಂದು ಸಾಧನೆ ಬೇಕಾಗಿತ್ತು ; ಗುಂಪಿನ ಗೆಳೆಯರ ಬರವಣಿಗೆಗಳನ್ನು ಪ್ರಕಟಗೊಳಿಸಲು ಒಂದು ಮಾಧ್ಯಮ ಬೇಕಾಗಿತ್ತು. ಅದಕ್ಕಾಗಿಯೇ "ಸ್ವಧರ್ಮ" "ಜಯಕರ್ನಾಟಕ" ಪತ್ರಿಕೆಗಳನ್ನು ತೆಗೆದುಕೊಂಡು ಕೆಲ ವರ್ಷ ನಡೆಸಿದರು. ಜಯಕರ್ನಾಟಕ ಗ್ರಂಥಮಾಲೆ ಹುಟ್ಟಿ ಗೆಳೆಯರ ಅದೆಷ್ಟೋ ಗ್ರಂಥಗಳು ಹೊರಕ್ಕೆ ಬಂದವು. ನಾಡಹಬ್ಬವನ್ನು ಪ್ರಾರಂಭಿಸಿ ಗೆಳೆಯರ ಗುಂಪು 'ಒಂದೇ ಒಂದೇ ಕರ್ನಾಟಕ ವಂದೇ' ಎಂಬ ಭಾವನೆ ಬೆಳೆಯಲು ದಾರಿಮಾಡಿಕೊಟ್ಟಿತು.

ಆದರೆ ಯಾವ ದೈವದ ಶಾಪವೋ ಗುಂಪು ಆಕಸ್ಮಿಕವಾಗಿ ಒಡೆಯಿತು. ಅನಿವಾರ್ಯವಾಗಿ ಗುಂಪಿಗೆ ಮಂಗಳವೆತ್ತಿದಾಗ ಗೆಳೆಯರ ಮನಸ್ಸಿನಲ್ಲಿ ಉಳಿದದ್ದು ಶೂನ್ಯತೆಯೊಂದೇ. ಪ್ರಾರಂಭಿಕ ಸ್ಫೂರ್ತಿ ಪ್ರೇರಣೆಗಳಷ್ಟೇ ತಮ್ಮ ಕರ್ತವ್ಯವೆಂದು ತಿಳಿದೊ ಏನೋ ಗುಂಪು ಕರಗಿಹೋಯಿತು. ಸತ್ಯದರ್ಶನವನ್ನು ಮಾತ್ರ ಸಾಧಿ, ಕಂಡು ಮರೆಯಾಗುವ ಕನಸಿನಂತೆ ಗುಂಪು ತನ್ನ ಕ್ಷಣಿಕ ಆದರೂ ಪರಿಣಾಮದಲ್ಲಿ ದೀರ್ಘ ಜೀವನವನ್ನು ಮುಗಿಸಿತು.

ಆದರೆ ಎಲ್ಲಿಯೋ ಈ ಒಣಗಿದ ವೃಕ್ಷದ ರೆಂಬೆಯೊಂದು ಚಿಗರುತ್ತಿತ್ತು. ಗುಂಪಿನ ಆದರ್ಶಸಾಧನೆಗಳು ಮುಂದುವರಿಯಬೇಕಾಗಿತ್ತು. ಅದರ ಫಲವೆ ಈ ಮನೋಹರ ಗ್ರಂಥಮಾಲೆಯ ಸ್ಥಾಪನೆ."

"ಗೆಳೆಯರ ಗುಂಪಿನವರು ನಡೆಸುತ್ತಿದ್ದ 'ಜಯಕರ್ನಾಟಕ' 'ಜಯ ಕರ್ನಾಟಕ ಗ್ರಂಥಮಾಲೆ' 'ಜಯಕರ್ನಾಟಕ ಮುದ್ರಣಾಲಯ' ಇವು ಒಂದು ಸಾಂದರ್ಭಿಕ ವೈಪರೀತ್ಯದಿಂದ ಸಿಡಿದು ಒಡೆದು ಹೋದಾಗ ಗೆಳೆಯರಲ್ಲಿ ಒಂದಾಗಿ ಕೆಲಸ ಮಾಡುತ್ತಿದ್ದ ಪ್ರಲ್ಹಾದ ನರೇಗಲ್, ಗೋವಿಂದ ಚುಳುಕಿ, ಕೃಷ್ಣಶರ್ಮ ಬೆಟಗೇರಿ ಈ ಮೂವರು ಶಂ. ಬಾ. ಜೋಶಿಯವರ ಮೂಲ ಪ್ರೇರಣೆಯಿಂದ ದಿವಂಗತ ಕೆ. ಜಿ. ರಾಯದುರ್ಗರ ಮುದ್ರಣಾಲಯದ ಸಹಾಯ ಪಡೆದು, ಪ್ರತ್ಯೇಕ ಒಂದು ಗ್ರಂಥಮಾಲೆಯನ್ನು ಪ್ರಾರಂಭಿಸುವ ಯೋಚನೆಯನ್ನು ಮಾಡಿ, ಗಣೇಶನೇ ಅಗ್ರಪೂಜಿತರೆಂದು 'ಆನಂದಕಂದ'ರ "ಸುದರ್ಶನ" ಎಂಬ ಕಾದಂಬರಿಯಿಂದ ಅದನ್ನು ಪ್ರಾರಂಭಮಾಡಿದರು. ಇದಕ್ಕೆ "ಮನೋಹರ ಗ್ರಂಥಮಾಲೆ" ಎಂದು

ಹೆಸರಿಟ್ಟವರೂ ಆನಂದಕಂದರೇ. ಜಿ. ಬಿ. ಯವರೂ ಇವರ ಈ ಕಾರ್ಯದಲ್ಲಿ ಸಹಕಾರಿಗಳಾಗಿದ್ದರು."

"ಮುರಿದು ಹೋದ ಗುಂಪನ್ನು ಬೇರೊಂದು ರೀತಿಯಲ್ಲಿ ಮತ್ತೆ ನಿರ್ಮಿಸುವುದೇ ಗ್ರಂಥಮಾಲೆಯ ಉದ್ದೇಶವಾಗಿತ್ತು. ಅದೂ ಅಲ್ಲದೆ ಅಖಿಲ ಕರ್ನಾಟಕದ ಸಾಹಿತಿಗಳಿಗಾಗಿ ಒಂದು ಸಾಮಾನ್ಯವಾದ ವಿಶ್ರಾಮಸ್ಥಾನವನ್ನು ಕಲ್ಪಿಸಬೇಕಾಗಿತ್ತು."

ಮುಂಬೈಯ ಜಯಂತಿಲಾಲ ಗಾಂಧಿ ಎಂಬ ಹೆಸರಿನ ಕಾಗದವ್ಯಾಪಾರಿಗಳು ಮೂರುತಿಂಗಳ ಪರ್ಶನಿ ಹುಂಡಿಯಿಂದ 'ಮ್ಯಾಚ್ಬ್ಯಾಂಕಿ'ನ ಮುಖಾಂತರ ಕಳಿಸುತ್ತಿದ್ದ ಉದ್ರಿ ಕಾಗದ, ದಿವಂಗತ ಕೆ. ಜಿ. ರಾಯದುರ್ಗ ಇವರು ತಮ್ಮ 'ಮೋಹನ ಮುದ್ರಣಾಲಯ'ದಲ್ಲಿ ಮಾಡಿಕೊಡುತ್ತಿದ್ದ ಉದ್ರಿ ಮುದ್ರಣ, ಹಣ ಕೇಳದೆ ಬರೆದು ಕೊಡುವ ಲೇಖಕರ ಅಮೂಲ್ಯ ಸಾಹಿತ್ಯ ಈ ಮೂರರ ಸಹಕಾರದಿಂದ ಕೈಯಿಂದ ಒಂದು ಕಾಸು ಕೂಡ ಹಾಕಲು ಯೋಗ್ಯತೆ ಇಲ್ಲದಾಗಲೂ ಮನೋಹರ ಗ್ರಂಥ ಮಾಲೆ ಪ್ರಾರಂಭವಾಯಿತು.

"ಕೂಡಲೆ ಪ್ರಲ್ಹಾದ ನರೇಗಲ್ ಅವರು ಬೇರೆ ಕೆಲಸಕ್ಕೆ ಸೇರಿಕೊಂಡರು. ಶಂ. ಬಾ. ಜೋಶಿಯವರು ಪ್ರಾರಂಭದಲ್ಲಿಯಂತೆ ಹೆಚ್ಚಾಗಿ ಸಲಹೆಗಾರರಾಗಿಯೆ ಉಳಿದರು. ಆದ್ದರಿಂದ ಬೆಟಗೇರಿ ಕೃಷ್ಣಶರ್ಮ, ಜಿ. ವ್ಹಿ. ಚುಳಿಕಿ ಮತ್ತು ಜಿ. ಬಿ. ಇವರೇ ಹೆಚ್ಚಾಗಿ ನೋಡಿಕೊಳ್ಳಬೇಕಾಯಿತು." ಒಂದು ವರ್ಷದ ಆರು ಪುಸ್ತಕಗಳು ಈ ವ್ಯವಸ್ಥೆಯಿಂದ ಹೊರಕ್ಕೆ ಬಂದವು. ಮುಂದೆ ಗ್ರಂಥಮಾಲೆ ಮೂವರ ಭಾರವನ್ನು ತೂಗಿಕೊಂಡು ಹೋಗಲು ಅಸಮರ್ಥ ಎಂದು ಕಂಡುಬಂದದ್ದರಿಂದ, ಇದೇ ಹೊರಟ ಗ್ರಂಥಮಾಲೆಯನ್ನು ಇಷ್ಟು ಬೇಗ ನಿಲ್ಲಿಸಿದರೆ ಕನ್ನಡ ವಾಚಕರ ದೃಷ್ಟಿಯಿಂದ ಸಂಪ್ರದಾಯ ಒಳ್ಳೆಯದಲ್ಲ ಎನಿಸಿ, ಯಾರಾದರೂ ಒಬ್ಬರು ಅದನ್ನು ಮುಂದೆ ನಡೆಯಿಸಿಕೊಂಡು ಹೋಗಬೇಕೆಂದು ಮೂವರೂ ಒಪ್ಪಿದ್ದರಿಂದ ಜಿ. ಬಿ.ಯವರು ಅದರ ಭಾರವನ್ನು ಹೊತ್ತರು. ಮುಂದೆ ಕೆಲಕಾಲದ ವರೆಗೆ ಚುಳ್ಕಿಯವರ ಸಹಾಯವೂ ಇದ್ದೇ ಇತ್ತು. ಆ ಕೆಲಕಾಲದ ನಂತರ ಮತ್ತೆ ಜಿ. ಬಿ. ಯವರು ಒಬ್ಬರೆ ಆದರು.

"ಈ ಹೊಸ ಘಟಕದಲ್ಲಿಯೆ ಬೇಂದ್ರೆ, ಮುಗಳಿ, ಗೋಕಾಕ ಈ ಮೂವರನ್ನು ಸಾಹಿತ್ಯವಿಷಯದ ಸಲಹೆಗಾರರೆಂದು ದೃಢಪಡಿಸಿ ಜಿ. ಬಿ.ಯವರೊಬ್ಬರೇ ಮಾಲೆಯ ಯೋಗಕ್ಷೇಮ, ಸುಖ-ದುಃಖ, ಕೀರ್ತಿ-ಅಪಕೀರ್ತಿಗಳನ್ನು ಹೊರಬೇಕಾಯಿತು. ಈ ಮೂವರೂ ೧೫–೨೦ ವರ್ಷಗಳ ವರೆಗೆ ನಿರಪೇಕ್ಷ ಬುದ್ಧಿಯಿಂದ ಆತ್ಮೀಯರಾಗಿ ತಮ್ಮ ಹೆಸರು, ಮತ್ತು ಉಪಯುಕ್ತ ಸಲಹೆಗಳನ್ನು ಕೊಟ್ಟು ಗ್ರಂಥಮಾಲೆಯ ಗೌರವವನ್ನು ಹೆಚ್ಚಿಸಿದರು. ಈ ಸಂಪುಟವನ್ನು ಸಂಪಾದಿಸುವ ಕಾರ್ಯದಲ್ಲಿ ನನ್ನ ಜೊತೆಯಾಗಿ ನಿಂತು ಕೆಲಸ ಮಾಡಿದ ಕೀರ್ತಿನಾಥ ಕುರ್ತಕೋಟಿಯವರು ಈಗ ಮಾಲೆಗೆ ಒಂದು ಸುಕೃತವಾಗಿ ದೊರೆತಿದ್ದಾರೆ. ಬೇಂದ್ರೆಯವರು ಸಾಕ್ಷಿಯಾಗಿ ಮಾಲೆಯನ್ನು ತಮ್ಮ ಅಧ್ಯಕ್ಷದೃಷ್ಟಿಯ ರಕ್ಷೆಯಲ್ಲಿಟ್ಟುಕೊಂಡಿದ್ದಾರೆ. ಆದರೆ ಗ್ರಂಥಮಾಲೆಯ ಬ್ರಾಹ್ಮ, ಕ್ಷಾತ್ರ, ವೈಶ್ಯ, ಶೂದ್ರ ಎಂಬ ಚತುರ್ಮುಖ ಸೇವೆಯನ್ನು ಜಿ. ಬಿ.ಯವರೇ ನಡೆಸುತ್ತಿದ್ದಾರೆ. ಇದರಲ್ಲಿ ಅವರ ಪಾಲಿಗೆ ಸಂಪಾದನ ವಿಭಾಗವೂ ಬರುವುದುಂಟು.

ಇದು ಸುಸಹ್ಯವಾಗುವುದಕ್ಕೆ ನೀಡಿದ ನೆರವು ವಾಚಕರದು, ಲೇಖಕರದು, ಮುದ್ರಕರದು. ಎಲ್ಲಕ್ಕೂ ಹೆಚ್ಚಾಗಿ ವೈಗುಣ್ಯಗಳನ್ನು ಸಹಿಸಿ, ಮಾಲೆಯನ್ನು ಈ ಘನತೆಗೆ ಮುಟ್ಟಿಸಿದ ಶ್ರೇಯಸ್ಸು, ಗುಣೈಕದೃಷ್ಟಿಗಳಾದ ಜ್ಞಾತಾಜ್ಞಾತ ಸಹೃದಯರದು.

ಈ ಇಪ್ಪತ್ತಾರು ವರ್ಷಗಳಲ್ಲಿ ಮಾಲೆಯ ಸಂಭ್ರಮದ ವಿವಿಧ ಸಮಾರಂಭಗಳಾದವು. ಗದಗ, ಬಾಗಿಲುಕೋಟೆಗಳಲ್ಲಿಯ ಸನ್ಮಿತ್ರರು ಇದರ ಪೋಷಣೆಗೆ ಕಾರಣರಾದರು. ಅನೇಕ ಸಾಹಿತ್ಯಕ್ರೀಡೆಗಳು, ಪ್ರಯೋಗಗಳು, ಪೂಜೆಗಳು, ನಡೆದುಹೋದುವು. ತೆರೆದ ಪುಸ್ತಕದ ಅಂಗಡಿಗಳು ಮುಚ್ಚಿದವು; ಕಟ್ಟಬೇಕೆಂದ ಮುದ್ರಣಾಲಯ ಕೈಬಿಟ್ಟುಹೋಯಿತು. ಜೊತೆಯ ಅನೇಕ ಮಿತ್ರರು ಗ್ರಂಥಮಾಲೆಗಳನ್ನು, ಪುಸ್ತಕಭಾಂಡಾರಗಳನ್ನು, ಮುದ್ರಣಾಲಯಗಳನ್ನು ಸ್ಥಾಪಿಸಿದರು, ನಡೆಸಿದರು. ಅವುಗಳಲ್ಲಿ ಕೆಲವು ಅಸ್ತವಾದರೂ ಹಲವು ಜೀವಂತವಾಗಿ ವಿಶೇಷ ಕೀರ್ತಿಯನ್ನು, ಪ್ರತ್ಯೇಕ ಸಹಾನುಭೂತಿಯನ್ನು, ಪಡೆದಿವೆ.

ಅಂದಿನಿಂದ ಇಂದಿನ ವರೆಗೆ ಈ ದೀರ್ಘ ಕಾಲಾವಧಿಯಲ್ಲಿ ಗ್ರಂಥಮಾಲೆ ೫೦ ಕಾದಂಬರಿ, ೨೦ ಸಣ್ಣಕತೆಯ ಸಂಗ್ರಹಗಳು, ೧೬ ನಾಟಕಗಳು, ೫ ಏಕಾಂಕ ಸಂಗ್ರಹಗಳು, ೩ ಚರಿತ್ರೆಗಳು, ೨ ದಿನಚರಿಗಳು, ೫ ಇತರ ಗ್ರಂಥಗಳು ಹೀಗೆ ೧೦೧ ಸಂಪೂರ್ಣ ಗ್ರಂಥಗಳನ್ನು ಪ್ರಕಟಿಸಿ ಲಲಿತಸಾಹಿತ್ಯವನ್ನು ಲೋಕಪ್ರಿಯವಾಗಿ ಸಲು ಪ್ರಯತ್ನಿಸಿದೆ.

"ಗ್ರಂಥಮಾಲೆ ಹಲವು ಬಿಡಿಮುತ್ತುಗಳನ್ನೂ ಕಾಲಕಾಲಕ್ಕೆ ಪ್ರಕಟಿಸಿದೆ. ಇದರಿಂದ ಕತೆ-ಕಾದಂಬರಿಗಳಿಂದ ವ್ಯತಿರಿಕ್ತವಾದ ಸಾಹಿತ್ಯವೂ ಮನೋಹರವಾಗಿ ಗ್ರಂಥಮಾಲೆಯಲ್ಲಿ ಸೇರಿಕೊಂಡಂತಾಗಿದೆ.

'ಜೀವನ' ಪತ್ರಿಕೆಯು ಕೆಲಕಾಲ ಮನೋಹರ ಗ್ರಂಥಮಾಲೆಯ ಛಾವಣಿಯಲ್ಲಿಯೇ ನಡೆಯಿತು. ಗ್ರಂಥಮಾಲೆ ತನ್ನ ಒಂದು ಶಪಥವನ್ನು ನಡಿಸಿಕೊಂಡೇ ಬಂದಿದೆ. ಹಲವು ಲೇಖಕರಿಗೆ ಗ್ರಂಥಮಾಲೆಯಿಂದ ದುರ್ಲಕ್ಷ್ಯವೋ, ಅನ್ಯಾಯವೋ ಆಗಿರಲೂಬಹುದು. ಆದರೆ ಗ್ರಂಥಕರ್ತನ ಹಕ್ಕನ್ನು ಕಸಿದುಕೊಳ್ಳಲು ಅದು ಸ್ವಪ್ನದಲ್ಲಿಯೂ ಯೋಚಿಸಿಲ್ಲ. ಇದರಿಂದಾಗಿ ಲೇಖಕರೊಡನೆ ಮೌಲಿಕ ಮೈತ್ರಿಗೆ ಬಾಧೆ ಬಂದಿಲ್ಲ. ಅಂತೆಯೇ ನಮ್ಮ ಈ 'ನಡೆದು ಬಂದ ದಾರಿ' ಒಂದು ಅಖಂಡ ಪರಂಪರೆಯ ಗುರುತಾಗಿ, ಕನ್ನಡ ಸಾಹಿತ್ಯದ ಇತಿಹಾಸಮಾಲೆಯು ಸಾಹಿತ್ಯದಿಂದ ಸೂಚಿತವಾಗುವದರ ಸಂಕೇತವಾಗಿ ಬಂದಿದೆ ಎಂದು ಬಹಳ ಮಟ್ಟಿಗೆ ಹೇಳಬಹುದು. ಲೋಕಯಾತ್ರೆಯಲ್ಲಿ ಅನೇಕ ಮುಖಗಳು ಮರೆಯಾಗುತ್ತವೆ. ಅನೇಕಾನೇಕ ಹೊಸ ಮುಖಗಳು ಬಂದು ಸೇರಿಕೊಳ್ಳುತ್ತವೆ. ಆದರೆ ಅದೇ ದಾರಿ, ಅದೇ ಯಾತ್ರೆ ನಿರಂತರವಾಗಿ ಸಾಗುತ್ತವೆ. ಗ್ರಂಥಮಾಲೆಯ ಸಾಹಿತ್ಯಯಾತ್ರೆ ಒಂದು ಜಾತ್ರೆಯಾಗದೆ, ಕುರುಕ್ಷೇತ್ರವಾಗದೆ, ಸಾಂಸ್ಕೃತಿಕ ಮೇಳದಂತೆ ಕಂಗೊಳಿಸುತ್ತದೆಯೆಂದು ಹೇಳಿದರೆ ಸಹೃದಯರು ಮೆಚ್ಚಿಕೊಂಡಾರು, ಒಪ್ಪಿಕೊಂಡಾರು, ಎಂಬ ಭರವಸೆ ಗ್ರಂಥಮಾಲೆಯ ಆಪ್ತೇಷ್ಟರಿಗೆ, ಹಿತಚಿಂತಕರಿಗೆ ಇದೆ. ಗ್ರಂಥಮಾಲೆಯು ಒಡ್ಡಾಟದ ಸಂಸಾರದಲ್ಲಿ ಯಾರಾರ ಕಾಲು ಯಾರಾರ ತಲೆಗೆ ಮೈಗೆ ತಾಕಿದವೋ

ಹೇಳಲು ಬಾರದು. ಎಷ್ಟೋ ಸಾರೆ ಉಗಿಬಂಡಿಯ ಮೂರನೆಯ ತರಗತಿಯಲ್ಲಿಯಂತೆ ಸಂದಿಯ ಸಮಾರಾಧನೆ ನಡೆದು, ತೊಂದರೆಗಳು ಅನಿವಾರ್ಯವಾಗಿ ಬಂದವು. ಲೇಖಕ-ವಾಚಕ-ಸಂಪಾದಕರ ಸಹಾನುಭೂತಿಯಿಂದ ಏಕರೂಪವಾದ ದೇಹದಲ್ಲಿ ನೋವು ಹರಿದಾಡುತ್ತಲೇ ಬಂದಿದೆ. ಈ ಜ್ಞಾತಾಜ್ಞಾತ ಅಪರಾಧಗಳಿಗೆ ಹತ್ತು ಸಾರೆ ಕ್ಷಮಸ್ವ ಎಂದು, ನೂರು ನಮಸ್ಕಾರ ಹಾಕಿದರೂ ಆ ಅವಿನಯ ತೊಳೆದು ಹೋಗ ಲಿಕ್ಕಿಲ್ಲ. ಆದರೆ ನಮ್ಮ ಜನರ ಹೃದಯವಂತಿಕೆಗೆ ಶರಣು ಹೋಗಿ ತಕ್ಕಮಟ್ಟಿಗೆ ಮಾನವಂತರಾಗಿ ಬಾಳಿದ್ದೇವೆ. ಸದ್ಯದ ಕ್ರಾಂತಿಯ ಕಾಲಕ್ಕೆ ಇದಕ್ಕೂ ಹೆಚ್ಚೇನನ್ನೂ ಎಂಥ ಎದೆಗಾರನು ಅಪೇಕ್ಷಿಸಬಹುದು ? ನಮ್ಮ ಸಾಹಸ ನಾಡಿನ ಸಾಹಿತ್ಯ ಸಾಹ-ಸದ ಚರಿತ್ರೆಗೆ ಸೇರಿಕೊಳ್ಳಬೇಕಾದ ಒಂದು ಭಾಗವಾಗಿದೆ. ನಾವು ಪ್ರತ್ಯೇಕ ಜಂಬ ವನ್ನಾಗಲಿ, ಪ್ರತ್ಯೇಕ ಅಪಮಾನವನ್ನಾಗಲಿ ತಾಳಿಕೊಳ್ಳಬೇಕಾಗಿಲ್ಲ. ಸಾಹಿತ್ಯದ ರಸಗಂಗೆಯಲ್ಲಿ ಎಲ್ಲವೂ ತೊಳೆದು ನಿರ್ಮಲವಾಗಿದೆ."

ಗ್ರಂಥಮಾಲೆ ಇನ್ನೂ ವರೆಗೆ ತನ್ನ ಆದರ್ಶದಿಂದ ದೂರ ಸರಿದಿಲ್ಲ. ಇಲ್ಲಿಯ ವರೆಗೆ ಪ್ರಕಟವಾದ ಗ್ರಂಥಗಳೆಲ್ಲ ವಾಚಕರಿಗೆ ಮೆಚ್ಚಿಗೆಯಾಗಿವೆ; ವಿಮರ್ಶಕ ರಿಂದ ಮನ್ನಣೆ ಪಡೆದಿವೆ. ಮಾಲೆಯ ಹೊಸ ಪ್ರಯೋಗಗಳನ್ನು ನಾಡಿನ ಜನರು ಕುತೂಹಲದಿಂದ ನಿರೀಕ್ಷಿಸುತ್ತ ಬಂದಿದ್ದಾರೆ. ಈ 'ನಡೆದು ಬಂದ ದಾರಿ' ಅಂತಹ ಹೊಸ ಪ್ರಯೋಗಗಳಲ್ಲಿ ಹೆಚ್ಚಿನ ಸಾಹಸದ್ದಾಗಿದೆ.

## ಸಂಪುಟದ ವೈಶಿಷ್ಟ್ಯ :

ಬೆಳ್ಳಿಯ ಹಬ್ಬದ ಈ ಸಂಪುಟದ ಮೂಲ ಕಲ್ಪನೆ ನಮಗೆ ಹೊಳೆದದ್ದು ೧೯೫೭ ನೆಯ ಜುಲೈ ತಿಂಗಳಲ್ಲಿ. ಅದಕ್ಕಿಂತ ಮೊದಲು, ಮನೋಹರ ಗ್ರಂಥಮಾಲೆಯಲ್ಲಿ ಈವರೆಗೆ ಪ್ರಕಟವಾಗಿದ್ದ ಕೆಲವು ಶ್ರೇಷ್ಠ ಕೃತಿಗಳನ್ನಾಯ್ದು ಒಂದು ಸಂಪುಟವನ್ನು ಪ್ರಕಟಿಸಬೇಕೆಂಬ ಯೋಚನೆಯಿತ್ತು. ಮನೋಹರ ಗ್ರಂಥಮಾಲೆಯ ಇತಿಹಾಸ ವನ್ನು ಆ ಮೂಲಕ ಸೂಚಿಸಬೇಕೆಂಬ ವಿಚಾರವಿತ್ತು. ಆದರೆ ಈಗಾಗಲೆ ಮುದ್ರಿತ ವಾಗಿ ಪ್ರಸಿದ್ಧವಾಗಿರುವ ಕೃತಿಗಳ ಪುನರ್ಮುದ್ರಣ ಮಾಡಿದಂತಾಗುತ್ತದಲ್ಲದೆ ಬೇರೇನೂ ಪ್ರಯೋಜನವಿಲ್ಲವೆಂದು ಕಂಡಿತಾದ್ದರಿಂದ ಯೋಜನೆಯನ್ನು ಬದಲಿಸ ಬೇಕಾಯಿತು. ಬದಲಾದ ಯೋಜನೆ ಕಲ್ಪನೆಗೆ ಹೊಸ ಕ್ಷಿತಿಜವನ್ನು ಕಾಣಿಸಿತು. ಇಪತ್ತೈದು ವರ್ಷಗಳ ವರೆಗೆ ಅವ್ಯಾಹತವಾಗಿ ನಡೆದು ಬಂದ ಗ್ರಂಥಮಾಲೆ ಈಗಾ ಗಲೆ ಕನ್ನಡ ಸಾಹಿತ್ಯದಲ್ಲಿಯ ಅನೇಕ ಶ್ರೇಷ್ಠ ಕೃತಿಗಳಿಗೆ ಕಾರಣವಾಗಿದೆ. ಗ್ರಂಥ ಮಾಲೆಯ ಇತಿಹಾಸ ಹೊಸಗನ್ನಡ ಸಾಹಿತ್ಯದ ಇತಿಹಾಸದ ಒಂದು ಪ್ರಮುಖ ಅಂಶವಾಗಿದೆ. ಈ ಇಪ್ಪತ್ತೈದು ವರ್ಷಗಳ ಅವಧಿಯಲ್ಲಿ ನಡೆಸಿದ ಪ್ರಯೋಗ ಗಳನ್ನು ಈ ವರ್ಷವೇ ಇನ್ನೊಮ್ಮೆ ನಡೆಸಬೇಕೆಂದು ಗೊತ್ತಾಯಿತು. ಗ್ರಂಥಮಾಲೆ ಸಾಹಿತ್ಯದ ಎಲ್ಲ ಪ್ರಕಾರಗಳನ್ನೂ ಪ್ರಕಟಗೊಳಿಸಿದೆ. ಆಯಾ ಪ್ರಕಾರಗಳ ಎಲ್ಲ ಮಾದರಿಗಳನ್ನು ಲೇಖಕರಿಂದ ಬರೆಯಿಸಿ, ಅವುಗಳ ಇತಿಹಾಸದೊಡನೆ ಸಂಪುಟ ದಲ್ಲಿ ಪ್ರಕಟಗೊಳಿಸಬೇಕೆಂಬ ವಿಚಾರ ಕೊನೆಯದಾಗಿ ರೂಪುಗೊಂಡಿತು ; 'ನಡೆದು ಬಂದ ದಾರಿ' ಎಂಬ ತಲೆಬರಹಕ್ಕೆ ಮೊದಲಿದ್ದ ಪರಿಮಿತವಾದ ಅರ್ಥ ಈಗ ಇನ್ನೂ

ಹೆಚ್ಚು ವಿಸ್ತಾರಗೊಂಡಿತು. ಈ ಸಂಪುಟಗಳಲ್ಲಿ ಸಮಾವೇಶಗೊಂಡಿರುವ ಎಲ್ಲ ಕೃತಿಗಳೂ ಹೊಸದಾಗಿ ಬರೆಯಲ್ಪಟ್ಟವು. ಕನ್ನಡ ನಾಡಿನ ಸುಮಾರು ನೂರು ಮೂವತ್ತೈದು ಲೇಖಕರು ದೊಡ್ಡ ಪ್ರಮಾಣದ ಈ ಸೃಷ್ಟಿಕಾರ್ಯದಲ್ಲಿ ಅಪೂರ್ವವಾದ ಸಹಕಾರದಿಂದ ನೆರವಾಗಿದ್ದಾರೆ. ಅಂತಲೇ ಈ ಸಂಪುಟಗಳ ವಿವಿಧ ಸಾಹಿತ್ಯಪ್ರಕಾರ ಗಳ ಒಂದು ಪ್ರದರ್ಶನವಾಗದೆ ಒಂದು ಸಮಗ್ರ ಕೃತಿಯಾಗಿ ರೂಪುಗೊಂಡಿವೆ. ಈ ಸಂಪುಟಗಳು ಕೇವಲ ಹಿಂದಿನ ಕೃತಿಗಳ ಪುನರ್ಮುದ್ರಣವಾಗಿಲ್ಲ. ಹೊಸಗನ್ನಡದ ಸಾಹಿತ್ಯ ವಿವಿಧಪ್ರಕಾರಗಳಲ್ಲಿ ಹೇಗೆ ಬೆಳೆಯುತ್ತ ಬಂದಿದೆಯೆಂಬುದನ್ನು, ಸದ್ಯ ಅದು ಯಾವ ಪ್ರಕಾರಗಳಲ್ಲಿ ಸಮರ್ಥವಾಗಿ ಪ್ರತಿನಿಧೀಕರಿಸುತ್ತದೆಂಬುದನ್ನು, ಲಕ್ಷ್ಯ ಲಕ್ಷಣ ಸಹಿತವಾಗಿ ಪ್ರಕಟಿಸುವ ಒಂದು ಜೀವಂತ ಸಂಕೇತವಾಗಿದೆ ಈ ಸಂಗ್ರಹ.

ಹೀಗೆ ಪ್ರಕಟವಾಗುವ ಸಂಪುಟಗಳು ಆನುಷಂಗಿಕವಾಗಿ ಇನ್ನೂ ಅನೇಕ ಉದ್ದೇಶಗಳನ್ನು ನೆರವೇರಿಸುತ್ತವೆ. ರಾಜಕೀಯವಾಗಿ ಒಂದಾಗಿರುವ ಕನ್ನಡನಾಡು ಇನ್ನೂ ತನ್ನ ಭಿನ್ನ ಅಂಗಗಳ ಸಾಂಸ್ಕೃತಿಕ ಪರಿಚಯವನ್ನು ಮಾಡಿಕೊಂಡಿಲ್ಲ. ಕನ್ನಡದ ಬೇರೆ ಬೇರೆ ಪ್ರದೇಶಗಳ ಆಚಾರ ವಿಚಾರಗಳು, ಇರುವಿಕೆಯ ಕ್ರಮ, ಶ್ರದ್ಧೆ ನಂಬಿಕೆಗಳು ಇವೆಲ್ಲ ಚಿತ್ರಿತವಾದ ಸಾಹಿತ್ಯ ಒಂದೇ ಕಡೆಗೆ ನಮಗೆ ದೊರೆಯು ವದಿಲ್ಲ. ಅವೆಲ್ಲವುಗಳಿಗೆ ಬಣ್ಣವೀಯುವ ಸಂಸ್ಕಾರವನ್ನು ಸಾಹಿತ್ಯವೊಂದೇ ಪ್ರಕ ಟಿಸಬಲ್ಲದು. ಈ ಸಂಪುಟಗಳಲ್ಲಿ ಅಂಥ ಲೇಖನಗಳು, ಕೃತಿಗಳು ಸಮೃದ್ಧವಾಗಿರು ವದನ್ನು ಕಾಣಬಹುದಾಗಿದೆ. ಎರಡುವರೆ ಕೋಟಿ ಜನರ ವಿವಿಧ ಆಶೋತ್ತರಗಳನ್ನು ಸಾಹಿತ್ಯದ ಮೂಲಕ ಜೀವಂತವಾಗಿ ಚಿತ್ರಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾ ಗಿದೆ. ಇದರ ಜೊತೆಗೇ ಕನ್ನಡದ ವಿವಿಧ ಪ್ರಾದೇಶಿಕ ಭಾಷೆಗಳ ಸತ್ವಸಂಪನ್ನತೆ ಯನ್ನು ಇಲ್ಲಿ ನೋಡಬಹುದಾಗಿದೆ. ಆಡು-ನುಡಿಯನ್ನು ಸಹಜವಾಗಿ ಬಳಸಿ ಕೊಳ್ಳಬಲ್ಲ ಕಾವ್ಯ ಹಾಗೂ ನಾಟಕಗಳಂಥ ಪ್ರಕಾರಗಳಲ್ಲಿ ಈ ವೈವಿಧ್ಯ ಶ್ರೀಮಂತ ವಾಗಿ ಕಂಗೊಳಿಸುತ್ತದೆ. ಇಡೀ ಕನ್ನಡನಾಡಿಗೆ ಸಾಮಾನ್ಯವಾಗಬಲ್ಲಂಥ ಒಂದು ಭಾಷೆ ರೂಪುಗೊಳ್ಳಬೇಕೆಂಬ ವಾದವೂ ಇದೆ. ಅದು ಸ್ವಾಗತಾರ್ಹವಾಗಿದ್ದರೂ ಪ್ರಾದೇಶಿಕ ಭಾಷೆಗಳ ಸ್ವರ-ಲಯ, ವರ್ಣಗಳನ್ನು ಅದು ಮುಳುಗಿಸಬಾರದು. ಪ್ರಾದೇಶಿಕ ಸತ್ವದ ಭಾವಪ್ರಪಂಚದ ಆವಿರ್ಭಾವಕ್ಕೆ ಆಡು-ನುಡಿಯ ಮಾಧ್ಯಮದಂತೆ ಬೇರೊಂದಿಲ್ಲ. ಆ ದೃಷ್ಟಿಯಿಂದ ನಮ್ಮ ಪ್ರಯತ್ನ ಸಾಧುವಾಗಿದೆಯೆಂದು ನಮ್ಮ ಭಾವನೆ.

ಈ ಸಂಪುಟಗಳಲ್ಲಿ ಸಮಾವೇಶಗೊಂಡಿರುವ ಸಾಹಿತ್ಯಕೃತಿಗಳ ಬಗ್ಗೆ ಅನೇಕ ಮಾತುಗಳನ್ನು ಹೇಳಬಹುದಾಗಿದೆ. ಹುಯಿಲುಗೋಳ ನಾರಾಯಣರಂಥವರಿಂದ ಹಿಡಿದು ಗಂಗಾಧರ ಚಿತ್ತಾಲರಂಥವರ ವರೆಗೆ — ಅಂದರೆ ಹೊಸಗನ್ನಡದ ಮೂರು ತಲೆಮಾರುಗಳ ಸಾಹಿತ್ಯಸೃಷ್ಟಿಯೂ ಇಲ್ಲಿ ರೂಪು ಪಡೆದಿದೆ. ಆದರೆ ಹೊಸಗನ್ನಡ ಸಾಹಿತ್ಯದ ಮುಖ್ಯ ಲಕ್ಷಣ ಪ್ರಾಯೋಗಿಕತೆಯಾಗಿರುವದರಿಂದ, ಆ ಸಾಹಿತ್ಯದ ವಿಕಾಸವನ್ನು ಕಾಲಕ್ರಮದಲ್ಲಿ ಗುರುತಿಸದೆ ಆಯಾ ಲೇಖಕರ ಮನೋವೃತ್ತಿಯಲ್ಲಿ, ಸಾಹಿತ್ಯಸಂಸ್ಕಾರದಲ್ಲಿ, ತಂತ್ರನೈಪುಣ್ಯದಲ್ಲಿ ಗುರುತಿಸಬೇಕಾಗಿದೆ. ಹಳೆ-ಹೊಸ ತಲೆಮಾರಿನ ಲೇಖಕರೆಲ್ಲರೂ ಪ್ರಯೋಗನಿರತರಾಗಿದ್ದಾರೆ. ಪ್ರಯೋಗದ ಸಿದ್ಧಿ

ಅದರ ನೈಜತೆಯ ಮೇಲೆ ಅವಲಂಬಿಸಿರುವದರಿಂದ, ಅಂಥ ಪ್ರಯೋಗಗಳಿಗೆ ಮಾತ್ರ ಎಡೆ ಕೊಡಲಾಗಿದೆ.

ಹೊಸಗನ್ನಡ ಸಾಹಿತ್ಯದಲ್ಲಿ ಈ ಪ್ರಯೋಗಗಳು ಭಿನ್ನಕ್ಷೇತ್ರದಲ್ಲಿ, ಭಿನ್ನ ಮಟ್ಟದಲ್ಲಿ ನಡೆದವುಗಳಾಗಿವೆ. ಪ್ರಾದೇಶಿಕ ಸತ್ವದ ಪುನರುತ್ಥಾನ ಹೊಸಗನ್ನಡದ ಕ್ರಾಂತಿ ಮಾರ್ಗಗಳಲ್ಲಿ ಒಂದಾಗಿದ್ದು, ಅದರ ಪರಿಣಾಮವಾಗಿ ದೇಶ್ಯಸಂಪ್ರದಾಯದ (folk tradition) ಕೃತಿಗಳು ಭರದಿಂದ ಬೆಳೆಯಲು ಅವಕಾಶ ಸಿಕ್ಕಿತು. ಹಳೆ-ಗನ್ನಡ ಸಾಹಿತ್ಯದಲ್ಲಿ ಮಹಾಕಾವ್ಯವೊಂದರಲ್ಲೆ ದೇಸಿ-ಮಾರ್ಗಗಳ ಸಮನ್ವಯವನ್ನು ಕಾಣಬಹುದಾಗಿತ್ತು; ಅದೇ ರೀತಿ ನಮ್ಮ ಕಂಪನಿ ನಾಟಕಗಳ ದ್ವಿವಿಧ-ಕಥಾನಕದಲ್ಲಿ ಕಂಡುಬರುತ್ತದೆ. ಆದರೆ ವಿವಿಧ ಸಾಹಿತ್ಯಪ್ರಕಾರಗಳ ತ್ವರಿತವಾದ ಬೆಳವಣಿಗೆಯ ಸಲುವಾಗಿ ಹೊಸಗನ್ನಡದಲ್ಲಿ, ಈ ಎರಡೂ ಸಂಪ್ರದಾಯಗಳ ಲಕ್ಷಣಗಳು ಸ್ವತಂತ್ರ ಕೃತಿಗಳಲ್ಲಿ ಪೂರ್ಣವಾಗಿ ಆವಿರ್ಭವಿಸುತ್ತವೆ. ಆದರೆ ಹೊಸಗನ್ನಡ ಲೇಖಕರು ಇವುಗಳನ್ನು ಅಭಿವ್ಯಕ್ತಿಯ ಎರಡು ಮಾಧ್ಯಮಗಳನ್ನಾಗಿ ಸ್ವೀಕರಿಸಿದ್ದಾರೆ. ಒಬ್ಬನೇ ಲೇಖಕ ಈ ಎರಡೂ ಬಗೆಗಳಲ್ಲಿ ಬರೆಯಬಲ್ಲನೆಂಬುದಕ್ಕೆ ಮಾಸ್ತಿ, ಬೇಂದ್ರೆ, ಶ್ರೀರಂಗ, ಕುವೆಂಪುರಂಥ ಲೇಖಕರು ಉದಾಹರಣೆಯಾಗಿದ್ದಾರೆ. ಆದ್ದರಿಂದ ಈ ಎರಡೂ ಸಂಪ್ರದಾಯಗಳಲ್ಲಿ ವಿರೋಧವಿಲ್ಲ. ಪ್ರಾದೇಶಿಕ ಸತ್ವ ದೇಸಿಯ ಅಭಿವ್ಯಕ್ತಿಯನ್ನು ಪಡೆದು ಕೂಡ ಹೊಸ ಸಾಹಿತ್ಯಪ್ರಕಾರಗಳ ಲಕ್ಷಣಗಳನ್ನು ಒಳ-ಗೊಳ್ಳಬಲ್ಲದು. ಈ ಸಂಪುಟದಲ್ಲಿಯ ಅಂಬಿಕಾತನಯದತ್ತರ 'ನಮ್ಮ ಕೊನೆಯ ಶರಣು' ಎಂಬ ಕವಿತೆ ಲಾವಣಿಯ ಮಟ್ಟಿನಲ್ಲಿ ಬರೆದ ಶೋಕಗೀತವಾಗಿದೆ; ಆರ್. ಪಿ. ಕುಲಕರ್ಣಿಯವರ 'ಗೌರಿ' ನಾಟಕದ ಮೂಲದ್ರವ್ಯ ಪ್ರಾದೇಶಿಕ ಜೀವನವಾಗಿದ್ದು, ಅದು ಪರಿಪೂರ್ಣವಾದ ರುದ್ರನಾಟಕವಾಗಿದೆ; ಶಂ. ರಾ. ಮೊಕಾಶಿಯವರ 'ವಿಪರ್ಯಾಸ ವಿನೋದ' ಪಾಶ್ಚಾತ್ಯ ಸಾಹಿತ್ಯದ 'comedy of errors' ಎಂಬ ಪ್ರಕಾರವನ್ನು ದೇಸಿಯ ಪಡಿಯಚ್ಚಿನಲ್ಲಿ ಮೂಡಿಸಿಕೊಂಡ ನಾಟಕವಾಗಿದೆ. ಇನ್ನು ಶುದ್ಧ ಮಾರ್ಗಸಂಪ್ರದಾಯವೂ (literary tradition) ಸಮೃದ್ಧವಾಗಿ ವಿಕಾಸಗೊಂಡಿದೆ. 'ಊರ್ಮಿಳೆ', 'ಹೆಣ್ಣು' ದಂಥ ಕಥನಕವನಗಳು, ಸಾಲಿ, ಪು.ತಿ.ನ., ನಾರಾಯಣ ಸಂಗಮರಂಥವರ ಭಕ್ತಿಕವನಗಳು, 'ಮಹಾಯೋಗಿ', 'ಋಷಿಮೋಹಿನೀ' 'ರಾಸಲೀಲೆ', 'ಎರಡು ಗುಹೆಗಳು' ಇಂಥ ನಾಟಕಗಳು ಮಾರ್ಗಸಂಪ್ರದಾಯಕ್ಕೆ ಪ್ರತಿನಿಧಿಗಳಾಗಿವೆ. ಆದರೆ ಒಂದು ಸಂಪ್ರದಾಯ ಇನ್ನೊಂದು ಸಂಪ್ರದಾಯದ ಮೌಲ್ಯಗಳನ್ನು ಇಲ್ಲದಂತಾಗಿ ಮಾಡುವದಿಲ್ಲ. ಈ ದೃಷ್ಟಿಯಿಂದ ಹೊಸಗನ್ನಡ ಸಾಹಿತ್ಯ ವೈವಿಧ್ಯಪೂರ್ಣವಾಗಿಯೇ ಬೆಳೆದುಬಂದಿದೆ.

ಹೊಸಗನ್ನಡದ ನವೋದಯದ ಕಾಲಕ್ಕೆ ವಿವಿಧ ಸಾಹಿತ್ಯಪ್ರಕಾರಗಳೆಲ್ಲ ಒಮ್ಮೆಲೆ ಹುಟ್ಟಿಬಿಟ್ಟವು. ಆದರೆ ಎಲ್ಲ ಸಾಹಿತ್ಯಪ್ರಕಾರಗಳೂ ಸಮರ್ಥವಾಗಿ ಬೆಳೆದು ಬಂದವೆಂದು ಹೇಳಲಾಗುವದಿಲ್ಲ. ಕಾವ್ಯ, ನಾಟಕ ಹಾಗೂ ಕಾದಂಬರಿಗಳಂಥ ಮೂರು ಮುಖ್ಯ ಪ್ರಕಾರಗಳು ಸಬಲ ಸಂಪ್ರದಾಯಗಳನ್ನು ನಿರ್ಮಿಸಿದವು. ಆದರೆ 'ಸಣ್ಣ ಕತೆ'ಯೊಂದು ಈ ಮಾತಿಗೆ ಅಪವಾದವಾಗಿದೆ. ಕನ್ನಡದಲ್ಲಿ ಸಣ್ಣ ಕತೆಗಳ ಸಂಖ್ಯೆಯೇನೂ ಕಡಿಮೆಯಾಗಿಲ್ಲ. ಈ ಸಂಪುಟಗಳಲ್ಲಿಯೇ ಮೂವತ್ತೈದು ಸಣ್ಣ ಕತೆ

ಗಳು ಇವೆ. ಆದರೆ ಅವುಗಳ ಸ್ವರೂಪದ ಆಳ ಅಗಲಗಳು ವೈಯಕ್ತಿಕತೆಯ ಕ್ಷೇತ್ರ ವನ್ನು ಮೀರಿ ಹೋಗಿಲ್ಲ. ಇದಕ್ಕೆ ಕಾರಣ, ಕೆಲವು, ಲೇಖಕರ ಹವ್ಯಾಸಕ್ಕಾಗಿ ಬರೆದವುಗಳಾಗಿವೆ ಎಂಬ ಮಾತು ನಿಜವಾಗಿದ್ದರೂ, ನಮ್ಮ ಜೀವನಕ್ರಮದಲ್ಲಿಯೇ ಇನ್ನೊಂದು ಕಾರಣ ಹುದುಗಿರಬಹುದಾಗಿದೆ. ಶಿಷ್ಟಸಂಪ್ರದಾಯದ ವೈಖರಿ ( sophistication ) ಯೇ ಮುಖ್ಯವಾಗಿರುವ ವಾತಾವರಣ, ಸುಭಾಷಿತ, ಸಣ್ಣಕತೆ ಯಂಥ ಪ್ರಕಾರಗಳಿಗೆ ಅನುಕೂಲವಾಗಿದೆ. ಈ ವಾತಾವರಣ ಪ್ರಬಲವಾಗಿರುವ ಫ್ರಾನ್ಸ ದೇಶ ಸಣ್ಣಕತೆಯ ತವರುಮನೆಯೆಂಬುದನ್ನು ಮರೆಯಬಾರದು. ಕನ್ನಡ ದಲ್ಲಿ ಈ ಬಗೆಯ ವಾತಾವರಣ ಅಷ್ಟೊಂದು ಕಂಡುಬರುವುದಿಲ್ಲ. ಈ ಪರಿಮಿತಿಯನ್ನು ಲಕ್ಷ್ಯದಲ್ಲಿಟ್ಟುಕೊಂಡು ನೋಡಿದರೂ ಕೂಡ, ಇಲ್ಲಿ ಬಂದಿರುವ ಸಣ್ಣಕತೆಗಳು ಸಾಹಿತ್ಯಿಕವಾಗಿ ಅಪೂರ್ಣವಾಗಿಲ್ಲ. ಕನ್ನಡ ಜೀವನದ ಅನೇಕ ಬಗೆಯ ನಿಲುವು ಗಳು ಸಪ್ತವರ್ಣಗಳಲ್ಲಿ ಪ್ರತಿರೂಪವನ್ನು ಪಡೆದಿವೆ.

ಇನ್ನು ಇಲ್ಲಿ ಬಂದಿರುವ ಇತಿಹಾಸ ಲೇಖನಗಳ ಬಗ್ಗೆಯೂ ಕೆಲ ಮಾತು-ಗಳನ್ನು ಹೇಳಬೇಕಾಗಿದೆ. ಹೊಸಗನ್ನಡ ಸಾಹಿತ್ಯದ ವಿಕಾಸವನ್ನು ಅದರ ಅನೇಕ ಹಂತಗಳಲ್ಲಿ ನಿರೂಪಿಸುವದೇ ಸಂಪುಟದ ಉದ್ದೇಶವಾಗಿರುವದರಿಂದ, ಈ ಲೇಖನ ಗಳನ್ನು ಇಲ್ಲಿ ಪ್ರಕಟಿಸುವದು ಆವಶ್ಯವೆನಿಸಿತು. ಈ ಲೇಖನಗಳು ಸಂಪುಟದ ರೂಪ ರೇಷೆಗಳನ್ನು ವ್ಯಕ್ತಪಡಿಸುತ್ತವೆ. ಇಲ್ಲಿ ಪ್ರಕಟವಾಗಿರುವ ಕೃತಿಗಳ ವಿಂಗಡಣೆಗೆ ಅರ್ಥಪೂರ್ಣತೆಯನ್ನು ತಂದುಕೊಡುತ್ತವೆ. ಈ ಲೇಖನಗಳಲ್ಲಿಯ ವಿಮರ್ಶೆ ಶುಷ್ಕ ಶಾಸ್ತ್ರೀಯವಾದ ವಿಮರ್ಶೆಯಲ್ಲ. ವಿಶ್ವವಿದ್ಯಾಲಯಗಳ ಅಭ್ಯಾಸಕ್ರಮಕ್ಕೆ ಹೊಂದು ವಂತಹ ಸರಿ-ಬೆಸಗಳ ಲೆಕ್ಕಹಾಕುವ ಅತಿ ತಾಂತ್ರಿಕವಾದ ವಿಮರ್ಶೆಯೂ ಅಲ್ಲ. ಈ ಲೇಖನಗಳು ಸಾಹಿತ್ಯರಸಿಕತೆಯ ಪ್ರಜ್ಞೆಯಲ್ಲಿ ಬರೆದವುಗಳಾಗಿರುವದರಿಂದ, ರಸ-ಸ್ಥಾನಗಳನ್ನು ಗುರುತಿಸುವದೇ ಅವುಗಳ ಮೂಲೋದ್ದೇಶವಾಗಿದೆ. ಕೃತಿಗಳ ರಸ-ಗ್ರಹಣದ ಸುಖಕ್ಕಾಗಿಯೇ ಅವುಗಳು ಬರೆದವುಗಳಾಗಿವೆ. ಸದೋಷ ಕೃತಿಗಳ ಚರ್ಚೆ ಅಲ್ಲಿ ಬಂದಿಲ್ಲವೆಂದಲ್ಲ. ಆದರೆ ಕೃತಿಗಳ ಸಜೀವತೆಗೆ ಭಂಗ ಬರದಂತೆ ಅವುಗಳ ಚರ್ಚೆ ಬಂದಿದೆ. ದೋಷಗಳು ಕೃತಿಯಲ್ಲಿಯ ಸಾಹಿತ್ಯಿಕ ಅಪೂರ್ಣತೆಯಾಗಿದ್ದರೆ ಅವುಗಳ ಖಂಡನೆಗೆ ಕೈಹಾಕಿಲ್ಲ. ಆದರೆ ಕೀಳುಮಟ್ಟದ ಅಭಿರುಚಿ ಕಂಡುಬಂದಾಗಲೆಲ್ಲ ಇಂಥ ಖಂಡನೆ ಅನಿವಾರ್ಯವಾಗಿ ಬಂದಿದೆ. ಆದರೆ ಸಾಹಿತ್ಯ ಹಾಗೂ ವಿಮರ್ಶೆಗಳೆರಡರ ಗೌರವವನ್ನೂ ಕಾಯುವ ಎಚ್ಚರವನ್ನು ಕಳೆದುಕೊಂಡಿಲ್ಲ. ಆದ್ದರಿಂದ ಈ ವಿಮ-ರ್ಶೆಯ ಸ್ವಭಾವ ತಾಂತ್ರಿಕವಾಗದೆ ಕಲಾತ್ಮಕವಾಗಿ ಮೂಡಿದೆ ಎನ್ನಬಹುದು. ಪ್ರತಿ ಯೊಂದು ಕೃತಿಯನ್ನೂ ಆಯಾ ಸಂದರ್ಭದ ಬೆಳಕಿನಲ್ಲಿಯೇ ಕಂಡು, ಅದರ ಸ್ವರೂ ಪದ ಬಣ್ಣಗೆರೆಗಳ ಕ್ರಮದಲ್ಲಿ ಅದರ ಬೆಲೆಯನ್ನು ಕಂಡುಕೊಂಡು, ಅದು ಒಡ್ಡ ಬಹುದಾದ ವಿಮರ್ಶೆಯ ಸಮಸ್ಯೆಯನ್ನು ಸೂಕ್ಷ್ಮವಾಗಿ ಚರ್ಚಿಸುವದೇ ಈ ವಿಮ ರ್ಶೆಯ ಪದ್ಧತಿಯಾಗಿದೆಯೆಂದು ಹೇಳಬಹುದು.

ಇನ್ನು ಈ ಲೇಖನಗಳಲ್ಲಿ ಹೊಸಗನ್ನಡದ ಎಲ್ಲ ಸಾಹಿತ್ಯವನ್ನೂ ಚರ್ಚಿಸಿ ದ್ದೇವೆಂದು ಹೇಳಲಾಗುವದಿಲ್ಲ. ಈ ಲೇಖನಗಳ ಪರಿಸೀಮೆಯಲ್ಲಿ ಬರದ ಸಾಹಿತ್ಯ ಸಾಕಷ್ಟಿದೆ. ಕಾವ್ಯ, ನಾಟಕ, ಸಣ್ಣಕತೆ, ಕಾದಂಬರಿ ಹಾಗೂ ವಿಮರ್ಶೆ ಇಷ್ಟು

ಸಾಹಿತ್ಯಪ್ರಕಾರಗಳ ಮೇಲೆ ಮಾತ್ರ ಬರೆಯಲಾಗಿದೆ. ಇವುಗಳಲ್ಲಿ ಕೂಡ ಎಲ್ಲ ಪ್ರಕಟಿತ ಸಾಹಿತ್ಯದ ವಿಮರ್ಶೆ ಬಂದಿದೆಯೆಂದು ಹೇಳಲಾಗುವದಿಲ್ಲ. ಅಭ್ಯಾಸದ ಕೊರತೆಯಿಂದಾಗಿಯೇ ಕೆಲ ಲೇಖಕರನ್ನು ಬಿಡಲಾಗಿದೆ. ಮತ್ತು ಈ ಪ್ರಕಾರ ಗಳಲ್ಲದೆ ಉಳಿದ ಪ್ರಕಾರಗಳೂ ಇವೆ. ಆಲೂರವರ 'ಗತವೈಭವ', ಶಂ. ಬಾ. ಜೋಶಿಯವರ 'ಯಕ್ಷಪ್ರಶ್ನೆ', ವೀ. ಸೀ. ಯವರ 'ಪಂಪಾಯಾತ್ರೆ', ಪು. ತಿ. ನ. ಅವರ 'ರಾಮಾಚಾರಿಯ ನೆನಪು' ಹಾಗೂ 'ಈಚಲು ಮರದ ಕೆಳಗೆ', ವಿನಾಯಕರ 'ಸಮುದ್ರದಾಚೆಯಿಂದ', ರಾಜರತ್ನಂ ಅವರ 'ಹತ್ತು ವರುಷ' ಮೊದಲಾದ ಕೃತಿ ಗಳು ಹಾಗೂ ಮೂರ್ತಿರಾಯರ ಪ್ರಬಂಧಸಾಹಿತ್ಯಗಳನ್ನು ಗಣನೆಗೆ ತೆಗೆದುಕೊಳ್ಳ ಲಿಲ್ಲವೆಂದು ವಿಷಾದಿಸಬೇಕಾಗಿದೆ. ಸಿದ್ಧವನಹಳ್ಳಿ ಕೃಷ್ಣಶರ್ಮರ 'ವರ್ಧಾಯಾತ್ರೆ', 'ಪರ್ಣಕುಟಿ' ಮತ್ತು ಅವರ ವ್ಯಕ್ತಿಚಿತ್ರಗಳ ಹಾಡೂ ಇದೇ ಆಗಿದೆ. ಈ ಲೇಖನ ಗಳ ಚೌಕಟ್ಟಿನಲ್ಲಿ ಅವು ಬರುವಂತಿರಲಿಲ್ಲವೆಂದು ಮಾತ್ರ ಅವುಗಳನ್ನು ಬಿಡಲಾಗಿದೆ. ಇವುಗಳಲ್ಲಿ ಪ್ರತಿಯೊಂದು ಕೃತಿಯೂ ಆಯಾ ಲೇಖಕನ ವೈಯಕ್ತಿಕ ವಿಜಯವಾಗಿದೆ. ಈ ಕೃತಿಗಳು ಲೇಖಕರ ಅನನ್ಯವ್ಯಕ್ತಿತ್ವವನ್ನು ಪ್ರಕಟಿಸುವಂಥವುಗಳಾಗಿವೆ. ಇಂಥ ಕೃತಿಗಳ ವಿಮರ್ಶೆಗೆ ಅವಕಾಶ ದೊರೆಯದಿದ್ದಕ್ಕಾಗಿ ನಾವು ಆ ಲೇಖಕರ ಕ್ಷಮೆ ಕೇಳಬೇಕಾಗಿದೆ.

ಹೀಗೆ ಮನೋಹರ ಗ್ರಂಥಮಾಲೆಯ ರೌಪ್ಯಮಹೋತ್ಸವದ ಈ ಸಂಪುಟಗಳು ಕನ್ನಡದಲ್ಲಿ ರೂಪ ತಾಳಿವೆ. ಇಡೀ ಕನ್ನಡನಾಡಿನ ಜನತೆಯೇ ಇದರ ಶ್ರೋತೃವರ್ಗ ವಾಗಿದೆ. ಕನ್ನಡ ಸಾಹಿತ್ಯದ ಶ್ರೀಮಂತ ಪರಂಪರೆ, ಕನ್ನಡಿಗರ ಕುಲರಸಿಕತೆ ಹಾಗೂ ಉಚ್ಚಮಟ್ಟದ ಅಭಿರುಚಿ, ನಾಡಿನ ತುಂಬೆಲ್ಲ ಸಜೀವವಾಗಿ ಹರಿದಾಡುವ ಸಾಹಿತ್ಯೋತ್ಸಾಹ, ನವೀನವಾದ ಸಂಸ್ಕೃತಿ ರೂಪುಗೊಳ್ಳಬೇಕೆಂಬ ಹಂಬಲ ಇವೇ ಈ ಸಂಪುಟದ ನಿರ್ಮಾಣಕ್ಕೆ ಪ್ರೇರಕಶಕ್ತಿಗಳಾಗಿವೆ. ಗ್ರಂಥಮಾಲೆ ವ್ಯಾವಹಾರಿಕ ವಾಗಿ ಒಂದು ಪ್ರಕಾಶನಸಂಸ್ಥೆಯಾಗಿದ್ದರೂ ಅದರ ಆಂತರಿಕ ಸ್ವರೂಪ ಸಾಂಸ್ಕೃತಿಕ ವಾಗಿದೆ. ೨೫ ವರ್ಷಗಳ ಹಿಂದೆಯೇ ಸಾಹಿತ್ಯನಿರ್ಮಾಣದ ಬೀಜವನ್ನು ಗ್ರಂಥ ಮಾಲೆ ಬಿತ್ತಿತು. ಆದರೆ ಅದರ ಕ್ರಮವಾದ ಬೆಳವಣಿಗೆಯನ್ನು ಕಣ್ಣಿಟ್ಟು ನೋಡಿ ದರೆ ಎಲ್ಲಿ ದೃಷ್ಟಿ ತಾಕೀತೋ ಎಂಬ ಭಯದಿಂದ ಕಣ್ಣು ಮುಚ್ಚಿಯೇ ಗ್ರಂಥಮಾಲೆ ಸಾಗಿತ್ತು. ಈಗ ಸುಗ್ಗಿಕಾಲ ಬಂದು ಬೆಳೆ ಮುಗಿಲೆತ್ತರವಾದಾಗ, ಅದರ ಸೌಂದರ್ಯ ವನ್ನು ಕಣ್ಣುತುಂಬಿ ನೋಡುವ ಹಂಬಲದಿಂದ ಈ ಸಂಪುಟಗಳು ಹೊರಬಂದಿವೆ. ಕನ್ನಡ-ರಸಿಕರು ಇದನ್ನು ಸ್ವಾಗತಿಸಿಯೇ ತೀರುವರೆಂಬ ಭರವಸೆ ನಮ್ಮ ಸಾಹಸಕ್ಕೆ ರಕ್ಷೆಯಾಗಿದೆ. ಆದ್ದರಿಂದ 'ನಮ್ಮ ಮನೆಯಂಗಳದಿ' ಬೆಳೆದ ಈ ಸಂಪುಟಗಳನ್ನು ರಸಿಕರ ಮಡಲಿಗೆ ತಂದಿದ್ದೇವೆ."

## ಉಪಕಾರಸ್ಮರಣೆ :

'ನಡೆದು ಬಂದ ದಾರಿ'ಯ ಈ ಯೋಜನೆಗೆ ಸಾಹಿತ್ಯವನ್ನು ಒದಗಿಸಿಕೊಳ್ಳಲು ಎರಡು ವರ್ಷ ಹಿಡಿಯಿತು. ಈ ಅವಧಿಯಲ್ಲಿ ಬರೆಹಗಾರರಿಗೆ ನಾವು ಕೊಟ್ಟ ಹಿಂಸೆ ಅಷ್ಟಿಷ್ಟಲ್ಲ. ಪತ್ರ ತಪ್ಪಿದರೆ ತಾರು, ತಾರು ತಪ್ಪಿದರೆ ಮನುಷ್ಯ, ಹೀಗೆ ಒಂದೇ

ಸವನೆ ನಮ್ಮ ವರಾತು ಅವರ ಬೆನ್ನು ಬಿಟ್ಟಿರಲಿಲ್ಲ. ಇದೆಲ್ಲವನ್ನೂ ಹೊರಬರುವ ಬೃಹತ್‌ಕೃತಿಯ ಕಡೆಗೆ ಸಾಧುದೃಷ್ಟಿಯಿಟ್ಟು ಅವರು ಸಹನಶೀಲರಾಗಿ ಸಹಿಸಿಕೊಂಡು ತಮ್ಮ ಸಾಹಿತ್ಯಕೃತಿಗಳನ್ನು ಈ ಸಂಪುಟಗಳಿಗೆ ಒದಗಿಸಿದ್ದಾರೆ. ಅಥವಾ ಅವರು ಒದಗಿಸಿದ ಸಾಹಿತ್ಯವೇ ಈ ಸಂಪುಟಗಳಾಗಿವೆ ಎಂದರೂ ಸರಿಯೆ. ಕನ್ನಡ ನಾಡಿನ ನೂರಮೂವತ್ತೈದು ಹೆಸರಾಂತ ಲೇಖಕರು ಇದಕ್ಕಾಗಿ ಬರೆದು, ಇದಕ್ಕೆ ಗೌರವ, ಕೀರ್ತಿ ತಂದುಕೊಟ್ಟಿದ್ದಾರೆ. ಇಂತಹ ಸಹಕಾರ, ಇಂತಹ ಉದಾರಬುದ್ಧಿ ಬಹುಶಃ ಈ ಪ್ರಾಂತದಲ್ಲೊಂದೇ ಇರಬೇಕೆಂದು ನನ್ನ ಊಹೆ ಇದೆ. ಅದು ನಿಜವಾದರೆ ನಾವು ಕನ್ನಡಿಗರು ಹೆಮ್ಮೆ ಪಡಬೇಕಾದದ್ದೆ. ಈ ಲೇಖಕರೆಲ್ಲರಿಗೂ ನಾವು ಕೊಟ್ಟ ಹಿಂಸೆಗಾಗಿ ಈಗ 'ಕ್ಷಮಸ್ವ' 'ಕ್ಷಮಸ್ವ' 'ಕ್ಷಮಸ್ವ' ಎಂದು ಬೇಡಿಕೊಂಡು ಅವರು ಸಲ್ಲಿಸಿದ ಈ ಅಪಾರ ಸಹಾಯಕ್ಕಾಗಿ ನಮ್ಮ ಅನಂತ ವಂದನೆಗಳನ್ನು ಅರ್ಪಿಸುತ್ತೇವೆ.

ಸಾಹಿತ್ಯ ಮೊದಲು ಸಂಗ್ರಹವಾಯಿತು. ಆದರೆ ಅದನ್ನು ಹೊರಕ್ಕೆ ತರುವ ಬಗೆ ಹೇಗೆ? ದೊಡ್ಡ ಮೊತ್ತದಲ್ಲಿ ಅದಕ್ಕೆ ಬೇಕಾಗುವ ಹಣವನ್ನು ಹೇಗೆ ಕೂಡಿಸಬೇಕು? ಏನೋ ಒಂದು ಕುರುಡು ನಂಬಿಗೆಯಿಂದ, ಹೊತ್ತಿಗೆ ಎಲ್ಲಾ ಬರುತ್ತದೆ, ಸರಿಯಾಗುತ್ತದೆ ಎಂದುಕೊಂಡು, ಲೆಕ್ಕಾಚಾರವನ್ನೂ ವಿಚಾರಿಸದೆ, ಲೋಕಾಚಾರವನ್ನೂ ಗಣನೆಗೆ ತಾರದೆ, ಒಂದು ಹುಂಬುಗುತ್ತಿಗೆಯ ಧೈರ್ಯ ಮಾಡಿ, ಮಹಾ ಸಮಾರಂಭ ಹೂಡಿ ಮನೆಗೆ ಅತಿಥಿಗಳನ್ನು ಊಟಕ್ಕೆ ಹೇಳಿಯೂ ಆದಮೇಲೆ ಪ್ರಸ್ಥಮೂಲವಾದ ಸ್ತಂಡುಲಕ್ಕಾಗಿ ಈಗ ಬಾಯಿಬಿಡುವದು ನಡೆದಿತ್ತು. ಊಟ ಹಾಕುವದನ್ನಂತೂ ತಪ್ಪಿಸಲಿಕ್ಕೆ ಬರುವಂತಿರಲಿಲ್ಲ. ಏನು ಮಾಡಬೇಕೆಂದು ಹುಚ್ಚೆದ್ದು ಹರಿಯುತ್ತಿರುವಾಗ ಸ್ನೇಹದ ಒಂದು ಕೈ ನೆರವಿಗೆ ಬಂತು: 'ನಡೆದು ಬಂದ ದಾರಿಯ' ವಿವರವಾದ ಯೋಜನೆಯನ್ನು ಒಂದು ಪರಿಚಯಪತ್ರದಲ್ಲಿ ಆಕರ್ಷಕ ರೀತಿಯಲ್ಲಿ ಮುದ್ರಿಸಿ ರಸಿಕವಾಚಕರಿಗೆ ಕಳಿಸಿ ಮುಂಗಡ ಹಣ ಕಳಿಸಿಕೊಡುವುದಕ್ಕಾಗಿ ಕೇಳಬೇಕು. ಅವರಿಂದ ಸಾಕಷ್ಟು ಪ್ರೋತ್ಸಾಹ ಬಂದರೆ ಇದನ್ನು ಕೈಕೊಳ್ಳಬೇಕು, ಎಂಬ ಸೂಚನೆ ಆತನಿಂದ ಬಂದಾಗ, ಆ ಪರಿಚಯಪತ್ರವನ್ನು ಹೊರಡಿಸುವುದಾದರೂ ಹೇಗೆ ಎಂದು ಕೇಳಿದೆವು. ಆಗ ಆತ ಅದರ ಜವಾಬ್ದಾರಿಯನ್ನು ಹೊತ್ತು ಸುಂದರವಾಗಿ ಮುದ್ರಿಸಿಕೊಟ್ಟ. ಮುಂದೆ ಸಂಪುಟ ಹೊರಡುವ ವರೆಗೂ ಅದರ ಎಲ್ಲ ಅವಸ್ಥೆಗಳಲ್ಲಿಯೂ ಆಸ್ಥೆ ವಹಿಸಿ ಧೈರ್ಯ ಕೊಡುತ್ತ ಬಂದ. ನಿರಪೇಕ್ಷಿಯಾದ ಈ ಸ್ನೇಹಿತನಿಗೆ ನಮ್ಮ ಅನಂತ ವಂದನೆಗಳು.

ಅವನು ತಯಾರಿಸಿ ಕೊಟ್ಟ ಆ ಪರಿಚಯಪತ್ರವೇ ಸಂಪುಟ ಹೊರಡುವುದಕ್ಕೆ ದಾರಿ ಮಾಡಿಕೊಟ್ಟಿತು. ಆವಶ್ಯಕವಾದ ಹಣವನ್ನೂ ಒದಗಿಸಿಕೊಟ್ಟಿತು.

ಗ್ರಂಥಮಾಲೆಯು ಕೈಕೊಂಡ ಈ ಕಾರ್ಯದಲ್ಲಿ ವಿಶ್ವಾಸವಿಟ್ಟು ಮುಂಗಡವಾಗಿ ಹಣ ಕಳಿಸಿದ ರಸಿಕವಾಚಕರಿಗೇ ಇದರ ಎಲ್ಲ ಶ್ರೇಯಸ್ಸು ಮೀಸಲಾಗಿದೆ. ಅವರೆಲ್ಲರಿಗೂ ನಮ್ಮ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಇದೇ ಸಂದರ್ಭದಲ್ಲಿನ್ನೊಂದು ಮಾತು ಹೇಳಬೇಕು. ಪರಿಚಯಪತ್ರವನ್ನು ಎಲ್ಲರಿಗೂ ಕಳಿಸಿಯಾಗಿತ್ತು. ಆದರೆ ಇನ್ನೂ ಹಣ ಸಂಗ್ರಹವಾಗಿರಲಿಲ್ಲ. ಮುದ್ರಣ

ಕಾರ್ಯ ಪ್ರಾರಂಭವಾಗಬೇಕಾಗಿತ್ತು. ಕೈಕೊಂಡ ಕಾರ್ಯ ಏನಾಗುತ್ತದೋ ಏನೋ ಎಂಬ ಅಧೈರ್ಯ ಇನ್ನೂ ಒಳಗೆ ಹೆಡೆಯಾಡಿಸುತ್ತಿತ್ತು. ಇಂತಹ ಪ್ರಸಂಗದಲ್ಲಿ ಮುಂಬೈಯ ಯಶವಂತ ಚಿತ್ತಾಲರು ಅಭಯವಾಗಿ ಬಂದು ಧೈರ್ಯ ಕೊಟ್ಟರು. ತಮ್ಮ ಬಂಧುಗಳನ್ನು, ಸ್ನೇಹಿತರನ್ನು ಇದರ ಸಹಾಯಕ್ಕೆ ಒದಗುವಂತೆ ಮಾಡಿದರು. ಆ ಕ್ಷಣದಲ್ಲಿ ಆ ಧೈರ್ಯ ಅವರಿಂದ ಬಂದಿರದಿದ್ದರೆ ಕೈಕೊಂಡ ಕಾರ್ಯವೇ ಕುಸಿದು ಬೀಳಬಹುದಾಗಿತ್ತು. ಯಶವಂತ ಚಿತ್ತಾಲರು ತಮ್ಮ ಬೆನ್ನ ಹಿಂದೆ ನೂರು ತೋಳ ಬಲ ತಂದು ಒದಗಿಸಿದ್ದಾರೆ. ಅವರಿಗೂ ಅವರ ಬಂಧುಗಳಿಗೂ ಸ್ನೇಹಿತರಿಗೂ ಗ್ರಂಥಮಾಲೆ ಎಂದಿಗೂ ಕೃತಜ್ಞವಾಗಿದೆ.

ಇದೇ ರೀತಿಯಾಗಿ ಕೈಗಡ ಕೊಟ್ಟು ಹೊತ್ತಿಗೆ ನೆರವಾದ ಮಿತ್ರ ತೊರಗಲ್ ಮತ್ತು ನಾರಾಯಣ ಜೋಶಿ ಇವರಿಗೂ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈ ಸಂಪುಟವನ್ನು ಪ್ರಕಟಿಸುವ ಹೊಣೆ ಹೊತ್ತ ಈ ಸಂಧಿಕಾಲದಲ್ಲಿಯೇ ಗ್ರಂಥಮಾಲೆಗೆ ಹೊಸದಾಗಿ ಆಜೀವಚಂದಾದಾರರಾಗಿ ಸಹಾಯ ಸಲ್ಲಿಸಿದ ಸರ್ವಶ್ರೀ: ಆರ್. ಎ. ಜಹಗಿರದಾರ (ಮುಂಬೈ) ; ವರದರಾಜ ಆದ್ಯ (ಮುಂಬೈ) ; ಎನ್. ಜಿ. ಜೋಶಿ (ಮುಂಬೈ) ; ಡಿ. ಎಸ್. ಕುಲಕರ್ಣಿ (ಮುಂಬೈ) ; ಯು. ವಿ. ಉಪಾಧ್ಯಾಯ (ಮುಂಬೈ) ; ಆರ್. ಎನ್. ಪೈ (ಮುಂಬೈ) ; ಶ್ರೀಮತಿ ಲಲಿತಾ ರಾವ್ (ಮುಂಬೈ) ; ಶ್ರೀಮತಿ ಬಿ. ಎನ್. ಶಾರದಾಬಾಯಿ (ಮುಂಬೈ) ; ಶ್ರೀಮತಿ ಸರೋಜಾ ಸ್ವಾಮಿ (ದಿಲ್ಲಿ) ; ಶ್ರೀಮತಿ ಉಮಾಬಾಯಿ ಕೊಪ್ಪೀಕರ (ಧಾರವಾಡ); ಶ್ರೀ. ಡಿ. ವಿ. ಚಿತ್ತಾಲ (ಹುಬ್ಬಳ್ಳಿ) ; ಶ್ರೀ. ಯಶವಂತ ಚಿತ್ತಾಲ (ಮುಂಬೈ) ; ಶ್ರೀ. ಗಂಗಾಧರ ಚಿತ್ತಾಲ (ದಿಲ್ಲಿ) ; ಶ್ರೀ. ಬಿ. ಎ. ಸರನಾಡಗೌಡ (ಬಾಗಿಲುಕೋಟೆ) ; ಇವರೆಲ್ಲರಿಗೂ ನಮ್ಮ ಕೃತಜ್ಞತೆಯ ವಂದನೆಗಳು.

ಸಾಹಿತ್ಯ ಬಂತು. ಹಣವೂ ಕಾರ್ಯವನ್ನು ಪ್ರಾರಂಭ ಮಾಡುವ ಮಟ್ಟಿಗೆ ಬಂತು. ಇಷ್ಟಾದರೂ ಎರಗುವುದಕ್ಕಾಗಿ ಹೊಂಚಿ ಕುಳಿತ ಆಪತ್ತುಗಳ ದೃಷ್ಟಿ ನಮ್ಮ ಮೇಲಿಂದ ತಪ್ಪಲೇ ಇಲ್ಲ. ಎರಡು ಮುಖ್ಯ ಕೆಲಸ ಇನ್ನೂ ಆಗಬೇಕಾಗಿತ್ತು. ಒಂದು, ಕಾಗದ ಸಿಗಬೇಕಾಗಿತ್ತು. ಇನ್ನೊಂದು, ಮುದ್ರಣ ಆಗಬೇಕಾಗಿತ್ತು. ಇವೆರಡೂ ನಿರ್ದಿಷ್ಟ ಅವಧಿಯಲ್ಲಿಯೇ ಆಗಬೇಕಾಗಿದ್ದವು. ಈ ಧರ್ಮಸಂಕಟದೊಳಗಿಂದ ನಮ್ಮನ್ನು ಪಾರು ಮಾಡಿದವರು 'ಆನಂದ ಭಾರತಿ ಏಜನ್ಸಿ'ಯವರು ಮತ್ತು ಸಂಯುಕ್ತಕರ್ನಾಟಕದವರು.

ಹೆಸರಿಗೆ ಸಂಯುಕ್ತ ಕರ್ನಾಟಕ ಸಂಸ್ಥೆಯ ಹೆಸರನ್ನು ತಗೆದುಕೊಂಡರೂ ಆ ಸಂಸ್ಥೆಯ ಮುಖವಾಗಿ ಕೆಲ ವ್ಯಕ್ತಿಗಳೇ ತಮ್ಮ ಉಳಿದ ಸಂಗಾತಿಗಳ ಮರೆಯ ಸಹಕಾರ ಪಡೆದು ಮುಂದೆ ಬರಬೇಕಾಗುತ್ತದೆ. ಹಾಗೆ ಸಂಯುಕ್ತಕರ್ನಾಟಕದ ಪರವಾಗಿ ಮುಂದೆ ಬಂದ ಸರ್ವಶ್ರೀ : ವ್ಹಿ. ಎಸ್. ದಿವಾಕರ, ಆರ್. ಎಸ್. ರಾವ್, ಎಚ್. ಆರ್. ಪುರೋಹಿತ, ಆರ್. ಕೆ. ಜೋಶಿ, ಎಂ. ಎಚ್. ಕೌಜಲಗಿ, ವ್ಹಿ. ವಾಯ್. ಜಠಾರ ಇವರೆಲ್ಲರೂ ಏಕಮುಖವಾಗಿ ಈ ಕಾರ್ಯವನ್ನು ತಮ್ಮದೇ ಕಾರ್ಯ ಎನ್ನುವಷ್ಟು ಆತ್ಮೀಯತೆಯಿಂದ ಕೈಕೊಂಡು ಸಂಪುಟಗಳನ್ನು ಮುದ್ರಿಸಿ ಕೊಡುವ ಹೊಣೆಯನ್ನು ಹೊತ್ತರು. ನಾಲ್ವತ್ತೇ ದಿನಗಳಲ್ಲಿ ೮೦೦ ಪುಟದ

ಮೊದಲನೆ ಸಂಪುಟವನ್ನು ಹೊರಕ್ಕೆ ತರುವ ಆಶ್ಚರ್ಯವನ್ನೂ ಮಾಡಿ ತೋರಿಸಿದರು. ಈ ಸಂಪುಟಕ್ಕೆ ಬರುವ ಶ್ರೇಯಸ್ಸಿನಲ್ಲಿ ಬಹುಭಾಗ ಅವರಿಗೇ ಸಲ್ಲಬೇಕು, ಸಲ್ಲುತ್ತದೆ. ಅವರೆಲ್ಲರಿಗೂ ನಮ್ಮ ಅತ್ಯಂತ ಕೃತಜ್ಞತೆಯ ವಂದನೆಗಳು.

ಇದೇ ಸಂದರ್ಭದಲ್ಲಿ ಇಷ್ಟು ಅಲ್ಪಾವಕಾಶದಲ್ಲಿ ಸಂಪುಟ ಹೊರಕ್ಕೆ ಬರಲು ಸಂಯುಕ್ತಕರ್ನಾಟಕ ಮುದ್ರಣಾಲಯದಲ್ಲಿ ದುಡಿದ ಕೆಲಸಗಾರರಿಗೆಲ್ಲರಿಗೂ ನಮ್ಮ ಹಾರ್ದಿಕ ವಂದನೆಗಳನ್ನು ಸಲ್ಲಿಸದೆ ಇರಲಾರೆವು.

ಕಾಗದ ಸಿಗುವುದೇ ದುಸ್ತರವಾದ ಈ ಕಾಲದಲ್ಲಿ ಮೈಸೂರು ಪೇಪರ ಮಿಲ್ಲಿನ ಹುಬ್ಬಳ್ಳಿಯ ಏಜಂಟರಾದ ಆನಂದಭಾರತಿ ಏಜನ್ಸಿಯವರು ಸಕಾಲಕ್ಕೆ ಯೋಗ್ಯ ಧಾರಣೆಯಿಂದ ನಮ್ಮ ಪ್ರಕಟನೆಗೆ ಸಾಕಾಗುವಷ್ಟು ಕಾಗದವನ್ನು ಪೂರೈಸಿ ನಮ್ಮ ಆಪತ್ತನ್ನೂ ದೂರ ಮಾಡಿದರು. ಅದಕ್ಕಾಗಿ ಅವರಿಗೂ ನಾವು ಉಪಕೃತವಾಗಿದ್ದೇವೆ.

ಕೈಕೊಂಡ ಈ ದೊಡ್ಡ ಕಾರ್ಯದಲ್ಲಿ ಹತ್ತು ಕಡೆಯಿಂದ, ನೂರು ಕೈಗಳಿಂದ ಸಹಾಯ ಬಂದಿದೆ. ಅದನ್ನಿತ್ತ ಆ ನೂರು ಕೈಗಳಿಗೆ ನಮ್ಮ ಅನಂತ ಪ್ರಣಾಮಗಳು.

ಸಂಪುಟಕ್ಕಾಗಿ ಫೋಟೋಗಳನ್ನು ದೊರಕಿಸುವುದೂ ಒಂದು ಸಾಹಸದ ಮಾತಾಗಿಯೆ ಪರಿಣಮಿಸಿತು. ಆ ಕಾರ್ಯದಲ್ಲಿ ನೆರವಾದ ಕರ್ನಾಟಕ ವಿದ್ಯಾವರ್ಧಕ ಸಂಘ, ಕರ್ನಾಟಕ ಗ್ರಂಥಾಲಯ, ಐತಿಹಾಸಿಕ ಸಂಶೋಧನ ಸಂಸ್ಥೆ, ಪ್ರಜಾವಾಣಿ ಇವುಗಳ ಅಧಿಕಾರಿವರ್ಗಕ್ಕೆ, ಶ್ರೀ. ತ. ಸು. ಶಾಮರಾಯರಿಗೆ, ದಿ. ಪಂಜೆ ಮಂಗೇಶರಾಯರ ಫೋಟೋವನ್ನು ಪೂರೈಸಿ ಅವರ ಕವನವನ್ನು ಮುದ್ರಿಸಲು ಅನುಮತಿಯಿತ್ತ ಅವರ ಚಿರಂಜೀವಿಗಳಾದ ಶ್ರೀ. ಜಿ. ಎಂ. ಪಂಜೆಯವರಿಗೆ, ದಿ. ಪೇಜಾವರ ಸದಾಶಿವರಾಯರ ಫೋಟೋವನ್ನು ಪೂರೈಸಿ ಅವರ ಕವನವನ್ನು ಮುದ್ರಿಸಲು ಅನುಮತಿಯಿತ್ತ ಅವರ ತಮ್ಮ ಶ್ರೀ. ಪೇಜಾವರ ವಾಸುದೇವರಾಯರಿಗೆ, ಅನೇಕ ಸಾಹಿತಿಗಳ ಫೋಟೋಗಳನ್ನು ತೆಗೆದು ಸಂಗ್ರಹಿಸಿದ ದಿವಂಗತ ಅಳವಂಡೀಕರರ ಆಲ್ಬಮ್ಮಿನೊಳಗಿಂದ ಉಪಯೋಗಿಸಿಕೊಳ್ಳಲು ಅನುಮತಿಯಿತ್ತ ಶ್ರೀ. ದ. ರಾ. ಬೇಂದ್ರೆಯವರಿಗೆ, ತಮ್ಮ ತಮ್ಮ ಫೋಟೋ ಕಳಿಸಿಕೊಟ್ಟು ಸಹಾಯ ಮಾಡಿದ ಲೇಖಕ ಲೇಖಕಿಯರಿಗೆ, ಇನ್ನೂ ಅನೇಕ ಮಿತ್ರರಿಗೆ ನಮ್ಮ ಹಾರ್ದಿಕ ವಂದನೆಗಳನ್ನು ಸಲ್ಲಿಸುತ್ತೇವೆ.

ಸಂಪುಟದ ಕರಡು ಓದುವುದರಲ್ಲಿ ಮತ್ತು ಅನೇಕ ಕಾರ್ಯಗಳಲ್ಲಿ ನನ್ನೊಡನೆಯೆ ಇದ್ದು ಸಹಕರಿಸಿದ ಕೃಷ್ಣಶರ್ಮ ಬೆಟಗೇರಿ, ದ. ಬಾ. ಕುಲಕರ್ಣಿ, ಎಸ್. ಬಿ. ಮಿಣಜಿಗಿ, ಎಸ್. ಎಚ್. ಮತ್ತು ಕೆ. ಎಚ್. ಪರ್ವತಿ ಮೊದಲಾದ ಅನೇಕ ಮಿತ್ರರ ಉಪಕಾರವನ್ನು ಸ್ಮರಿಸದಿರಲಾರೆವು.

ಹೊತ್ತಿಗೆ ಸರಿಯಾಗಿ ಬ್ಲಾಕುಗಳನ್ನು ಮಾಡಿಕೊಟ್ಟ ಹುಬ್ಬಳ್ಳಿಯ 'ಐಡಿಯಲ್ ಝಿಂಕೋ'ದ ಶ್ರೀ. ಘಾಟಕ ಇವರಿಗೂ, ಸಂಪುಟಕ್ಕಾಗಿ ತಮ್ಮ ಕಲೆಯ ನೆರವಿತ್ತ ಧಾರವಾಡದ ಶ್ರೀ. ಮೂರ್ತಿಯವರಿಗೂ ನಮ್ಮ ಅನಂತ ವಂದನೆಗಳು.

—ಸಂಪಾದಕರು

# ಪರಿವಿಡಿ

## ಗೀತ-ನಾಟಕಗಳು



## ಏಕಾಂಕ-ನಾಟಕಗಳು



## ರೇಡಿಯೋ - ನಾಟಕಗಳು

# ಅರ್ಪಣ

ಈ ಬಗೆಯ ಸಂಪುಟ ಹೊರಕ್ಕೆ ಬರಲು
ಎಲ್ಲ ಬಗೆಯ ಸಾಹಿತ್ಯವನ್ನು
ನಿರ್ಮಿಸಿ ಕೊಟ್ಟ
ಸಾಹಿತಿಗಳಿಗೆ,
ಸಾಹಿತ್ಯಪ್ರೀತಿಯಿಂದ
ಗ್ರಾಹಕರಾಗಿ ಸೇರವಿತ್ತ
ಮಾಲೆಯ ರಸಿಕ ವಾಚಕರಿಗೆ,
ಹಗಲೂ ರಾತ್ರಿ ದುಡಿದು
ಸಮಯಕ್ಕೆ ಇದು ಹೊರಡುವಂತೆ ಮಾಡಿದ
ಎಲ್ಲ ಕರ್ಮಕೌಶಲರಿಗೆ,
'ಅವನಿದ್ದುದರಿಂದಲೇ ಆಯಿತು
ಇಲ್ಲದಿದ್ದರೆ ಆಗುತ್ತಲೇ ಇರಲಿಲ್ಲ'
ಎನ್ನುವ ಮಟ್ಟಿಗೆ ಈ ಕಾರ್ಯದಲ್ಲಿ
ನನ್ನೊಡನೆ ಏಕರಸವಾಗಿ ದುಡಿದ
ಇಬ್ಬರು ಮಿತ್ರರಿಗೆ
ಆದರ ವಿಶ್ವಾಸಪೂರ್ವಕ ಇದು ಅರ್ಪಿತ.

— ಸಂಪಾದಕರು

## ಹೊತ್ತಿಗೆ–ಹರಕೆ

ಎಷ್ಟೋ ಸಾಡಿವ ಹೋದವು ಬಂದವು
ಹಾಡಿವೆ ಪೊಸ-ಹೊಸ ಗೀತಿಗಳ
ಕಷ್ಟನಷ್ಟ ಪರಿಹರಿಸಿ, ಭೀತಿಗಳ
ಸರಿಸಿ, ತರಲಿ ನವನೀತಿಗಳ

ಉತ್ತಮಿಕೆಗೆ ಪಣವೆತ್ತಿದ ಹೊತ್ತಿಗೆ
ಹೊತ್ತಿಗೆ ಮೂಡಲಿ ಸರಸತಿಯೆ !
ನೆತ್ತಿಗೆ ಎಣ್ಣೆಯು, ಬಾಯಿಗೆ ಬೆಣ್ಣೆಯು
ನೀಡುತ ನೀನಿರು ಜತಿಜತಿಯೆ

ಶ್ರವಣಸುಭಗವಾಗಲಿ ಶ್ರಾವಣಕೆ
ದರ್ಶನೀಯವಿದು ದರ್ಶನಕೆ
ಹವಣುಗೊಂಡು ಈ ಕಾಣಿಕೆ ಹೊರಡಲಿ
ಕವಿ-ರಸಿಕರ ಸಂದರ್ಶನಕೆ

ಇದೊ ಕನ್ನಡ ಜನ ! ಅದೊ ಕನ್ನಡ ಜನ
ಉದೊ ಕನ್ನಡ ಜನ ! ಬಳಿಸಾರಿ
ಇದು ಸುಮನೋಹರ, ಇದು ಚೇತೋಹರ
ಹರಿಸಲಿ ಬೇಸರ ಈ ದಾರಿ

ಶ್ರೀವಿಕಾರಿ ಸಂಸ್ಕಾರಗೊಳಿಸಿ ಜನ-
ಮನದ ಶುಚಿಯು ರುಚಿ ಚಿಗುರಿಸಲಿ
ಈ ವಿನೋದ ಉದ್ಬೋಧಕಾರಿ
ಆಗುತ್ತ ಭಾರವನು ಹಗುರಿಸಲಿ

— ಅಂಬಿಕಾತನಯದತ್ತ

ಯುಗಾದಿ ೯—೪—೫೯

## ಹೊಸಗನ್ನಡ
## [illegible]
## ಸಾಹಿತ್ಯ ವಿಕಾಸ

---

೧

ಈ ಸಂಪುಟದಲ್ಲಿ ಸಂಗ್ರಹವಾಗಿರುವ ಇತಿಹಾಸಲೇಖನಗಳಿಗೆ ಪೀಠಿಕೆಯಾಗಿ ಕೆಲವೊಂದು ಮಾತುಗಳನ್ನು ಬರೆಯುವದು ಅವಶ್ಯಕವಾಗಿದೆ. ಆಧುನಿಕ ಕನ್ನಡ ಸಾಹಿತ್ಯವನ್ನು ಐತಿಹಾಸಿಕವಾಗಿ ನೋಡಿ ಬರೆದ ಸಾಹಿತ್ಯಪ್ರಬಂಧಗಳೇ ಹೊರತು ಇವು ನಿಶ್ಚಿತ ಸ್ವರೂಪದ ಇತಿಹಾಸಲೇಖನಗಳಲ್ಲ. ಕನ್ನಡದಲ್ಲಿ ಬೆಳೆದು ಬಂದಿರುವ ವಿವಿಧ ಸಾಹಿತ್ಯಪ್ರಕಾರಗಳ ಬೆಳವಣಿಗೆಯ ಸಮಾಲೋಚನೆ ಮಾತ್ರ ಇಲ್ಲಿದೆ. ಒಂದು ದೃಷ್ಟಿಯಿಂದ ನಾವಿನ್ನೂ ಇತಿಹಾಸದ ಪ್ರಾರಂಭದಲ್ಲಿದ್ದೇವೆ. ಇತಿಹಾಸವನ್ನು ಬರೆಯುವಷ್ಟು ಆಧುನಿಕಸಾಹಿತ್ಯದ ಕಾಲಾವಧಿ ದೀರ್ಘವಾಗಿಲ್ಲ. ಅಲ್ಲದೆ ಆಧುನಿಕ ಸಾಹಿತ್ಯವನ್ನು ಪ್ರಾಚೀನ ಸಾಹಿತ್ಯದಿಂದ ಬೇರ್ಪಡಿಸಿ ಪ್ರತ್ಯೇಕ ಇತಿಹಾಸವನ್ನು ಬರೆಯುವ ಉದ್ದೇಶ ಈ ಲೇಖನಗಳದಲ್ಲ. ಐವತ್ತು ವರ್ಷಗಳ ಅವಧಿಯಲ್ಲಿ ಬೆಳೆದಿರುವ ಆಧುನಿಕಸಾಹಿತ್ಯ ಕೇವಲ ಒಂದು ಅವಸ್ಥೆಯಾಗಿದೆ. ಈ ಕಾಲಾಂತರದಲ್ಲಿ ಹಲವಾರು ವಿಚಾರಲಹರಿಗಳು ಸಾಹಿತ್ಯದ ಮೇಲೆ ಪರಿಣಾಮ ಬೀರಿದ್ದರೂ ಅದೆಲ್ಲ ಅನುಕರಣದ ಫಲವಾಗಿದೆಯೇ ಹೊರತು ಐತಿಹಾಸಿಕ ಅನಿವಾರ್ಯತೆಯಿಂದಲ್ಲ. ಆಧುನಿಕಸಾಹಿತ್ಯ ಪ್ರಾಚೀನ ಸಾಹಿತ್ಯದಿಂದ ಭಿನ್ನವಾಗಿದ್ದರೂ, ಅದರ ಸತ್ವವನ್ನು ಮೈಗೂಡಿಸಿಕೊಂಡು ಬೆಳೆದು ಬಂದಿದೆ. ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಭಾರತದ ತುಂಬ ಬೀಸಿದ್ದ ಪುನರುಜ್ಜೀವನದ ಗಾಳಿಯಲ್ಲಿ ಕನ್ನಡವೂ ಹೊಸತನವನ್ನು ಪಡೆದುಕೊಂಡಿತು. ಆ ಫಲವಾಗಿ ಹುಟ್ಟಿ ಬಂದ ಹೊಸ ಸಾಹಿತ್ಯ ಅನೇಕಮುಖವಾಗಿ ಬೆಳೆದು ವಿಲಕ್ಷಣವಾದ ನವೀನತೆಯಿಂದ ಕಂಗೊಳಿಸಿತು. ಆದರೆ ಹೊಸ ಸಾಹಿತಿಗಳು ಉಪಯೋಗಿಸಿದ ಭಾಷೆಗೆ ಸಾವಿರಾರು ವರ್ಷಗಳ ಸಂಸ್ಕಾರವಿದೆ. ಹರಿಯುತ್ತಿರುವ ನೆಲ ಬೇರೆಯಾಗಿದ್ದರೂ ಅದೇ ನೀರು ಕನ್ನಡ ಸಾಹಿತ್ಯವಾಹಿನಿಯಲ್ಲಿ ಹರಿದು ಬರುತ್ತಿದೆ.

ಹೀಗೆ ಬೆಳೆದು ಬಂದ ಸಾಹಿತ್ಯವನ್ನು ಅಭ್ಯಾಸದ ದೃಷ್ಟಿಯಿಂದ ಮಾತ್ರ ನೋಡಿ ಈ ಲೇಖನಗಳಲ್ಲಿ ಚರ್ಚಿಸಲಾಗಿದೆ. ಆಧುನಿಕ ಸಾಹಿತ್ಯದಲ್ಲಿ ಬೆಳೆದಿರುವ ಹಲವಾರು ಸಾಹಿತ್ಯಪ್ರಕಾರಗಳ ಚರ್ಚೆಯೂ ಇಲ್ಲಿದೆ. ಅದೇ ಉದ್ದೇಶವೇ ಮುಖ್ಯವಾಗಿದೆಯೇ ಹೊರತು ಲೇಖಕರ ಮೂಲ್ಯಮಾಪನವಲ್ಲ. ಮೂಲ್ಯಮಾಪನದ ಬಗ್ಗೆ 'ಇದಮಿತ್ಥಂ' ಎಂದು ನಿಶ್ಚಯವಾಗಿ ಏನೂ ಹೇಳಲು ಸಾಧ್ಯವಿಲ್ಲ. ಅದಕ್ಕೆ ಮುಖ್ಯ ಕಾರಣವೆಂದರೆ ನಾನು ಇಲ್ಲಿ ಚರ್ಚಿಸಿದ ಸಾಹಿತ್ಯವೆಲ್ಲ ಸಮಕಾಲೀನವಾದದ್ದು. ಕೆಲವು ಲೇಖಕರನ್ನು ಹೊರತುಪಡಿಸಿ ಉಳಿದವರೆಲ್ಲರೂ ಜೀವಿಸುತ್ತಿದ್ದಾರೆ,

ಸಾಹಿತ್ಯಸೃಷ್ಟಿಯನ್ನು ಮುಂದುವರಿಸುತ್ತಿದ್ದಾರೆ. ಮತ್ತು ಈ ಲೇಖಕರ ಬೆಲೆಗಟ್ಟು ವಾಗ ಅವಶ್ಯವಾಗಿ ಬೇಕಾಗಿರುವ ಹಿನ್ನೆಲೆ ಪೂರ್ಣವಾಗಿ ನಮಗೆ ದೊರೆಯುವದಿಲ್ಲ. ಕೆಲವೊಂದು ವಿಷಯಗಳಲ್ಲಿ ಹಳೆಗನ್ನಡದ ಹಿನ್ನೆಲೆಗೆ ನಮ್ಮ ಸಾಹಿತ್ಯವನ್ನು ನೋಡ ಬಹುದಾದರೂ ಅದು ಯಾವಾಗಲೂ ಸಾಧ್ಯವಿಲ್ಲ. ಇನ್ನು ಕನ್ನಡಸಾಹಿತ್ಯವನ್ನು ಇಂಗ್ಲಿಶ್‌ಸಾಹಿತ್ಯದೊಂದಿಗೆ ಹೋಲಿಸಿ ನೋಡುವದು ಸರ್ವಥಾ ಯೋಗ್ಯವಲ್ಲ. ಇಂಗ್ಲಿಶ್‌ಸಾಹಿತ್ಯದಿಂದ ನಮ್ಮ ಲೇಖಕರು ಬಹಳಷ್ಟು ಪ್ರೇರಣೆಯನ್ನು ಪಡೆದಿದ್ದಾರೇನೋ ನಿಜ. ಹೊಸ ಸಾಹಿತ್ಯಪ್ರಕಾರಗಳ ಉದಯಕ್ಕೆ ಇಂಗ್ಲಿಶ್‌ಸಾಹಿತ್ಯ ಬಹುಮಟ್ಟಿಗೆ ಕಾರಣವಾಯಿತೆಂಬುದೂ ನಿಜ. ಇನ್ನೂ ಕೂಡ ಇಂಗ್ಲಿಶ್‌ಸಾಹಿತ್ಯದ ಆಗುಹೋಗುಗಳ ಕಡೆಗೆ ನಮ್ಮ ದೃಷ್ಟಿ ಇದ್ದೇ ಇದೆ. ಯಾವ ಇತಿಹಾಸಕಾರನೂ ಈ ಋಣಭಾರವನ್ನು ಒಪ್ಪದಿರುವದು ಸಾಧ್ಯವಿಲ್ಲ. ಆದರೂ ಎಲ್ಲ ಜೀವಂತ ವ್ಯಾಪಾರ ಗಳಂತೆ ಆಧುನಿಕಕನ್ನಡಸಾಹಿತ್ಯ ಕನ್ನಡದ ಗಾಳಿಬೆಳಕುಗಳಿಂದ ಸತ್ವವನ್ನು ಪಡೆದುಕೊಂಡಿದೆ. ಅದರ ಮೂಲಶಕ್ತಿ ಕನ್ನಡದ್ದಾಗಿದೆಯೆಂದೇ ಅದು ಇಷ್ಟು ಕಾಲ ಬಾಳಿದೆ ಮತ್ತು ಮುಂದೆಯೂ ಬಾಳುತ್ತದೆ. ಅಲ್ಲದೆ, ಅನ್ಯಸಾಹಿತ್ಯಗಳಿಂದ ನಾವು ಕೊಟ್ಟು ಪಡೆಯಬಹುದಾದರೂ, ಒಂದು ಸಾಹಿತ್ಯವನ್ನು ಇನ್ನೊಂದರೊಂದಿಗೆ ಹೋಲಿಸಿ ನೋಡಲಾಗದೆಂದು ತೋರುತ್ತದೆ. ಇಂಗ್ಲಿಶ್‌ಸಾಹಿತ್ಯದ ಅಭಿವ್ಯಕ್ತಿಯ ರೀತಿನೀತಿಗಳನ್ನು ಮಾತ್ರ ನಾವು ಸ್ವೀಕರಿಸಿದ್ದೇವೆ. ಆದರೆ ಕನ್ನಡದ ಜೀವನವೇ ನಮ್ಮ ಸಾಹಿತ್ಯದಲ್ಲಿ ಪ್ರತಿಬಿಂಬವನ್ನು ಪಡೆದಿರುವದನ್ನು ಮರೆಯಲಾಗದು. ವರ್ತಮಾನದ ಸಾಹಿತ್ಯವನ್ನು ಪ್ರಾಚೀನಸಾಹಿತ್ಯದ ಹಿನ್ನೆಲೆಗೆ ನೋಡಬೇಕಾದದ್ದೇ ಯೋಗ್ಯವಾದ ಮಾರ್ಗವಾಗಿದೆ. ಇಷ್ಟೇ, ಈ ಸಂದರ್ಭದಲ್ಲಿ ಈ ಮಾತು ಕೂಡ ಬಿಗಿಯಾಗಿದೆ.

ಇದಕ್ಕೆ ಕಾರಣಗಳಿಲ್ಲದಿಲ್ಲ. ಹೊಸಗನ್ನಡಸಾಹಿತ್ಯ ಮೊದಲು ಹೊಸತನದ ಹಂಬಲದಿಂದ, ದೇಶಾಭಿಮಾನದಿಂದ ಕಾವುಗೊಂಡು, ಆಮೇಲೆ ಹುಟ್ಟಿದ್ದೆಲ್ಲ ಬೆಳೆ ಯಲೇಬೇಕೆಂಬ ನಿಯಮದ ಮೇರೆಗೆ ಬೆಳೆದದ್ದು. ಸುದೈವದಿಂದ ಕೆಲವು ಶ್ರೇಷ್ಠ ದರ್ಜೆಯ ಸಾಹಿತಿಗಳ ಮೂಲಕ ಅದು ತನ್ನ ಕಸುವನ್ನು ಪಡೆದುಕೊಂಡಿತು, ಮತ್ತು ಅವರ ಮೂಲಕವೇ ಕನ್ನಡದ ಭೂಗುಣ-ವಾಯುಗುಣಗಳಿಗೆ ಅನುಸಾರ ವಾಗಿ ಬೆಳೆಯುವ ಹದವನ್ನೂ ಕಲಿತುಕೊಂಡಿತು. ಹತ್ತೊಂಬತ್ತನೇ ಶತಮಾನದ ಕೊನೆಯ ಭಾಗದಲ್ಲೇ ಹಳೆಗನ್ನಡಸಾಹಿತ್ಯ ಖಿಲವಾಗಿ ತನ್ನ ಪುಣ್ಯವನ್ನು ಕಳೆದು ಕೊಂಡಿತ್ತು. ಭಾರತದ ಜನತೆ ಹೊಸ ಯುಗವನ್ನು ಕಂಡು ದಿಗ್ಭ್ರಮೆಗೊಂಡಿದ್ದ ಕಾಲ ಅದಾಗಿತ್ತು. ಕನ್ನಡವೂ ಈ ಮಾತಿಗೆ ಅಪವಾದವಾಗಿರಲಿಲ್ಲ. ರಾಘವಾಂಕ ಹರಿಹರರ ಕಾಲಕ್ಕೆ ಹಳೆಗನ್ನಡ ಅಳಿದುಹೋಗಿ ಇನ್ನೊಂದು ಭಾಷೆ ರೂಪುಗೊಂಡಿತ್ತೆಂಬ ಮಾತನ್ನು ಹದಿನೆಂಟನೆಯ ಶತಮಾನದ ಕವಿಗಳು ಮರೆತುಬಿಟ್ಟಿದ್ದರು. ಈ ಶತಮಾನದ ಕವಿಗಳಾದ ತಿರುಮಲಾರ್ಯ, ಸಿಂಗರಾರ್ಯ ಮೊದಲಾದವರ ಕೃತಿಗಳು ಪಡಿಯಚ್ಚುಗಳಾಗಿ ಪೂರ್ವವೈಭವವನ್ನು ನೆನಪಿಗೆ ತಂದುಕೊಡುವ ಕೃತಿ ಗಳಾಗಿವೆ. ಸಾಹಿತ್ಯಪ್ರಕಾರಗಳು ರೂಪುಗೊಂಡು ಜೀವಂತವಾಗಿ ಬೆಳೆಯುವ

ಮಾತು ನಿಂತುಹೋಗಿತ್ತು. ಆದ್ದರಿಂದ ಹೊಸಗನ್ನಡಸಾಹಿತ್ಯಕ್ಕೆ ತನ್ನ ಹಿಂದಿನ ಸಾಹಿತ್ಯದಿಂದ ಯಾವ ಪ್ರೇರಣೆಯೂ ದೊರಕಲಿಲ್ಲ. ಅದರ ಬದಲಾಗಿ ಇಂಥ ನಿರ್ಜೀವತೆಗೆ ತೀವ್ರವಾದ ಪ್ರತಿಕ್ರಿಯೆಯನ್ನು ಹೊಸಗನ್ನಡಸಾಹಿತ್ಯ ತೋರಿಸಿತು. ಆದರೆ ಇಂಥ ಸಂಧಿಕಾಲದಲ್ಲೂ ಕೂಡ ಜೀವಂತತನವನ್ನೂ ಸಂಪ್ರದಾಯದ ಅವಿ-ಚ್ಛಿನ್ನತೆಯನ್ನೂ ಜೊತೆಯಾಗಿ ಕಾಯ್ದುಕೊಂಡ ಇಬ್ಬರು ಕವಿಗಳಿದ್ದಾರೆ. ಮುದ್ದಣ ಹಾಗೂ ಕೆಂಪುನಾರಾಯಣ. ಇವರ ಬಗ್ಗೆ ವಿವರವಾದ ಚರ್ಚೆ ಮುಂದೆ ಬರುತ್ತದೆ.

ಹಳೆಯ ಸಾಹಿತ್ಯಕ್ಕೆ ತೋರಿಸಿದ ಪ್ರತಿಕ್ರಿಯೆಯ ಫಲವಾಗಿ ಒಂದು ದುರ್ದೈವದ ವಿಚಾರ ನಮ್ಮಲ್ಲಿ ಬೇರುಬಿಟ್ಟಿತು. ಕೆಲವು ವಿಮರ್ಶಕರ ದೃಷ್ಟಿಯಲ್ಲಿ ಹಳೆಯ ಸಾಹಿತ್ಯ ಕೇವಲ ಕವಿಸಮಯಗಳ ಕೃತಕಸೃಷ್ಟಿಯಾಗಿ ತೋರಿತು. ಆದರೆ ಸಾವಿರ ವರ್ಷಗಳ ವರೆಗೆ ಒಂದು ಸಾಹಿತ್ಯ, ಒಂದೇ ಗತಿಯಲ್ಲಿ, ಒಂದೇ ರೀತಿಯಲ್ಲಿ ಬೆಳೆದಿರುವದು ಅಸಾಧ್ಯದ ಮಾತಾಗಿದೆ. ಸಂಸ್ಕೃತದ ಪ್ರಭಾವ ದಟ್ಟವಾಗಿ ಹರಡಿದ್ದರೂ, ಕಾಳಿದಾಸ ಬಾಣರನ್ನೇ ನಮ್ಮ ಕವಿಗಳು ಮೇಲ್ಪಂಕ್ತಿಯಾಗಿ ಇಟ್ಟುಕೊಂಡಿದ್ದರೂ ಆಶ್ಚರ್ಯಕರವಾದ ರೀತಿಯಲ್ಲಿ ಹೊಸ ಹೊಸ ಸಾಹಿತ್ಯಪ್ರಕಾರಗಳು ಜನ್ಮ ತಾಳುತ್ತಲೇ ಇದ್ದವು. ಈ ಮಾತಿಗೆ ಉದಾಹರಣೆಗಳನ್ನು ಹಳೆಗನ್ನಡ ಸಾಹಿತ್ಯದಿಂದಲೇ ಕೊಡಬಹುದಾಗಿದೆ. ಈ ಸಂದರ್ಭದಲ್ಲಿ ಹಳೆಗನ್ನಡಸಾಹಿತ್ಯದ ಅಭ್ಯಾಸವನ್ನು ಈ ದೃಷ್ಟಿಯಿಂದ ಮಾಡುವದು ಅತ್ಯವಶ್ಯವಾಗಿದೆ. ಒಂದು ಕೃತಿಯ ರೂಪವಿನ್ಯಾಸ ಅದರ ವಸ್ತುವಿನ ಮೇಲಷ್ಟೇ ಅವಲಂಬಿಸಿರುವದಿಲ್ಲ. ಭಾಷೆಯ ನೈಜಸತ್ವ (genius) ಹಾಗೂ ಧ್ವನಿಶಕ್ತಿ, ರಸಿಕರ ಅಭಿರುಚಿ, ಕವಿ ಮೂಡಿಸಲೆಳಸುವ ದರ್ಶನ ಇವುಗಳ ಮೇಲೆಯೇ ಒಂದು ಕೃತಿಯ ಬಾಹ್ಯರೂಪ ಅವಲಂಬಿಸಿರುತ್ತದೆ.

ಪಂಪನಿಗಿಂತ ಮೊದಲೇ ಕನ್ನಡಭಾಷೆಯ ಸಹಜ ಸತ್ವಕ್ಕನುಗುಣವಾಗಿ ಕೆಲವೊಂದು ನಿಯಮಗಳು ಏರ್ಪಟ್ಟಿದ್ದವೆಂದು ಕಾಣುತ್ತದೆ. ಕೇಶಿರಾಜ ಹೇಳುವ 'ಯತಿವಿಲಂಘನ' ಪಂಪಪೂರ್ವದ ಕಾಲದಲ್ಲಿಯೇ ಕನ್ನಡದ ವೈಶಿಷ್ಟ್ಯವಾಗಿತ್ತು. ಆದ್ದರಿಂದ ಸಂಸ್ಕೃತದ ಅಕ್ಷರವೃತ್ತಗಳನ್ನು ಕನ್ನಡ ಕವಿಗಳು 'ಅರ್ಥಯತಿ'ಯನ್ನು ಬಳಸಿಕೊಂಡು ಆಡು-ಮಾತಿನ ಲಯ (speech-rhythm)ದಲ್ಲಿ ಬರೆದಿದ್ದಾರೆ. ಕನ್ನಡದ ಈ ಮಹತ್ವದ ವೈಶಿಷ್ಟ್ಯವೇ ಷಟ್ಪದಿ, ಸಾಂಗತ್ಯ, ಕಂದಪದ್ಯ, ಅಲ್ಲದೆ ಈಗಿನ ಕಾಲದ ಸರಳರಗಳೆ, ಅಷ್ಟಷಟ್ಪದಿಗಳ ಬೆಳವಣಿಗೆಗೆ ಕಾರಣವಾಗಿದೆ. ಇನ್ನು ಮಹಾಕಾವ್ಯದ ಬಾಹ್ಯಸ್ವರೂಪವೂ ಈ ಕಾಲಕ್ಕೆ ನಿರ್ಣಯಗೊಂಡಿರಬೇಕು. ಸಂಸ್ಕೃತದಲ್ಲಿ ಗದ್ಯ, ಪದ್ಯ, ಚಂಪೂ ಹಾಗೂ ನಾಟಕ ಹೀಗೆ ನಾಲ್ಕು ಮುಖ್ಯ ಪ್ರಕಾರಗಳು ಪ್ರಸಿದ್ಧವಾಗಿದ್ದವು. ನಾಟಕ ತನ್ನ ಪ್ರದರ್ಶನದ ವೈಶಿಷ್ಟ್ಯದಿಂದ ಪ್ರಮುಖವಾದರೂ ಪ್ರತ್ಯೇಕವಾದ ಸ್ಥಾನವನ್ನು ಕಲ್ಪಿಸಿಕೊಂಡಿತ್ತು. ಮಹಾಕಾವ್ಯಗಳನ್ನು ಪದ್ಯದಲ್ಲಿ, ಆಖ್ಯಾಯಿಕೆಗಳನ್ನು ಗದ್ಯದಲ್ಲಿ, ಪುರಾಣ ಇತಿಹಾಸಗಳನ್ನು ಚಂಪೂವಿನಲ್ಲಿ ರಚಿಸುತ್ತಿದ್ದರೆಂದು ತೋರುತ್ತದೆ. ಮಹಾಕಾವ್ಯ, ಆಖ್ಯಾಯಿಕೆಗಳಿಗೆ ಕಾಳಿದಾಸ, ಭಾರವಿ, ಮಾಘ, ದಂಡಿ, ಬಾಣ ಮುಂತಾದ ಪ್ರಸಿದ್ಧ ಉದಾಹರಣೆಗಳನ್ನು ಕೊಡಬಹುದಾಗಿದೆ. ಮಹಾಭಾರತವಲ್ಲದೆ ಇನ್ನೂ ಕೆಲವು ಪುರಾಣಗಳು

ಚಂಪೂವಿನಲ್ಲಿ ರಚಿತವಾಗಿವೆ. ಅಲಹಾಬಾದದ ಕಲ್ಲುಬರಹಗಳಲ್ಲಿ ಕಾಣುವ ಹರಿ ಷೇಣನ ಪ್ರಬಂಧ ಇತಿಹಾಸವನ್ನು ಚಂಪೂವಿನಲ್ಲಿ ಬರೆದದ್ದಕ್ಕೆ ಉದಾಹರಣೆಯಾಗಿವೆ. ಕನ್ನಡ ಕವಿಗಳು ಪದ್ಯದ ಬದಲಾಗಿ ಚಂಪೂವನ್ನು ಮಹಾಕಾವ್ಯಕ್ಕೆ ಮಾಧ್ಯಮವನ್ನಾಗಿ ಸ್ವೀಕರಿಸಿದರು. ಈ ಪ್ರಕಾರಕ್ಕೆ ಪಂಪನ 'ವಿಕ್ರಮಾರ್ಜುನವಿಜಯ' ಹಾಗೂ 'ಆದಿಪುರಾಣ'ಗಳೇ ಮೊದಲ ಉದಾಹರಣೆಗಳಾಗಿವೆ.

ತನ್ನ ಕಾವ್ಯದ ಅಭಿವ್ಯಕ್ತಿಗೆ ಪಂಪ ಈ ಪ್ರಕಾರವನ್ನು ತೆಗೆದುಕೊಂಡದ್ದು ಅರ್ಥಪೂರ್ಣವಾಗಿದೆ. ಪುರಾಣೇತಿಹಾಸಗಳಲ್ಲಿ ಅಸ್ತವ್ಯಸ್ತವಾಗಿ ಹರಡಿಕೊಂಡಿದ್ದ ಈ ಪ್ರಕಾರವನ್ನು ಅಪೂರ್ವವಾದ ಧ್ವನಿಶಕ್ತಿಯಿಂದ ಕಾವ್ಯವನ್ನಾಗಿ ಮಾರ್ಪಡಿಸಿದ ಶ್ರೇಯಸ್ಸು ಪಂಪನಿಗೆ ಸಲ್ಲಬೇಕು. ಹಾಗೂ ಅವನ ಕಾವ್ಯದ ವಸ್ತು ಮಹಾಭಾರತ ಹಾಗೂ ಜೈನಪುರಾಣಗಳಿಂದ ಸಂಗ್ರಹಿತವಾಗಿರುವದೂ ಇದಕ್ಕೆ ಕಾರಣವಾಗಿದೆ. ತನ್ನ ದೊರೆಯಾದ ಅರಿಕೇಸರಿ ಹಾಗೂ ಆಸ್ಥಾನದ ಪಂಡಿತವರ್ಗ ಇಂಥವರನ್ನು ಲಕ್ಷ್ಯದಲ್ಲಿಟ್ಟುಕೊಂಡು ಪಂಪ ತನ್ನ ಕಾವ್ಯವನ್ನು ನಿರ್ಮಿಸಿದ್ದಾನೆ. ಜೈನ ಹಾಗೂ ವೈದಿಕಪುರಾಣಗಳ ವಸ್ತುವಿನಲ್ಲಿ ತನ್ನ ಕಾಲದ ವೀರಜೀವನ ಮತ್ತು ಧರ್ಮ-ಶ್ರದ್ಧೆಯ ದರ್ಶನವನ್ನು ಕಂಡು ಅದಕ್ಕೆ ತಕ್ಕ ಹಾಗೆ ಪಂಪನ ಕಾವ್ಯ ರೂಪುಗೊಂಡಿತು. ಅಲ್ಲದೆ ಪಂಪ ತನಗಿಂತ ಹಿಂದೆ ಇರಬಹುದಾಗಿದ್ದ ಸಾಹಿತ್ಯವನ್ನೂ ಉಪಯೋಗಿಸಿಕೊಂಡಿರಬೇಕು. ಆ ಸಾಹಿತ್ಯ ಯಾವ ರೀತಿಯದಿರಬಹುದೆಂಬುದನ್ನು ಶಾಸನಗಳಿಂದ, 'ಕವಿರಾಜಮಾರ್ಗ'ದ ಲಕ್ಷಣಗಳಿಂದ ಅರಿತುಕೊಳ್ಳಬಹುದಾಗಿದೆ. ಹೀಗೆ ಸಂಸ್ಕೃತಪುರಾಣ ಹಾಗು ಇತಿಹಾಸಗಳಲ್ಲಿ, ಕನ್ನಡದ ಶಾಸನಗಳಲ್ಲಿ ಬಳಕೆಗೊಳ್ಳುತ್ತಿದ್ದ ಚಂಪೂಪ್ರಕಾರವನ್ನು ಕಾವ್ಯದ ಮಾಧ್ಯಮವನ್ನಾಗಿ ಮಾಡಿಕೊಂಡು ಪಂಪ ಅದನ್ನು ಸ್ಥಿರವಾಗಿ ನಿಲ್ಲುವಂತೆ ಮಾಡಿದ್ದಾನೆ. ಪಂಪನಿಗಿಂತ ಮೊದಲು ಯಾರೂ ಈ ಪ್ರಕಾರವನ್ನು ಇಷ್ಟು ಸಮರ್ಥವಾಗಿ ಉಪಯೋಗಿಸಿರಲಿಲ್ಲ. ಸಂಸ್ಕೃತದಲ್ಲಿ ಪ್ರಸಿದ್ಧವಾಗಿರುವ 'ಚಂಪೂರಾಮಾಯಣ', 'ವಿಶ್ವಗುಣಾದರ್ಶ'ದಂಥ ಚಂಪೂಕಾವ್ಯಗಳು ಕೂಡ ಪಂಪನಿಂದೀಚೆಗೆ ಹುಟ್ಟಿದವುಗಳಾಗಿವೆ.

ಶುದ್ಧವಾಗಿ ಪದ್ಯದಲ್ಲಿಯೇ ರಚಿತವಾದ ಮಹಾಕಾವ್ಯಗಳಿಗೂ ಚಂಪೂಕಾವ್ಯಕ್ಕೂ ಇರುವ ಅಂತರವನ್ನು ಗಮನಿಸಿದರೆ ಪಂಪನ ಕಾವ್ಯಪ್ರಕಾರದ ಮಹತ್ವ ಇನ್ನೂ ಸ್ಪಷ್ಟವಾಗಿ ಕಾಣುತ್ತದೆ. ಗದ್ಯದ ವಿಪುಲ ಉಪಯೋಗದಿಂದ ಕಾವ್ಯಕ್ಕೆ ವೈವಿಧ್ಯ ಪ್ರಾಪ್ತವಾದುದಲ್ಲದೆ, ಒಂದು ಸನ್ನಿವೇಶವನ್ನು ಅದರ ಎಲ್ಲ ಸಂಕೀರ್ಣತೆಗಳೊಂದಿಗೆ ಪ್ರಕಟಿಸಲು ಅನುವು ದೊರೆಯಿತು. ಮಹಾಕಾವ್ಯದ ಸಮಗ್ರತೆಯೊಂದಿಗೆ ನಾಟಕೀಯತೆಯನ್ನೂ ಇಲ್ಲಿ ಕಾಣಬಹುದಾಗಿದೆ. ಪಾತ್ರರಚನೆ, ಸಂವಿಧಾನದ ಹಬ್ಬುಗೆ, ಶೈಲಿ ಇವಾವ ದೃಷ್ಟಿಯಿಂದ ನೋಡಿದರೂ ಪಂಪನದು ಸಂಸ್ಕೃತ ಮಹಾಭಾರತದ ಸಂಪ್ರದಾಯವಾಗಿದೆ. ವ್ಯಾಸರ ಭಾರತವನ್ನು ಲಾಕ್ಷಣಿಕರು 'ಇತಿಹಾಸ'ವೆಂದು ಕರೆದಿದ್ದರಿಂದಲೋ ಏನೋ, ಕಾಳಿದಾಸ ಮೊದಲಾದ ಸಂಸ್ಕೃತ ಕವಿಗಳು ವಾಲ್ಮೀಕಿಯ ರಾಮಾಯಣದ ಸಂಪ್ರದಾಯವನ್ನು ಮುಂದರಿಸಿದರು. ಪಂಪನ ಕಾವ್ಯ ವಸ್ತುವಿನಲ್ಲಿ ಇತಿಹಾಸಿಕತೆಯೊಂದಿಗೆ ಪೌರಾಣಿಕತೆ, ಪರಮಾರ್ಥದೊಂದಿಗೆ ಲೌಕಿಕ

ಇವು ಸಮ್ಮಿಳಿತವಾದದ್ದೇ ಇಂಥ ಕಾವ್ಯಸ್ವರೂಪಕ್ಕೆ ಕಾರಣವಾಗಿರಬಹುದು. ಕಾವ್ಯ-ಧರ್ಮದ ಜೊತೆಗೆ ಧರ್ಮವನ್ನು ಚಿತ್ರಿಸುವದೂ ಕೂಡ ಅವನ ಕಾವ್ಯೋದ್ದೇಶ ವಾಗಿತ್ತು. ಈ ಒಂದು ದೃಷ್ಟಿಯಿಂದ ಪಂಪ ಸುದೈವಿಯೆನ್ನಬೇಕು. ಜೀವಂತವಾದ ಒಂದು ಧರ್ಮ ಅವನ ಬೆನ್ನಿಗಿದ್ದುದಲ್ಲದೆ, ಅವನೆದುರಿಗಿದ್ದ ಜೀವನ ಎಲ್ಲ ದೃಷ್ಟಿ ಯಿಂದಲೂ ಘನವಾಗಿತ್ತು. ಸುತ್ತುಮುತ್ತಲಿನ ಜೀವನದ ಘನತೆ ಹಾಗೂ ಆದರ್ಶ ಗಳೊಂದಿಗೆ ಅವನು ಒಂದಾಗಿದ್ದ. ಅಲ್ಲದೆ, ಅದನ್ನು ಕಾವ್ಯದ ಮೂಲಕ ಪ್ರಕಟಿ ಸುವಾಗ ಮೇಲೇರಿ ನಿಂತು ಈ ಅನುಭವವನ್ನು ಅಖಂಡವಾಗಿ ನೋಡಬಲ್ಲವನೂ ಆಗಿದ್ದ.

ಇಂಥ ಕಾವ್ಯೋದ್ದೇಶಕ್ಕೆ ತಕ್ಕಂತೆ ತನ್ನ ಕಾವ್ಯವಸ್ತುವಿನಲ್ಲಿ ಬದಲಾವಣೆ ಗಳನ್ನು ಮಾಡಿದ್ದರೆ ಅದು ಸಹಜವಾಗಿಯೇ ಇದೆ. ಅರಿಕೇಸರಿಯನ್ನು ನಾಯಕ ನನ್ನಾಗಿ ಮಾಡಿಕೊಂಡದ್ದರಿಂದ ಕಥಾರಚನೆಯಲ್ಲಿಯು ಕೆಲ ಮಾರ್ಪಾಡುಗಳು ದೋಷಗಳಾಗಿವೆಯೇನೋ ನಿಜ. ಆದರೆ ಅವು ಕಾವ್ಯೋದ್ದೇಶವನ್ನು ನುಸಳಿಸು ವಷ್ಟು ಪ್ರಮುಖವಾಗಿಲ್ಲ. ಇನ್ನು 'ವಿಕ್ರಮಾರ್ಜುನವಿಜಯ'ದಲ್ಲಿ ಕೃಷ್ಣನಿಗೆ ಪ್ರಮುಖಸ್ಥಾನವಿಲ್ಲದಿರುವದಕ್ಕೆ ಪಂಪ ಜೈನಮಾರ್ಗಾವಲಂಬಿಯಾದದ್ದೇ ಕಾರಣ ಎಂದು ಸುಲಭದಲ್ಲಿ ಹೇಳಿ ಪಾರಾಗಬಹುದು. ಇಲ್ಲವೆ ಮತ್ತೆ ಅರಿಕೇಸರಿಯನ್ನು ನಾಯಕನನ್ನಾಗಿ ಮಾಡಿಕೊಂಡು ಐತಿಹಾಸಿಕ ರೂಪಕವನ್ನು ರಚಿಸಿದ್ದಾನೆಂದು ರಾಜಕೀಯ ದೃಷ್ಟಿಯಿಂದ ನೋಡಬಹುದು. ಆದರೆ ಪಂಪನ ದಾರಿಯಲ್ಲಿ ಇವು ತೊಡಕೇ ಅಲ್ಲ ಎನ್ನುವಷ್ಟರ ಮಟ್ಟಿಗೆ ಅವನ ವ್ಯಕ್ತಿತ್ವ ಹಿರಿದಾಗಿದೆ. ಪರಮತ ಸಹಿಷ್ಣುತೆ ಅವನ ಆನುವಂಶಿಕ ಗುಣವಾಗಿದೆ ಮತ್ತು ಅವನ ದೃಷ್ಟಿವೈಶಾಲ್ಯಕ್ಕೆ ವ್ಯಾಸಭಾರತದ ಪುನರ್ನಿರ್ಮಾಣವೇ ಸಾಕ್ಷಿ. ಆದ್ದರಿಂದ ಕೃಷ್ಣನಿಗೆ ಪ್ರಾಮುಖ್ಯ ವನ್ನು ಕೊಡಲಾಗದ್ದಕ್ಕೆ ಕಾರಣ ನಾವು ತಿಳಿದುಕೊಂಡದ್ದಕ್ಕಿಂತ ಹೆಚ್ಚು ಆಳವಾಗಿದೆ. ವ್ಯಾಸರಂತೆಯೇ ಪಂಪನ ಕಾವ್ಯೋದ್ದೇಶ ಮನುಷ್ಯನ ಸ್ವಭಾವದ ಆಳದಲ್ಲಿಯೇ ಹುದುಗಿರುವ ಸ್ವರ್ಗನರಕಗಳ ದರ್ಶನ ಮಾಡಿಸುವುದು. ಭಾಗವತದೃಷ್ಟಿಯಿಂದ (ಇದೇ ಕುಮಾರವ್ಯಾಸನ ದೃಷ್ಟಿ) ಕೃಷ್ಣ ಪರಮಾತ್ಮನಾದುದರಿಂದ ಅವನಿಗೂ ಈ ಕಾವ್ಯೋದ್ದೇಶಕ್ಕೂ ಸಂಬಂಧವಿಲ್ಲವಾಗಿದೆ. 'ಚಲದೊಳ್ ದುರ್ಯೋಧನಂ' ಎಂದು ಪ್ರಾರಂಭವಾಗುವ ಪದ್ಯವನ್ನು ಈ ದೃಷ್ಟಿಯಿಂದ ಪರೀಕ್ಷಿಸಬಹುದಾಗಿದೆ. ಪ್ರತಿಯೊಬ್ಬ ವ್ಯಕ್ತಿಯ ತಾತ್ವಿಕತೆಯನ್ನು ರೂಪಿಸುವದು ಪಂಪನ ಉದ್ದೇಶವಾಗಿದೆ. ಭರತ-ಬಾಹುಬಲಿಯರ ಸಂಗ್ರಾಮದಲ್ಲಿ, ಭರತನ ದಿಗ್ವಿಜಯದಲ್ಲಿ, ಅರಿಗನ ಪರಾ-ಕ್ರಮದಲ್ಲಿ, ದುರ್ಯೋಧನನ ಚಲದಲ್ಲಿ, ಕರ್ಣ-ಭೀಷ್ಮರ ವಾಗ್ವಾದದಲ್ಲಿ, ಕರ್ಣನ ಒಳತೋಟಿಯಲ್ಲಿ ಪಂಪನ ಕಾವ್ಯೋದ್ದೇಶ ನಿಚ್ಚಳವಾಗಿ ಹೊಳೆಯುತ್ತದೆ. ಮನು-ಷ್ಯನ ಸ್ವಭಾವ ಹಾಗೂ ಅವನ ಧರ್ಮ ಇವುಗಳಲ್ಲಿ ಕಂಡುಬರುವ ವಿರೋಧವೇ ಪಂಪನೆದುರಿಗಿದ್ದ ಸಮಸ್ಯೆಯಾಗಿದೆ. ಮತ್ತು ಅವೆರಡರ ಸಮತೂಕ ಅವನ ಕಾವ್ಯ ವಸ್ತುವಾಗಿ ಬಂದಿದೆ. ಆದ್ದರಿಂದ ಪರಮಾರ್ಥ ಹಾಗೂ ಲೌಕಿಕಗಳಲ್ಲಿ ಅವನೆಂದೂ ವಿರೋಧವನ್ನು ಕಾಣಲಾರ. ಪರಮಾರ್ಥದ ಅನುಭವದೊಂದಿಗೆ, ತಲೆಯಲ್ಲಿ

ಬಾಣಗಳು ನಟ್ಟಿರುವಾಗ ಸ್ಥೈರ್ಯದಿಂದ ಅವುಗಳನ್ನು ಕಿತ್ತಿಸಿಕೊಳ್ಳುವ ವೀರ ರನ್ನೂ, ಭೋಗಭೂಮಿಯಾದ ಬನವಾಸಿಯ ಶೃಂಗಾರವನ್ನೂ ಅಷ್ಟೇ ಕಾವ್ಯಮಯ ವಾಗಿ ಬಣ್ಣಿಸುತ್ತಾನೆ.

ಇಂಥ ಕಾವ್ಯನಿರ್ಮಾಣವನ್ನು ಮಾಡಿ ಪಂಪ ಮರೆಯಲಾಗದ ಒಂದು ಕಾವ್ಯ-ಸಂಪ್ರದಾಯವನ್ನು ನಿರ್ಮಿಸಿದ. ತನ್ನ ಕಾಲದ ರಸಿಕರ ಕಾವ್ಯಪ್ರಜ್ಞೆಯನ್ನು ಉಚ್ಚ ಮಟ್ಟಕ್ಕೇರಿಸಿದ್ದರಿಂದಲೇ ಅವನು ಆದಿಕವಿಯಾಗಿ ಮೆರೆದಿದ್ದಾನೆ. ಅಲ್ಲದೆ ಆ ಕಾಲಕ್ಕೆ ಸಂಸ್ಕೃತದಲ್ಲಿ ಪ್ರಚಲಿತವಾಗಿದ್ದ ಕಾವ್ಯಪ್ರಕಾರಕ್ಕಿಂತ ತೀರ ಭಿನ್ನವಾದ ಕಾವ್ಯಮಾರ್ಗವನ್ನು ತೆರೆದು ಅವನು ತನ್ನ ಸ್ವತಂತ್ರಪ್ರತಿಭೆಯನ್ನೂ ಬೆಳಗಿದ್ದಾನೆ. ತನ್ನ ಕಾವ್ಯಗಳು 'ಮುನ್ನಿನ ಕಬ್ಬಮನೆಲ್ಲಮನಿಕ್ಕಿ ಮೆಟ್ಟಿದುವು' ಎಂದು ಅವನು ಹೇಳಿದ್ದು ಐತಿಹಾಸಿಕ ಸತ್ಯವಾಗಿದೆ. ಭಾಷೆಯ ದೃಷ್ಟಿಯಿಂದಲೂ ಪಂಪನ ಪ್ರಯತ್ನ ಅಪೂರ್ವವಾಗಿಯೇ ಇದೆ. ಅವನು ಉಪಯೋಗಿಸಿದ ಭಾಷೆ 'ಸಾಜ ಮಾದ ಪುಲಿಗೆರೆಯ ತಿರುಳ್ಗನ್ನಡ'. ಈ ಭಾಷೆ ಗ್ರಂಥಸ್ಥವಾಗಿದ್ದರೂ ಜನರ ಬಾಯಲ್ಲಿ ರೂಢವಾಗಿರುವ ಪಡೆನುಡಿಗಳ ಮೂಲಕ ಕಸುವನ್ನು ಪಡೆದಿದೆ. ಹೀಗೆ ದೇಸಿ-ಮಾರ್ಗಗಳ ಸಮನ್ವಯವನ್ನು ಸಾಧಿಸಿ ಮುಂದಿನ ಎಲ್ಲ ಕವಿಗಳಿಗೂ ಪಂಪ ಆದರ್ಶನಾದ.

ಮುಂದೆ ವಚನಕಾರರ ಯುಗ ಪ್ರಾರಂಭವಾಗುವ ವರೆಗೆ, ಅಂದರೆ ಸುಮಾರು ಎರಡು ಎರಡೂವರೆ ನೂರು ವರ್ಷಗಳ ಕಾಲ ಪಂಪನ ಕಾವ್ಯಸಂಪ್ರದಾಯವೇ ನಡೆದುಬಂತು. ಇದಕ್ಕೆ ಪಂಪನ ಪ್ರಭಾವ ಒಂದೇ ಅಲ್ಲದೆ ಪಂಪಕಾಲೀನ ವಾತಾ ವರಣವೂ ಹಾಗೇ ಉಳಿದದ್ದು ಕಾರಣವಾಗಿರಬಹುದಾಗಿದೆ. ಈ ಕಾಲಾವಧಿ ಯಲ್ಲಿ ಅನೇಕ ಶ್ರೇಷ್ಠಕವಿಗಳು ಮೆರೆದಿದ್ದರೂ ಅವರಾರೂ ಪಂಪನಂತೆ ಇನ್ನೊಂದು ಕಾವ್ಯಸಂಪ್ರದಾಯವನ್ನು ನಿರ್ಮಿಸಲಿಲ್ಲ. ಇವರಲ್ಲಿ ಕೆಲವರಿಗೆ ಅಂಥ ಸಾಮರ್ಥ್ಯ ಯೋಗ್ಯತೆಗಳಿದ್ದರೂ ಪರಿಸ್ಥಿತಿ ಅದಕ್ಕೆ ತಕ್ಕದಾಗಿರಲಿಲ್ಲ. ಕವಿಚಕ್ರವರ್ತಿಯಾದ ರನ್ನ ಪಂಪನ ಹೆಜ್ಜೆಯ ಮೇಲೆಯೇ ಹೆಜ್ಜೆಯನ್ನಿಟ್ಟು ನಡೆದ ಕವಿ. ಆದರೆ ರನ್ನನ ಪ್ರತಿಭೆ ಶುದ್ಧವಾಗಿ ನಾಟಕೀಯವಾಗಿರುವದರಿಂದ ಅವನು ಪಂಪನಂತೆ ಸಮಗ್ರ ದೃಷ್ಟಿಯ ಕಾವ್ಯವನ್ನು ರಚಿಸಲಿಲ್ಲ. ಹೆಚ್ಚಿನದೆಂದರೆ ಪಂಪನಿಗಿಂತ ಹೆಚ್ಚು ಸಾಮ ರ್ಥ್ಯವನ್ನು ಅವನು ಶೈಲಿಯಲ್ಲಿ ತೋರಿಸಿದ್ದಾನೆ. ರನ್ನನಿಗೆ ಮಹಾಕವಿಯ ಪಟ್ಟ ಶೈಲಿಯ ದೃಷ್ಟಿಯಿಂದಲೇ ಬರಬೇಕು. 'ಕುರುಳ್ಗಳ ಸವಣ'ನೆಂದು ತನ್ನ ಧರ್ಮ ಶ್ರದ್ಧೆಯನ್ನು ಮೆರೆದ ಪೊನ್ನ ಪಂಪನಂತೆಯೇ ಜಿನಾಗಮವನ್ನು ಬೆಳಗಬಲ್ಲವನಾಗಿ ದ್ದರೂ ಲೌಕಿಕದ ಕಡೆಗೆ ಅವನ ಕಣ್ಣು ಅಷ್ಟೊಂದು ಬೀಳಲಿಲ್ಲವೆಂದು ತೋರುತ್ತದೆ. ಆದರೆ ಈ ಮಾತನ್ನು ನಿರ್ಣಾಯಕವಾಗಿ ಹೇಳುವದು ಸಾಧ್ಯವಿಲ್ಲ. ಅವನ 'ಭುವನೈಕರಾಮಾಭ್ಯುದಯ' ದೈವವಶದಿಂದ ತಿರುಗಿ ದೊರೆತರೆ ಈ ಮಾತು ನಿರ್ಣಯವಾಗಬೇಕು. ಹನ್ನೆರಡನೆಯ ಶತಮಾನದಲ್ಲಿ ಅಭಿನವಪಂಪನೆಂದು ಹೆಸರುಪಡೆದ ನಾಗಚಂದ್ರ, ಕಾವ್ಯಪ್ರಕಾರದ ದೃಷ್ಟಿಯಿಂದ ಮಹತ್ವದವನಾಗಿದ್ದಾನೆ. ಅವನ ಎರಡೂ ಕಾವ್ಯಗಳು ಪಂಪನ ಕಾವ್ಯಗಳಿಗಿಂತ ಸ್ವಲ್ಪ ಭಿನ್ನಮಾರ್ಗವನ್ನು

ಹಿಡಿದವುಗಳಾಗಿವೆ. ಅವನ 'ಮಲ್ಲಿನಾಥಪುರಾಣ'ದಲ್ಲಿ ಭವಾವಳಿಗಳ ತೊಡಕಿಲ್ಲದೆ ಕಾವ್ಯ ಸರಳವಾಗಿ ಏಕಮುಖವಾಗಿ ಮೂಡಿಬಂದಿದೆ. 'ರಾಮಚಂದ್ರಚರಿತ ಪುರಾಣ' ಪಂಪನ 'ವಿಕ್ರಮಾರ್ಜುನವಿಜಯ'ದಂತೆಯೇ ಲೌಕಿಕಕಾವ್ಯವಾಗಿದ್ದರೂ ಪಾತ್ರರಚನೆ, ಕಥನಕ್ರಮದಲ್ಲಿ ತೀರ ಭಿನ್ನವಾಗಿದೆ. ವಿಮಲಸೂರಿಯ ಪ್ರಾಕೃತರಾಮಾಯಣ ಈ ಕಾವ್ಯದ ಮೂಲವಾಗಿರುವದರಿಂದ ಈ ಭಿನ್ನತೆ ತಲೆದೋರಿದೆ. ಪಂಪನ ಕಾವ್ಯ ಜೈನಭಾರತದ ಪ್ರತಿಯಾಗಿರದೆ ಲೋಕಪ್ರಿಯವಾದ ವ್ಯಾಸಭಾರತವನ್ನು ಅನುಸರಿಸಿದುದಾಗಿದೆ. ತೀವ್ರವೆನ್ನಬಹುದಾದ ಧರ್ಮನಿಷ್ಠೆ, ಜೈನಮತದ ಬಗ್ಗೆ ಪಕ್ಷಪಾತ ಇವು ನಾಗಚಂದ್ರನ ಕಾವ್ಯದಲ್ಲಿ ಕಂಡುಬರುತ್ತವೆ. ಆದರೆ ಅವು ಕವಿಯ ವ್ಯಕ್ತಿಗತವಾದ ಅಂಶಗಳಾಗಿರದೆ, ಮೂಲಕಾವ್ಯದಿಂದ ಬಂದವುಗಳಾಗಿವೆ. ಮತ್ತು ನಾಗಚಂದ್ರನ ಕಾಲಕ್ಕಾಗಲೇ ಕನ್ನಡದಲ್ಲಿ ಮತೀಯ ಕಲಹಗಳು ಅಡಿಯಿಟ್ಟುದರ ಲಕ್ಷಣ ಇದಾಗಿದೆ.

ಕಾಲ ಬದಲಾದಂತೆ ಈ ಬಗೆಯ ಕಾವ್ಯಮಾರ್ಗ ಬದಲಾಗಬೇಕಾದ ಸಂದರ್ಭವೂ ಬಂದೊದಗಿತು. ಇದಕ್ಕೂ ಮುಂದಿನ ಕಾಲಾವಧಿಯಲ್ಲಿ ಚಂಪೂಪ್ರಕಾರಗಳೇ ಇಲ್ಲವೆಂದಲ್ಲ. ರುದ್ರಭಟ್ಟನ 'ಜಗನ್ನಾಥವಿಜಯ', ಹರಿಹರನ 'ಗಿರಿಜಾಕಲ್ಯಾಣ', ಷಡಕ್ಷರಿಯ 'ರಾಜಶೇಖರವಿಳಾಸ'ದಂಥ ಕಾವ್ಯಗಳಿಗೆ ಈ ಸತ್ವ-ಪೂರ್ಣತೆಯಿಲ್ಲ. ಈ ಕಾವ್ಯಗಳು ತಮ್ಮ ಕಾಲದ ಅರ್ಥಪೂರ್ಣತೆಯನ್ನು ತರಲು ಪ್ರಯತ್ನಮಾಡಿದರೂ ಅದಕ್ಕೆ ರೂಪವಿನ್ಯಾಸ ಹೊಂದಿಕೆಯಾಗಿಲ್ಲ. ಆದರೆ ಜನ್ನನೊಬ್ಬ ಮಾತ್ರ ಈ ಮಾತಿಗೆ ಆಶ್ಚರ್ಯಕರವಾದ ರೀತಿಯಲ್ಲಿ ಅಪವಾದವಾಗಿದ್ದಾನೆ. ಅವನ 'ಅನಂತನಾಥಪುರಾಣ' ಜೈನಕವಿಗಳ ಸಂಪ್ರದಾಯದಲ್ಲಿಯೇ ಬರೆದ ಕಾವ್ಯವಾಗಿದ್ದು, ಅದೇ ಕಾರಣದಿಂದ ಅದು ಅಷ್ಟೊಂದು ಶಕ್ತಿಯುತವಾಗಿಲ್ಲ. ಆದರೆ ಅವನ 'ಯಶೋಧರಚರಿತೆ' ಕನ್ನಡದ ಶ್ರೇಷ್ಠ ಕಾವ್ಯಗಳಲ್ಲೊಂದಾಗಿದೆ. ಅದರ ಧಾರ್ಮಿಕತೆಯ ಅಂಶಗಳೇನೇ ಇದ್ದರೂ ಅವು ಸ್ವಲ್ಪವಾಗಿವೆ. ಮುಖ್ಯವಾಗಿ ಅದು ಗಂಡು ಹೆಣ್ಣುಗಳ ಕಾಮ ಹಾಗೂ ಧರ್ಮ ಇವುಗಳಲ್ಲಿ ಹೋರಾಟವನ್ನು ಚಿತ್ರಿಸುತ್ತದೆ. ಜನ್ನನ ಕಾವ್ಯ ಒಂದೇ ಆದರೂ ಜೀವನದ ಮೂಲಭೂತವಾದ ಸಮಸ್ಯೆಯನ್ನು ಎತ್ತಿಕೊಂಡಿರುವದರಿಂದ ಅದರ ಸ್ವರೂಪ ಸಾರ್ವಕಾಲಿಕವಾಗಿದೆ. ಅಂತೇ ಅದು ಒಂದು ಕಾಲದ ಜೀವನಕ್ರಮವನ್ನೂ ಮೀರಿ ಆಕರ್ಷಕವಾಗಬಲ್ಲದು. ಧರ್ಮಕ್ಕೆ ವಿರುದ್ಧವಾದ ಕಾಮ, ದುರಂತವಾದರೂ ಪ್ರಬಲವಾದ ಶಕ್ತಿಯಾಗಿ ತನ್ನದೊಂದು ಸ್ವತಂತ್ರವಾದ ನೀತಿಶಾಸ್ತ್ರವನ್ನು ಕೂಡ ಕಲ್ಪಿಸಿಕೊಂಡ ವ್ಯಕ್ತಿಗಳ ಬಾಳನ್ನು ವಿಷಮಯವನ್ನಾಗಿಸುವದೆಂಬ ನೋವಿನ ಸತ್ಯವನ್ನು ಈ ಕಾವ್ಯ ಅದ್ಭುತವಾಗಿ ತೆರೆಯುತ್ತದೆ. ಜನ್ನನ ಅಭಿಪ್ರಾಯದ ಮೇರೆಗೆ ಕಾವ್ಯ ಕೇವಲ ಮನರಂಜನೆಯ ಸಾಧನವಾಗಿರದೆ 'ಬಾಳಬಟ್ಟೆ ಪರಮಾಗಮ'ವೆಂಬ ಮಾತೂ ಗಮನಾರ್ಹವಾಗಿದೆ. 'ಯಶೋಧರಚರಿತೆ'ಯಲ್ಲಿ ಜಾರರ ಕತೆಯೇ ಇದ್ದರೂ ಅದರ ಉದ್ದೇಶ ಮಾತ್ರ ಶೃಂಗಾರಿಕವಾದ ಕತೆಯನ್ನು ಹೇಳುವದಲ್ಲವೆಂಬ ಮಾತು ವಿಚಾರಿಸತಕ್ಕುದಾಗಿದೆ.

೧೨ನೆಯ ಶತಮಾನದಿಂದೀಚೆಗೆ ಮೆಲ್ಲಗೆ ಪ್ರಾರಂಭವಾದ ಧರ್ಮ ಕೊನೆಯ ಭಾಗದಲ್ಲಿ ಯುಗವನ್ನು ಬದಲಿಸಿತು. ವೀರಶೈವಧರ್ಮದಿಂದ ಸಾಮಾಜಿಕವಾಗಿ ಕೂಡ ಜೀವನಕ್ರಮ ಬದಲಾಯಿತು. ಸಾಮ್ರಾಜ್ಯಗಳು ಅವನತಿಗೀಡಾದ್ದರಿಂದ ಕವಿಗಳಿಗೆ ರಾಜಾಶ್ರಯ ತಪ್ಪಿಹೋಯಿತು. ಅದರ ಜೊತೆಗೆ ಆಸ್ಥಾನದ ಪಂಡಿತರ ಮೆಚ್ಚಿಗೆಯೂ ಇಲ್ಲವಾಯಿತು. ಹೊಸ ಧರ್ಮದ ಆವೇಶ ಮಿಂಚಿನಂತೆ ಸಂಚರಿಸಿತ್ತು ಹೊಸ ಪ್ರಜ್ಞೆ ಮೂಡಿತು. ಆದರೆ ಇಂಥ ಸಂಧಿಕಾಲದಲ್ಲೂ ಕೂಡ ಜೀವನದ ಮೌಲ್ಯಗಳಿಗೆ ಏನೂ ಧಕ್ಕೆ ತಗಲಿಲ್ಲವೆಂಬ ಮಾತು ಮಹತ್ವಪೂರ್ಣವಾಗಿದೆ. ವಚನಕಾರರ ಯುಗ ಬೇರೊಂದು ದೃಷ್ಟಿಯಿಂದ ಮಹತ್ವದ್ದಾಗಿದೆ. ಪಂಪನ ಕಾಲಕ್ಕೆ ಸ್ಫೂರ್ತಿಕೇಂದ್ರವಾಗಿದ್ದ ವೀರಜೀವನ ಈಗ ಇಲ್ಲವಾಯಿತು. ಅದರ ಬದಲಾಗಿ ಹೊಸ ಧರ್ಮದಿಂದ ತಾತ್ವಿಕಪ್ರಜ್ಞೆಯುಳ್ಳ ರಸಿಕರ ಗುಂಪು ನಿರ್ಮಾಣವಾಯಿತು. ಈಗಿನ ಧರ್ಮಜಾಗೃತಿ ಹೊಸ ಆವೇಶವಾಗಿ ಹೊಸ ಭಾವನೆಯಾಗಿ ಕಾವ್ಯದ ಅಭಿವ್ಯಕ್ತಿಯ ರೀತಿಯನ್ನು ಬದಲಿಸಿತು.

ಆದ್ದರಿಂದ ಈ ವಚನಗಳು ಹಿಂದಿನ ಸಾಹಿತ್ಯಪರಂಪರೆಯಿಂದ ಸಿಡಿದು ಬಂದಿದ್ದರೆ ಆಶ್ಚರ್ಯವೇನಿಲ್ಲ. ಒಂದು ಕಡೆಗೆ ವೀರಶೈವಧರ್ಮದ ಆದರ್ಶಗಳಿಂದ ಪ್ರೇರಿತರಾದ ಶಿವಶರಣರು, ಇನ್ನೊಂದು ಕಡೆಗೆ ದಿಕ್ಕುಗಾಣದೆ ಪುರಾಣಪಥವನ್ನು ಹಿಡಿದು ಸಾಗಿದ ಸಾಮಾನ್ಯ ಜನತೆ ಇವರನ್ನು ಲಕ್ಷ್ಯದಲ್ಲಿಟ್ಟುಕೊಂಡು ವಚನಕಾರರು ತಮ್ಮ ವಚನಗಳನ್ನು ರಚಿಸಿದರು. ಪಂಪನ ಕಾಲಕ್ಕೆ ಸ್ಥಿರವಾಗಿ ಪ್ರತಿಷ್ಠಿತವಾಗಿದ್ದ ಜೈನಧರ್ಮ ಪ್ರೇರಕಶಕ್ತಿಯಾಗಿತ್ತು. ಈಗಿನ ಸಾಹಿತ್ಯವನ್ನು ಪ್ರೇರಿಸಿದ್ದ ವೀರಶೈವ ಧರ್ಮ ಕ್ರಮವಾಗಿ ರೂಪುಗೊಳ್ಳಬೇಕಾಗಿತ್ತು. ಅದಕ್ಕಾಗಿ ಸಾಹಿತ್ಯದಿಂದ ದೊರೆತ ನೆರವು ಅಷ್ಟಿಷ್ಟಲ್ಲ. ಆದರೆ ಸಾಹಿತ್ಯ ಧರ್ಮಪ್ರಚಾರದ ಸಾಧನವಾಗಿ ಬಂದಿತೆಂಬ ಅಭಿಪ್ರಾಯವನ್ನು ಹಿಡಿಯಬಾರದು. ಧರ್ಮದ ತತ್ವಗಳು ಜನರಿಗೆ ತಿಳಿಯಬೇಕೆಂಬ ಹಂಬಲದಿಂದ ಭಾಷೆಯೇನೋ ಸುಲಭವಾಯಿತು. ಆದರೆ ವಚನಕಾರರು ಕನ್ನಡ ಭಾಷೆಗೆ ಎಂಥ ತೀವ್ರ ಸಂಸ್ಕಾರವನ್ನು ಕೊಟ್ಟರೆಂಬುದನ್ನು ಈ ವಚನಗಳಿಂದ ಅರಿಯಬಹುದಾಗಿದೆ. ಪ್ರಭುದೇವರು, ಬಸವಣ್ಣ, ಸಿದ್ಧರಾಮ, ಚನ್ನಬಸವಣ್ಣ, ಮುಕ್ತಾಯಕ್ಕರಂಥ ಶಿವಶರಣರು ಅನುಭಾವದ ಅನುಭವವನ್ನು ತುಂಬಿ ಭಾಷೆಗಿರುವ ಅಭಿವ್ಯಕ್ತಿಯ ಸಾಮರ್ಥ್ಯವನ್ನು ನೂರುಮಡಿ ಹೆಚ್ಚುಮಾಡಿದರು. ವಚನಗಳನ್ನು ಸಾಹಿತ್ಯದ ದೃಷ್ಟಿಯಿಂದ ನೋಡಬಾರದೆಂಬ ವಾದವೂ ಇದೆ. ಸಾಹಿತ್ಯ ಕೇವಲ ಲೌಕಿಕಾನುಭವಕ್ಕೆ ಮಾತ್ರ ಸಂಬಂಧಿಸಿದ್ದು ಎಂಬ ತತ್ವದ ಮೇಲೆ ಈ ವಾದದ ತಳಹದಿಯಿದೆ. ಇಂಥಲ್ಲೆಲ್ಲ ಕಾವ್ಯ ನೀರಸವಾದ ನೀತಿಬೋಧೆಯಾಗಲಿ, ಶಾಸ್ತ್ರವಿಚಾರಗಳ ಮಂಥನವಾಗಲಿ ಆದರೆ ಈ ಮಾತು ನಿಜವಾದೀತು. ಅದರ ಬದಲಾಗಿ ಅದು ಅನುಭವದ ಜೀವಂತ ವಾಣಿಯಾದಾಗ ಏನು ಹೇಳೋಣ ? ಶಿವಶರಣರು ತಾತ್ವಿಕ ಸತ್ಯದ ಹೊಚ್ಚಹೊಸ ಮಗ್ಗುಲನ್ನು ನೋಡಿ ಆ ಸ್ಫೂರ್ತಿಯಿಂದ ಹಾಡಿದವರು. ಅವರ ಉದ್ಗಾರಗಳು ಅನಿವಾರ್ಯ ಅನುಭವ ಉಕ್ಕಿಬಂದಂಥವುಗಳಾಗಿವೆ. ಇದೇ ಕಾರಣದಿಂದಾಗಿ ವಚನಕಾರರು ಶಬ್ದಕ್ಕೆ ಅಪೂರ್ವ ಧ್ವನಿ-

ಸಾಮರ್ಥ್ಯವನ್ನು ತಂದುಕೊಡುವದು ಸಾಧ್ಯವಾಯಿತು. ವೇದೋಪನಿಷತ್ತುಗಳಲ್ಲಿ ಯಂತೆ ಶಬ್ದ ಅರ್ಥದ ಅಡಿಯಾಳಾಗಿ ನಿಲ್ಲದೆ 'ನೆನೆದ ಅರ್ಥವನ್ನು ಸ್ಫುರಿಸುವಷ್ಟು ಸರ್ವಗ್ರಾಹಿಯಾಯಿತು. ಪ್ರಭುದೇವರು, ಅಕ್ಕಮಹಾದೇವಿ ಇವರ ವಚನಗಳಲ್ಲಿ ಈ ಮಾತು ಪ್ರತ್ಯಯಕ್ಕೆ ಬರುವಂತಿದೆ.

ಆದರೆ ಈ ಧರ್ಮಜಾಗೃತಿಯ ಉಕ್ಕು ಕೊನೆಯವರೆಗೆ ಉಳಿಯಲಿಲ್ಲವೆಂದೋ ಏನೋ, ಸಾಹಿತ್ಯ ತನ್ನ ನಿಜಸ್ವರೂಪವನ್ನು ಕಳೆದುಕೊಳ್ಳುವಂತಾಯಿತು. ಒಂದು ಸಾಹಿತ್ಯಪ್ರಕಾರದ ಉದ್ದೇಶ ಹಾಗೂ ವಾತಾವರಣ ಮರೆಯಾದ ಮೇಲೆ ಅದರ ದುರುಪಯೋಗ ಸಾಹಿತ್ಯಕ್ಕೆ ಬಲವಾದ ಆಘಾತವನ್ನುಂಟುಮಾಡುತ್ತದೆ. ಈ ಕಾಲದಲ್ಲೂ ಸಾಹಿತ್ಯ ಕೆಲಮಟ್ಟಿಗೆ ಕೀಳುದರ್ಜೆಯ ಪತ್ರಿಕಾವ್ಯವಸಾಯವಾಗಿ ಪರಿಣಮಿಸಿತು ; ಪರಧರ್ಮವನ್ನು ಅವಹೇಳನೆಗೆ ಗುರಿಮಾಡುವ ನೆವದಿಂದ ಅಶ್ಲೀಲತೆ ಕಾಲಿಟ್ಟಿತು. ವಚನಗಳ ಸರಳತೆ ತನ್ನ ಕಾವನ್ನು ಕಳೆದುಕೊಂಡ ಮೇಲೆ ಭಾಷೆಯನ್ನು ಶಿಥಿಲಗೊಳಿಸಿತು. ಇಂಥ ಸಂಕ್ರಮಣ ಕಾಲದಲ್ಲಿ ಸಾಹಿತ್ಯವನ್ನು ಅದರ ಮೂಲ ಸ್ಥಿತಿಗೆ ತಂದು ಮುಟ್ಟಿಸಿದ ಶ್ರೇಯಸ್ಸು ಹರಿಹರ-ರಾಘವಾಂಕರಿಗೆ ಸಲ್ಲಬೇಕು.

'ರಗಳೆಯ ಕವಿ' ಎಂದು ಹಾಸ್ಯಕ್ಕೀಡಾದ ಹರಿಹರ ಪಂಪನಂತೆ ಹೊಸ ಸಾಹಿತ್ಯಪ್ರಕಾರವೊಂದನ್ನು ನಿರ್ಮಿಸಿದ ಮಹಾಕವಿಯೇ ಹೌದು. ಇಷ್ಟೇ, ಪಂಪ ನಂತೆ ಪರಮಾರ್ಥ ಹಾಗೂ ಲೌಕಿಕಗಳ ಸಮತೂಕವನ್ನು ಅವನು ಕಾಯಲು ಪ್ರಯತ್ನಿಸಲಿಲ್ಲ, ಅಥವಾ ಅದು ಅವನ ಉದ್ದೇಶವೂ ಆಗಿರಲಿಕ್ಕಿಲ್ಲ. ಅವನ ವೀರ ವೈರಾಗ್ಯ ಭಕ್ತಿಯೊಂದನ್ನು ಬಿಟ್ಟು ಬೇರೆ ಯಾವ ಭಾವನೆಯನ್ನೂ ಹತ್ತಿರ ಬರಗೊಡ ಲಿಲ್ಲ. ಹರಿಹರನ ಸ್ವಧರ್ಮನಿಷ್ಠೆ ಅವನು ಬರೆಯುವ ಕಾವ್ಯಗಳಿಗೆಲ್ಲ ಸ್ಥಾಯಿ ಭಾವವಾಗುವಷ್ಟು ತೀವ್ರವಾಗಿದೆ. ವಚನಕಾರರು ಅನುಭಾವಿಗಳಾದ್ದರಿಂದ ಅವರು ಕವಿಗಳ ಕವಿಗಳಾಗಿದ್ದಾರೆ. ಹರಿಹರ ಆ ಅನುಭಾವವನ್ನೂ, ಶಿವಶರಣರ ಚರಿತ್ರೆ ಗಳನ್ನೂ ಬಳಸಿಕೊಂಡು ಕಾವ್ಯನಿರ್ಮಾಣ ಮಾಡಿದ. ಅವನ 'ಬಸವರಾಜದೇವ ರಗಳೆ', 'ನಂಬಿಯಣ್ಣನ ರಗಳೆ'ಯಂಥ ವಿಸ್ತಾರದ ಕೃತಿಗಳು ಗುಣದಲ್ಲಿ ಯಾವ ಮಹಾಕಾವ್ಯಗಳಿಗೂ ಕಡಿಮೆಯಿಲ್ಲ. ಆದರೆ ಹರಿಹರನ ಧಾರ್ಮಿಕತೆ ಮತ್ತು ನರ ಸ್ತುತಿಯನ್ನು ಮಾಡಬಾರದೆಂಬ ಅವನ ಪ್ರತಿಜ್ಞೆ ಇವು ವೀರ, ಶೃಂಗಾರದಂಥ ಬೇರೆ ಜೀವನಾನುಭವಗಳಿಗೆ ಅವನ ಲಕ್ಷ್ಯ ಹೋಗದಂತೆ ಮಾಡಿದವು. ಈ ರಸಗಳು ಅವನಲ್ಲಿ ಇಲ್ಲವೆಂದಲ್ಲ. ಆದರೆ ಅವೆಲ್ಲ ಕೇಂದ್ರ ರಸವಾದ ಭಕ್ತಿಗೆ ತಲೆಬಾಗಬೇಕಾ ಗುತ್ತದೆ. ಇಷ್ಟೇ, ಭಕ್ತಿಯ ತರತರಗಳಲ್ಲಿ ಸಕಲ ಅನುಭವಗಳ ಸಾರವನ್ನೂ ಹರಿ ಹರ ಕಾಣಿಸಬಲ್ಲವನಾಗಿದ್ದಾನೆ. ಹೀಗಿದ್ದರೂ ಹರಿಹರನ ಕಾವ್ಯದ ವಿಶಾಲತೆ ಆಶ್ಚರ್ಯಕರವಾಗಿದೆ. ನಿರ್ಮಲವಾದ, ಶಕ್ತಿಯುತವಾದ ಭಕ್ತಿಭಾವವೊಂದ ರಿಂದಲೇ ಅನೇಕ ಪ್ರಕಾರದ ಕಾವ್ಯಕೃತಿಗಳನ್ನು ಅವನು ಹುಟ್ಟಿಸಿದ್ದಾನೆ. ಆ ಕೃತಿಗಳ ಶಿಲ್ಪ ಕೂಡ ಅಗಾಧವಾಗಿದೆ. ಒಂದು ಅಧ್ಯಾಯವನ್ನು ಪದ್ಯದಲ್ಲಿ, ಇನ್ನೊಂದನ್ನು ಸುಂದರವಾದ ಗದ್ಯದಲ್ಲಿ ರಚಿಸುತ್ತ ಹರಿಹರ ಅಗಾಧವಾದ ಕೌಶಲವನ್ನು ಮೆರೆ ಸಿದ್ದಾನೆ. ಅವನ ರಗಳೆಗಳಷ್ಟನ್ನೇ ನೋಡಿದಾಗ ಪದ್ಯರಚನೆಯಲ್ಲಿಯ ಯಾಂತ್ರಿ-

ಕತೆ, ಪುನರುಕ್ತಿಗಳು ಬೇಸರ ತರಿಸಬಹುದು. ಅಂತ್ಯಪ್ರಾಸದ ಬಂಧನದಿಂದ ಕಾವ್ಯಪ್ರವಾಹ ಕಡಿದಂತೆಯೂ ಆಗಬಹುದು. ಆದರೆ ಹರಿಹರನ ಕಾವ್ಯಶಕ್ತಿಯ ವೇಗ ಈ ದೋಷಗಳನ್ನು ನುಂಗಿ ನೀರು ಹಿಡಿಯುತ್ತದೆ. ಪದ್ಯಗಳ ಯಾಂತ್ರಿಕ ಲಯ ಒಂದು ಚಿತ್ರವನ್ನು ಸುಸ್ಪಷ್ಟವಾಗಿ ಕಣ್ಣೆದುರು ಮೂಡಿಸಲು ಸಹಾಯ ಮಾಡುತ್ತದೆ. 'ಕುಂಬಾರ ಗುಂಡಯ್ಯ'ನ ರಗಳೆಯನ್ನು ಉದಾಹರಣೆಗೆಂದು ನೋಡಬಹುದು. ಮತ್ತು ಪುನರುಕ್ತಿಯ ಸಾಮರ್ಥ್ಯವನ್ನು ಹರಿಹರನಷ್ಟು ಅದ್ಭುತವಾಗಿ ಯಾರೂ ಬಳಸಿಕೊಳ್ಳಲಿಲ್ಲ. ಕಾವ್ಯದ ಬಾಹ್ಯಸ್ವರೂಪವನ್ನು ಬೇಕೆಂದೇ ಸುಲಭವನ್ನಾಗಿ ಮಾಡಿ ಹರಿಹರ ತನ್ನ ಭಾಷಾಸಾಮರ್ಥ್ಯದಿಂದ ಸಾಮಾನ್ಯಜನತೆಯನ್ನು ಸೆರೆಹಿಡಿಯುತ್ತಾನೆ.

ರಾಘವಾಂಕನ ಕ್ಷೇತ್ರ ಆ ಪ್ರಮಾಣದಿಂದ ಪರಿಮಿತವಾಗಿದೆ. ಕಾವ್ಯಗುಣ ಗಳು, ಭಾವಭಾವನೆಗಳು, ಉದ್ದೇಶ ಅವೇ ಆಗಿದ್ದರೂ ಹರಿಹರನ ಧೀರ ಕಲ್ಪನಾ ಶಕ್ತಿ ರಾಘವಾಂಕನಿಗಿಲ್ಲ. ಸಮರ್ಥವಾದ ಗದ್ಯರಚನೆಯಲ್ಲಿ 'ವೊಡ್ಡಾರಾಧನ'ದ ತರುವಾಯ ಹರಿಹರನ ಹೆಸರನ್ನೇ ಹೇಳಬೇಕಾಗುತ್ತದೆ. ರಾಘವಾಂಕ ಸಂಪೂರ್ಣ ವಾಗಿ ಗದ್ಯದ ಹಂಗನ್ನು ಬಿಟ್ಟುಕೊಟ್ಟ. ಮತ್ತು ಹರಿಹರನಂತೆ ಶುದ್ಧವಾದ ತಾತ್ವಿಕ ಅನುಭವವನ್ನು ಕಾವ್ಯದಲ್ಲಿ ರೂಪಾಂತರಿಸುವ ಪ್ರಯತ್ನವನ್ನು ರಾಘವಾಂಕ ಮಾಡ ಲಿಲ್ಲ. ರಾಘವಾಂಕನ ಲಕ್ಷ್ಯವೆಲ್ಲ ಕಥಾರಚನೆ, ಶೈಲಿಗಳ ಕಡೆಗಿದೆ. ಮೇಲಾಗಿ ಷಟ್ಪದಿಯ ಕರ್ತೃವಾಗಿ ರಾಘವಾಂಕ ಕನ್ನಡದ ಇನ್ನೊಂದು ಕಾವ್ಯಮಾರ್ಗವನ್ನು ಪ್ರಾರಂಭಿಸಿದ. ಕಾವ್ಯಗುಣದ ದೃಷ್ಟಿಯಿಂದ 'ಹರಿಶ್ಚಂದ್ರಕಾವ್ಯ'ವೊಂದೇ ಅವನ ಅಖಂಡ ಕೃತಿಯಾಗಿದ್ದರೂ ಷಟ್ಪದಿ ಮಾತ್ರ ರಾಘವಾಂಕನ ಹೆಸರು ಹೇಳಿಯೇ ಬದುಕಬೇಕಾಗಿದೆ. ಕನ್ನಡ ಛಂದಸ್ಸಿನ ಮಹತ್ತರವಾದ ಸಿದ್ಧಿಗಳಲ್ಲೊಂದಾದ ಷಟ್ಪದಿ, ಮುಂದೆ ೧೯ನೆಯ ಶತಮಾನದ ವರೆಗೆ ವರ್ಣಕಕಾವ್ಯದ ಮಾಧ್ಯಮವಾಗಿ ತನ್ನದೊಂದು ಸಾಮ್ರಾಜ್ಯವನ್ನು ಸ್ಥಾಪಿಸಿತು.

ಐತಿಹಾಸಿಕವಾಗಿ ಈ ಬದಲಾವಣೆ ಅರ್ಥಪೂರ್ಣವಾಗಿದೆ. ಹರಿಹರನ ಗದ್ಯ-ಪದ್ಯಮಾರ್ಗವನ್ನು ಮುಂದಿನ ಕವಿಗಳು ಅನುಸರಿಸಲೇ ಇಲ್ಲ. ಅದರ ಬದಲಾಗಿ ರಾಘವಾಂಕನ ಷಟ್ಪದಿಯ ಕಥನಕಾವ್ಯ ಉಳಿದುಬಂದಿತು. ಇದಕ್ಕೆ ರಸಿಕರ ಅಭಿರುಚಿಯಲ್ಲಾದ ಬದಲಾವಣೆಯಲ್ಲದೆ ಬೇರೆ ಕಾರಣವನ್ನು ಹೇಳಲಾ ಗುವದಿಲ್ಲ. ಪಂಪನಿಂದ ಹರಿಹರನ ವರೆಗೆ ಎಲ್ಲ ಕನ್ನಡ ಕವಿಗಳು ಗದ್ಯ-ಪದ್ಯ ಗಳನ್ನು ವಿಶಿಷ್ಟರೀತಿಗಳಲ್ಲಿ ಪ್ರಯೋಗಿಸಿದರು. ಮುಂದೆ ಆ ಸಂಪ್ರದಾಯ ನಿಂತು ಹೋಗಲು ವಾಗ್ಗೇಯಕಾರರ ಕಲೆ ಜನ್ಮಕ್ಕೆ ಬಂದದ್ದೇ ಕಾರಣವೇನೆಂದು ಊಹಿಸ ಬಹುದಾಗಿದೆ. ಇದಕ್ಕಿಂತ ಮೊದಲಿನ ಕಾವ್ಯ ರಾಜಾಸ್ಥಾನದ ಪಂಡಿತವರ್ಗದವರ ಮೆಚ್ಚಿಕೆಯನ್ನು ಪಡೆದ ಮೇಲೆ ಸಾಮಾನ್ಯ ರಸಿಕರನ್ನು ಕಾಣಬೇಕಾಗುತ್ತಿತ್ತು. ಈಗ ಅದು ಸಾಮಾನ್ಯಜನತೆಯ ಆಸ್ತಿಯಾಯಿತು. ವಿಜಯನಗರಸಾಮ್ರಾಜ್ಯದ ಕಾಲದಲ್ಲಿ ಗಮಕಕಲೆ ಪ್ರಚಾರದಲ್ಲಿ ಬಂದುಬಿಟ್ಟಿತು. ಸ್ಥಳೀಯ ಪುರಾಣಗಳು ಮತ್ತು ಪವಾಡಪುರುಷರ ಮಾಹಾತ್ಮೆಗಳ ಮೂಲಕ ಜನರಲ್ಲಿ ಧರ್ಮಶ್ರದ್ಧೆ

ಯನ್ನು ಹುಟ್ಟಿಸುವ ಕೆಲಸ ಕಾವ್ಯದ ಪಾಲಿಗಿತ್ತು. ವಿರಕ್ತರು, ಶರಣರು ಇವರ ಜೊತೆಗೇ ಕವಿ ಕಲಾವಿದರು ನಿಂತುಕೊಂಡು ಒಂದು ಜೀವಂತವಾದ ಧರ್ಮವನ್ನು ಸುಸ್ಥಿರವಾಗಿ ನೆಲೆಗೊಳಿಸುವ ಕ್ರಿಯೆ ಅವ್ಯಾಹತವಾಗಿ ನಡೆದೇ ಇತ್ತು. ತೀರ ಹಿಂದಕ್ಕೆ ಜೈನ ಬೌದ್ಧ ಧರ್ಮಗಳು ಹೀಗೇ ಪ್ರಾಕೃತ ಭಾಷೆಯ ಮೂಲಕ, ಸ್ಥಳೀಯ ಪುರಾಣಗಳ ಮುಖಾಂತರವಾಗಿ ಧರ್ಮಪ್ರಚಾರ ಮಾಡಿದ್ದವು. ಈಗ ಕವಿಗಳು ಕನ್ನಡದ ನೈಜ ಸತ್ವ, ಸಹಜ ಛಂದೋಲಯಗಳನ್ನುಪಯೋಗಿಸಿಕೊಂಡು ಜನತೆಯ ಕಿವಿಗಳಿಗೆ ಅನುಕೂಲವಾದ ಕಾವ್ಯನಿರ್ಮಾಣವನ್ನು ಮಾಡಿದರು. ಮತ್ತೊಂದು ಮಾತೆಂದರೆ ಈಗಿನ ಕಾಲಕ್ಕೆ ರಸಿಕರ ಮನೋವೃತ್ತಿ ಧರ್ಮದ ವಿಷಯದಲ್ಲಿ ಗೊಂದಲದಿಂದ ಕೂಡಿದ್ದಾಗಿತ್ತು. ೧೨ನೆಯ ಶತಮಾನದಿಂದ ಪ್ರಾರಂಭವಾದ ಮತಮತಗಳ ಸಂಘರ್ಷಣ ಧರ್ಮದ ವಿಷಯದಲ್ಲಿ ಅಶ್ರದ್ಧೆಯನ್ನು ಹುಟ್ಟಿಸಿದ್ದರೆ ಆಶ್ಚರ್ಯವೇನಿಲ್ಲ. ವಿಜಯನಗರದ ಸಾಮ್ರಾಜ್ಯದ ಸ್ಥಾಪನೆಯಾದ ಮೇಲೆ ಶಾಂತ ರಾಜಕೀಯ ವಾತಾವರಣದಲ್ಲಿ ಮತಮತಗಳಲ್ಲಿಯ ದ್ವೇಷಭಾವನೆ ಕಡಿಮೆಯಾಯಿತೆಂಬ ಮಾತಿಗೆ ಬುಕ್ಕರಾಯನ ಶಾಸನ ಸಾಕ್ಷಿಯಾಗಿದೆ. ಅಂಥ ಕಾಲದಲ್ಲಿ ಜನರಿಗೆ ಧಾರ್ಮಿಕ ತತ್ವಗಳ ಸರಿಯಾದ ತಿಳುವಳಿಕೆಯನ್ನು ತಂದುಕೊಡುವದು ಅವಶ್ಯಕವಾಗಿತ್ತು. ಆಯಾ ಧರ್ಮದ ಕವಿಗಳು ತಂತಮ್ಮ ಧರ್ಮದ ತತ್ವಗಳನ್ನು ಕಾವ್ಯದ ಮೂಲಕ ಬೀರಲು ಅಣಿಯಾದರು. ಜೈನ, ವೈಷ್ಣವ, ವೀರಶೈವ ಧರ್ಮದ ಕವಿಗಳು ತಮ್ಮ ರಸಿಕರನ್ನು ಲಕ್ಷ್ಯದಲ್ಲಿಟ್ಟುಕೊಂಡು ಕಾವ್ಯರಚನೆ ಮಾಡಿದ್ದಾರೆ. ' ಶೂನ್ಯಸಂಪಾದನೆ ' ' ಪ್ರಭುಲಿಂಗಲೀಲೆ 'ಯಾಗಿ ಪರಿಣಮಿಸಿದ್ದು, ಧರ್ಮ ಕಾವ್ಯದಲ್ಲಿ ಅವತಾರ ಹೊಂದುವ ಮಾತಿಗೆ ಉದಾಹರಣೆಯಾಗಿದೆ. ಧರ್ಮದ ಧ್ರುವ ಸತ್ಯಕ್ಕೆ ಕಾವ್ಯದ ನವೋನವ ಅಭಿವ್ಯಕ್ತಿ ಆಗ ಅನಿವಾರ್ಯವಾಗಿತ್ತು. ಚಾಮರಸ, ರತ್ನಾಕರವರ್ಣಿ, ಕುಮಾರವ್ಯಾಸ ಈ ಮೂವರು ಕವಿಗಳನ್ನು ಇದೇ ದೃಷ್ಟಿಯಿಂದ ನೋಡಬೇಕಾಗಿದೆ.

ಧರ್ಮಪ್ರವೃತ್ತಿಯಲ್ಲಾದ ಬದಲಾವಣೆಯನ್ನು ಈ ಕಾವ್ಯಗಳ ಮೂಲಕ ಅರಿಯಬಹುದಾಗಿದೆ. ಧರ್ಮ ಈಗ ನಿರ್ಗುಣ ತತ್ವಗಳ ಆರಾಧನೆಯಾಗಿ ಅವುಗಳ ಪ್ರಕಾರ ಬಾಳನ್ನು ಹದಗೊಳಿಸುವದಾಗಿರಲಿಲ್ಲ. ಪಂಪನ ಕಾಲದ ಆದರ್ಶಗಳು ಆ ರೀತಿಯವಾಗಿವೆ. ಮನುಷ್ಯನಿಗೆ ಕ್ಷಾತ್ರದಂತೆಯೇ ಧರ್ಮವೂ ಪುರುಷಾರ್ಥಗಳ ಸಾಧನೆಯಾಗಿತ್ತು. ಪ್ರತಿಯೊಬ್ಬ ವ್ಯಕ್ತಿಗೂ ಶಾಸ್ತ್ರ-ವಚನ ಇಲ್ಲದಿದ್ದರೆ ಅವನವನ ಅಂತಃಪ್ರವೃತ್ತಿಯೇ ಪ್ರಮಾಣವಾಗಿತ್ತು. ದೈವದಿಂದಲೋ, ಪರಿಸ್ಥಿತಿಯ ಮೂಲಕವೋ ದೊರೆತಂಥ ಜೀವನವನ್ನೇ ಹದಗೊಳಿಸಿ, ಗಳಿಸಬೇಕಾದದ್ದನ್ನೆಲ್ಲ ಗಳಿಸಿ ಮನುಷ್ಯ ತನ್ನ ಜೀವನಪಥಕ್ಕನುಗುಣವಾಗಿಯೇ ಮುಕ್ತಿಯನ್ನು ಕಾಣಬೇಕಾಗಿತ್ತು. ಜನ್ಮಾಂತರಗಳ ಮೆಟ್ಟಿಲುಗಳನ್ನೇರುವ ತೀರ್ಥಂಕರರು, ಮಹಾಭಾರತದ ವೀರರು ಇವರೆಲ್ಲ ಇದೇ ರೀತಿಯಲ್ಲಿ ಮುಕ್ತರಾಗಿದ್ದಾರೆ. ಭರತ, ಬಾಹುಬಲಿ, ಅರ್ಜುನ, ಕರ್ಣ, ದುರ್ಯೋಧನ ಮೊದಲಾದವರು ಧರ್ಮಸಾಧನೆಯಲ್ಲಿಯೂ ತಮ್ಮ ಸ್ವಭಾವವನ್ನು ಬಿಟ್ಟು ನಡೆದಿಲ್ಲ. ಉದ್ಧಾರಕ್ಕಾಗಲಿ, ಅಧಃಪತನಕ್ಕಾಗಲಿ ಸ್ವಭಾವವೇ

ಕಾರಣ ಎಂಬಂತಿರುವ ಈ ವ್ಯಕ್ತಿಗಳಿಗೆ ಮುಕ್ತಿಲಾಭ ವಿಜಯಲಾಭದಂತೆಯೇ ಜೀವನಸಿದ್ಧಿಯಾಗಿತ್ತೇ ಹೊರತು ದೈವದತ್ತವಾದ ವರವಾಗಿರಲಿಲ್ಲ. ಅಂತೇ ಧರ್ಮ ಸಾಧನೆಯೂ ಒಂದು ಪೌರುಷಪ್ರಯತ್ನವಾಗಿ ಜೀವದ ಊರ್ಧ್ವಯಾತ್ರೆ ಅದರ ಪ್ರಕ್ರಿಯೆಯಾಗಿತ್ತು. ಧರ್ಮ ಹಾಗೂ ನೀತಿಯ ತತ್ವಗಳನ್ನು ಸಾರ್ವಕಾಲಿಕವೆಂದು ಜನರು ದೃಢವಾಗಿ ನಂಬಿದ್ದರು. ಧರ್ಮದ ತತ್ವ ಹಾಗೂ ಸ್ವಭಾವಗಳಿಗೆ ಬರ ಬಹುದಾದ ವಿರೋಧದ ಪ್ರಮಾಣದ ಮೇಲೆ ಪಾಪಪುಣ್ಯಗಳನ್ನು ನಿರ್ಣಯಿಸಲಾಗು ತ್ತಿತ್ತು. ಲೌಕಿಕ, ಧರ್ಮದ ಸಾಧನೆಗೆ ಪ್ರಾರಂಭಬಿಂದುವಾಗಿತ್ತಲ್ಲದೆ ಪರಮಾರ್ಥ ಕ್ಕೊಯ್ಯುವ ದಾರಿಯೂ ಆಗಿತ್ತು. ಧಾರ್ಮಿಕ ಉನ್ನತಿ ಪ್ರತಿಯೊಬ್ಬ ವ್ಯಕ್ತಿಯ ನೈತಿಕ ಜವಾಬ್ದಾರಿಯಾದ್ದರಿಂದ ಅವನಿಗೆ ನೈತಿಕ ಸ್ವಾತಂತ್ರ್ಯವೂ ಇತ್ತು.

ಆದರೆ ಈಗ ಮಾತ್ರ ಧರ್ಮದ ಸ್ವರೂಪ ಬಹಳ ಮಟ್ಟಿಗೆ ಬದಲಾಯಿತು. ಧರ್ಮದ ಗಮ್ಯ, ಗುರಿ ಅದೇ ಆಗಿದ್ದರೂ ದಾರಿ ಮಾತ್ರ ತೀರ ಭಿನ್ನವಾಯಿತು. ನಿರ್ಗುಣತೆಯ ಬದಲಾಗಿ ಸಗುಣತೆ ಅಡಿಯಿಟ್ಟಿತು. ಅವತಾರಿಯೋರ್ವನ ಮಾನುಷಚರಿತೆಗಳಲ್ಲಿ, ಲೀಲಾವಿಲಾಸಗಳಲ್ಲಿ ಧರ್ಮದ ಅನಾದ್ಯನಂತ ರಹಸ್ಯವನ್ನು ಗುರುತಿಸಬೇಕಾಯಿತು. ಅವನ ನೆಲೆಯನ್ನರಿಯುವದೇ ಜ್ಞಾನವಾಗಿ, ಅವನನ್ನು ಶ್ರದ್ಧೆಯಿಂದ ಅನುಸರಿಸುವದೇ ಕರ್ಮವಾಯಿತು, ಅಥವಾ ಅನೆರಡಕ್ಕಿಂತ ಭಕ್ತಿಗೆ ಪ್ರಾಧಾನ್ಯ ಬಂದಿತು. ಪ್ರಭುದೇವರು, ಶ್ರೀಕೃಷ್ಣ ಇವರು ಇಂಥ ಅವತಾರಿಗಳಾ ಗಿದ್ದಾರೆ. ಅವರ ಅತಿಶಯವಾದ ಮಹಾತ್ಮ್ಯೆ ಧರ್ಮದ ವ್ಯಕ್ತ ಹಾಗೂ ಅವ್ಯಕ್ತ ಶಕ್ತಿಗಳನ್ನು ಜೀವಂತವಾಗಿ ಪ್ರಕಟಿಸುತ್ತದೆ. ಅವರು ಹೇಳಿದ್ದೇ ವೇದ, ನಡೆದದ್ದೇ ದಾರಿ, ನಿಂತದ್ದೇ ನೆಲೆ. ರತ್ನಾಕರವರ್ಣಿಯ ಭರತೇಶ ಅವತಾರಿಯಲ್ಲದಿದ್ದರೂ ಇಂಥ ಮನೋಧರ್ಮದ ಕುಲುಮೆಯಲ್ಲಿ ಹುಟ್ಟಿಬಂದವನಾಗಿದ್ದಾನೆ.

ಧರ್ಮದ ಸ್ವರೂಪದಲ್ಲಾದ ಬದಲಾವಣೆ ಕಾವ್ಯದ ಸ್ವರೂಪವನ್ನು ಬಹಳ ಮಟ್ಟಿಗೆ ಬದಲುಮಾಡಿತು. ಪಂಪನ ಅರಿಗ ಐತಿಹಾಸಿಕ ಕಾರಣಗಳಿಗಾಗಿ ಕಾವ್ಯ-ನಾಯಕನಾಗುತ್ತಾನೆಯೇ ಹೊರತು, ಉಳಿದ ಪಾತ್ರಗಳು ಅವನಿಗೆ ಅಧೀನವಾಗಿ ಯಲ್ಲ. ಮತ್ತು ಪಂಪ ಧರ್ಮವನ್ನೂ ಕಾವ್ಯಧರ್ಮವನ್ನೂ ಜೊತೆಯಾಗಿ ಕಾಯ್ದು ಕೊಂಡದ್ದರಿಂದ ಅವನಲ್ಲಿ ರಸಸೃಷ್ಟಿ ಹದ ತಪ್ಪುವದಿಲ್ಲ. ಅವನು ಲೌಕಿಕ ಹಾಗೂ ಪರಮಾರ್ಥಗಳ ಸಮನ್ವಯವನ್ನು ಸಾಧಿಸುತ್ತಾನಾದರೂ ಅವುಗಳನ್ನು ಬೇರೆ ಬೇರೆ ಯಾಗಿಯೇ ಒಂದು ಇರುವಿಕೆಯ ಕ್ರಮದಲ್ಲಿ ನೋಡುತ್ತಾನೆ. ಚಾಮರಸ ಹಾಗೂ ಕುಮಾರವ್ಯಾಸರಲ್ಲಿ ಇವೆರಡೂ ಸಹಜವಾಗಿ ಶಬ್ದ, ಧ್ವನಿಗಳಂತೆ ಬೆರೆತುಬಿಡುತ್ತವೆ. ಕಾವ್ಯಶಕ್ತಿ ತುಳುಕಾಡಿಸುವಾಗ ಗೊಂದಲವನ್ನೂ ಹುಟ್ಟಿಸುತ್ತವೆ. ಈ ಕವಿಗಳಲ್ಲಿ ಭಾವನೆಗಳೂ ಹೆಚ್ಚು ತೀವ್ರವಾಗಿರುತ್ತವೆ. ಪಂಪನ ಶೃಂಗಾರಕ್ಕಿಂತ ರತ್ನಾಕರ ವರ್ಣಿಯ ಶೃಂಗಾರ ಹೆಚ್ಚು ಉತ್ಕಟವಾಗಿದೆ. ಕುಮಾರವ್ಯಾಸನ ವೀರ, ಪಂಪನ ವೀರಕ್ಕಿಂತ ಹೆಚ್ಚು ಆವೇಶಪೂರ್ಣವಾಗಿದೆ. ಸಂಯಮ ಪಂಪನ ಭಾವಯೋಜನೆಯ ಮುಖ್ಯ ಲಕ್ಷಣವಾಗಿದ್ದರೆ ಈ ಕವಿಗಳಲ್ಲಿ ಉತ್ಕಟತೆ ಪ್ರಧಾನಗುಣವಾಗಿದೆ. ಕುಮಾರವ್ಯಾಸನಂತೂ ರಸಧ್ಯಾನದಲ್ಲಿ ತನ್ಮಯತೆಯನ್ನೇ ಪಡೆಯುತ್ತಾನೆ. ಇನ್ನು

ಪಾತ್ರರಚನೆಯಲ್ಲಿಯೂ ಇದೇ ಬದಲಾವಣೆಯನ್ನು ಕಾಣಬಹುದಾಗಿದೆ. ಪಂಪ, ರನ್ನ, ನಾಗಚಂದ್ರರ ಪಾತ್ರಗಳು ಎಷ್ಟೇ ಉನ್ನತವಾಗಿದ್ದರೂ ಅಮಾನುಷವಾಗಿಲ್ಲ. ಅವುಗಳ ವ್ಯಕ್ತಿತ್ವದ ಗಾತ್ರ ಪರ್ವತಪ್ರಾಯವಾಗಿರಬಹುದು, ಪಾರಮಾರ್ಥಿಕತೆಯ ಅತಿಶಯವನ್ನೂ ಅವರಲ್ಲಿ ಕಾಣಬಹುದು. ಆದರೆ ಅವರಲ್ಲಿ ಅಲೌಕಿಕ ಅಂಶಗಳಿರುವದಿಲ್ಲ. ಅವರ ನಡೆವಳಿಕೆಯ ರೀತಿ ಘನವಾದರೂ ಮಾನುಷವಾಗಿದೆ. ಚಾಮರಸ, ಕುಮಾರವ್ಯಾಸರಲ್ಲಿ ಮಾತ್ರ ಇದು ತಿರುವುಮುರುವಾಗಿದೆ. ಪ್ರಭುದೇವರು, ಶ್ರೀಕೃಷ್ಣ ಇಂಥ ನಾಯಕಪಾತ್ರಗಳೂ ಮಾನುಷವೇಷದಲ್ಲಿಯ ಅಮಾನುಷವ್ಯಕ್ತಿಗಳು. ಪ್ರಭು ಅಸ್ಪರ್ಶವಾದ ಬಯಲೇ ಮೂರ್ತಿಗೊಂಡ ನಿರ್ವಾಣ ಬಿಂಬ; ಭರತ 'ಮೊಲೆಯ ಮೇಲಿದ್ದಾತ್ಮನ ನೆಲೆಯ' ಕಾಣಬಲ್ಲ 'ನಿರಂಜನಸಿದ್ಧ'; ಶ್ರೀಕೃಷ್ಣ ನಿರವಯವ ತತ್ವವನ್ನು ಮನೋಹರವಾದ ಮನುಷ್ಯರೂಪಿನಲ್ಲಿ ಪ್ರಕಟಿಸುವ 'ಸಾಕಾರಪರಬೊಮ್ಮ.'

ಈ ರೀತಿಯ ರಸಪಕ್ಷಪಾತ ಕಾವ್ಯದ ಸಮತೂಕವನ್ನೇ ತಪ್ಪಿಸುವಂಥದಾಗಿದೆ. ಒಂದೇ ನಾಯಕಪಾತ್ರದ ಕ್ರಿಯೆಗಳೇ ಕಾವ್ಯವಸ್ತುವಾಗುವದರಿಂದ ಉಳಿದ ಪಾತ್ರಗಳು ಸ್ವತಂತ್ರವಾಗಿ ವರ್ತಿಸಲು ಅವಕಾಶ ದೊರೆಯುವದಿಲ್ಲ. ಅದಕ್ಕಾಗಿ ರಸಯೋಜನೆಯಲ್ಲಿ ಜೀವನದಲ್ಲಿ ಸಹಜವಾಗಿರುವ ಆತಂಕವೂ ಉಳಿಯುವದಿಲ್ಲ. ಇಂಥ ದೋಷಗಳು 'ಭರತೇಶವೈಭವ'ದಲ್ಲಿ ಕಾಣಸಿಗುತ್ತವೆ. ಆದರೆ ಈ ಮೂವರೂ ಈ ದೋಷಗಳನ್ನು ಸುಲಭವಾಗಿ ಜೀರ್ಣಿಸಿಕೊಳ್ಳುವ ಮಹಾಕವಿಗಳೆಂದೇ ಕಾವ್ಯಧರ್ಮ ಸುಸೂತ್ರವಾಗಿ ಪಾರಾಗುವಂತಾಯಿತು. ಇವರನ್ನು ಅನುಸರಿಸಿದ ಮುಂದಿನ ಕವಿಗಳಲ್ಲಿ ಮಾತ್ರ ಈ ದೋಷಗಳು ಸುಸ್ಪಷ್ಟವಾಗಿವೆ. ರಾಘವಾಂಕನಿಂದ ಪ್ರಾರಂಭವಾದ ವರ್ಣಕಕಾವ್ಯದ ಸಂಪ್ರದಾಯ ಕುಮಾರವ್ಯಾಸನಲ್ಲಿ ಪರಾಕಾಷ್ಠೆಗೆ ಮುಟ್ಟಿದೆ. ತನ್ನ ಯುಗದ ಸತ್ವವನ್ನೂ ಕಾವ್ಯಶೈಲಿಯನ್ನೂ ಕುಮಾರವ್ಯಾಸ ಪ್ರಕಟಿಸುವದಲ್ಲದೆ ಪಂಪನಿಂದ ಆರಂಭವಾದ ಕಾವ್ಯಪರಂಪರೆಯ ಸತ್ವವನ್ನೂ ಕೂಡ ಪ್ರಕಟಿಸುತ್ತಾನೆ. 'ಭರತೇಶವೈಭವ'ದಲ್ಲಿ ಭರತನನ್ನು ಬಿಟ್ಟರೆ ಉಳಿದೆಲ್ಲ ಪಾತ್ರಗಳು ಅವನ ಯೋಗಭೋಗಗಳ ಬೀಸುಬಲೆಯಲ್ಲಿ ಸಿಕ್ಕುಬಿದ್ದಿದ್ದಾರೆ. ಆದರೆ ಕುಮಾರವ್ಯಾಸನಲ್ಲಿ ಕೃಷ್ಣ ಸರ್ವತಂತ್ರ ಸ್ವತಂತ್ರನಾಗಿದ್ದರೂ ಉಳಿದ ಪಾತ್ರಗಳೆಲ್ಲ ತಮ್ಮ ವ್ಯಕ್ತಿತ್ವವನ್ನು ಕಾಯ್ದುಕೊಂಡಿವೆ. ಕುಮಾರವ್ಯಾಸನ ಭಕ್ತಿಯಲ್ಲಿ ಕೂಡ ಕ್ಷಾತ್ರ ತುಂಬಿರುವದರಿಂದ ಕಾವ್ಯವಸ್ತುವಿಗೆ ಗಟ್ಟಿಯಾದ ತಳಹದಿ ದೊರೆತಿದೆ. ಮೇಲಾಗಿ ಕಸುವಿನ ಕಲ್ಪಕತೆಯುಳ್ಳ ಭಾಷೆ ಹಾಗೂ ಛಂದಸ್ಸಿನ ಸಾಮರ್ಥ್ಯದಿಂದ ಬೇರೆ ಬೇರೆ ಕಾವ್ಯಪ್ರಕಾರಗಳ ಸತ್ವವನ್ನು ಅವನು ತರಬಲ್ಲವನಾಗಿದ್ದಾನೆ. ಅವನ ಭಾರತದ ಒಂದೊಂದು ಪರ್ವವೂ ಪ್ರತ್ಯೇಕವಾದ ರೂಪವಿನ್ಯಾಸದಲ್ಲಿ ಎರಕಹೊಯ್ದದ್ದಾಗಿದೆ. ಜೀವನದ ವಿಸ್ಮಯಕರವಾದ ವೈವಿಧ್ಯದ ಪ್ರದರ್ಶನದಲ್ಲಿ ಶೇಕ್ಸಪಿಯರನಷ್ಟು ಸಾಮರ್ಥ್ಯ ಕುಮಾರವ್ಯಾಸನಿಗಿದೆ. 'ಗದುಗಿನ ಭಾರತ'ದಂಥ ಸರ್ವಗ್ರಾಹಿಯಾದ ಕಾವ್ಯ ಕನ್ನಡದಲ್ಲಿ ಬೇರೊಂದಿಲ್ಲವೆಂದರೆ ತಪ್ಪಾಗಲಾರದು.

ಮುಂದೆ ಮಾತ್ರ ಹಳೆಗನ್ನಡಸಾಹಿತ್ಯ ಬಹುಮಟ್ಟಿಗೆ ಅನುಕರಣದ ದಾರಿಯಲ್ಲಿಯೇ ನಡೆಯಿತು. ಸ್ವತಂತ್ರವಾದ ಪ್ರತಿಭೆ ತೀರ ಗೋಚರಿಸುವದಿಲ್ಲವೆಂದಲ್ಲ. ಲಕ್ಷ್ಮೀಶ ರಸೋತ್ಕರ್ಷವೊಂದನ್ನೇ ಗುರಿಯಾಗಿಟ್ಟುಕೊಂಡು ಕಾವ್ಯರಚನೆಯನ್ನು ಮಾಡಿದ. ದಾಸರ ಹಾಡುಗಳು ಗೇಯಕಾವ್ಯದ ಉತ್ತಮ ಮಾದರಿಗಳಾಗಿರುವವಲ್ಲದೆ ವಾದಾತ್ಮಕಕವಿತೆ ( argumentative lyric )ಗಳಿಗೆ ಶ್ರೇಷ್ಠ ಉದಾಹರಣೆಗಳಾಗಿವೆ. ಸರ್ವಜ್ಞನ ಜಾನಪದ ಕಾವ್ಯದ ಪ್ರಾಮಾಣಿಕತೆಯನ್ನು ಮೈಗೂಡಿಸಿಕೊಂಡು ಜನರ ನಾಲಗೆಗಳಲ್ಲಿ ನಲಿದವು. ಆದರೆ ಒಂದು ಕಾಲಾವಧಿಯ ಜೀವನಕ್ರಮ, ಧರ್ಮದೃಷ್ಟಿ, ಒಳಿತು-ಕೆಡುಕುಗಳನ್ನು ಯುಗಧರ್ಮದ ಹೊಳಪಿನಲ್ಲಿ ಕಂಡರಿಸಿದ ಕಾವ್ಯ ಮೂಡಿಬರಲಿಲ್ಲ. ಕನ್ನಡ ಜನಜೀವನ ಚದರಿಹೋಗಿತ್ತು. ಧಾರ್ಮಿಕತೆಯಲ್ಲಿ ಮೇಲಿಂದ ಮೇಲೆ ಸಂಘಟನೆಯ ಪ್ರಯತ್ನಗಳು ನಡೆದೇ ಇದ್ದರೂ ರಾಜಕೀಯವಾಗಿ ಜೀವನ ಒಂದುಗೂಡಿರಲಿಲ್ಲ. ಮೊದಲಿನಂತೆ ಸಾಮ್ರಾಜ್ಯವಾಗಲಿ, ಜೀವಂತವಾದ ಧರ್ಮವಾಗಲಿ ನಾಡಿನ ಐಕ್ಯವನ್ನು ಸಾಧಿಸಲಿಲ್ಲ. ಮಹಾಕಾವ್ಯವೊಂದರಲ್ಲಿ ಅಭಿವ್ಯಕ್ತಿಗೊಳ್ಳಬಹುದಾದಂಥ ಜೀವನಕ್ರಮವಿರಲಿಲ್ಲ. ವ್ಯಕ್ತಿಗತವಾದ ಭಾವಗೀತಗಳನ್ನು ಬರೆಯುವದೊಂದೇ ಈಗ ಶಕ್ಯವಾಗಬಹುದಿತ್ತು. ಮತ್ತು ಅದೇ ಮಾದರಿಯ ದಾಸರ ಹಾಡುಗಳು, ಸರ್ವಜ್ಞನ ತ್ರಿಪದಿಗಳು, ಅನುಭಾವದ ಪದಗಳು ಹುಟ್ಟಿಬಂದವು.

ಮುಂದೆ ಕೆಂಪುನಾರಾಯಣ ಹಾಗೂ ಮುದ್ದಣನ ವರೆಗೆ ಬೇರೆ ಸಾಹಿತ್ಯ ಪ್ರಕಾರವೇ ಹುಟ್ಟಿಬರಲಿಲ್ಲ. ಕೆಂಪುನಾರಾಯಣನದು ಕಾದಂಬರಿಯ ರೂಪವಿನ್ಯಾಸವನ್ನು ಸಂಸ್ಕೃತದ ಕಥಾರೂಪದೊಂದಿಗೆ ಜೋಡಿಸುವ ಪ್ರಯತ್ನವಾಗಿದೆ. ಇತಿಹಾಸವನ್ನು ವಸ್ತುವಾಗಿಟ್ಟುಕೊಂಡು ಬರೆಯುವದು ಕೂಡ ಆಗಿನ ಕಾಲಕ್ಕೆ ಹೊಸ ಮಾತಾಗಿತ್ತು. 'ಮುದ್ರಾರಾಕ್ಷಸ'ವನ್ನು ಕಾದಂಬರಿಯ ರೂಪಕ್ಕೆ ತಿರುಗಿಸುವಾಗ ಅವಶ್ಯವಾದ ಮಾರ್ಪಾಡುಗಳನ್ನು ಸ್ವಂತ ಕಲ್ಪಕತೆಯನ್ನುಪಯೋಗಿಸಿ ಕೆಂಪುನಾರಾಯಣ ಮಾಡಿದ್ದಾನೆ. ಅಲ್ಲದೆ ಮೊಟ್ಟಮೊದಲಿಗೆ ಅವನು ಆಧುನಿಕ ಜನತೆಯನ್ನು ಲಕ್ಷ್ಯದಲ್ಲಿಟ್ಟುಕೊಂಡು ಬರೆದಿದ್ದಾನೆ. ಹಳೆಗನ್ನಡದ ಬಿಗುವನ್ನು ಕ್ರಮೇಣ ಸಡಿಲುಗೊಳಿಸಿಕೊಂಡ ಅವನ ಭಾಷೆ ಈ ಮಾತಿಗೆ ಉದಾಹರಣೆಯಾಗಿದೆ. ಹರಿಹರನ ತರುವಾಯ ಗದ್ಯರಚನೆ ಅಷ್ಟೇ ಕೌಶಲ್ಯಪೂರ್ಣವಾಗಿ ಬಂದದ್ದನ್ನು ಕೆಂಪುನಾರಾಯಣನಲ್ಲಿ ಕಾಣಬಹುದಾಗಿದೆ. ಆದರೆ ದೃಷ್ಟಿಕೋನ ಹೊಸದಾಗಿದ್ದರೂ ಕನ್ನಡಸಾಹಿತ್ಯದ ಮುಖ್ಯಪರಂಪರೆಗೆ ಏನೂ ಭಂಗಬರದಂತೆ ಅವನು ಕಾವ್ಯಸೃಷ್ಟಿ ಮಾಡಿದ್ದು ಗಮನಾರ್ಹವಾಗಿದೆ.

ಮುದ್ದಣನ ಕೃತಿರಚನೆ ಇನ್ನೂ ಹೆಚ್ಚು ಮಹತ್ವಪೂರ್ಣವಾಗಿದೆ. ಆಧುನಿಕರಲ್ಲಿಯೇ ಮೊದಲಿಗನಾದ ಮುದ್ದಣನ ಕಾವ್ಯಸ್ವರೂಪ ವಿಮರ್ಶಕರನ್ನು ಇನ್ನೂ ದಿಗ್ಭ್ರಮೆಗೊಳಿಸುತ್ತದೆ. ಮತ್ತು ಅವನ ಬಗ್ಗೆ ತಿಳಿಯಾಗಿ ವಿಚಾರಮಾಡುವದು ಕೂಡ ಒಂದು ಲಾಭವಾಗಿದೆ. ಆ ದೃಷ್ಟಿಯಿಂದ ನೋಡಿದಾಗ ಕೆಂಪುನಾರಾಯಣ ಹಳೆ-ಹೊಸ ಸಂವೇದಗಳನ್ನು ಪ್ರಾಮಾಣಿಕವಾಗಿ ಪ್ರತಿಬಿಂಬಿಸುತ್ತಾನೆ. ಅವನ

ಲಕ್ಷ್ಯವೆಲ್ಲ ಕೇವಲ ಕತೆಯ ಬೆಳವಣಿಗೆಯ ಕಡೆಗಿರುವದರಿಂದ ಹೆಚ್ಚಿನ ಸ್ವರೂಪ-ಚರ್ಚೆಗೆ ಅಲ್ಲಿ ಅವಕಾಶವೇ ಇಲ್ಲ. ಆದರೆ ಮುದ್ದಣ ಅನೇಕ ಬಗೆಯಿಂದ ನಮ್ಮ ಕುತೂಹಲವನ್ನು ಕೆರಳಿಸುತ್ತಾನೆ. ಅವನ ಹಳಗನ್ನಡದ ತಿರುಳಿನಲ್ಲಿ ಕೃತಕತೆ ಏನೂ ಇಲ್ಲ. 'ರಾಮಾಶ್ವಮೇಧ'ದ ಕತೆ ಹಳೆಯದೆನಿಸಿ, ಮುದ್ದಣ-ಮನೋರಮೆಯರ ಸರಸ-ಸಂವಾದಗಳು ಅತ್ಯಾಧುನಿಕವೆಂಬಂತೆ ಕಂಗೊಳಿಸುತ್ತವೆ. ಅಂತೇ ಈ ಕಾವ್ಯ 'ಸಾಮಾನ್ಯದ ಚಿತ್ರಕ್ಕೆ ಸುವರ್ಣದ ಚೌಕಟ್ಟು' ಎಂಬ ಅನುಚಿತವಾದ ಅಭಿಪ್ರಾಯಕ್ಕೆ ಎಡೆಗೊಟ್ಟಿತು. ಮುದ್ದಣ ಹೊಸ ಸಾಹಿತ್ಯಪ್ರಕಾರವೊಂದನ್ನು ನಿರ್ಮಿಸುವ ಹವಣಿಕೆಯಲ್ಲಿದ್ದಾನೆಂಬ ಅರಿವನ್ನು ಈ ಅಭಿಪ್ರಾಯ ಒಳಗೊಳ್ಳುವದಿಲ್ಲ. ಆದರೆ ಮುದ್ದಣ-ಮನೋರಮೆಯರು 'ರಾಮಾಶ್ವಮೇಧ'ದ ಕತೆಯಿಂದ ಪ್ರತ್ಯೇಕರಾಗಿ ಉಳಿದಿಲ್ಲ. ಅವರಿಬ್ಬರೂ ಆ ಕತೆಯ ಪಾತ್ರಗಳಾಗುವಷ್ಟರ ಮಟ್ಟಿಗೆ ಸಜೀವಸಂಬಂಧವನ್ನಿಟ್ಟುಕೊಂಡಿದ್ದಾರೆ. 'ಪಗಲುಮಿರುಳುಂ ಸುರಿವ ಬಲ್ಸೋನೆ'ಯ ಮುಸುಕಿನಲ್ಲಿ ಅವರಿಬ್ಬರೂ ಕಾಲದ ಅಂತರವನ್ನು ಸುಲಭವಾಗಿ ಕ್ರಮಿಸಿಬಿಡುತ್ತಾರೆ. ಅಲ್ಲದೆ ಈ ಹೊತ್ತಿನಲ್ಲಿ ಇನ್ನೊಂದು ಅಭಿಪ್ರಾಯವನ್ನೂ ನೆನಪಿನಲ್ಲಿಡುವದು ಒಳ್ಳೆಯದು. ಮುದ್ದಣ 'ಕುಮಾರವಿಜಯ'ದಂಥ ಯಕ್ಷಗಾನಪ್ರಸಂಗಗಳನ್ನು ಬರೆದದ್ದಲ್ಲದೆ ತಾಳಮದ್ದಲೆಯ ಪ್ರಸಂಗಗಳಲ್ಲಿ ಅರ್ಥಗಾರನಾಗುತ್ತಿದ್ದನೆಂದೂ ತಿಳಿದುಬಂದಿದೆ. ಯಕ್ಷಗಾನದ ಪ್ರೇಕ್ಷಕರನ್ನುದ್ದೇಶಿಸಿಯೇ ಮುದ್ದಣ ತನ್ನ 'ರಾಮಾಶ್ವಮೇಧ'ವನ್ನು ಬರೆದಿರಬಹುದಾಗಿದೆ. ತಾಳಮದ್ದಲೆಯ ಪ್ರಸಂಗದಲ್ಲಿ ಪಾತ್ರಧಾರಿಗಳು ತಾವೇ ಪಾತ್ರಗಳ ಅರ್ಥವನ್ನು ವಿವರಿಸುತ್ತ ನಾಟಕವನ್ನು ಕಟ್ಟುವದು ಅದರ ಮುಖ್ಯ ತಂತ್ರವಾಗಿದೆ. ಈ ತಂತ್ರವನ್ನು ಕೆಲಮಟ್ಟಿಗೆ ಮುದ್ದಣ 'ರಾಮಾಶ್ವಮೇಧ'ದಲ್ಲಿ ಅನುಸರಿಸಿರುವದರಿಂದ ರಾಮನ ಪಾತ್ರದ ಅರ್ಥವಿವರಣೆ ಕಣ್ಣಿಗೆ ಕಟ್ಟುವಂತಾಗುತ್ತದೆ. ಸೀತಾಪರಿತ್ಯಾಗದಂಥ ಸಮಸ್ಯೆಯ ಇರುಕಿನಲ್ಲಿ ಸಿಕ್ಕಂಥ ರಾಮನ ಪಾತ್ರವನ್ನು ಮುದ್ದಣ-ಮನೋರಮೆಯರಿಬ್ಬರೂ ಒರೆಗೆ ತಿಕ್ಕಿ ತಿಕ್ಕಿ ನೋಡುತ್ತಾರೆ. ಈ ಕಾವ್ಯದಲ್ಲಿ ಹಲವಾರು ಕಡೆಗೆ ವಿಷಯಾಂತರಗಳೂ ಇಲ್ಲದಿಲ್ಲ. ರಾಮಚಂದ್ರನ ಜನ್ನಗುದುರೆಯಂತೆ ಕತೆ ಹತ್ತು ದಿಕ್ಕಿನಲ್ಲಿ ಹರಿದಾಡುತ್ತದೆ. ಆದರೆ ತೂಕಡಿಸುತ್ತಿದ್ದರೂ ಸದಾ ಜಾಗ್ರತಳಾಗಿರುವ ಮನೋರಮೆ ಅದನ್ನು ಮೇರೆ ಮೀರದಂತೆ ನೋಡಿಕೊಳ್ಳುತ್ತಾಳೆ. ಈ ಮಾತು ಕೂಡ ಮುದ್ದಣ ಆರಿಸಿಕೊಂಡಿರುವ ತಂತ್ರಕ್ಕೆ ಸಹಜವಾಗಿ ಬಂದಿದೆ.

ಇಂಥ ಕೃತಿರಚನೆಯನ್ನು ಮಾಡಿ ಮುದ್ದಣ ವಿಮರ್ಶೆಯ ಕೆಲವು ಮಹತ್ವದ ವಿಚಾರಗಳಿಗೆ ಉದಾಹರಣೆಯಾಗಿದ್ದಾನೆ. ಮೊದಲನೆಯದಾಗಿ ಅವನು ತನ್ನ ರಸಿಕರಿಗೆ ಹಾಗೂ ತನ್ನ ಭಾಷೆಗೆ ಅತ್ಯಂತ ಪ್ರಾಮಾಣಿಕನಾಗಿದ್ದಾನೆ. ಅವನ ಭಾಷೆ ಹಳೆಯದೆನಿಸಿದರೂ ಕನ್ನಡದ ನೈಜತೆ ಅದರಲ್ಲಿ ಹಾಸುಹೊಕ್ಕಾಗಿದೆ. ತನ್ನೆದುರಿಗಿದ್ದ ಸಾಮಗ್ರಿಯನ್ನೇ ಬಳಸಿಕೊಂಡು, ಸುತ್ತಲಿನ ಜೀವನದ ಮೇಲೆ ಒಂದು ಕಣ್ಣಿಟ್ಟು, ರಸಿಕರ ಅಭಿರುಚಿಗೆ ಯೋಗ್ಯ ಗೌರವವನ್ನು ಸಲ್ಲಿಸಿ ಮುದ್ದಣ ಈ ಕೃತಿಯನ್ನು ನಿರ್ಮಿಸಿದ್ದರಿಂದ ಅದರ ನವೀನತೆಗೆ ಎಂದೂ ಕುಂದು ಬರಲಾರದು. ಶ್ರೇಷ್ಠ

ಕೃತಿಗಳು ಯಾವ ಕಾಲದವೇ ಆಗಿರಲಿ, ಅವು ತಮ್ಮ ಕಾಲದ ವಾತಾವರಣವನ್ನು ಪುನಃ ಸೃಷ್ಟಿಸುವದರಿಂದ ಅದರ ರಸಾನುಭವ ನವೀನವಾಗಿಯೇ ಉಳಿಯುತ್ತದೆ. ಇನ್ನೊಂದು ಮಹತ್ವದ ಮಾತೆಂದರೆ, ಮುದ್ದಣನಲ್ಲಿ ಹೊಸಸಾಹಿತ್ಯಪ್ರಕಾರ ವೊಂದು ಹುಟ್ಟಬೇಕಾದಾಗ ಅದು ಜನ್ಮ ತಾಳುವ ವೇದನೆ ಕೂಡ ನಮ್ಮ ಅನು ಭವಕ್ಕೆ ಬರುವಂತಿದೆ. ಮುದ್ದಣ-ಮನೋರಮೆಯರಿಬ್ಬರು ತಮ್ಮ ಸಂವಾದಗಳಲ್ಲಿ ಸಾಹಿತ್ಯಚರ್ಚೆಯನ್ನು ಹುದುಗಿಸಿದ್ದಾರೆ.

ಮುದ್ದಣ ಆಧುನಿಕರಲ್ಲಿ ಮೊದಲಿಗನಾಗುವದಕ್ಕೆ ಅವನ ಕಾಲವೊಂದೇ ಕಾರಣವಾಗಿರದೆ, ಅವನು ಪಂಪನಿಂದ ತನ್ನ ವರೆಗೆ ಹಬ್ಬಿದ್ದ ಪ್ರಾಚೀನ ಸಾಹಿತ್ಯವನ್ನು ಅರಗಿಸಿಕೊಂಡಿದ್ದನೆಂಬುದೇ ಆಗಿದೆ. ಅವನ ಕಾಲ ಎಲ್ಲ ದೃಷ್ಟಿಯಿಂದಲೂ ಸಂಧಿ-ಕಾಲವಾಗಿತ್ತು. ಹಳೆಯ ರೀತಿಯ ಮಹಾಕಾವ್ಯ ಹುಟ್ಟಬಹುದಾದಂಥ ಜೀವನ-ವಿಧಾನವಿರಲಿಲ್ಲ. ಹೊಸಕಾಲದಲ್ಲಿ ಉಸಿರಾಡಿಸಬಹುದಾದಂಥ ಮನಸ್ಸಿನ ಸಿದ್ಧತೆ ಮುದ್ದಣನಿಗಿರಲಿಲ್ಲ. ಹೀಗಾಗಿ ಹಳೆಯದರ ಹಂಗಿಲ್ಲದೆ ಸಂಪೂರ್ಣವಾಗಿ ಹೊಸ ಪ್ರಕಾರವನ್ನು ನಿರ್ಮಿಸುವದು ಅವನಿಗೆ ಸಾಧ್ಯವಾಗುತ್ತಿರಲಿಲ್ಲ. ಹಳೆಯ ಹಂಜಿ ಯನ್ನು ಜಗ್ಗಿ ಹೊಸ ನೂಲು ತೆಗೆಯಬೇಕಾಗಿತ್ತು. ಆದರೆ ತನಗೆ ದೊರೆತ ಅತ್ಯಂತ ಪರಿಮಿತ ಕ್ಷೇತ್ರದಲ್ಲಿಯೇ ಪರಿಸ್ಥಿತಿಯ ಸಂಪೂರ್ಣ ಅರ್ಥಮಾಡಿಕೊಂಡು ಜೀವಂತ ಸಾಹಿತ್ಯವನ್ನು ಸೃಷ್ಟಿಸಿ ಮುದ್ದಣ ಕೃತಾರ್ಥನಾಗಿದ್ದಾನೆ. ಮೇಲುನೋಟಕ್ಕೆ ಅವನು ಆಧುನಿಕತೆಯಿಂದ ದೂರವಾಗಿದ್ದಾನೆಂದು ತೋರಬಹುದು. ಆದರೆ ಅವನು ಆಧುನಿಕತೆಯಿಂದ ಬೆನ್ನುತಿರುಗಿಸಿದ್ದು, ಹೊಸಸಾಹಿತ್ಯಕ್ಕೆ ತಡೆಯನ್ನುಂಟುಮಾಡುವ ದಕ್ಕಾಗಿರದೆ, ಪ್ರಾಚೀನಸಾಹಿತ್ಯಕ್ಕೆ ನಮ್ಮೆಲ್ಲರ ಪತಿಯಿಂದ ಕೊನೆಯ ನಮಸ್ಕಾರ ಹೇಳುವುದಕ್ಕೆ.

ಹೀಗೆ ಪಂಪನಿಂದ ಮುದ್ದಣನ ವರೆಗೆ ಪ್ರಾಚೀನಸಾಹಿತ್ಯದಲ್ಲಿಯ ಎಲ್ಲ ಪ್ರಕಾರಗಳನ್ನು ನೋಡಿದ್ದಾಯಿತು. ಕನ್ನಡಭಾಷೆಯ ಸಹಜಸತ್ವ ಕನ್ನಡಿಗರ ಜನ್ಮ ಜಾತವಾದ ರಸಿಕತೆಗನುಸಾರವಾಗಿ ಅನೇಕ ಬಗೆಗಳಲ್ಲಿ ಅಭಿವ್ಯಕ್ತಿಯನ್ನು ಪಡೆ ಯಿತು. ಕನ್ನಡಿಗರು 'ಕುರಿತೋದದೆಯುಂ ಕಾವ್ಯಪ್ರಯೋಗಪರಿಣತ ಮತಿಗಳು' ಎಂದು ನೃಪತುಂಗ ಹೇಳಿದ್ದರಲ್ಲಿ ಆಶ್ಚರ್ಯವೇನಿಲ್ಲ. ದೇಶದ ದಂಡೆಗುಂಟ ಹೊಳೆ ಯಾಗಿ ಹರಿದ ಜಾನಪದ-ಕಾವ್ಯವೇ ಆ ಮಾತಿಗೆ ಉದಾಹರಣೆಯಾಗಿದೆ. ಪಂಪ, ಹರಿಹರ, ಕುಮಾರವ್ಯಾಸ ಹಾಗೂ ಮುದ್ದಣರಂಥ ಶ್ರೇಷ್ಠತರಗತಿಯ ಕವಿಗಳು ತಮ್ಮ ಪ್ರತಿಭೆ ಓಜಸ್ಸುಗಳನ್ನು ಈ ಭಾಷೆಗೆ ಕೊಟ್ಟು ಅದರ ಅಭಿವ್ಯಕ್ತಿಯ ಸಾಮರ್ಥ್ಯವನ್ನು ಹೆಚ್ಚುಮಾಡಿದ್ದಾರೆ. ಸಂಸ್ಕೃತದ ಅಲಂಕಾರಿಕರು ಹಾಗೂ ಕಾವ್ಯ ಲಕ್ಷಣಕಾರರು ಚರ್ಚಿಸಿದ ಮೂಲತತ್ವಗಳೇ ಕನ್ನಡಸಾಹಿತ್ಯಕ್ಕೆ ತಳಹದಿಯಾಗಿವೆ. ಆದರೆ ಅದರಲ್ಲಿಯೂ ನಮ್ಮ ಕವಿಗಳು (ಕೆಲವರನ್ನು ಹೊರತುಪಡಿಸಿ) ಚಿತ್ರಕಾವ್ಯ ದಂಥ ಅವ್ಯಂಗವಾದ ಅಧರ್ಮಕಾವ್ಯಕ್ಕೆ ಮನಸೋಲದೆ ಧ್ವನಿಕಾವ್ಯದ ಪರಂಪರೆ ಯನ್ನು ಮುಂದುವರಿಸಿದ್ದಾರೆ. ಸಂಸ್ಕೃತದಲ್ಲಿ ಕೂಡ ದೊರೆಯದಂಥ ಅಖಂಡವಾದ ಧ್ವನಿಕಾವ್ಯಕ್ಕೆ ಪಂಪನ ಕಾವ್ಯ ಉದಾಹರಣೆಯಾಗಿರುವದೂ ಇದಕ್ಕೆ ಕಾರಣ-

ವಾಗಿದೆ. ಪಂಪನಲ್ಲದೆ ನಾಗಚಂದ್ರ, ಜನ್ನ, ರನ್ನ, ನೇಮಿಚಂದ್ರ, ರುದ್ರಭಟ್ಟ ಮೊದಲಾದ ಕವಿಗಳು ಕೂಡ ಈ ಕಾವ್ಯದರ್ಶನದ ಎತ್ತರಕ್ಕೆ ಸರಿಯಾಗಿ ಕಾವ್ಯರಚನೆಯನ್ನು ಮಾಡಿದ್ದಾರೆ. ಮುಂದೆ ವಚನಕಾರರು, ಹರಿಹರ, ಕುಮಾರವ್ಯಾಸ ಇಂಥ ಕವಿಗಳಿಗೆ ಪ್ರತ್ಯೇಕವಾದ ಲಕ್ಷಣಶಾಸ್ತ್ರವನ್ನು ನಿರ್ಮಿಸಬೇಕಾದೀತು. ವಚನಕಾರರು ಕೇವಲ ಧ್ವನಿತಾರ್ಥಕ್ಕೇ ಗುರಿಯಿಡದೆ ಶಬ್ದದ ಹಿಂದಿರುವ ಅನಿರ್ವಚನೀಯತೆಗೆ ದಾಳಿಯಿಟ್ಟರು ; ಹರಿಹರ ಶಬ್ದಕ್ಕಿರುವ ಎಲ್ಲ ಶಕ್ತಿಗಳನ್ನೂ ಬಳಸಿಕೊಂಡ. ಕುಮಾರವ್ಯಾಸನ ಶಬ್ದಗಳ ಹೃದಯಸ್ಪಂದನಗಳನ್ನು ಕೂಡ ಎಣಿಸಬಹುದಾಗಿದೆ. ಹೀಗೆ ಹಳೆಗನ್ನಡಸಾಹಿತ್ಯ ಸಂಸ್ಕೃತಸಾಹಿತ್ಯದಿಂದ ಪ್ರೇರಣೆಯನ್ನು ಪಡೆದಿದ್ದರೂ ತನ್ನ ಸಹಜಘನತೆಯನ್ನು ಕಾಯ್ದುಕೊಂಡು ಅನೇಕ ವರ್ಷಗಳ ಕೃಷಿಯ ಮೂಲಕ ಸ್ವತಂತ್ರಸಾಹಿತ್ಯವಾಗಿ ನಡೆದುಬಂದಿತು. ಇಂದಿಗೂ ಈ ಸಾಹಿತ್ಯದ ಅಭ್ಯಾಸ ಭಿನ್ನದೃಷ್ಟಿಕೋನದಿಂದ ನಡೆಯಬೇಕಾಗಿದೆ. ಆನುವಂಶಿಕತೆ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಅತ್ಯಂತ ಮಹತ್ವಪೂರ್ಣವಾಗಿರುವದರಿಂದ, ಹೊಸ ಸಾಹಿತ್ಯ ಹಳೆಯ ಸಾಹಿತ್ಯದಿಂದ ತನ್ನ ಸತ್ವ, ಶಕ್ತಿಗಳನ್ನು ಪಡೆದುಕೊಳ್ಳಬೇಕಾಗಿದೆ.

೨

ಮುದ್ದಣ ಈ ಆಧುನಿಕತೆಯ ಕೋಲಾಹಲದಲ್ಲೂ ಕೂಡ ತಾನೊಂದು ಮೌನ-ದ್ವೀಪವಾಗಿ ಉಳಿದುಬಿಟ್ಟ. ಆದರೆ ಕನ್ನಡನಾಡು ಆಧುನಿಕತೆಯಿಂದ ದೂರವಾಗಿ ಉಳಿಯಲು ಸಾಧ್ಯವಾಗಲಿಲ್ಲ. ಮತ್ತೆ ಹೇಳಿದ ಮಾತನ್ನೇ ಹೇಳುವದಾದರೆ ಪಾಶ್ಚಾತ್ಯಪದ್ಧತಿಯ ಶಿಕ್ಷಣ ಹಾಗೂ ಇಂಗ್ಲಿಶ್‌ಸಾಹಿತ್ಯದ ಅಭ್ಯಾಸಗಳು ನಮ್ಮ ಮನೋಧರ್ಮವನ್ನು ತಿದ್ದಲು ಅಣಿಯಾದವು. ಅಲ್ಲದೆ ವಿಜ್ಞಾನದ ಅನೇಕ ಹೊಸ ಸಂಶೋಧನೆಗಳು, ರಾಜಕೀಯ ಅಸ್ವಸ್ಥತೆ ಇವೆಲ್ಲ ಅನಕ್ಷರಸ್ಥರಿಗೂ ತಿಳಿಯುವಂತೆ ಹೊಸ ಯುಗದ ಸೂಚನೆಯನ್ನು ಕೊಡಹತ್ತಿದವು. ಗಾಳಿಗುಂಟ ತೇಲಿ ಬಂದ ಈ ಹೊಸತನದ ವಾಸನೆ ಸ್ಪಷ್ಟವಾಗಿತ್ತು. ಹೊಸತನದ ಹಂಬಲ ತೀವ್ರ ಆವೇಶವಾಗಿ ವಾತಾವರಣವನ್ನು ಬದಲಿಸಿತು. ಈ ವಾತಾವರಣದ ಫಲವಾಗಿ ಹುಟ್ಟಿಬಂದ ಸಾಹಿತಿಗಳು ಪಾಶ್ಚಾತ್ಯಸಾಹಿತ್ಯದ ಕಡೆಗೆ ಕಣ್ಣು ತಿರುಗಿಸಿದರು. ಇದಕ್ಕಿಂತ ಮೊದಲೇ ಬಂಗಾಲದಲ್ಲಿ ಹೊಸ ಕಾಲ ಬಂದಿತ್ತಾದ್ದರಿಂದ ಅದರ ಅನುಕರಣ ಸುಲಭವಾಯಿತು. ಹೀಗೆ ದೇಶದ ಹೊರಗು-ಒಳಗುಗಳಿಂದ ಕನ್ನಡಕ್ಕೂ ಹೊಸತನದ ಗಾಳಿ ಬೀಸಿತು. ಹಿಂದುಮುಂದಿನ ಎಣಿಕೆಯ ಕಾಲ ಅದಾಗಿರಲಿಲ್ಲವಾದ್ದರಿಂದ ಪ್ರಾಚೀನಸಾಹಿತ್ಯಕ್ಕೆ ತೀವ್ರವಾದ ಪ್ರತಿಕ್ರಿಯೆಯನ್ನು ತೋರಿಸಿ, ಆ ಪರಂಪರೆಯಿಂದ ಸಿಡಿದು ಬಂದ ಹೊಸಸಾಹಿತ್ಯ ಜನ್ಮ ತಾಳಿತು.

ಈ ಬದಲಾವಣೆ ನಮ್ಮ ಸಾಹಿತ್ಯದಲ್ಲಿ ಹಿಂದೆ ಎಂದೂ ಗೋಚರವಾಗದಿದ್ದ ರೀತಿಯಲ್ಲಿ ಬಂದುಬಿಟ್ಟಿತು. ಮೊದಲನೆಯದಾಗಿ ಸಾಹಿತ್ಯಪ್ರಕಾರಗಳು ಹೊಸದಾಗಿ ಹುಟ್ಟಿಕೊಂಡವಲ್ಲದೆ ಹಳೆಯ ಪ್ರಕಾರಗಳು ಗುರುತು ಕೂಡ ತಿಳಿಯದಷ್ಟು

ಬದಲಾದವು. ಕಾವ್ಯ ಭಾವಗೀತದ ಆಕೃತಿಗಿಳಿಯಿತು; ನಾಟಕ ಹಳೆಯ ತಂತ್ರ, ವಸ್ತುಗಳನ್ನು ಕೊಡವಿಬಿಟ್ಟಿತು. ಅಲ್ಲದೆ ಕಾದಂಬರಿ, ಹರಟೆ, ದಿನಚರಿ, ಸಣ್ಣ ಕತೆ, ಪ್ರವಾಸಸಾಹಿತ್ಯ, ಆತ್ಮಚರಿತ್ರೆ ಹೀಗೆ ಹೊಸ ಪ್ರಕಾರಗಳು ಸಾಲಿಟ್ಟವು. ಸ್ವಾತಂ-ತ್ರ್ಯದ ಹೋರಾಟಕ್ಕೆ ಅಭಿವ್ಯಕ್ತಿಯನ್ನು ಕೊಡಲು ಹುಟ್ಟಿದ ಪತ್ರಿಕಾವ್ಯವಸಾಯ ಹೊಸಭಾಷೆಯನ್ನು ರೂಪಿಸಿದ್ದಲ್ಲದೆ ಇಂಥ ಸಾಹಿತ್ಯಪ್ರಕಾರಗಳ ಪ್ರಕಾಶನಕ್ಕೆ ಅನುವುಮಾಡಿಕೊಟ್ಟಿತು. ಪಂಜೆ, ಕಾಮತ, ಕೆರೂರ, ಮುದುವೀಡಕರ, ಶಾಂತಕವಿ ಮುಂತಾದವರ ಸಾಹಿತ್ಯ, ಪತ್ರಿಕಾಸಾಹಿತ್ಯದ ಅಂಗವಾಗಿ ಬಂದದ್ದನ್ನು ಮರೆಯು ವಂತಿಲ್ಲ. ಇಂಗ್ಲಿಶ್ ಶಿಕ್ಷಣದ ಫಲವಾಗಿ ಸಮಗ್ರ ಆಂಗ್ಲಸಾಹಿತ್ಯ, ಅದರ ಜೊತೆಗೇ ಯುರೋಪದ ಉಳಿದ ದೇಶಗಳ ಸಾಹಿತ್ಯಗಳೂ ನಮ್ಮ ಸಾಹಿತಿಗಳ ಮೇಲೆ ಅವರವರ ಸಂಸ್ಕಾರಕ್ಕನುಗುಣವಾಗಿ ಪ್ರಭಾವವನ್ನು ಬೀರಿವೆ. ಈ ಪ್ರಭಾವ ಕೆಲವರಿಗೆ ಭಾಷಾಂತರಗಳ ಮೂಲಕ ಸಿಕ್ಕಿತಾದರೂ, ಇಂಗ್ಲಿಶ್‌ಸಾಹಿತ್ಯದ ಆಳವಾದ ಅಭ್ಯಾಸವೇ ನಮ್ಮ ಸಾಹಿತಿಗಳ ಮನೋಧರ್ಮವನ್ನು ತಿದ್ದಿತು. ಪಾಶ್ಚಾತ್ಯ-ಜೀವನಕ್ರಮ ಹಾಗೂ ಸಾಹಿತ್ಯದೊಂದಿಗೆ ನಿಕಟ ಸಂಪರ್ಕವನ್ನಿಟ್ಟು ಕೊಂಡ ಕೆಲವರು ಆಧುನಿಕಸಾಹಿತ್ಯವನ್ನು ರೂಪಿಸತೊಡಗಿದರು. ಸ್ವದೇಶಾಭಿ-ಮಾನದ ಮೂಲಕ ಕೆಲ ಸಾಹಿತಿಗಳು ಸುದೈವದಿಂದ ಪ್ರಾಚೀನಸಾಹಿತ್ಯವನ್ನು ಮರೆಯಲಿಲ್ಲ. 'ಇಂಗ್ಲಿಶ್‌ಗೀತ'ಗಳನ್ನು ಕನ್ನಡಕ್ಕೆ ತಂದುಕೊಟ್ಟ 'ಶ್ರೀ'ಯವರು ಹಳೆಗನ್ನಡದಲ್ಲೂ ಪಂಡಿತರಾಗಿದ್ದುದು ಈ ಮಾತಿಗೆ ಉದಾಹರಣೆಯಾಗಿದೆ.

ಈ ಸಂಗತಿ ಸಾಹಿತ್ಯದೃಷ್ಟಿಯ ಮಟ್ಟಿಗೆ ಅನುಕೂಲವಾಗಿಯೇ ಪರಿಣಮಿಸಿತು. ಅಭಿವ್ಯಕ್ತಿಯ ರೂಪಗಳು, ರೀತಿ-ನೀತಿಗಳು ಹಳೆಯುವಾಗಿ, ನೊಂಡಾಗಿದ್ದರಿಂದ ಲೇಖಕರ ಹೊಸ ಮನೋಭಾವನೆಗಳು ಪ್ರಕಟವಾಗಲು ಇಂಬು ದೊರೆತಿರಲಿಲ್ಲ. ಇಂಗ್ಲಿಶ್‌ಸಾಹಿತ್ಯದ ಅಭಿವ್ಯಕ್ತಿಯ ರೂಪಗಳು ಈ ಲೇಖಕರನ್ನು ಲೋಹಚುಂಬುಕ ದಂತೆ ಆಕರ್ಷಿಸಿದವು. ಇದರಿಂದ ಸಾಹಿತ್ಯಸೃಷ್ಟಿ ರಭಸದಿಂದ ನಡೆಯುವಂತಾಯಿತು. ಪ್ರತಿಯೊಬ್ಬ ಲೇಖಕನಲ್ಲಿಯೂ ಆಗ ಸಾಹಿತ್ಯನಿರ್ಮಿತಿಯ ಕಾವು ತುಂಬಿತ್ತು ಮೊದಲಿದ್ದ ನಿಯಮನಿರ್ಬಂಧಗಳೆಲ್ಲ ಕ್ರಮೇಣ ಮುರಿದುಹೋದದ್ದರಿಂದ ಸಾಹಿತಿ ಸ್ವಾತಂತ್ರ್ಯದ ಸುಖವನ್ನು ಅನುಭವಿಸಿದನು; ಮತ್ತು ಜೀವನದ ಯಾವ ಅಂಶವನ್ನೂ ಸಾಹಿತ್ಯದಲ್ಲಿ ಮಾರ್ಪಡಿಸಲು ಅನುವು ದೊರೆಯಿತು. ಪಂಜೆ, ಗೋವಿಂದ ಪೈ ಮೊದಲಾದವರ ಕಾವ್ಯವನ್ನು ಈ ದೃಷ್ಟಿಯಿಂದ ನೋಡಬಹು ದಾಗಿದೆ. ಮೊದಮೊದಲು ಹಳೆಯ ಕಂದಪದ್ಯ, ವೃತ್ತಗಳಲ್ಲಿ ಮೂಡಿಬಂದ ಅವರ ಕಾವ್ಯ ಕ್ರಮೇಣ ಹೊಸ ಛಂದೋಕ್ರಮಗಳಿಗೆ ಮನಸೋತಿತು. ಈ ಬದಲಾ-ವಣೆಯ ಹಿಂದೆಯೇ ಹೊಸತನದ ಬರುವಿಕೆ ಕಾಣುತ್ತಿದೆ. ಹೊಸ ಕ್ಷೇತ್ರವನ್ನು ನಿರ್ಮಿಸುವ ಸಾಹಸಮನೋವೃತ್ತಿ, ಹೊಸಭಾಷೆಯ ಅನುಕೂಲತೆಗಳು, ಇವು ಗಳಿಂದಾಗಿ ಲೇಖನತಂತ್ರವನ್ನು ಸಾಹಿತಿಗಳು ಬಹಳ ಬೇಗ ಕರಗತವನ್ನಾಗಿಸಿ ಕೊಂಡರು. ಬೇಂದ್ರೆಯವರಂಥ ಕವಿಗಳು ವೈಯಕ್ತಿಕವಾಗಿ ಕಲಾತ್ಮಕತೆಯನ್ನು ಬೆಳೆಸಿಕೊಂಡದ್ದಲ್ಲದೆ ಪ್ರಯೋಗಶೀಲತೆಗೆ ಅನೇಕ ದಾರಿಗಳನ್ನು ತೆರೆದು ತೋರಿಸಿ

ದರು. ಎಲ್ಲಕ್ಕೂ ಹೆಚ್ಚಾಗಿ ನವೀನವಾದ ಜೀವನಪರಿಸ್ಥಿತಿ, ಸಾಗುಮಾಡದ ಹೊಲದಂತೆ ಬಹು ಬೇಗ ಬೆಳೆಯನ್ನು ಕೊಡುವಂಥದಾಗಿತ್ತು. ಇದೆಲ್ಲದರ ಫಲವಾಗಿ ನಾವು ತುಂಬು-ಸತ್ವದ, ಸಮೃದ್ಧವಾದ ಸಾಹಿತ್ಯವನ್ನು ಕಾಣುವಂತಾಯಿತು.

ಆದರೆ ಈ ಲಾಭದ ಜೊತೆಗಿರುವ ಹಾನಿಯನ್ನೂ ಮರೆಯಬಾರದಾಗಿದೆ. ಒಂದು ಕೃತಿಯ ಅಂತರಂಗ-ಬಹಿರಂಗಗಳು ಒಂದಕ್ಕೊಂದು ಸಜೀವವಾಗಿ ಸಂಬದ್ಧವಾಗಿರುತ್ತವೆ. ವಾಗರ್ಥಗಳ ಅನ್ಯೋನ್ಯಸಂಬಂಧವೇ ಸಾಹಿತ್ಯದ ಜೀವಾಳವಾಗಿದೆ. ಹೊಸ ಪ್ರಜ್ಞೆಗೆ ತಕ್ಕಂತೆ ಸಾಹಿತ್ಯಸ್ವರೂಪ ಹೊಸದಾಗುವದು ಸಹಜವಾಗಿದೆ. ಇಷ್ಟೇ, ಬಾಹ್ಯಸ್ವರೂಪ ಕೃತಿಯ ಅಂತರಂಗಕ್ಕೆ ಸಹಜವಾಗಿ ಹೊಂದಿಕೊಂಡಿರಬೇಕು. ಹೊಸ ದರ್ಶನ ತನಗೆ ಅನುರೂಪವಾದ ಅಭಿವ್ಯಕ್ತಿಯನ್ನು ಪಡೆದರೆ ಅದು ನವೀನತೆಯಿಂದ ಕಂಗೊಳಿಸುತ್ತದೆ. ಅದಿಲ್ಲದೆ ಹೊಸ ಪ್ರಕಾರಗಳನ್ನು 'ಅಭುಕ್ತ'ವಾಗಿ ಸ್ವೀಕರಿಸಿಬಿಟ್ಟರೆ ಭಾವನೆಗಳಿಗೆ ಹೊಸ ಮುರಿವು ಬರುತ್ತದೆ. ಇಂಥ ಹೊತ್ತಿನಲ್ಲಿ ಮೂಲಭೂತ ಭಾವನೆಗಳಷ್ಟೇ ಬದಲಾಗದೆ ಉಳಿಯಬಲ್ಲವುಗಳಾಗಿವೆ.

ಆಧುನಿಕಸಾಹಿತ್ಯದಲ್ಲಿ ಕೆಲವು ಕಡೆಗಂತೂ ಕ್ರಾಂತಿ ಈ ಬಗೆಯ ವಿಪರೀತ ಸ್ವರೂಪದ್ದಾಗಿದೆ. ಹೊಸ ಸಾಹಿತ್ಯಪ್ರಕಾರಗಳು ನಮ್ಮ ಲೇಖಕರ ಕೈಗೆ ಮೊದಲು ಸಿಕ್ಕು, ಅದಕ್ಕನುಗುಣವಾಗಿ ಅವರ ಅಭಿಪ್ರಾಯಗಳು ಬದಲಾದವು. ಕೆಲವೊಂದು ಸ್ವತಂತ್ರಪ್ರತಿಭೆಯ ಲೇಖಕರನ್ನು ಹೊರತುಪಡಿಸಿದರೆ ಉಳಿದೆಲ್ಲರಿಗೂ ಈ ಮಾತು ಅನ್ವಯಿಸುತ್ತದೆ. ಉದಾಹರಣೆಗೆಂದು ಹೊಸದಾಗಿ ಬಂದ ಅನೇಕ ಪ್ರಕೃತಿಗೀತಗಳನ್ನು ನೋಡಬಹುದು. ಇಂಗ್ಲಿಶ್ ಪ್ರಕೃತಿಗೀತಗಳಂಥ ಕವಿತೆಗಳನ್ನು ಬರೆಯಹೋಗಿ, ಪ್ರಕೃತಿಯ ಬಗ್ಗೆ ಕವಿಗಳ ಮನೋವೃತ್ತಿ ಬದಲಾಯಿತು. ಪ್ರಾಚೀನ ಕವಿಗಳಲ್ಲಿ ಪ್ರಕೃತಿ-ಕಾವ್ಯ ಸೈಜವಾಗಿದ್ದರೆ, ಪಂಪನ ಬನವಾಸಿಯ ಮೇಲಿನ ಪದ್ಯಗಳಂತೆ ಬಾಳಿನೊಲುಮೆಯ ಉದ್ಗಾರವಾಗಿ, ತೀವ್ರ ಅಭೀಪ್ಸೆಯ ಕುರುಹಾಗಿ ಬರುತ್ತಿತ್ತು. ಸೈಜವಾಗಿರದಿದ್ದರೆ ಕವಿಸಮಯಗಳಿಂದ ಕೂಡಿದ ಕೃತಕವಾದ ಋತುವರ್ಣನೆಯಾಗುತ್ತಿತ್ತು. ಪಾಶ್ಚಾತ್ಯ ಸಾಹಿತ್ಯದಲ್ಲಿ ಪ್ರಕೃತಿದರ್ಶನ ಆಯಾ ಕವಿಯ ವೈಯಕ್ತಿಕ ಸಂಸ್ಕಾರವನ್ನವಲಂಬಿಸಿದೆ. ಹೊಸಗನ್ನಡ ಕವಿಗಳಲ್ಲಿಯೂ ಇಂಥ ವ್ಯಕ್ತಿಗತ ವಿಚಾರಗಳು ( subjective thoughts ) ಪ್ರಕೃತಿ-ಕಾವ್ಯದ ತಾಂತ್ರಿಕ ಅವಶ್ಯಕತೆಯಾಗಿ ಬಂದವು. ಆದರೆ ಅವುಗಳಿಗೆ ತಕ್ಕಂತೆ ಕವಿಗಳು ಭಾಷೆಯನ್ನು ಹದಗೊಳಿಸಲಿಲ್ಲವಾದ್ದರಿಂದ ಇಲ್ಲದ ವಿರೋಧಾಭಾಸ ಕಾಣುವದು ಅನಿವಾರ್ಯವಾಯಿತು. ಕ್ರಾಂತಿಕಾಲದಲ್ಲೆಲ್ಲ ಇಂಥ ಪರಿಸ್ಥಿತಿ ಬಂದೇ ತೀರುವದೇನೊ ! ಈ ಮಾತು ಉಳಿದ ಸಾಹಿತ್ಯಪ್ರಕಾರಗಳಿಗೂ ಅನ್ವಯಿಸುತ್ತದೆ. ನಾಟಕ, ಕಾದಂಬರಿಗಳಲ್ಲಿಯ ಸಮಸ್ಯೆಗಳು ನಮ್ಮವೇ ಆಗಿದ್ದರೂ ಅವುಗಳನ್ನು ಚರ್ಚಿಸುವಾಗ ಮಾತ್ರ ನಮ್ಮ ಲೇಖಕರ ದೃಷ್ಟಿಕೋನ ಬದಲಾಯಿತು. ಸಮಸ್ಯೆಗೆ ಪರಿಹಾರಗಳು ಲೇಖಕರ ಅಭ್ಯಾಸದಿಂದ ಬರತೊಡಗಿದವು. ಒಬ್ಬ ಲೇಖಕನಲ್ಲಿಯೇ ಈ ಬಗೆಯ ಬದಲಾವಣೆ ರೂಪುಗೊಳ್ಳುವದನ್ನು ಕಾಣಬಹುದಾಗಿದೆ. ಇದಕ್ಕೆ ಒಂದು ಉದಾಹರಣೆಯೆಂದು ಶ್ರೀರಂಗರ ಹೆಸರನ್ನು ಹೇಳಬಹುದು. ಒಂದು ದೃಷ್ಟಿಯಿಂದ ಶ್ರೀರಂಗರ ನಾಟ್ಯ-

ಸಾಹಿತ್ಯವೆಲ್ಲ ಸ್ವೋಪಜ್ಞತೆಯ ಹುಡುಕಾಟ ( a search for originality ) ವಾಗಿದೆ. ಪಶ್ಚಿಮದಿಂದ ಬಂದ ಹೊಸದರಲ್ಲಿ ಅವರು ನಮ್ಮ ಸಮಸ್ಯೆಗಳಿಗೆಲ್ಲ ಅಸಂಭವನೀಯವಾದ ಪರಿಹಾರಗಳನ್ನು ಸೂಚಿಸಿದರು. ಮುಂದೆ ಸಮಸ್ಯೆಗಳ ಚಿತ್ರಣಕ್ಕಷ್ಟೇ ತೃಪ್ತಿ ಪಡೆದು, ಈಗೀಗ ನಮ್ಮ ನೆಲದ ಬುದ್ಧಿವಂತಿಕೆಯಲ್ಲಿ ಅವರು ಸಮಸ್ಯೆಗಳಿಗೆ ಉತ್ತರವೀಯುತ್ತಾರೆ.

ಈ ಬದಲಾವಣೆ ಆಗಬಾರದೆಂದೇನೂ ಇಲ್ಲ. ಮತ್ತು ಆಗಿನ ಮಟ್ಟಿಗಂತೂ ಅದನ್ನು ಯಾರೂ ತಡೆಯುವಂತಿರಲಿಲ್ಲ. ಆದರೆ ಈ ವೈಚಾರಿಕ ಕ್ರಾಂತಿಯಿಂದ ಉಂಟಾದ ಪರಿಣಾಮಗಳನ್ನು ಈಗಾದರೂ ಪರೀಕ್ಷಿಸಬೇಕಾಗಿದೆ. ಅವುಗಳ ಒಳಿತು ಕೆಡುಕುಗಳನ್ನು ಸಾಹಿತ್ಯಿಕವಾಗಿಯೇ ಆಗಲಿ, ವಿಚಾರ ಮಾಡಬೇಕಾಗಿದೆ. ಜೀವನದ ಮೌಲ್ಯಗಳ ( values ) ವಿಷಯವಾಗಿಯಂತೂ ಈ ವಿಚಾರ ತೀರ ಅವಶ್ಯಕವಾಗಿದೆ. ಸಾಹಿತ್ಯ ಪ್ರಭಾವಶಾಲಿಯಾದ ಮಾಧ್ಯಮವಾಗಿದ್ದು ಅದು ಹುರುಳಿಲ್ಲದ ಮೌಲ್ಯ ( bogus values ) ಗಳನ್ನು ಪ್ರಚಾರ ಮಾಡುತ್ತ ಸತ್ಯವನ್ನು ವಿದ್ರೂಪಗೊಳಿಸ ಬಲ್ಲದಾಗಿದೆ. ಸಾಹಿತ್ಯಲೋಕದಲ್ಲಿಯ ಕ್ರಾಂತಿ ಇನ್ನೊಂದು ಒಳ್ಳೆಯ ಸ್ಥಿತಿಗೆ ಬಂದು ಮುಟ್ಟಿಸುವ ಅವಸ್ಥೆಯಾಗಬೇಕೇ ಹೊರತು ನೆಲೆನಿಲ್ಲಬಾರದು. ಕನ್ನಡಸಾಹಿತ್ಯ ಪರಂಪರೆಯಿಂದ ಇಳಿದು ಬಂದ ಸತ್ವವಾಗಿದ್ದು ಈಗ ಮಾತ್ರ ಬೇರೆ ಕ್ಷೇತ್ರಗಳಲ್ಲಿ ವಿಹರಿಸತೊಡಗಿದೆ. ಅಂದ ಮಾತ್ರಕ್ಕೇ ಅದು ತನ್ನ ಪರಂಪರೆಯನ್ನು ಮರೆತೇ ಬಾಳಬಾರದು. ಕ್ರಾಂತಿ ಮೂಲಪ್ರಜ್ಞೆಯಾಗಿ ಬಂದರೆ ಸಾಹಿತ್ಯ ಕ್ಷಣಕ್ಷಣಕ್ಕೂ ಅಸ್ಥಿರತೆಯ ಅಗ್ನಿದಿವ್ಯಗಳನ್ನು ಎದುರಿಸಬೇಕಾದೀತು. ಪಾಶ್ಚಾತ್ಯಪ್ರಭಾವ ಇನ್ನೂ ನಮ್ಮ ಸಾಹಿತ್ಯದ ರಕ್ತದಲ್ಲಿ ಚಲಿಸುತ್ತದೆ, ಆಗಾಗ ನಮ್ಮ ವಿಚಾರಗಳನ್ನೂ ರೂಪಿಸುತ್ತದೆ. ಅದರಿಂದಾಗಿ ನಮ್ಮ ಪರಿಸ್ಥಿತಿಗೆ ನಮ್ಮ ಲೇಖಕರೇ ಸುಳ್ಳುಬೀಳು ತ್ತಿದ್ದಾರೆ. ಅಲ್ಲದೆ ಸಾಹಿತ್ಯದ ಗತಿ ದಿನದಿನಕ್ಕೂ ಬದಲಾಗುತ್ತ ತನ್ನ ನಿಶ್ಚಿತತೆ ಯನ್ನು ಕಳೆದುಕೊಳ್ಳುವಂತಾಗಿದೆ. ಸಾಹಿತ್ಯವನ್ನು ಪ್ರೇರಿಸುವ, ರೂಪಿಸುವ, ನಿಯಂತ್ರಿಸುವ, ರಸಾನುಭವವನ್ನು ತಂದುಕೊಡುವ ಶಕ್ತಿಗಳಲ್ಲಿ ಒಂದಕ್ಕೊಂದು ವಿರೋಧ ಬರುವಂತಾಗಿದೆ. ಸಾಹಿತ್ಯದ ಸ್ವರೂಪ, ಉದ್ದೇಶ, ಪ್ರಯೋಜನಗಳು ಒಬ್ಬ ಲೇಖಕನ ಪ್ರತಿಭೆಯಷ್ಟನ್ನೇ ಅವಲಂಬಿಸಿರದೆ, ಒಂದು ನಾಡಿನ ಸಂಸ್ಕೃತಿ ಹಾಗೂ ವೈಚಾರಿಕತೆಗಳನ್ನು ಆಶ್ರಯಿಸಿರುತ್ತವೆ. ಆಯಾ ನಾಡಿನ ಜನರ ನೈತಿಕ ಅಥವಾ ಭಾವನಾತ್ಮಕ ಲಹರಿಗಳ ಏರಿಳಿತಗಳನ್ನು ಸಾಹಿತ್ಯ ಅನುಸರಿಸ- ಬೇಕಾಗುತ್ತದೆ. ಅಂತಲೇ ಒಂದು ನಾಡಿನ ಸಾಹಿತ್ಯದ ಸೂಕ್ಷ್ಮ ಸೌಂದರ್ಯಗಳಾಗಲಿ, ಅರೆಕೊರೆಗಳಾಗಲಿ ಇನ್ನೊಂದು ನಾಡಿನವರಿಗೆ ಸಮಗ್ರವಾಗಿ ಅರ್ಥವಾಗುವದು ಬಿಗಿಯಾಗುತ್ತದೆ. ಒಂದು ನಾಡಿನ ವೈಚಾರಿಕತೆ ಹಾಗೂ ಭಾವಲೋಕದೊಂದಿಗೆ ನಿಕಟಸಂಬಂಧವನ್ನು ಸಾಹಿತ್ಯ ಬೆಳೆಸಿಕೊಂಡಿರುವದರಿಂದ ಇಷ್ಟೊಂದು ವೈವಿಧ್ಯಕ್ಕೆ ಅಲ್ಲಿ ಅವಕಾಶವಿದೆ. ಅದೇನೇ ಇದ್ದರೂ ಇಂದು ಇಂಥ ಮೂಲ ತತ್ವಗಳ ಬಗ್ಗೆ ಸಾಕಷ್ಟು ತಪ್ಪುತಿಳುವಳಿಕೆಯುಂಟಾಗಿದೆ. ಇದಕ್ಕೆಲ್ಲ ಪಾಶ್ಚಾತ್ಯಸಂಸ್ಕೃತಿಯ ಸಂಪರ್ಕ ಕಾರಣವೆಂದು ಹೇಳಬಹುದಾದರೂ ಈಗ ಸಾಹಿತ್ಯ ತಿರುಗಿ ಬರಲಾರದಷ್ಟು

ಮುಂದೆ ಹೋಗಿದೆ. ಆದ್ದರಿಂದ ಈ ಗೊಂದಲವನ್ನು ಹೋಗಲಾಡಿಸುವದಷ್ಟೇ ನಮ್ಮ ಕರ್ತವ್ಯವಾಗಿದೆ. ಕನಿಷ್ಠಪಕ್ಷಕ್ಕೆ ಇಂಥ ಪರಿಸ್ಥಿತಿಯ ಅರಿವು ಮಾಡಿಕೊಳ್ಳುವದು ಕೂಡ ಲಾಭದಾಯಕವಾಗಿದೆ.

೧೯೨೦ರಿಂದ—ಅಂದರೆ ಸುಮಾರು ೪೦ ವರ್ಷಗಳ ಕಾಲಾವಧಿಯಲ್ಲಿ ಹೊಸ-ಗನ್ನಡ ಸಾಹಿತ್ಯ ಅನೇಕ ಬಗೆಯ ವಾದಗಳನ್ನೂ, ವಿಚಾರಸರಣಿಗಳನ್ನೂ ಅರಗಿಸಿಕೊಳ್ಳಬೇಕಾಯಿತು. ಇವು ಕೂಡ ನಮ್ಮ ಪರಿಸ್ಥಿತಿಯ ಒಡಲಲ್ಲಿ ಜನಿಸಿ ಬಂದವುಗಳಾಗಿರದೆ ಆಂಗ್ಲಸಾಹಿತ್ಯದಲ್ಲಿಯ ಆಂದೋಲನಗಳ ಪ್ರತಿಧ್ವನಿಗಳಾಗಿವೆ. ಹೊಸ-ಗನ್ನಡದ ಪ್ರಾರಂಭದ ಕ್ರಾಂತಿಯ ಉಗಮ, ಪ್ರಾಚೀನಸಾಹಿತ್ಯ ಕೊನೆಕೊನೆಗೆ ಹೊಂದಿದ ನಿರ್ಜೀವತೆಯಲ್ಲಿದೆ. ಅದೊಂದೇ ಕಾರಣಕ್ಕಾಗಿ ಪಂಜೆ, 'ಶ್ರೀ' ಹಾಗೂ ಬೇಂದ್ರೆಯವರ ಕಾವ್ಯಮಾರ್ಗ ಇಂಗ್ಲಿಶ್‌ಕಾವ್ಯದಿಂದ ಸ್ಫೂರ್ತಿಯನ್ನು ಮಾತ್ರ ಪಡೆದು ಹೊಸದಾಗಿ ಕಂಗೊಳಿಸಿತು. ಇಂಥ ಕಾವ್ಯದ ರಸಾನುಭವವನ್ನು ಪಡೆಯಲು ಹೊಸ ಪ್ರಜ್ಞೆಯುಳ್ಳ ರಸಿಕರ ಗುಂಪು ನಿರ್ಮಾಣವಾಗಲು ಕೆಲಕಾಲ ಹಿಡಿಯಿತು. ಆದರೆ ಈ ಕಾವ್ಯಮಾರ್ಗ ನೆಲೆನಿಲ್ಲುವ ಮೊದಲೇ ಬೇರೆ ಸಂಪ್ರದಾಯಗಳೂ ಜೊತೆಯಾಗಿ ಹುಟ್ಟಿಕೊಂಡವು. ಈ ರೀತಿಯ ಅನಿಶ್ಚಿತತೆ ಪ್ರಾಚೀನ ಸಾಹಿತ್ಯದಲ್ಲಿ ಎಂದೂ ಬರಲಿಲ್ಲ. ಪ್ರಬಲವಾದ ಕಾರಣವಿಲ್ಲದೆ ಸಾಹಿತ್ಯ ತನ್ನ ಬಾಹ್ಯರೂಪವನ್ನು ಬದಲಿಸುವ ಗೋಜಿಗೆ ಹೋಗುತ್ತಿರಲಿಲ್ಲ. ಪಂಪನಿಂದ ಹರಿಹರನ ವರೆಗೆ ಸಾಗಿದ್ದ ಕಾವ್ಯ ಮುಂದೆ ಧರ್ಮಕ್ರಾಂತಿಯ ಮೂಲಕ ತನ್ನ ದಿಕ್ಕನ್ನು ಬದಲಿಸಿತು. ಸಾಹಿತ್ಯದಲ್ಲಿಯ ಕ್ರಾಂತಿ ಐತಿಹಾಸಿಕ ಅವಶ್ಯಕತೆಯಾಗಿತ್ತು. ಹೀಗೆ ಸಾಹಿತ್ಯದ ನಿಶ್ಚಿತ ಸ್ವರೂಪ ಜನಮನದ ಮೇಲೆ ಆಳವಾದ ಸಂಸ್ಕಾರವನ್ನು ಮೂಡಿಸಲು ಸಮರ್ಥವಾಯಿತು. ಮತ್ತು ತನ್ನೆದುರಿಗಿದ್ದ ಪ್ರಯೋಜನವನ್ನು ಅದು ಸಾಧಿಸಿ ಕೃತಕೃತ್ಯತೆಯನ್ನು ಪಡೆಯಿತು. ಈಗ ವೈಯಕ್ತಿಕ ಕಾರಣಗಳನ್ನು ಮುಂದೆಮಾಡಿಕೊಂಡು ಒಂದುಸಿರಿನಲ್ಲಿಯೇ ಸಾಹಿತ್ಯ ಸಂಪೂರ್ಣವಾಗಿ ಬದಲಾವಣೆಯನ್ನು ಪಡೆಯಲು ಹಾತೊರೆಯುತ್ತದೆ. ರಸಿಕರ ಅಭಿರುಚಿಯಲ್ಲಿ ಅಪಾಯಕರವಾದ ಗೊಂದಲವನ್ನು ಎಬ್ಬಿಸಿದೆ. ಈ ಪರಿಸ್ಥಿತಿ ಕನ್ನಡದಲ್ಲಷ್ಟೇ ಅಲ್ಲದೆ ನಮ್ಮ ನೆರೆಹೊರೆಯ ಪ್ರಾಂತಗಳಲ್ಲಿಯೂ ಹಬ್ಬಿದೆ. ಒಂದು ದೃಷ್ಟಿಯಿಂದ ಈ ಸಮಸ್ಯೆ ಸರ್ವವ್ಯಾಪಿಯಾಗಿದೆ.

ಇದಕ್ಕೆಲ್ಲ ಕಾರಣಗಳನ್ನು ನಾವು ನಮ್ಮ ಇರುವಿಕೆಯ ರೀತಿಯಲ್ಲಿಯೇ ಕಂಡುಕೊಳ್ಳಬೇಕಾಗಿದೆ. ಸ್ವಾತಂತ್ರ್ಯ ದೊರೆತ ಮೇಲೆ ನಾವು ಒಳ್ಳೆಯದಕ್ಕೋ ಕೆಟ್ಟ-ದಕ್ಕೋ ಪ್ರಜಾರಾಜ್ಯಪದ್ಧತಿಯನ್ನು ಸ್ವೀಕರಿಸಿಬಿಟ್ಟೆವು. ಅದಕ್ಕೆ ಪೂರ್ವಸಿದ್ಧತೆ-ಯೆಂಬಂತೆ, ರಾಜಕೀಯ ಆಂದೋಲನದ ಪ್ರಾರಂಭದಿಂದಲೇ ಪ್ರಜಾಪ್ರಭುತ್ವದ ವಿಚಾರಗಳು ನಮ್ಮಲ್ಲಿ ಬೀಡುಬಿಟ್ಟಿದ್ದವು. ಜಗತ್ತಿನ ಬೇರೆ ರಾಷ್ಟ್ರಗಳಲ್ಲಿ ಈ ಮೊದಲೇ ರೂಢವಾಗಿದ್ದ ಪ್ರಜಾಪ್ರಭುತ್ವದ ಆದರ್ಶ ನಮ್ಮ ಆದರ್ಶವಾಗಿ ಪರಿಣಮಿಸಿತು. ಮನುಷ್ಯನಿರ್ಮಿತವಾದ ಅನೇಕ ಆದರ್ಶರಾಜ್ಯಗಳಂತೆಯೇ ಇದೂ ವಿಫಲವಾಯಿತೆಂಬುದನ್ನೂ ಉಳಿದ ದೇಶಗಳು ಕಂಡುಕೊಂಡಿವೆ. ಪ್ರಜಾರಾಜ್ಯ ಕೇವಲ ರಾಜ್ಯವ್ಯವಸ್ಥೆಯಾಗಿ ಉಳಿಯದೆ ನಮ್ಮ ಜೀವನದ ಒಳಹೊರಗುಗಳನ್ನೆಲ್ಲ

ವ್ಯಾಪಿಸಿತು. ಸಾಮಾಜಿಕಪ್ರಜ್ಞೆ ಪ್ರಜಾರಾಜ್ಯದ ಮುಖ್ಯ ಅವಶ್ಯಕತೆಯಾಗಿದೆ. ಪ್ರಜಾರಾಜ್ಯದ ಪ್ರಮುಖವಾದ ಪತ್ರಿಕೆಗಳ ಮೂಲಕ ಸಾಮಾನ್ಯ ಮನುಷ್ಯನ ಜ್ಞಾನ-ವಲಯ ಹೆಚ್ಚು ವಿಸ್ತಾರವಾಯಿತು. ಮಾನಸಿಕವಾಗಿ ಅವನು ಉಳಿದ ದೇಶಗಳೊಂದಿಗೂ ತನ್ನ ಸಂಬಂಧವನ್ನು ಬೆಳೆಸಿಕೊಂಡನು. ವಿಶ್ವವಿದ್ಯಾಲಯಗಳ ಶಿಕ್ಷಣವೂ ಇದಕ್ಕೆ ಸಾಕಷ್ಟು ಸಹಾಯವನ್ನು ನೀಡಿದೆ. ಆದರೆ ಜ್ಞಾನವನ್ನು ಹೀಗೆ ಪತ್ರಿಕೆಗಳ ಮೂಲಕ ಹಂಚುವದರಿಂದ ಒಂದು ಅರ್ಧ ಶಿಕ್ಷಿತ ಸಮಾಜ ತಲೆಯೆತ್ತುತ್ತದೆ. ಕನ್ನಡವೂ ಈ ಮಾತಿಗೆ ಅಪವಾದವಾಗಲಿಲ್ಲ. ಆಳವಾದ ಜ್ಞಾನ ಕೆಲವೊಬ್ಬರ ಸೊತ್ತಾಗಿ, ಉಳಿದ ಕಡೆಗೆಲ್ಲ ಜ್ಞಾನದ ವಾತಾವರಣ ಮಾತ್ರ ಹಬ್ಬಿತು. ಇಂಥ ಸಮಾಜ ನಿಜವಾದ ಜ್ಞಾನ ಅನುಭವಗಳಿಗಿಂತ ಅಭಿಪ್ರಾಯಗಳ ಮೇಲೇ ಅವ-ಲಂಬಿಸಿ ನಿಂತಿರುತ್ತದೆ. ಯಾಕಂದರೆ ಜ್ಞಾನವನ್ನು ನೀರಾಗಿಸಿ, ಪಚನವಾಗುವ ಪ್ರಮಾಣದಲ್ಲಿ ಮಾತ್ರ ಕೊಡಲಾಗುತ್ತದೆ. ಪತ್ರಿಕೆಗಳಲ್ಲಿ ಪ್ರಕಟವಾಗುವ ಚಾಣ್ನುಡಿಗಳನ್ನು ಸಾಮಾಜಿಕರು ಮೆಲುಕಾಡಿಸುತ್ತ ತಮ್ಮ ಅಭಿಪ್ರಾಯವನ್ನಾಗಿ ಮಾಡಿಕೊಳ್ಳುತ್ತಾರೆ. ಇಂಥ ಅಭಿಪ್ರಾಯವಾದಿಗಳು ತಮಗೆ ಪ್ರಿಯವಾದ ಭಾವನೆಗಳನ್ನೂ, ವಿಚಾರಗಳನ್ನೂ ಸಾಹಿತ್ಯದ ಮೂಲಕ ಅಪೇಕ್ಷಿಸುತ್ತಾರೆ; ಅಲ್ಲದೆ ಪ್ರಗತಿಯ ಭಾವನೆಯಿಂದ ಪ್ರೇರಿತರಾದ ಇವರು ಯಾವಾಗಲೂ ಹೊಸ ರೀತಿಗಳನ್ನು, ಹೊಸ ಭಾವನೆಗಳನ್ನು ಬೇಡುತ್ತಿರುತ್ತಾರೆ. ವೇಗವೇ ಮುಖ್ಯ ಲಕ್ಷಣವಾಗಿರುವ ಯುಗದಲ್ಲಿ ಹೊಸ ವಿಚಾರ ಹಳಸಲಿಕ್ಕೂ ತಡ ಹಿಡಿಯುವದಿಲ್ಲ. ಆದರೆ ಈ ಜನರೇ ಇಂದಿನ ರಸಿಕ ಸಾಮಾಜಿಕರಾಗಿರುವದರಿಂದ ಸಾಹಿತಿ ಆಗಾಗ ಇವರ ಅಭಿಪ್ರಾಯಗಳ ಹಿಂಸೆಗೆ ಈಡಾಗಬೇಕಾಗುತ್ತದೆ. ಈ ಪರಿಸ್ಥಿತಿ ಪಾಶ್ಚಾತ್ಯ ದೇಶಗಳಲ್ಲಿಯಂತೆ ನಮ್ಮಲ್ಲಿ ವಿಪರೀತವಾಗಿರದಿದ್ದರೂ ಈಗೀಗ ಸಾವಕಾಶವಾಗಿ ಬರಹತ್ತಿದೆ.

ಇದೆಲ್ಲದರ ಪರಿಣಾಮವಾಗಿ ಇನ್ನೊಂದು ವಿಚಾರ ತಲೆಯೆತ್ತಿದೆ. ಬಹುಶಃ ಈ ವಿಚಾರವೇ ಸಾಹಿತ್ಯರೂಪದ ಅನಿಶ್ಚಿತತೆಗೆ ಬಹಳ ಮಟ್ಟಿಗೆ ಕಾರಣವಾಗಿದೆ. 'ಆಧುನಿಕತೆ' ಈಗ ಜೀವನದಲ್ಲಿಯ ಹೊಸ ಮೌಲ್ಯವಾಗಿ ಪರಿಣಮಿಸಿದೆ. ಈ ಮಾತು ಸಾಹಿತ್ಯವೊಂದೇ ಅಲ್ಲದೆ ಬೇರೆ ಕ್ಷೇತ್ರಗಳಿಗೂ ಅನ್ವಯಿಸುತ್ತದೆ. ಒಂದು ಕಾಲಕ್ಕೆ ಸಾಹಿತ್ಯ, ಸಂಗೀತ ಹಾಗೂ ನೃತ್ಯಕಲೆಗಳಲ್ಲಿ ಪರಂಪರೆಯನ್ನು ನಿರ್ಮಿಸುವದೇ ಶ್ರೇಷ್ಠತೆಯ ಲಕ್ಷಣವಾಗಿತ್ತು. ತನ್ನ ವ್ಯಕ್ತಿತ್ವವನ್ನೆಲ್ಲ ಪಣವಾಗಿಟ್ಟು ಕಲಾವಿದ ಸಂಪ್ರದಾಯದ ಅವಿಚ್ಛಿನ್ನತೆಯನ್ನು ಕಾಪಾಡಲು ಯತ್ನಿಸುತ್ತಿದ್ದ. ಈಗ ಪರಂಪರೆಯಿಂದ ದೂರ ಸಿಡಿಯುವದೇ ಶ್ರೇಷ್ಠತೆಯಾಗಿದ್ದರಿಂದ ವ್ಯಕ್ತಿನಿಷ್ಠತೆ ಬಂದುಬಿಟ್ಟಿತು. ಸಂಪ್ರದಾಯಶರಣತೆಯ ಬಗ್ಗೆ ನಮಗಿರುವ ಹೆದರಿಕೆ ಅಷ್ಟಿಷ್ಟಲ್ಲ. ಆ ಹೆದರಿಕೆ ದೃಢವಾಗಿ ಬೇರೂರಿದ ಭಾವನೆಯಾಗಿದೆ. ಇದರಿಂದ, ರಸಾನುಭವವನ್ನು ಪಡೆದು ಮರುಕ್ಷಣಕ್ಕೆ ಮರೆತುಬಿಡುವದು ಇಂದಿನ ಅಭಿರುಚಿಯ ರೀತಿಯಾಗಿದೆ. ಈ ವಾತಾವರಣ ಕನ್ನಡದಲ್ಲಿ ತಾಪದಾಯಕವಾಗುವಷ್ಟಿರದಿದ್ದರೂ ತೀರ ಇಲ್ಲವೆನ್ನುವಂತಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಕಾದಂಬರಿಕಾರರು ಈ ಪರಿಸ್ಥಿತಿಯ ಭಾರದ ಕೆಳಗೆ ಸಿಕ್ಕು ನರಳುತ್ತಿದ್ದಾರೆ. ಕಳೆದ ಹತ್ತು ಹನ್ನೆರಡು ವರ್ಷಗಳಲ್ಲಿ ಕಾದಂಬರಿಯ ಪ್ರಕಟನೆ ಬಹಳಷ್ಟು

ಬೆಳೆದಿದೆ. ಬಂದ ಕಾದಂಬರಿಗಳಲ್ಲಿ ಮುಕ್ಕಾಲು ಪಾಲು ಕೇವಲ 'ಹೊಸ ತಂತ್ರ', 'ಹೊಸ ಶೈಲಿ'ಗಳಿಗೆ ಮೀಸಲಾದ ಕೃತಿಗಳೇ ಆಗಿವೆ. ಕಾದಂಬರಿ ಜನಪ್ರಿಯವಾದ ಪ್ರಕಾರವಾದ್ದರಿಂದ ಈ ಪಾಡನ್ನು ಅನುಭವಿಸಬೇಕಾಗಿದೆ. ಹೊಸತನದ ಹಂಬಲ ಕಾವ್ಯಕ್ಷೇತ್ರದಲ್ಲಿ ಬೇರೊಂದು ರೀತಿಯ ಸಮಸ್ಯೆಯನ್ನು ತಂದೊಡ್ಡಿದೆ. ಮೊದಲ ತಲೆಮಾರಿನ ಹೊಸ ಕಾವ್ಯ ಇನ್ನೂ ರಸಿಕರಿಗೆ ಪೂರ್ಣವಾಗಿ ತಿಳಿಯುವದಕ್ಕಿಂತ ಮೊದಲೇ ಇನ್ನೊಂದು ಕಾವ್ಯಮಾರ್ಗ ಪ್ರಾರಂಭವಾದದ್ದರಿಂದ ನವ್ಯಕಾವ್ಯ ತಿಳಿಯುವದಿಲ್ಲವೆಂಬ ದುರ್ದೈವದ ತಕರಾರಿಗೆ ಎಡೆ ಸಿಕ್ಕಿದೆ. ಶಬ್ದಾರ್ಥಕ್ಕಿಂತ ರಸಾನುಭವವನ್ನು ಪಡೆಯಲು ರಸಿಕರ ಮನೋಧರ್ಮ ಸಿದ್ಧವಾಗಲು ಕೆಲವೊಂದು ಕಾಲಾವ-ಕಾಶ ಅವಶ್ಯವಾಗಿ ಬೇಕು. ರಸಾನುಭವವನ್ನು ಪಡೆಯುವ ಮೊದಲೇ ಈ ಮನೋ-ಧರ್ಮವನ್ನು ಮುರಿದು ಇನ್ನೊಂದು ಪ್ರಜ್ಞೆಯನ್ನು ತುಂಬುವದು ಸಾಧ್ಯವಾದ ಮಾತಲ್ಲ. ಸಾಹಿತಿ ತನ್ನ ಪ್ರಯೋಗಗಳನ್ನು ಕೇವಲ ಪ್ರಯೋಗಕ್ಕಾಗಿಯೇ ಮಾಡುತ್ತ ನಡೆದರೆ, ರಸಿಕರ ಅಭಿರುಚಿ ಹಾಗೂ ಸಾಹಿತ್ಯಸೃಷ್ಟಿ ಇವೆರಡೂ ವ್ಯಸ್ತ ಅಂತರದಲ್ಲಿ ಇರುವ ಭಯ ತಪ್ಪಿದ್ದಲ್ಲ. ಹೀಗೆ ಪ್ರಯೋಗಪ್ರಿಯತೆಯ ಆಟದಿಂದ ಕಾದಂಬರಿ ಜನರ ಅಭಿರುಚಿಯ ಕೆಳಮಟ್ಟಕ್ಕಿಳಿದು, ಕಾವ್ಯ ಅವರ ತಿಳುವಳಿಕೆಯ ಅಳವಿನಲ್ಲಿ ದೊರೆಯದೆ, ಕೃತಿಕಾರ ಹಾಗೂ ರಸಿಕನ ಸಮಾನ ಬಾಂಧವ್ಯ ಅಷ್ಟರ ಮಟ್ಟಿಗೆ ಈಗ ಕಡಿದಂತಾಗಿದೆ.

'ಆಧುನಿಕತೆ'ಯ ಈ ಹುಚ್ಚಿನಿಂದಾಗಿ ಜೀವನದ ಉಳಿದ ಮಹತ್ವದ ಮೌಲ್ಯಗಳನ್ನು ನಾವು ಕಡೆಗಣಿಸುತ್ತಿದ್ದೇವೆ. ಅಚ್ಚುಕಟ್ಟುತನ, ನಿಯಮಿತತೆ ಮೊದಲಾದ ಹೊಸ ಸದ್ಗುಣಗಳು ತಲೆಯೆತ್ತಿವೆ. ಅಲ್ಲದೆ ಇನ್ನೂ ಕೆಲ ಮೌಲ್ಯಗಳು ಜೀವನಾನು-ಭವದಿಂದ ದೂರ ಸಿಡಿದ ಅಭಿಪ್ರಾಯಗಳಾಗಿವೆ. ಸದ್ಯದ ಕಾಲದಲ್ಲಿ, ನಗರ-ಜೀವನದ ಪರಿಣಾಮವಾಗಿ ಪ್ರತಿಯೊಬ್ಬ ವ್ಯಕ್ತಿಯ ಜೀವನವೂ ಅನುಭವದ ದೃಷ್ಟಿಯಿಂದ ತೀರ ಪರಿಮಿತವಾಗಿದೆ. ಮೊದಲಿನಂತೆ ಒಬ್ಬ ವ್ಯಕ್ತಿಯಿಂದ ಇನ್ನೊಬ್ಬ ವ್ಯಕ್ತಿಗೆ ಜೀವನಪ್ರವಾಹ ಹರಿದು ಬರುವದಿಲ್ಲ. ಅದರ ಬದಲಾಗಿ ನಾವು ಪತ್ರಿಕೆಗಳ ಮುಖಾಂತರವಾಗಿ ನಮ್ಮ ಭಾವಭಾವನೆಗಳನ್ನು, ರಾಗದ್ವೇಷಗಳನ್ನು ಪ್ರಕಟಿಸು-ತ್ತೇವೆ, ಸ್ವೀಕರಿಸುತ್ತೇವೆ. ಸುಶಿಕ್ಷಿತಸಮಾಜದ ಗತಿ ಈ ರೀತಿಯದಾದರೆ ಅನಕ್ಷರ-ಸ್ಥರ ಪಾಡು ಇನ್ನೊಂದು ಬಗೆಯದಾಗಿದೆ. ಜಗತ್ತು ಕ್ಷಣಕ್ಷಣಕ್ಕೆ ಬದಲಾದರೂ ಅವರ ತಾಪತ್ರಯಗಳೇನೂ ತಪ್ಪಿಲ್ಲ. ಪರಂಪರಾಗತವಾಗಿ ಅವರು ನಂಬಿಕೊಂಡು ಬಂದಿದ್ದ ಮೂಲಭೂತ ನೀತಿನಿಯಮಗಳೆಲ್ಲ ಈ ತಾಪತ್ರಯದ ತುಳಿತಕ್ಕೆ ಸಿಕ್ಕು ಒದ್ದಾಡುತ್ತಿವೆ. ಇಂಥ ವಾತಾವರಣದಲ್ಲಿ ಪಾಲುಗೊಂಡೋ ಅಥವಾ ಅದನ್ನೆದು-ರಿಸಿಯೋ ಇಂದಿಗೆ ಸಾಹಿತ್ಯ ಬದುಕಬೇಕಾಗಿದೆ. ಲೇಖಕರು ತಮ್ಮ ಕೃತಿಗಳನ್ನು ಮೀಸಲ ಅನುಭವದ ತಳಹದಿಯ ಮೇಲೆ ನಿರ್ಮಿಸದೆ ವಸ್ತುವನ್ನು ಪತ್ರಿಕೆಗಳಲ್ಲಿ ಹುಡುಕುವಂತಾದೀತು. ಇಂಗ್ಲೀಷಿನಲ್ಲಿ 'ಸಾಮರಸೆಟ್ ಮಾಮ್' ಮೊದಲಾದ ಲೇಖಕರು ಇದೇ ರೀತಿ ಪತ್ರಿಕೆಗಳಲ್ಲಿಯ ಸುದ್ದಿಗಳ ಮೇಲೆ ಕತೆಗಳನ್ನು ನಿಲ್ಲಿಸುತ್ತಿ-ದ್ದಾರೆ. ನೈಜ ಅನುಭವವನ್ನೇ ಬಳಸಿಕೊಳ್ಳಬೇಕೆಂಬ ಹಟ ಲೇಖಕನಲ್ಲಿರಬೇಕು.

ಇಂಥ ಸಂಧಿಕಾಲದಲ್ಲಿ ಲೇಖಕನ ಸ್ವಂತ ವ್ಯಕ್ತಿತ್ವ ಬರಿದಾಗದಂತೆ ನೋಡಿಕೊಳ್ಳುವ ಜವಾಬ್ದಾರಿ ಹೆಚ್ಚು ಗುರುತರವಾಗಿದೆ.

ಈ ವಾತಾವರಣದಿಂದ ಇನ್ನೊಂದು ಬಗೆಯ ಗಂಡಾಂತರ ಕಾದಿದೆ. ಅದು ಕೃತಿ-ನಿರ್ಮಾಣದ ಅಧಿಕತೆ. ಪತ್ರಿಕೆಗಳು, ಸಿನೇಮಾಪ್ರಪಂಚ ಇವುಗಳಿಂದ ಕಥಾವಸ್ತು ನೇರವಾಗಿ, ಸುಲಭವಾಗಿ ದೊರೆಯುತ್ತಿರುವಾಗ ಲೇಖಕರು ಒಂದರಮೇಲೊಂದರಂತೆ ಪುಸ್ತಕಗಳನ್ನು ಬರೆಯುತ್ತ ಹೋಗುತ್ತಾರೆ. ಪ್ರಕಾಶನಕಾರ್ಯ ಇದಕ್ಕನುಕೂಲ ವಾಗುವಂತೆ ಬಹಳ ಸುಲಭವಾಗಿದೆ. ಇಂದು ನಮ್ಮಲ್ಲಿ ಪ್ರಕಟವಾಗುತ್ತಿರುವ ಗ್ರಂಥ ಗಳ ಸಂಖ್ಯೆ, ಪಾಶ್ಚಾತ್ಯ ದೇಶಗಳೊಂದಿಗೆ ಹೋಲಿಸಿದಾಗ ತೀರ ಕಡಿಮೆ ಎನ್ನಿಸ ಬಹುದಾದರೂ, ಕಳೆದ ಹತ್ತು ಹನ್ನೆರಡು ವರ್ಷಗಳಲ್ಲಿ ಸಾಕೆನ್ನಿಸುವಷ್ಟು ಹೆಚ್ಚಾಗಿ ಬೆಳೆಯತೊಡಗಿದೆ. ತಿಂಗಳಿಗೊಂದರಂತೆ ಕಾದಂಬರಿಯನ್ನು ಬರೆಯಬಲ್ಲ ಲೇಖಕರು ಇದ್ದಾರೆ. ಒಂದು ಕಾದಂಬರಿ ಒಂದು ಅಖಂಡ ಅನುಭವಪರಂಪರೆಯ ಚಿತ್ರಣ ವಾಗಿರುವಾಗ, ಒಬ್ಬನೇ ಲೇಖಕ ಇಷ್ಟೆಲ್ಲ ಕಾದಂಬರಿಗಳ ಅನುಭವದ ಸರಕನ್ನು ಎಲ್ಲಿಂದ ತರಬಹುದೆಂಬುದೇ ಸೋಜಿಗವಾಗಿದೆ. ಈ ಅವಸರದ ಕೃತಿನಿರ್ಮಾಣ ದಿಂದ ಕೃತಿಯ ಸಾಹಿತ್ಯಿಕ ಬೆಲೆ ಕಡಿಮೆಯಾಗುತ್ತದೆಂಬ ಮಾತಂತೂ ಇದ್ದೇ ಇದೆ. ಅದಕ್ಕಿಂತ ಹೆಚ್ಚಾಗಿ ಲೇಖಕರಲ್ಲಿ ಬೆಳೆಯಬಹುದಾದ ಸ್ಪರ್ಧಾಶೀಲ ಮನೋವೃತ್ತಿ ಹೆಚ್ಚು ಭಯಾವಹವಾಗಿದೆ. ಓದುಗರ ಆಸಕ್ತಿಯನ್ನು ಕೆರಳಿಸಲು ಮತ್ತು ಇನ್ನೊಬ್ಬ ಲೇಖಕನಿಗಿಂತ ಭಿನ್ನವಾಗಿ ಬರೆಯಲು, ಲೇಖಕರು 'ಹೊಸ ವಸ್ತು', 'ಹೊಸ ಶೈಲಿ' 'ಹೊಸ ತಂತ್ರ'ಗಳಿಗೆ ಮೊರೆಹೊಗಬೇಕಾಗುತ್ತದೆ. ಅವಸರದ ಸಲುವಾಗಿ ಒಂದು ಅನುಭವ ಪೂರ್ಣ ಅಭಿವ್ಯಕ್ತಿಯನ್ನು ಪಡೆಯುವದಿಲ್ಲ; ಮತ್ತು ಒಂದು ಕಾದಂಬರಿ ಯಲ್ಲಿ ಬಂದ ಕಾರಣಕ್ಕಾಗಿ ಅದು ಹಳೆಯದೆನಿಸಿಬಿಡುತ್ತದೆ. ಇದಕ್ಕಾಗಿ ಸಹಜವಾಗಿ ಲೇಖಕ ಜೀವನದ ವಿಕೃತಿಯನ್ನು ಚಿತ್ರಿಸಬೇಕಾಗುತ್ತದೆ. ವಿಕೃತಿ, ವಿಕೃತಿಯೆಂದೇ ಚಿತ್ರಣಕ್ಕೆ ಸುಲಭವಾಗುತ್ತದೆ, ಓದುಗರ ಆಸಕ್ತಿಯನ್ನೂ ಸೆರೆಹಿಡಿಯುತ್ತದೆ. ಸಾಮಾನ್ಯ ಅನುಭವದ ಒಳಪದರುಗಳನ್ನು ಸೂಕ್ಷ್ಮವಾಗಿ ಚಿತ್ರಿಸುವ ಕೆಲಸಕ್ಕೆ ಹೆಚ್ಚು ತಾಳ್ಮೆ, ಹೆಚ್ಚು ಪ್ರತಿಭೆ ಅವಶ್ಯವಾಗಿ ಬೇಕು. ಅಷ್ಟು ಮಾಡಿದರೂ ಈ ಓದುಗರು ಅದನ್ನು ಮೆಚ್ಚಬಹುದೆಂಬ ಖಾತ್ರಿ ಇಲ್ಲ. ಅದಕ್ಕಾಗಿ ಲೇಖಕರು ಜೀವನದ ವಿಕೃತಿಗಳನ್ನು ಅವಲಂಬಿಸುತ್ತಿದ್ದಾರೆ. ಪಾಶ್ಚಾತ್ಯಸಾಹಿತ್ಯದಿಂದ ಸಮರ್ಥನೆಯನ್ನೂ ಪಡೆದುಕೊಳ್ಳುತ್ತಿದ್ದಾರೆ.

ಇಂದು ಈ ವಿಕೃತಿಯ ಸಮಸ್ಯೆ ಬಿಡಿಸಬರದಂಥ ಕಗ್ಗಂಟಾಗಿದೆ. ಎಲ್ಲಕ್ಕಿಂತ ಹೆಚ್ಚಾಗಿ ಕಾದಂಬರಿ ಈ ಬಗೆಯ ವಿಪ್ಲವಕ್ಕೆ ತುತ್ತಾಗಿದೆ. ಜನರ ಅಭಿರುಚಿಯಲ್ಲಿ ಅಶ್ಲೀಲತೆ ಬೆರೆತುಕೊಂಡಿರುವದೇ ಇದಕ್ಕೆ ಕಾರಣವೆಂದು ಹೇಳುವದು ಸರಿಯಲ್ಲ. ಲೇಖಕರಲ್ಲಿಯೂ ಪಾಪಪ್ರಜ್ಞೆ ಹೆಚ್ಚಾಗಿರುವದೂ ಕಾರಣವಲ್ಲ. ದಿನದಿನಕ್ಕೂ ಬೆಳೆಯುತ್ತ ನಡೆದ ಕಾದಂಬರಿಗಳಿಗೆ ಮೂಲದ್ರವ್ಯವನ್ನು ಒದಗಿಸುವದೇ ಬಿಗಿ ಯಾಗಿದೆ. ನಮ್ಮ ಮೊದಲಿನ ಕಾದಂಬರಿಗಳು ಸಾಮಾನ್ಯ ಅನುಭವದ ನೈಜ ಚಿತ್ರ ವನ್ನು ಕೊಡುವದರಲ್ಲಿಯೇ ತೃಪ್ತಿಯನ್ನು ಪಡೆಯುತ್ತಿದ್ದವು. ಅವುಗಳಿಗೆ ಭಾವನಾ-

ವಶತೆಯ ಬಣ್ಣ ಸವರಿ ಆಕರ್ಷಕವಾಗುವಂತೆ ಮಾಡಲಾಗುತ್ತಿತ್ತು. ಕ್ರಮೇಣ ಅದೂ ಬೇಸರಾಗಿ ಭಾವನಾವಶತೆ, ಉತ್ಕಟತೆಯಲ್ಲಿ ಹಿಂಸೆಯಲ್ಲಿ ಪರ್ಯವಸಾನವನ್ನು ಪಡೆಯಿತು. ಈಗ ವಿಕೃತಿಗಳ ಕಡೆಗೆ ನಮ್ಮ ಲೇಖಕರ ಮನಸ್ಸು ಹರಿಯತೊಡಗಿದೆ. ಕಾಮಜೀವನದ ಅನೇಕ ವಿಕೃತಚಿತ್ರಗಳು ಕಾದಂಬರಿಯಲ್ಲಿ ತುಂಬಿರುತ್ತವೆ. ಆದರೆ ಅವುಗಳನ್ನು ಚಿತ್ರಿಸುವಾಗ ಕಾದಂಬರಿಕಾರರ ಉದ್ದೇಶವೇನೆಂಬುದು ಸ್ಪಷ್ಟವಾಗುವದಿಲ್ಲ. ಜೀವನದ ನೈಜಚಿತ್ರವೆಂದೇ ಇವುಗಳನ್ನು ದಾಟಿಸಲಾಗುತ್ತದೆ. ಇಂಥ ವಿಷಮಕಾಲದಲ್ಲಿ, ಸಾಹಿತ್ಯದಲ್ಲಿ ವಾಸ್ತವತೆಯೆಂದರೇನು ಎಂಬ ಪ್ರಶ್ನೆ ಏಳುತ್ತದೆ. ಸಾಹಿತ್ಯದಲ್ಲಿ ವಾಸ್ತವಮಾರ್ಗ ಒಂದು ಪ್ರಮುಖ ಸಂಪ್ರದಾಯವಾಗಿದ್ದು ಅದರ ಸಾಹಿತ್ಯಿಕ ತಳಹದಿ ಈ ಲೇಖಕರು ತಿಳಿದುಕೊಂಡದ್ದಕ್ಕಿಂತ ಹೆಚ್ಚು ಗಟ್ಟಿಮುಟ್ಟಾಗಿದೆ. ಜೀವನದ ಗೂಢದ ಬಗ್ಗೆ ಇರುವ ಆರೋಗ್ಯಕರವಾದ ಕುತೂಹಲ, ಅದನ್ನು ಪುನರ್ವಿಮರ್ಶಿಸಬೇಕೆಂಬ ಕಲಾತ್ಮಕಪ್ರವೃತ್ತಿ, ಅಚಲವಾದ ಜೀವನಶ್ರದ್ಧೆ ಇವು ವಾಸ್ತವತೆಗೆ ಪ್ರೇರಕಶಕ್ತಿಗಳಾಗಿವೆ. ಜೀವನದ ಪ್ರತಿಕ್ಷಣವೂ, ಪ್ರತಿ ಅನುಭವವೂ ಸಾಹಿತ್ಯದಲ್ಲಿ ಒಡಮೂಡಲೇಬೇಕೆಂಬ ನಿಯಮವೇನೂ ಇಲ್ಲ. ಬದುಕಿನ ಯಾವ ವಿವರ ಬಣ್ಣಗೊಳ್ಳಬೇಕೆಂಬ ಮಾತು ಕೃತಿಯ ಆಕೃತಿ ( pattern ) ಮೇಲೆ ಅವಲಂಬಿಸಿರುತ್ತದೆ. ಅಭಿವ್ಯಕ್ತಗೊಳ್ಳಬಹುದಾದ, ಮತ್ತು ಅಭಿವ್ಯಕ್ತಗೊಳ್ಳಲೇಬೇಕಾದ ಜೀವನಾನುಭವವನ್ನು ಸಾಹಿತ್ಯದಲ್ಲಿ ಪ್ರಕಟಿಸಿ, ಅದರ ಮೂಲಕ ಜೀವನದ ತಿಳಿವು ಹೆಚ್ಚಾಗಬೇಕೆಂಬುದೇ ವಾಸ್ತವತೆಯ ಉದ್ದೇಶವಾಗಿದೆ. ಲೇಖಕರ ಲಕ್ಷ್ಯ ಈ ತಿಳಿಯುವಿಕೆಯ ಕಡೆಗಿರದಿದ್ದರೆ ವಿಕೃತಿಯ ಚಿತ್ರಣ ಹೆಚ್ಚು ಅಪಾಯಕಾರಿಯಾಗುತ್ತದೆ. ಯಾಕಂದರೆ ಜೀವನದಲ್ಲಿ ಅನೇಕ ವಿವರಗಳಲ್ಲಿ ಮರೆತುಹೋಗಬಹುದಾದ ಒಂದು ಅನುಭವ, ಸಾಹಿತ್ಯಸೃಷ್ಟಿಯ ಅವಸ್ಥೆಗಳಲ್ಲಿ ಹಾದು ಬಂದು, ಆ ಸಂಸ್ಕಾರದಿಂದ ಸ್ಪಷ್ಟವಾಗಿ, ಉತ್ಕಟವಾಗಿ ಒಡಮೂಡಬಲ್ಲದು. ಲೇಖಕನಿಗೆ ವಾಸ್ತವಪ್ರಜ್ಞೆ ಇಲ್ಲದಿದ್ದರೆ ಮತ್ತು ಅವನ ಉದ್ದೇಶ ಅವನಿಗೇ ಅಸ್ಪಷ್ಟವಾಗಿದ್ದರೆ, ಓದುಗನ ಮನಸ್ಸು ಈ ಅನುಭವವೊಂದರಲ್ಲಿಯೇ ಲೀನವಾಗಿ ಅವನ ಮನೋರಚನೆಯ ಮೇಲೆ ವಿಪರೀತವಾದ ಪರಿಣಾಮವನ್ನುಂಟುಮಾಡಬಲ್ಲದು. ಈ ಹೊತ್ತಿನಲ್ಲಿ ಲೇಖಕ ತನ್ನ ನೈತಿಕ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳಲಾರ. ಅಲ್ಲದೆ ಅವಿಚಾರಿತ ರಮಣೀಯವಾಗಿರುವ ಸಾಹಿತ್ಯಸೃಷ್ಟಿ ತಂತಾನೇ ಆವಿರ್ಭವಿಸುವ ವ್ಯಾಪಾರವೆಂದು ಒಂದು ಸೂತ್ರವನ್ನು ಹೇಳಿ ಪಾರಾಗಲಾಗದು. ಈ ಸೂತ್ರ ಕಲ್ಪಕಸಾಹಿತ್ಯಕ್ಕೆ ಸಂಬಂಧಿಸಿದ್ದೇ ಹೊರತು ವಾಸ್ತವಸಾಹಿತ್ಯಕ್ಕಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಇದನ್ನು ತಪ್ಪಿಸಿಕೊಳ್ಳಲೆಂದೇ ‘ ಕಲೆಗಾಗಿ ಕಲೆ ’ಯಂಥ ವಾದಗಳನ್ನು ಅವುಗಳ ಸಂದರ್ಭದಿಂದ ತಪ್ಪಿಸಿಕೊಂಡು ಮುಂದುಮಾಡಿದರು. ಇದರಿಂದ ಸಾಹಿತ್ಯದಲ್ಲಿ ಕೇವಲ ತಂತ್ರ ಹಾಗೂ ಶೈಲಿಗಳಿಗೆ ಅವಾಸ್ತವ ಮಹತ್ವ ಬಂದು, ಒಂದು ಕೃತಿಯ ಶ್ರೇಷ್ಠತೆ ಅದರ ರೂಪವಿನ್ಯಾಸದಲ್ಲಿದೆಯೆಂಬ ಹೊಸ ವಿಮರ್ಶಕ-ಮೌಲ್ಯ ಜನ್ಮ ತಾಳಿತು. ಇದೇ ಸಮಸ್ಯೆಯನ್ನು ನಮ್ಮ ನಾಡಿನ ಸಾಹಿತಿಗಳು ಬಿಡಿಸಿಕೊಂಡು ಮುಂದೆ ಹೋಗಬೇಕಾಗಿದೆ.

ನಮ್ಮಲ್ಲಿಯೂ ತಿಳಿದೋ ತಿಳಿಯದೆಯೋ ಇಂಥ ವಾದಗಳನ್ನು ನಂಬಿದವರು ಇದ್ದಾರೆ. ಲೇಖಕನ ವೈಯಕ್ತಿಕ ನೀತಿಗೂ ಸಾಹಿತ್ಯಕ್ಕೂ ಏನೂ ಸಂಬಂಧವಿಲ್ಲ ವೆಂಬುದೇ ಇವರ ಅಭಿಪ್ರಾಯವಾಗಿದೆ. ಇಂಥ ವಿಷಯಗಳಲ್ಲೆಲ್ಲ ವಿಮರ್ಶಕ ತತ್ವಗಳ ತಪ್ಪು ತಿಳುವಳಿಕೆ ಇಲ್ಲದ ಗೊಂದಲವನ್ನೆಬ್ಬಿಸಿದೆ. ಲೇಖಕ ವೈಯಕ್ತಿಕವಾಗಿ ನೀತಿವಂತನಾಗಿರಬೇಕೋ ಬೇಡವೋ ಎಂಬುದನ್ನು ಅವನಲ್ಲದೆ ಬೇರೆ ಯಾರೂ ನಿರ್ಧರಿಸಲಾರರು. ಅಷ್ಟರ ಮಟ್ಟಿಗೆ ಮಾತ್ರ ಅವನ ನೀತಿಗೂ ಸಾಹಿತ್ಯಕ್ಕೂ ಸಂಬಂಧ ವಿಲ್ಲವೆಂದೇ ಹೇಳಬಹುದು. ಆದರೆ ಅವನಿಂದ ಅನೀತಿಕರವಾದ ಸಾಹಿತ್ಯ ಸೃಷ್ಟಿ ಯಾಗುತ್ತಿದ್ದರೆ ಯೋಚಿಸಬೇಕಾಗುತ್ತದೆ. ಸಾಹಿತ್ಯ ತನ್ನ ಸುತ್ತಲಿನ ಆಚಾರ ವಿಚಾರಗಳನ್ನು, ಸಂಸ್ಕೃತಿಯನ್ನು ಚಿತ್ರಿಸುತ್ತಿರುವಾಗ ಕಲೆಗೂ ನೀತಿಗೂ ಸಂಬಂಧ ವಿಲ್ಲವೆನ್ನುವದು ಸರಿಯಾಗಲಿಕ್ಕಿಲ್ಲ. ಸಾಹಿತಿಯ ಜೀವನಾಂಶಗಳು ಅವನ ಕೃತಿಯಲ್ಲಿ ಬಂದೇತೀರಬೇಕೆಂದಾಗಲಿ ಅಥವಾ ಅವನ ಸಾಹಿತ್ಯ ನೀತಿಪ್ರಚಾರದ ಮಾಧ್ಯಮ ವೆಂದಾಗಲಿ ತಿಳಿಯಬಾರದು. ನೀತಿಯನ್ನು ನಾವು ಪರಿಮಿತವಾದ ಅರ್ಥದಲ್ಲಿ ಗ್ರಹಿಸುತ್ತಿದ್ದರೆ ಆ ಮಾತು ಬೇರೆ. ಸಾಹಿತ್ಯ ನೈತಿಕತೆಯನ್ನು ಜೀವನಾನು-ಭವವೆಂದೇ ನೋಡಿದ್ದರೆ ಈ ವಾದ ಇಷ್ಟು ವಿಪರೀತಕ್ಕೆ ಹೋಗುತ್ತಿರಲಿಲ್ಲ. ಪಾಶ್ಚಾತ್ಯದೇಶಗಳಲ್ಲಿ ನೀತಿ ಜೀವನದೊಂದಿಗೆ ಬೆಳೆಯುತ್ತ ಹೋಗದೆ ಕುರುಡು ನಂಬಿಕೆಯಾಗಿ ಉಳಿದದ್ದರಿಂದ ಈ ತೊಂದರೆ ಅಲ್ಲಿ ಹುಟ್ಟಿತು. ಇಂಥ ಕುರುಡು ನಂಬಿಕೆಗಳು ನಮ್ಮಲ್ಲಿಯೂ ಇಲ್ಲವೆಂದಲ್ಲ. ಆದರೆ ಧರ್ಮ ಅಲ್ಲಿಯ ಚರ್ಚಿನಂತೆ ಸಮಗ್ರ ದೇಶದ ಅಧಿಕಾರಸೂತ್ರಗಳನ್ನೂ ತನ್ನ ಕೈಯಲ್ಲಿಟ್ಟುಕೊಂಡು ದಬ್ಬಾಳಿಕೆ ನಡೆಸಿಲ್ಲವೆಂದು ಧೈರ್ಯವಾಗಿ ಹೇಳಬಹುದು. ಧಾರ್ಮಿಕ ಸ್ವಾತಂತ್ರ್ಯ ಭಾರತದಲ್ಲಿ ಇದ್ದಷ್ಟು ಬೇರೆ ಯಾವ ದೇಶಗಳಲ್ಲಿಯೂ ಇಲ್ಲ. ಭಾರತೀಯರಿಗೆ ಧರ್ಮಜೀವನ ಪ್ರಯೋಗವಾಗಿರುವದಲ್ಲದೆ ಹೊರಗಿನಿಂದ ತಂದುಕೊಂಡ ಒತ್ತಾಯವಲ್ಲ. ನೀತಿ-ಪರತೆ ಗೊಡ್ಡು ಸಂಪ್ರದಾಯವೆಂದು ದೂರ ಸರಿದರೆ ಸಾಹಿತ್ಯ ಒಂದು ಮುಖ್ಯವಾದ ಜೀವನಾನುಭವದಿಂದ ದೂರವಾಗಿ ಉಳಿಯಬೇಕಾಗುತ್ತದೆ.

ವಿಮರ್ಶೆಯ ರೀತಿಗಳನ್ನು ನಾವು ಪಾಶ್ಚಾತ್ಯರಿಂದ ನೇರವಾಗಿ ಸ್ವೀಕರಿಸಿದ್ದೇ ಈ ಗೊಂದಲಕ್ಕೆ ಕಾರಣವಾಗಿದೆ. 'ಕಲೆಗಾಗಿ ಕಲೆ'ಯಂಥ ವಾದಗಳಾಗಲಿ, ತಂತ್ರ-ಪ್ರಮುಖತೆ, ಸಾಂಕೇತಿಕತೆಯಂಥ ಬರವಣಿಗೆಯ ರೀತಿಗಳಾಗಲಿ ಹುಟ್ಟುವದಕ್ಕೆ ಅಲ್ಲಿಯ ಧಾರ್ಮಿಕ ಹಾಗೂ ಸಾಮಾಜಿಕ ಪ್ರವೃತ್ತಿಗಳು ವ್ಯಕ್ತಿತ್ವದ ಮೇಲೆ ನಡೆಸಿದ ದಬ್ಬಾಳಿಕೆಗಳೇ ಕಾರಣವಾಗಿವೆ. ಆದ್ದರಿಂದ ಇಂಥ ವಾದಗಳು ಅಲ್ಲಿಯ ಪರಿಸ್ಥಿತಿಯ ದೃಷ್ಟಿಯಿಂದ ಸಮರ್ಥನೀಯವಾಗಿವೆ. ಧರ್ಮ ಹಾಗೂ ರಾಜಕೀಯ ಶಕ್ತಿಗಳು ಒಂದಾದಮೇಲೊಂದರಂತೆ ಅಲ್ಲಿಯ ಸಮಾಜವನ್ನು ಪೀಡಿಸುತ್ತಲೇ ಬಂದಿವೆ. ಯಾವದೇ ಕಾರಣಗಳಿಂದ ವ್ಯಕ್ತಿಸ್ವಾತಂತ್ರ್ಯ ಇಲ್ಲದಂತಾಗುವ ಪರಿಸ್ಥಿತಿ ಬರುತ್ತಲೇ ಇದೆ. ಅದಕ್ಕಾಗಿ ಒಂದು ಕಡೆಯಿಂದ 'ವ್ಯಕ್ತಿತ್ವವಾದ' (personality-cult) ಇನ್ನೊಂದು ಕಡೆಯಿಂದ 'ಶುದ್ಧ ಕಲೆ' (pure art) ಹುಟ್ಟಬೇಕಾಯಿತು. ಏನೇ ಮಾಡಿ ವ್ಯಕ್ತಿಸ್ವಾತಂತ್ರ್ಯವನ್ನೂ, ಕಲೆಯ ಸ್ವಾತಂತ್ರ್ಯವನ್ನೂ ಕಾಯ್ದುಕೊಳ್ಳಲು

ಪ್ರಯತ್ನಿಸಬೇಕಾಯಿತು. ಅದರ ಸಲುವಾಗಿ ಪ್ರತಿಯೊಬ್ಬ ವ್ಯಕ್ತಿ— ವಿಶೇಷವಾಗಿ ಕಲಾವಿದ — ಇಂಥ ಪ್ರವೃತ್ತಿಗಳಿಗೆ ಪ್ರತಿಕ್ರಿಯೆಯನ್ನು ತೋರಿಸಬೇಕಾಯಿತು. ಯುರೋಪಖಂಡದ ಇತಿಹಾಸದಲ್ಲಿ ಮಧ್ಯಯುಗದ ಕಾಲದಿಂದ ಇಲ್ಲಿಯ ವರೆಗೆ ಇಂಥ ಅನೇಕ ಆಂದೋಲನಗಳು ನಡೆಯುತ್ತಲೇ ಇವೆ. ದಬ್ಬಾಳಿಕೆಯನ್ನು ನಡೆಸುವ ಧರ್ಮ, ನೀತಿ, ರಾಜಕೀಯ ಇವುಗಳಿಂದ ದೂರ ಸಿಡಿದ ಕಲಾವಿದ ಅನಿವಾರ್ಯ ವಾಗಿ 'ಸೌಂದರ್ಯವಾದಿ'ಯಾಗಬೇಕಾಯಿತು. ಮುಂದೆ ವಿಜ್ಞಾನಯುಗ ಸ್ಥಿರ ವಾದ ಮೇಲೆ ಇದಕ್ಕೂ ಪ್ರತಿಕ್ರಿಯೆ ಬಾರದಿರಲಿಲ್ಲ. ಇಡೀ ಇಂಗ್ಲಿಶ್‌ಸಾಹಿತ್ಯದ ಇತಿಹಾಸವನ್ನು ಮೊದಲಿನಿಂದ ಕೊನೆಯ ವರೆಗೆ ನೋಡಿದಾಗ ಅದು ಇಂಥ ಹಲ ವಾರು ಪ್ರತಿಕ್ರಿಯೆಗಳ ಸರಪಳಿಯಾಗಿ ಕಾಣುತ್ತದೆ. ಪ್ರತಿಕ್ರಿಯೆ ಒಂದು ಕಾಲಕ್ಕೆ ಪ್ರೇರಕಶಕ್ತಿಯಾಗಿ ಬಂದರೂ ಅದು ಇನ್ನೊಂದು ಪ್ರತಿಕ್ರಿಯೆಯನ್ನು ಕರೆಯದೆ ಬಿಡುವದಿಲ್ಲ. ಸ್ವಂತ ಪ್ರತಿಭೆಯುಳ್ಳ ಲೇಖಕ ಈ ಪ್ರತಿಕ್ರಿಯೆಗಳನ್ನೂ ಮೀರಿ ಸಾಹಿತ್ಯ-ಸೃಷ್ಟಿಯನ್ನು ಮಾಡುತ್ತಿರುತ್ತಾನೆ. ಆದರೆ ಎರಡನೆಯ ತರಗತಿಯ ಲೇಖಕರು ಮಾತ್ರ ಒಂದಿಲ್ಲೊಂದು ಪ್ರಬಲವಾದ ದೃಷ್ಟಿಕೋನವನ್ನಾಗಲಿ, ವಾದವನ್ನಾಗಲಿ ಆಶ್ರಯಿಸಿ ಬದುಕಬೇಕಾಗುತ್ತದೆ. ಹಾಗೆ ಆದಾಗಲೆಲ್ಲ ಇಂಗ್ಲೀಷಿನಲ್ಲಿ ಇನ್ನೊಂದು ಪ್ರಬಲವಾದ ಪ್ರತಿಕ್ರಿಯೆ ಹೆಡೆ ತೋರಿಸಿದೆ. ಈ ಬಗೆಯ ವಿಚಾರಮಂಥನದಿಂದ ಸಿಡಿದು ಬಂದ ವಾದಗಳನ್ನು ಅವುಗಳ ಸಂದರ್ಭದಿಂದ ಬೇರ್ಪಡಿಸಿ ನಮ್ಮ ಸಾಹಿತ್ಯಕ್ಕೆ ಅನ್ವಯಿಸುವದಾಗಲಿ, ಸಾಹಿತ್ಯವಲ್ಲದ್ದನ್ನು ಸಮರ್ಥಿಸುವದಾಗಲಿ ಎಷ್ಟರ ಮಟ್ಟಿಗೆ ಸಮಂಜಸವಾದೀತೆಂಬುದನ್ನು ವಿಚಾರಿಸಬೇಕು. ಸಾಹಿತ್ಯದ ಮೂಲ, ಪ್ರತಿಕ್ರಿಯೆಯಲ್ಲಿಯೇ ಇದೆಯೇನೆಂಬುದನ್ನು ಯೋಚಿಸಬೇಕು. ಮಾನಸಿಕ ಅಸ್ವಸ್ಥತೆಯಿಲ್ಲದೆ ಕವಿಯಾಗಲಾರ ಎಂದೋ, ಅಥವಾ ಎಲ್ಲ ಸಾಹಿತ್ಯವೂ ಒಂದು ಬಗೆಯ ಮನೋರೋಗವೆಂದೋ ಹೇಳುವ ಸಾಹಿತ್ಯವ್ಯಾಖ್ಯೆಗಳು ಇಂಥ ವಾತಾ-ವರಣದಿಂದಲೇ ಹುಟ್ಟಿದವುಗಳಾಗಿವೆ.

ಹಳೆಗನ್ನಡಸಾಹಿತ್ಯದಲ್ಲೂ ಅನೇಕ ಬದಲಾವಣೆಗಳಾದವು. ಕಾವ್ಯಕಲ್ಪನೆ, ಬರವಣಿಗೆಯ ರೀತಿ, ಛಂದೋಕ್ರಮ, ಶೈಲಿ ಹಾಗೂ ಭಾಷೆಗಳು ಕ್ರಮವಾಗಿ ಬದ ಲಾಗುತ್ತಲೇ ಇವೆ. ಆದರೆ ಒಂದು ಕಾಲದ ಸಾಹಿತ್ಯ ತನ್ನ ಹಿಂದಿನ ಕಾಲದ ಸಾಹಿತ್ಯಕ್ಕೆ ಪ್ರತಿಕ್ರಿಯೆಯನ್ನು ತೋರಿಸಲಿಲ್ಲ. ಸಾಹಿತ್ಯ ಒಂದೇ ಪ್ರವಾಹವಾಗಿ ಹರಿದುಬಂದಿತು. ಪರಿಸ್ಥಿತಿ ಬದಲಾಗಿದ್ದರಿಂದ ಮಾತ್ರ ಅದರ ಗತಿ ಬದಲಾಗು ತ್ತಿತ್ತು. ಹಳೆಗನ್ನಡದ ಕವಿಗಳೆಲ್ಲ ಒಂದೇ ಜಾತಿಗಾಗಲಿ, ಪಂಥಕ್ಕಾಗಲಿ, ಮತಕ್ಕೆ ಆಗಲಿ ಸೇರಿದವರಲ್ಲ. ಮತಮತಗಳಲ್ಲಿ ನಡೆದ ತೀವ್ರ ಕಲಹಗಳನ್ನು ಅವರ ಕಾವ್ಯಗಳು ಕೂಡ ಪ್ರತಿಬಿಂಬಿಸುತ್ತವೆ. ವೈರಿಗಳ ದ್ವೇಷದಂತೆ ಮತಗಳ ದ್ವೇಷ, ಜೀವನದ ಒಂದಂಶವಾಗಿ ಮಾತ್ರ ಕಾವ್ಯದಲ್ಲಿ ಬರುತ್ತದೆಯೇ ಹೊರತು, ಒಬ್ಬ ಕವಿ ತನ್ನ ಹಿಂದಿನ ಅಥವಾ ಭಿನ್ನ ಧರ್ಮದ ಕವಿಗೆ ತೋರಿಸುವ ಪ್ರತಿಕ್ರಿಯೆ ಎಂದಲ್ಲ. ಬಹುಶಃ ಧರ್ಮದಲ್ಲಿಯ ನಂಬಿಕೆ ಇಂಥ ನೂರು ಪ್ರತಿಕ್ರಿಯೆಗಳನ್ನು ನುಂಗಿ ಸಮ ತೂಕವನ್ನು ಕಾಯ್ದುಕೊಳ್ಳಲು ನಮ್ಮ ಕವಿಗಳಿಗೆ ಸಹಾಯಮಾಡಿತು. ಧರ್ಮ

ವನ್ನು ಜಾತಿ, ಮತ, ಪಂಥಗಳ ಗೊಂದಲವಿಲ್ಲದ ಶುದ್ಧ ಜೀವನಾನುಭಾವವೆಂದೇ ನೋಡಬೇಕು. ಪಂಪ, ರನ್ನ, ಹರಿಹರ, ಚಾಮರಸ, ಕುಮಾರವ್ಯಾಸ, ಜನ್ನ ಇಂಥ ಕವಿಗಳು ಧರ್ಮದ ಈ ಅನುಭವದ ಎತ್ತರಕ್ಕೇರಿ ಬಾಳನ್ನು ನೋಡಿದವರು. ಅಂತೇ ಈ ಕವಿಗಳು ಒಬ್ಬರನ್ನೊಬ್ಬರು ವಿರೋಧಿಸದೆ ತಂತಮ್ಮ ಕಾವ್ಯಗಳನ್ನು ಬರೆದು ಕೃತಾರ್ಥರಾಗಿದ್ದಾರೆ. ಸಾಹಿತ್ಯದ ಬಗ್ಗೆ ಅವರಿಗಿರುವ ಏಕನಿಷ್ಠೆ ಆಶ್ಚರ್ಯಕರ ವಾಗಿದೆ. ಸಾಹಿತ್ಯ ಅವರ ಪಾಲಿಗೆ ಜೀವನಸಿದ್ಧಿಗಳಲ್ಲಿ ಒಂದಾಗಿತ್ತೆಂದೇ ಈ ಮಾತು ಸಾಧ್ಯವಾಯಿತು.

ಈಗ ಇಂದಿನ ಸಾಹಿತ್ಯದೆದುರಿಗಿರುವ ಸಮಸ್ಯೆ ಇದೇ ಬಗೆಯದಾಗಿದೆ. ಇಂದಿನ ಸಾಹಿತ್ಯ ನಿನ್ನಿನ ಸಾಹಿತ್ಯವನ್ನು ವಿರೋಧಿಸಿಯೇ ಬದುಕಬೇಕಾಗಿದೆಯೇನೆಂಬುದನ್ನು ಗಂಭೀರವಾಗಿ ವಿಚಾರಿಸಬೇಕಾಗಿದೆ. ಅಭಿಪ್ರಾಯಭೇದ ಈ ಯುಗದ ಸರ್ವ ಸಾಮಾನ್ಯ ಲಕ್ಷಣಗಳಲ್ಲೊಂದಾಗಿದೆಯಲ್ಲದೆ, ಇನ್ನೊಬ್ಬರ ಅಭಿಪ್ರಾಯವನ್ನು ಮನ ಸ್ಸಿಲ್ಲದಿದ್ದರೂ ಮನ್ನಿಸುವದು ಸಭ್ಯತೆಯ ಕುರುಹಾಗಿದೆ. ಮೇಲಾಗಿ ಹಿಂದಿನಂತೆ ಧರ್ಮ ಪ್ರೇರಕಶಕ್ತಿಯಾಗಿ, ಅಲ್ಲದೆ ಜೀವನಾನುಭವವೂ ಆಗಿ ಬರುವದಿಲ್ಲವಾದ್ದ ರಿಂದ ಸಾಹಿತಿ ಸ್ಫೂರ್ತಿ ಹಾಗು ಅನುಭವಗಳಿಗಾಗಿ ಅನೇಕ ವಾದಗಳನ್ನೂ, ದೃಷ್ಟಿ-ಕೋನಗಳನ್ನೂ ಆಶ್ರಯಿಸಬೇಕಾಗುತ್ತದೆ. ಸುಶಿಕ್ಷಿತ ಸಾಹಿತಿ, ಹಿಂದಿನ ಮಾರ್ಗ-ಕವಿಗಳಂತೆ ಧರ್ಮವನ್ನಾಗಲಿ, ಜಾನಪದ ಕವಿಗಳಂತೆ ಜೀವನದ ಮೂಲಭೂತ ಭಾವನೆಗಳನ್ನಾಗಲಿ ಅನುಭವಕ್ಕಾಗಿ ಅವಲಂಬಿಸುವದಿಲ್ಲ. ಅದಕ್ಕಾಗಿ ಯಾವ ದಾದರೂ ರಾಜಕೀಯ ವಾದಸರಣಿಯನ್ನಾಗಲಿ, ಮನಶ್ಶಾಸ್ತ್ರವನ್ನಾಗಲಿ ಅವಲಂಬಿಸ ಬೇಕಾಗುತ್ತದೆ. ಆದರೆ ಇಷ್ಟು ಮಾಡಿದರೂ ತೊಡಕು ಬಿಟ್ಟಿಲ್ಲ. ಧರ್ಮದೃಷ್ಟಿ ಯನ್ನು ಸಂಪೂರ್ಣವಾಗಿ ಅಲ್ಲಗಳೆಯುವ ಬುದ್ಧಿವಾದವೇ ಈ ವಾದ ಹಾಗೂ ದೃಷ್ಟಿ-ಕೋನಗಳನ್ನು ಒರೆಗೆ ಹಚ್ಚಿ, ವಿಮರ್ಶಿಸಿ ಅವುಗಳನ್ನು ಅರ್ಧಸತ್ಯವೆಂದು ಸಾರಿದಾಗ ಅದಕ್ಕೆ ಪ್ರತಿಕ್ರಿಯೆಯಾಗಿ ಇನ್ನೊಂದು ದೃಷ್ಟಿಕೋನ, ಇನ್ನೊಂದು ವಾದ ತಲೆ ಯೆತ್ತುತ್ತದೆ.

ಇಲ್ಲಿ ಮತ್ತೆ ಇಂಗ್ಲಿಶ್ ವಿಮರ್ಶೆಯ ಇತಿಹಾಸವನ್ನು ನೋಡುವದು ಅಪ್ರಸ್ತುತ ವಾಗಲಾರದು. ಅಲ್ಲಿಯ ಎರಡು ಪ್ರಮುಖ ಸಂಪ್ರದಾಯಗಳಾದ 'ಕ್ಲಾಸಿಕಲ್' ಹಾಗೂ 'ರೊಮ್ಯಾಂಟಿಕ್' ಸಂಪ್ರದಾಯಗಳನ್ನೇ ನೋಡೋಣ. ಎಲಿಝಬೆಥ್ ಯುಗದಲ್ಲಿಯೇ ಶೇಕ್ಸಪಿಯರನಂಥವರನ್ನು 'ಅಶಿಕ್ಷಿತ ಪ್ರತಿಭಾಶಾಲಿ'ಗಳೆಂದು ಕರೆದು ಬೆನ್‌ಜಾನ್‌ಸನ್‌ನಂಥವರು 'ಗ್ರೀಕ್‌ಕ್ಲಾಸಿಕಲ್' ಸಂಪ್ರದಾಯವನ್ನು ಪ್ರಾರಂಭಿಸಿದರು. ಮುಂದೆ ಇದೇ 'ಕ್ಲಾಸಿಕಲ್' ಸಂಪ್ರದಾಯವಾಗಿ ಪರಿಣಮಿಸಿ ೧೮ನೇ ಶತಮಾನದಲ್ಲಿ 'ನಿಯೋಕ್ಲಾಸಿಕಲ್' ಸಂಪ್ರದಾಯವಾಗಿ ಸಾಹಿತ್ಯದ ಮೇಲೆ ಪ್ರಬಲವಾದ ದಬ್ಬಾಳಿಕೆಯನ್ನು ನಡೆಸಿತು. ಈ ವಾದದ ಪ್ರಮಾಣಗಳಿಗೆ ಹೊಂದದೆ ಇದ್ದವರನ್ನು ಸಾಹಿತಿಗಳೇ ಅಲ್ಲವೆಂದು ಸಾರಿತು. ೧೮ನೆಯ ಶತಮಾನದಲ್ಲಿ ಶೇಕ್ಸಪಿಯರನನ್ನು ಕೂಡ ಈ ಅಭಿರುಚಿಗೆ ತಿದ್ದಿ ಬರೆದ ಕವಿಗಳಿದ್ದಾರೆ. ಮುಂದೆ 'ಕ್ಲಾಸಿಕಲ್'ಸಂಪ್ರದಾಯವನ್ನು ವಸ್ತುಜಡವೆಂದು ಕರೆದು, ಕಲ್ಪಕಶಕ್ತಿಯೇ

ಪ್ರಾಧಾನವಾಗಿಯುಳ್ಳ 'ರೊಮ್ಯಾಂಟಿಕ್'ಸಂಪ್ರದಾಯ ಹುಟ್ಟಿತು. ಇವೆರಡೂ ಮಾರ್ಗಗಳನ್ನು ಅನುಸರಿಸಿ ಬರೆದ ಸಾಹಿತ್ಯ ಅಖಂಡವಾಗಿ, ಸಮಗ್ರವಾಗಿ, ಶ್ರೇಷ್ಠವಾಗಿಯೇ ಇದೆ. ಶೇಕ್ಸಪಿಯರನಂತೆ ಬೆನ್‌ಜಾನ್‌ಸನ್ನನೂ ಮಹತ್ವದ ನಾಟಕಕಾರನಾಗಿದ್ದಾನೆ; ಪೋಪನಂತೆ ವರ್ಡ್ಸ್ವರ್ಥನೂ ಶ್ರೇಷ್ಠ ಕವಿಯಾಗಿದ್ದಾನೆ. ಆದರೆ ಇವೆರಡು ಮಾರ್ಗಗಳ ವಿಮರ್ಶೆಯ ತತ್ವಗಳು ಮಾತ್ರ ಅಪೂರ್ಣವಾಗಿರುವದರಿಂದ ಅವುಗಳನ್ನಷ್ಟೇ ನಂಬಿ ಕುಳಿತ ಲೇಖಕರು ಅಪೂರ್ಣಸಾಹಿತ್ಯವನ್ನು ಹುಟ್ಟಿಸಿದ್ದಾರೆ. ಮತ್ತು ಇಂಥ ಲೇಖಕರ ಸಾಹಿತ್ಯವನ್ನು ಗಣನೆಗೆ ತಂದುಕೊಂಡು ಈ ಸಂಪ್ರದಾಯಗಳ ಮಹತ್ವವನ್ನು ಅಳೆಯಲಾಗುತ್ತಿದೆ. ಪ್ರತಿಕ್ರಿಯೆ ಅಪೂರ್ಣವಾಗಿರುತ್ತದೆಂಬದನ್ನು ಇದೇ ಉದಾಹರಣೆಗಳಿಂದ ನೋಡಬಹುದು. 'ನಿಯೋಕ್ಲಾಸಿಕಲ್' ಸಂಪ್ರದಾಯವನ್ನು ವಿರೋಧಿಸಿದ 'ರೋಮ್ಯಾಂಟಿಕ್'ಸಂಪ್ರದಾಯದಲ್ಲಿಯೇ ವರ್ಡ್ಸ್ವರ್ಥ, ಶೆಲ್ಲಿ, ಕೀಟ್ಸರಂಥ ಮಹಾಕವಿಗಳ ಜೊತೆಗೇ ಭಯಪ್ರದ ( gothic ) ಕಾದಂಬರಿಯೂ ಹುಟ್ಟಿತು. ಮತ್ತೆ ಇದೇ ಜಾತಿಯ ಕೃತಿಗಳು 'ರೋಮ್ಯಾಂಟಿಕ್' ಸಂಪ್ರದಾಯದ ವಾತಾವರಣವನ್ನು ನಿರ್ಮಿಸುತ್ತ ಇನ್ನೊಂದು ಪ್ರತಿಕ್ರಿಯೆಗೆ ಕಾರಣವಾದವು. ಈ ಎರಡೂ ವಾದಗಳ ಅಪೂರ್ಣತೆಯನ್ನು ಕಂಡು ಅವುಗಳನ್ನು ಸಮನ್ವಯಗೊಳಿಸಲು ಯತ್ನಿಸಿದವರಿದ್ದಾರೆ. ಆದರೆ ಇದು ಹೆಸರಿಗೆ ಮಾತ್ರ ಸಮನ್ವಯವಾಗಿ ಬೇರೆ ವಾದಗಳ ಜನನಕ್ಕೆ ಕಾರಣವಾಯಿತು. ಇದೇ ರೀತಿಯಲ್ಲಿ ಮುಂದೆ ಸಹಜಸಂಪ್ರದಾಯ ಹಾಗೂ ವಾಸ್ತವಸಂಪ್ರದಾಯಗಳು ಅಡಿಯಿಟ್ಟವು. ಶುದ್ಧ ಅನುಭವದ ಮೇಲೆಯೇ ಕಾಲೂರಿ ನಿಂತ ಪ್ರತಿಭಾಶಾಲಿಗಳನ್ನು ಈ ವಾದಗಳು ಏನೂ ಮಾಡಲಾರವಾದರೂ ಸಣ್ಣ ಲೇಖಕರು ಮಾತ್ರ ಅನಾವಶ್ಯಕವಾಗಿ ಇವುಗಳಿಗೆ ಬಲಿಯಾಗಬೇಕಾಗುತ್ತದೆ. ಇದಕ್ಕೆ ಕಾರಣವನ್ನು ಮತ್ತೆ ವಿಮರ್ಶೆಯ ರೀತಿ ಎನ್ನಬೇಕಾಗುತ್ತದೆ. ಹಲವಾರು ವಿಮರ್ಶಕರು ಒಬ್ಬ ಲೇಖಕನನ್ನು ಬೆಲೆಗಟ್ಟಿ ಅವನ ಸಂಪ್ರದಾಯವನ್ನು ನಿರ್ಣಯಿಸಿಬಿಡುತ್ತಾರೆ. ಆ ಸಂಪ್ರದಾಯದ ಅಪೂರ್ಣತೆಯನ್ನು ಅವನ ಕಾವ್ಯಗಳಿಂದಲೇ ಸಿದ್ಧಮಾಡಿ ತೋರಿಸುತ್ತಾರೆ. ಪತ್ರಿಕಾಕರ್ತ, ಪ್ರೊಫೆಸರರು ಈ ವಿಮರ್ಶೆಯ ಪರಿಭಾಷೆಯನ್ನು ಬೈಗುಳಗಳಂತೆ ಉಪಯೋಗಿಸಿ, ಪ್ರತಿಕ್ರಿಯೆಯ ವಾತಾವರಣವನ್ನು ನಿರ್ಮಿಸಿಬಿಡುತ್ತಾರೆ. 'ನಿಯೋಕ್ಲಾಸಿಕಲ್', 'ರೋಮ್ಯಾಂಟಿಕ್', 'ವ್ಹಿಕ್ಟೋರಿಯನ್' ಇಂಥ ಪದಗಳು ಮೊದಲು ಸ್ತುತಿವಾಚಕಗಳಾಗಿದ್ದು ಮುಂದೆ ನಿಂದಾವಾಚಕಗಳಾಗಿವೆ. ಇಂಥ ವಿಮರ್ಶೆಯ ರೀತಿಗಳನ್ನು ಸ್ವೀಕರಿಸುವಾಗ ನಾವು ಎಚ್ಚರಿಕೆಯಿಂದಿರಬೇಕಾಗುತ್ತದೆ. ಅಥವಾ ನಮ್ಮ ಪ್ರಾಚೀನ ವಿಮರ್ಶಾಪದ್ಧತಿಯ ವಿವೇಕವನ್ನು ಹದವರಿತು ಉಪಯೋಗಿಸಿಕೊಳ್ಳಬೇಕಾಗುತ್ತದೆ. ಅಭಿನವಗುಪ್ತ, ಮಲ್ಲಿನಾಥ ಮೊದಲಾದ ವಿಮರ್ಶಕರು ಕೃತಿಗಳ ಬೆಲೆಗಟ್ಟುವಾಗ ವಿಮರ್ಶೆಯ ತತ್ವಗಳನ್ನಲ್ಲದೆ ಬೇರೆ ಪ್ರಮಾಣಗಳನ್ನು ಒಪ್ಪಲಿಲ್ಲವೆಂಬ ಮಾತು ಗಮನಾರ್ಹವಾಗಿದೆ. ಇಲ್ಲದಿದ್ದರೆ ಪಾಶ್ಚಾತ್ಯರಲ್ಲಿ ಹೇರಳವಾಗಿರುವ ವಿಮರ್ಶೆಯ ಪದ್ಧತಿಗಳು ನಮ್ಮ ವಿಮರ್ಶೆಯ ವಿವೇಕವನ್ನು ಕದಡುವವೆಂಬ ಭಯವಿದೆ.

ಇಂಥ ಮಾತು ಪ್ರಗತಿಶೀಲವಲ್ಲವೆಂಬ ಭಾವನೆ ಬರಬಹುದು. ಆದರೆ

ಯಾವದೇ ಪದ್ಧತಿಯನ್ನು ಹಿಂದುಮುಂದಿನ ಎಣಿಕೆಯಿಲ್ಲದೆ ಸ್ವೀಕರಿಸುವದು ಅನುಚಿತವೆಂದೇ ಈ ಮಾತುಗಳನ್ನು ಮತ್ತೆ ಮತ್ತೆ ಹೇಳಬೇಕಾಗಿದೆ. ಈ ಬಗೆಯ ವಾದಗಳು ಸಾಮಾಜಿಕಮನೋರಚನೆಯಲ್ಲಿಯೇ ಬಿರುಕುಗಳನ್ನು ಹುಟ್ಟಿಸಿದರೆ ಸತ್ಯದ ಸಂಪೂರ್ಣ ದರ್ಶನ ದೊರೆಯುವದಾದರೂ ಹೇಗೆ? ರಾಜಕೀಯ ವಾದಗಳು ಸಾಮಾಜಿಕ ಶಿಥಿಲತೆಗಳು, ವಿಜ್ಞಾನದ ಭಯಪ್ರದವಾದ ಪ್ರಗತಿ, ಸತ್ಯಸ್ವರೂಪದ ಅನಿಶ್ಚಿತತೆ, ಎಲ್ಲಕ್ಕೂ ಹೆಚ್ಚಾಗಿ ಆಧುನಿಕ ಮಾನಸಶಾಸ್ತ್ರ ತಂದುಕೊಡುವ ಅರ್ಧ ಸತ್ಯದ ಪರಿಭಾಷೆ ಇವೆಲ್ಲವುಗಳ ಮೂಲಕ ಪಾಶ್ಚಾತ್ಯ ದೇಶಗಳ ವೈಚಾರಿಕ ಜಗತ್ತಿನಲ್ಲಿಯೇ ಕ್ಷೋಭೆಯೆದ್ದಿದೆ. ಸಭ್ಯತೆಯ ಸಲುವಾಗಿಯೆಂದೇ ಕೆಳಗೆ ಹತ್ತಿಕ್ಕಿದ ರೋಷ, ಪ್ರತಿಕ್ರಿಯೆ, ಅಪನಂಬಿಕೆ, ರಕ್ತದಾಹ, ಧನಲೋಭ ಮೊದಲಾದ ನೂರಾರು ಭಾವನೆಗಳ ಜ್ವಾಲಾಮುಖಿಯ ಮೇಲೆ ಪಾಶ್ಚಾತ್ಯ ನಾಗರಿಕತೆ, ಅವುಗಳ ಅರಿವೇ ಬೇಡವೆನ್ನುವಂತೆ ಜೀವಿಸುತ್ತದೆ. ಕಲಾವಿದನ ಸ್ವಾತಂತ್ರ್ಯಕ್ಕೆ ಅಲ್ಲಿ ಕ್ಷಣ-ಕ್ಷಣವೂ ಭಯ ತಪ್ಪಿದ್ದಲ್ಲ. ಇದೆಲ್ಲದರ ತೀವ್ರವಾದ ಪರಿಣಾಮ ಅಲ್ಲಿಯ ಸಾಹಿತ್ಯದ ಮೇಲಾಗಿದ್ದರೆ ಅದು ಸಹಜವೇ ಆಗಿದೆ. ದಿನದಿನಕ್ಕೆ ಸಾಹಿತ್ಯ ತನ್ನ ಶೈಲಿ, ತಂತ್ರಗಳನ್ನು ಬದಲಿಸಿದೆ. ವೇಗಪ್ರಧಾನವಾದ ಯುಗದ ಸಲುವಾಗಿಯೆಂದೇ ಮೂರು ನಿಮಿಷಗಳಲ್ಲಿ ಓದಬಹುದಾದಂಥ ಕತೆಗಳು ಹುಟ್ಟಿಕೊಂಡಿವೆ. ಯಾಂತ್ರಿಕ ಉಪಕರಣಗಳಿಂದಲೂ ನಾಕಷ್ಟು ಬದಲಾವಣೆಯಾಗಿದೆ. ಅಂಥ ಬದಲಾದ ಸಾಹಿತ್ಯದ ಪ್ರಕಾರಗಳನ್ನು ನವೀನತೆಗಾಗಿ ನಾವು ಸ್ವೀಕರಿಸಿದ್ದೇವೆ. ಅವುಗಳನ್ನು ಉಪಯೋಗಿಸಬೇಕಾದಾಗ ಎಚ್ಚರಿಕೆಯಿಂದ ಇದ್ದಷ್ಟೂ ಸಾಲದಾಗಿದೆ. ಉದಾ-ಹರಣೆಗೆಂದು ಭಾವಗೀತ, ಸಣ್ಣಕತೆ, ಹರಟೆಯಂಥ ಪ್ರಕಾರಗಳನ್ನು ನೋಡೋಣ. ಇವು ಮೂರೂ ತೀರ ಚಿಕ್ಕವಾದ ಸಾಹಿತ್ಯಪ್ರಯೋಗಗಳಾಗಿವೆ. ಒಂದು ಭಾವನೆ, ಒಂದು ವಿಚಾರ, ಒಂದು ಭಾವಲಹರಿ, ರಸನಿಮಿಷ, ಸನ್ನಿವೇಶ ಇಂಥವುಗಳನ್ನೇ ಕೇಂದ್ರವಾಗಿಟ್ಟುಕೊಂಡು ಈ ಪ್ರಕಾರಗಳು ಜನ್ಮ ತಾಳುತ್ತವೆ. ಅನುಭವದ ಉತ್ಕಟ ಕ್ಷಣಗಳಷ್ಟನ್ನೇ ನಾವಿಲ್ಲಿ ಕಾಣುತ್ತೇವೆ. ಹೀಗಾಗಿ ಓದುಗನಿಗೆ ಒಂದು ಅನುಭವದ ದರ್ಶನವಾಗಬಹುದಲ್ಲದೆ ಜೀವನದ ದರ್ಶನವಾಗುವದಿಲ್ಲ. ಕಾಣಿಸಿ ಕೊಂಡ ದರ್ಶನ ತನ್ನ ಸಂದರ್ಭದ ಸೂತ್ರಗಳನ್ನೆಲ್ಲ ಹರಿದುಕೊಂಡಿರುವುದರಿಂದ ಓದುಗನ ರಸಾನುಭವವೂ ಕೊರೆಯಾಗಿಬಿಡುತ್ತದೆ. ಸಾಹಿತ್ಯವೆಂದರೆ ಕೇವಲ ಒಂದು ಭಾವಲಹರಿಯ ಸಂಯಮಿತ ಅಭಿವ್ಯಕ್ತಿಯಾಗುತ್ತದೆಯೇ ಹೊರತು ಲೇಖಕನ ಜೀವನದ ಅಭಿವ್ಯಕ್ತಿಯಾಗುವದಿಲ್ಲ. ಇದಲ್ಲದೆ ಇನ್ನೊಂದು ಬಗೆಯ ಅಪಾಯವೂ ಇಲ್ಲಿದೆ. ಒಬ್ಬನೇ ಲೇಖಕನಲ್ಲಿ ಒಂದಕ್ಕೊಂದು ವಿರುದ್ಧವಾದ ಹಲವಾರು ಉತ್ಕಟ ಭಾವಲಹರಿಗಳಿರುವದು ಸಾಧ್ಯವಿದೆ. ಅವೆಲ್ಲವುಗಳನ್ನು ಒಂದುಗೊಳಿಸಬಲ್ಲ ವ್ಯಕ್ತಿತ್ವದ ದರ್ಶನವಿಲ್ಲದ್ದಕ್ಕೆ ಓದುಗ ದಿಗ್ಭ್ರಮೆಗೊಳ್ಳುತ್ತಾನೆ. ಮತ್ತು ಒಬ್ಬ ಕವಿ ಸಾಲಾಗಿ ಅನೇಕ ದುರ್ಬಲ ಕವಿತೆಗಳನ್ನು ಬರೆದು ಒಂದೇ ಸಮರ್ಥವಾದ ಕವಿತೆಯನ್ನು ಬರೆದಾಗ ಅವನ ಯೋಗ್ಯತೆಯೇನು ಎಂದು ಸಾಮಾನ್ಯ ಓದುಗ ಚಡಪಡಿಸಬೇಕಾಗುತ್ತದೆ. ಸಣ್ಣಕತೆಯ ಬಗ್ಗೆ ಕೂಡ ಇದೇ

ಮಾತನ್ನು ಹೇಳಬೇಕಾಗುತ್ತದೆ. ಆದರೆ ಈ ಮಾತು ಪ್ರಮುಖ ಸಾಹಿತ್ಯಪ್ರಕಾರಗಳಾದ ಕಾದಂಬರಿ, ನಾಟಕ, ಕಥನಕವನಗಳಿಗೆ ಅನ್ವಯಿಸುವದಿಲ್ಲ. ಅಲ್ಲಿ ಲೇಖಕ ಒಂದು ಅಖಂಡ ಜೀವನಾನುಭವವನ್ನು ಕೊಡುತ್ತಿರುವದರಿಂದ ಅಸಂಬದ್ಧತೆಗೆ ಅಲ್ಲಿ ಅವಕಾಶವಿಲ್ಲ, ಹಾಗೂ ಅವುಗಳ ಗುಣಾವಗುಣಗಳ ಬೆಲೆಗಟ್ಟುವದೂ ಸುಲಭವಾಗುತ್ತದೆ. ಭಾವಗೀತ, ಸಣ್ಣಕತೆಯಂಥ ಪ್ರಕಾರಗಳು ಬರಬಾರದೆಂದೂ ಅಲ್ಲ. ಪ್ರತಿಭೆ ಯಾವ ರೂಪದಲ್ಲಿ ಹೊಳೆದರೂ ಅದು ಸ್ವಾಗತಾರ್ಹವೇ. ಆದರೆ ಇಂಥ ಪ್ರಕಾರಗಳು ಹುಟ್ಟಿದ್ದರಿಂದ ವಿಮರ್ಶೆಯ ತತ್ವಗಳು ಬದಲಾದವು. ಅಪಾಯ ಇರುವದು ಇಲ್ಲಿ. ಕಾವ್ಯವೆಂದರೆ ಉತ್ಕಟ ಕ್ಷಣಗಳಲ್ಲಿಯೇ ಇರುತ್ತದೆಂಬ ಅಭಿಪ್ರಾಯ ರೂಢವಾಯಿತು. ಈ ವಾದಗಳ ಬೆನ್ನುಹತ್ತಿ ಕಾವ್ಯ ಅನುಭವದ ಸಂಕೀರ್ಣತೆಯನ್ನೂ ಸಮಗ್ರತೆಯನ್ನೂ ನಿರಾಕರಿಸುವಂತಾಯಿತು. ಉದ್ದವಾದ ಕಥನಕವನಗಳು, ಮಹಾಕಾವ್ಯಗಳು ಕಾವ್ಯವೇ ಅಲ್ಲ ಅನ್ನುವಷ್ಟರ ಮಟ್ಟಿಗೆ ಈ ವಿಚಾರಸರಣಿ ವಿಪರೀತಕ್ಕೆ ಮುಟ್ಟಿದೆ. ಕಾವ್ಯಪ್ರಕಾರಗಳಲ್ಲಿ ಭಾವಗೀತಕ್ಕೆ ಸ್ಥಾನವಿಲ್ಲವೆಂದಲ್ಲ. ಆದರೆ ಅದು ಉಳಿದ ಪ್ರಕಾರಗಳನ್ನು ಮೆಟ್ಟುವಂತಾದರೆ, ಅದರ ಪರಿಮಿತಿಯನ್ನು ಲಕ್ಷ್ಯಕ್ಕೆ ತಂದುಕೊಡಬೇಕಾಗುತ್ತದೆ.

ಭಾವಗೀತದಂಥ ಪ್ರಕಾರಗಳು ನಮ್ಮಲ್ಲಿ ಬಂದು, ರೂಢವಾಗಿ, ಪ್ರಚಾರದಲ್ಲಿ ಇದ್ದಾಗ ದಾರಿಯೇನು ಎಂಬ ಪ್ರಶ್ನೆಯೇಳುತ್ತದೆ. ಅದು ಇಂದಿನ ಸರ್ವಸಮ್ಮತವಾದ ಕಾವ್ಯಪ್ರಕಾರವಾಗಿದೆ. ಆದ್ದರಿಂದ ನಮ್ಮ ಕವಿಗಳು ಭಾವಗೀತಗಳನ್ನೂ, ಕತೆಗಾರರು ಸಣ್ಣಕತೆಗಳನ್ನೂ ಬರೆಯುವದನ್ನು ಬಿಡುವದು ಅಸಂಬದ್ಧವಾದೀತು. ಆದರೆ ಈ ಪ್ರಕಾರಗಳ ಕೊರತೆಗಳನ್ನು ತಿಳಿದುಕೊಂಡು ಅವುಗಳನ್ನು ತುಂಬಬೇಕಾದದ್ದು ಅವಶ್ಯವಾಗಿದೆ. ಕವಿಯಾಗಲಿ, ಲೇಖಕನಾಗಲಿ ವ್ಯಕ್ತಿತ್ವದ ಅಖಂಡತೆಯನ್ನು ಕಾಯ್ದುಕೊಳ್ಳಬೇಕು. ಭಾವಗೀತದ ಮೂಲಪ್ರಕಾರ ಗೀತವಾಗಿದ್ದು ಕ್ರಮವಾಗಿ ಅದು ತನ್ನ ಗೇಯತೆಯನ್ನು ಕಳೆದುಕೊಂಡಿತು. ಗೀತದಲ್ಲಿಯ ಬಾವನೆ ಗೇಯತೆಯ ಮೂಲಕವೇ ಸಾಮಾನ್ಯಭಾವನೆಗಳಲ್ಲಿ ಪರಿವರ್ತನವನ್ನು ಹೊಂದಬಹುದಾಗಿತ್ತು. ಈಗ ಈ ಸಮಸ್ಯೆ ಹೆಚ್ಚು ತೊಡಕಿನದಾಗಿದೆ. ವ್ಯಕ್ತಿತ್ವದ ಅಖಂಡತೆಯನ್ನೂ, ಸುಸಂಬದ್ಧತೆಯನ್ನೂ ಕಾಯ್ದುಕೊಳ್ಳಲು ಒಂದು ಜೀವಂತ ಧರ್ಮವಾಗಲಿ, ಅಥವಾ ತನ್ನ ನೆಲದ ಬದುಕಿನಲ್ಲಿ ಶ್ರದ್ಧೆಯಾಗಲಿ ಕವಿಗೆ ಅವಶ್ಯವಾಗಿ ಇರಬೇಕು. ಒಂದು ಕಡೆಗೆ ಪ್ರಾಚೀನಮಾರ್ಗಕಾವ್ಯ, ಇನ್ನೊಂದು ಕಡೆಗೆ ನಮ್ಮ ಜಾನಪದಕಾವ್ಯಗಳಿಂದ ಇವೇ ಪಾಠಗಳನ್ನು ಕಲಿಯಬಹುದಾಗಿದೆ. ಜೀವನದರ್ಶನ ಪ್ರತಿಯೊಂದು ಕವಿತೆಯ ಹಿಂದೆಯೂ ವ್ಯಂಗ್ಯವಾಗಿ ಮಿಡಿಯುವಂತೆ ಮಾಡಬಹುದಾಗಿದೆ. ಇನ್ನು ಕೃತಿಯ ಅಭಿವ್ಯಕ್ತಿಯ ರೀತಿ ಮಾತ್ರ ಕವಿಗೇ ಸೇರಿದ್ದು. ಆ ವಿಷಯದಲ್ಲಿ ಅವನಿಗೆ ಸಂಪೂರ್ಣ ಸ್ವಾತಂತ್ರ್ಯವಿದೆ. ಕವಿಯ ವ್ಯಕ್ತಿತ್ವದ ಅಖಂಡತೆ ಕವಿತೆಯಲ್ಲಿ ಅನುಭವದ ಸಂಕೀರ್ಣತೆಯಾಗಿ, ಸಾಂಕೇತಿಕತೆಯಾಗಿ, ಇಲ್ಲವೆ ಭಾಷೆ, ಶೈಲಿಗಳ ಧ್ವನಿಶಕ್ತಿಯಾಗಿ ಬರಬಹುದು. ಆದರೆ ಇದನ್ನೆಲ್ಲ ಮಾಡುತ್ತಿರುವಾಗ ಲೇಖಕ ಇನ್ನೊಂದು ಜವಾಬ್ದಾರಿಯನ್ನು ಮರೆಯಲಾಗದು. ಅದೆಂದರೆ ಕಾವ್ಯದ ರಸಾನುಭವ ಜನರಿಗಾಗುವಂತೆ

ಕೆಲವೊಂದು ಉಪಾಯಗಳನ್ನು ಯೋಜಿಸುವದು. ಈ ಉಪಾಯಗಳು ಯಾವು ಎಂಬುದನ್ನು ನಿಶ್ಚಿತವಾಗಿ ಹೇಳಲಾಗುವದಿಲ್ಲ. ಅವು ಕವಿಯ ಸಾಮಗ್ರಿಯ ಮೇಲೆ ಅವಲಂಬಿಸಿವೆ. ಮೊದಲು ಭಾವಗೀತದ ಗೇಯತೆ ಈ ವಿಷಯದಲ್ಲಿ ಬಹಳ ಸಹಾಯ ಕಾರಿಯಾಗಿತ್ತು. ಕವಿತೆಯ ನಾದಸಂಪತ್ತು ರಸಿಕರ ಹೃದಯವನ್ನು ಕೇಂದ್ರವಸ್ತು-ವಿನೆಡೆಗೆ ಆಕರ್ಷಿಸುತ್ತದೆ. ಯಾವುದೋ ಕಾರಣಕ್ಕಾಗಿ ಕಾವ್ಯ ಈಗ ಗೇಯತೆ ಯನ್ನು ಕಳೆದುಕೊಂಡದ್ದರಿಂದ ರಸಬೋಧಕ್ಕಾಗಿ ಬೇರೆ ಉಪಾಯಗಳನ್ನು ಹುಡುಕ ಬೇಕಾಗಿದೆ. ಓದುಗ ಹಾಗೂ ಲೇಖಕರ ನಡುವೆ ಇಬ್ಬರಿಗೂ ಸಾಮಾನ್ಯವಾಗಿರುವ ಒಂದು ಸ್ಥಳ ಬೇಕೇಬೇಕು.

ಹೀಗೆ ನಮ್ಮ ಸಾಹಿತ್ಯಲೋಕದಲ್ಲಿ ಹುಟ್ಟಿರುವ ಕೆಲವೊಂದು ಸಮಸ್ಯೆಗಳನ್ನು ಕುರಿತು ಮಾತ್ರ ಇಲ್ಲಿ ಚರ್ಚಿಸಲಾಗಿದೆ. ಲೇಖಕರ ಇಲ್ಲವೆ ಕೃತಿಗಳ ಗುಣಾವ-ಗುಣಗಳನ್ನು ಕುರಿತು ಇದು ಚರ್ಚೆಯಲ್ಲ. ಅದಕ್ಕಿಂತ ಹೆಚ್ಚಾಗಿ ಇದು ಸಾಹಿತ್ಯಪ್ರಜ್ಞೆ ಯಲ್ಲಿಯ ಅವ್ಯವಸ್ಥೆಯ ಬಗ್ಗೆ ಇರುವ ಚರ್ಚೆಯಾಗಿದೆ. ಪ್ರತಿಯೊಂದು ಸಾಹಿತ್ಯ-ಪ್ರಕಾರದ ಬಗ್ಗೆ ನಡೆದಿರುವ ಚರ್ಚೆಯೂ ಇದಲ್ಲ. ಅದಕ್ಕಾಗಿಯೇ ಮುಂದಿನ ಲೇಖಗಳು ಮೀಸಲಾಗಿವೆ. ಇಲ್ಲಿ ಕೇವಲ ಸಾಹಿತ್ಯಪ್ರಜ್ಞೆಯಲ್ಲಿ ಹುಟ್ಟಿರಬಹುದಾದ ಗೊಂದಲದ ಬಗ್ಗೆ ಬರೆಯಲಾಗಿದೆ. ಮತ್ತು ಈ ಸಮಸ್ಯೆಗಳು ತೀರ ತೊಡಕಿನವೂ ಅಲ್ಲ. ಎಷ್ಟೋ ಕಡೆಗೆ ಅವುಗಳ ಬಗ್ಗೆ ತಿಳಿದರೂ ಸಾಕು, ಅವು ದೂರವಾಗುತ್ತವೆ. ಇಂಗ್ಲಿಶ್ ವಿದ್ಯಾಭ್ಯಾಸದ ಫಲವಾಗಿ ನಾವು ಹೊಸ ಸಾಹಿತ್ಯವನ್ನು ಹೊಸ ಸಂಸ್ಕೃತಿಗೆ ಅನುಸಾರವಾಗಿ ನಿರ್ಮಿಸುತ್ತಿದ್ದರೆ ಅದು ನಿಜವಾಗಿಯೂ ಸ್ವಾಗತಾರ್ಹವಾಗಿದೆ. ಆದರೆ ಈ ರಭಸದಲ್ಲಿ ಅದು ಪ್ರಾಚೀನಸಾಹಿತ್ಯದ ಪರಂಪರೆಯನ್ನು ತಿರಸ್ಕರಿಸಬಾರದು ಎಂಬುದೇ ಈ ಲೇಖನದ ಉದ್ದೇಶವಾಗಿದೆ. ಹಳೆಯ ಸಾಹಿತ್ಯ ತನ್ನ ಜನತೆಯ ಋಣವನ್ನು ಮುಟ್ಟಿಸಿ ಕೃತಾರ್ಥವಾಗಿದೆ. ಈಗ ಹೊಸ ಸಾಹಿತ್ಯವೂ ಅದೇ ಕಾರ್ಯ-ದಲ್ಲಿ ತತ್ಪರವಾಗಬೇಕು. ಸಂಪೂರ್ಣ ಶಕ್ತಿಯುತವಾದ ಸಾಹಿತ್ಯ ಮಾಡಬಹುದಾದ ಕಾರ್ಯಗಳು ಅನೇಕವಾಗಿವೆ. ಅದು ಒಮ್ಮೆ ಗತಕಾಲದ ಇತಿಹಾಸವಾಗಿ, ವರ್ತ-ಮಾನದ ಕಥೆಯಾಗಿ, ಭವಿಷ್ಯದ ಕನಸಾಗಿ ಬರಬಹುದು. ಇಂಥದೇ ಸಾಹಿತ್ಯ ಒಳ್ಳೆಯದು, ಉಳಿದದ್ದು ಒಳ್ಳೆಯದಲ್ಲ ಎಂಬ ದುರಾಗ್ರಹ ಮಾತ್ರ ಸಲ್ಲದು. ಪ್ರಾಮಾಣಿಕವಾದ ಅನುಭವ ಪ್ರಾಮಾಣಿಕವಾದ ರೂಪ ತಳೆದು ಬಂದರೆ ಸಾಹಿತ್ಯ-ಲೋಕದಿಂದ ಅದು ಬಹಿಷ್ಕೃತವಾಗಿರಬಾರದು.

ಮತ್ತೊಂದು ಮಾತೆಂದರೆ, ವಿಮರ್ಶೆಯ ಶಾಸ್ತ್ರ ನಿರ್ಮಾಣವಾಗಬೇಕಾಗಿದೆ. ಹೊಸಗನ್ನಡಸಾಹಿತ್ಯ ಸಮೃದ್ಧವಾಗಿ ಬೆಳೆದು ಅನೇಕ ವೈವಿಧ್ಯದಿಂದ ತುಂಬಿ ಕೊಂಡಿದೆ. ಒಂದು ಕೃತಿ ಪ್ರಕಟವಾದೊಡನೆ ಅದರ ಶ್ರೇಷ್ಠತೆ ಅಥವಾ ಅವಗುಣಗಳ ಬಗ್ಗೆ ಅಲ್ಲಿ ಇಲ್ಲಿ ಕೆಲವು ಅಭಿಪ್ರಾಯಗಳು ಹಾರಾಡುತ್ತವೆ. ಜನರು ಓದಿ, ಅದರ ಬಗ್ಗೆ ಕೆಲಕಾಲ ಮಾತಾಡಿ ಅದನ್ನು ಮರೆತುಬಿಡುತ್ತಾರೆ. ಆದರೆ ನಿಜವಾದ ವಿಮರ್ಶೆಯ ಪದ್ಧತಿ ಇನ್ನೂ ಬೆಳೆದಿಲ್ಲ. ಸುಶಿಕ್ಷಿತರು ಪಾಶ್ಚಾತ್ಯ ವಿಮರ್ಶೆಯ ರೀತಿಗಳನ್ನು ತಲೆಯಲ್ಲಿಟ್ಟುಕೊಂಡು ಕೆಲವೊಂದು ಪುಸ್ತಕಗಳನ್ನು, ಕೃತಿಕಾರರನ್ನು

ಬೆಲೆಗಟ್ಟುತ್ತಾರೆ. ಕನ್ನಡ ಸಾಹಿತ್ಯದ ಸಹಜ ಸತ್ವಕ್ಕೆ, ಗತಿಗೆ ಅನುಸಾರವಾದ ವಿಮರ್ಶೆಯ ಪದ್ಧತಿ ಹುಟ್ಟಿಲ್ಲ. ಒಂದು ವಸ್ತುವಿನ ನೆರಳಿನಂತೆ ಕೃತಿಯ ವಿಮರ್ಶೆ ಕೃತಿಯ ರೂಪವಿನ್ಯಾಸವನ್ನು ಅವಲಂಬಿಸಿರಬೇಕಾಗುತ್ತದೆ. ಮತ್ತು ಅದಕ್ಕಾಗಿ ನಮ್ಮ ವಿಮರ್ಶಕರು ಸಂಸ್ಕೃತ ಲಕ್ಷಣಗ್ರಂಥಗಳನ್ನೂ, ಇಂಗ್ಲಿಶ್ ವಿಮರ್ಶೆಯ ಇತಿಹಾಸವನ್ನೂ ಅವಲೋಕಿಸಿದವರಿರಬೇಕು. ಅಭ್ಯಾಸವಿದ್ದಷ್ಟೂ ಒಳ್ಳೆಯದೇ. ಎಲ್ಲಕ್ಕಿಂತ ಹೆಚ್ಚಾಗಿ ವಿಮರ್ಶಕರು ಸಹೃದಯತೆಯನ್ನು ಬೆಳೆಸಿಕೊಳ್ಳಬೇಕು. ಸಹೃದಯತೆಯೆಂದರೆ ಕೇವಲ ಸಹಾನುಭೂತಿಯೆಂದು ಮಾತ್ರ ತಿಳಿಯಬಾರದು. ರತ್ನಪರೀಕ್ಷಕನಿಗೆ ರತ್ನಗಳನ್ನು ನೋಡುವ ' ನಜರಿ 'ದ್ದಂತೆ ವಿಮರ್ಶಕನಿಗೆ ಕೃತಿಗಳ ಗುಣವನ್ನು ಪರೀಕ್ಷಿಸುವ ಕಣ್ಣಿರಬೇಕು. ಅನುಭವ, ಆಸಕ್ತಿ, ರಸಿಕತೆ ಮುಂತಾದವುಗಳಿಂದ ಈ ಸಹೃದಯತೆಯನ್ನು ಬೆಳೆಸಿಕೊಳ್ಳಬೇಕು. ಹಿಂದಿನ ಕಾಲಕ್ಕೆ ' ಸಹೃದಯ 'ನಿಗೆ ಸಾಮಾಜಿಕರಲ್ಲಿ ಗಣ್ಯಸ್ಥಾನವಿರುತ್ತಿತ್ತು ; ಅವನು ಸಭೆಯ ನೀತಿನಿಯಮಗಳನ್ನು ರೂಪಿಸಬಲ್ಲವನಾಗಿದ್ದ. ಈಗಿನ ವಿಮರ್ಶಕರು ಪೂರ್ವದಂತೆ ತಮ್ಮ ಸ್ಥಾನವನ್ನು ಗಳಿಸಿಕೊಳ್ಳಬೇಕಾಗಿದೆ. ಕೇವಲ ದೂಷಣೆಯೇ ವಿಮರ್ಶೆಯೆಂಬ ಅಭಿಪ್ರಾಯ ಹೋಗಬೇಕು. ಅಂದರೆ ಮಾತ್ರ ಆರೋಗ್ಯಕರವಾದ ವಿಮರ್ಶೆ ಹುಟ್ಟಿ ಬೆಳೆಯಲು ಅವಕಾಶ ದೊರೆಯಬಹುದು.

ಈ ವಿಚಾರಗಳನ್ನೆಲ್ಲ ಮನಸ್ಸಿನಲ್ಲಿಟ್ಟುಕೊಂಡೇ ಮುಂದಿನ ಎಲ್ಲ ಸಾಹಿತ್ಯ-ಪ್ರಬಂಧಗಳನ್ನು ಬರೆಯಲಾಗಿದೆ. ಹೊಸಗನ್ನಡಸಾಹಿತ್ಯದಲ್ಲಿಯ ಅನೇಕ ಪ್ರಕಾರಗಳನ್ನು ಈ ದೃಷ್ಟಿಯಿಂದ ಅಭ್ಯಾಸ ಮಾಡಿ ಅವುಗಳ ನಿಲುವುಗಳಿಗೆ ತಕ್ಕಂತೆ ವಿಮರ್ಶೆ ಮಾಡಲಾಗಿದೆ. ಪ್ರತಿಯೊಂದು ಕೃತಿಯ ವಿಮರ್ಶೆಯ ಪ್ರಮಾಣಗಳು ( critical standards) ಆ ಕೃತಿಯಲ್ಲಿಯೇ ಅಡಗಿಕೊಂಡಿರುತ್ತವೆ; ಅಲ್ಲದೆ ಸದೋಷಕೃತಿ ತನ್ನ ವಿಮರ್ಶೆಯ ಸಮಸ್ಯೆಗಳನ್ನು ತಾನೇ ಹೇಳಿಬಿಡುತ್ತದೆ. ಕೃತಿಯನ್ನು ಆ ಪ್ರಮಾಣಗಳ ಒರೆಗೆ ಹಚ್ಚಿ, ಆಯಾ ಸಮಸ್ಯೆಗಳನ್ನು ಚರ್ಚಿಸುವದೇ ಇಲ್ಲಿ ಅವ-ಲಂಬಿಸಿರುವ ವಿಮರ್ಶೆಯ ರೀತಿಯೆಂದು ಸ್ಥೂಲವಾಗಿ ಹೇಳಬಹುದು. ಪ್ರಬಂಧಗಳು ಐತಿಹಾಸಿಕತೆಯನ್ನು ಒಳಗೊಂಡಿವೆ ; ಆದರೆ ಎಲ್ಲ ಪುಸ್ತಕಗಳೂ, ಲೇಖಕರೂ ಇಲ್ಲಿ ಕಾಣಿಸಿಕೊಂಡಿದ್ದಾರೆಂದು ಹೇಳಲಾಗುವದಿಲ್ಲ. ಆ ರೀತಿಯ ಇನ್ನೊಂದು ಇತಿಹಾಸ ರಚಿತವಾಗಬೇಕಾಗಿರುವದು ಅವಶ್ಯವಾಗಿದೆ. ಇಲ್ಲಿ ಸಾಹಿತ್ಯಪ್ರಕಾರಗಳ ಐತಿಹಾಸಿಕ ಬೆಳವಣಿಗೆಯ ಕಡೆಗೆ ಮಾತ್ರ ಲಕ್ಷ್ಯ ಹಾಕಲಾಗಿದೆ. ಅಲ್ಲದೆ ಲೇಖಕರನ್ನು ಬೆಲೆಗಟ್ಟುವಾಗಲೆಲ್ಲ ಅವರ ಐತಿಹಾಸಿಕ ಸಂದರ್ಭವನ್ನೂ ಗಣನೆಗೆ ತೆಗೆದುಕೊಳ್ಳಲಾಗಿದೆ. ಮೂಲ್ಯಮಾಪನಕ್ಕೆ ನಿಶ್ಚಿತವಾದ, ತ್ರಿಕಾಲಾಬಾಧಿತವಾದ ಪ್ರಮಾಣಗಳು, ಸೂತ್ರಗಳು ಯಾವ ಕಾಲಕ್ಕೂ ದೊರೆಯುವದಿಲ್ಲ. ಒಂದು ಕೃತಿಯ ಅಂತಃ-ಸತ್ವ ಪೂರ್ಣವಾಗಿ ಅಭಿವ್ಯಕ್ತಗೊಂಡಿದೆಯೋ ಇಲ್ಲವೋ ನೋಡುವದೇ ಸರಿಯಾದ ವಿಮರ್ಶೆಯಾಗಿದೆ. ಇದನ್ನು ನೋಡಬೇಕಾದಾಗ ಸಹೃದಯನ ಅಂತಃಕರಣ-ಪ್ರವೃತ್ತಿ ಮತ್ತು ಅವನ ಸದಸದ್ವಿವೇಕಗಳೇ ನಿಜವಾದ ಪ್ರಮಾಣಗಳಾಗಿವೆ. ಆ ದಿಸೆಯಲ್ಲಿ ಈ ಲೇಖನ ಒಂದು ಪ್ರಯತ್ನ ಮಾತ್ರವಾಗಿದೆ. ಇದರ ಮುಂದೆ ವಿಮ-

ರ್ಶೆಯೇ ಇಲ್ಲವೆಂದು ಯಾರೂ ಹೇಳಲಾರರು. ಶ್ರೇಷ್ಠ ಕೃತಿ ಯಾವಾಗಲೂ ಹೊಸ ವಿಚಾರಗಳನ್ನು ಸ್ಫುರಿಸುತ್ತಲೇ ಇರುತ್ತದೆ. ಬಹುಶಃ ಕೃತಿಯ ಶ್ರೇಷ್ಠತೆಯ ಗುರುತು ಇದೇ ಎಂದು ಹೇಳಬಹುದಾಗಿದೆ. ಹೊಸಗನ್ನಡಸಾಹಿತ್ಯದಲ್ಲಿ ಅಂಥ ಶ್ರೇಷ್ಠ ಕೃತಿಗಳಿಗೇನೂ ಕೊರತೆಯಿಲ್ಲ. ಅವುಗಳ ವಿಮರ್ಶೆ ಒಬ್ಬರಿಂದಲೇ, ಒಂದು ರೀತಿಯಲ್ಲೇ ಆಗಬೇಕಾಗಿಲ್ಲ. ಮತ್ತು ಈ ಲೇಖನಗಳಲ್ಲಿ ಎಲ್ಲ ಕೃತಿಗಳ ಬಗ್ಗೆ ಸಂಪೂರ್ಣ ವಿಮರ್ಶೆಯಾದಂತಾಗಿಲ್ಲ. ಹೊಸಗನ್ನಡಸಾಹಿತ್ಯದ ಬೆಳವಣಿಗೆಯನ್ನು ಅನುಲಕ್ಷಿಸಿ, ಆಯಾ ಪ್ರಕಾರಗಳ ಲಕ್ಷಣಗ್ರಂಥಗಳು ಹುಟ್ಟುವದಕ್ಕೆ ಇನ್ನೂ ಅವ-ಕಾಶವಿದೆ. ಸಾಹಿತ್ಯವನ್ನು ಆಳವಾಗಿ ಅಭ್ಯಾಸ ಮಾಡಿ, ಅದರ ಜೀವಲಹರಿಗಳನ್ನು ಗುರುತಿಸಿ, ವಿಮರ್ಶೆ ಅದನ್ನು ಒಂದು ಸಜೀವಕ್ರಮದಲ್ಲಿ ನಡೆಸುತ್ತದೆ. ಆ ಕ್ರಮ ನಿರ್ಜೀವವಾದಂತೆ ಆ ನಿರ್ಜೀವತೆಯನ್ನೊಡೆದು, ಗೊಬ್ಬರದಲ್ಲಿ ಸಸಿ ಹುಟ್ಟಿದಂತೆ ಹೊಸ ಸಾಹಿತ್ಯ ಚಿಗುರುತ್ತದೆ. ಅದಕ್ಕನುಗುಣವಾಗಿ ಹೊಸ ವಿಮರ್ಶೆಯೂ ಹುಟ್ಟುತ್ತದೆ. ಈ ವ್ಯಾಪಾರ ನಡೆಯಬೇಕಾದದ್ದೆ.

ಸಾಹಿತ್ಯ ಮತ್ತು ಸಹೃದಯರ ಇಂಥ ಮಧುರಬಾಂಧವ್ಯದಲ್ಲಿ ಆಗಾಗ ಕಲುಷಿತ ವಾತಾವರಣ ನಿರ್ಮಾಣವಾಗುವದುಂಟು. ಪೂರ್ವಗ್ರಹದೋಷಗಳು, ರಸಿಕಂಮನ್ಯತೆ, ಸಲ್ಲದ ಸಾಹಿತ್ಯಾಭಿಮಾನ, ತಪ್ಪುತಿಳುವಳಿಕೆಗಳು ಇವೆಲ್ಲ ಇಂಥ ವಾತಾವರಣಕ್ಕೆ ಕಾರಣವಾಗುತ್ತವೆ. ಪ್ರಸ್ತುತ ಲೇಖನದಲ್ಲಿ ಚರ್ಚಿಸಲಾದ ಸಮಸ್ಯೆಗಳೆಲ್ಲ ಈ ಬಗೆಯವಾಗಿವೆ. ಕ್ರಾಂತಿಯೇ ನಿತ್ಯಸ್ಥಿತಿಯಾಗಿರುವ ಕಾಲದಲ್ಲಿ ನಾವು ಜೀವಿಸುತ್ತಿರುವದರಿಂದ ಸಾಹಿತ್ಯ ಹಾಗೂ ಜೀವನದ ಮೌಲ್ಯಗಳೆಲ್ಲ ಅನಿಶ್ಚಿತವಾಗಿವೆ. ಬದುಕಿಗೇ ಸಾರ್ಥಕತೆಯ ಭಾವನೆ ಬಂದಿಲ್ಲ. ಯಾವ ಕ್ಷೇತ್ರದಲ್ಲೂ, ಎಂಥ ಸಿದ್ಧಿಯನ್ನು ಪಡೆದರೂ ಕೊನೆಗಾದದ್ದೇನು ಎಂಬ ನಿರಾಶೆಯ ವಾತಾವರಣವೇ ಎಲ್ಲ ಕಡೆಗೂ ಹಬ್ಬಿದೆ. ಇಂಥ ಪರಿಸ್ಥಿತಿಯಲ್ಲಿ ಸಾಹಿತ್ಯಕ್ಕೆ ನಿರ್ಣಾಯಕ ಕಾಲ ಬಂದೊದಗಿದೆ. ಸಾಹಿತ್ಯ ತನ್ನ ಸ್ಥಿತಿಯನ್ನು ಭದ್ರವಾಗಿ ಕಾಯ್ದುಕೊಳ್ಳಬೇಕಾದರೆ ಈ ಎಲ್ಲ ಸಮಸ್ಯೆಗಳನ್ನೂ ಅದು ಎದುರಿಸಬೇಕಾಗಿದೆ. ಸುದೈವದಿಂದ ಹೊಸಗನ್ನಡಸಾಹಿತ್ಯ ಇನ್ನೂ ಅಂಥ ವಿಪರೀತ ಸ್ಥಿತಿಯನ್ನು ಎದುರಿಸಿಲ್ಲ, ಹಾಗೂ ಈ ಸಮಸ್ಯೆಗಳಿಗೆ ಪರಿ-ಹಾರವಿಲ್ಲದೆಯೂ ಇಲ್ಲ.

ನಮ್ಮ ಸಾಹಿತ್ಯ ನಮ್ಮ ಜನತೆಯನ್ನು ನಂಬದೆ ವಿಧಿಯಿಲ್ಲ. ಏನು ಮಾಡಿದರೂ ಸಮಕಾಲೀನತೆಯ ಋಣ ಸಾಹಿತ್ಯಕ್ಕೆ ತಪ್ಪಿದ್ದಲ್ಲ. ಇಲ್ಲಿಯ ವರೆಗೆ ಹೊಸಗನ್ನಡ ಸಾಹಿತಿಗಳು ಕನ್ನಡದ ಜೀವನವನ್ನು ಪ್ರಾಮಾಣಿಕವಾಗಿಯೇ ಚಿತ್ರಿಸಿದ್ದಾರೆ; ಅವರ ಆಶೋತ್ತರಗಳನ್ನು, ಭಾವಭಾವನೆಗಳನ್ನು ಚಲುವಾಗಿ ಒಡಮೂಡಿಸಿದ್ದಾರೆ. ಕನ್ನಡದ ನಿಸರ್ಗಸೌಂದರ್ಯದಿಂದ ಹಿಡಿದು ಅಲ್ಲಿಯ ಪ್ರಣಯದ ರೀತಿ-ನೀತಿಗಳ ವರೆಗೆ ಸಮಗ್ರಜೀವನದ ಸುಳುವುಗಳನ್ನು ರೂಪಿಸಿದ್ದಾರೆ. ಆದರೆ ಕೇವಲ ಜೀವನದ ಪುನರ್ನಿರ್ಮಾಣಕ್ಕೇ ಸಾಹಿತ್ಯ ತೃಪ್ತಿಯನ್ನು ಪಡೆಯಬಾರದು. ತಲೆತಲಾಂತರಗಳಿಂದ ಇಳಿದು ನಮ್ಮ ಜನರ ಇರುವಿಕೆಯ ಕ್ರಮದಲ್ಲಿಯೇ ಅಡಗಿರುವ ಬುದ್ಧಿವಂತಿಕೆಯನ್ನೂ ಸಾಹಿತಿಯಾದವನು ಅರಿತುಕೊಳ್ಳಬೇಕಾಗಿದೆ. ನಮ್ಮಲ್ಲಿ ಕೆಲವು

ಶ್ರೇಷ್ಠ ದರ್ಜೆಯ ಲೇಖಕರನ್ನು ಬಿಟ್ಟರೆ ಉಳಿದವರು ನಮ್ಮ ಜನಜೀವನವನ್ನು ತಿಳಿದು ಕೊಂಡಿಲ್ಲವೇನೋ ಎಂದು ಸಂಶಯ ಬರುತ್ತದೆ. ಶುದ್ಧವಾದ ಜೀವನಾನುಭವಕ್ಕೆ ಇರುವ ಸ್ವಯಂಪ್ರಭೆಯಲ್ಲಿ ನಮ್ಮ ಸಮಸ್ಯೆಗಳನ್ನು ಚಿತ್ರಿಸಿದರೆ ಸಾಕು, ಉಳಿದ ಕಡೆಯಿಂದ ಪರಿಹಾರವನ್ನು ತರಬೇಕಾಗಿಲ್ಲ. ವಾದಗಳನ್ನಾಗಲಿ, ವಿಚಾರಸರಣಿಗಳ ನ್ನಾಗಲಿ ಜೀವನದ ವಿವರಗಳಿಂದು ಲೇಖಕ ನೋಡಬೇಕೇ ಹೊರತು ಅವುಗಳಿಂದ ಅವನ ದೃಷ್ಟಿ ಕಲುಷಿತವಾಗಬಾರದು. ಯಾವ ವಾದಗಳ ಗೊಂದಲವೂ ಇಲ್ಲದೆ ಈ ಅನುಭವಲೀಲೆಯಲ್ಲಿ ಆತ ತೊಡಗಿದರೆ ಮಾತ್ರ ಸಾಹಿತ್ಯ ಉಳಿಯುತ್ತದೆ. ಅದಕ್ಕಾಗಿ ಸಾಹಿತಿ ಪ್ರತ್ಯೇಕಜೀವಿಯಾಗಿ ಉಳಿದು ಉಪಯೋಗವಿಲ್ಲ. ತನ್ನ ಜನತೆಯ ಸುಖ-ದುಃಖಗಳಲ್ಲಿ, ರಾಗ-ದ್ವೇಷಗಳಲ್ಲಿ, ಧಾರ್ಮಿಕತೆಯಲ್ಲಿ, ಕನಸು-ಮನಸುಗಳಲ್ಲಿ, ಕೊನೆಗೆ ಅಂಧಶ್ರದ್ಧೆಗಳಲ್ಲಿ ಕೂಡ ಅವನು ಒಂದಾಗಬೇಕು. ಈ ಸಂಗತಿ ಸಾಹಿತ್ಯದ ಆದರ್ಶವಾಗಿರದೆ ಅದರ ಮೂಲಭೂತ ಅವಶ್ಯಕತೆಯಾಗಿದೆ, ತಳಹದಿಯಾಗಿದೆ. ಯಾಕಂದರೆ ಒಂದು ಜನಜೀವನದ, ಪಾಪ-ಪುಣ್ಯಗಳ, ನಂಬಿಕೆ-ಅಪನಂಬಿಕೆಗಳ, ಆಕರ್ಷಣೆ-ವಿಕರ್ಷಣೆಗಳ ಸಂಚಾರದಲ್ಲಿ ಸಾಹಿತ್ಯದ ರೂಪವಿನ್ಯಾಸದ ಎರಿಳಿತಗಳಿವೆ. ಪ್ರತಿಭೆ, ಕಲೆಗಾರಿಕೆಗಳು ಲೇಖಕನವು; ಅವು ಅವನ ವೈಯಕ್ತಿಕ ಅಂಶಗಳಾಗಿವೆ. ಮತ್ತು ಅವುಗಳ ಆವಿರ್ಭಾವದಲ್ಲಿ, ನಿಯಂತ್ರಣದಲ್ಲಿ ಅವನು ಸ್ವತಂತ್ರನಾಗಿದ್ದಾನೆ. ಆದರೆ ಭಾಷೆ, ಅನುಭವಗಳು ಜಗತ್ತಿಗೆ ಸೇರಿದವೆಂಬುದನ್ನು ಮರೆಯಲಾಗದು. ಒಂದು ಭಾಷೆ ಅದನ್ನಾಡುವ ಜನತೆಯ ಜೀವನಕ್ರಮದ ಅಭಿವ್ಯಕ್ತಿಯಷ್ಟೇ ಅಲ್ಲದೆ ಅವರ ಸಂಸ್ಕೃತಿ ಇತಿಹಾಸಗಳ ಶಾಸನವಾಗಿದೆ; ಅವರ ಹೃದಯಸ್ಥವಾಗಿರುವ ಕಾವ್ಯದ ಅವಶೇಷವಾಗಿದೆ. ಅದು ಜನರ ಮೂಲಭೂತ ಅನುಭವಗಳನ್ನು, ಭಾವನೆ ಗಳನ್ನು ಒಳಗೊಂಡಿದೆಯಾದ್ದರಿಂದ ಅದರ ಸ್ವರೂಪ ಅಪೌರುಷೇಯವಾಗಿದೆ.

ಇಂಥ ಭಾಷೆಯನ್ನು ಜನತೆಯಿಂದ ಪಡೆದುಕೊಂಡು, ಅದನ್ನು ಮೂಲ-ದ್ರವ್ಯವನ್ನಾಗಿ ಮಾಡಿಕೊಂಡು ಕವಿ ತನ್ನ ನೈಜ ಅನುಭವವನ್ನು ಜನರ ಹೃದಯಕ್ಕೆ ಗೋಚರವಾಗುವ ರೂಪದಲ್ಲಿ ಪ್ರಕಟಿಸಬೇಕಾಗುತ್ತದೆ. ಪ್ರತಿಭಾಶಾಲಿಯಾದವನು ಇದ್ದ ಅನುಭವಕ್ಕೆ ಹೊಸ ಅನುಭವವನ್ನು ಜೋಡಿಸಬಹುದು. ಅವನು ಪ್ರತಿಭಾ-ವಂತನಲ್ಲದಿದ್ದರೆ ಅಥವಾ ಅವನ ಸಂವೇದನಗಳ ಕ್ಷೇತ್ರವೇ ಪರಿಮಿತವಾಗಿದ್ದರೆ ಇದ್ದ ಅನುಭವವನ್ನೇ ಹೆಚ್ಚು ಕಾಂತಿಯುತವನ್ನಾಗಿ ಮಾಡಿ ತಿರುಗಿ ಕೊಡಬಹುದು. ಶ್ರೇಷ್ಠ ತರಗತಿಯ ಸಾಹಿತ್ಯನಿರ್ಮಾಣ ಆಯಾ ಕಾಲ, ಪರಿಸ್ಥಿತಿ, ಅನುಭವದ ಘನತೆ, ಜೀವನದ ಮೌಲ್ಯಗಳು, ಕವಿಯ ವೈಯಕ್ತಿಕ ಪ್ರತಿಭೆ, ಸಹೃದಯರ ಅಭಿರುಚಿ ಮೊದಲಾದ ಹಲವಾರು ಅಂಶಗಳ ಮೇಲೆ ಅವಲಂಬಿಸಿರುತ್ತದೆ. ಜಗತ್ತಿನ ಇತಿಹಾಸ ದಲ್ಲಿ ಇಂಥ ಸುವರ್ಣಯುಗಗಳು ಬರಬಹುದಾದರೂ ಅದು ಯಾವಾಗಲೂ ಸಾಧ್ಯ-ವಾಗುವ ಮಾತಲ್ಲ. ಆದರೆ ಒಳ್ಳೆಯ ಸಾಹಿತ್ಯದ ಆವಿರ್ಭಾವವಾಗಬೇಕಿದ್ದರೆ ಸಾಹಿತ್ಯ-ಪ್ರಜ್ಞೆ ದೋಷಯುಕ್ತವಾಗಿರಬಾರದು. ಸಾಹಿತ್ಯವಲ್ಲದ್ದನ್ನು ಸಾಹಿತ್ಯವೆಂದು ಹೇಳುವ, ಹಾಗೆ ತಿಳಿದುಕೊಳ್ಳುವ ಪರಿಸ್ಥಿತಿ ಒಳ್ಳೆಯ ಕಾಲದ ಲಕ್ಷಣವೇನೂ ಅಲ್ಲ. ಹಾಗೆ ಆಗಗೊಡದಿರುವ ಜವಾಬ್ದಾರಿ ಸಾಹಿತಿ ಹಾಗೂ ವಿಮರ್ಶಕರಿಬ್ಬರ ಮೇಲೆಯೂ

ಇದೆ. ಉಳಿದ ಎಲ್ಲ ಮಹತ್ವದ ಕಾರ್ಯಗಳಂತೆ ಸಾಹಿತ್ಯ ಕೂಡ ಒಂದು ಋಣ ವಾಗಿದೆ. ಅದು ಅಪವ್ಯಯವಾಗದಂತೆ, ಯೋಗ್ಯವಾಗಿ ಸಲ್ಲುವಂತೆ ನೋಡಿಕೊಳ್ಳು ವದು ಸಾಹಿತಿಯ ಕರ್ತವ್ಯವಾಗಿದೆ. ಪ್ರತಿಭೆ ಕಣ್ದೆರೆದರೆ ಬದುಕು ಸಾರ್ಥಕ ವಾಗುತ್ತದೆ; ಸಾಹಿತ್ಯದ ಪರಮೋದ್ದೇಶವೇ ಇದು. ಆದರೆ ಪ್ರತಿಭೆಯು ಸೆಲೆ ಬದುಕಿನ ಮೂಲದಲ್ಲಿಯೇ ಇರುವದರಿಂದ ಅವೆರಡಕ್ಕೂ ಒಂದನ್ನೊಂದು ಬಿಡ- ಲಾರದ ಸಜೀವಸಂಬಂಧ ಏರ್ಪಟ್ಟಿದೆ. ಮತ್ತು ಇವೆರಡರ ಅಭಿವ್ಯಕ್ತಿಗೂ ಭಾಷೆ ಸಾಮಾನ್ಯ ಮಾಧ್ಯಮವಾಗಿರುವದರಿಂದ ಸಾಹಿತ್ಯ, ಕವಿ ಹಾಗೂ ಜನತೆ ಇಬ್ಬರ ಸಾಮಾನ್ಯವಾದ ಸೊತ್ತಾಗಿದೆ. ಆದ್ದರಿಂದಲೇ ಸಾಹಿತ್ಯ ಒಂದು ಶಕ್ತಿಯುತವಾದ ಮಾಧ್ಯಮವಾಗಿದೆ; ಅನಕ್ಷರಸ್ಥರ ತಿಳುವಳಿಕೆಗೂ ಕೂಡ ಅದು ಗಮ್ಯವಾಗಿದೆ. ಅಂತೆಯೇ ಈ ಅನುಭವಕ್ಕೆ, ಜನತೆಗೆ, ಭಾಷೆಗೆ ಅನ್ಯಾಯವಾಗದಂತೆ ಸಾಹಿತ್ಯ ನಿರ್ಮಾಣವಾಗಬೇಕಾಗಿದೆ. "ದೈವೀಂ ವಾಚಂ ಅ'ಜನಯಂತ ದೇವಾಃ ತಾಂ ವಿಶ್ವರೂಪಾಂ ಪಶವೋ ವದಂತಿ" ಎಂಬ ವೇದವಚನದಂತೆ ಸಾಹಿತ್ಯದ ಪರಿಸ್ಥಿತಿ ಆಗಬಾರದು.

ಇನ್ನು ಸಾಹಿತ್ಯದ ಪ್ರಯೋಜನದ ಬಗ್ಗೆಯೂ ಕೆಲ ಮಾತುಗಳನ್ನು ಹೇಳ ಬಹುದಾಗಿದೆ. ಮೊದಲಿನಿಂದಲೂ ಈ ಮಾತಿನ ಬಗ್ಗೆ ಅನೇಕ ವಾದಗಳೆದ್ದು ಮತ್ತೆ ಮುಳುಗಿವೆ. ಒಂದಕ್ಕೊಂದು ವಿರುದ್ಧವಾದ ವಾದಗಳ ಮಹತ್ವವನ್ನು ಕಂಡು ಕೊಂಡು ಅವುಗಳ ಸಮನ್ವಯವಾಗಬೇಕೆಂದವರಿದ್ದಾರೆ. ಇವನ್ನೆಲ್ಲ ಮೀರಿ ಸಾಹಿತ್ಯ ಬೇರೆ ಬೇರೆ ಉದ್ದೇಶಗಳನ್ನಿಟ್ಟುಕೊಂಡು ನಡೆದೇ ಇದೆ. ಕೆಲವರು ಸಾಹಿತ್ಯ ನಿರುದ್ದಿಶ್ಯವಾಗಿದೆ ಎಂದಿದ್ದಾರೆ. ಹಾಗಿದ್ದರೆ ಅದು ಮಹತ್ತರವಾದ ಅರ್ಥದಲ್ಲಿ ಎಂದು ಹೇಳಬಹುದು. ಕೆಲವೊಂದು ವೇಳೆ ಉದ್ದೇಶಕ್ಕಾಗಿಯೇ ಬರೆಯುವುದು ಕೂಡ ಲಾಭದಾಯಕವಾಗಿರಬಹುದು. ಮೊದಲನೆಯದು ಸಾಹಿತ್ಯದ ನಿರ್ಗುಣ ಆರಾಧನೆ ಯಾದರೆ ಮತ್ತೊಂದು ಸಗುಣ ಆರಾಧನೆಯೆಂದು ತತ್ವಜ್ಞಾನದ ಪರಿಭಾಷೆಯಲ್ಲಿ ಹೇಳಬಹುದು. ಸಾಹಿತ್ಯದ ಪ್ರಯೋಜನ ನೀತಿಬೋಧೆಯೋ, ಮನರಂಜನೆಯೋ, ಕಾಂತಾಸಮ್ಮಿತವಾದ ಉಪದೇಶವೋ, ತಿಳುವಳಿಕೆಯೋ, ಅನುಭವವನ್ನು ನೀಡು ವದೋ, ಪ್ರೇರಣೆಯೋ, ಏನೇ ಆಗಿರಲಿ, ಅದೆಲ್ಲ ಸಹೃದಯರ ಸಂಸ್ಕಾರದ ಮೇಲೆ ಅವಲಂಬಿಸಿದೆ. ಅವರು ತಮ್ಮ ಮನೋಧರ್ಮ ಅಭಿರುಚಿಗಳಿಗನುಸಾರವಾಗಿ ಸಾಹಿತ್ಯದಿಂದ ಕೊಟ್ಟುಪಡೆಯುತ್ತಿರುತ್ತಾರೆ. ಆದರೆ ಸ್ವತಃ ಲೇಖಕನೇ ಸಾಹಿತ್ಯ ವನ್ನು ಕೆಳಮಟ್ಟಕ್ಕಿಳಿಸಬಾರದು. ಜೀವನದಲ್ಲಿ ಕೀಳು ಅಭಿರುಚಿಯ ಸೆಲೆಯೊಂದು ಗುಪ್ತವಾಗಿ ಹರಿಯುತ್ತಲೇ ಇರುತ್ತದೆ. ಅದಕ್ಕೆ ಪ್ರೋತ್ಸಾಹವನ್ನು ಕೊಟ್ಟು ಅದನ್ನು ತೃಪ್ತಿಗೊಳಿಸುವ ಸಾಹಿತ್ಯವನ್ನು ಲೇಖಕ ಕೊಟ್ಟರೆ ಅದು ಜನತೆಗೆ ಅಗೌರವವಾಗು ತ್ತದೆ, ಅವರ ರಸಿಕತೆಯನ್ನು ಅವಮಾನಿಸಿದಂತಾಗುತ್ತದೆ. ಲೇಖಕನಿಗೆ ತನ್ನ ರಸಿಕರ ಬಗ್ಗೆ ಗೌರವವಿರುವದು ಉತ್ತಮ ಸಂಸ್ಕೃತಿಯ ಲಕ್ಷಣವಾಗಿದೆ. ಎಲಿಝಾಬೆಥ್ ಯುಗದ ರಸಿಕರೆಲ್ಲರೂ ಶೇಕ್ಸಪಿಯರನ ಕಾವ್ಯಶಕ್ತಿ, ಪ್ರತಿಭಾವಿಲಾಸಗಳಿಗೆ ಮನಸೋತು ಅವನ ನಾಟಕಗಳನ್ನು ನೋಡಲು ಬರುತ್ತಿರಲಿಲ್ಲ. 'ಹ್ಯಾಮ್ಲೆಟ್'

ಪಾತ್ರದ ಅನ್ಯಾದೃಶತೆಯನ್ನು ಮೆಚ್ಚುವವರ ಜೊತೆಗೇ, ಆ ನಾಟಕದಲ್ಲಿಯ ಕಾಳಗ, ಕುಡಿತದ ದೃಶ್ಯಗಳನ್ನು ಮೆಚ್ಚುವವರೂ ಇರುತ್ತಿದ್ದರು. ಆದರೆ ಹಾಗೆಂದು ಶೇಕ್ಸ್‌ಪಿಯರ್ ತನ್ನ ನಾಟಕಗಳನ್ನು ಕೀಳುಮಟ್ಟಕ್ಕೆ ಇಳಿಸಲಿಲ್ಲ. ತನ್ನ ಪ್ರೇಕ್ಷಕರ ಬಗ್ಗೆ ಗೌರವವನ್ನು ಕಳೆದುಕೊಳ್ಳಲಿಲ್ಲ. ನಮ್ಮಲ್ಲಿಯೂ ಕಾಳಿದಾಸ, ಪಂಪ, ಮೊದಲಾದ ಕವಿಗಳು ರಸಿಕರ ಬಗ್ಗೆ ಇಷ್ಟೇ ಗೌರವದಿಂದ ನಡೆದುಕೊಂಡಿದ್ದಾರೆ. ಒಂದು ಯುಗ ತನಗೆ ತಕ್ಕ ಸಾಹಿತ್ಯವನ್ನು ಪಡೆಯುತ್ತದೆಂಬ ಮಾತಿನಂಥ ಅಸತ್ಯದ ಮಾತು ಬೇರೊಂದಿಲ್ಲ.

ಇನ್ನು ಕಡೆಯದಾಗಿ ಒಂದು ಮಾತು ಲೇಖಕನದೆಂದು ಹೇಳಬೇಕಾಗಿದೆ.ಆಧುನಿಕ ಕನ್ನಡಸಾಹಿತ್ಯ ನನಗೆ ಕೊಟ್ಟ ಪ್ರೇರಣೆ ಅಷ್ಟಿಷ್ಟಲ್ಲ. ಈ ಸಾಹಿತ್ಯ ನನ್ನ ಮನೋಧರ್ಮವನ್ನು ಸಮಗ್ರವಾಗಿ ರೂಪಿಸಿದೆ; ನನ್ನ ವೈಯಕ್ತಿಕ ಅಪೂರ್ಣತೆಗೆ ಒಂದು ಭರವಸೆಯನ್ನು ಕೊಟ್ಟಿದೆ. ಆ ಋಣಭಾರ ಸ್ವಲ್ಪಾದರೂ ಕಡಿಮೆಯಾಗಲೆಂಬ ಭಾವನೆಯಿಂದ ಮಾತ್ರ ಈ ಲೇಖನಗಳನ್ನು ಬರೆಯಲಾಗಿದೆ. ಆ ಒಂದು ಹುಮ್ಮಸ್ಸಿನಿಂದಲೇ ಇಂಥ ದೊಡ್ಡ ಸಾಹಸಕ್ಕೆ ಕೈಹಾಕುವ ಧೈರ್ಯವನ್ನು ನಾನು ಮಾಡಿದ್ದೇನೆ. ಕೆಲವು ಲೇಖಕರ ಹೆಸರು ಮರೆತುಹೋಗಿರಬಹುದಾಗಿದೆ; ಮತ್ತೆ ಕೆಲವು ಪುಸ್ತಕಗಳನ್ನು ನಾನು ಓದಿರಲಿಕ್ಕಿಲ್ಲ. ಬಂದ ಸಾಹಿತ್ಯವಿಮರ್ಶೆಯೂ ಕೆಲವು ಕಡೆಗೆ ಸರಿಯಾಗಿ ಇರಲಿಕ್ಕಿಲ್ಲ. ಬರವಣಿಗೆಯ ರಭಸದಲ್ಲಿ ಮಾತು ತಪ್ಪಿದ್ದರೆ ರಸಿಕರು ಮನ್ನಿಸಬೇಕು.

ಈ ಲೇಖನಗಳಲ್ಲಿ ಹೆಸರಿಸಿದ ಎಲ್ಲ ಲೇಖಕರಿಗೂ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಅವರಿಗೆ ನನ್ನ ವಂದನೆಗಳು ಮೀಸಲಾಗಿವೆ. ಕೃತಿಕಾರನಿಗಿಂತ ವಿಮರ್ಶಕ ಒಮ್ಮೊಮ್ಮೆ ಎತ್ತರ ಕಾಣಬಹುದಾದರೂ ವಿಮರ್ಶಕ ಕೃತಿಕಾರನಿಗಿಂತ ಒಂದು ಮೆಟ್ಟಲು ಕೆಳಗೇ ನಿಂತಿರುತ್ತಾನೆಂಬ ಮಾತನ್ನು ನಾನು ಮರೆತಿಲ್ಲ. ಆದ್ದರಿಂದ ಲೇಖಕರಿಗೆ ಎಲ್ಲಿಯಾದರೂ ತಪ್ಪಿ ಅನ್ಯಾಯವಾಗಿದ್ದರೆ ಅವರು ಮನ್ನಿಸಬೇಕು. ಇನ್ನೊಂದು ಮಾತೆಂದರೆ ಈ ಲೇಖನಗಳನ್ನೆಲ್ಲ ಸಿದ್ಧಪಡಿಸುವಾಗ ನನ್ನ ಜೊತೆಗಿದ್ದು ನನ್ನ ಪೀಡೆಗಳನ್ನೆಲ್ಲ ತಾಳ್ಮೆಯಿಂದ ಸಹಿಸಿಕೊಂಡು, ನಾನು ಮುಗ್ಗರಿಸಿದಾಗ ತಮ್ಮ ಬುದ್ಧಿವಂತಿಕೆಯ ಬೆಳಕನ್ನು ಕೊಟ್ಟು ಸಹಕರಿಸಿದ ನನ್ನ ಇಬ್ಬರು ಆತ್ಮೀಯರಾದ ಶ್ರೀ. ಶಂ. ರಾ. ಮೊಕಾಶಿ ಹಾಗೂ ಶ್ರೀ. ಎಸ್. ಬಿ. ಮಿಣಜಗಿ ಇವರನ್ನು ನಾನು ಯಾವ ಕಾಲಕ್ಕೂ ಮರೆಯುವಂತಿಲ್ಲ. ಅವರ ಸಮರ್ಥನೆ, ಪ್ರೋತ್ಸಾಹಗಳ ಬೆಂಬಲದಿಂದಲೇ ಈ ಸಲ್ಲದ ಸಾಹಸಕ್ಕೆ ನಾನು ಕೈಹಾಕಿದ್ದು. ಅವರ ಎಷ್ಟೋ ವಿಚಾರಗಳನ್ನು ನಾನು ಸ್ನೇಹದ ಸಲಿಗೆಯಿಂದ ಇಲ್ಲಿ ಬಳಸಿಕೊಂಡಿದ್ದೇನೆ. ಅದಕ್ಕಾಗಿ ಅವರಿಗೆ ಮತ್ತೊಮ್ಮೆ ಕೃತಜ್ಞತೆಯನ್ನು ಸೂಚಿಸಬಯಸುತ್ತೇನೆ. ಮತ್ತು ಈ ಪ್ರಬಂಧಗಳನ್ನು ಬರೆದು ಮುಗಿಸಿದ ಮೇಲೆ, ಎಲ್ಲವನ್ನೂ ತಾಳ್ಮೆಯಿಂದ ನೋಡಿ ಅಗತ್ಯವಾದ ಸಲಹೆ ಸೂಚನೆಗಳನ್ನು ನೀಡಿ, ಧೈರ್ಯದಿಂದ ಮುನ್ನಡೆಯುವಂತೆ ಮಾಡಿದ ಹಿರಿಯರಾದ ಶ್ರೀ. ದ. ರಾ. ಬೇಂದ್ರೆಯವರಿಗೆ ನಾನು ವಿಶೇಷವಾಗಿ ಉಪಕೃತನಾಗಿದ್ದೇನೆ.

ಇನ್ನು ಕೊನೆಯದಾಗಿ ನನ್ನ ಎಲ್ಲ ಅನಿಯಮಿತತೆಯನ್ನೂ ಸ್ನೇಹದಿಂದ ಕಂಡು, ಈ ಲೇಖನಗಳಿಗೆ ಕಾರಣಕರ್ತರಾಗಿ, ಮತ್ತು ಅವುಗಳನ್ನು ತಮ್ಮ

ರಜತಮಹೋತ್ಸವದ ಸಂಪುಟದಲ್ಲಿ ಪ್ರಕಟಿಸಲು ಒಪ್ಪಿದ್ದಕ್ಕಾಗಿ, ಮನೋಹರ ಗ್ರಂಥಮಾಲೆಯ ಸಂಪಾದಕರಾದ ಶ್ರೀ. ಜಿ. ಬಿ. ಜೋಶಿಯವರಿಗೆ, ಅವರ ಋಣ ತೀರಿಸುವಂಥದಲ್ಲ ಎಂದಿಷ್ಟೇ ನಾನು ಹೇಳಬಯಸುತ್ತೇನೆ.

# ಭಾವಗೀತದ ಉದಯ

೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಕನ್ನಡದ ಪ್ರಾಚೀನ ಪರಂಪರೆಯ ಕಾವ್ಯ ಜೀವನ್ಮೃತಾವಸ್ಥೆಯಲ್ಲಿ ಬಿದ್ದು ಬಿಟ್ಟಿತು. ತಿರುಮಲಾರ್ಯ, ಮುದ್ದಣ ಮೊದಲಾದವರು ಗದ್ಯದಲ್ಲಿ ಬರೆಯತೊಡಗಿದ್ದು ಇದಕ್ಕೆ ಕಾರಣವೆನ್ನಲಾಗದು. ದೇಶಕ್ಕೆ ದೇಶವೇ ಅವನತಿಯ ಕಾಲದಲ್ಲಿತ್ತು. ಅಲ್ಲಲ್ಲಿ ಕವಿಗಳು ಷಟ್ಪದಿ, ಕಂದಗಳನ್ನು ರಚಿಸುತ್ತಿದ್ದರು; ಆದರೆ ಭಾಷೆಗೆ ಜೀವವಿರಲಿಲ್ಲ; ಹೇಳುವದಕ್ಕೆ ಹೊಸ ವಿಷಯಗಳಿರಲಿಲ್ಲ.

ಹೊಸ ಮಾದರಿಯ ಕಾವ್ಯಪ್ರಕಾರ ಸಪ್ಪಳಿಲ್ಲದೆ ಅಲ್ಲಲ್ಲಿ ಕಾಣಿಸಿಕೊಂಡಿತು. ಬಿ. ಎಂ. ಶ್ರೀಕಂಠಯ್ಯನವರ 'ಇಂಗ್ಲಿಷ್ ಗೀತಗಳು' ಪ್ರಕಟವಾಗುವದಕ್ಕಿಂತ ಮೊದಲೇ ಕೆಲವರು ಈ ಜಾತಿಯ ಕವಿತೆಗಳನ್ನು ಬರೆದರು. ಎಸ್. ಜಿ. ನರಸಿಂಹ ಶಾಸ್ತ್ರಿಗಳು ಹಾಗೂ ಹಟ್ಟಿಯಂಗಡಿ ನಾರಾಯಣರಾಯರು ಇಂಗ್ಲಿಷ್ ಕವಿತೆಗಳನ್ನು ಭಾಷಾಂತರಿಸಿದರು. ಹಟ್ಟಿಯಂಗಡಿ ನಾರಾಯಣರಾಯರ 'ಆಂಗ್ಲ ಕವಿತಾಸಾರ'ದ ಪ್ರತಿ ಕೂಡ ಈಗ ದೊರೆಯಲಾರದು. ಇದಕ್ಕೆ ಕಾರಣವಿಲ್ಲದಿಲ್ಲ. ಹೊಸ ಕಾವ್ಯ-ಪ್ರಕಾರವೊಂದನ್ನು ನಿರ್ಮಿಸಲೇಬೇಕೆಂಬ ಉತ್ಕಟವಾದ ಆಸೆ ಈ ಬರವಣಿಗೆಯ ಹಿಂದೆ ಇಲ್ಲ. ಬಿ. ಎಂ. ಶ್ರೀಯವರಲ್ಲಿ ಮಾತ್ರ ಆ ಲವಲವಿಕೆ ಕಂಡುಬರುತ್ತದೆ. ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಜೀವಿಸಿದ್ದ ಶಾಂತಕವಿಗಳ ಕಾವ್ಯ, ಹಳೆಯ ಪರಂಪರೆಯಿಂದ ಬಿಡುಗಡೆಯನ್ನು ಪಡೆಯದಿದ್ದರೂ ಕನ್ನಡ ನಾಡು-ನುಡಿಗಳ ಅಭಿ-ಮಾನದ ಆವೇಶದಲ್ಲಿ ಅವರ ಕಾವ್ಯ ಹೊಸ ಜನ್ಮವನ್ನು ಪಡೆಯಿತು. 'ಕನ್ನಡ ದಾಸಯ್ಯ' 'ರಕ್ಷಿಸು ಕರ್ನಾಟಕದೇವಿ' ಇಂಥ ಅವರ ಕವನಗಳಲ್ಲಿ ಆಧುನಿಕ ಭಾವಗೀತದ ಜೀವಸ್ವರಗಳು ಸ್ಪಷ್ಟವಾಗಿ ಕೇಳುತ್ತವೆ. 'ಕಾವ್ಯಾನಂದ'ರ ವಿನೋದ-ಪರ ಕವಿತೆಗಳಲ್ಲಿ ಕಂಡುಬರುವ ಸಾಮಾಜಿಕತೆಯ ಅರಿವು, ವಿಡಂಬನದೃಷ್ಟಿ, ಬಳಕೆ-ಮಾತಿನ ಪ್ರೀತಿ ಈ ಗುಣಗಳು ಆಧುನಿಕತೆಯನ್ನು ಕೈಮಾಡಿ ಕರೆಯುವಂತಿವೆ.

ಭಾವಗೀತದ ಪ್ರಕಾರ ಕನ್ನಡದಲ್ಲಿ ಮೊದಲು ಇರಲಿಲ್ಲವೆಂದಲ್ಲ. ಖಂಡಕಾವ್ಯಗಳು, ದಾಸರ ಗೀತಗಳು, ಸರ್ವಜ್ಞನ ತ್ರಿಪದಿಗಳು, ವಚನಗಳು ಇವೆಲ್ಲ ಭಾವ-ಗೀತಕ್ಕೆ ತೀರ ಸಮೀಪವಾದ ಪ್ರಕಾರಗಳಾಗಿವೆ. ಕೇವಲ ಸಹಜವಾದ ಭಾವ ಸಂಪತ್ತಿನಿಂದಲೇ ತುಂಬಿಕೊಂಡ ಜಾನಪದ ಕಾವ್ಯದ ಬೆಳೆಯೂ ಸಮೃದ್ಧವಾಗಿತ್ತು. ಆದರೆ ಮಹಾಕಾವ್ಯದಂತೆ ಇಲ್ಲಿಯೂ ವಸ್ತುನಿಷ್ಠತೆಯೇ ಪ್ರಧಾನವಾಗಿದೆ. ಅಲ್ಲದೆ ಈ ಮಾದರಿಯ ಕಾವ್ಯ ನಮ್ಮ ಕಾವ್ಯದ ಮುಖ್ಯ ಪ್ರವಾಹವಾಗಿ ಹರಿದುಬರಲಿಲ್ಲ.

ಈ ಕಾವ್ಯ ಆಧುನಿಕ ಕಾಲದಲ್ಲಿಯೇ ಹೆಚ್ಚು ಲೋಕಪ್ರಿಯತೆಯನ್ನು ಪಡೆಯಿತು.

ಸಾಂಸ್ಕೃತಿಕವಾಗಿ ಕನ್ನಡ ನಾಡು ಒಂದೇ; ಅದಕ್ಕೊಂದು ಹೊಸದಾದ ಕಾವ್ಯ-ಮಾರ್ಗ ಬೇಕು ಎಂಬ ವಿಚಾರ, ನವೋದಯದ ಕಾಲಕ್ಕೆ ಮೂಡಿ ಬಂದಾಗ ಹೊಸ ಕಾವ್ಯಸೃಷ್ಟಿಗೆ ಪ್ರಬಲವಾದ ಪ್ರೇರಣೆಯೊಂದು ದೊರಕಿದಂತಾಯಿತು. ಭಾರತದ ಎಲ್ಲ ಪ್ರಾಂತಗಳಲ್ಲಿಯೂ ಇದು ಸಾಮಾನ್ಯವಾಗಿದ್ದದ್ದರಿಂದ ಕನ್ನಡವೂ ಇದರಿಂದ ತಪ್ಪಿಸಿಕೊಳ್ಳುವಂತಿರಲಿಲ್ಲ.

## ದೇಶಾಭಿಮಾನದ ಪ್ರೇರಣೆ

ಹೀಗೆ ದೇಶಾಭಿಮಾನ ಹೊಸಗನ್ನಡ ಕಾವ್ಯಕ್ಕೆ ಮೊದಲನೆಯ ಪ್ರೇರಕಶಕ್ತಿಯಾಗಿ ಬಂದಿತು. ದೇಶಾಭಿಮಾನ ಆಗಿನ ಮಟ್ಟಿಗಂತೂ ಹೊಸ ಭಾವನೆಯಾಗಿತ್ತು; ಹೊಸ ಅನುಭವವಾಗಿತ್ತು. ನಾಡಿನ ಅಭಿಮಾನವಲ್ಲದೆ ನುಡಿಯ ಮೇಲಿನ ಅಭಿ-ಮಾನವೂ ಇದರಲ್ಲಿ ಸಮಾವೇಶವಾಗಿತ್ತು. ಕನ್ನಡ ಕಾವ್ಯ ಖಿಲವಾಗಿ ಕ್ಷೀಣ ದೆಸೆಯಲ್ಲಿ ಬಿದ್ದುಕೊಂಡು, ಹಳೆಯ ಮಾತುಗಳನ್ನೇ ತೊದಲುತ್ತಿರಬಾರದು, ಸುತ್ತಲಿನ ವಾತಾವರಣಕ್ಕೆ ಪ್ರತಿಸ್ಪಂದಿಯಾಗಿ ಸ್ವಚ್ಛಂದವಾಗಿ ಹಾಡಬೇಕೆಂಬ ಮನೀಷೆಯಿಂದ ಕೆಲವರು ಮುಂದೆ ಬಂದರು. ಮಂಗಳೂರಿನ ಪಂಜೆ ಮಂಗೇಶರಾಯರು ಶಾಲೆ ಕಲಿಯುವ ಹುಡುಗರಿಗಾಗಿ ಹೊಸ ಪದ್ಯಗಳನ್ನು ರಚಿಸತೊಡಗಿದರು. ಗಾಳಿಯಂತೆ ಹಗುರಾದ ಸಹಜಸುಂದರವಾದ ಇವರ ಕವಿತೆಗಳಲ್ಲಿ ನವೋದಯದ ಸ್ವಾತಂತ್ರ್ಯ ಮಿಡಿಯುತ್ತಿದೆ. 'ನಾಗರಹಾವು' 'ತೆಂಕಣಗಾಳಿಯಾಟ' ಈ ಪದ್ಯಗಳಲ್ಲಿ ಇನ್ನೂ ಆದಿಪ್ರಾಸದ ಬಂಧನವಿದೆ. ಆದರೆ ಈ ಕವಿತೆಗಳ ಮೂಲ ಭಾವನೆ ಮಾತ್ರ ಹಿಂದೆ ನಮ್ಮ ಕಾವ್ಯದಲ್ಲಿ ಎಂದೂ ಗೋಚರವಾಗಿರದಷ್ಟು ಹೊಸದಾಗಿದೆ. 'ತೆಂಕಣಗಾಳಿ-ಯಾಟ' ನಿಸರ್ಗದ ಒಂದು ಚಲುವನ್ನು ಕುರಿತು ಬರೆದ ಪದ್ಯವಾಗಿದೆ. ಗುಡುಗು ಮಿಂಚು, ಮಳೆಯ ಪರಿವಾರವನ್ನು ಕಟ್ಟಿಕೊಂಡು, ಕಣ್ಣಿಗೆ ಕಾಣುವಂತೆ ಆಕಾರ ವನ್ನು ತಳೆದು ಬರುವ ಗಾಳಿಯ ವೇಗ, ಅದರ ಎಲ್ಲ ವಿವರಗಳೊಡನೆ ಅಷ್ಟೇ ಚಟುವಟಿಕೆಯಿಂದ ವರ್ಣಿತವಾಗಿದೆ. 'ಹುಡುಗರ ತಲೆತಲೆ ಟೊಪ್ಪಿಯ ಆಟವ, ದಡಬಡನಾಡಿಸಿ' ಎಂಬ ವಿವರವಂತೂ ತೀರ ಹೊಸದು. ಕಾವ್ಯದ ತಿರುಳು ಹುಡುಗರ ಮನಸ್ಸಿಗೂ ಮುಟ್ಟುವಷ್ಟು ಹೃದ್ಯವಾಗಿದೆಯಲ್ಲದೆ, ಕವಿತೆಯ ಕಾವ್ಯಗುಣ ಎಳ್ಳಷ್ಟೂ ಕಡಿಮೆಯಾಗಿಲ್ಲ.

ಇದೇ ಸುಮಾರಿಗೆ ಪ್ರಕಟವಾದ 'ಶ್ರೀ'ಯವರ 'ಇಂಗ್ಲಿಷ್ ಗೀತ'ಗಳಲ್ಲಿ ಎಲ್ಲ ಅಂಗಗಳಿಂದಲೂ ಪರಿಪೂರ್ಣವಾದ ಹೊಸಗನ್ನಡ ಕಾವ್ಯ ಸುಭದ್ರವಾಗಿ ಪ್ರತಿಷ್ಠಿತವಾಯಿತು. ಈ ಗೀತಗಳ ವಿಮರ್ಶೆ ಈಗ ಬೇರೆ ದೃಷ್ಟಿಯಿಂದಲೇ ಆಗಬೇಕಾಗಿದೆ. ರೂಢಿಯ ದೃಷ್ಟಿಯಿಂದ ಈ ಗೀತಗಳು ಅನುವಾದಗಳು. ಇವುಗಳ ಮೂಲ ಭಾವ, ಶೈಲಿ, ರೂಪವಿನ್ಯಾಸಗಳು ಇಂಗ್ಲಿಶ್ ಕಾವ್ಯದಿಂದಲೇ ಬಂದಿದ್ದರೂ ಇವು ಮುಖ್ಯವಾಗಿ ಕನ್ನಡದ ಕವನಗಳು. 'ಬಿಂಕದ ಸಿಂಗಾರಿ', 'ಕಾರಿ ಹೆಗ್ಗಡೆಯ ಮಗಳು', 'ದುಃಖಸೇತು' ಮೊದಲಾದ ಕವಿತೆಗಳು ಉತ್ಕೃಷ್ಟ ಅನುವಾದಕ್ಕೆ ಮಾದರಿಯಾಗಿವೆ;

'ಬಾನಾಡಿ', 'ನನ್ನ ಪ್ರೇಮದ ಹುಡುಗಿ' 'ಒಂದು ಮಾತನು ಲೋಕ ಹೊಲೆಗೆಡಿಸಿ ಕೊಂಡಿಹುದು' ಈ ಕವಿತೆಗಳು ಯಶಸ್ವಿಯಾಗಿಲ್ಲ. ಆದರೆ ಇವುಗಳನ್ನು ಅನುವಾದ ಎಂದು ನೋಡಲಾಗದು, ನೋಡಬಾರದು. ಹೊಸ ನುಡಿ-ಕಟ್ಟುಗಳು, ಹೊಸಬಗೆಯ ಲಯ-ತಾನಗಳು, ಲಘುವಾದರೂ ರಸಪೂರ್ಣವಾದ ಕಾವ್ಯವಸ್ತುಗಳು, ಸರಳವಾದ ಭಾಷೆ ಇವೆಲ್ಲ ಒಮ್ಮೆಲೆ ಒಂದು ಸಂಗ್ರಹದಲ್ಲಿ ಗೋಚರವಾದವು. ಪ್ರತಿಯೊಂದು ಕವನವೂ ಒಂದು ಜೀವಂತ ವಾಣಿಯಾಗಿ, ಕನ್ನಡಕಾವ್ಯವನ್ನು ಹೊಸ ಬಗೆಯಲ್ಲಿ ರೂಪಿಸುವ ಶ್ರೇಯಸ್ಸನ್ನು ಪಡೆಯಿತು. ಈ ಸಂಗ್ರಹದ ಮೊದಲ ಪದ್ಯವಾದ 'ಕಾಣಿಕೆ' ಯಲ್ಲಿ ಬಿ.ಎಂ. ಶ್ರೀಯವರು ಈ ಸಂಗ್ರಹದ ಉದ್ದೇಶವನ್ನು ಹೇಳಿದ್ದಾರೆ. ಆ ಉದ್ದೇಶವನ್ನು ಈ ಸಂಗ್ರಹ ಯಶಸ್ವಿಯಾಗಿ ನೆರವೇರಿಸಿ ಕೃತಾರ್ಥವಾಗಿದೆ. ಕನ್ನಡ ಭಾಷೆಯ ಬಗ್ಗೆ ಅಭಿಮಾನ, ಅದು ಬೆಳೆಯಬೇಕೆಂಬ ಹಂಬಲ, ಅದಕ್ಕಾಗಿಯೇ ಇಂಗ್ಲಿಶ್ ಕಾವ್ಯದ ಪ್ರಭಾವದ ಅನಿವಾರ್ಯತೆ ಈ ವಿಚಾರಗಳು ಆ ಕವನದಲ್ಲಿವೆ. ಕನ್ನಡ ಕಾವ್ಯವನ್ನು ಮುಂದರಿಸಿದುದರ ಶ್ರೇಯಸ್ಸು ಈ ಕವನಸಂಗ್ರಹಕ್ಕೆ ಸಲ್ಲಲೇಬೇಕಾಗಿದೆ.

## ಭಾವಗೀತದ ರೂಪ ಲಕ್ಷಣಗಳು

ಭಾವಗೀತ ಕಾವ್ಯದ ಒಂದು ಮಹತ್ವದ ಪ್ರಕಾರವೆಂದು ಮುಂದೆ ಬಂದದ್ದು ಆಗಲೇ ಎನ್ನಬಹುದು. ಜೀವನದಲ್ಲಿಯ ಒಂದು ರಸನಿಮಿಷ, ಪ್ರಕೃತಿಯ ಒಂದು ರಮ್ಯ ವಿವರ, ದುರ್ದಮ್ಯವಾಗಿ ಉಕ್ಕಿಬರುವ ಒಂದು ಭಾವನೆ, ಅಪೂರ್ವವಾಗಿ ಮೂಡಿ ಬಂದ ಒಂದು ವಿಚಾರ, ಮನುಷ್ಯಜೀವನದಲ್ಲಿಯ ಒಂದು ಸಣ್ಣ ಘಟನೆ ಇವೇ ಕೇಂದ್ರಬಿಂದುವಾಗಿ ತಮಗನುಕೂಲವಾದ ಛಂದಸ್ಸು, ಭಾಷೆ, ಅಲಂಕಾರಗಳಲ್ಲಿ ಉಚಿತವಾಗಿ ಅಭಿವ್ಯಕ್ತಿಯನ್ನು ಪಡೆದು ಗೀತವಾಗಿ ಬರಬಹುದೆಂಬ ಮಾತು ಸಂಪೂರ್ಣವಾಗಿ ಹೊಸದಾಗಿತ್ತು. ಪೂರ್ವಸಿದ್ಧವಾಗಿರುವ ವೃತ್ತರೂಪಗಳಲ್ಲಿ ಕವಿ ತನ್ನ ಜೀವನಾನುಭವವನ್ನು ಎರಕ ಹೊಯ್ಯುವದು ಪ್ರಾಚೀನ ಕಾವ್ಯದ ರೀತಿಯಾಗಿತ್ತು. ಕವಿಯ ಸ್ವಂತ ಜೀವನಾನುಭವವೂ ಕೂಡ ಸಾಮಾನ್ಯ ಜೀವನದ ಒಂದು ಅಂಶವಾಗಿ ಎಲ್ಲರಿಗೂ ಒಪ್ಪಿಗೆಯಾಗುವ ರೀತಿಯಲ್ಲಿಯೇ ಪ್ರಕಟವಾಗಬೇಕಿತ್ತು. ಕವಿಯ ವ್ಯಕ್ತಿತ್ವದ ಪ್ರಕಾಶನಕ್ಕೆ ಅಲ್ಲಿ ಸ್ಥಾನವಿರಲಿಲ್ಲ. ಗ್ರಥನಕೌಶಲವೇ ಕಾವ್ಯದ ತಾರತಮ್ಯವನ್ನು ಅಳೆಯುವ ಮಾನದಂಡವಾಗಿತ್ತು. ಹೊಸ ಮಾದರಿಯ ಭಾವಗೀತ ಮಾತ್ರ ಕವಿಯ ವ್ಯಕ್ತಿತ್ವದ ಕುಲುಮೆಯಲ್ಲಿಯೇ ಹುಟ್ಟುವಂಥದು. ಮೂಲ ಭಾವದ ಕಾವು, ವೇಗ, ಬಣ್ಣ, ಬೆಳಕುಗಳ ಮೇಲೆಯೇ ಅಭಿವ್ಯಕ್ತಿಯ ವಿವರಗಳೆಲ್ಲ ಅವಲಂಬಿಸಿರುತ್ತವೆ. ಬೇರೆ ಮಾತಿನಲ್ಲಿ ಹೇಳಬೇಕೆಂದರೆ ಕಾವ್ಯದ ಆವಿಷ್ಕಾರ ಹೆಚ್ಚು ಸಜೀವ(organic)ವಾಯಿತು.

ಹೊಸ ಕಾವ್ಯ ಬುದ್ಧಿ-ಭಾವಗಳ ಕುಶಲಕರ್ಮಕ್ಕಿಂತ ಸ್ಫೂರ್ತಿ-ಪ್ರೇರಣೆಗಳ ಮೇಲೆಯೇ ಹೆಚ್ಚು ಅವಲಂಬಿಸಿತು. ಈ ಮಾರ್ಗದ ಹೊಸ ಸಾಹಸಕ್ಕೆ ಕೂಡಲೆ ನಮ್ಮ ಕವಿಗಳು ಆಕರ್ಷಿತರಾದರು. ಆದರೆ ಈ ಮಾರ್ಗದಲ್ಲಿ ಲಾಭದ ಅಂಶಗಳಷ್ಟೇ ಹಾನಿಯ ಅಂಶಗಳೂ ಇವೆ. ಪ್ರತಿಯೊಂದು ಕವನವೂ ಚೈತನ್ಯಪೂರ್ಣವಾಗಬೇಕೆಂಬ

ಹಂಬಲದಲ್ಲಿ ಕವಿ ಜೀವನದ ಸ್ಫೂರ್ತಿಕ್ಷಣಗಳಷ್ಟನ್ನೇ ಅರಸಬೇಕಾಯಿತು. ಪ್ರಾಚೀನ ಕಾವ್ಯ, ಜೀವನದ ಸಮಗ್ರತೆಯನ್ನೂ ಒಳಕೊಳ್ಳಬಲ್ಲದಾಗಿತ್ತು. ಈಗ ಕೆಲವೊಂದು ವಿಶಿಷ್ಟ ಅನುಭವಗಳು ಮಾತ್ರ ಕಾವ್ಯವಸ್ತುಗಳಾಗಿ ಬಂದು, ಉಳಿದ ಜೀವನಾನುಭವ ಗದ್ಯಕ್ಕೆಂದು ಮೀಸಲಾಯಿತು. ಗದ್ಯಮಯವಾದೀತೆಂಬ ಹೆದರಿಕೆಯಲ್ಲಿ ಕಾವ್ಯ ಒಂದು ರೀತಿಯಲ್ಲಿ ತನ್ನ ಸೋಲನ್ನು ಒಪ್ಪಿಕೊಂಡಂತಾಯಿತು. ಬಾಹ್ಯವಿವರಗಳನ್ನು ತೊರೆದು ನಿಂತ ಅನುಭವದ ತಿರುಳು ಕಾವ್ಯದ ವಸ್ತುವಾಗಿ ನಮ್ಮ ಕವಿಗಳಿಗೆ ಕಂಡಿತು. ಪಾಶ್ಚಾತ್ಯ 'ರೋಮ್ಯಾಂಟಿಕ್' ಕಾವ್ಯದ ರೀತಿಯೂ ಇದೇ ಆಗಿದೆ. 'ಶ್ರೀ' ಯವರು ಭಾಷಾಂತರಿಸಿದ ಕವಿತೆಗಳೆಲ್ಲ ಇದೇ ಸಂಪ್ರದಾಯಕ್ಕೆ ಸೇರಿದವುಗಳಾದ್ದರಿಂದ, ಹಾಗೂ ಕನ್ನಡದಲ್ಲಿ ಹೊಸದಾಗಿ ಹುಟ್ಟಿದ ನಾಡು-ನುಡಿಗಳ ಅಭಿಮಾನದ ಮೂಲಕ ಹೊಸಗನ್ನಡದ ಪ್ರಾರಂಭದ ಕಾವ್ಯ 'ರೊಮ್ಯಾಂಟಿಕ್' ಸಂಪ್ರದಾಯವನ್ನೇ ತೀಡಿತು. ಆದ್ದರಿಂದ ಈ ಕಾಲ ಕಾವ್ಯದ ಮಟ್ಟಿಗೆ ವಸಂತಕಾಲವಾಗಿ ಪರಿಣಮಿಸಿತು. ಯಾವ ಬಿರುಕಿನಲ್ಲಿಯೂ ಚೈತನ್ಯ ಚಿಗುರೊಡೆಯುವಂತಾಯಿತು. ಐತಿಹಾಸಿಕವಾಗಿ ನೋಡಿದರೂ ಕೂಡ, ಹಳೆಯ ಪರಂಪರೆಯ ಬಂಧನದಿಂದ ಬಿಡುಗಡೆ ಹೊಂದಲು ಈ ಜಾತಿಯ ಕಾವ್ಯ ಅಗತ್ಯವಾಗಿತ್ತು. ವ್ಯಕ್ತಿಪ್ರಧಾನತೆ ಸ್ವಾಭಾವಿಕವಾಗಿ ಈ ಆಂದೋಲನದ ಧ್ವಜದ ಅಂಕಿತವಾಯಿತು. ವ್ಯಕ್ತಿಪ್ರಧಾನತೆಯೇ 'ರೊಮ್ಯಾಂಟಿಕ್' ಕಾವ್ಯದ ವೈಶಿಷ್ಟ್ಯ; ಬೇರೊಂದು ರೀತಿಯಲ್ಲಿ ಅದು ನವ್ಯಕಾವ್ಯದ ವೈಶಿಷ್ಟ್ಯವೂ ಹೌದು. ಮತ್ತು ಅದೇ ಪ್ರಾಚೀನ ಹಾಗೂ ಅರ್ವಾಚೀನ ಕಾವ್ಯಗಳನ್ನು ಬೇರ್ಪಡಿಸುವ ಸೀಮಾರೇಖೆಯಾಗಿದೆ.

ಸ್ಫೂರ್ತಿಯ ವೈಜ್ಞಾನಿಕಸ್ವರೂಪವೇನೇ ಇರಲಿ, ಅದರ ಮುಖ್ಯ ಲಕ್ಷಣ ವೇಗವಾಗಿದೆ. ಹೊಸ ಕವಿಗಳು ಈ ವೇಗಕ್ಕೆ ಆಕರ್ಷಿತರಾದರು. 'ಶ್ರೀ'ಯವರ 'ಕನ್ನಡದ ಬಾವುಟ', ಪಂಜೆಯವರ 'ತೆಂಕಣಗಾಳಿಯಾಟ', ಬೇಂದ್ರೆಯವರ 'ಕುಣಿಯೋಣು ಬಾರs', 'ಮೂವತ್ತುಮೂರು ಕೋಟಿ', ಕುವೆಂಪುರವರ 'ಪಾಂಚಜನ್ಯ', ವೀ. ಸಿ. ಯವರ 'ಅಭೀಃ' ಮೊದಲಾದ ಕವನಗಳಲ್ಲಿ ಸ್ಫೂರ್ತಿಯ ನಿರರ್ಗಳತೆಯನ್ನೂ ವೇಗವನ್ನೂ ಕಾಣಬಹುದಾಗಿದೆ. ಹೊಸ ಜಗತ್ತೊಂದನ್ನು ಹುಡುಕಿದ ಉದ್ರೇಕ ಈ ಕಾವ್ಯದಲ್ಲಿ ಹರಿದಾಡುತ್ತದೆ. ಹರಿಹರ, ರತ್ನಾಕರವರ್ಣಿ, ಕುಮಾರವ್ಯಾಸ, ಇಂಥ ಕೆಲವು ಕವಿಗಳನ್ನು ಬಿಟ್ಟರೆ ಹಳೆಗನ್ನಡ ಕಾವ್ಯಕ್ಕೆಲ್ಲ ಅಲಸಗಮನವೇ ಗತಿಯಾಗಿತ್ತು. ಹೊಸ ಕವಿಗಳ ಕೈಯಲ್ಲಿ ಭಾಷೆ ಮಿಂಚಿನ ವೇಗದಿಂದ ಹರಿದಾಡಲಾರಂಭಿಸಿತು. ದುಃಖವೋ, ಸುಖವೋ, ಶೃಂಗಾರವೋ, ಕರುಣವೋ, ಬಂದ ಭಾವನೆಯೆಲ್ಲ ಉತ್ಕಟವಾಗಿ ಪುಟಿಯುಹತ್ತಿತು. ಕಾವ್ಯಕ್ರಿಯೆಗೆ ವೇಗ ಬಂದಿತು.

## ಶಬ್ದಸೃಷ್ಟಿ

ಈ ವೇಗದ ಪರಿಣಾಮವಾಗಿಯೋ ಏನೋ ಶಬ್ದಸೃಷ್ಟಿಯಲ್ಲಿ ಕ್ರಾಂತಿ ತಲೆದೋರಿತು. ಸಹಜವ್ಯಾಪಾರವೆಂಬಂತೆ ಹೊಸ ಶಬ್ದಗಳು ಹುಟ್ಟಿಕೊಂಡವು. ಕನಸು, ಕಣಸು, ನಲ್, ಒಲುಮೆ, ಖುತ ಮೊದಲಾದ ನೂರಾರು ಹಳೆಯ ಶಬ್ದಗಳಿಗೆ ಹೊಸ

ಅರ್ಥ ತಂತಾನೇ ಬಂದಿತು. ಹಳೆಗನ್ನಡದ ಬಿಗುವನ್ನು ಕಳೆದುಕೊಂಡ ಭಾಷೆ ಮೈಚಳಿಬಿಟ್ಟು ಬೀಸಾಗಿ ಮಾತಾಡಲಾರಂಭಿಸಿತು. ಪಂಜೆಯವರು ಹಾಗೂ 'ಶ್ರೀ' ಯವರು ಗ್ರಂಥಸ್ಥವಾದರೂ ಸುಲಭವಾದ ಕನ್ನಡವನ್ನು ಬಳಕೆಗೆ ತಂದರು. ಮಾಸ್ತಿ ಯವರು ಹಗುರಾದ, ಸುಸಂಸ್ಕೃತವಾದ ಮೈಸೂರು-ಕನ್ನಡವನ್ನು ಉಪಯೋಗಿಸಿ ದರು. ಗೋವಿಂದ ಪೈಯವರು ಮಾತ್ರ ಹಳೆಗನ್ನಡದ ಬಿಗುವನ್ನೂ, ಅಭಿಜಾತತೆ ಯನ್ನೂ ಬಿಡಲಿಲ್ಲ. ಕಡೆಂಗೊಡ್ಲು ಶಂಕರಭಟ್ಟರ ಸಂಸ್ಕೃತಪ್ರಚುರವಾದ ಭಾಷೆ ದೇಸಿ ನುಡಿಯ ರುಚಿಯನ್ನು ಹದವರಿತು ಬಳಸಿಕೊಂಡಿತು. ಬೇಂದ್ರೆಯವರ ಕಾವ್ಯ ದಲ್ಲಿಯ ಭಾಷೆಯ ವೈವಿಧ್ಯ ವಿಸ್ಮಯಜನಕವಾಗಿದೆ. ಉತ್ತರ ಕರ್ನಾಟಕದ ಬಳಕೆ-ಗನ್ನಡದಿಂದ ಹಿಡಿದು, ರಮ್ಯಸಂಸ್ಕೃತದಿಂದ ಕೂಡಿದ ಪಂಡಿತರ ಭಾಷೆಯ ವರೆಗೆ ಅದರ ವ್ಯಾಪ್ತಿಯಿದೆ. ಕರ್ನಾಟಕದ ಸಮಗ್ರ ಶಬ್ದಸೃಷ್ಟಿಗೂ ಅವರು ಸ್ವಾಗತವಿತ್ತಿದ್ದಾರೆ. ಕುವೆಂಪುರವರ ಪದ್ಯಶೈಲಿ ಹಳೆಗನ್ನಡದಿಂದ ಕೆಚ್ಚನ್ನೂ, ಸಂಸ್ಕೃತದಿಂದ ಅಲಂಕಾರವನ್ನೂ, ಇಂಗಿಶ್‌ದಿಂದ ಲಘುತ್ವವನ್ನೂ ಪಡೆದುಕೊಂಡಿದೆ. ವಿನಾಯಕರು ಬೇರೇಬೇರೆ ವಿಜ್ಞಾನಗ್ರಂಥಗಳಿಂದ, ಇಂಗ್ಲಿಶ್‌ಸಾಹಿತ್ಯದಿಂದ, ಶಬ್ದಸಾಮಗ್ರಿಯನ್ನು ಪಡೆದುಕೊಂಡರು. ಮಧುರಚನ್ನರ ಭಾಷೆ ಗರತಿಯರ ಹಾಡುಗಳ ಸಹಜತೆಯ ಸತ್ವವನ್ನು, ಅನುಭಾವಪದಗಳ ಪರಿಭಾಷೆಯನ್ನು, ವಚನಕಾರರ ಸರಳತೆಯನ್ನು ಮೈಗೂಡಿಸಿಕೊಂಡಿದೆ. 'ಯೆಂಡ್ಕುಡುಕನ ಪದ' ಗಳಲ್ಲಿ ಜಿ. ಪಿ. ರಾಜರತ್ನಂರು ಉಪಯೋಗಿಸಿದ ಗ್ರಾಮ್ಯಭಾಷೆಗೆ ಒಂದು ಅನನ್ಯತೆಯಿದೆ. ಅದು ಕವಿಯ ವಿ ಮನೋಧರ್ಮಕ್ಕೂ ಆ ಗೀತಗಳ ಪರಿಸರಕ್ಕೂ ಹಿಡಿದ ಕನ್ನಡಿಯಾಗಿದೆ. ಮುಗುಳಿ ಯವರ ಆಳವಾದ ಅಭ್ಯಾಸ ಅವರ ಶೈಲಿಗೆ ಲಾಲಿತ್ಯವನ್ನು ತಂದುಕೊಟ್ಟಿದೆ. ಹೀಗೆ ಹೊಸ ಕವಿಗಳು ಕನ್ನಡ ಭಾಷೆಯ ಅನೇಕ ಶಕ್ತಿಗಳನ್ನು ಉಪಯೋಗ ಮಾಡಿ ಕೊಂಡಿದ್ದಾರೆ.

## ಛಂದಸ್ಸು

ಭಾಷೆಗಿಂತ ಛಂದಸ್ಸು ಇನ್ನೂ ಹೆಚ್ಚಿನ ಬದಲಾವಣೆಯನ್ನು ಪಡೆಯಿತು. ಗಣರಚನೆ ಹಳೆಯ ರಗಳೆಗಳನ್ನೇ ಅನುಸರಿಸಿದರೂ ನಾಲ್ಕು ಸಾಲುಗಳ ನುಡಿಕಟ್ಟು ಹೆಚ್ಚು ಪ್ರಿಯವಾಗುತ್ತ ಬಂದಿತು. ಲಯ ಭಾವಗತಿಯನ್ನು ಅನುಸರಿಸತೊಡಗಿತು. ಆದಿಪ್ರಾಸ ಹೊರಟು ಹೋಗಿ ಅಂತ್ಯಪ್ರಾಸ ಹೆಚ್ಚು ಸ್ಥಿರವಾಗಿ ನೆಲೆಗೊಂಡಿತು. ಸಾಮಾನ್ಯವಾಗಿ 'ಇಂಗ್ಲಿಷ್ ಗೀತಗಳ'ಲ್ಲಿಯ ಛಂದೋವಿತಾನ ಈ ರೀತಿಯದಾಗಿದೆ. ಛಂದಸ್ಸಿನ ಕ್ಷೇತ್ರದಲ್ಲಿ ಬೇಂದ್ರೆಯವರು ಮಾಡಿದ ಪ್ರಯತ್ನ ಅದ್ಭುತವಾಗಿದೆ. ಕನ್ನಡ ಕಾವ್ಯ ಇಂಗ್ಲಿಶ್ ಕಾವ್ಯವನ್ನು ಸಂಪೂರ್ಣವಾಗಿ ಮತ್ತು ಅಕ್ಷರಶಃ ಅನುಸರಿಸಬಾರ ದೆಂದು ಅವರ ಮತವಾಗಿದೆ. ಅದಕ್ಕಾಗಿ ಕನ್ನಡ ಭಾಷೆಗೆ ಸಹಜವಾಗಿರುವ ಅನೇಕ ಗತ್ತುಗಳನ್ನು ಅವರು ಹುಡುಕಿದರು. ಇಂಗ್ಲಿಶ್ ಛಂದಸ್ಸಿನ ಪ್ರಭಾವದಿಂದುಂಟಾದ ಸ್ವಾತಂತ್ರ್ಯವನ್ನೂ ಅವರು ಅಲ್ಲಗಳೆಯಲಿಲ್ಲ. ಪ್ರಾಚೀನವಾದ ಅಕ್ಷರವೃತ್ತ, ಮಾತ್ರಾ ವೃತ್ತಗಳ ನಿಯಮಬದ್ಧತೆಯನ್ನು, ಸಹಜಯತಿಯನ್ನು, ಅಂಶವೃತ್ತಗಳ ಮನೋಹರ

ವಾದ ಲಯವನ್ನು, ಜಾನಪದ ಕಾವ್ಯದ ವಿವಿಧ ಬೆಡಗು-ಬಿನ್ನಾಣಗಳನ್ನು, ವೈದಿಕ ಛಂದದ ಸ್ವರಪ್ರಾಶಸ್ತ್ಯವನ್ನು, ಲಾವಣಿ-ಹಾಡುಗಬ್ಬಗಳ ಗೇಯತೆಯನ್ನು ಅವರು ಹೊಸಗನ್ನಡ ಛಂದಸ್ಸಿಗೆ ತಂದು ಜೋಡಿಸಿದರು. ದಾಸರ ಹಾಡುಗಳ ಗೀತಪದ್ಧತಿ, ವಚನಕಾರರ ಮಾತಿನ ಲಯ ಅವರ ಛಂದಸ್ಸಿಗೆ ವೈವಿಧ್ಯದ ದೀಕ್ಷೆಯನ್ನು ಕೊಟ್ಟವು. ಅವರೇ ರಚಿಸಿದ ಕನ್ನಡ 'ಮೇಘದೂತ'ದ ರಗಳೆಯ ಮಾದರಿಯ ನವೀನವೃತ್ತವು ಬರಬರುತ್ತ ಹೆಚ್ಚು ಲೋಕಪ್ರಿಯವಾಗತೊಡಗಿದೆ. ಇಂಗ್ಲಿಶ್ 'heroic couplet' ಕಥನಕವನ, ವೈಚಾರಿಕ ಹಾಗೂ ವಿಡಂಬನದ ಕವಿತೆಗಳಿಗೆ ತೀರ ಯೋಗ್ಯವಾದ ವೃತ್ತವಾಗಿ ಪರಿಣಮಿಸಿದೆ. ಬೇಂದ್ರೆಯವರ ಬಹುಶಃ ಎಲ್ಲ ಕವನಗಳೂ ಛಂದಸ್ಸಿನ ದೃಷ್ಟಿಯಿಂದ ಹೊಸ ಪ್ರಯೋಗಗಳಾಗಿವೆ. 'ಸಖೀಗೀತ'ದಲ್ಲಿ ಅಕ್ಕರ ಸಾಂಗತ್ಯ ಗಳೆರಡನ್ನೂ ಕೂಡಿಸಿ, ಸಂಸ್ಕಾರಗೊಳಿಸಿದ ಹೊಸ ವೃತ್ತವೊಂದನ್ನು ಅವರು ಉಪ ಯೋಗಿಸಿದ್ದಾರೆ. 'ಹಕ್ಕಿ ಹಾರುತಿದೆ', 'ಭಾವಗೀತ' 'ನೃತ್ಯಯಜ್ಞ', 'ನಾದ ಲೀಲೆ' ಮುಂತಾದ ಕವಿತೆಗಳ ಛಂದಸ್ಸು ಮಾರ್ಗಸಂಪ್ರದಾಯದ್ದು. 'ಕಾಮ ಕಸ್ತೂರಿ'ಯಲ್ಲಿ ಜಾನಪದ ಧಾಟಿಯ ಹಾಡುಗಳಿವೆ. 'ಉಯ್ಯಾಲೆ'ಯಲ್ಲಿ ಪ್ರಾಸ ರಹಿತ ಸುನೀತಗಳು ಹಾಗೂ ಸೀಸಪದ್ಯಗಳನ್ನು ಕಾಣಬಹುದು. 'ಕರುಳಿನ ವಚನ ಗಳು' ಆಧುನಿಕವಾದ ವಚನಗಳ ರೀತಿಯಲ್ಲಿವೆ. 'ಎಲ್ಲಿರುವೆ ರಾಜಗಂಭೀರಾ' 'ರಾಧೆಯ ಪಾಡು' ಮೊದಲಾದವುಗಳು ಸುಂದರವಾದ ನಾಟ್ಯಗೀತಗಳಾಗಿವೆ.

ಮುಗಳಿ ಹಾಗೂ ಆನಂದಕಂದರು ಹಾಡುಗಬ್ಬಗಳನ್ನು ಹೆಚ್ಚು ಬಳಕೆಗೆ ತಂದರು. ಸಾಲಿ ರಾಮಚಂದ್ರರಾಯರ 'ಅಭಿಸಾರ' ಹಾಗೂ 'ತಿಲಾಂಜಲಿ'ಗಳಲ್ಲಿ ನುಡಿಕಟ್ಟಿನ ಶಿಲ್ಪಬಂಧವಿದೆ. 'ಶ್ರೀ'ಯವರ 'ಅಶ್ವತ್ಥಾಮನ್'ದಲ್ಲಿಯ ಮೇಳಗೀತ ಗಳು, ಪು.ತಿ.ನ ಅವರ ರೂಪಕಗೀತಗಳು ನಮ್ಮ ಗೇಯಕಾವ್ಯಕ್ಕೆ ಬೆಲೆಯುಳ್ಳ ಕಾಣಿಕೆ ಗಳಾಗಿವೆ. ವಿನಾಯಕರ 'ಸಮುದ್ರಗೀತ'ಗಳಲ್ಲಿಯ ಮುಕ್ತಛಂದಸ್ಸು ತನ್ನ ಆಳ ವಿಸ್ತಾರಗಳಿಂದ ಸ್ವತಂತ್ರ ಸ್ಥಾನವನ್ನು ಕಲ್ಪಿಸಿಕೊಂಡಿದೆ. ಮಧುರಚೆನ್ನರು 'ದೇವತಾ ಪೃಥಿವೀ'ಯಲ್ಲಿ ತ್ರಿಪದಿಯನ್ನು ಸರ್ವಜ್ಞನಿಗಿಂತ ತೀರ ಭಿನ್ನವಾದ ರೀತಿಯಲ್ಲಿ ಸಂಸ್ಕಾರಗೊಳಿಸಿದರು.

ಇಂಗ್ಲಿಶ್‌ದಿಂದ ನೇರವಾಗಿ ಕನ್ನಡಕ್ಕೆ ಬಂದ ಎರಡು ಕಾಣಿಕೆಗಳನ್ನು ನಾವು ಮರೆಯುವಂತಿಲ್ಲ. ಸುನೀತ ಹಾಗೂ ಸರಳರಗಳೆಗಳು ನಮ್ಮ ಕೆಲವು ನೆರೆಭಾಷೆ ಗಳಲ್ಲಿಗಿಂತ ಕನ್ನಡದಲ್ಲಿ ಹೆಚ್ಚು ಯಶಸ್ವಿಯಾಗಿವೆ. ಈ ಛಂದದ ನಡಿಗೆಯನ್ನು ಕನ್ನಡ ಸಹಜವೆಂಬಂತೆಯೇ ಕಲಿತುಬಿಟ್ಟಿದೆ. ಐದೈದು ಮಾತ್ರೆಗಳ, ನಾಲ್ಕು ಗಣಗಳ ಒಂದು ಚರಣ (iambic) ಛಂದದ ಚರಣಕ್ಕೆ ಅಪರೂಪವಾಗಿ ಪ್ರತಿಸ್ಪಂದಿಯಾಗಿದೆ. ಮಾಸ್ತಿಯವರು 'ಮಲಾರ'ದಲ್ಲಿ ಸುನೀತವನ್ನು ಅಚಲವಾಗಿ ನೆಲೆಗೊಳಿಸಿದರು. ಶೇಕ್ಸಪಿಯರ್, ಮಿಲ್ಟನ್, ವರ್ಡ್ಸವರ್ಥ ಮೊದಲಾದ ಆಂಗ್ಲ ಸುನೀತಕಾರರನ್ನೇ ಮಾದರಿಯಾಗಿಟ್ಟುಕೊಂಡಿದ್ದರೂ, ಮಾಸ್ತಿಯವರ ಸುನೀತ ಭಾಷೆಯ ಸಹಜತೆ ಹಾಗೂ ಅರ್ಥಗೌರವದಿಂದ ಸ್ವತಂತ್ರವಾಗಿದೆ. ನಿಯಮಬದ್ಧವಾದ ಸುನೀತದ ಬಂಧ, ಮಾಸ್ತಿಯವರ ಭಾವಾವೇಶಗಳ ಗೊಂದಲವಿಲ್ಲದ ಮನೋಧರ್ಮಕ್ಕೆ

ಹೊಂದಿಕೊಂಡುಬಿಟ್ಟಿದೆ. ಬೇಂದ್ರೆಯವರ ಅಷ್ಟಷಟ್ಪದಿಗಳು ಸುನೀತದ ಪ್ರಾಸ-ಯೋಜನೆಯನ್ನೂ ಬಿಟ್ಟು ಹೆಚ್ಚು ಸ್ವತಂತ್ರವಾದವು. ಪ್ರಾಸಕ್ಕಿಂತ ಅರ್ಥಯತಿಗೆ ಅವರು ಹೆಚ್ಚು ಪ್ರಾಮುಖ್ಯವನ್ನು ಕೊಟ್ಟಿದ್ದಾರೆ. ಅವರ ' ಉಯ್ಯಾಲೆ 'ಯಲ್ಲಿ ಕನ್ನಡದಲ್ಲಿಯ ಕೆಲ ಅತ್ಯುತ್ತಮ ಸುನೀತಗಳನ್ನು ಕಾಣಬಹುದಾಗಿದೆ. ವಿನಾಯಕರ ' ಅಭ್ಯುದಯ 'ದಲ್ಲಿಯ ಸುನೀತಗಳು, ಸುನೀತಕ್ಕೆ ಅವಶ್ಯವಾದ ಎಲ್ಲ ನಿಯಮಗಳನ್ನು ಪಾಲಿಸಿದಂಥವುಗಳಾಗಿವೆ. ವಿನಾಯಕರು ಆಂಗ್ಲ ಸುನೀತಕಾರರ ಕೆಲ ಮಾದರಿಗಳನ್ನು ಅಲ್ಲಿ ಕೊಟ್ಟಿದ್ದಾರಲ್ಲದೆ, ಸುನೀತದ ತಂತ್ರ, ವಿಷಯವ್ಯಾಪ್ತಿ, ಶೈಲಿಗಳನ್ನು ಆದರ್ಶಪ್ರಾಯವಾಗಿ ತೋರಿಸಿದ್ದಾರೆ. ಕುವೆಂಪುರವರ ' ಕೃತ್ತಿಕೆ 'ಯಲ್ಲಿ ಕೆಲ ಮನೋಜ್ಞವಾದ ಸುನೀತಗಳಿವೆ. ಆದರೆ ಇವುಗಳು ವಿಚಾರಕ್ಕಿಂತ ರಮ್ಯ ವರ್ಣನೆಗಳಿಗೆ ಹೆಚ್ಚು ಮೀಸಲಾದವುಗಳು. ಈಶ್ವರ ಸಣಕಲ್ಲರ ಸುನೀತಮಾಲೆ ( sonnet - sequence ) ಕಾವ್ಯದ ದೃಷ್ಟಿಯಿಂದಲೂ, ಅಭ್ಯಾಸದ ದೃಷ್ಟಿಯಿಂದಲೂ ಗಮನಾರ್ಹವಾಗಿದೆ. ಇದಲ್ಲದೆ ಕೆ. ಎಸ್. ಎನ್., ಪು. ತಿ. ನ, ಚನ್ನವೀರ ಕಣವಿ ಮೊದಲಾದವರೂ ಸುನೀತಗಳನ್ನು ಬರೆದಿದ್ದಾರೆ. ಜಗತ್ತಿನ ಕಾವ್ಯದ ಇತಿಹಾಸದಲ್ಲಿಯೇ ಸುನೀತ ತನ್ನ ರೂಪವೈಶಿಷ್ಟ್ಯವನ್ನು ಕಾಯ್ದುಕೊಂಡು ಬಂದಿದೆ. ಕನ್ನಡ ಕವಿಗಳು ಅದರ ಒಳ ತಿರುಳನ್ನು ಅರಿತುಕೊಂಡು ಮುಕ್ತಮನಸ್ಸಿನಿಂದ ಅದಕ್ಕೆ ತಮ್ಮ ಪ್ರತಿಭೆಯನ್ನು ನೀಡಿದ್ದಾರೆ. ಬೇಂದ್ರೆಯವರ 'ಅಷ್ಟಷಟ್ಪದಿ'ಯನ್ನು ಈ ದೃಷ್ಟಿಯಿಂದ ನೋಡಬಹುದಾಗಿದೆ. ಆದರೆ ಇನ್ನೂ ಶೃಂಗಾರಪ್ರಧಾನವಾದ ಸುನೀತಗಳ ಸಂಗ್ರಹವಾಗಲಿ, ತತ್ವಮೀಮಾಂಸೆಯನ್ನು ಸುನೀತದ ಶಿಲ್ಪಬಂಧದಲ್ಲಿ ಪ್ರಕಟಿಸುವ ಒಂದು ಕೃತಿಯಾಗಲಿ ಹುಟ್ಟಿಲ್ಲ. ಸುನೀತವನ್ನು ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಮಾಡಿಕೊಂಡ ಕವಿ ಇನ್ನೂ ಬರಬೇಕಾಗಿದೆ.

ಸುನೀತಕ್ಕಿಂತ ಸರಳರಗಳೆ ನಮ್ಮ ಕಾವ್ಯದ ಹೆಚ್ಚು ಭಾಗವನ್ನು ವ್ಯಾಪಿಸಿಕೊಂಡಿದೆ. ಸರಳರಗಳೆಯ ಅರ್ಥಯತಿ ಹಾಗು ಸಾಲುಗಳು ಅವ್ಯಾಹತವಾಗಿ ಸಾಗುವ ರೀತಿ ( run-on-lines ) ಇವು ಎಂದಿನಿಂದಲೂ ಕನ್ನಡ ಛಂದಸ್ಸಿನ ಪ್ರಮುಖ ಗುಣಗಳಾಗಿವೆ. ನಮ್ಮ ಷಟ್ಪದಿಕಾರರ ವಿಪುಲ ಪ್ರಯೋಗಗಳಿಂದ ಸರಳರಗಳೆ ಇನ್ನೂ ಹೆಚ್ಚು ಪಾಠಗಳನ್ನು ಕಲಿಯಬಹುದಾಗಿದೆ.

ಐದು ಮಾತ್ರೆಗಳ ಗಣಪದ್ಧತಿಯಿಂದ ಈಗಿರುವ ಸರಳರಗಳೆಯ ಲಯ ಗಂಭೀರವಾಗಿದೆ. ಹಳೆಗನ್ನಡದ ಪದರಚನೆಯನ್ನು ಅನುಸರಿಸುವದರ ಮೂಲಕ ಅದಕ್ಕೆ ಅವಶ್ಯವಾದ ಗೌರವವೂ ಇದೆ. ಉಳಿದ ಕಡೆಗಳಲ್ಲಿಯಂತೆ ಕನ್ನಡದಲ್ಲಿಯೂ ಸರಳರಗಳೆ, ಕಥನಕವನ, ಪದ್ಯನಾಟಕ ಹಾಗೂ ಮಹಾಕಾವ್ಯಗಳ ಮಾಧ್ಯಮವಾಗಿ ಉಪಯೋಗಿಸಲ್ಪಟ್ಟಿದೆ. ಸರಳರಗಳೆಯನ್ನು ಸಮರ್ಥವಾಗಿ ಬಳಸಿದವರಲ್ಲಿ ಕುವೆಂಪು ಅವರ ಹೆಸರನ್ನು ಮೊದಲು ಹೇಳಬೇಕು. 'ರಕ್ತಾಕ್ಷಿ', 'ಬಿರುಗಾಳಿ', 'ಸ್ಮಶಾನ ಕುರುಕ್ಷೇತ್ರಂ' ಮೊದಲಾದ ಪದ್ಯನಾಟಕಗಳಲ್ಲಿ, ಹಾಗೂ 'ಚಿತ್ರಾಂಗದಾ', 'ರಾಮಾಯಣ ದರ್ಶನಂ'ದಂಥ ಮಹಾಕಾವ್ಯಗಳಲ್ಲಿ ಅವರು ಸರಳರಗಳೆಯನ್ನು ಉಪಯೋಗಿಸಿದ್ದಾರೆ. ಅವರ ಮೊದಲಿನ ಕೃತಿಗಳಲ್ಲಿ ಸರಳರಗಳೆ ಸಡಿಲಾಗಿಯೇ ಬಂದಿದೆ. 'ಶೀರ

ದಲ್ಲೆ ದುರುಗೊಳ್ಳಬೇಕಜ್ಜಾ ಹೊರಡೋಣ', 'ಮನುಜಂ ದೇವಂ ತಾನಾದಪಂ' ಇಂಥ ಶಿಥಿಲವಾದ ಸಾಲುಗಳನ್ನು ಬೇಕಾದಲ್ಲಿ ಭೆಟ್ಟಿಯಾಗಬಹುದು. ಮತ್ತೆ ಕೆಲವು ಕಡೆಗೆ ಸಂಸ್ಕೃತದ ಅತಿ ಬಳಕೆಯಿಂದ ಕನ್ನಡ ಭಾಷೆಯ ಲಯದ ಹದ ತಪ್ಪಿದೆ. 'ರಾಮಾಯಣದರ್ಶನ'ದಲ್ಲಿ ಮಾತ್ರ ಪ್ರೌಢಾವಸ್ಥೆಗೆ ಮುಟ್ಟಿದ ಛಂದಸ್ಸು ಮದ್ದಾನೆ ಯಂತೆ ಶಕ್ತಿಸಾಮರ್ಥ್ಯಗಳಿಂದ ಸಂಚರಿಸುವದನ್ನು ಕಾಣಬಹುದಾಗಿದೆ. 'ಶಿಲಾ ತಪಸ್ವಿನಿ', 'ಪಂಚವಟಿ', 'ಶಬರಿಗಾದನು ಅತಿಥಿ ದಾಶರಥಿ' ಈ ಅಧ್ಯಾಯಗಳ ಗಾಂಭೀರ್ಯ ಹಾಗೂ ವೈವಿಧ್ಯಗಳು ಕುವೆಂಪುರವರ ಭಾಷೆಯ, ಛಂದಸ್ಸಿನ ಪ್ರಭು-ತ್ವಕ್ಕೆ ಸಾಕ್ಷಿಯಾಗಿವೆ. ಸರಳರಗಳೆಯ ಗಂಭೀರಲಯಕ್ಕೆ ಭಿನ್ನವಾಗಿ ಒಮ್ಮೊಮ್ಮೆ ಭಾವಗೀತಗಳಂಥ ಸಾಲುಗಳು ಹೊಳೆದು, ಛಂದಸ್ಸಿನ ಏಕತಾನವನ್ನು ಇಲ್ಲದಾಗಿಸು ತ್ತವೆ. ಅವರ ಪದ್ಯನಾಟಕಗಳಲ್ಲಿ ಯಶಸ್ವಿಯಾಗದಿದ್ದ ಸಂಭಾಷಣೆ ಇಲ್ಲಿ ಆಡು-ನುಡಿಗೆ ಸಮೀಪವಾಗಿ ಬಂದಿದೆ.

ಮಾಸ್ತಿಯವರು ಕಥನಕವನಗಳಲ್ಲಿ ಸರಳರಗಳೆಯನ್ನು ಉಪಯೋಗಿಸಿದ್ದಾರೆ. ಬಳಕೆಮಾತಿನ ವಿಪುಲವಾದ ಉಪಯೋಗ, ಬೇಕೆಂದೇ ಮಾಡಿದ ಛಂದೋಭಂಗ, ಇವುಗಳಿಂದಾಗಿ ಮಾಸ್ತಿಯವರ ಸರಳರಗಳೆಗೆ ಆಡುವ ಮಾತಿನ ಲಯ (speech rhythm) ಇದೆ. ಭಾವಕ್ಕಿರುವ ತರಂಗಗತಿಯನ್ನು ಅವರ ಸರಳರಗಳೆಯ ಲಯ ಅನುಸರಿಸುತ್ತದೆ. ವಿನಾಯಕರ 'ಎಡಿನ್‌ಬರೋ ಕೋಟೆಯ ತುದಿಗೆ ನಿಂತು' ಮುಂತಾದ ಕವಿತೆಗಳಲ್ಲಿ, 'ತ್ರಿವಿಕ್ರಮರ ಆಕಾಶಗಂಗೆ' ಯಂಥ ಕಾವ್ಯಖಂಡಗಳಲ್ಲಿ ಕಂಡುಬರುವ ಸರಳರಗಳೆ ಓಜಸ್ವಿಯಾಗಿದೆ. ಮಾಸ್ತಿ ಹಾಗೂ ವಿನಾಯಕರು ಹಳೆ-ಗನ್ನಡ ಪದಪ್ರಯೋಗದ ಹಂಗನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟದ್ದು ವಿಶೇಷದ ಮಾತಾಗಿದೆ. ಎಂ. ಆರ್. ಶ್ರೀಯವರ 'ನಾಗರಿಕ' ದಲ್ಲಿ ಯಶಸ್ವಿಯಾದ ಸರಳರಗಳೆ ಅವರ 'ಧರ್ಮದುರಂತ' ದಲ್ಲಾಗಿಲ್ಲ. ಕನ್ನಡದಲ್ಲಿ ಸರಳರಗಳೆ ಇನ್ನೂ ಬೆಳವಣಿಗೆಯ ಸ್ಥಿತಿಯಲ್ಲಿದೆ. ತೇಜಸ್ವಿತೆ ಗೌರವ ಮೊದಲಾದ ಗುಣಗಳು ಅದಕ್ಕಿವೆಯಾದರೂ ಆಡುವ ಮಾತಿನ ಲಯವನ್ನು ಪಡೆಯುವಷ್ಟು ಹದ ಇನ್ನೂ ಬಂದಿಲ್ಲ. ಸರಳರಗಳೆಯಲ್ಲಿ ಬರೆದ ನಾಟಕಗಳು ಹತ್ತುಹನ್ನೆರಡಕ್ಕಿಂತ ಹೆಚ್ಚಿಲ್ಲವೆಂಬುದೇ ಇದಕ್ಕೆ ಕಾರಣವಾಗಿದೆ.

ಇನ್ನು ಮುಂದೆ ನಮ್ಮ ಹಳೆಯ ಷಟ್ಪದಿ ಕಂದಪದ್ಯಗಳ ಗತಿ ಏನಾಗಬಹುದು ಎಂಬ ಪ್ರಶ್ನೆಯೊಂದಿದೆ. ಸಾಲಿ ರಾಮಚಂದ್ರರಾಯರು ತಮ್ಮ ಹೆಚ್ಚು ಕವಿತೆಗಳನ್ನು ಷಟ್ಪದಿಗಳಲ್ಲಿ ರಚಿಸಿದ್ದಾರೆ. 'ಬೇಸಗೆ', 'ಕೊಡಗು', 'ಇಂಚರ' ಈ ಪದ್ಯಗಳು ಛಂದಸ್ಸಿನ ದೃಷ್ಟಿಯಿಂದ ಚನ್ನಾಗಿವೆ. ಬೇಂದ್ರೆಯವರ 'ಕೃಷ್ಣಾಕುಮಾರಿ' ಎಂಬ ಕಥನಕವನ ವಾರ್ಧಕಷಟ್ಪದಿಯಲ್ಲಿ ರಚಿತವಾಗಿದ್ದು, ಅದರ ರಚನೆ ಲಕ್ಷ್ಮೀಶನ ಪ್ರಭಾವವನ್ನು ಒಳಗೊಂಡಿದೆ. ಅವರ ಮುಂದಿನ ಷಟ್ಪದಿಗಳಾದ 'ನಿದ್ದೆ' 'ಶಾಂತ ಕವಿಗಳು', 'ಜೇನುಹುಟ್ಟು', 'ರವದಿ' ಈ ಕವಿತೆಗಳು ಉತ್ತಮ ಭಾವಗೀತ ಗಳಾಗಿವೆ. ಅವರು ವಾರ್ಧಕವಲ್ಲದೆ, ಶರ, ಕುಸುಮ ಷಟ್ಪದಿಗಳಲ್ಲೂ ಬರೆದಿದ್ದಾರೆ. ಭಗವದ್ಗೀತೆಯ ಮೂರು ನಾಲ್ಕು ಭಾಷಾಂತರಗಳು ಭಾಮಿನಿಷಟ್ಪದಿಯಲ್ಲಾಗಿವೆ. ಜಿ. ಪಿ. ರಾಜರತ್ನಂರು ತಮ್ಮ 'ಪುರುಷಸರಸ್ವತಿ'ಯಲ್ಲಿ ವಿಡಂಬನಕ್ಕಾಗಿಯೋ

ಪ್ರಾಚೀನ ವೃತ್ತಗಳನ್ನು ಆರಿಸಿಕೊಂಡರು. ಸದ್ಯದ ಪರಿಸ್ಥಿತಿ ಹೀಗಿರುವಾಗ ಪ್ರಾಚೀನ ವೃತ್ತಗಳ ಭವಿತವ್ಯವೇನು ಎಂದು ಪ್ರಶ್ನೆಯೇಳುವದು ಸಹಜವಾಗಿದೆ. ಕಾವ್ಯವಸ್ತು ಪ್ರಾಚೀನವಿದ್ದಾಗ ಮಾತ್ರ ಅವುಗಳನ್ನು ಉಪಯೋಗಿಸಬೇಕೆ ? ಅಥವಾ ವಿಡಂಬನಕ್ಕಂದೇ ಅವುಗಳನ್ನು ತರಬೇಕೇ ? ಈಗಿದ್ದಂತೆಯೇ ಅವುಗಳ ಮೂಲಕ ಸಹಜವಾದ ಅಭಿವ್ಯಕ್ತಿ ಸಾಧ್ಯವಾಗುವದಿಲ್ಲ. ಇಲ್ಲಿ ಇಂಗ್ಲಿಶ್ ಕಾವ್ಯದ ಇತಿಹಾಸ ದಿಂದ ನಾವು ಒಂದು ಪಾಠವನ್ನು ಕಲಿಯಬಹುದಾಗಿದೆ. ಮುಕ್ತಛಂದಸ್ಸು ಹಾಗೂ ನವ್ಯಛಂದಸ್ಸುಗಳ ಈ ಯುಗದಲ್ಲಿಯೂ ಇಂಗ್ಲಿಶ್ ಕವಿಗಳು 'ode, sonnet' ದಂಥ ಪುರಾತನ ವೃತ್ತಗಳನ್ನು ಕೈಬಿಟ್ಟಿಲ್ಲ. ವೃತ್ತ ಹಳೆಯದಾದರೂ ಅದರಲ್ಲಿ ಹೊಸ ದನಿ ಹುಟ್ಟುವಂತೆ ಮಾಡಿದ್ದಾರೆ. ಷಟ್ಪದಿಯ ಉಪಯೋಗವನ್ನು ನಮ್ಮ ಹಳೆಯ ಕವಿಗಳೂ ಪೂರ್ಣವಾಗಿ ಮಾಡಿಕೊಂಡಿಲ್ಲ. ವಾರ್ಧಕ ಭಾಮಿನಿಗಳನ್ನು ಬಿಟ್ಟರೆ ಉಳಿದ ಪ್ರಕಾರಗಳು ಕೇವಲ ಲಕ್ಷಣಗ್ರಂಥಗಳಲ್ಲಿಯೇ ಉಳಿದುಕೊಂಡಿವೆ. ಹೊಸ ಭಾಷೆಯ ಲಯಕ್ಕೆ ತಕ್ಕಂತೆ ಅವುಗಳ ಗಣರಚನೆಯನ್ನು, ಯತಿಯನ್ನು ಬದಲು ಮಾಡಿ ಪದ್ಯರಚನೆ ಮಾಡುವದು ಸಾಧ್ಯವಿದೆ. ವಿನಾಯಕರು ತಮ್ಮ 'ಬಾಳದೇಗುಲ ದಲ್ಲಿ' ಎಂಬ ಕಾವ್ಯಸಂಗ್ರಹದಲ್ಲಿ ಇಂಥ ಅನೇಕ ಮಹತ್ವದ ಪ್ರಯೋಗಗಳನ್ನು ಮಾಡಿದ್ದಾರೆ. 'ರೂಪಾರಾಧಕ', 'ಉದಾರಚರಿತ', 'ಕಾವ್ಯಗುರು' ಈ ಪದ್ಯಗಳ ಆಧುನಿಕತೆಗೆ ಯಾವ ಬಗೆಯಿಂದಲೂ ಕುಂದು ಬಂದಿಲ್ಲ. ಸರ್ವಜ್ಞಕವಿ ತ್ರಿಪದಿಗೆ ಅಭಿಜಾತದೀಕ್ಷೆಯನ್ನು ಕೊಟ್ಟಂತೆ, ಸಾಂಗತ್ಯವನ್ನೂ ಹೊಸ ರುಚಿಗೆ ತಕ್ಕಂತೆ ಮಾರ್ಪಡಿಸಬಹುದಾಗಿದೆ. ಹೊಸತನದ ಮೇಲಿನ ಪ್ರೀತಿಯೊಂದಿಗೆ, ಇತಿಹಾಸದ ಅರಿವು ಕೂಡ ಆಧುನಿಕತೆಯ ಲಕ್ಷಣವಾಗಿದೆ.

ಹೀಗೆ ಛಂದಸ್ಸು ಹಾಗೂ ಭಾಷೆ ಈ ಎರಡು ವಿಷಯಗಳಲ್ಲಿ ಕನ್ನಡ ಕಾವ್ಯ ಸಂಪೂರ್ಣವಾಗಿ ಹೊಸ ಜನ್ಮವೆತ್ತಿ ನಿಂತಿದೆ. ಕವಿಗಳಲ್ಲಿ ಮೂಡಿದ ಹೊಸತನದ ಪ್ರಜ್ಞೆಯೇ ಇದಕ್ಕೆ ಕಾರಣವೆಂಬುದನ್ನು ಮರೆಯಲಾಗದು. ಮೈಸೂರಿನಲ್ಲಿ 'ಶ್ರೀ'ಯವರು 'ಇಂಗ್ಲಿಷ್ ಗೀತ'ಗಳನ್ನು ಬರೆದು ಈ ಹೊಸ ಆಂದೋಲನಕ್ಕೆ ಕಾರಣ ರಾದರೆ, ಧಾರವಾಡದಲ್ಲಿ ಬೇಂದ್ರೆಯವರು 'ಗೆಳೆಯರ ಗುಂಪ'ನ್ನು ಕಟ್ಟಿ ಹೆಚ್ಚು ಕಡಿಮೆ ಅದೇ ಬಗೆಯ ಆಂದೋಲನಕ್ಕೆ ಕಾರಣರಾದರು. ಮಂಗಳೂರಿನಲ್ಲಿಯೂ ಹೊಸತನದ ಗಾಳಿ ಬೀಸದೆ ಇರಲಿಲ್ಲ. ಗೋವಿಂದ ಪೈ, ಶಂಕರಭಟ್ಟ ಮೊದಲಾದ ಕವಿಗಳು ಹೊಸ ಕಾವ್ಯವನ್ನು ರೂಪಿಸಿದರು. ಈ ಮೂರು ಪ್ರಾದೇಶಿಕ ಆಂದೋ ಲನಗಳೂ ಒಂದೊಂದು ವೈಶಿಷ್ಟ್ಯದಿಂದ ಕೂಡಿದವುಗಳಾಗಿವೆ. 'ಶ್ರೀ'ಯವರು ಮುಖ್ಯವಾಗಿ ಪಾಶ್ಚಾತ್ಯ ಕಾವ್ಯದ ಸತ್ವವನ್ನು ಕನ್ನಡದಲ್ಲಿ ತರಲು ಪ್ರಯತ್ನಿಸಿದರು. 'ಇಂಗ್ಲಿಷ್ ಗೀತ'ಗಳಿಂದ ಹಿಡಿದು 'ಹೊಂಗನಸು'ಗಳ ವರೆಗೆ ಅವರ ಎಲ್ಲ ಕೃತಿಗಳೂ ಈ ಬಗೆಯ ಪ್ರಭಾವಕ್ಕೊಳಗಾಗಿವೆ. ಗೆಳೆಯರ ಗುಂಪಿನ ಮೇಲೆ ಅಯರ್ಲಂಡದ ನವೋದಯ ಸಾಹಿತ್ಯದ ಪ್ರಭಾವ ಹಾಗೂ ಭಾರತದ ನವೋದಯಕ್ಕೆ ಕಾರಣ ಕರ್ತರಾದ ರವೀಂದ್ರರು ಹಾಗೂ ಅರವಿಂದರ ಪ್ರಭಾವ ಬಿದ್ದಿವೆ. ಅದರ ಜೊತೆಗೇ ವರ್ಡ್ಸ್‌ವರ್ಥನಂತೆ ಬೇಂದ್ರೆಯವರು ಕನ್ನಡ ಜಾನಪದಕಾವ್ಯದ ಸತ್ವವನ್ನೂ ಹೊಸ

ಕನ್ನಡ ಕಾವ್ಯಕ್ಕೆ ತಂದರು. ಮಂಗಳೂರಿನ ಕವಿಗಳು ಹಳೆಗನ್ನಡ ಕಾವ್ಯದ ಓಜಸ್ಸು ಸಾಮರ್ಥ್ಯಗಳನ್ನು ತಮ್ಮ ಕಾವ್ಯಕ್ಕೆ ತಂದುಕೊಂಡರು. ಗೋವಿಂದ ಪೈ, ಶಂಕರ ಭಟ್ಟರು, ಹಾಗೂ ಮುಳಿಯ ತಿಮ್ಮಪ್ಪಯ್ಯನವರ ಕಾವ್ಯದಲ್ಲಿ ಈ ವೈಶಿಷ್ಟ್ಯವನ್ನು ಗುರುತಿಸಬಹುದಾಗಿದೆ.

ಈ ಗುಂಪುಗಳ ಹೊರಗಿದ್ದುಕೊಂಡು ಹೊಸ ಕಾವ್ಯವನ್ನು ನಿರ್ಮಿಸುತ್ತಿರುವ ಕೆಲವು ಮಹನೀಯರ ಬಗ್ಗೆ ಈಗಲೇ ವಿಚಾರ ಮಾಡುವದೊಳ್ಳೆಯದು. ಮಂಗಳೂರಿನ ಗೋವಿಂದ ಪೈಯವರು ಹೊಸ ಕವಿಗಳಾಗಿದ್ದರೂ ಹಳೆಯ ಮಾರ್ಗವನ್ನು ಅವಲಂಬಿಸಿದವರು. 'ನಂದಾದೀಪ'ದ ಪ್ರಣಯಕವಿತೆಗಳು 'ಗೊಲ್ಗೋಥಾ'ದಂಥ ನೀಳ್ಗವಿತೆಗಳು ವಸ್ತುವಿನ ದೃಷ್ಟಿಯಿಂದ ಹೊಸದಾಗಿಯೇ ಇವೆ. 'ತಾಯೆ ಬಾರ ಮೊಗವ ತೋರ' ಎಂಬ ಕವಿತೆ ಅವರ ಸಮಕಾಲೀನ ಪ್ರಜ್ಞೆಯನ್ನು ಎತ್ತಿ ತೋರಿಸುತ್ತದೆ. ಆದರೆ ಗೋವಿಂದ ಪೈಯವರು ಆಶ್ಚರ್ಯಕರವಾದ ರೀತಿಯಲ್ಲಿ ಹಳೆಗನ್ನಡದ ಕೆಚ್ಚನ್ನು, ಬಿಗುವನ್ನು ಕಾಪಾಡಿಕೊಂಡು ಬಂದಿದ್ದಾರೆ. 'ಮಿಂಚುಳ್ಳಿ' ಮೊದಲಾದ ನಿಸರ್ಗಕವಿತೆಗಳ ಕೆಳಗೆ ಕೂಡ ಅವರು ಕೊಟ್ಟಿರುವ ಶಬ್ದಕೋಶಗಳಿಂದಲೇ ಇದನ್ನು ತಿಳಿದುಕೊಳ್ಳಬಹುದಾಗಿದೆ. ಹೀಗೆ ಗೋವಿಂದ ಪೈಯವರ ಕಾವ್ಯಕ್ಕೆ ಒಂದು ಐತಿಹಾಸಿಕ ಮಹತ್ವವಿದೆ. ಅದು ಹಳೆ ಹೊಸ ಕಾವ್ಯಗಳನ್ನು ಒಂದೆಡೆಗೆ ಜೋಡಿಸುವ ಸೇತುವೆಯಾಗಿದೆ. ಅಥವಾ ಇನ್ನೊಂದು ರೀತಿಯಲ್ಲಿ ಹೇಳಬೇಕಾದರೆ ಅವರ ಕಾವ್ಯದ ಭಾಷೆ ಮಿಶ್ರಲೋಹದಂತೆ ಬಹಳ ದಿವಸ ಬಾಳಬಲ್ಲುದಾಗಿದೆ. ವಿಶೇಷವಾಗಿ ಕಥನಕವನಗಳ ಛಂದಸ್ಸಿನಲ್ಲಿ ಪೈಯವರು ಈ ರೀತಿಯ ಅನೇಕ ಮಹತ್ವದ ಪ್ರಯೋಗಗಳನ್ನು ಮಾಡಿ ನೋಡಿದ್ದಾರೆ. ಆ ಪ್ರಯೋಗಗಳ ಲಾಭವನ್ನು ಮುಂದಿನ ಕವಿಗಳು ಪಡೆಯಬಹುದಾಗಿದೆ.

ಸಾಲಿ ರಾಮಚಂದ್ರರಾಯರ ಕಾವ್ಯ ಬಹು ಕಾಲದ ವರೆಗೆ ಷಟ್ಪದಿಯ ಕಟ್ಟಳೆಗೆ ಮನಸೋತಿತು. ಮಹತ್ವದ ನಾಲ್ಕೈದು ಕವನಗಳನ್ನು ಬಿಟ್ಟರೆ ಅವರ ಎಲ್ಲ ಕವನಗಳೂ ಷಟ್ಪದಿಯಲ್ಲೇ ರಚಿತವಾದವುಗಳಾಗಿವೆ. 'ಕೊಡಗು, 'ಬೇಸಗೆ', ಇಂಚರ' ಇಂಥ ಕವಿತೆಗಳಲ್ಲಿ ಛಂದಸ್ಸು ಯಶಸ್ವಿಯಾಗಿದೆ. ಆದರೆ ಸಾಲಿಯವರು ಕಾವ್ಯದ ನಿಯಮಬದ್ಧತೆಗೆ ಮಾತ್ರ ಈ ಛಂದಸ್ಸನ್ನು ಬಳಸಿಕೊಂಡಿದ್ದರೆ ಯಾವ ತಕರಾರೂ ಇರುತ್ತಿರಲಿಲ್ಲ. ಅವರು ಆ ವೃತ್ತದಲ್ಲಿ ಹೊಸದೇನನ್ನೂ ಮೂಡಿಸಿ ತೋರಲಿಲ್ಲ. ಷಟ್ಪದಿಯ ಮಹತ್ವವಿರುವದು ಆ ವೃತ್ತದಲ್ಲಿ ಅನೇಕ ಬಗೆಯ ಗತಿಗಳಿಗೆ ಇಂಬಿದೆ ಎಂಬುದೇ ಆಗಿದೆ. ಆದರೆ ಸಾಲಿಯವರು ಒಂದು ರೀತಿಯ ಭಾವನಾವಶತೆಯಿಂದ ಮಾತ್ರ ಆ ವೃತ್ತವನ್ನಪ್ಪಿಕೊಂಡಿದ್ದಾರೆ. ಆದರೆ ಅವರ 'ಅಭಿಸಾರ' ಹಾಗೂ 'ತಿಲಾಂಜಲಿ'ಗಳು ಮಾತ್ರ ಕಾವ್ಯಗುಣದ ದೃಷ್ಟಿಯಿಂದ ಮಹತ್ವದವಾಗಿವೆ. 'ಅಭಿಸಾರ'ದ ಕತೆ ರವೀಂದ್ರರ ಒಂದು ಕವನದಿಂದ ಎತ್ತಿಕೊಂಡಿದ್ದು ನಿರರ್ಗಳವಾದ ಕಥನಶೈಲಿ ಹಾಗೂ ಚೊಕ್ಕವಾದ ಸಂಭಾಷಣೆಗಳಿಂದ ನಾಟಕೀಯತೆಯನ್ನು ಕೂಡ ಈ ಕಾವ್ಯ ಪಡೆದಿದೆ. ಮೊದಲಿನ ಭಾಗದಲ್ಲಿಯ ಅಭಿಸಾರದ ಸನ್ನಿವೇಶಕ್ಕೆ ಮಳೆ-ಗಾಲದ ರಾತ್ರಿ ಹಿನ್ನೆಲೆಯಾಗಿದ್ದರೆ, ಎರಡನೆಯ ಸನ್ನಿವೇಶಕ್ಕೆ ವಸಂತಕಾಲದ ಬೆಳು-

ದಿಂಗಳ ರಾತ್ರಿ ಹಿನ್ನೆಲೆಗಿದೆ. ಹೀಗೆ ಪಾತ್ರಸೃಷ್ಟಿ ಹಾಗೂ ಸನ್ನಿವೇಶರಚನೆಗಳಲ್ಲಿಯ ವಿರೋಧಕತೆಯ ಗತಿಚಿತ್ರ (pattern)ವನ್ನು ಹೆಚ್ಚು ಪರಿಣಾಮಕಾರಿಯಾಗುವಂತೆ ಮಾಡಿದೆ. 'ತಿಲಾಂಜಲಿ' ಸಾಲಿಯವರ ಸುಪ್ರಸಿದ್ಧವಾದ ಶೋಕಗೀತ. ಪುತ್ರನಿಧನದ ಅನಿವಾರವಾದ ಶೋಕ ಛಂದಸ್ಸಿನ ಸಂಯಮದಿಂದ ಹೃದಯವೇಧಕವಾದ ಕಾವ್ಯವಾಗಿದೆ. 'ಒಂದೇ ಒಂದು ದೀಪದ ಕುಡಿ ಇಲ್ಲಿ ನಿಶ್ಚಲವಾಗಿ ಉರಿಯುತ್ತಿದೆ' ಎಂಬ ಗೋಕಾಕರ ಮಾತು ಈ ಕಾವ್ಯದ ನಿರ್ಣಾಯಕ ವಿಮರ್ಶೆಯಾಗಿದೆ. ಆದರೆ ಸಾಲಿಯವರ 'ರಾಮಾಯಣ'ದ ಕಾಂಡಗಳು ಮಾತ್ರ ನಿರೀಕ್ಷಿಸಿದಷ್ಟು ಯಶಸ್ಸನ್ನು ಪಡೆಯಲಿಲ್ಲ. ಛಂದಸ್ಸಿನ ಅಸಮರ್ಥತೆಯೊಂದೇ ಅದಕ್ಕೆ ಕಾರಣವಾಗಿಲ್ಲ. ಕರುಣವೊಂದನ್ನು ಬಿಟ್ಟರೆ ಬೇರೆ ಯಾವ ರಸದಲ್ಲೂ ಸಾಲಿಯವರು ಜೀವಂತವಾದ ಉತ್ಸಾಹವನ್ನು ತಳೆಯದಿರುವದೂ ಮಹತ್ವದ ಕಾರಣವಾಗಿದೆ. ಅಲ್ಲದೆ ಮಹಾಕಾವ್ಯದ ರಚನೆಗೆ ಅವಶ್ಯವಾಗಿ ಬೇಕಾಗಿರುವ ಕ್ರಿಯಾಪ್ರಸರ (action)ದ ಕಚ್ಚಾಸರಕು ಸಾಲಿಯವರಲ್ಲಿ ದೊರೆಯುವದಿಲ್ಲ. ಅವರದು ಮುಖ್ಯವಾಗಿ ಭಾವಗೀತದ ದಾರಿ.

ಡಿ. ವ್ಹಿ. ಜಿ. ನಮ್ಮ ಧೀಮಂತ ಕವಿಗಳಲ್ಲೊಬ್ಬರಾಗಿದ್ದಾರೆ. ಇವರ 'ನಿವೇದನೆ'ಯಂಥ ಮೊದಲಿನ ಸಂಗ್ರಹಗಳಲ್ಲಿಯ ಕವಿತೆಗಳು ಹಳೆಯ ಜಾಡನ್ನು ಹಿಡಿದು ಬರೆದವುಗಳಾಗಿವೆ. ಡಿ. ವ್ಹಿ. ಜಿ.ಯವರು ಪ್ರಮುಖವಾಗಿ ಮೇಧಾವಿಗಳು. 'ವನಸುಮ'ದಂಥ ಭಕ್ತಿಗೀತಗಳಲ್ಲಿ ಕೂಡ ಭಕ್ತಿಯ ಬುದ್ಧಿಗ್ರಾಹ್ಯವಾದ ಅನುಭವವನ್ನು ಮಾತ್ರ ನೋಡುತ್ತೇವೆ. ಆದರೆ ಹೀಗಿದ್ದೂ 'ಮಂಕುತಿಮ್ಮನ ಕಗ್ಗ'ವೊಂದನ್ನು ಬಿಟ್ಟರೆ ಉಳಿದ ಯಾವ ಕವಿತೆಗಳಲ್ಲಿಯೂ ಅವರು ಒಂದು ಮಹತ್ವದ ವಿಚಾರ-ಪ್ರಣಾಲಿಯನ್ನು ಹೇಳುವ ಪ್ರಯತ್ನ ಮಾಡಲಿಲ್ಲ. 'ಬೇಲೂರಿನ ಶಿಲಾಬಾಲಿಕೆಯರು' ಎಂಬ ಕವಿತೆ ಸೌಂದರ್ಯಮೀಮಾಂಸೆಯನ್ನು ಹೇಳಹೊರಟದ್ದು. ಆದರೆ 'ಶ್ರುತಗಾನಮಭಿರಾಮಮಾದೊಡಶ್ರುತಗಾನಮಭಿರಾಮತರಮಪ್ಪುದು' ಎಂಬ ಸಾಲನ್ನು ಓದಿದಾಗ ಮೊದಲಿನ ವಾಗ್ವೈಭವವೆಲ್ಲ ವ್ಯರ್ಥವಾಯಿತಲ್ಲ ಎಂದೆನಿಸುತ್ತದೆ. ಇಡೀ ಕವಿತೆಯೇ ಕಾವ್ಯೋದ್ದೇಶವನ್ನು ಪ್ರಕಟಿಸಲು ಜನ್ಮ ತಾಳಿದಂತಿರಬೇಕು. ಕೀಟ್ಸ ಕವಿಯು ಆ ತತ್ವವನ್ನು ಹೇಳಲು ಗ್ರೀಸದ ಸಂಗಮರವರಿ ಪಾತ್ರೆಯಿರುವಾಗ ಬೇಲೂರಿನ ಶಿಲಾಬಾಲಿಕೆಯರೇಕೆ ಬೇಕೋ ತಿಳಿಯದಾಗುತ್ತದೆ. 'ಉಮರನ ಒಸಗೆ' ಡಿ. ವ್ಹಿ. ಜಿ.ಯವರ ಇನ್ನೊಂದು ಬುದ್ಧಿವಂತಿಕೆಯ ಪ್ರಯತ್ನ. ಅದರ ಸತ್ವಪೂರ್ಣವಾದ ಪೀಠಿಕೆಯನ್ನೋದಿ ಆಮೇಲೆ ಕಾವ್ಯವನ್ನೋದಿದಾಗ ನಿರಾಶೆಯಾಗುತ್ತದೆ. ಉಮರಖಯ್ಯಾಮ್ ತತ್ವಜ್ಞಾನಿಯಾಗಿದ್ದಂತೆಯೇ ಕವಿಯೂ ಆಗಿದ್ದನೆನ್ನುವ ಮಾತನ್ನು ಡಿ.ವ್ಹಿ.ಜಿ.ಯವರ ವಿಮರ್ಶೆ ಒಪ್ಪಿದರೂ, ಅವರ ಭಾಷಾಂತರ ಆ ಕಾವ್ಯವನ್ನು ಹಿಡಿಯಲಿಲ್ಲ. 'ಮಂಕುತಿಮ್ಮನ ಕಗ್ಗ' ದಲ್ಲಿ ಡಿ. ವ್ಹಿ. ಜಿ.ಯವರು ತಮ್ಮ ಜೀವನದ ವಿಚಾರ ಅನುಭವಗಳನ್ನು ಎರಕಹೊಯ್ದಿದ್ದಾರೆ. ಆ ದೃಷ್ಟಿಯಿಂದ ಅದು ಮಹತ್ವಪೂರ್ಣವಾಗಿದೆ. ಇಡೀ ಕಾವ್ಯ ಸುಭಾಷಿತಗಳ ಭಾಂಡಾರವಾಗಿದೆ. ಜೀವನ, ನಿಸರ್ಗ, ರಾಜಕಾರಣ, ದೈವಲೀಲೆ, ಬದುಕಿನ ವಿಷಮತೆ, ಸೌಂದರ್ಯದರ್ಶನ ಹೀಗೆ ಅನೇಕ ವಿಚಾರಗಳು ರೂಪ ತಾಳಿವೆ. ಆದರೆ ಇಲ್ಲಿಯೂ ಅದೇ ತೊಂದರೆ

ಉದ್ಭವಿಸುತ್ತದೆ. ವಿಚಾರಗಳು ಒಮ್ಮೊಮ್ಮೆ ಕಾವ್ಯವಾಗಿ ಮೂಡುವದಿಲ್ಲ. ಕೆಲವು ಉಪಮೆ ರೂಪಕಗಳು ಬಹಳ ಉಚಿತವಾಗಿವೆ ; ವಾದಸರಣಿಗೂ ತಲೆದೂಗುವಂತಾಗುತ್ತದೆ; ವಿಚಾರಗಳು ಸ್ಫುಟವಾಗಿವೆ. ಆದರೆ ಇವೆಲ್ಲ ಕಾವ್ಯದಲ್ಲಿ ಅವಸ್ಥಾಂತರವನ್ನು ಪಡೆಯುವದಿಲ್ಲ. ಕೊನೆಯದಾಗಿ ಡಿ. ವ್ಹಿ. ಜಿ.ಯವರ ' ಅಂತಃಪುರಗೀತಗಳು ' ಬೇಲೂರಿನ ಶಿಲಾಬಾಲಿಕೆಯರ ಹಾಗೂ ಚೆನ್ನಕೇಶವ ದೇವಾಲಯದ ವರ್ಣನೆಯ ಗೀತಗಳಾಗಿವೆ. ಕಾವ್ಯದ ರಚನೆ ಜಯದೇವನ ' ಗೀತಗೋವಿಂದ 'ದಂತೆ ಗೀತಪ್ರಬಂಧವಾಗಿದೆ. ಆದರೆ ಕವನಗಳು ಭಾವೋದ್ದೀಪನ ಮಾಡುವದಿಲ್ಲ. ಶಾಸ್ತ್ರ-ಶುದ್ಧವಾದ ಲಯ ಹಾಗೂ ಲಲಿತಭಾಷೆಗಳು ಮಾತ್ರ ಮನಸೆಳೆಯುತ್ತವೆ.

## ಕೆಲವು ಪ್ರಮುಖರಾದ ಹೊಸ ಕವಿಗಳು

ಧಾರವಾಡದಲ್ಲಿ ಬೇಂದ್ರೆಯವರು ' ಗೆಳೆಯರ ಗುಂಪು ' ಕಟ್ಟಿದ ಮಾತು ಈಗ ಐತಿಹಾಸಿಕ ಸಂಗತಿಯಾಗಿದೆ. ' ಗೆಳೆಯರ ಗುಂಪಿ 'ನ ಚಟುವಟಿಕೆಗಳ ವಿವರವಾದ ಇತಿಹಾಸವೊಂದು ಪ್ರಕಟವಾಗಬೇಕಾಗಿದೆ. ಈಗ ಪರಿಣಾಮದಿಂದ ಅದರ ಪ್ರಾರಂಭವನ್ನು ಊಹಿಸಬಹುದಾದರೆ, ಗುಂಪಿನ ಸಂಕಲ್ಪ ಮಹತ್ವಪೂರ್ಣವಾಗಿತ್ತೆಂದೇ ಹೇಳಬಹುದು. ಬೇಂದ್ರೆಯವರು ಆ ಗುಂಪನ್ನು ನಿರ್ಮಿಸುತ್ತ ಒಂದು ದಿಕ್ಕಿನಲ್ಲಿ ಅನೇಕ ಕವಿಗಳನ್ನು ಹುಟ್ಟಿಸಿದರು ; ' ಕಾವ್ಯಶಾಸ್ತ್ರ-ವಿನೋದ 'ಗಳಂಥ ಚಟುವಟಿಕೆಗಳಿಂದ ಕವಿಗಳಿಗೆ ಕಾವ್ಯನಿರ್ಮಾಣದ ಪಾಠವನ್ನು ಹಾಕಿಕೊಟ್ಟರು ; ಕೇವಲ ಪ್ರತಿಭೆಯೊಂದನ್ನೇ ನಂಬಿ ಕುಳಿತರೆ ಸಾಲದು, ಕಾವ್ಯ ಕಷ್ಟಪಟ್ಟು ಕಲಿಯಬೇಕಾದ ಕಲೆ ಎಂಬ ಮಾತನ್ನು ಸ್ಪಷ್ಟಗೊಳಿಸಿದರು. ಇನ್ನೊಂದು ದಿಕ್ಕಿನಲ್ಲಿ ಸಾಮಾನ್ಯ ಜನರಲ್ಲಿಯೂ ಕಾವ್ಯದ ಬಗ್ಗೆ ಪ್ರೀತಿ ಅಭಿರುಚಿಗಳನ್ನು ಬೆಳೆಸಿದರು. ಹೀಗೆ 'ಗುಂಪಿ'ನ ಚಟುವಟಿಕೆಗಳೆಲ್ಲ ಎಲ್ಲ ಅರ್ಥದಲ್ಲಿಯೂ ವಿಧಾಯಕವಾಗಿದ್ದವು. ' ಗೆಳೆಯರ ಗುಂಪು' ಬಹು ಬೇಗ ಮುರಿದುಹೋಗಿದ್ದರೂ ಅದು ತನ್ನ ಉದ್ದೇಶವನ್ನು ಸಾಧಿಸಿತೆಂದೇ ಹೇಳಬಹುದು. ಅನೇಕ ಕವಿಗಳು ಅದರಿಂದ ಪ್ರೇರಣೆಯನ್ನು ಪಡೆದು ಮುಂದೆ ಸ್ವತಂತ್ರ ಕವಿಗಳಾಗಿ ಬೆಳೆದಿದ್ದಾರೆ. ವಿನಾಯಕ, ಮುಗಳಿ, ಮಧುರಚನ್ನ, ಆನಂದಕಂದರಂಥ ಕವಿಗಳು ಮಹತ್ವಪೂರ್ಣವಾದ ಕಾವ್ಯವನ್ನು ಸೃಷ್ಟಿಸಿದರು.

ಅದಲ್ಲದೆ ' ಗುಂಪು ' ಬೇಂದ್ರೆಯವರ ಕಲಾತ್ಮಕ ವ್ಯಕ್ತಿತ್ವಕ್ಕೆ ಹತ್ತು ಭುಜಗಳನ್ನು ಚಿಗುರಿಸಿತೆಂದು ಹೇಳಬಹುದು. ಕನ್ನಡ ಕಾವ್ಯಪ್ರವಾಹ ತೀರ ಹರಿಗಡಿದ ಆ ಹೊತ್ತಿನಲ್ಲಿ, ಹೊಸ ಕಾವ್ಯವನ್ನು ನಿರ್ಮಿಸಲು ಬೇಂದ್ರೆಯವರಿಗೆ 'ಗುಂಪಿ'ನ ಕಾವ್ಯ-ಜೀವನ ಅನೇಕ ಬಗೆಯಿಂದ ಪ್ರೇರಣೆಯನ್ನು ಕೊಟ್ಟಿರಬಹುದು. 'ಕೃಷ್ಣಾ ಕುಮಾರಿ' ಯಿಂದ ಇಲ್ಲಿಯ ವರೆಗೆ ಬೇಂದ್ರೆಯವರವು ಸುಮಾರು ಹತ್ತು-ಹದಿನೈದು ಕವನ-ಸಂಗ್ರಹಗಳು ಪ್ರಕಟವಾಗಿವೆ. ಆ ಕವಿತೆಗಳ ವಸ್ತುವೈವಿಧ್ಯವನ್ನು ಹಾಗೂ ಪ್ರಯೋಗಪ್ರಿಯತೆಯನ್ನು ನೋಡಿದಾಗ ' ಗುಂಪಿ 'ನ ಮಹತ್ವ ಕಂಡುಬರದಿರಲಾರದು. ಮೊದಲನೆಯದಾಗಿ 'ಗುಂಪಿ'ನ ಚಟುವಟಿಕೆಗಳಿಂದ ಬೇಂದ್ರೆಯವರು ಕಾವ್ಯನಿರ್ಮಾಣವನ್ನು ಉಸಿರಾಟದಷ್ಟು ಸಹಜವಾಗಿ ಮಾಡಿಕೊಂಡರು ; ಭಾಷೆ,

ಛಂದಸ್ಸುಗಳ ಮೇಲೆ ಪ್ರಭುತ್ವವನ್ನು ಸಂಪಾದಿಸಿಕೊಂಡರು. ಇದಲ್ಲದೆ 'ಗುಂಪಿ'ನ ಮೂಲಕ ಅವರು ಜನಸಾಮಾನ್ಯರಲ್ಲಿ ಸುಲಭವಾಗಿ ಬೆರೆಯುವಂತಾಯಿತು. 'ಗುಂಪಿ'ನ ಪ್ರತಿಯೊಂದು ಚಟುವಟಿಕೆಯೂ ಹೊಸ ಕಾವ್ಯವನ್ನು ಲೋಕಪ್ರಿಯ ವಾಗಿಸುವದರಲ್ಲಿ ತೊಡಗಿರುತ್ತಿತ್ತು; ಮತ್ತು ಕಾವ್ಯದ ಉಗಮ, ವಿಕಾಸ, ಹಾಗೂ ಪ್ರಯೋಜನಗಳ ಬಗ್ಗೆ ಚರ್ಚೆ-ವಾದಗಳನ್ನು ಬೆಳೆಸಿ, ಬೇಂದ್ರೆಯವರು ನಿರಂತರವಾದ ಕಾವ್ಯಸಾಧನೆಯಲ್ಲಿ ತೊಡಗುವಂತಾದುದಕ್ಕೆ 'ಗುಂಪು' ಬಹುಮಟ್ಟಿಗೆ ಕಾರಣ ವಾಗಿದೆ. ಬೇಂದ್ರೆಯವರ ಕವನಗಳು ಪ್ರಕಟವಾಗುವದಕ್ಕಿಂತ ಮೊದಲೇ ಈ ಬಗೆಯ ಸಾಧನೆ ಪ್ರಾರಂಭವಾಗಿತ್ತು.

ಬೇಂದ್ರೆಯವರ ಕಾವ್ಯದ ಬೆಳವಣಿಗೆಯ ಅಭ್ಯಾಸ ಸ್ವಲ್ಪಮಟ್ಟಿಗೆ ತೊಡಕಿನ ದಾಗಿದೆ. ಇದಕ್ಕೆ ಕಾರಣವೆಂದರೆ ಅವರ ಕವನಸಂಗ್ರಹಗಳಲ್ಲಿ ಹಳೆ-ಹೊಸಕಾಲದ ಕವನಗಳು ಕೂಡಿಯೇ ಪ್ರಕಟವಾಗಿವೆ. 'ಗರಿ' ಪ್ರಕಟವಾಗುವದಕ್ಕಿಂತ ಮೊದಲೇ ಬರೆದ ಎಷ್ಟೋ ಕವನಗಳು ಇತ್ತೀಚೆಗೆ ಹೊರಬಿದ್ದ 'ಅರಳು-ಮರಳು' ಸಂಗ್ರಹ ದಲ್ಲಿ ದೊರೆಯುತ್ತವೆ. ಹೀಗಾಗಿ ಅವರ ಕಾವ್ಯದ ಬೆಳವಣಿಗೆಯ ಜಾಡನ್ನು ಕಂಡು ಹಿಡಿಯುವದು ಬಿಗಿಯಾಗಿದೆ. ಯಾವ ಕವನಸಂಗ್ರಹವೂ ಸಂಪೂರ್ಣವಾಗಿ ಆ ಕಾಲಕ್ಕೆ ಪ್ರಾತಿನಿಧಿಕವೆಂದು ಹೇಳಲು ಬರುವದಿಲ್ಲ. ಅದಕ್ಕಾಗಿ ಕಾಲಕ್ರಮವನ್ನು ಅನುಸರಿಸಿದ ಅವರ ಇನ್ನೊಂದು ಸಂಪೂರ್ಣ ಕವನಸಂಗ್ರಹ ಪ್ರಕಟವಾಗುವದು ಅಗತ್ಯವಾಗಿದೆ. ಒಂದು ಕವನವನ್ನು ಓದಿ ಯಾವ ಕವಿಯ ಯೋಗ್ಯತೆಯನ್ನೂ ಅಳೆಯುವದು ಸಾಧ್ಯವಿಲ್ಲ. ಕೇವಲ 'ಬೆಳಗು', 'ಸಖೀಗೀತ'ದಂಥ ಕವನಗಳನ್ನು ಬರೆದರೆಂದು ಬೇಂದ್ರೆಯವರು ಶ್ರೇಷ್ಠ ಕವಿಗಳಾಗಿಲ್ಲ. ಅವರು ಮೊಟ್ಟಮೊದಲಿಗೆ ಬರೆದ ಕವಿತೆ ಕೂಡ, ಆಗಿನ ಭಾವಲಹರಿಯನ್ನು ಅನುಲಕ್ಷಿಸಿದಾಗ ಶ್ರೇಷ್ಠವಾಗಿ ತ್ತೆಂದೇ ಅವರು ದೊಡ್ಡ ಕವಿಗಳಾಗಿದ್ದಾರೆ. ಈ ವಿಷಯದಲ್ಲಿ ಮಹತ್ವದ ಕವಿ- ಗಳೆಲ್ಲರೂ ಅಸದೃಶರೆಂದೇ ಹೇಳಬಹುದು. ತಾರತಮ್ಯವನ್ನು ಅವರ ಕವಿತೆಗಳ ಲ್ಲಿಯೇ ಮಾಡಬಹುದೇ ಹೊರತು ಅವರನ್ನು ಇನ್ನೊಬ್ಬ ಕವಿಯೊಂದಿಗೆ ಹೋಲಿಸಿ ಅಲ್ಲ.

ಕಾವ್ಯವಸ್ತುವಿನ ಆಯ್ಕೆಯಲ್ಲಿ ಬೇಂದ್ರೆಯವರು ಯಾವ ಕಟ್ಟುನಿಟ್ಟುಗಳನ್ನೂ ಹಾಕಿಕೊಳ್ಳಲಿಲ್ಲ. ಸಾಮಾನ್ಯವಾಗಿ ಪ್ರಾರಂಭಕಾಲದ ಎಲ್ಲ ಕವಿಗಳಂತೆಯೇ ಇವರೂ ಸುತ್ತಲಿನ ಜೀವನದಿಂದ ವಸ್ತುಗಳನ್ನು ಆಯ್ದುಕೊಂಡರು. ನಿಸರ್ಗದ ಚಲುವು, ಗಂಡು-ಹೆಣ್ಣುಗಳ ಪ್ರೀತಿ-ಅನುರಾಗ, ದೇಶಪ್ರೇಮ, ಕಲೆ, ಸಮಕಾಲೀನ ಜೀವನದ ನೂರಾರು ಸಮಸ್ಯೆಗಳು, ಕೌಟುಂಬಿಕಜೀವನದ ಸುಖ-ದುಃಖಗಳು, ತಾತ್ವಿಕ ಅಥವಾ ಅಂತರಂಗದ ಅನುಭವಗಳು, ಕಣ್ಣಿಗೆ ಕಾಣದ ಅನೇಕ ಅಮೂರ್ತ ವಿಚಾರ ಗಳು ಇವೇ ಬೇಂದ್ರೆಯವರ ಕಾವ್ಯದ ವಸ್ತುಗಳಾಗಿವೆ. ಎದುರಿಗೆ ಬಂದ ಯಾವ ವಿಷಯವೂ ವಸ್ತುವಾಗಬಲ್ಲಷ್ಟು ಇವರ ಕಾವ್ಯಕ್ಷೇತ್ರ ವಿಸ್ತಾರವಾಗಿದೆ. ಅದು ಕವಿಯ ಸಂವೇದನೆಗಳ ವ್ಯಾಪ್ತಿಯ ಫಲವಾಗಿದೆ. ಬೇಂದ್ರೆಯವರ ಕಾವ್ಯದ ಶ್ರೇಷ್ಠತೆ ಇರು ವದು ಅದರ ಅಭಿವ್ಯಕ್ತಿಯಲ್ಲಿ. ಅದು ಕೇವಲ ವಾಗರ್ಥಗಳ ಸಾಮರಸ್ಯ ಮಾತ್ರ

ಉದ್ಭವಿಸುತ್ತದೆ. ವಿಚಾರಗಳು ಒಮ್ಮೊಮ್ಮೆ ಕಾವ್ಯವಾಗಿ ಮೂಡುವದಿಲ್ಲ. ಕೆಲವು ಉಪಮೆ ರೂಪಕಗಳು ಬಹಳ ಉಚಿತವಾಗಿವೆ ; ವಾದಸರಣಿಗೂ ತಲೆದೂಗುವಂತಾಗುತ್ತದೆ ; ವಿಚಾರಗಳು ಸ್ಫುಟವಾಗಿವೆ. ಆದರೆ ಇವೆಲ್ಲ ಕಾವ್ಯದಲ್ಲಿ ಅವಸ್ಥಾಂತರವನ್ನು ಪಡೆಯುವದಿಲ್ಲ. ಕೊನೆಯದಾಗಿ ಡಿ. ವ್ಹಿ. ಜಿ.ಯವರ ' ಅಂತಃಪುರಗೀತಗಳು ' ಬೇಲೂರಿನ ಶಿಲಾಬಾಲಿಕೆಯರ ಹಾಗೂ ಚೆನ್ನಕೇಶವ ದೇವಾಲಯದ ವರ್ಣನೆಯ ಗೀತಗಳಾಗಿವೆ. ಕಾವ್ಯದ ರಚನೆ ಜಯದೇವನ ' ಗೀತಗೋವಿಂದ 'ದಂತೆ ಗೀತಪ್ರಬಂಧವಾಗಿದೆ. ಆದರೆ ಕವನಗಳು ಭಾವೋದ್ದೀಪನ ಮಾಡುವದಿಲ್ಲ. ಶಾಸ್ತ್ರಶುದ್ಧವಾದ ಲಯ ಹಾಗೂ ಲಲಿತಭಾಷೆಗಳು ಮಾತ್ರ ಮನಸೆಳೆಯುತ್ತವೆ.

## ಕೆಲವು ಪ್ರಮುಖರಾದ ಹೊಸ ಕವಿಗಳು

ಧಾರವಾಡದಲ್ಲಿ ಬೇಂದ್ರೆಯವರು ' ಗೆಳೆಯರ ಗುಂಪು ' ಕಟ್ಟಿದ ಮಾತು ಈಗ ಐತಿಹಾಸಿಕ ಸಂಗತಿಯಾಗಿದೆ. ' ಗೆಳೆಯರ ಗುಂಪಿ 'ನ ಚಟುವಟಿಕೆಗಳ ವಿವರವಾದ ಇತಿಹಾಸವೊಂದು ಪ್ರಕಟವಾಗಬೇಕಾಗಿದೆ. ಈಗ ಪರಿಣಾಮದಿಂದ ಅದರ ಪ್ರಾರಂಭವನ್ನು ಊಹಿಸಬಹುದಾದರೆ, ಗುಂಪಿನ ಸಂಕಲ್ಪ ಮಹತ್ವಪೂರ್ಣವಾಗಿತ್ತೆಂದೇ ಹೇಳಬಹುದು. ಬೇಂದ್ರೆಯವರು ಆ ಗುಂಪನ್ನು ನಿರ್ಮಿಸುತ್ತ ಒಂದು ದಿಕ್ಕಿನಲ್ಲಿ ಅನೇಕ ಕವಿಗಳನ್ನು ಹುಟ್ಟಿಸಿದರು ; ' ಕಾವ್ಯಶಾಸ್ತ್ರ-ವಿನೋದ 'ಗಳಂಥ ಚಟುವಟಿಕೆಗಳಿಂದ ಕವಿಗಳಿಗೆ ಕಾವ್ಯನಿರ್ಮಾಣದ ಪಾಠವನ್ನು ಹಾಕಿಕೊಟ್ಟರು ; ಕೇವಲ ಪ್ರತಿಭೆಯೊಂದನ್ನೇ ನಂಬಿ ಕುಳಿತರೆ ಸಾಲದು, ಕಾವ್ಯ ಕಷ್ಟಪಟ್ಟು ಕಲಿಯಬೇಕಾದ ಕಲೆ ಎಂಬ ಮಾತನ್ನು ಸ್ಪಷ್ಟಗೊಳಿಸಿದರು. ಇನ್ನೊಂದು ದಿಕ್ಕಿನಲ್ಲಿ ಸಾಮಾನ್ಯ ಜನರಲ್ಲಿಯೂ ಕಾವ್ಯದ ಬಗ್ಗೆ ಪ್ರೀತಿ ಅಭಿರುಚಿಗಳನ್ನು ಬೆಳೆಸಿದರು. ಹೀಗೆ 'ಗುಂಪಿ'ನ ಚಟುವಟಿಕೆಗಳೆಲ್ಲ ಎಲ್ಲ ಅರ್ಥದಲ್ಲಿಯೂ ವಿಧಾಯಕವಾಗಿದ್ದವು. ' ಗೆಳೆಯರ ಗುಂಪು' ಬಹು ಬೇಗ ಮುರಿದುಹೋಗಿದ್ದರೂ ಅದು ತನ್ನ ಉದ್ದೇಶವನ್ನು ಸಾಧಿಸಿತೆಂದೇ ಹೇಳಬಹುದು. ಅನೇಕ ಕವಿಗಳು ಅದರಿಂದ ಪ್ರೇರಣೆಯನ್ನು ಪಡೆದು ಮುಂದೆ ಸ್ವತಂತ್ರ ಕವಿಗಳಾಗಿ ಬೆಳೆದಿದ್ದಾರೆ. ವಿನಾಯಕ, ಮುಗಳಿ, ಮಧುರಚನ್ನ, ಆನಂದಕಂದರಂಥ ಕವಿಗಳು ಮಹತ್ವಪೂರ್ಣವಾದ ಕಾವ್ಯವನ್ನು ಸೃಷ್ಟಿಸಿದರು.

ಅದಲ್ಲದೆ ' ಗುಂಪು ' ಬೇಂದ್ರೆಯವರ ಕಲಾತ್ಮಕ ವ್ಯಕ್ತಿತ್ವಕ್ಕೆ ಹತ್ತು ಭುಜಗಳನ್ನು ಚಿಗುರಿಸಿತೆಂದು ಹೇಳಬಹುದು. ಕನ್ನಡ ಕಾವ್ಯಪ್ರವಾಹ ತೀರ ಹರಿಗಡಿದ ಆ ಹೊತ್ತಿನಲ್ಲಿ, ಹೊಸ ಕಾವ್ಯವನ್ನು ನಿರ್ಮಿಸಲು ಬೇಂದ್ರೆಯವರಿಗೆ 'ಗುಂಪಿ'ನ ಕಾವ್ಯಜೀವನ ಅನೇಕ ಬಗೆಯಿಂದ ಪ್ರೇರಣೆಯನ್ನು ಕೊಟ್ಟಿರಬಹುದು. 'ಕೃಷ್ಣಾ ಕುಮಾರಿ' ಯಿಂದ ಇಲ್ಲಿಯ ವರೆಗೆ ಬೇಂದ್ರೆಯವರವು ಸುಮಾರು ಹತ್ತು-ಹದಿನೈದು ಕವನಸಂಗ್ರಹಗಳು ಪ್ರಕಟವಾಗಿವೆ. ಆ ಕವಿತೆಗಳ ವಸ್ತುವೈವಿಧ್ಯವನ್ನು ಹಾಗೂ ಪ್ರಯೋಗಪ್ರಿಯತೆಯನ್ನು ನೋಡಿದಾಗ ' ಗುಂಪಿ 'ನ ಮಹತ್ವ ಕಂಡುಬರದಿರಲಾರದು. ಮೊದಲನೆಯದಾಗಿ 'ಗುಂಪಿ'ನ ಚಟುವಟಿಕೆಗಳಿಂದ ಬೇಂದ್ರೆಯವರು ಕಾವ್ಯನಿರ್ಮಾಣವನ್ನು ಉಸಿರಾಟದಷ್ಟು ಸಹಜವಾಗಿ ಮಾಡಿಕೊಂಡರು ; ಭಾಷೆ,

ಛಂದಸ್ಸುಗಳ ಮೇಲೆ ಪ್ರಭುತ್ವವನ್ನು ಸಂಪಾದಿಸಿಕೊಂಡರು. ಇದಲ್ಲದೆ 'ಗುಂಪಿ'ನ ಮೂಲಕ ಅವರು ಜನಸಾಮಾನ್ಯರಲ್ಲಿ ಸುಲಭವಾಗಿ ಬೆರೆಯುವಂತಾಯಿತು. 'ಗುಂಪಿ'ನ ಪ್ರತಿಯೊಂದು ಚಟುವಟಿಕೆಯೂ ಹೊಸ ಕಾವ್ಯವನ್ನು ಲೋಕಪ್ರಿಯ ವಾಗಿಸುವದರಲ್ಲಿ ತೊಡಗಿರುತ್ತಿತ್ತು; ಮತ್ತು ಕಾವ್ಯದ ಉಗಮ, ವಿಕಾಸ, ಹಾಗೂ ಪ್ರಯೋಜನಗಳ ಬಗ್ಗೆ ಚರ್ಚೆ-ವಾದಗಳನ್ನು ಬೆಳೆಸಿ, ಬೇಂದ್ರೆಯವರು ನಿರಂತರವಾದ ಕಾವ್ಯಸಾಧನೆಯಲ್ಲಿ ತೊಡಗುವಂತಾದುದಕ್ಕೆ 'ಗುಂಪು' ಬಹುಮಟ್ಟಿಗೆ ಕಾರಣ ವಾಗಿದೆ. ಬೇಂದ್ರೆಯವರ ಕವನಗಳು ಪ್ರಕಟವಾಗುವದಕ್ಕಿಂತ ಮೊದಲೇ ಈ ಬಗೆಯ ಸಾಧನೆ ಪ್ರಾರಂಭವಾಗಿತ್ತು.

ಬೇಂದ್ರೆಯವರ ಕಾವ್ಯದ ಬೆಳವಣಿಗೆಯ ಅಭ್ಯಾಸ ಸ್ವಲ್ಪಮಟ್ಟಿಗೆ ತೊಡಕಿನ ದಾಗಿದೆ. ಇದಕ್ಕೆ ಕಾರಣವೆಂದರೆ ಅವರ ಕವನಸಂಗ್ರಹಗಳಲ್ಲಿ ಹಳೆ-ಹೊಸಕಾಲದ ಕವನಗಳು ಕೂಡಿಯೇ ಪ್ರಕಟವಾಗಿವೆ. 'ಗರಿ' ಪ್ರಕಟವಾಗುವದಕ್ಕಿಂತ ಮೊದಲೇ ಬರೆದ ಎಷ್ಟೋ ಕವನಗಳು ಇತ್ತೀಚೆಗೆ ಹೊರಬಿದ್ದ 'ಅರಳು-ಮರಳು' ಸಂಗ್ರಹ ದಲ್ಲಿ ದೊರೆಯುತ್ತವೆ. ಹೀಗಾಗಿ ಅವರ ಕಾವ್ಯದ ಬೆಳವಣಿಗೆಯ ಜಾಡನ್ನು ಕಂಡು ಹಿಡಿಯುವದು ಬಿಗಿಯಾಗಿದೆ. ಯಾವ ಕವನಸಂಗ್ರಹವೂ ಸಂಪೂರ್ಣವಾಗಿ ಆ ಕಾಲಕ್ಕೆ ಪ್ರಾತಿನಿಧಿಕವೆಂದು ಹೇಳಲು ಬರುವದಿಲ್ಲ. ಅದಕ್ಕಾಗಿ ಕಾಲಕ್ರಮವನ್ನು ಅನುಸರಿಸಿದ ಅವರ ಇನ್ನೊಂದು ಸಂಪೂರ್ಣ ಕವನಸಂಗ್ರಹ ಪ್ರಕಟವಾಗುವದು ಅಗತ್ಯವಾಗಿದೆ. ಒಂದು ಕವನವನ್ನು ಓದಿ ಯಾವ ಕವಿಯ ಯೋಗ್ಯತೆಯನ್ನೂ ಅಳೆಯುವದು ಸಾಧ್ಯವಿಲ್ಲ. ಕೇವಲ 'ಬೆಳಗು', 'ಸಖೀಗೀತ'ದಂಥ ಕವನಗಳನ್ನು ಬರೆದರೆಂದು ಬೇಂದ್ರೆಯವರು ಶ್ರೇಷ್ಠ ಕವಿಗಳಾಗಿಲ್ಲ. ಅವರು ಮೊಟ್ಟಮೊದಲಿಗೆ ಬರೆದ ಕವಿತೆ ಕೂಡ, ಆಗಿನ ಭಾವಲಹರಿಯನ್ನು ಅನುಲಕ್ಷಿಸಿದಾಗ ಶ್ರೇಷ್ಠವಾಗಿ ತ್ತೆಂದೇ ಅವರು ದೊಡ್ಡ ಕವಿಗಳಾಗಿದ್ದಾರೆ. ಈ ವಿಷಯದಲ್ಲಿ ಮಹತ್ವದ ಕವಿ- ಗಳೆಲ್ಲರೂ ಅಸದೃಶರೆಂದೇ ಹೇಳಬಹುದು. ತಾರತಮ್ಯವನ್ನು ಅವರ ಕವಿತೆಗಳ ಲ್ಲಿಯೇ ಮಾಡಬಹುದೇ ಹೊರತು ಅವರನ್ನು ಇನ್ನೊಬ್ಬ ಕವಿಯೊಂದಿಗೆ ಹೋಲಿಸಿ ಅಲ್ಲ.

ಕಾವ್ಯವಸ್ತುವಿನ ಆಯ್ಕೆಯಲ್ಲಿ ಬೇಂದ್ರೆಯವರು ಯಾವ ಕಟ್ಟುನಿಟ್ಟುಗಳನ್ನೂ ಹಾಕಿಕೊಳ್ಳಲಿಲ್ಲ. ಸಾಮಾನ್ಯವಾಗಿ ಪ್ರಾರಂಭಕಾಲದ ಎಲ್ಲ ಕವಿಗಳಂತೆಯೇ ಇವರೂ ಸುತ್ತಲಿನ ಜೀವನದಿಂದ ವಸ್ತುಗಳನ್ನು ಆಯ್ದುಕೊಂಡರು. ನಿಸರ್ಗದ ಚಲುವು, ಗಂಡು-ಹೆಣ್ಣುಗಳ ಪ್ರೀತಿ-ಅನುರಾಗ, ದೇಶಪ್ರೇಮ, ಕಲೆ, ಸಮಕಾಲೀನ ಜೀವನದ ನೂರಾರು ಸಮಸ್ಯೆಗಳು, ಕೌಟುಂಬಿಕಜೀವನದ ಸುಖ-ದುಃಖಗಳು, ತಾತ್ವಿಕ ಅಥವಾ ಅಂತರಂಗದ ಅನುಭವಗಳು, ಕಣ್ಣಿಗೆ ಕಾಣದ ಅನೇಕ ಅಮೂರ್ತ ವಿಚಾರ ಗಳು ಇವೇ ಬೇಂದ್ರೆಯವರ ಕಾವ್ಯದ ವಸ್ತುಗಳಾಗಿವೆ. ಎದುರಿಗೆ ಬಂದ ಯಾವ ವಿಷಯವೂ ವಸ್ತುವಾಗಬಲ್ಲಷ್ಟು ಇವರ ಕಾವ್ಯಕ್ಷೇತ್ರ ವಿಸ್ತಾರವಾಗಿದೆ. ಅದು ಕವಿಯ ಸಂವೇದನೆಗಳ ವ್ಯಾಪ್ತಿಯ ಫಲವಾಗಿದೆ. ಬೇಂದ್ರೆಯವರ ಕಾವ್ಯದ ಶ್ರೇಷ್ಠತೆ ಇರು ವದು ಅದರ ಅಭಿವ್ಯಕ್ತಿಯಲ್ಲಿ. ಅದು ಕೇವಲ ವಾಗರ್ಥಗಳ ಸಾಮರಸ್ಯ- ಮಾತ್ರ

ವಾಗಿರದೆ ಇನ್ನೂ ಒಂದು ಹೆಜ್ಜೆ ಮುಂದೆ ಹೋಗುತ್ತದೆ. ಈ ವಿಷಯದಲ್ಲಿ 'ನಾದ ಲೀಲೆ'ಯ ಮುನ್ನುಡಿಯಲ್ಲಿ ಮಾಸ್ತಿಯವರು ಹೇಳಿದ ಮಾತು ತೀರ ಮಹತ್ವದ್ದಾಗಿದೆ. 'ಈ ಕೃತಿಗಳ ವಿಷಯದಲ್ಲಿ ಕವಿ ಅನುಸರಿಸುವ ಪದ್ಧತಿ ಅನನ್ಯಸಾಧಾರಣವಾದುದು' ಎಂದು ಅವರು ಬೇಂದ್ರೆಯವರ ಕಾವ್ಯದ ಅಭಿವ್ಯಕ್ತಿಯ ಬಗ್ಗೆ ಹೇಳಿದ್ದಾರೆ. ಶ್ರೇಷ್ಠ ವಾದ ಕಾವ್ಯ ಕೇವಲ ಹೊಸ ಮಾತನ್ನಷ್ಟೇ ಹೇಳಿದರೆ ಸಾಲದು ; ಅದನ್ನು ಹೊಸ ರೀತಿಯಲ್ಲಿ – ಒಂದು ಮರೆಯಲಾಗದಂಥ ರೀತಿಯಲ್ಲಿ – ಹೇಳಬೇಕು. ಕಾಲಕ್ರಮ ದಲ್ಲಿ ಬೇಂದ್ರೆಯವರು ಮೊದಲು ಬಂದದ್ದು ಕೂಡ ಒಂದು ಸುದೈವದ ಮಾತಾಗಿದೆ. ಕಾವ್ಯದ ವ್ಯಾಪ್ತಿಯಲ್ಲಿ ಅದರ ಕ್ಷೇತ್ರದಲ್ಲಿ ಇನ್ನೂ ಬಾರದಿದ್ದ ಜೀವನ, ಸಾಗುಮಾಡದ ನೆಲದಂತೆ ಬೇಕಾದಷ್ಟು ಬಿದ್ದಿತ್ತು. ಪ್ರತಿಭೆ ಕಣ್ಣು ತೆರೆದರೆ ಸಾಕು, ತಾನೂ ಕಣ್ಣು ತೆರೆಯಬೇಕೆಂದು ಜೀವನ ಕಾದು ಕುಳಿತಿತ್ತು. ಆದರೆ ಬೇಂದ್ರೆಯವರು ಕೇವಲ ಈ 'ಅನಾಸ್ವಾದಿತ ರಸ'ದ ಭೋಕ್ತಾರರಾಗಿ ಸುಮ್ಮನೆ ಕೂಡಲಿಲ್ಲ. ತಾವು ಕಂಡ ಸತ್ಯಕ್ಕೆ ನವೀನವಾದ ಅಭಿವ್ಯಕ್ತಿಯನ್ನೂ ಕಲ್ಪಿಸಿಕೊಟ್ಟರು. ಉದಾಹರಣೆಗೆಂದು ಅವರ 'ಹಕ್ಕಿ ಹಾರುತಿದೆ' ಎಂಬ ಕವನವನ್ನು ನೋಡಬಹುದಾಗಿದೆ. ಎಲ್ಲರಿಗೂ ಈಗ ತಿಳಿ ದಿರುವಂತೆ ಇದು ಕಾಲದಂಥ ಒಂದು ಅಮೂರ್ತ (abstract) ವಸ್ತುವಿನ ಮೇಲೆ ಬರೆದ ಕವಿತೆಯಾಗಿದೆ. ಇದು ಆ ಕಾಲಕ್ಕಂತೂ ಹೊಸ ಮಾತಾಗಿತ್ತು. ವಸ್ತು ಅಮೂರ್ತವಾಗಿದ್ದರೂ ಕಾವ್ಯದ ಅಭಿವ್ಯಕ್ತಿ ಅದನ್ನು ಕಣ್ಣಿಗೆ ಕಾಣುವಷ್ಟು ಸಚಿತ್ರ ವಾಗಿಸಿದೆ. ಬೇಂದ್ರೆಯವರ ಕಲ್ಪನೆ ಸೃಷ್ಟಿಸಿದ ಹಕ್ಕಿಯ ರೂಪಕ, ವಸ್ತುವಿನ ಸ್ಥಾನ-ದಲ್ಲಿ ತಾನೇ ನಿಂತು ಕೆಲಸಮಾಡುತ್ತಿದೆ. ಆದರೆ ಅದು ಮೇರೆಯನ್ನು ಮೀರದಂತೆ ಭಾಷೆ ಅದನ್ನು ಒಂದು ಸಾಮರ್ಥ್ಯದಿಂದ ಸಂಯಮಿಸಿದೆ. ನಾಲ್ಕು ಸಾಲುಗಳ ನುಡಿಕಟ್ಟು ಕೂಡ ಈ ಸಂಯಮವನ್ನು ಇನ್ನೂ ಹೆಚ್ಚು ಬಿಗಿಯಾಗಿಸಿದೆ. ಕಾಲದಂಥ ವಿಶ್ವವ್ಯಾಪಿ ಯಾದ ವಸ್ತುವನ್ನು ಒಂದು ಹಕ್ಕಿಯ ಆಕಾರಕ್ಕಿಳಿಸಿದ್ದರೂ ಅದರ ಭವ್ಯತೆಗೆ ಚ್ಯುತಿ ಬಂದಿಲ್ಲ. 'ಮುಗಿಲಿಗೆ ರೆಕ್ಕೆಗಳೊಡೆದವೊ ಅಣ್ಣ!' ಎಂಬ ಸಾಲು ವಸ್ತುವಿನ ಅನಂತತೆ ಯನ್ನೂ ಕಾವ್ಯದ ಸಾಂತತೆಯನ್ನೂ ಕೂಡಿಯೆ ಸೂಚಿಸಿಬಿಡುತ್ತದೆ. ಇದರಿಂದಾಗಿ ಕಾಲಪಕ್ಷಿ ತನ್ನೆಲ್ಲ ದೈಹಿಕವಿವರಗಳೊಂದಿಗೆ, ಬಣ್ಣ, ದನಿಗಳೊಂದಿಗೆ, ಪ್ರತ್ಯಕ್ಷ ವಾಗಿಬಿಡುತ್ತದೆ. ಉಳಿದ ಕವಿಗಳಲ್ಲಿಯಂತೆ ಇಲ್ಲಿ ರೂಪಕ ಒಂದು ಸಾಲಿನಲ್ಲಿ ಮಾತ್ರ ಮಿಂಚಿ ಮಾಯವಾಗುವದಿಲ್ಲ. ಮೊದಲಿನಿಂದ ಕೊನೆಯ ವರೆಗೂ ಅದು ಕವಿತೆಯ ತುಂಬ ವ್ಯಾಪಿಸಿದೆ. ಬೇಂದ್ರೆಯವರು ರೂಪಕವನ್ನು ಒಂದು ಅಲಂಕಾರವೆಂದು ಮಾತ್ರ ಉಪಯೋಗಿಸುವದಿಲ್ಲ. ಅದು ಅವರ ಎರಡನೆಯ ಭಾಷೆಯಾಗಿದೆಯೆಂದು ಹೇಳಬಹುದು. ಶಬ್ದಗಳಿಗಿರುವ ಸಾಮಾನ್ಯ ಅರ್ಥಶಕ್ತಿ ಸಾಲದಾಗ ರೂಪಕ, ಭಾಷೆಯ ವ್ಯಂಜಕಶಕ್ತಿಯನ್ನು ಇಮ್ಮಡಿ ಮುಮ್ಮಡಿಯಾಗಿ ಬೆಳೆಸುತ್ತದೆ. ಇದರ ಒಟ್ಟು ಪ್ರಯೋಜನವೆಂದರೆ, ವಸ್ತುವಿನ ಅನುಭವ ಪೂರ್ಣವಾಗಿ, ಸಜೀವವಾಗಿ ಓದುಗರಿಗಾಗುವದಲ್ಲದೆ, ಕವಿ ಕವಿತೆಗೆ ಕೊಟ್ಟಿರುವ ಹೊಸ ಅವಯವಗಳು (ರೂಪಕ ಮೊದಲಾದವುಗಳು) ಆ ಅನುಭವವನ್ನು ಕವಿಯ ನಿರೀಕ್ಷೆಯನ್ನೂ ಮೀರಿ ಬೆಳೆಸು ತ್ತವೆ. ಈ ಕವಿತೆಯಲ್ಲಿ ವರ್ಣಿತವಾಗಿರುವ ಅನೇಕ ಕ್ರಿಯೆಗಳು, ಆಗು ಹೋಗುಗಳು,

ಯುಗಯುಗಗಳ ದೈವಪರಿವರ್ತನ, ಸಾಮ್ರಾಜ್ಯಗಳ ಉದಯಾಸ್ತಗಳು, ಪೃಥ್ವಿಯ ಜೀವನದ ಏರಿಳಿತಗಳು ಇವುಗಳ ಅರ್ಥಬೋಧದೊಂದಿಗೆ, ಕವಿಯ ಕಲೆಗಾರಿಕೆ ಸೃಜಿಸಿದ ಇನ್ನೊಂದು ಚಿತ್ರ ಯಾವಾಗಲೂ ಕಣ್ಣ ಮುಂದಿರುತ್ತದೆ. ವಸ್ತು ಕಾವ್ಯವಾಗಿ ಮಾರ್ಪಾಡುವಾಗ ನಡೆಯುವ ರಾಸಾಯನಿಕ ಕ್ರಿಯೆ, ನೋಡ ನೋಡುವಂತೆಯೇ ಇನ್ನೊಂದು ಸೃಷ್ಟಿಯನ್ನು ನಿರ್ಮಿಸಿಬಿಡುತ್ತದೆ.

ಇಲ್ಲಿ ಇನ್ನೊಂದು ವಿಷಯವನ್ನು ಪರಿಶೀಲಿಸಬೇಕು. ಹೊಸ ಮಾತನ್ನು ಹುಡುಕುವ ಕೆಲಸ ಪ್ರತಿಭೆಯದು. ಅದು ಕವಿಯ ಕಣ್ಣಿನ ಬೆಳಕಾಗಿ ಸತ್ಯದ ಗೂಢತೆಯನ್ನು ತೋರಿಸಬಲ್ಲದು. ಬೇಂದ್ರೆಯವರದು ಅಖಂಡವಾದ ನೈಜಪ್ರತಿಭೆ. 'ಭೃಂಗದ ಬೆನ್ನೇರಿ ಬಂತು', 'ಚತುರ್ಮುಖ-ಸೌಂದರ್ಯ', 'ಯುಗಾದಿ', 'ನಾದಲೀಲೆ', 'ಕನಸಿನ ಕಥೆ' ಮುಂತಾದ ಕವಿತೆಗಳಲ್ಲಿ ಆ ಪ್ರತಿಭೆ ಜೀವನದ ಒಂದು ಹೊಸ ಮಗ್ಗುಲನ್ನು ನೋಡಿದೆ. ಇದು ಕವಿಗಿರುವ ಸಹಜವಾದ ಕಾಣ್ಕೆಯ ಫಲವಾಗಿದೆ. ಆದರೆ ಆ ಹೊಸ ಸತ್ಯವನ್ನು ಹೊಸ ರೀತಿಯಲ್ಲಿ ಹೇಳಬೇಕಾದರೆ ಮಾತ್ರ ಸತತವಾದ ಅಭ್ಯಾಸ, ದುಡಿಮೆ, ಪ್ರಯತ್ನಶೀಲತೆಗಳು ಬೇಕು. ಅಭಿವ್ಯಕ್ತಿಯ ಈ ಸಾರ್ಥಕತೆಗೆ ಬೇಂದ್ರೆಯವರು ಮಾಡಿದ ಪ್ರಯೋಗಗಳಿಗೆ ಲೆಕ್ಕವೇ ಇಲ್ಲ. ಷಟ್ಪದಿ, ಕಂದಪದ್ಯಗಳಂಥ ಹಳೆಯ ವೃತ್ತಗಳಿಗೆ ಪುನರ್ಜನ್ಮವನ್ನು ಕೊಡುವದಲ್ಲದೆ, ಹೊಸ ಛಂದೋಮಾರ್ಗಗಳನ್ನು ಅವರು ನಿರ್ಮಿಸಿದ್ದಾರೆ. ಹಳೆಯ ಶಬ್ದಗಳನ್ನು ಹೊಸ ಅರ್ಥದಲ್ಲಿ ಉಪಯೋಗಿಸುವದಲ್ಲದೆ, ಶಬ್ದದ ಐತಿಹಾಸಿಕತೆಯನ್ನು ಕಾವ್ಯದ ಅನುಭವವನ್ನಾಗಿ ಮಾಡಿ ಹೇಳಿದ್ದಾರೆ. 'ಹೂ' ಎಂಬ ಕವಿತೆಯಲ್ಲಿಯ ಶಬ್ದದರ್ಶನ ಇಂಥದಾಗಿದೆ. 'ಏಳಿ' ಎಂಬ ಹಳೆಯ ವೃತ್ತದ ಹೆಸರಿನಲ್ಲಡಗಿದ ಐತಿಹಾಸಿಕತೆ ಆ ಕವಿತೆಯ ವಸ್ತುವಾಗಿ ಬಂದಿದೆ. ಪದ್ಯಗಳ ಗತಿಯನ್ನು, ಲಯವನ್ನು, ಯತಿಯನ್ನು ಬದಲಿಸಿ ಹೊಸ ಸಂಗೀತ ಕೇಳುವಂತೆ ಮಾಡಿದ್ದಾರೆ. ಕವಿಗೆ ಭಾಷೆಯನ್ನು ಬಿಟ್ಟರೆ ಬೇರೆ ಸಾಧನೆಯೇ ಇಲ್ಲ. ಈ ವಿಷಯದಲ್ಲಿ ಬೇಂದ್ರೆಯವರು ಅನೇಕ ಕವಿಗಳಿಂದ ಅನೇಕ ಪಾಠಗಳನ್ನು ಕಲಿತಿದ್ದಾರೆ. ಆದರೆ ಜೀವನದ ಅನುಭವಗಳಂತೆಯೇ ಈ ರೀತಿಗಳನ್ನೂ ಅವರು ತಮ್ಮವನ್ನಾಗಿ ಮಾಡಿಕೊಂಡಿದ್ದಾರೆ. ಅವರ ಕಲ್ಪನಾಶಕ್ತಿಯ ಸ್ವೋಪಜ್ಞತೆಯ ಫಲ ಅದು. ಈ ವಿಷಯದಲ್ಲಿ ಲಕ್ಷ್ಮೀಶ ಹಾಗೂ ಸರ್ವಜ್ಞರು ಅವರಿಗೆ ಗುರುಗಳಾಗಿದ್ದಾರೆ. ಆದರೆ ಪಡೆದುಕೊಂಡ ಋಣವನ್ನು ಬಡ್ಡಿ ಸಹಿತ ತೀರಿಸಿದ್ದಾರೆ.

ಇದೆಲ್ಲದರ ಪರಿಣಾಮವಾಗಿ ಬೇಂದ್ರೆಯವರು ಜೀವನದ ಅನುಭವವನ್ನು ಶಬ್ದಮಯವಾಗಿ ಮಾಡಿಕೊಂಡರು. ಒಂದು ಅರ್ಥದಲ್ಲಿ ಅವರ ಕಾವ್ಯವೆಲ್ಲ ಶಬ್ದಸ್ಮೃತಿಯಾಗಿದೆ. ಮೂಲವಸ್ತು ಯಾವದೇ ಆಗಿರಲಿ—ಪ್ರಕೃತಿಯ ಸೌಂದರ್ಯದ ವಿವರಗಳಾಗಿರಲಿ, ಸಾಮಾಜಿಕ ಪರಿಸ್ಥಿತಿಗಳಾಗಿರಲಿ, ಅಂತರಂಗದ ಅನುಭವಗಳಾಗಿರಲಿ—ಬೇಂದ್ರೆಯವರು ಅದಕ್ಕೆ ಶಬ್ದಶರೀರವನ್ನೊದಗಿಸುತ್ತಾರೆ. ದೊರೆತ ಅನುಭವವೆಲ್ಲ ಕೆಲವೊಂದು ಶಬ್ದ, ಪದಾವಳಿಗಳಲ್ಲಿ ರೂಪ ತಾಳುತ್ತದೆ. ಇನ್ನೊಂದು ದಿಕ್ಕಿನಿಂದ ಅವರ ಕಲ್ಪನೆ ಅನುಭವದ ಬೀಜಸ್ಥಿತಿಯನ್ನು ಮುಟ್ಟಿ ಆ ಅನುಭವವನ್ನು

ಜನ್ಮ ತಾಳುವಂತೆ ಮಾಡುತ್ತದೆ. ಇದು ಅವರ ಕಾವ್ಯಸೃಷ್ಟಿಯ ಮೊದಲ ಅವಸ್ಥೆಯಾಗಿದೆ. ಆಮೇಲೆ ಇಂಥ ಶಬ್ದಮಯ ಅನುಭವವನ್ನು ರೂಪಕ-ಚಿತ್ರಗಳ ಮೂಲಕ ಸಹಜವಾದ ತಾಳ-ಲಯಗಳ ವಿನ್ಯಾಸದಲ್ಲಿ ರೂಪಿಸುವದು ಅವರ ಕಾವ್ಯದ ಎರಡನೆಯ ಅವಸ್ಥೆಯಾಗಿದೆ. ಇದರಿಂದಾಗಿ ಮೂಲವಸ್ತುವಿನ ವಾಸ್ತವತೆಗೆ ಎಳ್ಳಷ್ಟೂ ಕುಂದು ಬರದೆ ಬೇಂದ್ರೆಯವರ ಕವಿತೆಗಳು ಇನ್ನೊಂದು ವಿನೂತನವಾದ ಲೋಕವನ್ನೇ ತೆರೆಯುತ್ತವೆ. ಅದು ಕಾವ್ಯದಲ್ಲಿಯ ರೂಪಕಶಕ್ತಿಯ ಫಲವಾಗಿದೆ. ಬೇಂದ್ರೆಯವರ ಕಾವ್ಯದಲ್ಲಿ ರೂಪಕ ಕಾವ್ಯದ ಜೀವಕ್ಕೆ ಮೂರ್ತಸ್ವರೂಪವನ್ನು ಕೊಡುವದಲ್ಲದೆ ಕಾವ್ಯಕ್ಕೆ ಒಂದು ಪ್ರತ್ಯೇಕತೆಯನ್ನೂ ಕಲ್ಪಿಸುತ್ತದೆ. ಈ ವಿಶಿಷ್ಟತೆ ಮನುಷ್ಯನ ವ್ಯಕ್ತಿತ್ವದಷ್ಟು ವಿಲಕ್ಷಣವಾಗಿದೆ. 'ಮೂರ್ತಿ' ಎಂಬ ಅವರ ನೀಳ್ಗವಿತೆಯನ್ನು ಈ ದೃಷ್ಟಿಯಿಂದ ನೋಡಬಹುದಾಗಿದೆ. ಜೀವನದ ಆದರ್ಶದ ಅಳಿವು-ಉಳಿವುಗಳನ್ನು ಒಂದು ಮೂರ್ತಿಯ ಸಂಕೇತದ ಮುಖಾಂತರವಾಗಿ ಅಲ್ಲಿ ಚಿತ್ರಿಸಲಾಗಿದೆ. ನೆಲಬ ಗಟ್ಟಿ ಬದುಕಾದ ಒಂದು ಕಲ್ಲು ಒಬ್ಬ ಶಿಲ್ಪಿಯ ಮನವನ್ನು ಆಕರ್ಷಿಸುತ್ತದೆ. ಒಬ್ಬ ಅರಸನ ಕನಸಿನಲ್ಲಿ ಅದೇ ಹೊತ್ತಿಗೆ ಮೂರ್ತಿಯ ಆಸೆ ಮೂಡಿರುತ್ತದೆ. ಅರಸನಾಜ್ಞೆಯನ್ನು ತಲೆಯಲ್ಲಿರಿಸಿ ಶಿಲ್ಪಿ ಆ ಕಲ್ಲನ್ನು ಹೊತ್ತು ತಂದು, ಅದರಲ್ಲಿ ಸುಂದರವಾದ ಮೂರ್ತಿಯೊಂದನ್ನು ನಿರ್ಮಿಸಿ ಅಲ್ಲಿಯೇ ಸತ್ತು ಹೋಗುತ್ತಾನೆ. ಅವನ ಜೀವನ ಅಲ್ಲಿಯೇ ಮುಕ್ತಿಯನ್ನು ಪಡೆದಂತಾಗುತ್ತದೆ. ಕಲ್ಲು ಮೂರ್ತಿಯಾಗಿ ತನ್ನ ದೈವಿಕತೆಯಿಂದ ಭಕ್ತರನ್ನು ತನ್ನೆಡೆಗೆ ಸೆಳೆಯುತ್ತದೆ. ಈ ಉಛ್ರಾಯದಲ್ಲಿಯೇ ಅದರ ಅವನತಿಯ ಬೀಜವೂ ಇದೆ. ಬರಬರುತ್ತ ಅದು 'ಚಿನ್ನದೆಷ್ಟೊ ತತ್ತಿಯಿಡುವ ಹಕ್ಕಿ'ಯಾಗಿ ಮೂರ್ತಿಭಂಜಕನನ್ನು ಕರೆಯುತ್ತದೆ. ಕೊಡತಿಯೊಡೆಯ ಅದನ್ನೊಡೆದು ಅದನ್ನು ಹೊನ್ನಸೆರೆಯಿಂದ ಬಿಡಿಸುತ್ತಾನೆ. ಈ ಕತೆಯ ರಮಣೀಯತೆಗಿಂತ ಅದರ ಪ್ರಮಾಣಬದ್ಧವಾದ ರಚನೆ ಅದ್ಭುತವಾಗಿದೆ. ಮನುಷ್ಯನ ದೇಹರಚನೆಯಂತೆ ಕವಿತೆಯ ಅಂಗಾಂಗಗಳು ವಸ್ತುವಿಗೆ ವಿಶಿಷ್ಟತೆಯನ್ನು ತಂದುಕೊಟ್ಟಿವೆ. ಮೂಲವಸ್ತು ರೂಪಕದ ಮುಖಾಂತರ ಒಂದು ಅರ್ಥವನ್ನು ಸೂಚಿಸುತ್ತಿದ್ದರೆ, ರೂಪಕ ತಾನೇ ವಸ್ತುವಾಗಿ ಅರ್ಥಪರಂಪರೆಯನ್ನೇ ನಿರ್ಮಿಸುತ್ತದೆ. ಜೀವನದ ತಿರುಳಷ್ಟನ್ನೇ ಕಾವ್ಯಾರ್ಥ ಹೇಳುತ್ತದೆ ಎನ್ನುತ್ತಾರೆ. ಹಾಗೆ ಹೇಳುವಾಗ ಬೇಂದ್ರೆಯವರ ಕಾವ್ಯ ಆ ಅರ್ಥಕ್ಕೆ ತಕ್ಕಂತೆ ಪ್ರತ್ಯೇಕವಾದ ಜೀವನವೊಂದನ್ನು ನಿರ್ಮಿಸಿಕೊಂಡು ಹೇಳುತ್ತದೆ.

ಬೇಂದ್ರೆಯವರ ಕಲ್ಪನಾಶಕ್ತಿ ಇಷ್ಟೊಂದು ಚೈತನ್ಯಮಯವಾಗಿರುವದರಿಂದಲೇ ಅದು ತೊಡುವ ರೂಪಗಳಿಗೆ ಲೆಕ್ಕವೇ ಇಲ್ಲ. ಕಣ್ಣು ಮುಚ್ಚಿ ಅವರ ಯಾವ ಎರಡು ಕವಿತೆಗಳನ್ನು ತೆಗೆದುಕೊಂಡರೂ ಅವು ಒಂದರಂತೆ ಇನ್ನೊಂದಿರುವದಿಲ್ಲ. ಆದ್ದರಿಂದ ಅವರ ಕವಿತೆಗಳನ್ನು ಬೇರೆ ಬೇರೆ ವರ್ಗಗಳಲ್ಲಿ ವಿಂಗಡಿಸುವದು ಸುಲಭಸಾಧ್ಯವಲ್ಲ. ಅವರ ಪ್ರಕೃತಿಗೀತಗಳನ್ನೇ ತೆಗೆದುಕೊಂಡರೂ ಅವುಗಳಲ್ಲಿಯ ವೈವಿಧ್ಯ ವಿಸ್ಮಯ-ಜನಕವಾಗಿದೆ. 'ಬೆಳುದಿಂಗಳ ನೋಡs', 'ಪಾತರಗಿತ್ತಿಯ ಪಕ್ಕ', 'ಶ್ರಾವಣ' ಮುಂತಾದ ಕವಿತೆಗಳು ಕವಿಯ ಆನಂದ ಹಿಡಿಸಲಾರದೆ ಹೊರಹೊಮ್ಮಿದ ಕವನಗ-

ಳಾಗಿವೆ. ಸೌಂದರ್ಯದರ್ಶನದಿಂದ ಉನ್ಮತ್ತವಾದ ಹೃದಯ ಆ ಆನಂದವನ್ನು ಅನೇಕ ಉಪಮೆ ಉತ್ಪ್ರೇಕ್ಷೆಗಳಲ್ಲಿ ಹರಿಬಿಡುತ್ತದೆ. ಬೆಳುದಿಂಗಳಿನ ಮಾದಕಶಾಂತಿ, ಪಾತರಗಿತ್ತಿಯ ಹುಚ್ಚು ಹಿಡಿಸುವ ಚಂಚಲತೆ, ಶ್ರಾವಣದ ಹಸಿರು, ಕವಿಯ ಪೂರ್ವಜನ್ಮದ ನೆನಪುಗಳೇನೋ ಎಂಬಂತಿರುವ ಚಿತ್ರಗಳನ್ನು ಸ್ಫುರಿಸುತ್ತವೆ. ಆದರೆ 'ಹೂ', 'ಚಳಿಯಾಕೆ' ಇಂಥ ಕವನಗಳು ಊಹೆಯ ವಿಲಾಸಕ್ಕಾಗಿ ಬರೆದಂಥವುಗಳಾಗಿವೆ. ಹೂವಿನ ಸುಕುಮಾರತೆಗಾಗಿ ಒಂದು ಪುರಾಣಕಥೆಯನ್ನೇ ಕಲ್ಪಿಸಿದ್ದಾರೆ. ಚಳಿಯ ಒಳತಿರುಳು ಒಯ್ಯಾರದ ಹೆಣ್ಣಾಗಿ ಆಟವಾಡುತ್ತದೆ. 'ಬೆಳಗು', 'ಚಂದ್ರ', 'ಮಲ್ಲಿಗೆ' ಇಂಥ ಕವನಗಳು ಕವಿಯ ಸ್ವಂತ ಅನುಭವದರ್ಶನವನ್ನು ತೋರಿಸುತ್ತವೆ. ನಿಸರ್ಗದ ಚಿತ್ರಕ್ಕಿಂತ ಕವಿಯ ಭಾವಲಹರಿ ಇಲ್ಲಿ ಹೆಚ್ಚು ಮಹತ್ವದ್ದಾಗಿದೆ. ಆದರೆ ಈ ಎಲ್ಲ ಕವನಗಳಲ್ಲೂ ಒಂದು ಸಾಮಾನ್ಯವಾದ ಕಾವ್ಯಧರ್ಮವಿದೆ. ಅನುಭವದ ವಿವಿಧ ಸ್ವರಗಳು, ಪ್ರಾಸಲಯಗಳಂತೆಯೇ ಹೊಂದಿಕೆಯನ್ನು ಪಡೆದಿರುತ್ತವೆ. 'ಗಿಡಗಂಟಿಯಾ ಕೊರಳೊಳಗಿಂದ ಹಕ್ಕೀಗಳ ಹಾಡು', 'ಇನ್ನು ಎಲ್ಲಿಗೋಟ, ನಂದನದ ತೋಟ', 'ನರುಗಂಪೆ ಇದರುಸಿರು' ಇಂಥ ಸಾಲುಗಳಲ್ಲಿ ಐಂದ್ರಿಯಕ ಅನುಭವದೊಡನೆ ಅಂತೀಂದ್ರಿಯದ ಅರಿವೂ ಇದ್ದುದನ್ನು ನೋಡಬಹುದಾಗಿದೆ. ಒಂದು ಭಾವಲಹರಿಯ ಕಾವಿನಲ್ಲಿ ವಸ್ತುವಿನ ಸಕಲಾರ್ಥವನ್ನೂ ಪ್ರಕಟಿಸಬೇಕೆಂಬ ಹುಮ್ಮಸ್ಸು ಬೇಂದ್ರೆಯವರ ಕಾವ್ಯಶಕ್ತಿಯ ಮೂಲಭೂತ ಗುಣವಾಗಿದೆ. 'ಯುಗಾದಿ' ಎಂಬ ಕವಿತೆಯಲ್ಲಿ ಪ್ರಕೃತಿಸುರಮ್ಯ ವಿವರಗಳ ಹೊಂದಿಕೆಯ ಕ್ರಮದಲ್ಲಿಯೇ ವಸಂತ-ತತ್ವದ ಪ್ರತಿಪಾದನೆಯನ್ನೂ ಕಾಣಬಹುದಾಗಿದೆ. 'ನಿದ್ದೆಗೊಮ್ಮೆ ನಿತ್ಯ ಮರಣ, ಎದ್ದ ಸಲ ನವೀನ ಜನನ' ಎಂದು ಕೊನೆಯಲ್ಲಿ ಹೇಳಿದರೂ ಈ ಅರ್ಥದ ಛಾಯೆ ಕವಿತೆಯ ಮೊವಲ ಸಾಲಿನಲ್ಲಿಯೇ ಸುಳಿದುಬಿಡುತ್ತದೆ. ಆದ್ದರಿಂದ ಕವಿತೆಗಳ ವೈವಿಧ್ಯ ಪ್ರಕೃತಿಯ ವೈವಿಧ್ಯದಂತೆ ಕುತೂಹಲಕಾರಿಯಾಗುತ್ತದೆ.

ಬೇಂದ್ರೆಯವರ ಪ್ರೇಮಗೀತಗಳು ಹಾಗು ಸಾಮಾಜಿಕ ಕವಿತೆಗಳಲ್ಲಿ ವಸ್ತುನಿಷ್ಠತೆ ಹೆಚ್ಚಾಗಿ ಕಂಡುಬರುತ್ತದೆ. ಕವಿಯ ಸ್ವಂತ ಜೀವನದ ವಿವರಗಳು ಅಲ್ಲಿ ಕಾಣುವದಿಲ್ಲವೆಂದಲ್ಲ. 'ಕುಣಿಯೋಣು ಬಾರಾ', 'ಮನದನ್ನೆ', 'ನೀ ಹೀಂಗ ನೋಡಬ್ಯಾಡ ನನ್ನ' ಈ ಕವನಗಳ ಮೂಲ ಭಾವ ಕವಿಯದೇ ಆಗಿದ್ದರೂ ಅದು ಸಾಮಾನ್ಯಜೀವನದ ಒಂದು ಭಾಗವಾಗಿ ಮಾತ್ರ ಬರುತ್ತದೆ. ಅಲ್ಲದೆ ಸಾಮಾನ್ಯ ಜೀವನದ ಸುಖ-ದುಃಖಗಳನ್ನು ಕವಿ ತನ್ನವೇ ಎಂಬಷ್ಟು ಆತ್ಮೀಯತೆಯಿಂದ ಚಿತ್ರಿಸುತ್ತಾನೆ. 'ಪುಟ್ಟ ವಿಧವೆ', 'ಕನಸಿನೊಳಗೊಂದು ಕಣಸು' 'ಹೆಣದ ಹಿಂದೆ', 'ಅನ್ನಾವತಾರ' ಇಂಥ ಕವನಗಳಲ್ಲಿಯ ಹೃದಯವೇಧಕತೆ, ಈ ಆತ್ಮೀಯತೆಯ ಫಲವಾಗಿದೆ. 'ಕಾಮಕಸ್ತೂರಿ' ಯಲ್ಲಿಯ ಮನೋಹರವಾದ ಪ್ರಣಯ ಕವಿತೆಗಳು, 'ಕರುಳಿನ ವಚನ'ಗಳ ವಾತ್ಸಲ್ಯಭಾವ, ಇವು ಬೇಂದ್ರೆಯವರ ಭವವನ್ನು ಅನುಭವವನ್ನಾಗಿ ಮಾಡಿಕೊಳ್ಳುವ ಪ್ರತಿಭೆಯನ್ನು ತೋರಿಸುತ್ತವೆ. ಕಾವ್ಯವೆಂದರೆ ಕೇವಲ ಕವಿಯ ಭಾವನೆಗಳ ಸಂಯಮಿತ ಅಭಿವ್ಯಕ್ತಿಯಷ್ಟೇ ಅಲ್ಲ; ಕವಿ ತನ್ನ ಭಾವನೆಗಳನ್ನು ಹೇಳುವದಲ್ಲದೆ ಸಾಮಾನ್ಯಜನತೆಯ ಸುಖ-ದುಃಖಗಳಲ್ಲಿ ಸಂಸ್ಕೃತಿ, ಆಚಾರ

ವಿಚಾರಗಳಲ್ಲಿ ಕೂಡ ಪಾಲುಗೊಳ್ಳುತ್ತಾನೆ. ಅವನವೇ ಆದ ಭಾವನೆಗಳ ಹಿಂದೆ ಕೂಡ ಈ ಸಾಮಾನ್ಯ ಸಂಸ್ಕೃತ ಹಿನ್ನೆಲೆ ಇದ್ದೇ ತೀರುತ್ತದೆ. ಉದಾಹರಣೆಗೆ ಬೇಂದ್ರೆಯವರ 'ಸಖೀಗೀತ'ವನ್ನೇ ನೋಡೋಣ. ಸ್ವಚ್ಛವಾಗಿ ಅದು ಕವಿಯ ಆತ್ಮಚರಿತ್ರೆಯ ಒಂದು ಭಾಗವಾಗಿದೆ. ಮದುವೆಯ ಮಧುರ ಸ್ಮೃತಿಗಳಿಂದ ಪ್ರಾರಂಭವಾಗುವ ಗೀತ, ದಾಂಪತ್ಯದಲ್ಲಿ ಸಖ್ಯಯೋಗ ಮೂಡಲೆಂಬ ಕವಿಯ ಹಾರೈಕೆಯೊಂದಿಗೆ ಮುಗಿಯುತ್ತದೆ. ಕವಿಯ ಸುಖ-ದುಃಖಗಳು, ದಾಂಪತ್ಯದ ಸರಸ-ವಿರಸಗಳು, ಸಂಸಾರದ ಅನೇಕ ತಾಪತ್ರಯಗಳು ಇವೇ ಕಾವ್ಯದ ವಸ್ತುವಾಗಿವೆ. ಈ ವಸ್ತುವಿನ ಒಳತಿರುಳಾಗಿರುವ ಭಾವಲಹರಿಯೂ ಕವಿಯದೇ. ಅಷ್ಟೇ ಅಲ್ಲ, ಋತುಮಾನಗಳ ಚಿರಂತನ ಲೀಲೆ ಕೂಡ ಕವಿಯ ನೆನಪುಗಳ ಮೂಲಕ ಒಂದು ಸ್ಥಾನಿಕ ಕ್ರಿಯೆಯಾಗಿ ಪರಿಣಮಿಸಿದೆ. ಆದರೆ ಇಲ್ಲಿ ಬಂದಿರುವ ಜೀವನಚಿತ್ರ ವೈಯಕ್ತಿಕವಾಗಿದ್ದರೂ ಸಾಮಾನ್ಯ ಜೀವನದ ಒಂದು ಅಂಶವಾಗಿ ಬಂದಿದೆ. ದಾಂಪತ್ಯದಲ್ಲಿ ಸಖ್ಯಯೋಗ ಬರಬೇಕೆಂಬುದು ಬೇಂದ್ರೆಯವರ ಕಾವ್ಯದರ್ಶನ; ಅದು ಸಾಮಾನ್ಯ ಸಂಸ್ಕೃತಿಗೆ ವಿರೋಧವಾಗಿಲ್ಲ.

ಬೇಂದ್ರೆಯವರ ತಾತ್ವಿಕ ಕವಿತೆಗಳು ಎಲ್ಲ ದೃಷ್ಟಿಯಿಂದ ಕನ್ನಡ ಕಾವ್ಯಸಂಪ್ರದಾಯಕ್ಕೆ ಬೆಲೆಯುಳ್ಳ ಕಾಣಿಕೆಗಳಾಗಿವೆ. ಮೊದಲಿನಿಂದಲೂ ಬೇಂದ್ರೆಯವರು ಅರವಿಂದರ ತತ್ವಪ್ರಣಾಲಿಯ ಪ್ರಭಾವದಲ್ಲಿ ಬೆಳೆದುಬಂದವರು. ಅವರ ಜೊತೆಗೇ ಕನ್ನಡದ ವಚನಕಾರರ, ಹಾಗೂ ರತ್ನಾಕರವರ್ಣಿ, ನಿಜಗುಣಶಿವಯೋಗಿಗಳಂಥ ತಾತ್ವಿಕ ಕವಿಗಳನ್ನೂ ಅವರು ಆಳವಾಗಿ ಅಭ್ಯಾಸಮಾಡಿದವರು. ಬೇರೆ ದರ್ಶನ ಶಾಸ್ತ್ರಗಳ ಪರಿಚಯು ಕೂಡ ಅವರಿಗಿದೆ. ತಾವು ಕಂಡ ತಾತ್ವಿಕ ಸತ್ಯವನ್ನು ಇಂಥ ವಿಚಾರಪ್ರಣಾಲಿಗಳ ಮೂಲಕ ಅವರು ಚಿತ್ರಿಸುತ್ತಾರೆ. ಅದರ ಜೊತೆಗೆ ನಾಡಿನ ಸಂಸ್ಕೃತಿದರ್ಶನ ಹಿನ್ನಲೆಗೆ ಇರುತ್ತದೆ. 'ಸಚ್ಚಿದಾನಂದ'ದಂಥ ಕವಿತೆಗಳಲ್ಲಿ ಈ ಅಭ್ಯಾಸದ ಸಂಕೀರ್ಣತೆಯನ್ನು ನೋಡಬಹುದಾಗಿದೆ. 'ಜೋಗಿ' ಎಂಬ ಅವರ ಕವನ ಈ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಜೀವನದಲ್ಲಿ ಮೂಡುವ ಕಾಳ-ರಾತ್ರಿಯ ಅನುಭವ ಅಲ್ಲಿ ವರ್ಣಿತವಾಗಿದೆ. ಈ ಕವಿತೆಯಲ್ಲಿ ಭೌಗೋಲಿಕ ವಿವರಗಳ ಹೊಂದಿಕೆಯಲ್ಲಿ, ಅವು ಧ್ವನಿಪೂರ್ಣವಾಗಿ ತಾತ್ವಿಕ ಪ್ರತಿಮೆಗಳನ್ನು ಸೂಚಿಸುವ ರೀತಿಯಲ್ಲಿ, ಬೇಂದ್ರೆಯವರ ತಾತ್ವಿಕ ಮನೋಧರ್ಮದ ಸಂಕೀರ್ಣತೆ ನಿಚ್ಚಳವಾಗಿ ಕಾಣುತ್ತದೆ. ಪದ್ಯಶೈಲಿ ಜಾನಪದಕಾವ್ಯದ್ದಾಗಿದ್ದು, ನಮ್ಮ ಜಾನಪದ ಅನುಭಾವಿಗಳ ನೆನಪನ್ನು ಮತ್ತೆ ಮತ್ತೆ ಹುಟ್ಟಿಸುತ್ತ, ಕವಿಯ ತಾತ್ವಿಕ ಅನುಭವವನ್ನು ಅನ್ಯಾದೃಶವಾಗಿ ಚಿತ್ರಿಸುತ್ತದೆ. 'ಸ್ವಪ್ನನೌಕೆ' ಎಂಬ ಇನ್ನೊಂದು ಅವರ ಕವನ ಶ್ರೀ. ಅರವಿಂದರ 'Dream-boat' ಕವನದ ಕನ್ನಡ ರೂಪವಾಗಿದೆ. ದೇವರ ಬರವಿಗಾಗಿ ಜೀವ ವಧುವಿನಂತೆ ಕಾಯುತ್ತಿರುವ ಅನುಭವವನ್ನು ವರ್ಣಿಸುತ್ತದೆ. ಜೀವ ದೇವರ ಈ ಮಧುರಭಾವ ಹೊಸದೇನೂ ಅಲ್ಲ; ಆದರೆ ಈ ಭಾವದ ಚಿತ್ರಣದಲ್ಲಿ ಹಾಗೂ ಉಪಯೋಗಿಸಿದ ಪ್ರತಿಮೆಗಳು ಮತ್ತು ಭಾಷೆಯಲ್ಲಿ ಅನನ್ಯತೆಯಿದೆ. ಜೀವಸಖ ಸ್ವಪ್ನಾಗ್ನಿಸೃಷ್ಟವಾದ ನೌಕೆಯನ್ನೇರಿಕೊಂಡು ದಂತಕತೆಗಳಲ್ಲಿಯ ರಾಜ

ಕುಮಾರನಂತೆ ಬರುತ್ತಾನೆ. ಕಾಮಚಿತೆಯಲ್ಲಿ ಮಣಿಸಿದ ಕಬ್ಬಿನಂತೆ ಅವನ ಹುಬ್ಬು; ಅವನ ಕಾಯ ಆಗರ್ಭವಾಗಿ ಬಂಗಾರದ ಛಾಯೆಯಿಂದ ತುಂಬಿದೆ. ಮೌನವನ್ನು ಕರಗಿಸಿ ಎರೆದ ಮಿಂಚಿನ ಎಳೆಯಂತೆ ಅವನ ಮಾತು. ಅವನು ಬಂದು ವಧುವನ್ನು ಕೇಳುತ್ತಾನೆ : ' ಆ ಹೃದಯಜ್ವಾಲಾಮಾಲಾಲಂಕೃತಾಯಜ್ಞಾ ಸಿದ್ಧವೇನೇ। ಕಂಕಣಾ ಬದ್ಧವೇನೇ। ಬಂದೆನೇ ಬರುವಿಯೇನೇ ?। ' ವಧು ಅವನ ದರ್ಶನಕ್ಕೇ ಮರುಳಾಗಿ, ಕೇಳಬೇಕೆಂದದ್ದನ್ನು ಮರೆತು ನಿಲ್ಲುತ್ತಾಳೆ. ಮುಹೂರ್ತ ಕಳೆದದ್ದರಿಂದ ಬಂದವನು ಹೊರಟುಹೋಗುತ್ತಾನೆ. ಜೀವ ಪರಿತ್ಯಕ್ತ ವಧುವಿನಂತೆ ಶೂನ್ಯತೆಯನ್ನು ಅನುಭವಿಸುತ್ತದೆ. 'ಹೋಯ್ತೋ ಹಡಗಾ ಬಂಗಾರದ ಹುಡುಗಾ' ಎಂದು ಹಲುಬುತ್ತದೆ. ಈ ಕವನದ ಪದರುಪದರುಗಳಲ್ಲಿಯೂ ಬೇರೆ ಬೇರೆ ದರ್ಶನಗಳ ಸಂಸ್ಕಾರವಿದೆ. ಅನುಭವದ ತಾತ್ವಿಕತೆ ಸ್ಫುಟವಾಗಿ ಕಾಣುವಂತೆ ಕಂಡು, ಅದರ ಜೊತೆಗೆ ಒಂದು ವಿರಹಗೀತದ ಉತ್ಕಟತೆ ಕೂಡ ಅನುಭವಕ್ಕೆ ಬರುತ್ತದೆ. ಬೇಂದ್ರೆಯವರ ಎಷ್ಟೋ ತಾತ್ವಿಕ ಕವನಗಳಲ್ಲಿ ಅರವಿಂದರ ತತ್ವದರ್ಶನ ಸಂಪೂರ್ಣ ವಾಗಿ ಮೂಡಿದೆ. ಅರವಿಂದರ ಜೊತೆಗೇ ಬೇರೆ ತತ್ವಜ್ಞರ ದರ್ಶನಗಳಿಂದ ಬೇಂದ್ರೆ ಯವರ ಕಾವ್ಯ ವಿಶೇಷವಾದ ಶ್ರೀಮಂತಿಕೆಯನ್ನು ಪಡದಿದೆಯೆಂದು ಹೇಳಬಹುದು. ಆ ಲೋಕೋತ್ತರವಾದ ಮಹತಿಯ ಅನುಭವವನ್ನು ವೇದ್ಯವಾಗಿಸಲಿಕ್ಕೆಂದೇ ಕೆಲ ಕವನಗಳನ್ನು ಬರೆಯಲಾಗಿದೆ. ಇಂಥ ಕವನಗಳು ಕನ್ನಡ ಸಂಪ್ರದಾಯದಲ್ಲಿ ಶಾಶ್ವತ ವಾದ ಅಂಶವಾಗಿ ಉಳಿಯುವದರಲ್ಲಿ ಯಾವ ಸಂಶಯವೂ ಇಲ್ಲ.

ಇಷ್ಟು ಸಮೀಪದ ವರ್ತಮಾನಕಾಲದಿಂದ ನೋಡುತ್ತ ಬೇಂದ್ರೆಯವರ ಕಾವ್ಯದ ಬೆಲೆ ಕಟ್ಟುವದು ಅಸಾಧ್ಯವಾದ ಮಾತು. ಅವರ ಕಾವ್ಯದ ಕ್ರಮವಾದ ಹಾಗೂ ಸಾವಧಾನವಾದ ಅಭ್ಯಾಸ ಇನ್ನೂ ಹೆಚ್ಚು ಮಾತುಗಳನ್ನು ಹೇಳಬಹುದು. ಅವರ ಕವಿತೆಗಳು ಜನಮನದ ಮೇಲೆ ಆಳವಾದ ಪ್ರಭಾವವನ್ನು ಬೀರಲು ಇನ್ನೂ ಕಾಲ ಬೇಕಾದೀತು. ಆ ಸಂಸ್ಕಾರದ ಆವರಣದಲ್ಲಿ ಹುಟ್ಟಿದ ವಿಮರ್ಶೆ ಈಗಿನಕಿಂತ ಹೆಚ್ಚು ನಿಶ್ಚಿತವಾಗಬಹುದು. ಈಗ ಇಷ್ಟು ಮಾತ್ರ ಹೇಳಬಹುದಾಗಿದೆ : ಬೇಂದ್ರೆ ಯವರ ಕಾವ್ಯ ಇಲ್ಲಿಯ ವರೆಗಿದ್ದ ಕಾವ್ಯದ ತಿಳುವಳಿಕೆಯಲ್ಲಿ—ಅದು ಯಾವ ರೀತಿ ಯಲ್ಲಿ ಎಂಬುದನ್ನು ಹೇಳಲಾಗದಿದ್ದರೂ — ಬದಲಾವಣೆಯನ್ನುಂಟುಮಾಡಿದೆ ; ಕನ್ನಡ ಭಾಷೆಯ ವ್ಯಂಜಕಶಕ್ತಿಯನ್ನು ಹೆಚ್ಚು ಮಾಡಿದೆ; ಅಲ್ಲದೆ ಕನ್ನಡ ಕಾವ್ಯ ಸಂಪ್ರದಾಯದ ಇತಿಹಾಸವನ್ನೆಲ್ಲ ಅಭಿವ್ಯಕ್ತಿಯ ಕ್ರಮಗಳಲ್ಲಿ ಮೂಡಿಸಿದೆ. ಈ ಮಾತುಗಳೇ ಅವರ ಕಾವ್ಯದ ಮಹತ್ವಪೂರ್ಣತೆಯನ್ನು ಸಿದ್ಧಪಡಿಸುತ್ತವೆ. ಮೇಲಾಗಿ ಬೇಂದ್ರೆಯವರ ಪ್ರತಿಭೆ ದೊಡ್ಡ ಕವಿಗಳ ಪ್ರತಿಭೆಯ ಜಾತಿಯದು. ಅದರ ಮೂಲ-ಪ್ರಕೃತಿ ಕಾಮಪ್ರಕೃತಿ. ಆ ಕಾಮ ಒಮ್ಮೆ ದೇವಕಾಮವಾಗಿ, ಕೀಟ್ಸ್ ಹೇಳುವಂತೆ ' ಹಣ್ಣುಗಳನ್ನು ತಿರುಳಿನಿಂದ ತುಂಬುವಂತೆ ' ಮಾಡಬಲ್ಲದು ; ಪ್ರಕೃತಿಯು ಹಲ ವಾರು ಲೀಲೆಗಳಲ್ಲಿ, ಮನುಷ್ಯನ ಸುಖದುಃಖಗಳಲ್ಲಿ, ಸಂತಾನೋತ್ಸವದ ಸಂಭ್ರಮ-ಗಳಲ್ಲಿ ಪಾಲುಗೊಳ್ಳಬಲ್ಲದು. ಇನ್ನೊಮ್ಮೆ ಜೀವದ ಅಭೀಪ್ಸೆಯಾಗಿ ಭೂಮಿಯ ಸಕಲ ಸತ್ವಗಳೊಂದಿಗೂ ಮೇಲೇರಬಲ್ಲದು. ಬ್ರಹ್ಮ, ಯಕ್ಷ, ರಾಕ್ಷಸ, ಅಪ್ಸರೆ,

ಪಿಶಾಚಿ ಮುಂತಾದವರನ್ನು ಜೀವಂತವಾಗಿ ಸೃಷ್ಟಿಸಬಲ್ಲದು. ಪ್ರಣಯಸಮಾಧಿಯಲ್ಲಿಯೂ ಕಲ್ಪವೃಕ್ಷ ವೃಂದಾವನಗಳನ್ನು ಕಾಣಬಲ್ಲದು. ಶೇಕ್ಸಪಿಯರ್, ಕೀಟ್ಸ್, ಕಾಳಿದಾಸರ ಪ್ರತಿಭೆಯೂ ಇದೇ ಮಾದರಿಯದಾಗಿದೆ. ತಮ್ಮೆದುರಿಗಿದ್ದ ಜೀವನದ ಅನುಕೂಲತೆ ಅನಾನುಕೂಲತೆಗಳಿಗನುಸಾರವಾಗಿ ಅವರು ತಮ್ಮ ಕಾವ್ಯವನ್ನು ಸೃಷ್ಟಿಸಿದರು. ಜೀವನದ ಮೂಲಭೂತವಾದ ಶಕ್ತಿಸಂಚಯು, ಜೀವ ಕಾಣುವ ಕನಸುಗಳು, ಅದರ ಅವಸ್ಥಾಂತರಗಳು, ದೈವಗತಿಯ ಪ್ರಭಾವ ಇಂಥ ಅದೃಶ್ಯ ವ್ಯಾಪಾರಗಳನ್ನು ಈ ಕವಿಗಳು ಸುತ್ತಲಿನ ಜೀವನಕ್ರಮದಲ್ಲಿ ಗುರುತಿಸಿ ತಮ್ಮ ಸಹಜ ಮಾಧ್ಯಮದ ಮೂಲಕ ಪ್ರಕಟಿಸಿದರು. ಬೇಂದ್ರೆಯವರು ಇವೇ ವಿಷಯಗಳನ್ನು ಭಾವಗೀತದ ಮಾಧ್ಯಮದಲ್ಲಿ ಕನ್ನಡ ಭಾಷೆಯ ಸರ್ವಶಕ್ತಿಗಳನ್ನು ಉಪಯೋಗಿಸಿಕೊಂಡು, ಸಮಕಾಲೀನ ಜೀವನದ ಚಿತ್ರ ಪ್ರತಿಮೆಗಳ ಮುಖಾಂತರವಾಗಿಯೇ ಪ್ರಕಟಿಸಿದರು. ಹೀಗೆ ಮೂಡಿ ಬಂದ ಕಾವ್ಯದ ತೂಕ, ಬೆಲೆ ಎಷ್ಟೆಂಬುದು ಸೂಕ್ಷ್ಮವಾದ ಹಾರ್ದಿಕವಾದ ಅಭ್ಯಾಸ, ವಿಮರ್ಶೆಗಳು ನಿರ್ಣಯಿಸಬೇಕಾದ ಮಾತು. ಆ ನಿರ್ಣಯಕ್ಕೆ ತಕ್ಕ ಸಂದರ್ಭವಾಗಲಿ, ಕಾಲವಾಗಲಿ ಈಗ ಇನ್ನೂ ಬಂದಿಲ್ಲ. ನಾವಿನ್ನೂ ಆ ಕಾವ್ಯದ ರಸಾನುಭವದಲ್ಲಿ ಮಾತ್ರ ತೊಡಗಿದ್ದೇವೆ. ಆ ಕಾವ್ಯದ ಸಕೃತ್ ದರ್ಶನಕ್ಕೇ ಅದರ ಸಂಮೋಹನಶಕ್ತಿಗೆ ಒಳಗಾಗಿದ್ದೇವೆ. ಈಗಿನ ಅಪ್ರತಿಭತೆ ಕಡಿಮೆಯಾದ ಮೇಲೆ ಸಮಾಧಾನದಿಂದ ಈ ಕಾವ್ಯದ ಬೆಲೆ ಕಟ್ಟಬಹುದು. ಈಗ ಆಗಿದ್ದು ಅಭಿಜ್ಞಾನ ಮಾತ್ರ; ಪ್ರತ್ಯಭಿಜ್ಞಾನ ಭವಿತವ್ಯಕ್ಕೆ ಸೇರಿದ ವಿಷಯವಾಗಿದೆ.

ವಿನಾಯಕರು ಬೇಂದ್ರೆಯವರು ಕಟ್ಟಿದ 'ಗೆಳೆಯರ ಗುಂಪಿ'ನಲ್ಲಿದ್ದವರು; ಆ ಸಂಪ್ರದಾಯದಲ್ಲಿಯ ಪ್ರಮುಖ ಕವಿಗಳಾಗಿದ್ದಾರೆ. ಆದರ್ಶಪ್ರಿಯತೆ ವಿನಾಯಕರ ಕಾವ್ಯಸ್ಫೂರ್ತಿಯ ಮೂಲವಾಗಿದೆ. ಇವರ ಮೊದಲ ಸಂಗ್ರಹಗಳಾದ 'ಪಯಣ' ಹಾಗೂ 'ಕಲೋಪಾಸಕ'ಗಳು ಸೌಂದರ್ಯದರ್ಶನದಿಂದ ಮುಗ್ಧವಾದ ತರುಣ ಕವಿಯ ದೃಷ್ಟಿಯನ್ನು ಪ್ರತಿಬಿಂಬಿಸುತ್ತವೆ. ಆದರ್ಶದ ಹಂಬಲ ಇಲ್ಲಿ ಕನಸುಗಾರಿಕೆಯಾಗಿ ಬಂದಿದೆ. ಆದ್ದರಿಂದ ಸಹಜವಾಗಿ ಇಲ್ಲಿಯ ಎಲ್ಲ ಕವಿತೆಗಳಲ್ಲಿ ಅನುಭವದ ಅಂಶ ಕಡಿಮೆಯಾಗಿದ್ದು, ಇನ್ನೊಂದು ಆದರ್ಶಲೋಕವನ್ನು ಕಾಣುವ ಹಂಬಲ ಹೆಚ್ಚಾಗಿ ಕಾಣುತ್ತದೆ. 'ಹುಟ್ಟಿದೂರು', 'ಭಾವಗೀತೆ', 'ತಾಯವ್ವನ ಸಮಾಧಿ' ಇಂಥ ಕವಿತೆಗಳಲ್ಲಿ ಅನುಭವದ ನೈಜತೆಯೇನೋ ಕಾಣುತ್ತದೆ. ಆದರೆ ಇಲ್ಲಿಯೂ ಕನಸುಗಾರಿಕೆಯೇ ಕವಿತೆಯ ತಿರುಳಾಗಿರುತ್ತದೆ. 'ಭಾವಗೀತೆ'ಯಲ್ಲಿ ವಿರಹದ ನೋವು ಪ್ರಾಮಾಣಿಕವಾಗಿದೆ. ಆದರೆ ಆ ಅನುಭವವನ್ನು ಕವಿ ಒಂದು ದಂತಕತೆಯ ಸಾಹಸಪೂರ್ಣವಾದ ಘಟನೆಯೆಂಬಂತೆ ಕಾಣುತ್ತಾನೆ. ಆದರೆ ಈ ಕಾವ್ಯದ ಬಗ್ಗೆ ಒಂದು ಮಾತನ್ನು ನಿಶ್ಚಯವಾಗಿ ಹೇಳಬಹುದಾಗಿದೆ. ಇಲ್ಲಿಯ ಕನಸುಗಾರಿಕೆ ಅತ್ಯಂತ ಪ್ರಾಮಾಣಿಕವಾದದ್ದು. ವಿನಾಯಕರ ಮುಂದಿನ ಸಂಗ್ರಹಗಳ ಕಾವ್ಯಸಿದ್ಧಿಗೆಲ್ಲ ಈ ಪ್ರಾಮಾಣಿಕತೆಯೇ ಬೆಂಬಲವಾಗಿದೆ.

ಮುಂದೆ ವಿನಾಯಕರು ಪಶ್ಚಿಮಕ್ಕೆ ಹೋದಾಗ 'ಸಮುದ್ರಗೀತಗಳು' ಮೂಡಿ ಬಂದವು. ಅನುಭವದ ಹೊಸತನ ವಿನಾಯಕರ ಸಂವೇದನೆಗಳ ಶಕ್ತಿಯನ್ನು ಬೆಳೆ

ಸಿತು. ಆದ್ದರಿಂದ ಈ ಸಂಗ್ರಹದಲ್ಲಿಯ ಕವನಗಳೆಲ್ಲ ವಿನಾಯಕರ ಶ್ರೇಷ್ಠತರಗತಿಯ ಕಾವ್ಯವನ್ನು ತೋರಿಸುತ್ತವೆ. ಈ ಮೊದಲು ಬಂದ ಅನುಭವ ಕೇವಲ ಕಾಲ್ಪನಿಕ ವಾಗಿತ್ತು. ಕಲ್ಪನೆಯ ಕನ್ನಡಿಯಲ್ಲಿ ಕಂಡ ಜಗತ್ತು ಬಣ್ಣಬಣ್ಣವಾಗಿದ್ದರೂ ಅದಕ್ಕೆ ಜೀವಂತತನವಿರಲಿಲ್ಲ. ಈಗ ಆ ಅನುಭವ ಪ್ರತ್ಯಕ್ಷವಾಗಿ ಕಣ್ಣೆದುರು ಬಂದಾಗ ವಿನಾಯಕರ ಸ್ಫೂರ್ತಿಹೃದಯ ಹೊಸ ಶಬ್ದಪ್ರಪಂಚಕ್ಕಾಗಿ ಹಾತೊರೆಯಿತು. 'ಶರಧಿಗೆ ಕೊಡದಿರು ಷಟ್ಪದಿಯ ದೀಕ್ಷೆಯನು' ಎಂಬ ಮಾತು ಸಾರ್ವತ್ರಿಕವಾದ ಸತ್ಯವಲ್ಲ. ಆದರೆ ಆ ಮಾತಿನಲ್ಲಿ ಕವಿಯ ಪ್ರಾಮಾಣಿಕ ಉತ್ಕಟತೆಯನ್ನು ಕಾಣಬಹುದಾಗಿದೆ. ಇದರಿಂದಾಗಿ ವಿನಾಯಕರ ಕಾವ್ಯ ಸಂಪೂರ್ಣವಾಗಿ ಹೊಸ ಹಾದಿಯನ್ನು ಹಿಡಿಯಿತು. 'ಸಮುದ್ರಗೀತಗಳ'ಲ್ಲಿಯ ಕಾವ್ಯದ ಬಹಳ ದೊಡ್ಡ ಗುಣವೆಂದರೆ ವಿನಾಯಕರ ಕಲ್ಪನಾಶಕ್ತಿಯ ತನ್ಮಯತೆ ಹಾಗೂ ಸಾಕ್ಷಿತ್ವ. ಸಮುದ್ರದ ಅನೇಕ ಭಾವಲಹರಿಗಳು, ಭೂಮಧ್ಯಸಮುದ್ರದ ಮೇಲಿನ ಆಕಾಶ, ಎಡಿನ್‌ಬರೋ ಕೋಟೆಯ ತುದಿ, ಕ್ರೀಟದೇವಿಯ ಚಲುವು ಮತ್ತು ಈ ವಿಚಿತ್ರವಾದ ಪರಿಸರಕ್ಕೆ ಅಂಟಿಕೊಂಡಂತಿರುವ ಇತಿಹಾಸ ಇವುಗಳೊಡನೆ ವಿನಾಯಕರ ಕಲ್ಪನೆ ತನ್ಮಯವಾಗಿ ಸಹಜ ಛಂದಲ್ಲಿ ಹಾಡಿಬಿಡುತ್ತದೆ. ಇಂಥ ಜೀವನದರ್ಶನದ ಪ್ರತಿಕ್ರಿಯೆಯಾಗಿ ಬರುವ ಭಾವನೆಗಳ ಏರಿಳಿತವನ್ನು ಪ್ರಾಮಾಣಿಕವಾಗಿ ರೂಪಿಸುತ್ತದೆ. ಆದರೆ ಇದರ ಜೊತೆಗೇ ವಿನಾಯಕರ ಜೀವನದೃಷ್ಟಿ ಈ ಎಲ್ಲ ಭಾವನೆಗಳನ್ನು ಒಂದು ವಿಷಾದ-ಪೂರ್ಣತೆಯಿಂದ ನೋಡುತ್ತ ಮುಂದೆ ಹೋಗುತ್ತದೆ. ಇದರಿಂದಾಗಿ ಈ ಸಂಗ್ರಹದ ಎಲ್ಲ ಕವಿತೆಗಳಿಗೂ ಒಂದು ಏಕಮುಖತೆ ಬಂದಿದೆ. ರಸವಂತಿಕೆ ಹಾಗೂ ಛಂದಸ್ಸಿನ ಸಮರ್ಥತೆಯ ದೃಷ್ಟಿಯಿಂದ ಈ ಸಂಗ್ರಹ ಅತ್ಯಂತ ಯಶಸ್ವಿಯಾದ ಕೃತಿಗಳಲ್ಲೊಂದಾಗಿದೆ. ಇದಾದ ಮೇಲೆ ಬಂದ ವಿನಾಯಕರ ಕವನಸಂಗ್ರಹಗಳಲ್ಲಿ 'ಬಾಳದೇಗುಲ'ದಲ್ಲಿ ಮುಖ್ಯವಾಗಿದೆ. ಅದರ ಮುಂದಿನ ಕವನಸಂಗ್ರಹಗಳೆಲ್ಲ ನವ್ಯಸಂಪ್ರದಾಯಕ್ಕೆ ಸೇರಿದವುಗಳಾಗಿವೆ. 'ಬಾಳದೇಗುಲ'ದಲ್ಲಿ ಇದು ಕವನಸಂಗ್ರಹವೆನ್ನುವದಕ್ಕಿಂತ ಕವನಮಂದಿರವೆನ್ನಬಹುದು. ಮಗುವಿನಿಂದ ಹಿಡಿದು ಮುಕ್ತನ ವರೆಗೆ ಎಲ್ಲ ಬಗೆಯ ಮನುಷ್ಯಮಾದರಿಗಳ ಚಿತ್ರಣ ಇಲ್ಲಿದೆ. ಜೀವನದ ವೈವಿಧ್ಯವನ್ನು ಚಿತ್ರಿಸುತ್ತ ಅದರ ಮೂಲಕವಾಗಿ ಜೀವನದ ರಹಸ್ಯವನ್ನು ತಿಳಿಯುವ ಸಾಹಸ ಇಲ್ಲಿ ಕಂಡುಬರುತ್ತದೆ. ಕಾವ್ಯದ ಮೂಲಕವಾಗಿ ಜೀವನವನ್ನು ಮತ್ತೊಮ್ಮೆ ಜೀವಿಸಿ ನೋಡಿದಾಗ ಈ ರಹಸ್ಯ ಕಾಣಬಹುದು. ಅದರ ಜೊತೆಗೆ ಸುತ್ತಲಿನ ಜೀವನದ ವಸ್ತುನಿಷ್ಠ (objective)ವಾದ ಚಿತ್ರಣವೂ ಅದಕ್ಕೆ ಸಹಾಯಕಾರಿಯಾಗಬಹುದು. 'ಬಾಳದೇಗುಲ'ದಲ್ಲಿ ಸಮಾವೇಶರಾಗುವ ಈ ಎಲ್ಲ ವ್ಯಕ್ತಿಗಳ ಪ್ರಾಣವಾಗಿರುವ ಶಕ್ತಿ – ಬಾಳದೇವಿ – ದೇಗುಲದ ಮರೆಯಲ್ಲಿ ಅಡಗಿದ್ದಾಳೆಂಬುದು ವಿನಾಯಕರು ಕಂಡ ದರ್ಶನವಾಗಿದೆ. ಅವಳ ದರ್ಶನವಾಗದೆ ಮುಕ್ತಿಯಿಲ್ಲ. ಈ ಹೊಸ ಪ್ರಜ್ಞೆಯ ಬೆಳಕಿನಲ್ಲಿ ವಿನಾಯಕರು ಬಾಳನ್ನು ಸಪ್ರೇಮದೃಷ್ಟಿಯಿಂದ ನೋಡಿದ್ದಾರೆ. ನಮ್ಮ ಕವಿಗಳಲ್ಲಿಯೇ ಅವರನ್ನು ಶ್ರೇಷ್ಠ ಮಾನವತಾವಾದಿಗಳೆನ್ನಬಹುದು. ಈ ಸಂಗ್ರಹದಲ್ಲಿ ಅವರ ಜೀವನಶ್ರದ್ಧೆ ಕಾವ್ಯದ ಸ್ಥಾಯಿಭಾವವಾಗುವ ಮಟ್ಟಿಗೆ ಆಳವಾಗಿದೆ.

ಅದರ ಜೊತೆಗೆ ಜೀವನದ ಬಗ್ಗೆ ಇರುವ ಅವರ ಕುತೂಹಲ, ಕಂಡ ಅನುಭವವನ್ನು ಕಾವ್ಯವನ್ನಾಗಿ ಮಾರ್ಪಡಿಸುವಷ್ಟು ಸಹಜಮುಗ್ಧತೆಯಿಂದ ಕೂಡಿದೆ.

ವಿನಾಯಕರ ಮನೋಧರ್ಮ ಅನೇಕ ಬಗೆಯ ಸಂಸ್ಕಾರಗಳಿಂದ ಕೂಡಿದ್ದಾಗಿದೆ. ಇಂಗ್ಲಿಶ್ ಸಾಹಿತ್ಯದ ವಿಸ್ತಾರವಾದ ಅಭ್ಯಾಸ, ವಿಶ್ವವಿದ್ಯಾಲಯದ ಶಿಕ್ಷಣ, ದೂರ ದೇಶದ ಪ್ರಯಾಣ ಇವೆಲ್ಲ ಅವರ ವ್ಯಕ್ತಿತ್ವವನ್ನು ರೂಪಿಸಿವೆ. ಕನ್ನಡದ ಹೊಸ ಸಾಹಿತ್ಯವನ್ನು ಹೊಸ ರೀತಿಯಲ್ಲಿ—ಆದರೆ ಕನ್ನಡದ ರೀತಿಯಲ್ಲಿ—ಬೆಳೆಸಬೇಕೆಂಬ ಹಂಬಲವನ್ನೂ ಅವರಲ್ಲಿ ಕಾಣಬಹುದಾಗಿದೆ. ಮೇಲಾಗಿ ವಿನಾಯಕರು ಜೀವನದ ಪ್ರಗತಿಶೀಲತೆಯಲ್ಲಿ, ಊರ್ಧ್ವಗಾಮಿತ್ವದಲ್ಲಿ ವಿಶ್ವಾಸವುಳ್ಳವರು. ಇದರಿಂದಾಗಿ ಪ್ರಯೋಗಪ್ರಿಯತೆ ಅವರ ಕಾವ್ಯದ ಸಹಜಗುಣವಾಗಿದೆ. ವಿನಾಯಕರ ಕಾವ್ಯ-ಪ್ರಯೋಗಗಳು ಮುಂದಿನ ತಲೆಮಾರಿನವರಿಗೆ ಮಹತ್ವದವೆನಿಸಲಿಕ್ಕಿಲ್ಲ. ಇದಕ್ಕೆ ಕಾರಣವೆಂದರೆ ವಿನಾಯಕರು ಸಂಪ್ರದಾಯನಿರ್ಮಾಣದಲ್ಲಿ ಶ್ರದ್ಧೆಯನ್ನು ಕಳೆದುಕೊಳ್ಳಲಿಲ್ಲ. ಅವರ ಪ್ರಯೋಗಗಳು ಸಂಪ್ರದಾಯದ ವಿರುದ್ಧವಾಗಿ ನಡೆಸಿದ ಪ್ರತಿ-ಕ್ರಿಯೆಗಳಲ್ಲ. ಅಂತೇ ಪ್ರತಿಕ್ರಿಯೆಗಳಿಗಿರುವ ಒಂದು ವಿಶಿಷ್ಟವಾದ ರುದ್ರಸೌಂದರ್ಯ ಇವರ ಪ್ರಯೋಗಗಳಿಗಿಲ್ಲ. ನವ್ಯಮಾರ್ಗದ ತಂತ್ರವನ್ನೂ ಇವರೇ ಪ್ರಚಾರಗೊಳಿಸಿದ್ದರೂ, ವಿನಾಯಕರ ಕವಿಹೃದಯ ವರ್ಡ್ಸ್‌ವರ್ಥ, ಶೆಲ್ಲಿ ಮೊದಲಾದ ಕವಿಗಳ ಮೇಲ್ಪಂಕ್ತಿಯನ್ನೇ ಅನುಸರಿಸಿತು. ಅವರ ಕಾವ್ಯದಲ್ಲಿ ಕಂಡುಬರುವ ಜೀವನದೃಷ್ಟಿ ಕೂಡ ಅಂಥದೇ ಆಗಿದೆ. ಕಾವ್ಯ ಅವರಿಗೆ ಜೀವನದರ್ಶನವನ್ನು ಪ್ರತಿಬಿಂಬಿಸುವ ಮಾಧ್ಯಮವಾಗಿದೆಯಲ್ಲದೆ, ಜೀವನವಿಕಾಸಕ್ಕೆ ಅನುಕೂಲವಾದ ಒಂದು ಪ್ರಯೋ-ಗವೂ ಆಗಿದೆ. 'ನಾಟ್ಯಶಾಲೆ', 'ಹುಟ್ಟಿದೂರು', 'ಭೂಮಧ್ಯಸಮುದ್ರದ ಮಧ್ಯದಲ್ಲಿ', 'ತಂದೆ', 'ಬಾಳದೇಗುಲದಲ್ಲಿ' ಈ ಕವನಗಳಲ್ಲಿಯ ವೈಚಾರಿಕತೆ ವಿನಾಯಕರ ಜೀವನಶ್ರದ್ಧೆಯನ್ನು ನಂಬಿಕೆಗಳನ್ನು ಪ್ರತಿಫಲಿಸುತ್ತದೆ. ಈ ಕವಿತೆಗಳಲ್ಲಿ ಕವಿಯ ನೈಜ ವ್ಯಕ್ತಿತ್ವದ ತೀರ ಸಮೀಪದ ದರ್ಶನ ದೊರೆಯುತ್ತದೆ; ಮತ್ತು ಅಲ್ಲಿ ಕಾಣುವ ವ್ಯಕ್ತಿತ್ವ ತುಂಬುಜೀವನದ ಪ್ರತೀಕವಾಗಿದೆ.

ವಿನಾಯಕರ ಶೈಲಿ ಅವರ ಈ ಮನೋಧರ್ಮಕ್ಕೆ ಸಂಕೇತವಾದಂತಿದೆ. ಬೇಂದ್ರೆಯವರಂತೆ ಭಾಷೆಯಲ್ಲಿ ಇವರು ಅನೇಕ ವಿಧದ ಸಂಗೀತವನ್ನು ಕೇಳಿಸಲಾರರು. ಬೇಂದ್ರೆಯವರ ಕೈಯಲ್ಲಿ ಭಾಷೆ ತಂತುವಾದ್ಯವಾಗಿ ನೂರಾರು ಶ್ರುತಿಗಳಿಗೆ ಮಿಡಿಯಬಲ್ಲದು. ವಿನಾಯಕರ ಶಬ್ದಪ್ರಯೋಗಗಳಲ್ಲಿ ಆ ಬಗೆಯ ಸೂಕ್ಷ್ಮತೆ ಕಾಣದಿದ್ದರೂ ಅವುಗಳ ಗಂಭೀರ ನಾದ ಹಾಗೂ ಲಯಗಳು ಮನಸೆಳೆಯುತ್ತವೆ. 'ಎಡಿನ್‌ಬರೋ ಕೋಟೆಯ ತುದಿಗೆ ನಿಂತು' ಈ ಕವಿತೆಯ ಸರಳರಗಳೆಯಲ್ಲಿ ತುಂಬಿದ ದನಿ ಕೇಳುತ್ತದೆ. 'ಸಮುದ್ರಗೀತ'ಗಳ ಮುಕ್ತಛಂದಸ್ಸು ಉತ್ಸಾಹ-ಪೂರ್ಣವಾಗಿ ಹರಿದಾಡುತ್ತದೆ. 'ಬಾಳದೇಗುಲದಲ್ಲಿ'ಯ ಛಂದಸ್ಸಿನ ಶಿಲ್ಪರಚನೆ ಭದ್ರವಾಗಿದೆ. ಅಲ್ಲದೆ ಇಂಗ್ಲಿಶ್ ಶಬ್ದಗಳ ವಿಪುಲ ಉಪಯೋಗದಿಂದ ವಿನಾಯಕರು ಕನ್ನಡ ಭಾಷೆಯನ್ನು ಹೊಸ ಹದಕ್ಕೆ ಮಿದ್ದಿದ್ದಾರೆ.

ಹೀಗೆ ವಿನಾಯಕರ ಕಾವ್ಯ, ವಸ್ತು ಹಾಗು ಶೈಲಿ ಈ ಎರಡೂ ದೃಷ್ಟಿಯಿಂದ ಈ

ತಲೆಮಾರಿನ ಮಹತ್ವಪೂರ್ಣವಾದ ಪ್ರತಿನಿಧಿಯಾಗಿದೆ. ಅದರ ಸತ್ವ 'ರೊಮ್ಯಾಂಟಿಕ್' ಕಾವ್ಯದ್ದೇ ಆಗಿದ್ದರೂ ತನ್ನ ಪ್ರಗತಿಶೀಲಸ್ವಭಾವದಿಂದ ಅದು ನವ್ಯರೂಪವನ್ನು ಕೂಡ ಪಡೆಯಿತು. ಇನ್ನೊಂದು ದೃಷ್ಟಿಯಿಂದ ವಿನಾಯಕರ ಕಾವ್ಯ ಹೊಸಗನ್ನಡ ಕಾವ್ಯದ ಅನೇಕ ಅವಸ್ಥಾಂತರಗಳ ಇತಿಹಾಸವಾಗಿದೆ.

ಮುಗಳಿ ಹಾಗೂ ಆನಂದಕಂದರ ಕಾವ್ಯಕ್ಷೇತ್ರ ಹೆಚ್ಚು ಮರ್ಯಾದಿತವಾಗಿದೆ. ಮುಗಳಿಯವರ 'ಬಾಸಿಗ'ದಲ್ಲಿಯ ಅನೇಕ ಕವಿತೆಗಳು ಕನ್ನಡದ ನವೋದಯವನ್ನು ಕುರಿತು ಬರೆದವುಗಳಾಗಿವೆ. 'ಹೊಸಕಾಲದ ನವಿಲು' ಈ ಜಾತಿಯ ಕವನಗಳಲ್ಲಿ ಅತ್ಯುತ್ತಮವಾಗಿದೆ. ಮುಗಳಿಯವರ ಕಾವ್ಯವಸ್ತು ಯಾವಾಗಲೂ ಅಮೂರ್ತ ಸ್ವರೂಪದ್ದಾಗಿದ್ದು ಹೃದಯಂಗಮತೆಯೇ ಅವರ ಕಾವ್ಯದ ಗುರಿಯಾಗಿದೆ. ನಿಸರ್ಗ ಕವಿತೆಗಳನ್ನು ಬಿಟ್ಟರೆ ಉಳಿದ ಕವಿತೆಗಳಲ್ಲಿ ಸೌಂದರ್ಯಪ್ರೀತಿ, ಆದರ್ಶದ ಹಂಬಲ, ಗೆಳೆತನ, ಪ್ರಣಯ, ದೇವರ ಕರುಣೆ ಇಂಥ ಭಾವಗೋಚರವಾದ ವಸ್ತುಗಳೇ ದೊರೆಯುತ್ತವೆ. ಈ ವಸ್ತು ಸ್ವಂತ ಜೀವನದ ಘಟಕವಾಗಿದ್ದರೆ ಸಹಜವಾಗಿ ಅದರಲ್ಲಿ ಉತ್ಕಟತೆ ಹೊಮ್ಮುತ್ತದೆ. 'ಮಲ್ಲಿಕಾ ಬಕುಲ ಚಂಪಕಾ', 'ಮಂದಾರ ಹೂ' ಇಂಥ ಕವಿತೆಗಳಲ್ಲಿ ಮುಗಳಿಯವರ ಸೌಂದರ್ಯದರ್ಶನ ಲಲಿತವಾಗಿ ಪ್ರಕಟವಾಗಿದೆ. ಮುಗಳಿಯವರ ಕಾವ್ಯದ ನೇಯ್ಗೆಯಲ್ಲಿ ಸುಕುಮಾರವಾದ ಎಳೆಗಳೇ ಹೆಚ್ಚಾಗಿವೆ. 'ಓಂ ಅಶಾಂತಿಃ' 'ಅಪಾರ ಕರುಣೆ' ಈ ಸಂಗ್ರಹಗಳಲ್ಲಿ ಜೀವನದ ಬಿರುಸಾದ ಸತ್ಯವನ್ನು ಕವಿ ಎದುರಿಸಿದ್ದರೂ ಮನೋಧರ್ಮದ ಕೋಮಲತೆ ಕಡಿಮೆಯಾಗಿಲ್ಲ. ಮುಗಳಿಯವರು ಇತ್ತೀಚೆಗೆ ಬರೆದ ಕವಿತೆಗಳಲ್ಲಿ ಅವರ ಮಾಗಿದ ಜೀವನದೃಷ್ಟಿಯನ್ನು ಕಾಣಬಹುದು. ಆದರೂ ವೈವಿಧ್ಯಕ್ಕೆ ಅಲ್ಲಿ ಕೂಡ ಅವಕಾಶವಿಲ್ಲ. ಒಂದೇ ಕಾಯಿ, ಮೊದಲು ಹಸುರಾಗಿದ್ದು ಈಗ ಹಣ್ಣಾಗಿರುವಂತೆ ಅವರ ಕಾವ್ಯದ ನಿಲುವು ಕಾಣುತ್ತದೆ. 'ಬಾಸಿಗ'ದಲ್ಲಿ ದೊರೆಯುವ ಮನೋವೃತ್ತಿ ಉಳಿದ ಕವನಸಂಗ್ರಹಗಳಲ್ಲಿ, ಜೀವನದಲ್ಲಿಯ ಋತುಮಾನಕ್ಕೆ ತಕ್ಕಂತೆ ಬದಲಾಗುತ್ತ ನಡೆದಿದೆ. ಹೀಗಾಗಿ ಮುಗಳಿಯವರ ಕಾವ್ಯದ ಬೆಳವಣಿಗೆ ಕಣ್ಣು ತುಂಬಿ ನಿಲ್ಲುವಂಥದಲ್ಲ. 'ಅಪಾರ ಕರುಣೆ'ಯಂಥ ಕವಿತೆಗಳಲ್ಲಿ ಕಾಣುವ ಪಾಕ ಈ ಬಗೆಯದು. ಈ ಭಾವ ಪ್ರಾರಂಭದ ಕಾವ್ಯಗಳಿಗೆ ಕೂಡ ಹಿನ್ನೆಲೆಯಾಗಿತ್ತು. ಈಗ ಅದೊಂದೇ ಅವರ ಕಾವ್ಯಜೀವನವನ್ನೆಲ್ಲ ತುಂಬಿದೆ. ಒಂದೇ ಸ್ವರವನ್ನು ಜೀವಮಾನದಲ್ಲೆಲ್ಲ ಸಾಧಿಸಿ ಸಿದ್ಧಿಯನ್ನು ಪಡೆದ ಸಂಗೀತಗಾರನಂತೆ ಮುಗಳಿಯವರ ಕಾವ್ಯಸಿದ್ಧಿ ಕಂಗೊಳಿಸುತ್ತದೆ. ಭಾಷೆಯ ಲಾಲಿತ್ಯ ಹಾಗು ಸುಕುಮಾರತೆಗಳು ಇವರ ಕಾವ್ಯಶೈಲಿಯ ವೈಶಿಷ್ಟ್ಯಗಳಾಗಿವೆ. ಮುಗಳಿಯವರ ಆಳವಾದ ಪಾಂಡಿತ್ಯ ಅವರ ಭಾಷೆಗೆ ಆಡಂಬರವನ್ನು ತಂದುಕೊಡದೆ ಮೃದುತ್ವವನ್ನು ತಂದದ್ದು ಅಭಿನಂದನಾರ್ಹವಾಗಿದೆ.

ಆನಂದಕಂದರ ಕವಿತೆಗಳಲ್ಲಿ ಇನ್ನೂ ಹೆಚ್ಚು ವೈವಿದ್ಯ ಕಾಣುತ್ತದೆ. ಅದು ಅವರ ಜಾನಪದಕಾವ್ಯದ ಪ್ರೀತಿಯ ಫಲವಾಗಿದೆ. ಆನಂದಕಂದರ ಕಾವ್ಯದ ಹೊಸತನ ಇರುವದೇ ಅವರ ದೇಸಿ-ಮಾರ್ಗಗಳ ಸಮನ್ವಯದಲ್ಲಿ. ಮನೋಧರ್ಮದ ವಿಷಯದಲ್ಲಿ ಮುಗಳಿಯವರಿಗೆ ಇವರು ಸರಿಸಮಾನರಾಗಿದ್ದಾರೆ. ಅಂತರವೆಂದರೆ, ಮುಗಳಿ

ಯುವರಂತೆ ಇವರು ಸ್ವಂತ ಬಾಳಿನ ಸುಖ-ದುಃಖಗಳನ್ನು ಕಾವ್ಯದಲ್ಲಿ ಅಷ್ಟೊಂದಾಗಿ ಪ್ರಕಟಿಸುವದಿಲ್ಲ. 'ವಿರಹಿಣಿ'ಯಲ್ಲಿಯ ಪ್ರಣಯ-ಕವಿತೆಗಳು ಸಂಸ್ಕೃತದಲ್ಲಿಯ ಪ್ರಣಯ-ಶತಕಗಳಂತೆ ಸಾಮಾನ್ಯ ಪ್ರಣಯದ ಅನೇಕ ಭಾವಗಳನ್ನು ಸುಂದರವಾದ ಗೀತಗಳಲ್ಲಿ ಪ್ರಕಟಿಸಿವೆ. 'ಮುದ್ದನ ಮಾತು' ಟಾಗೋರರ 'ಬಿದಿಗೆಯ ಚಂದ್ರ'ದಂತೆ ಶಿಶುಗೀತಗಳ ಸಂಗ್ರಹವಾಗಿದೆ. 'ವಿರಹಿಣಿ'ಯಂತೆ ಇಲ್ಲಿಯೂ ಭಾವದ ಸೂಕ್ಷ್ಮತೆಗಿಂತ ಶಬ್ದಸೃಷ್ಟಿ ಹೆಚ್ಚು ಮಹತ್ವಪೂರ್ಣವಾಗಿದೆ. ಸಹಜತೆ ಕೆಡದಂತೆ ಆನಂದಕಂದರು ಭಾಷೆಯ ಶುದ್ಧತೆಯನ್ನು ಕಾಪಾಡಿಕೊಂಡಿದ್ದಾರೆ. ಅವರ ಮುಂದಿನ ಸಂಗ್ರಹಗಳಾದ 'ಒಡನಾಡಿ' ಹಾಗೂ 'ಕಾರಹುಣ್ಣಿವೆ'ಗಳಲ್ಲಿ ವಿಷಯಗಳ ವೈವಿಧ್ಯ ಹಾಗೂ ವಿಸ್ತಾರ ಹೆಚ್ಚಾಗಿದೆ. 'ಒಡನಾಡಿ'ಯಲ್ಲಿಯ ಪ್ರಣಯಗೀತಗಳಿಗೆ ವಾಸ್ತವ ಜೀವನದ ತಳಹದಿಯಿರುವದರಿಂದ ಅವು 'ವಿರಹಿಣಿ'ಯ ಕವಿತೆಗಳಿಗಿಂತ ಹೆಚ್ಚು ನೈಜವಾಗಿವೆ. ಸರ್ವಜ್ಞನಂತೆ ಆನಂದಕಂದರು ಸಾಮಾನ್ಯ ಜನತೆಯ ಸುಖ-ದುಃಖಗಳಿಗೆ ಸಾಹಿತ್ಯದ ಸ್ವರೂಪವನ್ನು ತಂದುಕೊಟ್ಟರು. ಅವರ ಕಾವ್ಯ ಇನ್ನೂ ಹೆಚ್ಚು ವಿಸ್ತಾರವನ್ನು ಪಡೆದಿದ್ದರೆ ವಾಸ್ತವಜೀವನದ ಇನ್ನೂ ಅನೇಕ ಪರಿಗಳನ್ನು ಅದು ಬಿಚ್ಚಿ ತೋರಿಸಬಹುದಾಗಿತ್ತು.

ಮಧುರಚನ್ನರು 'ಗುಂಪಿನ' ಇನ್ನೊಂದು ಮಹೋದ್ದೇಶವನ್ನು ಸಾಧಿಸಿ ಕೃತಕೃತ್ಯರಾಗಿದ್ದಾರೆ. ಅದು ಜಾನಪದ ಸತ್ವದ ಪುನರುಜ್ಜೀವನ. ಬೇಂದ್ರೆಯವರ ಕಾವ್ಯದಲ್ಲಿ ಇದು ಒಂದು ಅಂಗವಾಗಿ ಮಾತ್ರ ಬರುತ್ತದೆ. ಜಾನಪದಶೈಲಿ ಬೇಂದ್ರೆಯವರ ಕಾವ್ಯದ ಅಭಿವ್ಯಕ್ತಿಗೆ ನವೀನತೆಯನ್ನೂ ಭಾವನೆಗಳಿಗೆ ಹೃದ್ಯತೆಯನ್ನೂ ತಂದು ಕೊಟ್ಟಿತು. ಮಧುರಚನ್ನರು ಜಾನಪದದ ಅನುಭಾವಗೀತಗಳ ಶೈಲಿಯಲ್ಲಿ ಸ್ವಂತ ಆಧ್ಯಾತ್ಮಿಕ ಅನುಭವದ ಕವಿತೆಗಳನ್ನು ಬರೆದರು. ಕೇವಲ ಭಾಷೆಯೊಂದೇ ಅಲ್ಲದೆ ಮಧುರಚನ್ನರ ಪ್ರತಿಮೆ ರೂಪಕಗಳು ಕೂಡ ಜಾನಪದಕಾವ್ಯಕ್ಕೆ ನೇರಿದವುಗಳಾಗಿವೆ. ಅವರ ಎಲ್ಲ ಕೃತಿಗಳೂ ಈ ಪ್ರಯೋಗದಲ್ಲಿ ಯಶಸ್ಸನ್ನು ಪಡೆಯಲಿಲ್ಲ. ಆದರೆ 'ದೇವತಾಪೃಥಿವೀ' ಹಾಗೂ 'ನನ್ನ ನಲ್ಲ'ದಂಥ ಕವಿತೆಗಳು ಈ ತಲೆಮಾರಿನ ಶ್ರೇಷ್ಠ ಕೃತಿಗಳಾಗಿದ್ದುದರ ಕಾರಣ ಮಧುರಚನ್ನರು ಜಾನಪದ ಸತ್ವವನ್ನು ಸೂರೆಗೈದರೆಂಬುದೇ ಆಗಿದೆ. ಹೃದ್ಯವಾದರೂ ತರಲವಾದ ಭಾವಪ್ರಪಂಚಕ್ಕೆ ಅನುಭಾವದ ಸತ್ವವನ್ನು ತುಂಬುವದು ಮಧುರಚನ್ನರ ಜೀವನಪ್ರಯೋಗವೇ ಆಗಿತ್ತು. 'ದೇವತಾಪೃಥಿವೀ'ಯಲ್ಲಿಯ ತಾತ್ವಿಕ ಅನುಭವ ಉಂಡ ಊಟದಷ್ಟು ನೈಜವಾಗಿದೆ, ವಾಸ್ತವವಾಗಿದೆ. ಅನುಭವದ ಆರ್ತತೆ ಒಮ್ಮೆ ನಿಟ್ಟುಸಿರಾಗಿ ಇನ್ನೊಮ್ಮೆ ಮೂಕ ರೋದನವಾಗಿ ಕೇಳುತ್ತದೆ. ಉತ್ಕಟವಾದ ವಾತ್ಸಲ್ಯಭಾವದಲ್ಲಿ ಕವಿ ತನ್ನ ವ್ಯಕ್ತಿತ್ವವನ್ನೆಲ್ಲ ಕರಗಿಸಿ ಹಾಡಿದಂತಾಗಿದೆ. ತ್ರಿಪದಿಯನ್ನು ಇಷ್ಟು ಸಮರ್ಥವಾಗಿ ಹಿಂದೆ ಯಾರೂ ಬಳಸಿಕೊಂಡಿರಲಿಲ್ಲ. ಇಲ್ಲಿ ಒಂದು ಭಾವದಿಂದ ಇನ್ನೊಂದಕ್ಕೆ ತ್ರಿಪದಿಯ ಲಯ ತೂಗುತ್ತ ಭಾವಗೀತದ ವಿನ್ಯಾಸದಲ್ಲಿ ರೂಪುವಡೆದಿದೆ. ತ್ರಿಪದಿಯ ಬಾಗು-ಬಳಕುಗಳು ಜಾನಪದ ಜೀವನದ ಅನೇಕ ವಾತ್ಸಲ್ಯ-ಚಿತ್ರಗಳನ್ನು ಕಣ್ಣಿಗೆ ಕಟ್ಟುವಂತೆ ಮಾಡುತ್ತವೆ. 'ನನ್ನ ನಲ್ಲ'ದಲ್ಲಿಯ ಅಭಿವ್ಯಕ್ತಿಯ ರೀತಿ ಬೇರೆ ಬಗೆಯದು. 'ಬೆಳ್ಳಾನ

ಬೆಳ್ಳಿತ್ತು ಬೆಳ್ಳೀಯ ಬಾರಕೋಲು' ಅಥವಾ 'ಯಾಲಕ್ಕಿ ಕಾಯ್‌ಸುಲಿದು ಯಾವಡಗಿ ಮಾಡಲೆ' ಎಂದಾಗ ಹೊಳೆಯುವ ಜಾನಪದಕಾವ್ಯದ ಶ್ರೀಮಂತಿಕೆ ಇಲ್ಲಿಯೂ ಕಾಣುತ್ತದೆ. ಪರಮಾತ್ಮನನ್ನು ಕಾಣಲು ಆತುರವಾದ ಜೀವದ ಕಣ್ಣಿಗೆ ವ್ಯಕ್ತಸೃಷ್ಟಿಯೆಲ್ಲ ದೈವಿಕತೆಯಿಂದ ತುಂಬಿತುಳುಕುತ್ತದೆ. ದೃಶ್ಯಲೋಕದ ಸೌಂದರ್ಯವೇ ಇಷ್ಟು ಅನಂತವಾಗಿರುವಾಗ ಇದೆಲ್ಲದರ ಮೂಲಶಕ್ತಿ ಹೇಗಿರಬೇಕೆಂಬ ಆಧ್ಯಾತ್ಮಿಕ ಕುತೂಹಲ, ಆರ್ತತೆಗಳು ಈ ಕವಿತೆಯ ಭಾವಲಹರಿಗಳಾಗಿವೆ. ನವಿಲಿನ ಸಾವಿರ ಕಣ್ಣುಗಳು, ಮೀನದ 'ಪಿಳುಕಿಸದ ಸಿರಿಗಣ್ಣು', ಗಿಣಿರಾಮನ 'ಮಾಣಿಕದ ಮೂಗು', ಹೊನ್ನಿಹಳದ 'ಬೆಳಗುವ ರೆಕ್ಕೆಗಳು' ಕೋಗಿಲೆಯ 'ಹೆಣ್ಣುದನಿ', ಆಕಾಶದ 'ನಿಸ್ಸೀಮತೆ' ಮುಗಿಲಲ್ಲಿಯ 'ಹರಳುಮುತ್ತಿನ' ರಾಶಿ ಇವೆಲ್ಲ ಇಂದ್ರಿಯಗೋಚರವಾದ ವಸ್ತುಗಳಿಗೆ ಅತೀಂದ್ರಿಯತೆಯ ಕಾಂತಿ ದೃಶ್ಯವಾಗಿ ಬಂದಿದೆ ಮಧುರಚನ್ನರ ಭಾಷೆಗೆ ನಾದಮಯತೆಯೊಡನೆ ಚಿತ್ರಕಶಕ್ತಿಯೂ ಇದೆ. ಆದ್ದರಿಂದ ಮೂಲಭಾವದ ಅಮೂರ್ತತೆಯೆಲ್ಲ ಈ ಚಿತ್ರಲೋಲುಪತೆಯಲ್ಲಿ ಅಡಗಿಬಿಟ್ಟಿದೆ. ಬಹುಶಃ ಅನುಭವದ ಪರಿಪಾಕವೇ ಇದಕ್ಕೆ ಕಾರಣವಾಗಿರಬಹುದು. "ಮಧುರಚನ್ನರ ಆಧ್ಯಾತ್ಮಿಕ ಪುನರ್ಜನ್ಮ 'ನನ್ನ ನಲ್ಲ' ದಲ್ಲಾಗಿದೆ" ಎಂದು ಬೇಂದ್ರೆಯವರು ಹೇಳಿದ್ದು ಅಕ್ಷರಶಃ ಸತ್ಯವಾಗಿದೆ. 'ನನ್ನ ನಲ್ಲ'ದ ಭಾಷೆಯ ಅರ್ಥವ್ಯಂಜಕತೆಯಲ್ಲಿ ಪ್ರಾಮಾಣಿಕತೆಯ ಹೃದಯಸ್ಪಂದನ ಸ್ಪಷ್ಟವಾಗಿ ಕೇಳುತ್ತಿದೆ. ನಿಜಗುಣಿ ಶಿವಯೋಗಿಗಳ ಅನುಭಾವ ಪದಗಳಲ್ಲಿಯ ನೈಜತೆಯನ್ನು, ವಚನಕಾರರ ಹೃದ್ಯತೆಯನ್ನು ಈ ಕಾವ್ಯ ಕೂಡಲೆ ನೆನಪಿಗೆ ತರುತ್ತದೆ. ಅದಕ್ಕಿಂತ ಹೆಚ್ಚಾಗಿ, ಜಯದೇವನ 'ಗೀತಗೋವಿಂದ'ದಂತೆ ಅನುಭಾವದ ಸತ್ವವನ್ನು ಐಂದ್ರಿಯಕ ರಮ್ಯತೆಯಲ್ಲಿ ಒಡಮೂಡಿಸಿದ ಕವನವೆಂದರೆ ಕನ್ನಡದಲ್ಲಿ ಇದೊಂದೇ ಎಂದು ಹೇಳಬಹುದು.

'ಗೆಳೆಯರ ಗುಂಪಿ'ನ ಉಳಿದ ಕವಿಗಳು ಈ ಕಾವ್ಯಸಂಪ್ರದಾಯವನ್ನು ಮುಂದೆ ಸಮೃದ್ಧವಾಗಿ ಬೆಳೆಸಲಿಲ್ಲ. 'ಗುಂಪು' ಮುರಿದದ್ದೂ ಇದಕ್ಕೆ ಕಾರಣವಾಗಿರಬಹುದು. ಎಷ್ಟೋ ಜನರಲ್ಲಿ ಸಹಜವಾದ ಕಾವ್ಯಶಕ್ತಿಯಿತ್ತು; ಅದಕ್ಕೆ ಪೋಷಕವಾಗುವ ಸಂಸ್ಕಾರವೂ ಇತ್ತು. 'ಗುಂಪಿ'ನಲ್ಲಿ ನಡೆಯುತ್ತಿದ್ದ ಚರ್ಚೆವಾದಗಳ ಪ್ರೇರಣೆಯನ್ನು ಬೆಂಬಲವಾಗಿಟ್ಟುಕೊಂಡು ಅವರು ಈ ಸಂಪ್ರದಾಯವನ್ನು ಮುಂದುವರಿಸಬಹುದಾಗಿತ್ತು. ಅದು ಹಾಗಾಗಲಿಲ್ಲವೆಂಬುದು ದುರ್ದೈವದ ಮಾತಾಗಿದೆ. ವಿನೀತರ 'ಕಳೆದ ಪುಟಗಳ'ಲ್ಲಿಯ ಎಷ್ಟೋ ಕವನಗಳು ವ್ಯಂಜಕತೆಯಿಂದ ತುಂಬಿವೆ. ಅವರ 'ಭಾವದೇವಿ' ಇಂದಿಗೂ 'ರೋಮ್ಯಾಂಟಿಕ್' ಸಂಪ್ರದಾಯದ ಕಾವ್ಯಕ್ಕೆ ಉತ್ತಮ ಉದಾಹರಣೆಯಾಗಿದೆ. ಆದರೆ ಅವರು ಮುಂದೆ ಕಾವ್ಯನಿರ್ಮಾಣಕ್ಕೆ ಮನಸ್ಸು ಹಾಕಲಿಲ್ಲ. ಪ್ರಲ್ಹಾದ ನರೇಗಲ್ಲರ 'ನಸುಕು' ಅನೇಕ ಬಗೆಯಲ್ಲಿ ಆಶಾದಾಯಕವಾಗಿದ್ದರೂ ಅದು ಮುಂದೆ ಬೆಳಗನ್ನು ಕಾಣಲಿಲ್ಲ. ನಾರಾಯಣ ಸಂಗಮರ ಕಾವ್ಯದಲ್ಲಿ ಚಿತ್ರಕಶಕ್ತಿ ಬೇಕಾದಷ್ಟಿದೆ. ಆದರೆ ಮೂಲವಸ್ತುವಿನ ಕೊರತೆಯ ಮೂಲಕ ಅವರ ಕಾವ್ಯ ಬೆಳವಣಿಗೆಯನ್ನು ಪಡೆಯಲಿಲ್ಲ. ಇತ್ತೀಚೆಗೆ ಪ್ರಕಟವಾದ ಜಡಭರತರ 'ಜೀವಫಲ'ದಲ್ಲಿಯ ಕವಿತೆಗಳು ಕನಸನ್ನು,

ಮೂಲದ್ರವ್ಯವಾಗಿಟ್ಟುಕೊಂಡು ಬರೆದವುಗಳಾಗಿವೆ. ಉಳಿದವರಂತೆ ಜಡಭರತರೂ ಕಾವ್ಯವನ್ನು ಬಿಟ್ಟುಕೊಟ್ಟು ಗದ್ಯರಚನೆಗೆ ಕೈಹಾಕಿದರು. ' ಗುಂಪಿ 'ನಲ್ಲಿ ದೊರೆಯುತ್ತಿದ್ದ ಆದರ್ಶಪ್ರಿಯತೆಯ ವಾತಾವರಣ ಮುಂದೆ ಕಳೆದುಹೋದದ್ದರಿಂದಲೋ ಏನೋ ಈ ಕವಿಗಳು ಕಾವ್ಯರಚನೆಯನ್ನು ಬಿಟ್ಟುಕೊಟ್ಟರು.

ಬಿ. ಎಂ. ಶ್ರೀಯವರ ' ಇಂಗ್ಲಿಷ್ ಗೀತಗಳು ' ಬಂದ ನಂತರ ಮೈಸೂರಿನಲ್ಲಿ ' ತಳಿರು ' ' ಕಿರಿಯಕಾಣಿಕೆ ' ಮೊದಲಾದ ಕೆಲವು ಮಹತ್ವದ ಕವನಸಂಗ್ರಹಗಳು ಪ್ರಕಟವಾದವು. ಕು.ವೆಂ.ಪು, ಪು.ತಿ.ನ, ರಾಜರತ್ನಂ ಮೊದಲಾದವರ ಪ್ರಾರಂಭದ ಕವಿತೆಗಳು ಈ ಸಂಗ್ರಹಗಳಲ್ಲಿವೆ. ನಿಸರ್ಗಪ್ರೀತಿ ಮತ್ತು ಇತಿಹಾಸಪ್ರಜ್ಞೆಯಿಂದ ಪ್ರೇರಿತವಾದ ಕನ್ನಡದ ಅಭಿಮಾನ ಈ ಎರಡು ಪ್ರಮುಖ ಭಾವನೆಗಳು ಈ ಕವನಗಳಿಗೆ ಹಿನ್ನೆಲೆಯಾಗಿವೆ. ಇಂಗ್ಲಿಶ್ ಕಾವ್ಯದ ಪ್ರಭಾವದಿಂದ ಬಂದ ಪ್ರಣಯ ಹಾಗು ಸ್ವಾತಂತ್ರ್ಯಪ್ರಿಯತೆಗಳೂ ಕಾಣುತ್ತವೆ. 'ಶ್ರೀ'ಯವರ ನೇತೃತ್ವದಲ್ಲಿ ತಯಾರಾದ ಈ ಕವಿಗಳ ಗುಂಪು ಉತ್ಸಾಹದಿಂದ ಕಾವ್ಯರಚನೆಗೆ ಮುಂದೆ ಬಂದಿತು. ಈ ಆಂದೋಲನದ ಫಲವಾಗಿ ಹುಟ್ಟಿದ ಪ್ರಮುಖ ಕವಿ ಎಂದರೆ ಕು.ವೆಂ.ಪು. ಎಂದು ಹೇಳಬಹುದು.

ಕು.ವೆಂ.ಪು. 'ಶ್ರೀ'ಯುವರ ಕಾವ್ಯಮಾರ್ಗವನ್ನು ಯಶಸ್ವಿಯಾಗಿ ಮುನ್ನಡೆಸಿದ್ದಾರೆ. 'ಶ್ರೀ'ಯವರು ಕೇವಲ ಕಾರಣಪುರುಷರಾದರು. ಕನ್ನಡದ ಉಳಿದ ಚಟುವಟಿಕೆಗಳಲ್ಲಿಯೇ ಅವರ ಆಯುಷ್ಯವೆಲ್ಲ ಕಳೆದುಹೋದದ್ದರಿಂದ, ಕಾವ್ಯಶಕ್ತಿ ಸಮೃದ್ಧವಾಗಿದ್ದರೂ ಆಗಬೇಕಾದಷ್ಟು ಕಾವ್ಯರಚನೆ ಅವರಿಂದಾಗಲಿಲ್ಲ. ಅವರ ಸ್ವತಂತ್ರ ಕವನಗಳು ಬಹಳ ಸ್ವಲ್ಪ. ' ಶುಕ್ರಗೀತೆ 'ಯೊಂದರಲ್ಲಿಯೇ ಅವರ ಪ್ರತಿಭೆಯ ಓಜಸ್ಸು ಕಾಣುತ್ತಿದೆ. ಆದರೆ ಕನ್ನಡದ ಸಮಕಾಲೀನ ಜೀವನಕ್ಕೆ ಕಾವ್ಯದ ಸ್ವರೂಪವನ್ನು ಕೊಡುವ ಕೆಲಸ 'ಶ್ರೀ'ಯವರಿಂದಾಗಲಿಲ್ಲ. ಹೀಗಾಗಿ ಆ ಕಾರ್ಯ ಕು. ವೆಂ. ಪು. ರವರ ಪಾಲಿಗುಳಿಯಿತು. ಇವರ ಮೊದಲ ಸಂಗ್ರಹವಾದ ' ಕೊಳಲು ' ಅನೇಕ ವಿಮರ್ಶಕರ ಲಕ್ಷ್ಯವನ್ನು ಸೆಳೆಯಿತು. ಅಂದಿನಿಂದ ಇಲ್ಲಿಯವರೆಗೆ ಇವರವು ಇಪ್ಪತ್ತರಷ್ಟು ಕವನಸಂಗ್ರಹಗಳು ಪ್ರಕಟವಾಗಿವೆ. ' ಚಿತ್ರಾಂಗದಾ ' ಹಾಗೂ ' ರಾಮಾಯಣ ದರ್ಶನಂ ' ದಂಥ ಎರಡು ಮಹಾಕಾವ್ಯಗಳೂ ಹೊರಬಿದ್ದಿವೆ. ಇವರ ಭಾವಗೀತಗಳಲ್ಲಿ ವಸ್ತುವಿನ ವ್ಯಾಪ್ತಿ ಬೇಕಾದಷ್ಟಿದೆ. ' ಕೊಳಲು ', ' ನವಿಲು ', ' ಕಲಾಸುಂದರಿ ', ' ಷೋಡಶಿ ' ಈ ಸಂಗ್ರಹಗಳು ಮುಖ್ಯವಾಗಿ ನಿಸರ್ಗಗೀತಗಳನ್ನು ಒಳಗೊಂಡಿವೆ. ' ಪಾಂಚಜನ್ಯ ' ಹಾಗೂ ' ಕೋಗಿಲೆ ಮತ್ತು ಸೋವಿಯೆಟ್ ರಷ್ಯಾ ' ಗಳು ಕ್ರಾಂತಿಗೀತಗಳ ಸಂಗ್ರಹಗಳಾಗಿವೆ. ' ಪ್ರೇಮಕಾಶ್ಮೀರ ' ದಲ್ಲಿ ಪ್ರಣಯಗೀತಗಳಿವೆ. ' ಅಗ್ನಿಹಂಸ ' ದಲ್ಲಿಯ ಕವನಗಳು ತಾತ್ವಿಕವಾಗಿವೆ.

ಕು.ವೆಂ.ಪು.ರವರ ಕವಿತೆಗಳಲ್ಲಿ ಪ್ರಕೃತಿಗೀತಗಳೇ ಹೆಚ್ಚು ಮಹತ್ವದವಾಗಿವೆ. ಸಾಮಾನ್ಯವಾಗಿ ಉಳಿದ ಕವಿತೆಗಳಲ್ಲಿ ಕೂಡ ಪ್ರಕೃತಿಯ ಚಲುವು ಹಿನ್ನೆಲೆಗೆ ಇದ್ದೇ ಇರುತ್ತದೆ. ಮತ್ತು ಕು.ವೆಂ.ಪು.ರವರ ಉಪಮೆ ರೂಪಕಗಳು ಕೂಡ ನಿಸರ್ಗದಿಂದಲೇ ಪಡೆದುಕೊಂಡವುಗಳಾಗಿವೆ. ಮಲೆನಾಡಿನ ಆವರಣದಲ್ಲಿ ಬೆಳೆದು ಬಂದ ಅವರಿಗೆ

ನಿಸರ್ಗದ ಸೌಂದರ್ಯ ಕಣ್ಣಿನ ಬದುಕಾಗಿದೆ. ಆಂಗ್ಲ ಕವಿಯಾದ ವರ್ಡ್ಸ್‌ವರ್ಥನಂತೆ ಕು.ವೆಂ.ಪು. ಪ್ರಕೃತಿಯ ಸತ್ವವನ್ನು ಕಂಡಿದ್ದಾರೆ. ಪ್ರಕೃತಿಯ ಸಾನ್ನಿಧ್ಯ ಅವರಿಗೆ ಯಾವಾಗಲೂ ಕಾವ್ಯಸ್ಫೂರ್ತಿಯನ್ನು ಕೊಟ್ಟಿದೆ. 'ಕೃತ್ತಿಕೆ'ಯಲ್ಲಿಯ ಅನೇಕ ಸುನೀತಗಳಲ್ಲಿ ಕು.ವೆಂ.ಪು.ರವರಿಗೆ ಪ್ರಿಯವಾದ ಪ್ರಕೃತಿಸ್ಥಾನಗಳನ್ನು ಗುರುತಿಸ ಬಹುದಾಗಿದೆ. ನಿಸರ್ಗದ ಚಲುವನ್ನು ಅವರು ಅನೇಕ ಕಾರಣಗಳಿಗಾಗಿ ಪ್ರೀತಿಸಿದ್ದಾರೆ. ನಿಸರ್ಗದ ಆವರಣದಲ್ಲಿ ಸಾಮಾಜಿಕ ವಿಷಮತೆ ಕಾಣದಿರುವದೇ ಇವರ ಪ್ರೀತಿಗೆ ಮುಖ್ಯವಾದ ಕಾರಣವಾಗಿದೆ. ಅಲ್ಲದೆ ನಿಸರ್ಗ ಅವರ ಕಣ್ಣಿಗೆ ಕಲಾಸುಂದರಿ. ಜೀವನದ ಆಗು-ಹೋಗುಗಳ ಮೇಲೆ ಅವಳದು ಸರ್ವಾಧಿಕಾರ. ಎಲ್ಲಕ್ಕಿಂತ ಹೆಚ್ಚಾಗಿ ಕು.ವೆಂ.ಪು. ಪ್ರಕೃತಿಯ ಸೌಂದರ್ಯಕ್ಕೇ ಮುಗ್ಧರಾಗಿದ್ದಾರೆ. ಈ ಚಲುವೇ ಮೊದಲು ಈ ಚಲುವೇ ಕೊನೆ ಎಂಬಂತೆ ಚೆಲುವಿನ ಆರಾಧನೆಯನ್ನು ನಡೆಸಿದ್ದಾರೆ. ಅದಕ್ಕಾಗಿಯೇ ಏನೋ ಅವರ ಕಲ್ಪನಾಶಕ್ತಿಯ ಉಳಿದ ಸಂವೇದನೆಗಳೆಲ್ಲ ನಷ್ಟ ವಾಗಿಬಿಡುತ್ತವೆ. ಕೇವಲ ಬಹಿರಂಗದ ವರ್ಣವೈಭವಕ್ಕೆ ಮನಸೋತ ಅವರ ಕಣ್ಣಿಗೆ ಪ್ರಕೃತಿಯ ಅಂತರಂಗ ಅಸ್ಪಷ್ಟವಾಗಿ ಮಾತ್ರ ಗೊತ್ತಿದೆ. 'ಸೂರ್ಯೋದಯ ಚಂದ್ರೋದಯ ದೇವರ ದಯ ಕಾಣೊ' ಎಂದೆಂದಾಗ ಆ ಅಂತರಂಗ ಒಮ್ಮೊಮ್ಮೆ ಕಾಣಿಸಿಕೊಂಡರೂ ಮುಂದೆ ವಿವರಗಳಲ್ಲಿ ಅಡಗಿಹೋಗುತ್ತದೆ. ಮಳೆಬಿಲ್ಲಿನ ಚಲುವು, ತೇನೆಹಕ್ಕಿಯ ನಿರ್ಲಿಪ್ತಹರ್ಷ, ಮುಂಗಾರಿನ ಅದಮ್ಯಶಕ್ತಿ, ಸುಗ್ಗಿಯ ಮನೋಹರತೆ ಇವುಗಳನ್ನು ದೂರದಿಂದ ಕಂಡು ವರ್ಣಿಸುವಂತಿದೆ. ಪ್ರಕೃತಿಯ ಅನೇಕ ನಿಲುವುಗಳು ಅವರ ಮುಗ್ಧಕುತೂಹಲವನ್ನು ಕೆರಳಿಸುತ್ತವೆ. ಆದರೆ ಅವಾವವೂ ಕವಿಯ ಸ್ವಂತ ಅನುಭವಗಳಾಗಿ ಹೊರಹೊಮ್ಮುವದಿಲ್ಲ. 'ಮಳೆಬಿಲ್ಲು', 'ತೇನೆಹಕ್ಕಿ', 'ಸುಗ್ಗಿ', 'ಕಾಜಾಣ', 'ಹೂವುಗಳು', 'ಮಾಗಿ' ಈ ಕವಿತೆ ಗಳನ್ನು ಉದಾಹರಣೆಗೆಂದು ನೋಡಬಹುದು. ಇಲ್ಲಿಯ ವಿವರಗಳೆಲ್ಲ ಹೊಚ್ಚ ಹೊಸದಾಗಿದ್ದು ಬಣ್ಣ ಕಾಂತಿಗಳಿಂದ ತುಂಬಿವೆ. ಅವುಗಳ ಹಿಂದೆ ಚೈತನ್ಯ ಸುಳಿ ಯುತ್ತಿರುವದನ್ನು ಕವಿ ಮನಗಂಡಿದ್ದಾನೆ. ಅವುಗಳ ಚಲುವು ಛಾಯಾಚಿತ್ರದಂತೆ ಒಡಮೂಡಿ, ಕೊನೆಗೆ ಮಾತ್ರ ಕವಿ ನಂಬಿರುವ ಒಂದು ನೀತಿಪಾಠದಿಂದಲೋ, ಅಥವಾ ಇನ್ನೊಬ್ಬರ ವಿಚಾರಗಳಿಂದಲೋ ಕವಿತೆ ಮುಗಿತಾಯವನ್ನು ಪಡೆಯುತ್ತದೆ. 'ಮಳೆಬಿಲ್ಲಿನಂತೆಮ್ಮ ಬಾಳು ಚಣವಾದರೇನು', 'ಸೊಬಗೆ ನನ್ನಿ ಎಂದು ಸಾರಿ ನನ್ನಿಯೆ ಸೊಬಗೆಂದು ತೋರಿ', 'ಕಲಿಸು ನನಗೆ ಮೊದಲು ಕೊನೆಗೆ, ನೆಲ-ಬಾನ್‌ಗಳ ಪಡೆವುದಂ' ಇಂಥ ಸಾಲುಗಳಲ್ಲಿ ಪ್ರಾಮಾಣಿಕತೆ ಇಲ್ಲವೆಂದಲ್ಲ. ಆದರೆ ಕಂಡ ಅನುಭವಕ್ಕೂ ಇಂಥ ಸತ್ಯಕ್ಕೂ ಸಜೀವವಾದ ಸಂಬಂಧವಿಲ್ಲ. ಪ್ರಕೃತಿಯ ಚಲುವು ಕವಿಯ ಸ್ವಂತ ಅನುಭವವಾಗಿ ಇಳಿಯುವದಿಲ್ಲ. ಅನುಭವದ ಬೀಜ ಮರವಾಗಿ ಬೆಳೆದು ತನ್ನದೇ ಆದ ವಿಶಿಷ್ಟವಾದ ಆಕಾರವನ್ನು ಪಡೆಯುವದಿಲ್ಲ. ಇದಕ್ಕೆ ಕಾರಣ ಕು.ವೆಂ.ಪು.ರವರಲ್ಲಿ ಕಾವ್ಯಶಕ್ತಿಯ ಕೊರತೆಯೆಂದು ತಿಳಿಯಲಾಗದು. ಇಂಗ್ಲಿಶ್ ಕಾವ್ಯದ ಮರೆಯಲಾಗದ ಸಂಸ್ಕಾರ ಹಾಗೂ ಸೌಂದರ್ಯವನ್ನು ಕಂಡಾಗ ಉಂಟಾ ಗುವ ಮನಸ್ಸಿನ ಚಂಚಲತೆ ಇದಕ್ಕೆ ಕಾರಣವಾಗಿವೆ. ಒಂದು ಮಾತನ್ನು ಈ ಸಂದರ್ಭ

ದಲ್ಲಿ ಒಪ್ಪಬೇಕು. ಕು. ವೆಂ. ಪು.ರವರಿಗಿಂತ ಮೊದಲು ನಿಸರ್ಗದ ಇಷ್ಟೊಂದು ವಿವರಗಳನ್ನು ಯಾರೂ ನಮ್ಮ ಕಾವ್ಯದಲ್ಲಿ ತಂದಿರಲಿಲ್ಲ.

ಕು.ವೆಂ.ಪು.ರವರ ಉಳಿದ ಕವಿತೆಗಳನ್ನು ನೋಡುವಾಗ ಅವರಲ್ಲಿಯ ಒಂದು ಕೊರತೆಯನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಮೂಲವಸ್ತು ಹಾಗೂ ಅದರ ಅಭಿವ್ಯಕ್ತಿಯಲ್ಲಿರುವ ವಿಷಮತೆ. ಮೂಲವಸ್ತುವಿನಲ್ಲಿಯೇ ಕಾವ್ಯವಾಗಿ ಮೂಡುವ ಗುಣವಿಲ್ಲದಿದ್ದಾಗ ಕವಿತೆ ಕೇವಲ ಶಬ್ದ ಚಿತ್ರವಾಗಿಬಿಡುತ್ತದೆ. 'ಕೇಶಿರಾಜ', 'ಕಿಟ್ಟಯ್ಯ', 'ವಸಂತರಮಣಿಯರು' ಈ ಕವಿತೆಗಳಲ್ಲಿ ಮೂಲವಸ್ತುವಿನ ಅಸ್ಪಷ್ಟತೆಯನ್ನು ಗುರುತಿಸಬಹುದಾಗಿದೆ. ಇಲ್ಲದಿದ್ದರೆ ಮಧುವನ್ನು ಸಂಗ್ರಹಿಸುವ ಮೊದಲೇ ತುಂಬಿಗಳು ಹುಟ್ಟು ಕಟ್ಟುವಂತೆ ಕಾವ್ಯದ ಬಾಹ್ಯಸ್ವರೂಪ ವಸ್ತುವಿಗಿಂತ ಮೊದಲೇ ಹುಟ್ಟಿಬಿಡುತ್ತದೆ. ಇದರಿಂದಾಗಿ ಕಾವ್ಯವಸ್ತು ಸಹಜವಾಗಿ ಮೂರ್ತಿಗೊಳ್ಳಲು ಅವಕಾಶ ದೊರೆಯುವದಿಲ್ಲ. ಭಾವದ ಉತ್ಕಟತೆ ತನಗೆ ಸಹಜವಲ್ಲದ ರೂಪದಲ್ಲಿ ಪ್ರಕಟವಾಗಿಬಿಡುತ್ತದೆ. 'ಪಾಂಚಜನ್ಯ' ಹಾಗೂ 'ಕೋಗಿಲೆ ಮತ್ತು ಸೋವಿಯಟ್ ರಷ್ಯಾ' ದಲ್ಲಿಯ ಕ್ರಾಂತಿಗೀತಗಳು ಈ ಮಾತನ್ನು ಹೆಚ್ಚು ಸ್ಪಷ್ಟಗೊಳಿಸುತ್ತವೆ. 'ಪ್ರೇಮ ಕಾಶ್ಮೀರ'ದ ಪ್ರಣಯಗೀತಗಳನ್ನೂ ಈ ದೃಷ್ಟಿಯಿಂದ ನೋಡಬಹುದಾಗಿದೆ. 'ನಡೆ ಮುಂದೆ ನಡೆ ಮುಂದೆ ನುಗ್ಗಿ ನಡೆ ಮುಂದೆ' ಎಂದಾಗಾಗಲಿ, ಅಥವಾ 'ಬಿದ್ದರೆ ಬೀಳಲಿ ತಲೆ ಹಾರಿ, ಬೀಳಲಿ ಮೈ ನೆತ್ತರು ಕಾರಿ' ಎಂಬಲ್ಲಿ ನಿಜವಾದ ಆವೇಶವೇನೋ ಇದೆ. ಆದರೆ ಈ ಎಲ್ಲ ಆವೇಶ ಯಾತಕ್ಕಾಗಿ ಎನ್ನುವದು ಸ್ಪಷ್ಟವಾಗುವದಿಲ್ಲ. ವಾಸ್ತವ ಸಂಗತಿಯೊಂದಕ್ಕೆ ಕವಿ ತೋರಿಸುವ ಪ್ರತಿಕ್ರಿಯೆ ಇದು ಎಂದು ಸ್ಪಷ್ಟವಾದರೂ ಅದು ಬಹಳ ದೂರದ ಸಂಬಂಧವೆಂದು ಅನ್ನಿಸದಿರಲಾರದು. 'ಕುಮಾರವ್ಯಾಸ' ಎಂಬ ಕವಿತೆಯಲ್ಲಿ ಆವೇಶ ಪ್ರವಾಹವಾಗಿ ಹರಿಯುತ್ತದೆ. ಆದರೆ "ಕೌರವರಾಯನು ಮಡಿಯಲಿಬೇಕೆ, ಯುವಕನೆ ತುಡುಕು ಕಠಾರಿಯನು...." ಎಂದಾಗ ಮೂಲ ವಸ್ತುವಿಗೂ, ಕವಿಯ ಸ್ವಂತ ವಿಚಾರಕ್ಕೂ ವಿರೋಧ ಬಂದು ಕಾವ್ಯದ ರಸಾನುಭವ ಗಕ್ಕನೆ ನಿಂತುಬಿಡುತ್ತದೆ. ಇದು ಕವಿಯು ಮೂಲವಸ್ತುವಿನ ಅನುಭವವಾಗಿರದೆ ಇನ್ನೊಂದು ಅಡ್ಡ ವಿಚಾರವಾಗಿರುವದರಿಂದ ಈ ತೊಡಕು ಉದ್ಭವಿಸುತ್ತದೆ. ಪ್ರಣಯ ಗೀತಗಳಲ್ಲಿ ಇನ್ನೊಂದು ಬಗೆಯ ವಿಷಮತೆ ಕಾಣುತ್ತದೆ. ಅವುಗಳಲ್ಲಿ ಪ್ರಕಟವಾಗಿರುವ ಪ್ರಣಯಾನುಭವ ಕವಿಯ ಸ್ವಂತ ಜೀವನದ್ದೂ ಅಲ್ಲ, ಸಾಮಾನ್ಯ ಜೀವನದ್ದೂ ಅಲ್ಲ ಎಂಬಂತೆ ಅವುಗಳ ರಚನೆಯಿದೆ. ಆ ಅನುಭವ ಕೃತ್ರಿಮವಾಗಿದೆಯೆಂದಲ್ಲ. ಆದರೆ ಕವಿಹೃದಯದ ಇನ್ನೊಂದು ಭಾಗದಿಂದ ಆ ಭಾವನೆಗಳನ್ನು ಸೋಸಿ ಗಸಿ ಇಳಿಸಿದಂತಿರುವದರಿಂದ ಅದು ವಿಚಿತ್ರವಾಗಿ ಕಾಣುತ್ತದೆ. ಪ್ರಣಯಭಾವನೆ ಉಳಿದ ಸಂಚಾರಿಭಾವಗಳ ಸ್ಪರ್ಶದಿಂದ ದೂರವಾದಂತಿದೆ. 'ಅಗಸ್ತ್ಯ' ಮುಂತಾದ ಕವಿತೆಗಳ ಭಾವಾವೇಶ ಈ ಸಂಚಾರಿಭಾವಗಳನ್ನು ನುಂಗಿ ನೀರು ಹಿಡಿದಿದೆ. 'ಅಗ್ನಿಹಂಸ' ದಲ್ಲಿಯ ಕವಿತೆಗಳಲ್ಲಿಯ ಭಕ್ತಿಯ ಆವೇಶವೂ ಇದೇ ಬಗೆಯದು. ಕವಿಯ ವ್ಯಕ್ತಿತ್ವದ ಸಂಕೀರ್ಣತೆಯ ಅನುಭವ ಓದುಗರಿಗಾಗುವದಿಲ್ಲ. ಹಾಗೆಂದರೆ ಕವಿ ಭಾವನೆಗಳಿಂದ ನಿರ್ಲಿಪ್ತನಾಗಿರುವನೆಂದಲ್ಲ. ಕ್ರಾಂತಿ-ಗೀತವೇ ಆಗಲಿ, ಪ್ರಣಯ-ಗೀತವೇ ಆಗಲಿ,

ಅಥವಾ ಭಕ್ತಿ-ಗೀತವೇ ಆಗಲಿ ಕವಿ ಅತ್ಯಂತ ತನ್ಮಯತೆಯಿಂದ ಆಯಾ ಭಾವನೆಗಳನ್ನು ಪ್ರಕಟಿಸುತ್ತಾನೆ. ಆ ಒಂದು ಭಾವನೆ ಉಳಿದೆಲ್ಲ ಭಾವನೆಗಳನ್ನು ಲೀನವಾಗಿಸಿಕೊಳ್ಳುವದಿಲ್ಲ, ಶೂನ್ಯವಾಗಿಸುತ್ತದೆ.

ಕು.ವೆಂ.ಪು.ರವರ ಎಲ್ಲ ಕವಿತೆಗಳನ್ನೂ ಸಮಗ್ರವಾಗಿ ನೋಡಿದಾಗ ಮಾತ್ರ ಈ ಕೊರತೆ ಗೊತ್ತಾಗುತ್ತದೆ. ಅವರ ಮನೋಧರ್ಮದ ಪ್ರಕೃತಿ ತೀವ್ರವಾಗಿರುವದರಿಂದ ಈ ದೋಷ ಉಂಟಾಗುತ್ತದೆಂದು ತೋರುತ್ತದೆ. ಕಾವ್ಯರಚನೆ ಸಮಾಧಾನದಿಂದ ನಡೆದಿದ್ದಾಗ ಈ ದೋಷಗಳು ಕಾಣಸಿಗುವದಿಲ್ಲ. ‘ ಕೋಗಿಲೆ ಮತ್ತು ಸೋವಿಯಟ್ ರಷ್ಯಾ’ದಂಥ ಕವನಗಳನ್ನು ಈ ದೃಷ್ಟಿಯಿಂದ ಪರಿಶೀಲಿಸಬಹುದಾಗಿದೆ. ವಿಡಂಬನ ಹಾಗೂ ಉತ್ಪ್ರೇಕ್ಷೆಗಳ ಅಪೂರ್ವ ಹೊಂದಿಕೆ, ಅದ್ಭುತವಾದ ಶಿಲ್ಪ ಹಾಗೂ ರಮ್ಯವಾದ ಕಥನಶೈಲಿಗೆ ಈ ಕವನ ಮಾದರಿಯದಾಗಿದೆ. ಈ ಪರಿಪೂರ್ಣತೆಗೆ ಕವಿಯ ಸಮಾಧಾನವೇ ಕಾರಣವೆಂದು ಹೇಳಿದರೆ ತಪ್ಪಾಗಲಾರದು. ಕವಿಯ ಅಂತರಂಗದ ನೀರು ತಿಳಿಯಾಗಿರುವದರಿಂದ ಅವನ ವ್ಯಕ್ತಿತ್ವದ ಸಂಕೀರ್ಣತೆ ಇಲ್ಲಿ ಸ್ಪಷ್ಟವಾಗಿ ಪ್ರತಿಬಿಂಬಿತವಾಗಿದೆ. ಕಾವ್ಯರಚನೆ ಭಾವನೆಗಳ ಮೇಳವಾದ್ಯದಂತಿದ್ದರೆ ಎಂಥ ಸೂಕ್ಷ್ಮವಾದ ಸ್ವರಗಳ ಕುಸುರೂ ಕೇಳಿಸುತ್ತದೆ. ಆವೇಶದ ರಚನೆಯಲ್ಲಿ ಪರಿಚಿತವಾದ ಸ್ವರ ಕೂಡ ಅಪಶ್ರುತಿಯಾಗಿ ಕೇಳಬಹುದು. ಕು. ವೆಂ. ಪು.ರವರ ಈ ದೋಷದ ಪರಿಣಾಮವನ್ನು ಅವರ ಶೈಲಿಯಲ್ಲಿ ಕಾಣಬಹುದಾಗಿದೆ.

ಕು.ವೆಂ.ಪು.ರವರಲ್ಲಿ ಶಬ್ದಸಂಗ್ರಹಕ್ಕೇನೂ ಕೊರತೆಯಿಲ್ಲ. ಸಂಸ್ಕೃತ ಹಾಗೂ ಇಂಗ್ಲಿಶ್ ಭಾಷೆಗಳ ಮೇಲಿನ ಅವರ ಪ್ರಭುತ್ವವನ್ನು ಅವರ ಕಾವ್ಯವೇ ಸಾರಿ ಹೇಳುತ್ತದೆ. ಹಳಗನ್ನಡದ ಪದಗಳನ್ನೂ ಅವರು ಸಾಕಷ್ಟು ಬಳಸಿಕೊಳ್ಳುತ್ತಾರೆ. ಆದರೆ ಮೇಲೆ ಹೇಳಿದ ಅವಸರದ ರಚನೆಯಿಂದ ಭಾಷೆಯ ಉಪಯೋಗದಲ್ಲಿಯೂ ಸಂಯಮವಿರುವದಿಲ್ಲ. ಸಮಾನಾರ್ಥಗಳುಳ್ಳ ಪದಗಳನ್ನು ಅವರು ಅಯುಕ್ತವಾಗಿ ಉಪಯೋಗಿಸುತ್ತಾರೆ. ‘ ಮೌನ ’, ‘ ನೀರವ’, ನಿಶ್ಶಬ್ದ ’ ಇಂಥ ಶಬ್ದಗಳ ಅರ್ಥ ಒಂದೇ ಆಗಿದ್ದರೂ ಕವಿ ಅವುಗಳನ್ನು ಒಂದು ವಿಶಿಷ್ಟ ತಿಳುವಳಿಕೆಯಿಂದ ಉಪ-ಯೋಗಿಸಬೇಕಾಗುತ್ತದೆ. ಸಮಾನಾರ್ಥದ ಪದಗಳು ಕೇವಲ ವೈವಿಧ್ಯಕ್ಕಾಗಿಯೇ ಬಂದಾಗ ಅದು ಬರಿಯ ಶಬ್ದರಂಜನೆಯಾಗಿಬಿಡುತ್ತದೇ ಹೊರತು, ಅದರಿಂದ ಅರ್ಥಶಕ್ತಿ ಹೆಚ್ಚಾಗುವದಿಲ್ಲ. ಕವಿ ಸಾಮಾನ್ಯರಿಗಿಂತ ಹೆಚ್ಚು ಮಾತು ಬಲ್ಲವ (the most articulate being)ನೆಂದು ಹೇಳುವದು ಈ ಅರ್ಥದಲ್ಲಿಯೇನೆ. ಕು.ವೆಂ.ಪು.ರವರಲ್ಲಿ ಭಾವಾರ್ಥಗಳ ಸೂಕ್ಷ್ಮವಾದ ಸುಳುವುಗಳು ಶಬ್ದವೈಖರಿಯಲ್ಲಿ ಮರೆಯಾಗಿಬಿಡುತ್ತವೆ. ‘ ನವಿಲು ’, ‘ ಕಲಾಸುಂದರಿ ’, ‘ ಕೇಶಿರಾಜ ’ ಮೊದಲಾದ ಕವಿತೆಗಳಲ್ಲಿಯ ಅತಿ ಸಂಸ್ಕೃತಮಯತೆ ರಸಾನುಭವಕ್ಕೆ ತಡೆಯನ್ನುಂಟುಮಾಡುತ್ತದೆ. ‘ ನಿನ್ನ ಕಲೆಯ ನೆಳಲ ಛಾಯೆ ’, ‘ ಶಿಲೆಯಲ್ಲವೀ ಗುಡಿಯು ಕಲೆಯು ಬಲೆಯು ’ ಇಂಥ ಸಾಲುಗಳ ಅಸ್ಪಷ್ಟತೆ ಭಾಷೆಯ ಅಸಮರ್ಥತೆಯಿಂದುಂಟಾಗಿದೆ. ಕು.ವೆಂ.ಪು. ರವರ ಭಾವಾವೇಶದ ಇನ್ನೊಂದು ಪರಿಣಾಮವೆಂದರೆ ಅವರ ಚಿತ್ರ ಹಾಗೂ ರೂಪಕಗಳ ಅಸ್ಥಿರತೆ. ‘ಇಲ್ಲಿ ಹುಗಲಿಲ್ಲ ನಿನಗೆ ಓ ಬಿಯದ, ಇದು ಪಕ್ಷಿಕಾಶಿ’, ‘ ಜೀವಿತ

ಪಥವಾಗಲಿ ನಿನಗೆ....ಆಶೀರ್ವಾದದ ರಥರೇಖೆ', 'ತಳಿರ ನೆತ್ತಿಯ ಮರಂ ಪ್ರಕೃತಿಯಾತ್ಮಕ್ಕೆ ತಾನಾಯ್ತು ಸ್ವಾಪ್ನರೇಖಾಲಿಪಿಯ ಹಸ್ತಾಕ್ಷರಂ' ಇಂಥಲ್ಲಿ ಚಿತ್ರಗಳು ಸ್ಪಷ್ಟವಾಗಿ ಕಣ್ಣೆದುರು ಕಟ್ಟುವದಿಲ್ಲ. ಈ ದೋಷ ಎಲ್ಲ ಕಡೆಗೂ ಇದೆಯೆಂದು ಮಾತ್ರ ತಿಳಿಯಬಾರದು. ಸಾವಧಾನದ ಕಾವ್ಯರಚನೆಯಿದ್ದಾಗ ಕು.ವೆಂ.ಪು. ಮೈಜುಮ್ಮತಟ್ಟುವಂಥ ರಸಾನುಭವವನ್ನು ನೀಡಬಲ್ಲರು. 'ದೇವರು ರುಜುಮಾಡಿದನು, ಕವಿ ರಸವಶವಾಗುತ ನೋಡಿದನು', 'ಸತ್ಯದ ಕರುಳನೆ ಕಿತ್ತಿದೆ, ವಿಜ್ಞಾನದ ರಣಹದ್ದಿನ ನೆತ್ತರು ಬಸಿಯುವ ಕೊಕ್ಕು', 'ಎಲೆಯ ಹಸಿರುತೊಟ್ಟಿಲಲ್ಲಿ ಹನಿಯ ಹಸುಳೆ ನಗುತಿರೆ', 'ಪಾತಾಳದಿಂದಂಬರಕೆ ಹೆಡೆಯೆತ್ತುವೊಲ್ ಅಗ್ನಿಶೇಷ', 'ದಾಂಟಲು ಶ್ರೀಕೃಷ್ಣನ ತಂದೆ, ತುಂಬಿತು ಹೊಳೆ ಹಿಂದೆ' ಇಂಥ ಸಾಲುಗಳಲ್ಲಿ ನೈಜ ಕಾವ್ಯ ತುಂಬಿತುಳುಕುತ್ತದೆ. ಆದರೆ ಕಾವ್ಯಶಕ್ತಿ ಒಂದು ಕೃತಿಯಲ್ಲಿ ಸಂಪೂರ್ಣವಾಗಿ ಆವಿರ್ಭವಿಸುವದಿಲ್ಲ.

ಆದರೆ ಕು.ವೆಂ.ಪು.ರವರ ಭಾವಗೀತಗಳಲ್ಲಿ ಕಂಡುಬರದಿರುವ ವಾಗರ್ಥಗಳ ಸಾಮರಸ್ಯ ಅವರ ಕಥನಕವನಗಳಲ್ಲಿ ಬೇಕಾದಷ್ಟಿದೆ ಇಲ್ಲಿ ಕತೆಯ ತಿರುಳು ಗಟ್ಟಿಯಾಗಿರುವದರಿಂದಲೋ ಏನೋ ಬಂಧುರವಾದ ಕಾವ್ಯರಚನೆ ಸಾಧ್ಯವಾಗಿದೆ. 'ಬೊಮ್ಮನಹಳ್ಳಿಯ ಕಿಂದರಿ-ಜೋಗಿ' ಅನುವಾದವಾಗಿದ್ದರೂ ಸ್ವತಂತ್ರಕವನದಷ್ಟೇ ಜೀವಂತವಾಗಿದೆ. ಒಂದು ಜೀವನಕ್ರಮದ ಸಂಕೀರ್ಣಭಾವಗಳೆಲ್ಲ ಒಂದು ದುರಂತವಾದ ಕರುಣಕತೆಯ ಮೂಲಕ ಹೃದಯಂಗಮವಾಗಿ ಚಿತ್ರಿತವಾಗಿವೆ. 'ಶ್ರೀಕೃಷ್ಣ ಜನ್ಮಾಷ್ಟಮಿ'ಯ ಚಿತ್ರಮಯತೆ ಹಾಗೂ ಕಥನಶೈಲಿಗಳು ಸ್ಕಾಟ್ ಕವಿಯ ಕಥನ ಕೌಶಲವನ್ನು ನೆನಪಿಗೆ ತರುವಂತಿವೆ. ಇದಲ್ಲದೆ 'ತಾನಾಜಿ', 'ಕುಮುದಿನಿ' ಮೊದಲಾದ ಪ್ರಾರಂಭದ ಕವನಗಳಲ್ಲಿ ಕೂಡ ಕಾವ್ಯದ ಏಕಮುಖತೆಗೆ ಎಲ್ಲಿಯೂ ಭಂಗ ಬಂದಿಲ್ಲ. ಭಾವಗೀತಗಳಲ್ಲಿಯಂತೆ ಕವಿಯ ಪ್ರತಿಭೆ ಇಲ್ಲಿ ಪಳಚ್ಚನೆ ಮಿಂಚಿ ಹೋಗುವದಿಲ್ಲ, ಹೊಳೆಯಂತೆ ತುಂಬಿ ಹರಿಯುತ್ತದೆ.

ಕು.ವೆಂ.ಪು. ಈ ತಲೆಮಾರಿನ ಹಿರಿಯ ಕವಿಗಳಲ್ಲೊಬ್ಬರಾಗಿದ್ದಾರೆ. ರಚನಾಕ್ರಮದಲ್ಲಿ ದೋಷಗಳನ್ನು ತೋರಿಸಬಹುದಾದರೂ ಅವರ ಕಾವ್ಯಶಕ್ತಿ ಸಹಜವಾದದ್ದು. ಅದು ಮುಖ್ಯವಾಗಿ 'ರೋಮ್ಯಾಂಟಿಕ್' ಜಾತಿಯ ಪ್ರತಿಭೆಯಾಗಿದ್ದರಿಂದ ಭಾವಾವೇಶ ಅಲ್ಲಿ ಅನಿವಾರ್ಯವಾಗುತ್ತದೆ. ಆದರೆ ಕು.ವೆಂ.ಪು.ರವರ ಕಾವ್ಯದ ಶ್ರೇಷ್ಠತೆಯಿರುವದು ಅದು ಸಮಕಾಲೀನ ಜೀವನದ ಎಲ್ಲ ಅಂಶಗಳಿಗೂ ಪ್ರತಿ-ಸ್ಪಂದಿಯಾಯಿತೆಂಬುದೇ. ನಿಸರ್ಗದ ಚಲುವು, ದೇಶಪ್ರೇಮ, ಆದರ್ಶಪ್ರಿಯತೆ, ಕ್ರಾಂತಿಯ ವೀರಭಾವ, ಆಧ್ಯಾತ್ಮಿಕತೆ ಮೊದಲಾದ ಎಲ್ಲ ವಿಷಯಗಳಿಗೂ ಅವರ ಕಾವ್ಯ ಇಂಬು ಕೊಟ್ಟಿದೆ. ಹೀಗಾಗಿ ಹೊಸಗನ್ನಡ ಕಾವ್ಯದ ಇತಿಹಾಸದಲ್ಲಿ ಅವರ ಸ್ಥಾನ ಭದ್ರವಾಗಿದೆಯೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಮಾಸ್ತಿಯವರ ಮೊದಲಿನ ಕವನಗಳಲ್ಲಿ ಕೂಡ ಜೀವನದ ಆಳವಾದ ತಿಳುವಳಿಕೆಯನ್ನು ಕಾಣಬಹುದಾಗಿದೆ. 'ಅರುಣ', 'ತಾವರೆ', 'ಚಲುವು', 'ಬಿನ್ನಹ' ಈ ಸಂಗ್ರಹಗಳಲ್ಲಿಯ ಕವಿತೆಗಳಲ್ಲಿ ದಾಸರ ಹಾಡುಗಳ ಸರಳತೆ ಹಾಗೂ ಹೃದ್ಯತೆ

ಗಳು ಕಾಣುತ್ತವೆ. ' ಪಾರಿಜಾತ ', ' ಬೇಸಗೆಯ ಗಾಳಿ ' ಇಂಥ ಕವಿತೆಗಳ ಹಿಂದೆ ಸಂವೇದನಾಶೀಲವಾದ ಕವಿಹೃದಯವನ್ನು ಕಾಣಬಹುದು. ಆದರೆ ಇಲ್ಲಿಯೂ ಭಾವದ ಉತ್ಕಟತೆಗಿಂತ ಮಾಸ್ತಿಯವರ ಪ್ರತಿಭೆ ಕಥನವನ್ನಾಶ್ರಯಿಸಿದೆ. ಮಾಸ್ತಿಯವರದು ವರ್ಣ್ಣನಾರ್ಥನಂಥ ಮನೋಧರ್ಮವಾದ್ದರಿಂದ ಸುತ್ತಲಿನ ಜೀವನದ ವಾಸ್ತವ ಅಭಿವ್ಯಕ್ತಿ ಅವರಿಗೆ ಸಹಜವಾಗಿ ಬಂದಿದೆ. 'ಮಲಾರ'ದಲ್ಲಿಯ ಎಲ್ಲ ಸುನೀತಗಳನ್ನು ಈ ಬೆಳಕಿನಲ್ಲಿ ನೋಡಿದಾಗ ಮಾಸ್ತಿಯವರ ಕಾವ್ಯದ ನಿಜವಾದ ಬೆಲೆ ತಿಳಿದು ಬರುತ್ತದೆ. ನಿಸರ್ಗದ ಸಣ್ಣ ವಿವರಗಳು, ಋತುಮಾನದಲ್ಲಿಯ ಬದಲಾವಣೆಗಳು, ಸ್ವಂತ ಜೀವನದಲ್ಲಿಯ ಹೃದಯಸ್ಪರ್ಶಿಯಾದ ಘಟನೆಗಳು, ತಾವು ಕಂಡ ವ್ಯಕ್ತಿಗಳು —ಇಂಥ ವೈವಿಧ್ಯಪೂರ್ಣವಾದ ವಿಷಯಕ್ಷೇತ್ರದಲ್ಲಿ ಅಗಾಧವಾದ ಭಾವಸಂಪತ್ತನ್ನು ಕಂಡರೂ ಅದನ್ನು ಒಂದು ಸಂಯಮದಿಂದ ಮಾಸ್ತಿಯವರು ಚಿತ್ರಿಸುತ್ತಾರೆ. ಕಂಡ ಅನುಭವವನ್ನು ಮುಚ್ಚುಮರೆಯಿಲ್ಲದೆ ಗದ್ಯದಲ್ಲಿಯೆಂಬಂತೆ ಸರಳವಾಗಿ ನುಡಿದು ಬಿಡುತ್ತಾರೆ. ಆದ್ದರಿಂದ ಉತ್ಕಟತೆಯ ರುಚಿ ಹತ್ತಿದವರಿಗೆ ಮಾಸ್ತಿಯವರ ಕಾವ್ಯದಲ್ಲಿ 'ಕಾವ್ಯತನ' ಕಾಣಲಿಕ್ಕಿಲ್ಲ. ಸಂಗೀತದ ಪರಿಭಾಷೆಯಲ್ಲಿ ಹೇಳುವದಾದರೆ ಮಾಸ್ತಿಯವರದು ಮಂದ್ರಸ್ಥಾಯಿಯಲ್ಲಿಯ ಕೆಲಸ. ಉಳಿದ ಕವಿಗಳಿಗೂ ಮಾಸ್ತಿಯವರಿಗೂ ಇರುವ ಅಂತರವೆಂದರೆ ಇದೇ. ಅದಕ್ಕಾಗಿ ಉಳಿದ ಕವಿಗಳಿಗಿಂತ ಭಿನ್ನವಾದ ವಿಷಯ ಕ್ಷೇತ್ರವನ್ನು ಆರಿಸಿಕೊಳ್ಳುವದು ಮಾಸ್ತಿಯವರಿಗೆ ಸುಲಭವಾಯಿತು. ಮತ್ತು ಅದಕ್ಕಾಗಿಯೇ ಹೆಚ್ಚು ಭಾವಾತಿರೇಕದ ಗೊಂದಲವಿಲ್ಲದೆ ಮಾಸ್ತಿಯವರು ಕಾವ್ಯದ ಗಾಂಭೀರ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ. ಮುಂದೆ ಮಾತ್ರ ಮಾಸ್ತಿಯವರ ಕಾವ್ಯ ಭಾವಗೀತಕ್ಕಿಂತ ಕಥನಕಾವ್ಯವನ್ನೇ ಹೆಚ್ಚು ಒಲಿಯಿತು. ಅವರ 'ರಾಮನವಮಿ' ಹಾಗೂ 'ನವರಾತ್ರಿ'ಯಲ್ಲಿ ಕನ್ನಡದ ಕೆಲವು ಅತ್ಯುತ್ತಮವಾದ ಕಥನ ಕವನಗಳನ್ನು ಕಾಣಬಹುದಾಗಿದೆ. ಈ ಕೃತಿಗಳ ಮುಖಾಂತರವಾಗಿ ಮಾಸ್ತಿಯವರು ಕಾವ್ಯದ ಇನ್ನೊಂದು ಮಹೋದ್ದೇಶವನ್ನು ಸಾಧಿಸಿದ್ದಾರೆ. ಅದು ನಾಡಿನ ಸಂಸ್ಕೃತಿಯ ಚಿತ್ರಣ. 'ಮುಸಿಲಮ್ಮ', 'ಸೋಜಿಗದ ಹೊಳಲು ' ' ಅಗಡಿಯ ಸಾಧುಗಳು' ಈ ಕವನಗಳು ಮಾಸ್ತಿಯವರ ಸಮರ್ಥವಾದ ಭಾವಲೇಖನಕ್ಕೆ ಉದಾಹರಣೆಗಳಾಗಿವೆ. ಅಲ್ಲದೆ ಅವುಗಳ ಮೂಲಕ ಕನ್ನಡನಾಡಿನ ಜೀವಂತ ಸಂಪ್ರದಾಯಗಳ ಚಿತ್ರವನ್ನೂ ನಾವು ಕಾಣುತ್ತೇವೆ ಮುಂದಿನ ತಲೆಮಾರಿನವರಿಗೆ ಇದು ಸಾಧ್ಯವಾಗದ ಕೆಲಸವೆಂಬುದನ್ನು ನೆನಪಿನಲ್ಲಿಟ್ಟುಕೊಂಡರೆ, ಈ ಕಾವ್ಯದ ಐತಿಹಾಸಿಕ ಮಹತ್ವ ಎಷ್ಟೆಂಬುದು ಗೊತ್ತಾಗುವಂತಿದೆ. ಮಾಸ್ತಿಯವರ ಎಲ್ಲ ಕೃತಿಗಳೂ ಇದೇ ಮಟ್ಟದಲ್ಲಿವೆಯೆಂದು ಹೇಳಲಾಗದು. ಭಾವ ತರಲವಾದಾಗ ಶೈಲಿ ತೀರ ನೀರಸವಾಗಿಬಿಡುತ್ತದೆ; ಆಡು-ಮಾತಿನ ಅತಿ ಬಳಕೆಯಿಂದ ಸಡಿಲು ಹುಟ್ಟಿ ಕಾವ್ಯದ ಲಯ ತಪ್ಪಿ ಬಿಡುತ್ತದೆ.

ಆದರೆ ಮಾಸ್ತಿಯವರ ಕಾವ್ಯ ಸಾಧಿಸಿದ ಮೂರು ಮಹತ್ವದ ಉದ್ದೇಶಗಳನ್ನು ಮರೆಯಲಾಗದು. ಮೊದಲನೆಯದಾಗಿ ಗದ್ಯಪದ್ಯಗಳ ನಡುವಿನ ಮಡಿವೈಲಿಗೆಯ ನಿರ್ಬಂಧವನ್ನು ಅವರು ತೆಗೆದುಹಾಕಿದರು. ಗದ್ಯಪದ್ಯಗಳು ತಂಪು-ಬಿಸಿಗಳಂತೆ

ಒಂದರ ಗುಣಧರ್ಮವನ್ನು ಇನ್ನೊಂದು ಹದವರಿತು ಬಳಸಿಕೊಂಡರೆ ಮಾತ್ರ ಆರೋಗ್ಯಕರವಾಗಿ ಬಾಳಬಲ್ಲವಾಗಿವೆ. ತಿಳಿದೋ ತಿಳಿಯದೆಯೋ ಎಲ್ಲ ಸಾಹಿತ್ಯಗಳಲ್ಲಿ ಈ ಕೊಡುಕೊಳೆ ನಡೆದೇ ನಡೆಯುತ್ತದೆ. ಚಂಪೂಕಾವ್ಯಗಳಲ್ಲಿ ಗದ್ಯದ ವಿಪುಲ ಉಪಯೋಗವಿದ್ದೇ ಇರುತ್ತಿತ್ತು. ಹರಿಹರನ ರಗಳೆಗಳಲ್ಲಿಯು ಗದ್ಯ-ಭಾಗಗಳು ಪದ್ಯಭಾಗಗಳಷ್ಟೇ ಓಜಸ್ವಿಯಾಗಿರುವವಲ್ಲದೆ ಪೂರಕವೂ ಆಗಿವೆ. ಮಾಸ್ತಿಯವರು ಈ ರೀತಿಯಲ್ಲಿ ಈ ಕೊಡುಕೊಳೆಯನ್ನು ನಡೆಸಿಕೊಂಡರು. ಎರಡನೆಯದಾಗಿ, ಭಾವದಂತೆ ವಿಚಾರಗಳಿಗೆ ಹಾಗೂ ಕಥಾವಸ್ತುವಿಗೂ ಕಾವ್ಯದಲ್ಲಿ ಇಂಬುಕೊಟ್ಟರು. ಭಾವಗೀತಗಳ ಮೂಲಕ ತೀರ ಪರಿಮಿತವಾಗಿರುವ ವಿಷಯಕ್ಷೇತ್ರ ಇನ್ನೂ ಹೆಚ್ಚು ವಿಸ್ತಾರವಾಗುವಂತಾಯಿತು. ಮೂರನೆಯದಾಗಿ ಕಾವ್ಯದಲ್ಲಿ ನಾಡಿನ ಸಂಸ್ಕೃತಿಯನ್ನು ಚಿತ್ರಿಸುತ್ತ ಅದನ್ನು ವ್ಯಕ್ತಿತ್ವದಿಂದ ಬಂಧನದಿಂದ ಬಿಡಿಸಿದರು. ಹೊಸಗನ್ನಡ ಕಾವ್ಯದಲ್ಲಿ ಕವಿಯ ವ್ಯಕ್ತಿತ್ವಕ್ಕೆ ಸಿಕ್ಕ ಮಹತ್ವದಿಂದ ಕಾವ್ಯ, ಜನಾಂಗ ಹಾಗೂ ಸಮಾಜಗಳ ಪ್ರಜ್ಞೆಯನ್ನು ಕಳೆದುಕೊಳ್ಳುವದರಲ್ಲಿತ್ತು. ಮಾಸ್ತಿಯವರು ಯಾವ ವಸ್ತುವನ್ನೂ ಜನತೆಯ ಬಾಳಿನ ಒಂದು ಅಂಶವನ್ನಾಗಿಯೇ ಕಾಣುತ್ತಾರೆ. ಮಾಸ್ತಿಯವರು ಸಣ್ಣಕತೆ ಹಾಗೂ ಭಾವಗೀತಗಳನ್ನು ಬರೆದಿದ್ದರೂ ಕೂಡ, ನಮ್ಮ ಹಳೆಯ ಕವಿಗಳಂತೆ ಸಾಮಾನ್ಯಜೀವನದ ಸಮಗ್ರಚಿತ್ರಣಕ್ಕೇ ಮನಸ್ಸು ಹಾಕಿದ್ದಾರೆ.

ವೀ. ಸಿ.ಯವರ ಕಾವ್ಯದ ದಾರಿ ತೀರ ಇಕ್ಕಟ್ಟಿನದಾಗಿದೆ. ಕನ್ನಡದ ಕೆಲವೇ ಧೀಮಂತ ವ್ಯಕ್ತಿಗಳಲ್ಲೊಬ್ಬರಾದ ಇವರ ಹೃದಯದಾಳದಲ್ಲಿ ಯಾವುದೋ ತಾತ್ವಿಕ ಅಸಮಾಧಾನ ನೆಲೆನಿಂತಿದೆ. ತಮ್ಮ ಮನೋಧರ್ಮ ಈ ಕಾಲಕ್ಕೆ ಸಂಬಂಧಿಸಿದುದೇ ಅಲ್ಲ ಎಂಬ ಅನಿಸಿಕೆಯ ಪರಿಣಾಮವಿರಬೇಕು. ಅದಕ್ಕಾಗಿಯೇ ಏನೋ ಅವರ ವಿಷಯಕ್ಷೇತ್ರ ತೀರ ಸಣ್ಣದಾಗಿಬಿಟ್ಟಿದೆ. 'ಮನೆತುಂಬಿಸುವದು', 'ಲಾಲಬಾಗ', 'ಕಸ್ಮೈ ದೇವಾಯ?' 'ಅಭೀಃ', 'ಶಬರಿ', 'ಮೃಗಶಾಲೆಯ ಸಿಂಹಗಳು', 'ಗಡಿ ದಾಟು' ಇಂಥ ವಿಖ್ಯಾತ ಕವನಗಳಲ್ಲಿ ವೀ. ಸಿ. ಯವರ ಕಾವ್ಯವಾಣಿ ಜೀವಂತವಾಗಿ ಮೊಳಗುತ್ತದೆ. ಭಾವ ಹಾಗು ವಿಚಾರಗಳ ಮನೋಹರವಾದ ಹೊಂದಿಕೆ ಈ ಕವನಗಳಲ್ಲಿದೆ. ಸಹಾನುಭೂತಿ, ಉತ್ಸಾಹ, ಪ್ರಾಮಾಣಿಕತೆ ಇವೆಲ್ಲ ಈ ಕವನಗಳ ಹಿಂದೆ ಮಿಡಿಯುತ್ತಿವೆ; ಪ್ರಕಟವಾದ ಭಾವಗಳು ಶ್ರೀಮಂತವಾಗಿವೆ, ವಿಚಾರಗಳು ಇನ್ನೊಮ್ಮೆ ದೊರೆಯಲಾರವೆನ್ನುವಷ್ಟು ಶ್ರೇಷ್ಠವಾಗಿವೆ. ಆದರೆ ಇಷ್ಟೆಲ್ಲ ಸಹಜವಾಗಿ ಉಕ್ಕಿಬರುತ್ತಿದ್ದರೂ ಕವಿಯ ಒಳಮನಸ್ಸು ಮತ್ತೇನನ್ನೋ ಹೇಳುವಂತಿದೆ. ಅದಕ್ಕಾಗಿ ವೀ.ಸಿ. ಯವರು ತಮ್ಮ ಭಾವಪ್ರಪಂಚವನ್ನು ಬೆಳೆಸಿಕೊಳ್ಳಲಿಲ್ಲ. ಅನುಭವಕ್ಕಿಂತ ಕವಿಯ ಈ ಭಾವಪ್ರಪಂಚ ( world of sensibilities ) ಹೆಚ್ಚು ನೈಜವಾಗಿರಬೇಕಾಗುತ್ತದೆ. ಸಂವೇದನೆಗಳ ಕ್ಷೇತ್ರ ಎಷ್ಟು ವಿಶಾಲವಾಗುತ್ತದೋ ಅಷ್ಟು ಕಾವ್ಯಕ್ಕೆ ದೃಢತೆ ಬರುತ್ತದೆ. ಈ ತಲೆಮಾರಿನ ಕವಿಗಳು ಆದರ್ಶಪ್ರಿಯತೆ, ಮಾನವತಾವಾದ, ನಿಸರ್ಗ ಪ್ರೇಮ, ಪ್ರಣಯ ಮುಂತಾದ ಶ್ರದ್ಧೆ, ನಂಬಿಕೆ, ಭಾವನೆಗಳಿಂದ ಈ ಕ್ಷೇತ್ರವನ್ನು ವಿಸ್ತಾರವಾಗಿ ಬೆಳೆಸಿಕೊಂಡರು. ಬುದ್ಧಿ ಭಾವಗಳ ಒಳತೋಟಿಯ ಮೂಲಕವೋ

ಏನೋ ವೀ. ಸಿ. ಯವರ ಈ ಕ್ಷೇತ್ರ ಸಂಕೋಚಗೊಂಡಿದೆ. ಅವರು ಮನುಸ್ಸು ಮಾಡಿದ್ದರೆ ವೈಚಾರಿಕ ಕವಿತೆಗಳನ್ನು ಬರೆಯಬಹುದಾಗಿತ್ತು. ಈಗ ಪ್ರಸಿದ್ಧವಾಗಿರುವ ಕವಿತೆಗಳಲ್ಲಿ ಕೂಡ ('ಮನೆತುಂಬಿಸುವದು' ಒಂದನ್ನು ಬಿಟ್ಟು) ವೀ. ಸಿ. ಯವರ ಧೀಶಕ್ತಿಯೇ ಹೆಚ್ಚು ಪ್ರಮುಖವಾಗಿದೆ. ಎದೆಯಾಳದಲ್ಲಿರುವ ಅಸಮಾಧಾನದ ಮೂಲಕ ಆದದ್ದಾಗಲಿ ಎಂಬ ಅನಾಸಕ್ತಿಯಿಂದ ಅವರು ಕಾವ್ಯನಿರ್ಮಾಣಕ್ಕೆ ತೊಡಗಿದಂತಾಗಿದೆ. 'ಕಸ್ಮೈ ದೇವಾಯ?' 'ಮೃಗಶಾಲೆಯ ಸಿಂಹಗಳು' ಇಂಥ ಕವಿತೆಗಳಲ್ಲಿ ಕಾಣುವ ಪ್ರತಿಕ್ರಿಯೆಯ ಮನೋವೃತ್ತಿಯ ಕಾವಿನಲ್ಲಿ ಅನೇಕ ಕವಿತೆಗಳನ್ನು ಬರೆದು ಮುಂದೆ 'ದ್ರಾಕ್ಷಿ-ದಾಳಿಂಬೆ'ಯಲ್ಲಿಯ ಪರಿಣತಿಗೆ ಅವರು ಬಂದಿದ್ದರೆ ಇನ್ನೂ ಮಹತ್ವಪೂರ್ಣವಾದ ಕಾವ್ಯವನ್ನು ಕಾಣಬಹುದಾಗಿತ್ತು.

ಪು. ತಿ. ನರಸಿಂಹಾಚಾರ್ಯರ ಸ್ಫೂರ್ತಿಕೇಂದ್ರ ಮುಖ್ಯವಾಗಿ ಸಂಸ್ಕೃತಿ ಎನ್ನಬಹುದು. ಅವರ ಬಿಡಿ ಕವಿತೆಗಳಲ್ಲಿ ಮೂಡಿರುವ ಭಾವಗಳಿಗೆ ಸಾಂಸ್ಕೃತಿಕ ಹಿನ್ನೆಲೆಯೊಂದು ಇದ್ದೇ ಇರುತ್ತದೆ. ಆದರೆ ಅದರ ಮೂಲಕ ಯಾವ ವಿಚಾರಪ್ರಣಾಲಿಯೂ ಅನುಭವಕ್ಕೆ ಬರುವದಿಲ್ಲವೆಂಬುದು ಸೋಜಿಗದ ಮಾತಾಗಿದೆ. ಇದಕ್ಕೆ ಕಾರಣ ಮುಖ್ಯವಾಗಿ ವಸ್ತುವಿನ ತರಲತೆ. 'ಅಹಲ್ಯೆ'ಯಂಥ ಗೀತರೂಪಗಳಲ್ಲಿಯ ಬಾಹ್ಯ ಸೌಂದರ್ಯ ಸಾರ್ಥಕವಾಯಿತೆಂದೆನಿಸುವದು, ವಸ್ತು ಗಟ್ಟಿಮುಟ್ಟಾಗಿರುವದರಿಂದಲೇ. ಅದಕ್ಕಾಗಿ ಅವರ ಭಾವಗೀತಗಳು ಕೇವಲ ವರ್ಣಮಯತೆಯಿಂದ ಕುಡಿದವೆಂದೆನಿಸುತ್ತದೆ. ಆ ದೃಷ್ಟಿಯಿಂದ ಪ್ರಕೃತಿ-ಗೀತಗಳು ಹೆಚ್ಚು ಅರ್ಥಪೂರ್ಣವಾಗಿವೆ. ಅವರ 'ಮಲೆದೇಗುಲ' ಮಹತ್ವದ ಕಾವ್ಯರಚನೆಯಾಗಿದೆ. ವರ್ಣನೆಯ ಬಣ್ಣಗಾರಿಕೆ ಸುಸಂಸ್ಕೃತ ಶೈಲಿ ಹಾಗೂ ಗೀತಪ್ರಿಯತೆಗಳು ಇವರ ಕಾವ್ಯದ ವೈಶಿಷ್ಟ್ಯಗಳಾಗಿವೆ.

ಜಿ. ಪಿ. ರಾಜರತ್ನಂ ಹಾಗೂ ಕೆ. ಎಸ್. ನರಸಿಂಹಸ್ವಾಮಿಯವರು ಕಲ್ಪನಾಶಕ್ತಿ ಹಾಗೂ ಕಾರ್ಯಕ್ಷಮತೆಯ ದೃಷ್ಟಿಯಿಂದ ಪ್ರಮುಖ ಕವಿಗಳಾದ್ದಾರೆ. ಆದರೆ ಬೇಂದ್ರೆ, ಕು.ವೆಂ.ಪು, ಮಾಸ್ತಿಯವರಂತೆ ಸಮಕಾಲೀನ ಜೀವನದ ಯಾವ ಅಂಶವನ್ನೂ ವಸ್ತುವನ್ನಾಗಿ ಮಾಡಿಕೊಂಡಿಲ್ಲ. ತೀರ ರಸಪೂರ್ಣವಾದ ವಿಷಯಕ್ಷೇತ್ರವೊಂದನ್ನು ಆರಿಸಿಕೊಂಡು ಅದರಲ್ಲಿ ಯಾವ ಶ್ರೇಷ್ಠ ಕವಿಯೂ ಮಾಡಬಲ್ಲ ಕೆಲಸವನ್ನು ಇವರು ಮಾಡಬಲ್ಲರು. ಇವರಲ್ಲಿ ರಾಜರತ್ನಂ ಮುಂದೆ ಬಹಳಷ್ಟು ಕವಿತೆಗಳನ್ನು ಬರೆಯಲಿಲ್ಲ. ಆದರೆ ಬರೆದ 'ನಾಗನ ಪದಗಳ'ಲ್ಲಿ ಮೊದಲಿನ ಕಾವು ಉಳಿದಿಲ್ಲ. ಕೆ. ಎಸ್. ಎನ್. ಅವರ ಕಾವ್ಯದ ಭವಿಷ್ಯ ನಿಜವಾಗಿಯೂ ಕುತೂಹಲಕಾರಿಯಾಗಿದೆ. ರಾಜರತ್ನಂರಂತೆ ಅವರು ವಿಮರ್ಶೆಗೆ ಕೈಹಾಕದೆ ಕವಿಗಳಾಗಿಯೇ ಉಳಿದಿರುವದರಿಂದ ಅನೇಕ ಆಸೆಗಳನ್ನು ಅವರು ಕೆರಳಿಸುತ್ತಾರೆ.

ರಾಜರತ್ನಂರ 'ಯೆಂಡ್ಕುಡುಕನ ಪದಗಳು' ಪ್ರಕಟವಾದಾಗ ಅದು ನಾಡಿನ ಅನೇಕ ರಸಿಕರ ಲಕ್ಷ್ಯವನ್ನು ಸೆಳೆದುಕೊಂಡಿತು. ಈಗ ಅದರ ಲೋಕಪ್ರಿಯತೆ ತೀರ ಕಡಿಮೆಯಾಗಿದೆ. ರಾಜರತ್ನಂರ ವ್ಯಕ್ತಿತ್ವದಲ್ಲಿಯ ಬದಲಾವಣೆ ಅವರ ಕಾವ್ಯವನ್ನು ಐತಿಹಾಸಿಕ ಸಂಗತಿಯನ್ನಾಗಿ ಮಾಡಿದೆ. ಆದರೆ 'ಯೆಂಡ್ಕುಡುಕನ ಪದಗಳು' ಈ ತಲೆಮಾರಿನ ತೀರ ಯಶಸ್ವಿಯಾದ ಪ್ರಯೋಗವಾಗಿವೆ. ಈ ಸಂಗ್ರಹ

ದಲ್ಲಿಯು ಕವಿತೆಗಳನ್ನು ಬೇರೆ ಬೇರೆಯಾಗಿ ನೋಡುವದಕ್ಕಿಂತ ಒಟ್ಟಾಗಿ ನೋಡು ವದೇ ಒಳ್ಳೆಯದು. ಒಂದು ಪರಿಸರ, ಒಂದು ಮನೋಧರ್ಮ, ಒಂದು ಜೀವನ ದೃಷ್ಟಿ ಎಲ್ಲ ಕವಿತೆಗಳಿಗೂ ಸಾಮಾನ್ಯವಾದ ಹಿನ್ನೆಲೆಯನ್ನು ಕಲ್ಪಿಸಿವೆ. 'Houseman'ನ 'Shropshire Lad' ಅಥವಾ ಉಮರಖಯ್ಯಾಮನ 'ರುಬಾಯಿಯತ್' ಗಳಂತೆ ಈ ಕವನಸಂಗ್ರಹವನ್ನು ನೋಡಬೇಕಾಗಿದೆ.

ವಸ್ತು ಹಾಗೂ ಶೈಲಿ ಹೀಗೆ ಎರಡೊಂದು ದೃಷ್ಟಿಯಿಂದಲೂ ಈ ಸಂಗ್ರಹ ಒಳ್ಳೆಯ ಅರ್ಥದಲ್ಲಿ ಪ್ರಾಯೋಗಿಕವಾಗಿದೆ. ತನ್ನ ಜೀವನದೃಷ್ಟಿಗೆ ಅನುಕೂಲವಾದ ಪರಿಸರವೊಂದನ್ನು ನಿರ್ಮಿಸಿಕೊಂಡು, ಆ ಪರಿಸರದ ಬಣ್ಣಗಾರಿಕೆಯ ಮುಖಾಂತ ರವೇ ಕವಿ ತನ್ನ ಭಾವನೆಗಳನ್ನು ಪ್ರಕಟಿಸುವ ಪ್ರಯತ್ನವನ್ನು ಕನ್ನಡದಲ್ಲಿ ರಾಜ-ರತ್ನಂರು ಮೊದಲುಬಾರಿ ಮಾಡಿದರು. 'ಯೆಂಡ್ಕುಡುಕ', ಹೆಂಡದ ಅಮಲಿನಲ್ಲಿ ತನ್ನದೊಂದು ಲೋಕವನ್ನೇ ನಿರ್ಮಿಸಿದ್ದಾನೆ. ಅವನ ಈ ಅಮಲು ಸಂವೇದನೆಗಳಿ ಗಿಂತ ಹೆಚ್ಚು ತೀವ್ರವಾಗಿದ್ದು ಕಲ್ಪನೆಯಂತೆ ಕಾಮರೂಪಿಯಾಗಿದೆ. 'ಯೆಂಡದ್ ತೊಂದ್ರೆ' ಎಂಬ ಕವಿತೆಯಲ್ಲಿ ಈ ವಿಪರೀತ ಸೃಷ್ಟಿಯ ರೇಖಾಚಿತ್ರವಿದೆ. ಗಿರ್ಕಿ ಹೊಡೆಯುವ ಬೀದಿ-ದೀಪ, ಸೊಟ್ಟು ಮುಖ ಮಾಡಿಕೊಂಡ ಚಂದ್ರ, ಕಾಗೆ ಗಳ ಬಳಗ, ಮುದುರಿಕೊಂಡು ಬಿದ್ದ ರಸ್ತೆ ಇವು ಈ ಕಲ್ಪನಾಪ್ರಪಂಚದ ಪ್ರಮುಖ ವಿವರಗಳಾಗಿವೆ. ಕವಿ ಈ ಲೋಕದಲ್ಲಿ ಒಮ್ಮೆ ನಟನಾಗಿ ಇನ್ನೊಮ್ಮೆ ಪ್ರೇಕ್ಷಕನಾಗಿ ವರ್ತಿಸುವದೇ ಈ ಕಾವ್ಯದ ಧ್ವನಿಶಕ್ತಿಗೆ ಮೂಲವಾಗಿದೆ. ಹೆಂಡವನ್ನು ಕ್ಷಣದಲ್ಲಿ ನೀರು ಮಾಡಿಬಿಡುವ ಮುನಿಯ, ಮರೆಯಲಾಗದ ಪುಟ್ನಂಜಿ, ಮೇಸ್ತ್ರಿ, ಸಾಕ್ಷಿಪುರುಷನಂತಿರುವ ಬೇವಾರ್ಸಿ— ಹೀಗೆ ಆ ಜಗತ್ತಿನಲ್ಲಿ ಬೇರು ಬಿಟ್ಟ ವ್ಯಕ್ತಿ ಗಳೊಂದಿಗೆ ಕವಿ ಅವರಲ್ಲೊಬ್ಬನಾಗಿ ವರ್ತಿಸುತ್ತಾನೆ. ಯೆಂಡ್ಕುಡಕನಾಗಿ ಆ ಲೋಕದ ಒಳಗಿದ್ದರೆ, ಬೇವಾರ್ಸಿಯಾಗಿ ಹೊರಗೂ ಇರುತ್ತಾನೆ. ಕವಿಯ ಈ ನಿರೀ-ಕ್ಷಣೆಯಲ್ಲಿರುವ ವಿಷಾದಪೂರ್ಣವಾದ ಅನಾಸಕ್ತಿ ಕಾವ್ಯದ ಶ್ರೇಷ್ಠತೆಗೆ ಕಾರಣವಾಗಿದೆ. ಕುಡುಕನ ಮನೋವಿಕಾರಗಳಂತೆ ಕ್ಷಣಕ್ಷಣಕ್ಕೂ ಬದಲಾವಣೆ ಹೊಂದುತ್ತಿರುವ ಈ ಜಗತ್ತಿನ ಸುಖದುಃಖಗಳ ಚಿತ್ರ ಒಂದು ಆಳವಾದ ಸತ್ಯವನ್ನು ಕಣ್ಣೆದುರು ತೆರೆಯು ತ್ತದೆ. ಈ ವಿಪರೀತಸೃಷ್ಟಿ ಹೊರಗಿನ ಜಗತ್ತಿನಷ್ಟೇ ಸತ್ಯವಾಗಿದೆ, ಇಲ್ಲವೆ ಅಷ್ಟೇ ನಶ್ವರ ವಾಗಿದೆ. ಪಡ್ಕಾನೆಯ ಗದ್ದಲ, ಮುನಿಯನ ಜಿಪುಣತನ, ಪುಟ್ನಂಜಿಯ ಪ್ರೀತಿ, ಸಂಸಾರ, ಬಡತನ, ಸಾವು ಹೀಗೆ ಒಂದರ ಮೇಲೊಂದರಂತೆ ಈ ಆತ್ಮೀಯ ಪ್ರಸಂಗ ಗಳು ನಡೆದುಹೋದ ಮೇಲೆ ಮುಂದೆ ಉಳಿದದ್ದೇನು? ಅಮಲಿಳಿದು ಹೋದ ಕುಡು ಕನ ಮನಸ್ಸಿನಂತೆ ಬಾಳು ರುಚಿಯನ್ನು ಕಳೆದುಕೊಂಡಿದೆ. 'ರತ್ನ ಅಳ್ಳ ತೋಡ್ತಾನೆ, ಮೇಸ್ತ್ರಿ ನೋಡ್ತಾನೆ' ಈ ಸಾಲುಗಳ ನೋವು ಕರುಳಿರಿಯುತ್ತದೆ. ಈ ಮಾತು ಗಳಲ್ಲಿ ಕುಡುಕುತನ ಎಳ್ಳಷ್ಟೂ ಇಲ್ಲ. ಈ ಜಗತ್ತಿನ ಅಂಚಿಗೆ ಇನ್ನೊಂದು ವಿಶಾಲ ಜಗತ್ತಿದೆ ಎಂಬುದರ ಅನುಭವವೂ ಇಲ್ಲಿ ಚಿತ್ರಿತವಾಗಿದೆ. ಅಲ್ಲಿಯ ರೀತಿ-ನೀತಿ ಗಳನ್ನು ಸೂಕ್ಷ್ಮವಾಗಿ ರತ್ನ ವಿಡಂಬನಕ್ಕೀಡುಮಾಡುತ್ತಾನೆ. ಇಷ್ಟೇ ಅಲ್ಲ, ದೇವತೆ ಗಳೂ ಈ ಕುಡುಕನ ವಾಗ್ಬಾಣಗಳಿಗೆ ಆಹುತಿಯಾಗಿದ್ದಾರೆ. ಒಂದು ದೃಷ್ಟಿಯಿಂದ

ಕುಡುಕತನ ಸರ್ವವ್ಯಾಪಿಯಾಗಿದೆ. ಕುಡಿದ ಮತ್ತಿನಲ್ಲಿ ಈ ಜೀವನ ಕೊನೆಯಿಲ್ಲದ್ದು ಎಂದೆನಿಸುತ್ತಿರುವಾಗಲೇ ಅಮಲು ಇಳಿದುಹೋಗುತ್ತದೆ. ಜೀವನದ ಅನುಭವ ಇನ್ನೊಮ್ಮೆ ಬೇಡಿದರೂ ಕೈಗೆ ಸಿಗಲಾರದು. ಇದೆಲ್ಲ ಕ್ಷಣಿಕವೆಂಬುದು ಗೊತ್ತಿದೆ. ಆದರೆ ಬದುಕು ಅನಿವಾರ್ಯವಾಗಿದೆಯಲ್ಲ! ಬದುಕುವದರಲ್ಲಿಯೇ ಬದುಕಿನ ಮೌಲ್ಯಗಳು ಹುದುಗಿರಬಹುದೆನೋ! 'ಬೇವಾರ್ಸಿ ನಂ ಪುಟ್ನಂಜಿ ರೂಪಾನ ಆಡ್ತೀನಿ ಬಾಪ್ಪ', 'ಬದುಕೋದ್ ತಿನ್ನಾಕ ಅಲ್ಲಾಂದದ್ದು ನೆಪ್ಪೈತಾ ನಂಜಿ?' ಇಂಥ ಭಾವಗಳು ಬದುಕನ್ನು ಸಾರ್ಥಕಗೊಳಿಸುತ್ತವೆ. ಹೀಗೆ ವಾಸ್ತವತೆ ಹಾಗೂ ಸಾಂಕೇತಿಕತೆಗಳೆರಡೂ ಬೆರೆತು ಕಾವ್ಯದ ವ್ಯಂಜಕತೆಯನ್ನು ಹೆಚ್ಚು ಮಾಡಿವೆ. ಬದುಕಿನ ನೈಜತೆಯನ್ನು ಈ ವ್ಯಂಜಕತೆಯ ಬೆಳಕಿನಲ್ಲಿ ರಾಜರತ್ನಂ ಮರೆಯಲಾಗದಂತೆ ಚಿತ್ರಿಸಿದ್ದಾರೆ. ಪುಟ್ನಂಜಿಯ ಮೇಲಿನ ಕವಿತೆಗಳಂತೂ ಕನ್ನಡದಲ್ಲಿಯ ಅತ್ಯುತ್ತಮ ಪ್ರಣಯ-ಗೀತಗಳಿಗೆ ಉದಾಹರಣೆಗಳಾಗಿವೆ.

ಶೈಲಿಯ ದೃಷ್ಟಿಯಿಂದಲೂ ಈ ಕವನಗಳು ಮಹತ್ವದ ಪ್ರಯೋಗಗಳಾಗಿವೆ. ಕವನಗಳ ಭಾಷೆ ಗ್ರಾಮ್ಯವಾಗಿರುವದಲ್ಲದೆ ಕುಡುಕನ ವಾಕ್ಯಸರಣಿಯಂತೆ ಹೊಯ್ದಾಡುತ್ತದೆ. 'ಎಲೆಲೆಲೆ ರಸ್ತೆ, ಏನು ಅವ್ವವಸ್ತೆ' ಎಂಬ ಸುಪ್ರಸಿದ್ಧವಾದ ವಾಕ್ಯವನ್ನು ಶೈಲಿಯ ದೃಷ್ಟಿಯಿಂದಲೂ ನೋಡಬಹುದಾಗಿದೆ. ಕಾವ್ಯದ ಪರಿಸರವನ್ನು ಕ್ಷಣದಲ್ಲಿ ನಿರ್ಮಿಸಬಲ್ಲ ಶಕ್ತಿ ಈ ಭಾಷೆಗಿದೆ. 'ಸರಸೋತಮ್ಮನ ಗಂಡ', 'ಇಸ್ನು ಪಡ್ಟ', 'ಮುನ್ಯಂಗು ಯೆಂಡಕ್ಕು ಬೋಲೋರೆ ಜೈ' ಈ ಪದಪ್ರಯೋಗಗಳು ಕುಡುಕನ ಅಹಂಭಾವವನ್ನೂ ವಿಕ್ಷಿಪ್ತತೆಯನ್ನೂ ಸರಿಯಾಗಿ ನಿರೂಪಿಸುತ್ತವೆ. ಕವಿತೆಗಳ ಛಂದಸ್ಸು ಕುಡಿತದ ಭಾವಾಂತರಗಳಿಗೆ ತಕ್ಕಂತೆ ಏರಿಳಿತಗಳನ್ನು ಪಡೆಯುತ್ತದೆ. ಎಲ್ಲಕ್ಕಿಂತ ಹೆಚ್ಚಾಗಿ ರಾಜರತ್ನಂ ಈ ಕಾವ್ಯದಲ್ಲಿ ಉಪಯೋಗಿಸಿದ ಉಪಮೆ ರೂಪಕಗಳು ಅನನ್ಯತೆಯಿಂದ ಬೆರಗುಗೊಳಿಸುತ್ತವೆ. ಹೆಚ್ಚಿದ ಲಿಂಬೆಹಣ್ಣಿನಂತಿರುವ ಚಂದ್ರನ ಕಣ್ಣು, ಕುಡುಕರ ಕೆಂಗಣ್ಣಿನಂತಿಇುವ ಸೂರ್ಯ, ನೆರಳಿನ ತೇಪೆ ಹಚ್ಚಿದ ಬಿಸಿಲಿನ ಚಾಪೆ, ಸಾಯುವ ಮುದುಕನಂತಿರುವ ಸಂಜೆಯ ಸೂರ್ಯ ಈ ಚಿತ್ರಗಳು ರಮ್ಯವಾಗಿರುವವಲ್ಲದೆ ಒಮ್ಮೆಲೆ ಜೀವಂತವಾಗಿ ಆವರಣವನ್ನು ನಿರ್ಮಿಸುತ್ತವೆ. 'ನಂಜಿ ಇಲ್ಲದ್ ಮನೇಗ್ ಯಾಕ ಬರ್ತಿ?' ಎಂದು ರಾಗವೆಳೆಯುವ ಬೀಗ, ಬುದ್ಧಿ ಇಲ್ಲದೆ ಹಾರಾಡುವ ಕಾಗೆಗಳು ಇಂಥ ಶಕ್ತಿಯುತವಾದ ಪ್ರತಿಮೆಗಳೂ ಇವೆ.

ಒಟ್ಟಿನಲ್ಲಿ 'ಯೆಂಡ್ಕುಡುಕನ ಪದಗಳು' ಈ ತಲೆಮಾರಿನ ಶ್ರೇಷ್ಠಕೃತಿಗಳಲ್ಲಿ ಒಂದಾಗಿದೆ. ಆದರೆ ಕಾವ್ಯದ ಇತಿಹಾಸದ ದೃಷ್ಟಿಯಿಂದ ನೋಡಿದಾಗ ಮಾತ್ರ ಪರಿಮಿತವಾಗಿದೆಯೆಂದೆನಿಸುತ್ತದೆ. ಈ ಒಂದು ಪರಿಸರದಲ್ಲಿ ಸಿಕ್ಕ ಯಶಸ್ಸನ್ನು ರಾಜರತ್ನಂ ಮುಂದೆ ಕವಿಗಳಾಗಿ ಬೆಳೆಸಿಕೊಂಡು ಬರಲಿಲ್ಲ. ಈ ಸಂಗ್ರಹ ಅನನ್ಯವಾಗಿರುವದೇ ಅದರ ಬೆಳವಣಿಗೆಗೆ ಅಡ್ಡಿಯಾಗಿದೆ. ಆದರೆ ಕಲೆಗಾರಿಕೆಯ ದೃಷ್ಟಿಯಿಂದ ಮಾತ್ರ ಇದು ಎಲ್ಲ ಅರ್ಥದಲ್ಲಿಯೂ ಅಪೂರ್ವವಾಗಿದೆ.

ಕೆ. ಎಸ್. ನರಸಿಂಹಸ್ವಾಮಿಯವರ 'ಮೈಸೂರು ಮಲ್ಲಿಗೆ' ಅವರನ್ನು ಬೆಳಗಾಗುವದರಲ್ಲಿ ಸುವಿಖ್ಯಾತರನ್ನಾಗಿ ಮಾಡಿತು. ಬಹುಶಃ ಕನ್ನಡದಲ್ಲಿ ಇಷ್ಟು ಲೋಕ-

ಪ್ರಿಯವಾದ ಸಂಗ್ರಹ ಬೇರೊಂದಿಲ್ಲವೆಂದರೂ ಸಲ್ಲುತ್ತದೆ. ಈ ಸಂಗ್ರಹದಲ್ಲಿಯ ಸರಳವಾದ ಪ್ರಣಯಕವಿತೆಗಳು ಹೃದ್ಯತೆಯ ಮೂಲಕ ನಾಡಿನ ರಸಿಕರನ್ನು ಬಹು ಬೇಗ ಆಕರ್ಷಿಸಿದವು. ಪ್ರಪಂಚದ ಸಾಮಾನ್ಯ ಸುಖದುಃಖಗಳನ್ನು ಅದರಲ್ಲೂ ಪ್ರಣಯವನ್ನು ಕೆ. ಎಸ್. ಎನ್. ಜಾನಪದಕಾವ್ಯದ ರೀತಿಯಲ್ಲಿ ಚಿತ್ರಿಸಿದ್ದಾರೆ. ಸಹಜತೆ ಈ ಕವಿತೆಗಳ ಬಹು ಮುಖ್ಯ ಗುಣವಾಗಿದೆ. ಹುಟ್ಟಿನಲ್ಲಿಯೇ ಜೇನಿನ ರುಚಿ ನೋಡುವಂತೆ ಜೀವನದಲ್ಲಿಯ ಕಾವ್ಯವನ್ನು ಈ ಕವಿತೆಗಳಲ್ಲಿ ಸವಿಯಬಹುದಾಗಿದೆ. ಈ ಮೊದಲು ಈ ಜೀವನಕ್ಷೇತ್ರದ ಮೇಲೆ ಯಾವ ಕವಿಯ ಕಣ್ಣೂ ಬಿದ್ದಿರಲಿಲ್ಲವೆ ನ್ನುವದೂ ಈ ಕಾವ್ಯದ ಯಶಸ್ಸಿಗೆ ಬಹುಮಟ್ಟಿಗೆ ಕಾರಣವಾಗಿದೆ, ಅಕಸ್ಮಾತ್ತಾಗಿ ದೊರೆತ ಈ ನಾಡನ್ನು ಕೈವಶಮಾಡಿಕೊಂಡು ಕೆ. ಎಸ್. ಎನ್. ಅಲ್ಲಿಯ ಭಾವ ಸಂಪತ್ತನ್ನೆಲ್ಲ ಸೂರೆಮಾಡಿದ್ದಾರೆ. 'ರಾಯರು ಬಂದರು ಮಾವನ ಮನೆಗೆ', 'ಪ್ರಶ್ನೆಗೆ ಉತ್ತರ', 'ಶ್ಯಾನುಭೋಗರ ಮಗಳು' ಮುಂತಾದ ಕವಿತೆಗಳ ರಸವಂತಿಕೆ ಹಾಗೂ ಆತ್ಮೀಯತೆಗಳ ವಿಷಯವಾಗಿ ಹೆಚ್ಚು ಹೇಳುವ ಕಾರಣ ಉಳಿದಿಲ್ಲ. ಹೊಸ ಗನ್ನಡ ಕಾವ್ಯಸಂಪ್ರದಾಯದಲ್ಲಿಯ ಶಾಶ್ವತ ಅಂಶಗಳಾಗಿ ಅವು ಉಳಿದೇ ತೀರುತ್ತವೆ. ಉಳಿದ ಕವಿತೆಗಳ ಚಲುವೂ ಸಾಮಾನ್ಯ ತರಗತಿಯದಲ್ಲ. 'ಅಕ್ಕಿಯಾನೆ ಉಪ್ಪಿನಾನೆ ಅದಲುಬದಲು ಮಾಡಿದಂದು' ಇಂಥ ಅನುವಾದಿತ ಕವಿತೆಗಳ ಕಲೆಗಾರಿಕೆಯನ್ನು ಮತ್ತೆ ಮತ್ತೆ ನೋಡಿ ಆನಂದಿಸಬೇಕೆನ್ನಿಸುತ್ತದೆ. ಇಂಗ್ಲೀಷಿನಿಂದ ಅನುವಾದ ಗೊಂಡಿದ್ದರೂ ಈ ಕವಿತೆಗಳು ಇಡೀ ಸಂಗ್ರಹದ ಭಾವಪ್ರಪಂಚಕ್ಕೆ ಆಶ್ಚರ್ಯಕರ ವಾಗುವಂತೆ ಹೊಂದಿಕೊಂಡುಬಿಟ್ಟಿವೆ. ಗಂಡಹೆಂಡಿರ ಅನ್ಯೋನ್ಯ ಸಂಬಂಧ, ತೌರಿನ ಹಂಬಲ, ಗಂಡನ ಮುನಿಸು, ಹೆಣ್ಣಿನ ನೋವು, ನೆರೆಯವರ ಸಹಾನುಭೂತಿ ಪ್ರಣಯದ ಮೋಜು ಇವು ಜಾನಪದಕಾವ್ಯದಂತೆ ಇಲ್ಲಿಯ ವಸ್ತುಗಳಾಗಿವೆ; ಅದೇ ಬಗೆಯ ರಸಾನುಭವವನ್ನುಂಟುಮಾಡುತ್ತವೆ. ಪ್ರಕೃತಿಯ ಹೊಚ್ಚಹೊಸತನವನ್ನು ಈ ಕಾವ್ಯದ ಮೂಲಕ ಅನುಭವಿಸಬಹುದಾಗಿದೆ. ಆದರೆ ಕೆ.ಎಸ್.ಎನ್.ಅವರ ಕಾವ್ಯದಲ್ಲಿ ಇದಕ್ಕೂ ಹೆಚ್ಚಿನ ಮೌಲಿಕತೆ ಇದೆಯೆಂಬುದು ಸ್ವಲ್ಪ ವಿಚಾರಮಾಡಿದರೆ ಹೊಳೆಯದಿರದು. ಅದು ಅವರ ಶೈಲಿಯ ಸುಕುಮಾರತೆ. ಅದು ಕೇವಲ ಶಬ್ದ-ಪ್ರಯೋಗದಲ್ಲಿ ಮಾತ್ರ ಇಲ್ಲ. ಹೂವಿನ ಎಸಳಿನ ಮೇಲೆ ಮಣಿಯಂತೆ ಹೊಳೆ ಯುವ ಇಬ್ಬನ್ನಿಯನ್ನು ಅಲುಗಾಡಿಸದಂತೆ ಹಿಡಿದು ಕಟ್ಟುಕನ್ನಡಿ ಹಾಕಿಟ್ಟಂತೆ, ಈ ಕವನಗಳಲ್ಲಿಯ ಕುಶಲತೆ ಕಾಣುತ್ತದೆ. ಕೇವಲ ಭಾವನೆಗಳ ಸೂಕ್ಷ್ಮವಾದ ಕಲೆ ಗಾರಿಕೆಯಲ್ಲಿ ಕೆ.ಎಸ್.ಎನ್. ನಮ್ಮ ಎಲ್ಲ ಕವಿಗಳನ್ನು ಮೀರಿಸಿದ್ದಾರೆ. 'ಮುನಿಸು ಮಾವನ ಮೇಲೆ ಮಗಳೇನು ಮಾಡಿದಳು?' 'ನಮ್ಮೂರಿನಕ್ಕರೆಯ ಸಕ್ಕರೆಯ ಬೊಂಬೆಯನು', 'ತುಟಿಯಲೇನೋ ಬಂದು, ಕಣ್ಣಲೇನೋ ನಿಂದು', 'ಕೂಡಿದರೆ ಕೆನೆಹಾಲು ಅಗಲಿದರೆ ಕೆನೆಮೊಸರು' ಮುಂತಾದ ಸಾಲುಗಳ ರಮಣೀಯತೆ ಈ ಕುಶಲತೆಯ ಫಲವಾಗಿದೆ.

ಆದರೆ ಅವರ ಮುಂದಿನ ಸಂಗ್ರಹವಾದ 'ಐರಾವತ' ಯಶಸ್ವಿಯಾಗದಿದ್ದುದಕ್ಕೆ ಈ ಶೈಲಿಯ ಸುಕುಮಾರತೆಯೇ ಅರ್ಧ ಕಾರಣವಾಗಿದೆಯೆಂದು ಹೇಳಬಹುದು. ಈ

ಸಂಗ್ರಹದಲ್ಲಿ 'ನೀವಲ್ಲವೇ?' ಎಂಬ ಕವನವೊಂದನ್ನು ಬಿಟ್ಟರೆ ಉಳಿದವುಗಳೆಲ್ಲ ತಮ್ಮ ಕಳೆಯನ್ನೇ ಕಳೆದುಕೊಂಡುಬಿಟ್ಟಿವೆ. ಅಲ್ಲಲ್ಲಿ ಪುನರುಕ್ತಿದೋಷವೂ ಕಾಣಿಸಿಕೊಂಡು ಕೆ.ಎಸ್.ಎನ್.ರ ಪೇಟೆಂಟ್ ಛಾಪು ಎಲ್ಲ ಕವಿತೆಗಳ ಮೇಲೂ ಬಿದ್ದುಬಿಟ್ಟಿದೆ. ಕೊನೆಯಲ್ಲಿಯ ಕಥನಕವನವಾದ 'ಕಾಮನ ಕಥೆ' ಇಂಥ ಶೈಲಿ ಹಾಗೂ ಅಸ್ಪಷ್ಟವಾದ ವಸ್ತುವಿನಿಂದ ಪರಿಣಾಮಕಾರಿಯಾಗಿಲ್ಲ. ಕಥೆಯ ಅಲೌಕಿಕತೆ ಲೌಕಿಕತೆಗಳು ಕಾವ್ಯಾನುಭವವಾಗಿ ಸೃಷ್ಟಿಯಾಗಿಲ್ಲ. ಆದರೆ ಕೆ.ಎಸ್.ಎನ್. ಅವರ ಕಾವ್ಯಶಕ್ತಿ ಸುದೈವದಿಂದ ಈ ಕೊರತೆಯನ್ನು ಬಹು ಬೇಗ ತುಂಬಿಕೊಂಡಿತು. 'ದೀಪದ ಮಲ್ಲಿ' ಹಾಗೂ 'ಉಂಗುರ' ಈ ಕವನಸಂಗ್ರಹಗಳಲ್ಲಿಯ ಕಾವ್ಯದಲ್ಲಿ ಶೈಲಿ ಹಾಗೂ ವಸ್ತುಗಳ ಕ್ರಮವಾದ ಬದಲಾವಣೆ ಸ್ಪಷ್ಟವಾಗಿದೆ. ಕವಿ ಸುಖದುಃಖಗಳ ಸಾಮಾನ್ಯ ಪ್ರಪಂಚದಿಂದ ವೈಚಾರಿಕ ಜೀವನಕ್ಕೆ ಬಂದಿದ್ದಾನೆ. ಅಲ್ಲದೆ ಜೀವನದ ಗಟ್ಟಿತನವೂ ಈ ಕಾವ್ಯದಲ್ಲಿ ಇದೆ. 'ಮೈಸೂರು ಮಲ್ಲಿಗೆ'ಯಲ್ಲಿಯಂತೆ ಇಲ್ಲಿಯ ಭಾವನೆಗಳು ಮೇಲುಪದರಿನವು ಮಾತ್ರವಾಗಿರದೆ ಜೀವನದ ಬಿರುಸು ನೆಲಕ್ಕೂ ಇಳಿದಿವೆ. 'ಚಲುವು ಬೇಕೆಮಗೆ ಚಲುವು', 'ಕಲಿಯಾಗು ಬಾ ಕೃಷ್ಣ'. 'ಅನ್ನಪೂರ್ಣೆ' ಮೊದಲಾದ ಕವಿತೆಗಳಲ್ಲಿ ಬುದ್ಧಿವಾದದ ಬೆನ್ನೆಲುಬು ದೃಢವಾಗಿದೆ. ಕೆ.ಎಸ್.ಎನ್. ಅವರ ಪ್ರಾರಂಭದ ಕಾವ್ಯಭಾವ ಸುಂದರ ಚಿತ್ರಣಕ್ಕೆ ಮಾತ್ರ ಪರಿಮಿತವಾಗಿತ್ತು. ಈಗಿನ ಅವರ ಕಾವ್ಯ ವೈಚಾರಿಕತೆ ಹಾಗೂ ಸಾಂಕೇತಿಕತೆಗಳನ್ನು ಜೋಡಿಸಿಕೊಂಡಿದೆ. ಇದರಿಂದ ಅವರು ಸೌಂದರ್ಯಪ್ರಜ್ಞೆಯನ್ನು ಕಳೆದುಕೊಳ್ಳದಿರುವದು ಸುದೈವದ ಮಾತಾಗಿದೆ. 'ದೀಪದ ಮಲ್ಲಿ'ಯಲ್ಲಿ 'ಪಂಡಿತರ ಮಂಚ' ತನ್ನ ತೀರ ಮೇಲುಮಟ್ಟದ ಕಲೆಗಾರಿಕೆಯಿಂದ ಕನ್ನಡದ ಶ್ರೇಷ್ಠ ಕವನಗಳಲ್ಲೊಂದಾಗಿದೆ. ಬದುಕಿನ ನಿರ್ಮಲವಾದ ಆನಂದ ಕೆ.ಎಸ್.ಎನ್. ಅವರ ಕಾವ್ಯದ ಜೀವಾಳವಾಗಿ ಯಾವಾಗಲೂ ನಿಲ್ಲುತ್ತದೆ.

ಕೆ.ಎಸ್.ಎನ್. ಅವರ ಕಾವ್ಯ ಇನ್ನೂ ಬೆಳೆಯುವ ಹಾದಿಯಲ್ಲಿರುವದರಿಂದ ಅದರ ಬಗ್ಗೆ ನಿಶ್ಚಿತವಾಗಿ ಏನು ಹೇಳುವದೂ ಕಠಿಣವಾಗಿದೆ. ಈಗ ಆದಷ್ಟೇ ಕಾವ್ಯನಿರ್ಮಾಣ ಕನ್ನಡ ಕಾವ್ಯಸಂಪ್ರದಾಯಕ್ಕೆ ಗೌರವ ತರುವಂಥದಾಗಿದೆ. ಭಾಷೆ ಹಾಗೂ ಶೈಲಿಯ ದೃಷ್ಟಿಯಿಂದ ಅವರ ಕಾಣಿಕೆಗಳು ಅಮೂಲ್ಯವಾಗಿವೆ. ಆದರೆ ಪ್ರಾರಂಭದಲ್ಲಿಯೇ ಅವರ ಕಾವ್ಯಕ್ಷೇತ್ರ ಸಣ್ಣದಾದ್ದರಿಂದ, ಕನ್ನಡದ ಸರ್ವತೋಮುಖ ಜೀವನವನ್ನು ಅದು ಒಳಗೊಳ್ಳಲಿಲ್ಲ. ಅವರ ಕಾವ್ಯದ ಬೆಲೆ ಎಷ್ಟರಮಟ್ಟಿಗೆ ಎಂಬುದು ಇನ್ನು ಮುಂದಿನ ಕಾವ್ಯದ ರಚನೆಯನ್ನು ಅವಲಂಬಿಸಿದೆ.

ಇದೇ ಗುಂಪಿನಲ್ಲಿ ಇನ್ನೊಂದು ಮಹತ್ವದ ಹೆಸರೆಂದರೆ ಕಡೆಂಗೋಡ್ಲು ಶಂಕರ ಭಟ್ಟರದು. ರಾಜರತ್ನಂರಂತೆ ಇವರೂ ಮುಂದೆ ಕಾವ್ಯರಚನೆಯನ್ನು ಬಿಟ್ಟುಕೊಟ್ಟರು. ಆದರೆ ದಕ್ಷಿಣ ಕನ್ನಡದ ಕವಿಗಳಲ್ಲಿ ಗೋವಿಂದ ಪೈಯವರಾದ ಮೇಲೆ ಮಹತ್ವದ ಕವಿಗಳೆಂದರೆ ಪೇಜಾವರ ಸದಾಶಿವರಾಯರು ಹಾಗೂ ಶಂಕರಭಟ್ಟರು. ಪೇಜಾವರರು ಅಕಾಲ ಮರಣಕ್ಕೆ ತುತ್ತಾದ್ದರಿಂದ ಅವರ ಒಂದೇ ಸಂಗ್ರಹ ನಮಗೆ ಕಾಣಸಿಗುತ್ತದೆ. ಬರೆದ ಕವಿತೆಗಳಲ್ಲಿ ನವ್ಯಮಾರ್ಗಕ್ಕೆ ಸೇರಿದ ಕವಿತೆಗಳು ಮಹತ್ವದವಾಗಿರುವದ

ರಿಂದ, ಅವರ ಕಾವ್ಯಚರ್ಚೆ ಈ ಭಾಗದಲ್ಲಿ ಸಾಧ್ಯವಾಗುವದಿಲ್ಲ. ಇನ್ನುಳಿದವರೆಂದರೆ ಶಂಕರಭಟ್ಟರು. ಶಂಕರಭಟ್ಟರ ಮಾಧ್ಯಮ ಮುಖ್ಯವಾಗಿ ಕಥನಕವನವಾಗಿದೆ. 'ಹೊನ್ನಿಯ ಮದುವೆ' ಕರಾವಳಿ ಪ್ರದೇಶವನ್ನು ಹಿನ್ನೆಲೆಯಾಗಿಟ್ಟುಕೊಂಡ ಒಂದು ದುರಂತವಾದ ಪ್ರಣಯಕತೆ. ಹೃದ್ಯವಾದ ನಿರೂಪಣೆಯಲ್ಲಿ ಈ ಕವಿತೆ 'ಗೋವಿನ ಕಥೆ'ಯನ್ನು ನೆನಪಿಗೆ ತರುವಂತಿದ್ದರೆ, ವರ್ಣನೆಯ ವೈಖರಿ ಹಾಗೂ ಭಾಷೆಯ ಬಿಗುವಿನಲ್ಲಿ ಮಾರ್ಗಸಂಪ್ರದಾಯಕ್ಕೆ ಸೇರಿದ್ದಾಗಿದೆ. ಪ್ರತಿಭೆ ಹಾಗೂ ಪಾಂಡಿತ್ಯ, ಮಾರ್ಗ ಹಾಗೂ ದೇಶಿಗಳ ಸಮನ್ವಯಕ್ಕೆ ಈ ಕಾವ್ಯ ಒಳ್ಳೆಯ ಉದಾಹರಣೆಯಾಗಿದೆ. 'ಮಾದ್ರಿಯ ಚಿತೆ' ಪೌರಾಣಿಕ ವಸ್ತುವನ್ನೊಳಗೊಂಡಿರುವ ಇನ್ನೊಂದು ದುರಂತವಾದ ಪ್ರಣಯಕತೆ. ಒಟ್ಟಂದದ ಪರಿಣಾಮ ಹಾಗೂ ಕಥನಶೈಲಿಯ ದೃಷ್ಟಿಯಿಂದ ಈ ಕವಿತೆ ಒಂದು ಮಹಾಕಾವ್ಯದ ಪ್ರಭಾವವನ್ನು ಬೀರುವಂಥದಾಗಿದೆ. ಪಾಂಡು ಮಾದ್ರಿಯರ ದುರಂತಪ್ರಣಯವನ್ನು ಅಂದದ ಸಂಕೀರ್ಣತೆಯೊಂದಿಗೆ ಚಿತ್ರಿಸಿರುವದರಿಂದ ವಿಸ್ಮಯದ ಒಂದು ಅನುಭವವನ್ನು ಈ ಕಾವ್ಯ ತಂದುಕೊಡುತ್ತದೆ. ಶಂಕರಭಟ್ಟರ ಸಂಪ್ರದಾಯನಿಷ್ಠತೆಯಲ್ಲಿ ಸಜೀವತೆಯಿರುವದರಿಂದ ಅದು ಕಾವ್ಯದ ಬೆಳೆವಣಿಗೆಗೆ ಪೋಷಕವಾಗಿದೆ. ಅವರ ಶಬ್ದಪ್ರಯೋಗ ಹಾಗೂ ಶೈಲಿಯ ಶುದ್ಧತೆಗಳು ಕಾವ್ಯದ ಸತ್ವವನ್ನು ಕಾಪಾಡಬಲ್ಲಂಥವುಗಳಾಗಿವೆ.

ದಿನಕರ ದೇಸಾಯಿಯವರದು ಉತ್ತರ ಕನ್ನಡ ಜಿಲ್ಲೆಯ ಪ್ರಾತಿನಿಧಿಕ ಕಾವ್ಯವಾಗಿದೆ. ವಸ್ತುವೈವಿಧ್ಯ ಇವರ ಕಾವ್ಯದ ಮುಖ್ಯ ಲಕ್ಷಣವಾಗಿದೆ. ರಾಜರತ್ನಂರಂತೆ ಇವರು ಚಲುವಾದ ಶಿಶುಗೀತಗಳನ್ನು ಬರೆದರು. ಉಳಿದ ಕವಿತೆಗಳಲ್ಲಿ ಸಾಮಾಜಿಕ ಪ್ರಜ್ಞೆ ಸ್ಥಾಯಿಯಾಗಿ ಉಳಿದುಬಿಟ್ಟಿತು. 'ಹರಿಗೆ ಎಂದು ಗುಡಿಯನೊಂದ ಕಟ್ಟುತಿರುವೆಯಾ?' ದಿಂದ ಹಿಡಿದು ಸದ್ಯದ ಮೈಸೂರಿನ ರಾಜಕಾರಣದ ವರೆಗೆ ಇವರ ಕವನಗಳ ವ್ಯಾಪ್ತಿಯಿದೆ. ಇವರ ವಿಡಂಬನಗೀತಗಳು ಬಹುಕಾಲ ಉಳಿಯಬಲ್ಲಂಥವುಗಳಾಗಿವೆ. ಇವರ ವಿಡಂಬನಕ್ಕೆ ಹುಚ್ಚು ಆವೇಶ ಕಾರಣವಾಗಿರದೆ ಆರೋಗ್ಯದ ಹಂಬಲ ಕಾರಣವಾಗಿದೆ. ಬದುಕಿನ ತಿಳುವಳಿಕೆಯನ್ನು ಕ್ಷಣಕ್ಷಣಕ್ಕೂ ಒರೆಗೆ ತಿಕ್ಕಿ ನೋಡುತ್ತಿರುವದರಿಂದ ಇವರ ಕಾವ್ಯ ಎಂದೂ ತೂಕ ತಪ್ಪುವದಿಲ್ಲ. ಇವರ ಕಾವ್ಯದ ಕೊರತೆಯೆಂದರೆ ಕವಿತೆಗಳ ಅಪೂರ್ಣತೆ ಎಂದು ಹೇಳಬಹುದು. ಪ್ರತಿಭೆಯ ಕಿಡಿ ಆರಿಹೋಗುವ ಮೊದಲೇ ಕವಿತೆಯನ್ನು ಬರೆಯಬೇಕೆಂಬ ಹಂಬಲದಲ್ಲಿ ರಚನೆ ಅವಸರದ್ದಾಗಿಬಿಡುತ್ತದೆ. ಆದರೆ ದಿನಕರ ದೇಸಾಯಿಯವರು ಚಿತ್ರಿಸಿದ ಉತ್ತರಕನ್ನಡದ ಜೀವನ ಹಾಗೂ ಅವರ ಕಲಾತ್ಮಕ ವ್ಯಕ್ತಿತ್ವ ಇವು ಕನ್ನಡ ಕಾವ್ಯದ ಇತಿಹಾಸದಲ್ಲಿ ಅನಿವಾರ್ಯವಾದ ಘಟಕಗಳಾಗಿವೆ. 'ಗತವೈಭವ', 'ಹೊಸ ಬೂದಿ', 'ಮಂತ್ರಿಯ ನಿಧನ' ಮೊದಲಾದ ಕವಿತೆಗಳಲ್ಲಿ ಈ ವ್ಯಕ್ತಿತ್ವದ ಸಂಪೂರ್ಣ ದರ್ಶನ ಸಿಗುತ್ತದೆ.

ಬಿ. ಎಚ್. ಶ್ರೀಧರರು ಈಗಾಗಲೇ ನಾಲ್ಕು ಕವನಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಕಾವ್ಯದಲ್ಲಿ ಇವರದು ಯಾವಾಗಲೂ ವಕ್ರಮಾರ್ಗವಾಗಿದೆ. ಈ ವಿಕ್ಷಿಪ್ತತೆಯನ್ನು ಇವರ ಕಾವ್ಯಶೈಲಿ ನಿಚ್ಚಳವಾಗಿ ಕನ್ನಡಿಸುತ್ತದೆ. ಸಂಸ್ಕೃತದ ಪದಪುಂಜಗಳ

ಜೊತೆಗೇ, ಇಂಗ್ಲಿಶ್ ಶಬ್ದಗಳು, ಗ್ರಾಮ್ಯಪದಗಳು ಒಂದೇ ಸಾಲಿನಲ್ಲಿ ಬಂದುಬಿಡು ತ್ತವೆ. ಬೆರಕಿಯ ಶೈಲಿ ಕೆಲವೊಂದು ಸಂದರ್ಭಗಳಲ್ಲಿ ಸಹಜವಾಗಬಹುದು. ಆದರೆ ನಿರುದ್ದಿಶ್ಯವಾಗಿ ಅದನ್ನುಪಯೋಗಿಸಿದರೆ ಕಾವ್ಯದ ರಸಾಸ್ವಾದಕ್ಕೆ ತಡೆಯುಂಟಾಗು ತ್ತದೆ. ಶ್ರೀಧರರ ಕಾವ್ಯವನ್ನು ಅವರ ಶೈಲಿ ನಿಯಂತ್ರಿಸುವಪರಿಂದ ಈ ಗೊಂದಲ ಉಂಟಾಗಿದೆ. ಇವರ ಮೊದಲ ಸಂಗ್ರಹವಾದ 'ಮೇಘನಾದ'ದಲ್ಲಿ 'ಯುದ್ಧಾಯ ಯುಜ್ಜಸ್ವ' ಮೊದಲಾದ ಆಸೆ ಹುಟ್ಟಿಸುವ ಕವಿತೆಗಳಿವೆ. ಆದರೆ ಮುಂದೆ ಮಾತ್ರ ಇವರ ಕಾವ್ಯ ಬೆಳವಣಿಗೆಯನ್ನು ಪಡೆಯಲಿಲ್ಲ. ಶೈಲಿಯ ದೃಷ್ಟಿಯಿಂದ ಪ್ರತಿ- ಯೊಂದು ಕವನವೂ ಒಂದು ಹೊಸ ಪ್ರಯೋಗವಾಗಿರುವದರಿಂದ, ವಸ್ತುವಿನ ಮೂಲದರ್ಶನ ಕೈಜಾರಿ ಹೋದಂತಾಗುತ್ತದೆ.

ಇದಲ್ಲದೆ ಈ ತಲೆಮಾರಿನ ಅನೇಕ ಕವಿಗಳು ಇನ್ನೂ ಬರೆಯುತ್ತಲಿದ್ದಾರೆ. ಜಿ. ಆರ್. ಪಾಂಡೇಶ್ವರರ 'ಚೆಂಗಲವೆ', ಕಯ್ಯಾರ ಕಿಞ್ಞಣ್ಣರೈ ಅವರ 'ಶ್ರೀಮುಖ', ಜಿ. ವಾಮನಭಟ್ಟರ 'ಮರದೆದುರಲ್ಲಿ' ಈ ಸಂಗ್ರಹಗಳು ಅನೇಕ ರೀತಿಯಿಂದ ಗಮನಾರ್ಹವಾಗಿವೆ. ಸೇಡಿಯಾಪು ಕೃಷ್ಣಭಟ್ಟರ 'ಶ್ವಮೇಧ' ಕನ್ನಡದಲ್ಲಿ ಒಂದು ಮಹತ್ವದ ಕಥನಕವನವಾಗಿದೆ. ಆದರೆ ಇವರಾರೂ ಕಾವ್ಯದ ಸಮಗ್ರತೆಯ ಅಭಿ- ವ್ಯಕ್ತಿಗೆ ಗುರಿಯಿಡಲಿಲ್ಲ. ಆದರೆ ಇಲ್ಲಿಯೂ ಖಚಿತವಾಗಿ ನಿರ್ಣಯವನ್ನು ಹೇಳು ವಂತಿಲ್ಲ. ಈ ತಲೆಮಾರಿನ ಕಾವ್ಯ ಇನ್ನೂ ನಿರ್ಮಿತಿಯಲ್ಲಿದೆ. ಈ ಕವಿಗಳು ಇನ್ನೂ ಬರೆಯುತ್ತಲೇ ಇದ್ದಾರೆ.

## ಮಹಾಕಾವ್ಯ

ಮಹಾಕಾವ್ಯವೊಂದರ ಬಗ್ಗೆ ಪ್ರತ್ಯೇಕವಾಗಿಯೇ ವಿಚಾರ ಮಾಡಬೇಕಾಗಿದೆ. ಕೆಲವರಿಗೆ ಅದು ತೀರ ಬೇಡವಾದ ವಿಷಯ; ಈ ಯುಗದಲ್ಲಿ ಅದರ ಬಗ್ಗೆ ವಿಚಾರ ಮಾಡುವದು ಕೂಡ ಗೊಡ್ಡುಸಂಪ್ರದಾಯದ ಲಕ್ಷಣ. ಇನ್ನು ಮತ್ತೆ ಕೆಲವರಿಗೆ ಅದಿಲ್ಲದೆ ಕಾವ್ಯ ಪೂರ್ಣವಾದಂತೆಯೇ ಅಲ್ಲ. ಈ ಎರಡೂ ವಾದಗಳ ಔಚಿತ್ಯ ಅನೌಚಿತ್ಯಗಳೇನೇ ಇರಲಿ, ಕನ್ನಡದಲ್ಲಿ ಮಹಾಕಾವ್ಯ ಮತ್ತೊಮ್ಮೆ ಅವತಾರವೆತ್ತಿದೆ. ಕು.ವೆಂ.ಪು.ರವರು 'ಶ್ರೀ ರಾಮಾಯಣ ದರ್ಶನ'ವನ್ನು ಬರೆದಿದ್ದಾರೆ. ಅವರು ಮೊದಲು ಬರೆದ 'ಚಿತ್ರಾಂಗದಾ' ಕೂಡ ಮಹಾಕಾವ್ಯವನ್ನು ಬರೆಯುವ ಉದ್ದೇಶದಿಂದಲೇ ಹುಟ್ಟಿದ್ದು. ವಿನಾಯಕರು ತಮ್ಮ 'ಬಾಳದೇಗುಲದಲ್ಲಿ' ಎಂಬ ಕವನಮಾಲೆಗೆ ಮುನ್ನುಡಿ ಬರೆಯುತ್ತ ಆಧುನಿಕ ಯುಗಕ್ಕೆ ತಕ್ಕಂತೆ ಮಹಾಕಾವ್ಯದ ಸ್ವರೂಪವೂ ಬದಲಾಗಬೇಕೆಂದರು. ಆದರೆ ಎಷ್ಟರ ಮಟ್ಟಿಗೆ ಅರ್ವಾಚೀನ ಕಾಲದಲ್ಲಿ ಮಹಾ- ಕಾವ್ಯದ ರಚನೆ ಸಾಧ್ಯವಾದೀತೆಂಬ ಸಮಸ್ಯೆ ಇನ್ನೂ ಬಗೆಹರಿದಿಲ್ಲ. ಈ ಕಾಲದಲ್ಲಿ ಮಹಾಕಾವ್ಯದ ಸ್ಥಾನವನ್ನು ನಮ್ಮ ಕಾದಂಬರಿಗಳು ಆಕ್ರಮಿಸಿಬಿಟ್ಟಿವೆ. ಕು.ವೆಂ.ಪು. ರವರ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ'ಯೇ ಅಂಥ ಕಾದಂಬರಿಯಾಗಿದೆ. ಐತಿಹಾಸಿಕ ವಾಗಿ ವಿಚಾರಮಾಡಿ ನೋಡಿದಾಗ, ರಾಮಾಯಣ ಮಹಾಭಾರತಗಳಂತೆ, ಯುಗಧ ಇತಿಹಾಸವನ್ನೇ ಕಾವ್ಯವಾಗಿ ಮಾರ್ಪಡಿಸುವ ಕೃತಿಗಳು ಇನ್ನು ಮುಂದೆ ಹುಟ್ಟ-

ಲಾರವೇನೊ ! ಪ್ರಾಚೀನ ಕಾಲದ ಯುಗಧರ್ಮ ಈಗ ಬದಲಾಗಿ ಹೋಗಿದೆ. ಆಗಿನ ಸುಭದ್ರವಾದ ಸಾಮಾಜಿಕ ವ್ಯವಸ್ಥೆ, ಧರ್ಮದ ನಿರಂತರವಾದ ಸ್ಫೂರ್ತಿ, ತತ್ವ-ಜಿಜ್ಞಾಸೆ, ಎಲ್ಲರಿಗೂ ಒಪ್ಪಿಗೆಯಾಗಿರುವ ನೀತಿ-ನಿಯಮಗಳು, ಎಲ್ಲರಿಗೂ ಸಾಮಾನ್ಯವಾಗಿರುವ ಭಾವಪ್ರಪಂಚ ಈಗ ಉಳಿದಿಲ್ಲ. ತಾನು ನಿಂತ ನೆಲದ ಅಕ್ಷಾಂಶ ರೇಖಾಂಶಗಳಿಗೆ ಮಾತ್ರ ಪರಿಮಿತವಾಗಿರುವಷ್ಟು ಪ್ರತ್ಯೇಕತೆ ನಮ್ಮಲ್ಲಿ ಬಂದಿದೆ. ಆಗಿನಂತೆ ವ್ಯಕ್ತಿ ಈಗ ತನ್ನ ಜನಾಂಗಪ್ರಜ್ಞೆ ಹಾಗೂ ವಂಶಪ್ರಜ್ಞೆಗಳಲ್ಲಿ ಜೀವಿಸುವದಿಲ್ಲ. ಆಗಿನಂತೆ ಅವಿಚ್ಛಿನ್ನವಾದ ಸಂಸ್ಕೃತಿಯ ಪ್ರವಾಹವೊಂದು ಈಗ ಹರಿದುಬರುವದಿಲ್ಲ. ಅಂಥ ಸಂಸ್ಕೃತಿಯ ಚಿತ್ರವನ್ನು ಮಹಾಕಾವ್ಯವೊಂದರ ಮೂಲಕ ನಿರೂಪಿಸುವದು ಆಗ ಸಾಧ್ಯವಿತ್ತು. ಅಂಥ ಒಂದು ಜೀವನಕ್ರಮ ಬದಲಾಗಿಹೋಯಿತೆಂದೇ ನಮ್ಮ ಹಳಗನ್ನಡ ಕವಿಗಳು ಮತ್ತೆ ಮತ್ತೆ ರಾಮಾಯಣ ಮಹಾಭಾರತಗಳನ್ನೇ ತೀಡಲಿಲ್ಲವೆ? ಅಷ್ಟೇಕೆ, ಕಾಳಿದಾಸ, ಮಾಘ, ಭಾರವಿಗಳ ಕಾಲಕ್ಕೆ ಸಾಹಿತ್ಯಿಕ ಮಹಾಕಾವ್ಯಗಳ (literary epic) ಪ್ರಕಾರವೊಂದೇ ಬೇರೆ ಹುಟ್ಟಲಿಲ್ಲವೆ?

ಒಂದು ಪುರಾಣಕಲ್ಪನೆ, ಆಳವಾದ ಧರ್ಮಶ್ರದ್ಧೆ, ಸ್ಮರಣೀಯವಾದ ವೀರ ಜೀವನ, ಒಳಿತು-ಕೆಡಕುಗಳ ಬಗ್ಗೆ ನಿರ್ದಿಷ್ಟವಾದ ವಿಚಾರ, ಭೂತ-ವರ್ತಮಾನ-ಭವಿತವ್ಯಗಳನ್ನೆಲ್ಲ ಸ್ಥಿರವಾಗಿನೋಡುವ ಆರ್ಷದೃಷ್ಟಿ, ಜನಾಂಗದ ಹೃದಯದಾಳದಲ್ಲಿ ಸುಪ್ತವಾಗಿರುವ ಗೂಢತಮವಾದ ಸ್ವರ್ಗ-ನರಕಗಳ ದರ್ಶನ ಇವೆಲ್ಲ ಇನ್ನೊಮ್ಮೆ ಒಟ್ಟಿಗೆ ಕೂಡಿ ಬರಲಾರವೇನೋ ಎನ್ನಿಸುತ್ತದೆ. ಹಾಗೆ ಮೂಡಿಬಂದ ಮಹಾಕಾವ್ಯ ಕೊನೆಯ ವರೆಗೆ ಪೂಜ್ಯವಸ್ತುವಾಗಿ ಉಳಿಯಬಲ್ಲದು. ಇನ್ನು ಸಾಹಿತ್ಯದ ಮಹಾ ಕಾವ್ಯಗಳನ್ನು ಯಾವ ಕಾಲಕ್ಕೂ ಬರೆಯುವದು ಸಾಧ್ಯವಿದೆ. ಈ ಕಾವ್ಯಪ್ರಕಾರದ ರೂಪಲಕ್ಷಣಗಳೇನೇ ಇರಲಿ, ಮುಖ್ಯವಾಗಿ ಅದು ದೀರ್ಘಕತೆಯೊಂದನ್ನು ರಮ್ಯವಾಗಿ ಹೇಳಹೊರಟಿರುವಂಥದು. ಕತೆ ಕೆಲವು ಕಡೆಗೆ ರೂಪಕವಾಗಿ ಬರಬಹುದು. ಕವಿ ತನ್ನ ಮನೋವೃತ್ತಿಗೆ ತಕ್ಕಂತೆ ಮೂಲಕತೆಯಲ್ಲಿ ಮಾರ್ಪಾಡುಗಳನ್ನುಂಟು ಮಾಡಬಹುದು. ಆದರೆ ಒಂದು ಜನಾಂಗದ ಪ್ರಜ್ಞೆಯಲ್ಲಿ ಕಾವ್ಯ ಮೂಡಿಬರದೆ, ಒಬ್ಬ ಕವಿಯ ಕುಶಲ ಕರ್ಮದ ಮೇಲೆ ಕಾವ್ಯದ ಶ್ರೇಷ್ಠತೆ ಅವಲಂಬಿಸಿರುತ್ತದೆ. ಅಶ್ವಘೋಷನ 'ಬುದ್ಧಚರಿತೆ', ಕಾಳಿದಾಸನ 'ರಘುವಂಶ'ದಂತೆ ಮೂಲವಸ್ತು ಐತಿಹಾಸಿಕ ಘಟನೆಯಿಂದ ಕೂಡಿದ್ದರೆ ಅದರ ಭವ್ಯತೆ ಇನ್ನೂ ಹೆಚ್ಚಾಗಬಹುದು. ಹಳೆಗನ್ನಡ ಕಾವ್ಯಪರಂಪರೆಯಲ್ಲಿ ಇಂಥ ಹಲವಾರು ಕೃತಿಗಳಿರುವದರಿಂದ ಈಗ ಮತ್ತೆ ಅಂಥ ಕಾವ್ಯಗಳ ಅವಶ್ಯಕತೆಯೇನು ಎಂಬ ಪ್ರಶ್ನೆಯೇಳುತ್ತದೆ.

ಇಂಥ ವಾತಾವರಣದಲ್ಲಿಯೂ ಕು.ವೆಂ.ಪು. 'ರಾಮಾಯಣದರ್ಶನ'ವನ್ನು ಬರೆದಿದ್ದಾರೆ. ಅದೂ ಸಾಹಿತ್ಯಿಕ ಮಹಾಕಾವ್ಯಗಳ ಗುಂಪಿಗೆ ಸೇರುವಂಥದು. ಎರಡು ಸಂಪುಟಗಳಲ್ಲಿ ತುಂಬಿರುವ ಈ ಕಾವ್ಯ ಸರಳರಗಳೆಯಲ್ಲಿ ಬರೆಯಲ್ಪಟ್ಟಿದೆ. ಕಾವ್ಯವಸ್ತು ವಾಲ್ಮೀಕಿಯದಾಗಿದ್ದರೂ ಕು.ವೆಂ.ಪು. ಅದಕ್ಕೆ ಹೊಸ ಸ್ವರೂಪವನ್ನು ಕೊಟ್ಟಿದ್ದಾರೆ. ಹಳೆಗನ್ನಡ ಕವಿಗಳ ಮೇಲೆ ಕಾಳಿದಾಸ ಮಾಘರಂಥ ಕವಿಗಳ ಪ್ರಭಾವ ವಿದ್ದರೆ, ಈ ಕಾವ್ಯದ ಮೇಲೆ ಹೋಮರ, ಮಿಲ್ಟನ್ನರಂಥ ಪಾಶ್ಚಾತ್ಯ ಕವಿಗಳ ಪ್ರಭಾವ

ಬಿದ್ದಿದೆ. ಈ ಕಾವ್ಯದ ವಿವರವಾದ ವಿಮರ್ಶೆ ಈ ಸಂದರ್ಭದಲ್ಲಿ ಅಸಾಧ್ಯವಾಗಿದೆ. ಆದರೆ ಕು.ವೆಂ.ಪು.ರವರ 'ರಾಮಾಯಣದರ್ಶನ' ನಾಡಿನ ವಿಮರ್ಶಕರಿಗೆಲ್ಲ ಒಂದು ಆಹ್ವಾನವಾಗಿದೆ. ಈ ಕಾವ್ಯದ ಮಹಾಛಂದಸ್ಸು, ಪುನರ್ಜನ್ಮವನ್ನು ಪಡೆದಿರುವ ಪಾತ್ರವರ್ಗ, ಮಹೋಪಮೆಗಳು, ವರ್ಣನಾಕ್ರಮ, ಭಾಷೆಯ ಹದ, ಕತೆಗೆ ತಳ ಹದಿಯಾಗಿ ಅದರ ಜೀವರೇಖೆಯಾಗಿ ಬಂದಿರುವ ತತ್ವಮೀಮಾಂಸೆ ಇವುಗಳನ್ನು ವಿಮರ್ಶಕರು ಪರಿಶೀಲಿಸಬೇಕಾಗಿದೆ. ಕು.ವೆಂ.ಪು.ರವರ ಉಳಿದ ಕಾವ್ಯನಿರ್ಮಾಣಕ್ಕೂ ಈ ಕಾವ್ಯರಚನೆಗೂ ಇರುವ ಅಂತರವನ್ನು ಗಮನಿಸಬೇಕಾಗಿದೆ. ಅವರ ಭಾವಗೀತ ಗಳಿಗೆ ಸಮಕಾಲೀನ ಜೀವನದ ಹಿನ್ನೆಲೆಯಿದೆ. ಇಲ್ಲಿ ವಸ್ತುವಿನ ಮೂಲಕವಾಗಿ ಮೊದಲಿದ್ದಷ್ಟು ಸಮಕಾಲೀನತೆಯ ಅರಿವು ಈ ಕಾವ್ಯದಲ್ಲಿ ಉಳಿದಿಲ್ಲ. 'ರಾಮಾಶ್ವ ಮೇಧ'ದ ತರುವಾಯ ಕೇವಲ ಕವಿಯ ಜೀವನಸಂಸ್ಕಾರವೊಂದರಿಂದಲೇ ಬೆಳೆದು ಬಂದ ಕಾವ್ಯವೆಂದರೆ ಇದೇ ಎನ್ನಬಹುದು. ಆದರೆ ಸಮಕಾಲೀನತೆಯನ್ನು ಸಂಪೂರ್ಣ ವಾಗಿ ನಿರಾಕರಿಸುವದು ಸಾಧ್ಯವಿಲ್ಲ. ಪಂಪ ಕುಮಾರವ್ಯಾಸರಂಥ ಕವಿಗಳು ಸುತ್ತಲಿನ ಜೀವನದ ಪರಿಸರದಲ್ಲಿ ಕಾವ್ಯವನ್ನು ಭದ್ರವಾಗಿ ನಿಲ್ಲಿಸಿದರೆಂದು ಅವರ ಕಾವ್ಯಗಳಿಗೆ ಮಹತ್ವ ಬಂದಿದೆ. ಪಂಪನ ಅರಿಕೇಸರಿಯಿಂದ ಕಾವ್ಯಗುಣ ಹೆಚ್ಚುತ್ತದೇ ಹೊರತು ಕಡಿಮೆಯಾಗುವದಿಲ್ಲ. ಅವನ ಪಾತ್ರಸೃಷ್ಟಿ ಸಂಪೂರ್ಣವಾಗಿ ಅವನದೇ ಎನ್ನುವಷ್ಟು ಸ್ವತಂತ್ರವಾಗಿದೆ. ಕುಮಾರವ್ಯಾಸನ ಪಾತ್ರಸೃಷ್ಟಿಯಲ್ಲಿ ಕೂಡ ಅವನ ಸಮ ಕಾಲೀನತೆಯ ದರ್ಶನವಿದೆ. ಅವನ ವರ್ಣನೆಗಳಲ್ಲಿ, ರೂಪಕಚಿತ್ರಗಳಲ್ಲಿ, ನೀತಿಬೋಧೆ ಯಲ್ಲಿ, ಅವನ ಭಕ್ತಿಪಂಥದಲ್ಲಿ, ಪಡೆನುಡಿ, ಗಾದೆಮಾತುಗಳಲ್ಲಿ ಅವನ ಸುತ್ತಲಿನ ಜೀವನದ ಸುಳುವುಗಳು ಕಾಣುತ್ತವೆ. ಪ್ರತಿಯೊಬ್ಬ ಕವಿಯೂ ತನ್ನ ವಾತಾವರಣಕ್ಕೆ ಈ ಋಣವನ್ನು ಸಲ್ಲಿಸದೆ ಗತಿಯಿಲ್ಲ. ಆ ದೃಷ್ಟಿಯಿಂದ ನೋಡಿದಾಗ ಕು.ವೆಂ.ಪು. ರವರು ಆಧುನಿಕ ಯುಗದ ಕೆಲವು ವಿಚಾರಲಹರಿಗಳನ್ನು ಪ್ರಕಟಿಸಿದ್ದಾರೆ. ಮಂಥರೆಯ ಪಾತ್ರಸೃಷ್ಟಿ ಸಂಪೂರ್ಣವಾಗಿ ಆಧುನಿಕತೆಯ ಫಲವಾಗಿದೆ. ಲಕ್ಷ್ಮಣನಿಗಿರುವ ಪ್ರತ್ಯೇಕ ವ್ಯಕ್ತಿತ್ವವನ್ನು ಗುರುತಿಸಿದ್ದಾರೆ. ಊರ್ಮಿಳೆ ಮೊದಲಾದ ಅಲಕ್ಷ್ಯಕ್ಕೀಡಾದ ಪಾತ್ರ ಗಳನ್ನು ಮೈತುಂಬಿಕೊಳ್ಳುವಂತೆ ಮಾಡಿದ್ದಾರೆ. ರಾವಣನ ಪಾತ್ರಕಲ್ಪನೆಯಲ್ಲಿ ಆಧುನಿ ಕತೆಯಿದೆ. ಅಲ್ಲದೆ ಪ್ರತಿಮೆಗಳಲ್ಲಿ ಕೆಲವನ್ನು ಸುತ್ತಲಿನ ಜೀವನದಿಂದ ಎತ್ತಿಕೊಂಡಿ ದ್ದಾರೆ. ಆದರೆ ಈ ವಿವರಗಳು ಮೂಲವಸ್ತುವಿನ ಜೊತೆಗೆ ಸಮರಸವಾಗದೆ ಬೇರೆ ಯಾಗಿ ನಿಲ್ಲುತ್ತವೆ. ಕು.ವೆಂ.ಪು.ರವರಿಗಿರುವ ಮಹಾಕಾವ್ಯದ ಅರಿವು ಹೆಜ್ಜೆ ಹೆಜ್ಜೆಗೂ ಕಾವ್ಯವನ್ನು ಆವರಿಸಿಬಿಡುತ್ತದೆ. ಮಹಾಕಾವ್ಯಕ್ಕಿರಬೇಕಾದ ಒಂದು ಘನವಾದ ನಿರ್ಲಿಪ್ತತೆ ಈ ಕಾವ್ಯದಲ್ಲಿ ಕಂಡುಬರುವದಿಲ್ಲ. ವ್ಯಾಸ ವಾಲ್ಮೀಕಿಗಳು ತಮ್ಮ ಕಾವ್ಯ ದಲ್ಲಿಯ ಪಾತ್ರವರ್ಗಕ್ಕೆ ಸೇರಿದ್ದರೂ ಆ ಜಗತ್ತನ್ನು ನಿರ್ಲಿಪ್ತತೆಯಿಂದಲೇ ನೋಡಿ ಬಣ್ಣಿಸುವದರಿಂದಲೆ ಅವರ ಕಾವ್ಯಕ್ಕೆ ಎಲ್ಲಿಲ್ಲದ ಘನತೆ ಬಂದಿದೆ. ಅಶ್ವಘೋಷ, ಕಾಳಿದಾಸ, ಪಂಪ, ಕುಮಾರವ್ಯಾಸರಿಗೆ ಇಂಥ ನಿರ್ಲಿಪ್ತತೆಯಿತ್ತು. ಕು. ವೆಂ. ಪು. ರವರು ರನ್ನನಂತೆ ಕಾವ್ಯಾಭಿಮಾನವನ್ನು ಹೆಚ್ಚಾಗಿ ಬೆಳೆಸಿಕೊಂಡಿದ್ದಾರೆ.

ಆದರೆ ಇಷ್ಟೆಲ್ಲ ಹೇಳಿದರೂ ಇದು 'ರಾಮಾಯಣದರ್ಶನ'ದ ಸಂಪೂರ್ಣ

ವಿಮರ್ಶೆಯಾಗಲಾರದು. ಇಷ್ಟು ಸ್ವಲ್ಪ ಅವಕಾಶದಲ್ಲಿ ಅದರ ಮೇಲೆ ನಿರ್ಣಯ ಹೇಳಲು ಬರುವಂತಿಲ್ಲ. ಐತಿಹಾಸಿಕ ಸಂದರ್ಭದಲ್ಲಿ ನೋಡಿದಾಗ ಅದೊಂದು ಪ್ರತ್ಯೇಕವಾದ ಕೃತಿಯಾಗಿ ನಿಲ್ಲುತ್ತದೆ. ಅದನ್ನು ಸಾವಧಾನವಾಗಿ ಪೃಥಕ್ಕರಿಸಿ ಆಮೇಲೆ ಹಳೆಯ ಮಹಾಕಾವ್ಯಗಳೊಂದಿಗೆ ಹೋಲಿಸಿ ಬೆಲೆ ಕಟ್ಟಬಹುದಾಗಿದೆ.

## ಕಾವ್ಯದಲ್ಲಿ ಪ್ರಗತಿಶೀಲತೆ

ಹೀಗೆ ಹೊಸಗನ್ನಡ ಕಾವ್ಯದ ಪ್ರಾರಂಭದ ಭಾಗದ ಚಲುವು-ನಿಲುವುಗಳನ್ನು ಸಿದ್ಧಿ-ಸಾಧನೆಗಳನ್ನು ಪರಿಶೀಲಿಸಿದ್ದಾಯಿತು. ಸುಮಾರು ಮೂರು ದಶಕಗಳಲ್ಲಿಯ ಈ ಕಾರ್ಯ ನಿಜವಾಗಿಯೂ ಹೆಮ್ಮೆಗೊಳಿಸುವದಂಥದಾಗಿದೆ. ನಡೆದು ಬಂದ ದಾರಿಯನ್ನು ತಿರುಗಿ ನೋಡಿದಾಗ ವಿಸ್ಮಯ ಉಂಟಾಗುತ್ತದೆ. ಗುಣ, ಪರಿಮಾಣ ಎರಡು ದೃಷ್ಟಿಯಿಂದಲೂ ಸಮೃದವಾದ ಕಾವ್ಯ ಬೆಳೆದುಬಂದಿದೆ. ಬೇರೆ ಬೇರೆ ಕಾವ್ಯಪ್ರಕಾರಗಳು ಹುಟ್ಟಿಕೊಂಡಿವೆ. ಶೈಲಿ ಛಂದಸ್ಸುಗಳಲ್ಲಿ ಯಥೋಚಿತವಾದ ಕ್ರಾಂತಿಯುಂಟಾಗಿದೆ. ಭಾಷೆ ಕಾವ್ಯದ ಹದಕ್ಕೆ ಬಂದಿದೆ. ಸಮಕಾಲೀನ ಜೀವನದ ಘಟನೆಗಳಿಗೆ, ವಿಚಾರಗಳಿಗೆ, ಸಮಸ್ಯೆಗಳಿಗೆ ನಮ್ಮ ಕವಿಗಳು ಉತ್ತರ ಕೊಟ್ಟಿದ್ದಾರೆ.

ಈ ಮೊದಲೇ ಹೇಳಿದಂತೆ ಆ ಕಾಲ ಕಾವ್ಯದ ಮಟ್ಟಿಗೆ ವಸಂತಕಾಲವಾಗಿತ್ತು. ಅಂತೆಯೇ ಕಾವ್ಯದ ಬಗ್ಗೆ ವಾದ ಹಾಕದೆ ಸುಮ್ಮನೆ ಸೃಷ್ಟಿಮಾಡುತ್ತ ನಡೆದರು. ಈ ಕವಿಗಳು 'ರೋಮ್ಯಾಂಟಿಕ್' ಸಂಪ್ರದಾಯಕ್ಕೆ ಸೇರಿದವರೆಂದು ಈಗಾಗಲೇ ಹೇಳಲಾಗಿದೆ. ಇದಕ್ಕೆ ಹಲವಾರು ಕಾರಣಗಳಿವೆ. ಪ್ರಾಚೀನಕಾವ್ಯದ ಯುಗ ಎಂದೋ ಮುಗಿದು ಹೋಗಿ, ಭಾಷೆ ಕೂಡ ಮೃತಾವಸ್ಥೆಗೆ ಬಂದಿತ್ತು. ಅದಕ್ಕೆ ತೀವ್ರವಾದ ಚಿಕಿತ್ಸೆ ನಡೆಸದೆ ಗತ್ಯಂತರವಿರಲಿಲ್ಲ. ಅದಲ್ಲದೆ 'ಶ್ರೀ'ಯವರು ಇಂಗ್ಲಿಶ್ 'ರೋಮ್ಯಾಂಟಿಕ್' ಕವಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದ್ದೂ ಒಂದು ಪ್ರಬಲ ಕಾರಣವಾಗಿದೆ. ಧಾರವಾಡದ ಗೆಳೆಯರ ಗುಂಪಿಗೆ ಪ್ರೇರಣೆ ಆಯರ್ಲಂಡದ ಹೊಸ 'ರೋಮ್ಯಾಂಟಿಕ್' ಸಂಪ್ರದಾಯದ ಕವಿಗಳಿಂದ ಬಂದಿತು. ಯೇಟ್ಸ್, ಏ.ಈ. ಮೊದಲಾದ ಕವಿಗಳ ಅನುಭಾವ, ಸ್ವಪ್ನದರ್ಶನಗಳು ಗುಂಪಿನ ಮೇಲೆ ಪ್ರಭಾವವನ್ನು ಬೀರಿದವು. ಭಾರತದ ನವೋದಯಕ್ಕೆ ಕಾರಣರಾದ ರವೀಂದ್ರ ಹಾಗೂ ಅರವಿಂದರ ಪ್ರಭಾವವೂ ಇತ್ತು. ಗೆಳೆಯರ ಗುಂಪಿನ ಎಷ್ಟೋ ಸದಸ್ಯರು ಶಾಂತಿ-ನಿಕೇತನಕ್ಕೆ ಹೋಗಿ ಶಿಕ್ಷಣ ಪಡೆದು ಬಂದರು. ಮಧುರಚನ್ನ, ಕಾಪಸೆ ರೇವಪ್ಪ, ಪಿ. ಧೂಲಾಸಾಹೇಬ ಮೊದಲಾದವರು ಪ್ರಾದೇಶಿಕ ಸತ್ವದ ಪುನರುತ್ಥಾನದಲ್ಲಿ ತೊಡಗಿದರು. ಈ ತಲೆಮಾರಿನ ಕವಿಗಳನ್ನು ಆಕರ್ಷಿಸಿದ ಹಳೆಗನ್ನಡದ ಕವಿಗಳನ್ನು ಅಭ್ಯಾಸಮಾಡುವದು ಕೂಡ ಕುತೂಹಲಕಾರಿಯಾಗಿದೆ. ಹರಿಹರ, ರಾಘವಾಂಕ, ಕುಮಾರವ್ಯಾಸ, ರತ್ನಾಕರವರ್ಣಿ ಹಾಗೂ ಲಕ್ಷ್ಮೀಶರಂಥ ಕವಿಗಳು ಹೊಸಕವಿಗಳ ಮೇಲೆ ಬಹಳ ಪ್ರಭಾವವನ್ನು ಬೀರಿದರು. ಪಂಪ, ಜನ್ನ ಮೊದಲಾದ ವಸ್ತುನಿಷ್ಠರಾದ ಕವಿಗಳ ಕಾವ್ಯಮಾರ್ಗವನ್ನು ಅನುಸರಿಸಿದವರು ಇಲ್ಲವೆಂದೇ ಹೇಳಬಹುದು. ನಾಡಿಗೆ ನಾಡೇ ರಾಷ್ಟ್ರೀಯ ಜಾಗೃತಿಯ ಹೊಸ ಆವೇಶದಲ್ಲಿ ಪಾಲುಗೊಂಡಿತ್ತು.

ಉತ್ಸಾಹ, ಶಕ್ತಿ, ಆವೇಶ, ಘನತೆಯ ಬಗ್ಗೆ ಗೌರವ, ಆದರ್ಶಪ್ರಿಯತೆ, ಅಜ್ಞಾತದ ಬಗ್ಗೆ ಹಂಬಲ ಮೊದಲಾದ 'ರೊಮ್ಯಾಂಟಿಕ್'ಸಂಪ್ರದಾಯದ ಮೌಲ್ಯಗಳು ಅವರ ಕಾವ್ಯದಲ್ಲಿ ಒಡಮೂಡಿದ್ದರೆ ತಪ್ಪೇನಿಲ್ಲ. ಒಟ್ಟಿನಲ್ಲಿ ಈ ಕವಿಗಳ ಮುಂದೆ ಘನವಾದ ಆದರ್ಶಗಳಿದ್ದವು.

ಈ ಆವರಣದಲ್ಲಿ ಹುಟ್ಟಿದ ಕಾವ್ಯವೆಲ್ಲವೂ ಶ್ರೇಷ್ಠತರಗತಿಯದೆಂದು ಹೇಳಲಾಗುವದಿಲ್ಲ. ಹೊಸ ಉತ್ಸಾಹದಲ್ಲಿ ಸೃಷ್ಟಿಕಾರ್ಯ ಭರದಿಂದಲೇ ನಡೆಯಿತು. ಅವಸರದ ಮೂಲಕ ಕೆಲವು ಸಾಮಾನ್ಯ ದರ್ಜೆಯ ಕವಿಗಳೂ ಹುಟ್ಟಿಕೊಂಡರು. ಹೊಸತನದ ಬೆಳಕಿನಲ್ಲಿ ಅವರ ಕಾವ್ಯ ಕೂಡ ಶ್ರೇಷ್ಠವೆಂದೇ ಆಗ ಕಂಡಿತ್ತು. ಮುಂದೆ ಉದುರುವ ಎಲೆಗಳೆಲ್ಲ ಉದುರಿಹೋದವು. ಆದರೆ ಆ ಕಾಲ ಕಾವ್ಯಕ್ಕೆ ಹದಗಾಲವೆಂಬುದನ್ನು ಮಾತ್ರ ಮರೆಯುವಂತಿಲ್ಲ. ಪ್ರತಿಭೆಯುಳ್ಳವರಿಗೆ ಮಾಡಬೇಕೆಂದರೆ ಬೇಕಾದಷ್ಟು ಕೆಲಸವಿತ್ತು. ಬೇಂದ್ರೆ, ಕು.ವೆಂ.ಪು.ರಂಥ ಕವಿಗಳು ತಮ್ಮೆದುರಿಗಿದ್ದ ಈ ಪರಿಸ್ಥಿತಿಯ ಉಪಯೋಗವನ್ನು ಚೆನ್ನಾಗಿಯೇ ಮಾಡಿಕೊಂಡರು. ಮಾಸ್ತಿಯಂಥವರು ನಾಡಿನ ಸಂಸ್ಕೃತಿಯನ್ನು ಪುನರುಜ್ಜೀವನಗೊಳಿಸಿ ವರ್ತಮಾನಕಾಲವನ್ನು ಗತಕಾಲದೊಂದಿಗೆ ಜೋಡಿಸಿದರು. ವಿನಾಯಕರಂಥವರು ಒಂದು ಕಡೆಗೆ ಆಧುನಿಕ ವಿಚಾರಲಹರಿಗಳನ್ನು ಕನ್ನಡಕ್ಕೆ ವಿದೇಶೀಯವಾಗದಂತೆ ತಂದುಕೊಟ್ಟರು. ಗೋವಿಂದ ಪೈ, ಕಡೆಂಗೊಡ್ಲು ಶಂಕರಭಟ್ಟರಂಥವರು ಕನ್ನಡದ ಮಾರ್ಗಸಂಪ್ರದಾಯವನ್ನು ತಂದು ಕಾವ್ಯಕ್ಕೆ ಗೌರವವನ್ನು ತಂದರು. ಕೆ.ಎಸ್.ಎನ್. ಹಾಗೂ ರಾಜರತ್ನಂರಂಥ ಕವಿಗಳು ಮರ್ಯಾದಿತ ಕ್ಷೇತ್ರದಲ್ಲಿಯೇ ಕುಶಲಕರ್ಮದಿಂದ ಎಂಥ ಶ್ರೇಷ್ಠ ಕಾವ್ಯವನ್ನು ಹುಟ್ಟಿಸಬಹುದೆಂಬುದನ್ನು ಪ್ರಯೋಗದಿಂದ ತೋರಿಸಿಕೊಟ್ಟರು. ಮಧುರಚೆನ್ನರಂಥ ಕವಿಗಳು ಜಾನಪದಕಾವ್ಯದ ಸತ್ವವನ್ನು ಮೈಗೂಡಿಸಿಕೊಂಡರು. ಹೀಗೆ ಹತ್ತು ದಿಕ್ಕಿನಿಂದಲೂ ನಡೆದ ಈ ಪ್ರಯತ್ನ ವ್ಯರ್ಥವಾಗಿಲ್ಲವೆಂಬುದನ್ನು ನಮ್ಮೆದುರಿಗಿದ್ದ ಕಾವ್ಯವೇ ಸಾರಿ ಹೇಳುತ್ತದೆ. ಏನೇ ಆದರೂ ಕನ್ನಡಕಾವ್ಯಪ್ರವಾಹ ಹರಿಗಡಿಯಬಾರದೆಂಬುದು ಈ ತಲೆಮಾರಿನ ಉದಾತ್ತ ಪ್ರತಿಜ್ಞೆಯಾಗಿತ್ತು. ಬೇಂದ್ರೆ, ಕು.ವೆಂ.ಪು, ವಿನಾಯಕರಂಥವರು ಕನ್ನಡ ಭಾಷೆಯನ್ನು ಯಾವ ಅರ್ಥದ ಅಭಿವ್ಯಕ್ತಿಗೂ ಸಮರ್ಥವಾಗುವಂತೆ ಮಾಡಲು ಹೆಣಗಾಡಿದರು. ಇದರಿಂದಾಗಿ ಭಾಷೆಯ ಅವಯವಗಳು ಹಿಗ್ಗಿದವು.

ಆಮೇಲೆ ಕಾದಂಬರಿಯ ಲೋಕದಲ್ಲಿ ಬೀಸಿದ್ದ ವಾಸ್ತವಿಕತೆಯ—ಪ್ರಗತಿಶೀಲತೆಯ ಗಾಳಿ ಕಾವ್ಯಕ್ಕೂ ಸೋಕಿತು. ಕವಿ ತನ್ನ ದಂತದ ಗೋಪುರದಲ್ಲಿ ಕುಳಿತು ಸಾಮಾನ್ಯಜೀವನವನ್ನು ತಿರಸ್ಕರಿಸುತ್ತಿದ್ದಾನೆಂದು ಬೊಬ್ಬಾಟವೆದ್ದಿತು. ರಶಿಯನ್ ಸಾಹಿತ್ಯದ ಪ್ರಭಾವದ ಪರಿಣಾಮದಿಂದ ಈ ವಾದ ಹುಟ್ಟಿಕೊಂಡಿತು. ಆದರೆ ಈ ಪ್ರಭಾವ ನೇರವಾಗಿ ಕನ್ನಡದ ಮೇಲೆ ಬೀಳದೆ ಹಿಂದೀ ಸಾಹಿತ್ಯದ ಮುಖಾಂತರ ಬಂದಿತು. ಗಿರಣಿಗಳ ಹೊಗೆಯಿಂದ ತುಂಬಿದ ಕಾವ್ಯ ಬೇಕೆಂದು ವಾದವೆದ್ದಿತು. ಮಿಲ್ಲಿನ ಕೆಲಸಗಾರರ, ದೀನ ದಲಿತರ ಬಾಳು ಕಾವ್ಯದ ಮೂಲಕ ಚಿತ್ರಿತವಾಗಬೇಕೆಂಬ ಹೊಸ ಗಾಳಿ ಬೀಸತೊಡಗಿತು. ಅದರಲ್ಲಿ ಎಷ್ಟು ಅರ್ಥವಿತ್ತೋ, ಆದರೆ ಕವಿ

ಗಳಿಗೆ ಅದರ ಸೆಕೆ ತಾಕದೆ ಉಳಿಯಲಿಲ್ಲ. ಕಾವ್ಯದಲ್ಲಿ ಪ್ರಗತಿಶೀಲತೆ ಬಂದುಬಿಟ್ಟಿತು. ದೀನ ದಲಿತರ ಬಗ್ಗೆ ಕವಿತೆಗಳು ಹುಟ್ಟಿದವು. ಆದರೆ ಈ ವಾತಾವರಣ ಬಹುಕಾಲ ಉಳಿಯಲಿಲ್ಲ. ಕವಿ ತನ್ನ ಸುತ್ತಲಿನ ಬಾಳಿನೊಂದಿಗೆ ಸಂಬಂಧವನ್ನಿಟ್ಟುಕೊಳ್ಳ ಬೇಕೇನೋ ನಿಜ. ಆದರೆ ಪರಿಸ್ಥಿತಿಯನ್ನು ಪ್ರತಿಬಿಂಬಿಸುವ ಭರದಲ್ಲಿ ಅಪರಿಚಿತವಾದ ವಸ್ತುವಿನ ಬಗೆ ಬರೆಯುವದಾದರೂ ಹೇಗೆ? ಮತ್ತು ಕವಿತೆಯನ್ನು ಬರೆದು ಅನ್ನ ದಂಥ ಸಮಸ್ಯೆಯನ್ನು ಬಿಡಿಸುವದಾದರೂ ಹೇಗೆ? ಹೇಳಿ ಕೇಳಿ ಕಾವ್ಯ ಒಂದು ಕಲೆ; ಅದರ ಸಾಮಗ್ರಿ ಕಣ್ಣಿಗೂ ಕಾಣದ ಭಾಷೆ; ಅದರ ಗುರಿ ಮಾನವನ ಹೃದಯ. ಜೀವನವನ್ನು ಅದು ಅನುಭವವನ್ನಾಗಿ ಕಾಣಬಲ್ಲದೇ ಹೊರತು ಬೇರೆ ರೀತಿಯಿಂದಲ್ಲ. ನಿಜವಾದ ನಂಬಿಕೆಗಳ ಮೇಲೆ ಮಾತ್ರ ಕಾವ್ಯ ಬೆಳೆಯಬಲ್ಲದು. ಹೊಸದಾಗಿ ಬೀಸಿದ ಮಾನವತಾವಾದ ( humanitarianism )ದ ಗಾಳಿ ಹೊಸ ಫ್ಯಾಶನ್ನಾಗಿ ಬಂದಿತೇ ಹೊರತು ಅದು ನಮ್ಮ ವಾತಾವರಣದಲ್ಲಿ ಹುಟ್ಟಿದ ಸಮಸ್ಯೆಯಾಗಿರಲಿಲ್ಲ.

ಪ್ರಗತಿಶೀಲ ಮನೋವೃತ್ತಿಯ ಪರಿಣಾಮ ಮಾತ್ರ ಕಾವ್ಯದ ಮೇಲೆ ಆಗದೆ ಹೋಗಲಿಲ್ಲ. ಚಂದ್ರ, ಕೋಗಿಲೆ, ಪ್ರಣಯ, ವಿರಹ ಮುಂತಾದ ಹಳೆಯ ವಸ್ತುಗಳನ್ನು ಬಿಟ್ಟುಕೊಟ್ಟು ಕವಿಗಳು ಹೊಸ ವಸ್ತುಗಳ ಶೋಧನಗೆ ನಡೆದರು. ಕೆಲವರು ಭಯಾನಕತೆಯ ಪ್ರೀತಿಯನ್ನು ತೋರುವದರ ಸಲುವಾಗಿಯೇ ಕ್ರಾಂತಿ, ರಕ್ತಪಾತ, ಕಣ್ಣೀರು ಮೊದಲಾದವುಗಳ ಬಗ್ಗೆ ಬರೆಯತೊಡಗಿದರು. ಕಾದಂಬರಿಕಾರರಿಗೆ ಗಾರ್ಕಿ ಆದರ್ಶನೆನಿಸಿದಂತೆ, ಕವಿಗಳಿಗೆ ಮಾಯಕೊವ್ಸ್ಕಿ ಆದರ್ಶನೆನಿಸಿದ. ಹರೀಂದ್ರನಾಥ ಚಟ್ಟೋಪಾಧ್ಯಾಯರ 'ಕವಿಗೆ' ಎನ್ನುವ ಪದ್ಯ ಈ ಮನೋವೃತ್ತಿಯನ್ನು ಸಂಪೂರ್ಣವಾಗಿ ಪ್ರತಿಬಿಂಬಿಸುತ್ತದೆ. ಅಡಿಗ, ಎಕ್ಕುಂಡಿ, ಗಂಗಾಧರ ಚಿತ್ತಾಲರಂಥ ಕವಿಗಳು ಈ ಮನೋವೃತ್ತಿಯಲ್ಲಿ ಹಾದು ಬಂದಿದ್ದಾರೆ. ಆದರೆ ಈ ಬಿಸಿಯೇರಿದ ವಾತಾವರಣ ಬಹುಕಾಲ ಉಳಿಯಲಿಲ್ಲ. ಕಾವು ಇಳಿದುಹೋದ ಮೇಲೆ ತರುಣ ಕವಿಗಳಿಗೆ ಮುಂದೇನು ಎನ್ನುವ ಸಮಸ್ಯೆ ತಲೆದೋರಿತು. 'ರೊಮ್ಯಾಂಟಿಕ್' ಸಂಪ್ರದಾಯದ ಕವಿಗಳಿನ್ನೂ ಬರೆಯುತ್ತಿದ್ದಾಗ ಇನ್ನೊಂದು ದಾರಿಯನ್ನು ತೆರೆಯುವದಾದರೂ ಹೇಗೆ? ಸಹಜವಾಗಿ ಮತ್ತೊಮ್ಮೆ ನಮ್ಮ ಕವಿಗಳ ಕಣ್ಣು ಆಂಗ್ಲಕಾವ್ಯದೆಡೆಗೆ ಹೊರಳಿತು. ಆಂಗ್ಲ ನವ್ಯಕವಿಗಳಾದ ಇಲಿಯಟ್, ಆಡೆನ್, ಸ್ಪೆಂಡರ್, ಡಿಲಾನ್ ಟಾಮಸ್ ಮೊದಲಾದವರು ಗೋಚರರಾದರು. ಹೊಸಗನ್ನಡ ಕಾವ್ಯ ಮತ್ತೊಮ್ಮೆ ಆಂಗ್ಲಕಾವ್ಯದ ಪ್ರಭಾವಕ್ಕೆ ಒಳಗಾಗಬೇಕಾಯಿತು. ಅಂತರವೆಂದರೆ ಇಷ್ಟೇ, ಈ ಸಾರೆ ಇಂಗ್ಲಿಷ್‌ಗೀತಗಳ ಇನ್ನೊಂದು ಸಂಗ್ರಹ ಮಾತ್ರ ಪ್ರಕಟವಾಗಲಿಲ್ಲ. ನವ್ಯಕಾವ್ಯ ಕನ್ನಡದ ಮುಖಾಂತರ ರಸಿಕರಿಗೆ ಪರಿಚಿತವಾಗಲಿಲ್ಲ.

ಆದರೆ ಪ್ರಗತಿಶೀಲತೆಯಿಂದ ಒಮ್ಮೆಲೆ ಕನ್ನಡಕಾವ್ಯ ನವ್ಯಮಾರ್ಗಕ್ಕೆ ಜಿಗಿಯಿತೆಂದು ಮಾತ್ರ ತಿಳಿಯಬಾರದು. ಹೊಸಗನ್ನಡ ಕಾವ್ಯದ ಬೆಳವಣಿಗೆಯನ್ನು ಕಾಲುಮಾನದಿಂದ ಅಳೆಯುವಂತಿಲ್ಲ. ವ್ಯಕ್ತಿಗಳ ಮೂಲಕ ಅಳೆಯಬೇಕಾಗಿದೆ. ಪ್ರಗತಿಶೀಲತೆ 'ರೊಮ್ಯಾಂಟಿಕ್' ಸಂಪ್ರದಾಯವನ್ನು ವಿರೋಧಿಸಿದರೆ, ಪ್ರಗತಿಶೀಲತೆಗೆ

ಪ್ರತಿಕ್ರಿಯೆಯೂ ಬಾರದಿರಲಿಲ್ಲ. ಮತ್ತು ಈ ಪ್ರತಿಕ್ರಿಯೆಗಳೆಲ್ಲ ಒಂದೇ ಕಾಲಕ್ಕೆ ನಡೆ ದಿವೆ. ಅಡಿಗ ಹಾಗೂ ಗಂಗಾಧರ ಚಿತ್ತಾಲ, ವಿ.ಜಿ. ಭಟ್ಟರಂಥವರು ಮೊದಲ ಗುಂಪಿಗೆ ಸೇರಿದರೆ, ಡಾ. ಕರ್ಕಿ, ರಾಮಚಂದ್ರ ಕೊಟ್ಟಲಗಿ, ಇಂಚಲ ಮೊದಲಾದವರು ಎರಡನೆಯ ಗುಂಪಿಗೆ ಸೇರುತ್ತಾರೆ. ಯಾವ ಗುಂಪಿಗೂ ಸೇರದೆ ಪ್ರತ್ಯೇಕವಾಗಿಯೇ ನಿಂತುಕೊಂಡ ಎಸ್. ಆರ್. ಎಕ್ಕುಂಡಿ, ಚನ್ನವೀರ ಕಣವಿಯಂಥವರೂ ಇದ್ದಾರೆ. ೧೯೪೨ರಿಂದ ಇತ್ತೀಚೆಗಿನ ಅವಧಿಯೆಲ್ಲ ಹೀಗೆ ಅನೇಕ ವೃತ್ತಿ ಪ್ರವೃತ್ತಿಗಳ ಗೊಂದಲ ವಾಗಿಬಿಟ್ಟಿದೆ. ಇದು ನೆಲೆನಿಂತ ಮೇಲೆ ಕನ್ನಡ ಕಾವ್ಯಮಾರ್ಗದ ಬೆಲೆಯನ್ನರಿಯ ಬಹುದಾಗಿದೆ.

ಡಾ. ಕರ್ಕಿಯವರು 'ರೊಮ್ಯಾಂಟಿಕ್' ಸಂಪ್ರದಾಯವನ್ನೇ ಮುಂದುವರಿ ಸಿದರು. ಮುಗಳಿ ಹಾಗೂ ಆನಂದಕಂದರಂತೆ ಕರ್ಕಿಯವರು ಕಾವ್ಯದಲ್ಲಿಯ ನಾದ-ಮಾಧುರ್ಯಕ್ಕೆ ಮನಸೋತವರು. ಭಾವದ ಹಾಗೂ ಭಾಷೆಯ ನಯದ ಕೆಲಸವೇ ಇವರ ಕಾವ್ಯದ ಜೀವಾಳವಾಗಿದೆ. ಇವರ 'ನಕ್ಷತ್ರಗಾನ'ದಲ್ಲಿಯ ಅನೇಕ ಕವಿತೆಗಳು 'ರೊಮ್ಯಾಂಟಿಕ್' ಸಂಪ್ರದಾಯದವೇ ಆಗಿದ್ದರೂ ವಸ್ತುವಿನ ದೃಷ್ಟಿಯಿಂದ ಸಮ ಕಾಲೀನತೆಯ ಅರಿವನ್ನು ಹೆಚ್ಚಾಗಿ ಮೈಗೂಡಿಸಿಕೊಂಡಿವೆ. ಗಾಂಧಿಯವರ ಮೇಲೆ ಇವರು ಬರೆದ ಚರಮಗೀತವನ್ನು ಈ ದೃಷ್ಟಿಯಿಂದ ನೋಡಬಹುದಾಗಿದೆ. ಕವಿತೆಯ ನಾದಮಾಧುರ್ಯ ದುಃಖವನ್ನು ಕರುಣವನ್ನಾಗಿ ಮಾರ್ಪಡಿಸಿ ಹೃದಯಸ್ಪರ್ಶಿಯಾ ಗಿದೆ. ಆದರೆ ಅದರಲ್ಲಿ ರೊಚ್ಚಾಗಲಿ, ಆವೇಶವಾಗಲಿ ಕಾಣುವದಿಲ್ಲ. ಇಂಚಲರ ಕಾವ್ಯವಾದರೂ ಇದೇ ಮಾದರಿಯದು. ನಾಡು-ನುಡಿಗಳ ಅಭಿಮಾನ, ಜಾಗೃತಿ, ನಿಸರ್ಗದ ಚಲುವು ಇವೇ ಇವರಿಗೆ ಮನಸೆಳೆದ ವಸ್ತುಗಳಾಗಿವೆ. ಇದೇ ರೀತಿಯ ಕವಿಗಳ ಬಳಗವೊಂದು ಕೃಷ್ಣೆಯ ತೀರದಲ್ಲಿ ಮುಂದೆ ಬರುತ್ತಿದೆ. ಭುಜೇಂದ್ರ ಮಹಿಷ ವಾಡಿ, ಸನದಿ, ಶ್ರೀಕಾಂತ ಶಮನೇವಾಡಿಯಂಥವರು ಮುಂದೆ ಬರಲಿದ್ದಾರೆ. ರಾಮ ಚಂದ್ರ ಕೊಟ್ಟಲಗಿಯವರು ಹೆಚ್ಚು ಸಾಮಾಜಿಕತೆಯ ಅರಿವಿನಿಂದ ಕೂಡಿದ ಕವಿತೆ ಗಳನ್ನು ಬರೆದರು. ಮಧ್ಯಮವರ್ಗದವರ ದುರ್ಬಲತೆ, ಸ್ವಂತ ಬಾಳಿನ ವ್ಯಥೆ, ಜೀವ ನದ ನಿರ್ವಿಣ್ಣತೆ ಇವರ ಕಾವ್ಯವಸ್ತುಗಳಾಗಿವೆ. ಕೊಟ್ಟಲಗಿಯವರು ಸಂಸ್ಕೃತ ಸಾಹಿತ್ಯದ ಅಭಿಜಾತತೆಗೆ ಆಕರ್ಷಿತರಾದ್ದರಿಂದ ಅಲ್ಲಿಯ ಭಾಷೆಯ ಸೌಂದರ್ಯವನ್ನು ತಮ್ಮ ನುಡಿಗೆ ತಂದುಕೊಟ್ಟಿದ್ದಾರೆ. ಹೇಮಂತರ 'ಸ್ನೇಹಸೂಕ್ತ' ಇದೇ ಮಾದರಿಯ ಇನ್ನೊಂದು ಕವನಸಂಗ್ರಹ. ಹೇಮಂತರ ಕಾವ್ಯದೋಷವೆಂದರೆ ಶಬ್ದಮೋಹ ಅವರ ಕಾವ್ಯಾರ್ಥವನ್ನು ಯಾವಾಗಲೂ ಸಂದಿಗ್ಧವಾಗಿಸುತ್ತದೆ.

## ನವ್ಯಮಾರ್ಗ

ಹೀಗೆ ಹೊಸ ಕವಿಗಳು ಇನ್ನೂ ಪ್ರಯೋಗನಿರತರಾಗಿರುವಾಗಲೇ ನವ್ಯಮಾರ್ಗ ಬಂದುಬಿಟ್ಟಿತು. ಪಶ್ಚಿಮದಲ್ಲಿ ನವ್ಯಕಾವ್ಯದ ಪ್ರಾದುರ್ಭಾವಕ್ಕೆ ಉಂಟಾದ ಕಾರಣ-ಪರಂಪರೆ ನಮ್ಮಲ್ಲಿ ರಲಿಲ್ಲ. ನಾವು ಪ್ರತ್ಯಕ್ಷವಾಗಿ ಯುದ್ಧವನ್ನಾಗಲಿ ದಿಕ್ಕೇಡಿತನ ವನ್ನಾಗಲಿ ಅನುಭವಿಸಲಿಲ್ಲ. ಏಕಾಕಿತನದ ಭೀಕರ ಅರಿವಾಗಲಿ, ಸಂಸ್ಕೃತಿಹೀನತೆಯ

ವಿಕೃತಿಯಾಗಲಿ ನಮ್ಮ ಕವಿಗಳಿಗೆ ಬರಲಿಲ್ಲ. ಇನ್ನು ಕಾವ್ಯದಲ್ಲಿ ಕೂಡ ಅಲ್ಲಿಯಂತೆ 'ರೊಮ್ಯಾಂಟಿಕ್' ಸಂಪ್ರದಾಯ ಅತಿರೇಕಕ್ಕೆ ಮುಟ್ಟಲಿಲ್ಲ. ನಮ್ಮ ಮೊದಲ ತಲೆಮಾರಿನ ಕವಿಗಳು ಇನ್ನೂ ಆರೋಗ್ಯಪೂರ್ಣವಾದ ಕವಿತೆಗಳನ್ನೇ ಬರೆಯುತ್ತಿದ್ದಾರೆ. ಜೀವನವನ್ನು ಸಂಪೂರ್ಣವಾಗಿ ತಿರಸ್ಕರಿಸಿ ಕೇವಲ ಕಲೆಯ ಬೆನ್ನುಹತ್ತಿದ ಕವಿಗಳೂ ನಮ್ಮಲ್ಲಿಲ್ಲ. ಹಾಗಿದ್ದರೆ ನಮ್ಮ ನವ್ಯತೆಗೆ ಕಾರಣವಾದರೂ ಏನು ಎಂದು ಪ್ರಶ್ನೆಯೇಳುವದು ಸಹಜವಾಗಿದೆ. ಆಂಗ್ಲಕಾವ್ಯದಲ್ಲಿ ನವ್ಯತೆ ಬಂದದ್ದೇ ಇದಕ್ಕೆ ಕಾರಣವಾಯಿತೇ? ಇದು ಪ್ರಯೋಗಪ್ರಿಯತೆಯ ಒಂದು ಆಟವೇ? ಅಥವಾ ನವ್ಯ ಮಾರ್ಗ ಎಲ್ಲ ಕಾವ್ಯಮಾರ್ಗಗಳಿಗೂ ಇರುವ ಸಹಜವಾದ ಬೆಳವಣಿಗೆಯೆನ್ನಬೇಕೆ?

ಪಶ್ಚಿಮದಲ್ಲಿ ನವ್ಯತೆಗೆ ಕಾರಣವಾದದ್ದೆಂದರೆ 'ರೊಮ್ಯಾಂಟಿಕ್' ಸಂಪ್ರದಾಯವನ್ನು ವಿರೋಧಿಸುವ ಮನೋವೃತ್ತಿ. ಆ ಮನೋವೃತ್ತಿಯ ಬೇರು ಅಲ್ಲಿ ಅನೇಕ ಕ್ಷೇತ್ರಗಳಲ್ಲಿಳಿದಿವೆ. ವಿಜ್ಞಾನದ ಪ್ರಗತಿ, ಔದ್ಯೋಗೀಕರಣ, ರಾಜಕಾರಣದಲ್ಲಿಯ ವಿಫಲತೆಗಳು, ಧರ್ಮದ ದುರ್ಬಲತೆ, ಮಾನಸಶಾಸ್ತ್ರದ ಅನೇಕ ಶೋಧಗಳು, ಸಮಾಜಶಾಸ್ತ್ರದ ಹೊಸ ಸತ್ಯಗಳು, ಯುದ್ಧದ ಪರಿಣಾಮವಾಗಿ ಬಂದ ಮನೆಮುರುಕತನ, ಸಂಸ್ಕೃತಿಹೀನತೆ ಹೀಗೆ ಕಾರಣಪರಂಪರೆಯನ್ನೇ ಕೊಡಬಹುದಾಗಿದೆ. ನಮ್ಮಲ್ಲಿಯ ಅಪಾಯವೆಂದರೆ ನಮ್ಮ ಕವಿಗಳು ಇವುಗಳೆಲ್ಲವನ್ನು ಮಾನಸಿಕವಾಗಿ ಅನುಭವಿಸಿದ್ದು. ಆಂಗ್ಲಕಾವ್ಯದಿಂದ ಬಂದ ಮೊದಲನೆಯ ಸ್ಫೂರ್ತಿಯೂ ಹೀಗೆಯೇ ಇದ್ದಿತೆಂಬುದೊಂದೇ ಸಮಾಧಾನವಾಗಿದೆ. ಏನೇ ಆಗಲಿ ನವ್ಯಕಾವ್ಯ ಬಂದಿದೆ. ಅದನ್ನು ಸ್ವೀಕರಿಸದೆ ವಿಧಿಯಿಲ್ಲ.

ಸೂಕ್ಷ್ಮವಾಗಿ ನೋಡಿದರೆ ನಮ್ಮಲ್ಲಿ ನವ್ಯತೆ, ಇಟಲಿಯ ನೃತ್ಯಮಂದಿರದಲ್ಲಿ ಹುಟ್ಟಿದ ಪೇಜಾವರ ಸದಾಶಿವರಾಯರ ಕಾವ್ಯದಿಂದ ಪ್ರಾರಂಭವಾಯಿತೆನ್ನಬಹುದು. 'ಲಾ:ರೆಂಝೋ ಇಲ್ ಮನ್ನಿಫಿಕೊ' ಎಂಬ ನಾಟ್ಯಗೀತ, ಹಾಗೂ 'ವರುಣ' ಎಂಬ ಕವಿತೆಗಳು ನವ್ಯಪ್ರಜ್ಞೆಯಲ್ಲಿ ಬರೆದವುಗಳಾಗಿವೆ. 'ವರುಣ' ಎಂಬ ಸಂಗ್ರಹದಲ್ಲಿ ಸೇರಿರುವ ಈ ಕವಿತೆಗಳಿಗೂ, ಉಳಿದ ಕವಿತೆಗಳಿಗೂ ಇರುವ ಅಂತರವನ್ನು ಗಮನಿಸಿದರೆ ಈ ಮಾತಿನ ಸತ್ಯ ಗೋಚರವಾಗಬಹುದು. ಪೇಜಾವರರ ಕಾವ್ಯದ ಸಾಮಾನ್ಯಶೈಲಿ ಬೇಂದ್ರೆ ಕು.ವೆಂ.ಪು.ರವರ ಸಾಮಾನ್ಯ ಶೈಲಿಯನ್ನೇ ಹೋಲುತ್ತದೆ; ಆ ಶೈಲಿಯಲ್ಲಿ ಬರೆದ 'ಬಾರಕೂರು' ಮೊದಲಾದ ಕವಿತೆಗಳು ಸುಂದರವಾಗಿವೆ. ಈ ಎರಡು ಕವಿತೆಗಳ ಶೈಲಿ ಅವುಗಳ ಹಿಂದಿನ ಮನೋವೃತ್ತಿಯಂತೆ ತೀರ ಭಿನ್ನವಾಗಿದೆ. ಮೊಟ್ಟಮೊದಲಿಗೆ ಸಾಮಾಜಿಕ ಸ್ವಾತಂತ್ರ್ಯವನ್ನು ಕಂಡ ಕವಿ ತನ್ನ ಸುಪ್ತಚೇತನದ ಅನುಭವಗಳನ್ನೆಲ್ಲ ಸೂರೆಮಾಡಿದ್ದಾನೆ. 'ಅರಳುತಿರುವ ಮರುಳು ನಗೆ, ಸಾವಿರ ಸಿಗರೇಟ ಹೊಗೆ, ಮಧುವಿನಲ್ಲಿ ಮಿಂದ ಮುದವು ಮನಸ ಕೆದರಿದೆ.' 'ಕೆದರಿದ ಮನಸ್ಸಿ'ನಾಳದಲ್ಲಿ ಹುದುಗಿಕೊಂಡಿದ್ದ ಕಾಮನೆ, ಪ್ರವೃತ್ತಿಗಳೆಲ್ಲ ಜಾ:ಸ್ ಗಾನದ ಲಯಕ್ಕೆ ತೂಗಿ ಬರುತ್ತವೆ. ಪಾಪವನ್ನು ಅನಿವಾರ್ಯವೆಂದು ಒಪ್ಪಿಕೊಳ್ಳುವ ದುರಂತಚಿತ್ರವನ್ನು ನಾಟ್ಯಗೀತ ಬಣ್ಣಿಸುತ್ತದೆ. 'ವರುಣ'ದ ಗುಪ್ತವಾಗಿರುವ ವೇದನೆ ನವ್ಯವಾಗಿಯೇ ಅದೆ. ಅದಕ್ಕೂ ಹೆಚ್ಚಾಗಿ ಕೊಠಡಿಯಲ್ಲಿ ಸೆರೆಯಾದ

ಒಂಟಿ-ಜೀವದ ಪ್ರತಿಮೆ ತಂತ್ರವನ್ನು ಕೂಡ ನವ್ಯವಾಗಿಸಿದೆ. ಇಟಲಿಯಲ್ಲಿ ಜೀಳುವ ಮಳೆ, ಹೆಬ್ಬಾವಿನಂತೆ ನಿರ್ಜನವಾಗಿ ಬಿದ್ದಿರುವ ರಸ್ತೆ ಈ ಚಿತ್ರಗಳು ನವ್ಯಮಾರ್ಗದ ಜೀವಾಳವಾಗಿವೆ. ಆಗಿನ ಕಾಲದ 'ರೊಮ್ಯಾಂಟಿಕ್' ಕವಿಗಳಂತೆ ಪೇಜಾವರರು ಕೇವಲ ಮೇಲುಮನಸ್ಸಿನ ಭಾವಸಮುದಾಯವನ್ನು ಮಾತ್ರ ವರ್ಣಿಸದೆ, ಇನ್ನೂ ಆಳಕ್ಕಿಳಿದದ್ದು ಹೊಸ ಮಾತಾಗಿದೆ. ಉಳಿದ ಸಾಮಾಜಿಕ ಕವಿಗಳಲ್ಲಿಲ್ಲದ ಅಂತ-ರ್ಮುಖತೆಯು ಈ ಕವಿತೆಗಳಲ್ಲಿ ಸ್ಪಷ್ಟವಾಗಿ ಒಡಮೂಡಿದೆ. ಪೇಜಾವರರ ಅಕಾಲ ಮೃತ್ಯುವಿನಿಂದ ಈ ನವ್ಯಪ್ರಜ್ಞೆ ಮುಂದುವರಿಯಲಿಲ್ಲ.

ಈ ಸಂದರ್ಭದಲ್ಲಿ ವ್ಹಿ. ಜಿ. ಭಟ್ಟರದೊಂದು ಹೆಸರನ್ನು ಹೇಳಬೇಕು. ಮೊದಲಿನಿಂದಲೂ ಭಟ್ಟರು ವಿಡಂಬನವನ್ನೂ ಪ್ರಗತಿಶೀಲತೆಯನ್ನೂ ಆಶ್ರಯಿಸಿದವರು. ಸಮಾಜದ ರೋಗರುಜಿನಗಳ ಮೇಲೆ ಶಸ್ತ್ರಕ್ರಿಯೆಯನ್ನು ನಡೆಸಿದರು, ಇಲ್ಲವೆ ಕ್ರಾಂತಿಯ ಆವೇಶದಲ್ಲಿ ವ್ಯಮರೆತವರಂತೆ ಬರೆದರು. ಇವರ ಮೊದಲಿನ ಸಂಗ್ರಹಗಳಾದ 'ಪಲಾಯನ' ಹಾಗೂ 'ರಕ್ತಾಂಜಲಿ'ಗಳಲ್ಲಿ ವಿಡಂಬನದ ಜೋಡರ ಬಲೆಯನ್ನೂ ಪ್ರಗತಿಶೀಲತೆಯ ಕಾವನ್ನೂ ನೋಡಬಹುದಾಗಿದೆ. ಆದರೆ ಭಟ್ಟರು ವಿಡಂಬನದ ಸಂಭ್ರಮದಲ್ಲಿ ಅನುಭವವನ್ನು ಸಂಪೂರ್ಣವಾಗಿ ಮರೆತುಬಿಟ್ಟರು. ಅನುಭವದ ನಿರಾಕರಣೆಯೇ (rejection of experience) ಬರಬರುತ್ತ ಅವರ ಕಾವದ ವೈಶಿಷ್ಟ್ಯವಾಯಿತು. ಪ್ರತಿಕ್ರಿಯೆ ಕ್ರಿಯೆಗಿಂತ ಹೆಚ್ಚು ಬಲವತ್ತರವಾದಾಗ ಮಾತ್ರ ಬಾಳುತ್ತದೆ. ಭಟ್ಟರ ಪ್ರತಿಕ್ರಿಯೆಯಲ್ಲಿ ವಿದೂಷಕತ್ವದ ಅಂಶ ಹೆಚ್ಚಾಗಿತ್ತು. ಆದರೆ ಅದನ್ನು ಅವರೇ ಚೇಷ್ಟೆಗಾಗಿಯೆಂದು ತಿಳಿಯದೆ ಗಂಭೀರವಾಗಿ ತೆಗೆದುಕೊಂಡಿದ್ದರು. ಹೀಗಾಗಿ ಅವರ ವಿಡಂಬನಕ್ಕೆ ಎಷ್ಟೇ ಮೊನೆಯಿದ್ದರೂ, ಅವರ ಭಾಷೆ ಎಷ್ಟೇ ಶಕ್ತಿಯುತವಾಗಿದ್ದರೂ ಭಟ್ಟರ ಕಾವ್ಯದಲ್ಲಿ ವಿಕೃತಿ ತಾನೇ ತಾನಾಗಿತ್ತು. 'ಕಾವ್ಯವೇದನೆ' ಎಂಬ ಮುಂದಿನ ಸಂಗ್ರಹದಲ್ಲಿ ಅದು ಅತಿರೇಕಕ್ಕೆ ಮುಟ್ಟಿತು. ಜೀವನವನ್ನೂ ಕಾವ್ಯವನ್ನೂ ಕೂಡಿಯೆ ಪರಿಹಾಸ ಮಾಡುವಷ್ಟು ಅವರ ಕಾವ್ಯ ವಿಕೃತವಾಯಿತು. ಕಲೆಯ ದೃಷ್ಟಿಯಿಂದ ಇದು ದೊಡ್ಡ ಅಪಾಯವೇ ಹೌದು. ಜೀವಂತವಾದ ದ್ವೇಷಭಾವನೆ ಕೂಡ ಕಾವ್ಯಮಯ ಅನುಭವವಾಗಬಲ್ಲದು. ಭಟ್ಟರದು ನಿರ್ಲಿಪ್ತ ತಿರಸ್ಕಾರ. ಜೀವನದ ಅನಿವಾರ್ಯವಾದ ದುರ್ಬಲತೆಯನ್ನೇ ಅವರು ವಿಡಂಬಿಸಿದರು. ಅವರ ವಿಡಂಬನದ ಕಣ್ಣಿಗೆ ಕಂಡದ್ದೆಲ್ಲ ಅರ್ಥಹೀನವಾಗಿತ್ತು. ಪೋಪ ಕವಿಯ ಪದ್ಯಗಳಲ್ಲಿ ಕಂಡುಬರುವ ಆರೋಗ್ಯದ ಹಂಬಲ, ಅಜ್ಞಾನದ ಬಗ್ಗೆ ತ್ವೇಷ ಭಟ್ಟರ ಕವಿತೆಗಳಲ್ಲಿ ಕಂಡುಬರುವದಿಲ್ಲ. ಆದರೆ ಇತ್ತೀಚಿನ ಅವರ ಎರಡು ಸಂಗ್ರಹಗಳಲ್ಲಿ ('ಕಿಷ್ಕಿಂಧೆ' ಹಾಗೂ 'ಅರಣ್ಯರೋದನ') ಭಟ್ಟರ ಮಾಗಿದ ಜೀವನದೃಷ್ಟಿಗೆ ಅನುಭವ ಕಂಡಿದೆ. ಜೀವನವನ್ನು ಸಂಪೂರ್ಣವಾಗಿ ತಿರಸ್ಕರಿಸಿದ ವಿರಾಗಿಗೆ ಹೇಗೋ ಹಾಗೆ ವಿಕೃತಜೀವಿಗೂ ಕಾವ್ಯದಲ್ಲಿ ಸ್ಥಾನವಿಲ್ಲ. ಹೊಸದಾಗಿ ಬಂದ ಈ ಕವನ ಸಂಗ್ರಹಗಳಲ್ಲಿ ಜೀವನದ ಬಗ್ಗೆ ಲವಲವಿಕೆ ಮಿಡಿಯುತ್ತದೆ; ಸಂಸಾರದ ಅರ್ಥ-ಪೂರ್ಣತೆ ಮನವರಿಕೆಯಾಗಿದೆ. ಮೂವತ್ತನೆಯ ಹುಟ್ಟಿದ ಹಬ್ಬದ ದಿನ ಎಳೆಬಿಸಿಲಿಗೆ ಮೈಯೊಡ್ಡಿ ಕುಳಿತುಕೊಳ್ಳುವದರಲ್ಲಿ ಕೂಡ ಒಂದು ಅರ್ಥ ಅವರಿಗೆ ಗೋಚರ

ವಾಗಿದೆ. ನೆರೆಮನೆಯಾತ ತನ್ನ ಮಕ್ಕಳನ್ನು ಹೊಡೆದರೆ ಇವರ ಕರುಳು ಹಿಚುಕಿ ದಂತಾಗುತ್ತದೆ. ಭಟ್ಟರು ಇನ್ನೂ ವಿಡಂಬನವನ್ನು ಬಿಟ್ಟಿಲ್ಲ. ಆದರೆ ಈಗ ಅದರ ದಿಕ್ಕು, ಗುರಿ ಬದಲಾಗಿವೆ. ಬದುಕಿನಲ್ಲಿಯ ನಿರರ್ಥಕ ಅಂಶಗಳನ್ನು ದೂರಮಾಡುವ ಕೆಲಸ ಅದಕ್ಕೀಗ ಬಂದಿದೆ. ಜೀವನದ ಗಾಂಭೀರ್ಯವನ್ನು ಅದೀಗ ನೋಡಬಲ್ಲದಾ ಗಿದೆ. ಈ ಕವನಗಳನ್ನೋದುವಾಗ ಥಾ:ಮಸ್ ಹಾರ್ಡಿಯ ಕವನಗಳ ನೆನಪಾಗದೆ ಇರುವದಿಲ್ಲ. 'Sir Nameless and Children', 'Hap' ಮೊದಲಾದ ಕವಿತೆ ಗಳಲ್ಲಿಯ ಕರುಣ ಹಾಗೂ ವಿಡಂಬನಗಳ ಮಿಲನ, ಭಟ್ಟರ ಈ ಕವಿತೆಗಳ ತಿರು ಳಾಗಿದೆ. ಲಘುವಾಗಿ ಕಾಣುವ ಸಂಗತಿಗಳ ಹಿಂದೆ ಜೀವನದ ಗಂಭೀರತೆ ಇರುವ ದನ್ನು ಭಟ್ಟರು ಈಗ ಗಮನಿಸಿದ್ದಾರೆ.

ತಂತ್ರದ ದೃಷ್ಟಿಯಿಂದಲೂ ಭಟ್ಟರ ಕಾವ್ಯ ತೀರ ಹೊಸಮಾದರಿಯದಾಗಿದೆ. ಕಾವ್ಯಕ್ಕೆಂದು ಪ್ರತ್ಯೇಕವಾದ ಭಾಷೆಯೊಂದು ಇರಬೇಕೆಂಬ ನಿಯಮವನ್ನು ಅವರು ಪಾಲಿಸುವದಿಲ್ಲ. ಬಳಕೆ-ಮಾತುಗಳ ಉಪಯೋಗ, ಗಟ್ಟಿಮುಟ್ಟಾದ ಭಾಷೆ, ವಿಷಮ ಲಯ ಇವು ಮೊದಲಿನಿಂದಲೂ ಅವರ ಅಭಿವ್ಯಕ್ತಿಯ ಲಕ್ಷಣಗಳಾಗಿದ್ದವು. ಅವು ಈಗಲೂ ಇವೆ. ಕಾಯಿಪಲ್ಲೆ ಮಾರುವ ಮುದುಕಿಯ ಮೇಲೆ ಅವರು ಬರೆದ ಕವಿತೆಯನ್ನು ಉದಾಹರಣೆಯೆಂದು ಕೊಡಬಹುದು. ಇಷ್ಟೆ, ಮೊದಲಿಗಿಂತ ಅವರ ಕಾವ್ಯಶರೀರ ಹೆಚ್ಚು ಸಜೀವವಾಗಿದೆ. ಮತ್ತು ಅದರ ಹಿಂದೆ ಒಂದು ಜೀವಂತ ಕರುಳು ಕುದಿಯುತ್ತದೆ.

ಗಂಗಾಧರ ಚಿತ್ತಾಲರು ಇನ್ನೊಬ್ಬ ಪ್ರಗತಿಶೀಲ ಮನೋವೃತ್ತಿಯುಳ್ಳ ಕವಿ ಯಾಗಿದ್ದಾರೆ. ಇವರ ಸಂಗ್ರಹವಾದ 'ಕಾಲದ ಕರೆ'ಯಲ್ಲಿ ಈ ಮನೋವೃತ್ತಿ ಆವೇಶ ಪೂರ್ಣವಾಗಿದೆ. 'ನೆಲದ ಒಂದು ತುಂಡಿಗೇಕೋ, ತಾಯಿಯೆಂದು ಸಾಯಬೇಕೋ' ಎಂಬ ಸಾಲು ಈ ಮಾತನ್ನು ಸ್ಪಷ್ಟಗೊಳಿಸುತ್ತದೆ. ಆದರೆ ಚಿತ್ತಾಲರ ಪ್ರಗತಿಶೀಲ ತೆಗೆ 'ರೊಮ್ಯಾಂಟಿಕ್' ಭಾವನೆಯೇ ಮೂಲವಾಗಿದೆಯೆಂಬುದನ್ನು ಮರೆಯ ಲಾಗದು. ಆ ಸಂಗ್ರಹ ಪ್ರಕಟವಾದ ಮೇಲೆ ಅವರು ಬರೆದ ಕವಿತೆಗಳು ಈ ಮಾತಿಗೆ ಸಾಕ್ಷಿಯಾಗಿವೆ. ಆ ಕವಿತೆಗಳ ಸಂಖ್ಯೆ ಕಡಿಮೆಯಾಗಿದ್ದರೂ, ಪ್ರತಿಯೊಂದು ಕವಿತೆಯಲ್ಲಿಯೂ ಚಿತ್ತಾಲರ ಪ್ರಾಮಾಣಿಕತೆ ಮಿಡಿಯುತ್ತಿದೆ. ವಿನಾಯಕರ 'ಸಮುದ್ರಗೀತಗಳ'ಲ್ಲಿಯ ಕಾವ್ಯಶ್ರದ್ಧೆಯನ್ನು ಚಿತ್ತಾಲರ ಕಾವ್ಯದಲ್ಲಿ ಗುರುತಿಸ ಬಹುದಾಗಿದೆ. ವಿನಾಯಕರಂತೆಯೇ ಇವರು ಮಾನವನ ವಿಕಾಸದಲ್ಲಿ, ಪ್ರಗತಿ-ಶೀಲತೆಯಲ್ಲಿ ವಿಶ್ವಾಸವುಳ್ಳವರು. 'ರೊಮ್ಯಾಂಟಿಕ್' ಸಂಪ್ರದಾಯದ ಇಂಥ ಮನೋ ಭೂಮಿಕೆಗೆ ನವ್ಯಪ್ರಜ್ಞೆಯಿಂದ ಬಂದ ಬುದ್ಧಿವಾದ ಬಲವನ್ನೂ ತರ್ಕಶುದ್ಧತೆ ಯನ್ನೂ ತಂದುಕೊಟ್ಟಿದೆ. ಮೇಲಾಗಿ ಚಿತ್ತಾಲರ ಸರಳವಾದ, ನೇರವಾದ, ನಿರಾ-ಡಂಬರವಾದ ಶೈಲಿ ವಿಶಿಷ್ಟವಾದ ಕಾಂತಿಯಿಂದ ಬೆಳಗುತ್ತದೆ. ಪ್ರತಿಕ್ರಿಯಾತ್ಮಕ ವಾದ ದಾರಿಯನ್ನು ಬಿಟ್ಟುಕೊಟ್ಟು ನವ್ಯಮಾರ್ಗಕ್ಕೆ ಸೇರಿದವರಲ್ಲಿ ಚಿತ್ತಾಲರು ಮೊದಲಿಗರಾಗಿದ್ದಾರೆ.

ಎಸ್. ಆರ್. ಎಕ್ಕುಂಡಿ ಹಾಗೂ ಚನ್ನವೀರ ಕಣವಿ ಇವರಿಬ್ಬರ ಕಾವ್ಯಮಾರ್ಗ

ಯಾವದೆಂಬುದು ಇನ್ನೂ ನಿರ್ದಿಷ್ಟವಾಗಿಲ್ಲ. ಇಬ್ಬರೂ ನಿಜವಾದ ಕಾವ್ಯಶಕ್ತಿಯುಳ್ಳವರು. ಆದರೆ ಹಳೆ-ಹೊಸ ಸಂಪ್ರದಾಯಗಳ ನಡುವೆ ಅವರು ಹೊಯ್ದಾಡುತ್ತಿದ್ದಾರೆ. ಎಕ್ಕುಂಡಿಯವರು ವ್ಹಿ. ಜಿ. ಭಟ್ಟರಂತೆ ವಿನಾಯಕರು ಕಟ್ಟಿದ 'ವರುಣಕುಂಜ'ದ ಸದಸ್ಯರಲ್ಲೊಬ್ಬರು. ಇವರ ಕೆಲವು ನವ್ಯಕವಿತೆಗಳು ಪ್ರಕಟವಾಗಿವೆ. ಆದರೆ ಜೀವನದ ವಿಕಟತೆಯನ್ನು ತೆರೆದು ತೋರುವ ಮಟ್ಟಿಗೆ ಅವು ನವ್ಯವಾಗಿವೆ. ಇಂಥ ಕವಿತೆಗಳನ್ನು ಹಿಂದಕ್ಕೆ ಬೇಂದ್ರೆ ಹಾಗೂ ಕು. ವೆಂ. ಪು. ರವರು ಬರೆದಿದ್ದಾರೆ. 'ಬ್ಯಾಂಕಿನ ಕಾರಕೂನನ ಪ್ರಣಯ'ದಂಥ ಕವಿತೆಗಳು ಕೇವಲ ಚಮತ್ಕಾರದ ತಂತ್ರಕ್ಕಾಗಿ ಮಾತ್ರ ಮೀಸಲಾದವುಗಳು. ಎಕ್ಕುಂಡಿಯವರ ಕಾವ್ಯಪ್ರಯತ್ನದ ಒಂದು ಅಂಶವನ್ನು ಅಲ್ಲಿ ನೋಡುತ್ತೇವೆ. ಅವರ ಹೃದಯ ಹೆಚ್ಚಾಗಿ ಕಥನ-ಕವನಗಳ ಕಡೆಗೆ ಒಲಿಯಿತು. 'ಸುಭದ್ರಾ'ದಂಥ ಸಣ್ಣಕವನದಲ್ಲಿ ಕೂಡ ಕಥಾನಕವೊಂದು ಹಿನ್ನೆಲೆಗೆ ಇದ್ದೇ ಇದೆ. 'ಮಹಾಶ್ವೇತಾ', 'ಉಭಯಭಾರತಿ', 'ಮಿಸುನಿ ಜಿಂಕೆ', 'ಊರ್ವಶಿ' ಮೊದಲಾದ ಕಥನಕವನಗಳು ಉಜ್ವಲವಾಗಿವೆ. ಕಾಮರೂಪಿಯಾದ ಇವರ ಕಲ್ಪನೆಯ ಇಂದ್ರಜಾಲ ಮೋಹಕವಾಗಿದೆ. ಸುಕುಮಾರಪದಪ್ರಯೋಗ, ಬಣ್ಣಗಾರಿಕೆ, ವಾತಾವರಣಸೃಷ್ಟಿ ಇವು ಇವರ ಶೈಲಿಯ ವೈಶಿಷ್ಟ್ಯಗಳಾಗಿದ್ದು 'pre-raphaelite' ಪಂಥದ ಕಾವ್ಯವನ್ನು ನೆನಪಿಗೆ ತಂದುಕೊಡುತ್ತವೆ. ಆದರೆ ಇಂದ್ರಿಯಗಳನ್ನು ಮರುಳುಗೊಳಿಸುವ ಈ ಸೌಂದರ್ಯಲೀಲೆಯಲ್ಲಿ ಎಕ್ಕುಂಡಿಯವರು ಸಮಕಾಲೀನ ಜೀವನವನ್ನು ಮರೆತೇಬಿಟ್ಟರು. ಇನ್ನು ಮುಂದೆ ಅವರ ಕಾವ್ಯ ಯಾವ ದಾರಿಯನ್ನು ಹಿಡಿಯಬಹುದೆಂಬುದು ಒಂದು ಸಮಸ್ಯೆಯಾಗಿದೆ. ಇದೇ ದಾರಿಯಲ್ಲಿ ಅವರು ಸಾಗಿದರೆ ಪುನರುಕ್ತಿಯ ಹೆದರಿಕೆ ಅವರ ಕಾವ್ಯಕ್ಕೆ ತಪ್ಪಿಲ್ಲವೆಂದೇ ಹೇಳಬೇಕು. 'ಆನಂದತೀರ್ಥರು' ಎಂಬ ಹೊಸದಾಗಿ ಪ್ರಕಟವಾದ ಅವರ ಕಥನ-ಕವನ ಈ ಅಪಾಯವನ್ನು ಸೂಚಿಸುತ್ತದೆ. ಅವರ ಕಲ್ಪನೆಗೆ ಬುದ್ಧಿವಾದದ ಬೆಂಬಲ ಇಲ್ಲದ್ದರಿಂದ ಅದು ತನ್ನ ಸೌಂದರ್ಯದಿಂದ ಮರುಳುಗೊಳಿಸುವ ಆಟದಲ್ಲಿ ತೊಡಗಬಹುದು. ಎಕ್ಕುಂಡಿಯವರು ಸಾಮಾನ್ಯವಾಗಿ ಪೌರಾಣಿಕ ವಸ್ತುಗಳನ್ನೇ ಬಳಸಿಕೊಳ್ಳುತ್ತಾರೆ. ಅಂಥ ವಸ್ತುಗಳಲ್ಲಿ ನವೀನಪ್ರಜ್ಞೆಯನ್ನಾದರೂ ತುಂಬಬೇಕು, ಇಲ್ಲವೆ ವರ್ತಮಾನದ ಕಡೆಗಾದರೂ ಕಣ್ಣು ತಿರುಗಿಸಬೇಕು.

ಕಣವಿಯವರ ಕಾವ್ಯ ಮೊದಮೊದಲಿಗೆ ಬೇಂದ್ರೆ, ಕು.ವೆಂ.ಪು. ಹಾಗೂ ಕೆ. ಎಸ್. ಎನ್. ಇವರ ಕಾವ್ಯದ ನೆರಳಲ್ಲಿಯೇ ಬೆಳೆಯಿತು. ಬೆಳೆಯುವ ಕವಿಗೆ ಅದು ಒಳ್ಳೆಯ ಪ್ರಾರಂಭವೆಂದೇ ಹೇಳಬೇಕು. ಅವರ 'ಕಾವ್ಯಾಕ್ಷಿ', 'ಭಾವಜೀವಿ' ಹಾಗೂ 'ಆಕಾಶಬುಟ್ಟಿ' ಈ ಸಂಗ್ರಹಗಳು ಸಂಪೂರ್ಣವಾಗಿ 'ರೊಮ್ಯಾಂಟಿಕ್' ಸಂಪ್ರದಾಯಕ್ಕೆ ಸೇರಿದವುಗಳಾಗಿವೆ. ನಿಸರ್ಗಪ್ರೀತಿ, ಸೌಂದರ್ಯದ ಅಭೀಪ್ಸೆ, ಆದರ್ಶದ ಹಂಬಲ ಇವು ಇಲ್ಲಿಯ ಕಾವ್ಯಗುಣಗಳಾಗಿವೆ. ಈ ಮಾದರಿಯಲ್ಲಿ 'ಆಕಾಶಬುಟ್ಟಿ' ಅತ್ಯುತ್ತಮ ಕವನವಾಗಿದೆ. ಇತ್ತೀಚಿನ ಅವರ ಕವಿತೆಗಳಲ್ಲಿ ಮಾತ್ರ ಅವರ ಪ್ರಯತ್ನ ನವ್ಯತೆಯ ಕಡೆಗೆ ಸಾಗಿದೆ. 'ದೀಪಧಾರಿ'ಯಲ್ಲಿಯ ಕೆಲ ಕವಿತೆಗಳು ನವ್ಯವಾಗಿವೆ. ಆದರೆ ನವ್ಯತೆಯ ಕಡೆಗೆ ಸಾಗುವಾಗ ಕಣವಿಯವರು

ಎಚ್ಚರ ವಹಿಸಿದ್ದು ಬಹಳ ಸಂತೋಷದ ಸಂಗತಿಯಾಗಿದೆ. ಮುಖ್ಯವಾಗಿ ಅವರ ಕಾವ್ಯದೃಷ್ಟಿ, ನಿಸರ್ಗದ, ಜೀವನದ ಚಲುವಿಗೆ ಆಕರ್ಷಿತವಾದ 'ರೊಮ್ಯಾಂಟಿಕ್' ದೃಷ್ಟಿಯಾಗಿದೆ. ಈ ದೃಷ್ಟಿ ನವ್ಯವೂ ಆಗಬಹುದು. ಆದರೆ ಈ ರೂಪಾಂತರಕ್ಕೆ ಬುದ್ಧಿವಾದದ ಸರ್ವಗ್ರಾಹಿಯಾದ ಹಿಡಿತ ಅವಶ್ಯವಾಗಿದೆ. ಕಣವಿಯವರು ಮುಖ್ಯವಾಗಿ ಭಾವನಾಪ್ರಧಾನ ಕವಿಗಳಾಗಿದ್ದಾರೆ. ಬೇಂದ್ರೆಯವರ 'ಕರುಳಿನ ವಚನಗಳು' ಆನಂದಕಂದರ 'ಮುದ್ದನಮಾತು' ಇವುಗಳಂತೆಯೇ ಚಲುವಾದ ಶೈಶವದ ಕವನಗಳನ್ನು ಬರೆದದ್ದೇ ಈ ಮಾತಿಗೆ ಸಾಕ್ಷಿಯಾಗಿದೆ. ಕಣವಿಯವರ ಕಾವ್ಯಶಕ್ತಿ ಇನ್ನೊಂದು ಮಹತ್ವದ ಉದ್ದೇಶವನ್ನು ಸಾಧಿಸಬಲ್ಲದಾಗಿದೆ. ಮಧುರಚನ್ನರಂತೆ ಜಾನಪದ ಸತ್ವವನ್ನು ಅದು ಮೈಗೂಡಿಸಿಕೊಳ್ಳಬಲ್ಲುದು.

ನವ್ಯತೆಯನ್ನು ಐತಿಹಾಸಿಕವಾಗಿ ಪ್ರಾರಂಭಿಸಿದವರೆಂದರೆ ವಿನಾಯಕರೇ ಎಂದು ಹೇಳಬಹುದು. ೧೯೪೦ರಲ್ಲಿ ಇವರ 'ನವ್ಯಕವಿತೆಗಳು' ಎಂಬ ಸಂಕಲನ ಪ್ರಕಟವಾಯಿತು. ಇಲ್ಲಿಯ ಕಾವ್ಯವಸ್ತುಗಳು ಹೊಸದಾಗಿವೆ. ರೇಡಿಯೋ, ಕ್ಲೋರೋ-ಫಾರ್ಮ ಮುಂತಾದ ಹೊಸ ವಿಷಯಗಳ ಮೇಲಿನ ಕವಿತೆಗಳನ್ನು ವಿನಾಯಕರು ಬರೆದರು. ಸಮಕಾಲೀನ ಜೀವನದ ಅರಿವು, ಭಾಷೆಯ ಹಾಗೂ ಛಂದಸ್ಸಿನ ಸಂಪೂರ್ಣ ಸ್ವಾತಂತ್ರ್ಯ, ವಾಸ್ತವದೃಷ್ಟಿ, ಪ್ರತಿಮೆಗಳ ಯೋಜನೆ, ಹೊಸಮಾದರಿಯ ತಂತ್ರ ಇವು ವಿನಾಯಕರ ನವ್ಯತೆಯ ಲಕ್ಷಣಗಳಾಗಿವೆ. ಶಾಸ್ತ್ರೀಯವಾಗಿ ಅವರಲ್ಲಿ ನವ್ಯತೆ ಬಂದಿದೆ. ಅವರ ಹೃದಯ ಎಂದಿನಂತೆ ಜೀವನದ ಉನ್ನತ ಆದರ್ಶಗಳ ಕಡೆಗೇ ಒಲಿದಿದೆ. ವಿನಾಯಕರು ಜೀವನದ ವಿಷಮತೆಯ ವಿಷವನ್ನೂ ಅನುಭವಿಸಿ ಕುದಿದು ನವ್ಯತೆಗೆ ಬಂದಿಲ್ಲ. ಜೀವನದ ವಿಕಟತೆ ಅವರಿಗೆ ದೂರದಿಂದ ಮಾತ್ರ ಕಂಡಿದೆ. ಅವರ 'ಉಗಮ'ವೆಂಬ ಕಾವ್ಯಖಂಡ ಈ ಮಾತಿಗೆ ಉತ್ತಮ ಉದಾಹರಣೆಯಾಗಿದೆ. ನದಿಯ ಉಗಮದ ಪಾವಿತ್ರ್ಯ, ಬೆಟ್ಟಗಳ ಐತಿಹಾಸಿಕ ಭವ್ಯತೆ ಇವುಗಳ ಹಿನ್ನೆಲೆಯಲ್ಲಿ ವರ್ತಮಾನದ ವಿಕೃತಿಯನ್ನು ಕಂಡಿದ್ದಾರೆ. ಆದರೆ ಈ ವಿಕೃತಿ ಬರಿ ತೋರಿಕೆಯದು. ಇದರಿಂದಲೂ ಪಾರಾಗುವ ದಾರಿಯೊಂದಿದೆ ಎಂಬ ಆಸೆ ಅವರನ್ನು ಕೈಬಿಟ್ಟಿಲ್ಲ. ಆ ವಿಶ್ವಾಸ ವಿನಾಯಕರ ವ್ಯಕ್ತಿತ್ವದ ಅಂಗವಾಗಿಯೇ ಇದೆ. ಇದೇ ಕಾವ್ಯದರ್ಶನ ಅವರ 'ದ್ಯಾವಾಪೃಥಿವೀ' ಎಂಬ ಕೃತಿಯಲ್ಲಿ ಇನ್ನೂ ನಿಚ್ಚಳವಾಗಿ ಒಡಮೂಡಿದೆ. ನೆಲದಿಂದ ಮುಗಿಲ ಕಡೆಗೆ ನೋಡಿದಾಗ ಆಕಾಶ ಅನೇಕ ಕನಸುಗಳ ತವರೂರಾಗಿ ಕಂಡಿದೆ. ಶೆಲ್ಲಿಯ ಕಾವ್ಯದ ಮುಖಾಂತರವಾಗಿ ಮೋಡಗಳ ನಾಡಿನ ಸತ್ಯವನ್ನು ನೋಡಿ, ಇಕ್ಷ್ವಾಕುವಿನ ಒಂದು ಪುರಾಣಕಥೆಯಲ್ಲಿ ಇನ್ನೊಂದು ದರ್ಶನವನ್ನು ಮೂಡಿಸಿದ್ದಾರೆ. ಈ ಚಿತ್ರಗಳಲ್ಲಿ ಅಸ್ಪಷ್ಟತೆಯೇನೂ ಸುಳಿದಿಲ್ಲ. ವಿನಾಯಕರ ಕಾವ್ಯತಂತ್ರ ಇಲ್ಲಿ ತೀರ ಯಶಸ್ವಿಯಾಗಿದೆ. ಈ ಕಾವ್ಯದ ಎರಡನೆಯ ಭಾಗದಲ್ಲಿ ವಿನಾಯಕರು, ಮುಗಿಲತ್ತ-ಣಿಂದ ನೆಲದ ಕಡೆಗೆ ನೋಟ ಬೀರಿದ್ದಾರೆ. ಇಲ್ಲಿಯ ವರ್ಣನೆಯ ವಿವರಗಳಲ್ಲಿ ಒಂದು ಕಾವ್ಯಕ್ರಮವಿದೆ. ನೆಲದ ಬಾಳಿನೊಂದಿಗೆ ಮನುಕುಲದ ಜೀವನ ಹೇಗೆ ಬೆಳೆಯಿತೆಂಬುದನ್ನು ಅಲ್ಲಿಯ ಚಿತ್ರಗಳ ಮೂಲಕವಾಗಿಯೇ ವರ್ಣಿಸಲಾಗಿದೆ. ಈ ಕೃತಿ ಒಂದು ಪುರಾಣಕಥೆಯನ್ನು ಒಳಗೊಂಡದ್ದು ಮಹತ್ವದ ಮಾತಾಗಿದೆ. ವಿನಾಯಕರ

ನವ್ಯಕಾವ್ಯ ಒಂದು ಕೈಯಲ್ಲಿ ವಿಚಾರಶಕ್ತಿಯನ್ನೂ ಇನ್ನೊಂದರಲ್ಲಿ ಜೀವನದ ಮೌಲ್ಯಗಳನ್ನೂ ಭದ್ರವಾಗಿ ಹಿಡಿದುಕೊಂಡಿದೆ. ಅಲ್ಲದೆ ವಿನಾಯಕರು ಇದೀಗ ತಲೆಯೆತ್ತುತ್ತಿರುವ ನವ್ಯಕಾವ್ಯಕ್ಕೆ ಒಂದು ವೈಚಾರಿಕ ಹಿನ್ನೆಲೆಯನ್ನು ಒದಗಿಸಿಕೊಟ್ಟಿದ್ದಾರೆ.

ಗೋಪಾಲಕೃಷ್ಣ ಅಡಿಗರನ್ನು ನವ್ಯಕಾವ್ಯದ ಶ್ರೇಷ್ಠ ಪ್ರತಿನಿಧಿಗಳೆಂದು ಕರೆಯಬಹುದಾಗಿದೆ. ಮೊದಲ ಸಂಗ್ರಹವಾದ 'ಭಾವತರಂಗ'ದಿಂದ ಹಿಡಿದು ಮೊನ್ನೆ ಪ್ರಕಟವಾದ 'ಚಂಡೆ-ಮುದ್ದಳೆ'ಯ ವರೆಗೆ ಅಡಿಗರ ಎಲ್ಲ ಕವಿತೆಗಳು, ಹೊಸಗನ್ನಡ ಕಾವ್ಯದ ವಿವಿಧ ಒಲವುಗಳನ್ನು, ಅನುಕೂಲ ಪ್ರತಿಕೂಲ ಶಕ್ತಿಗಳನ್ನು ಪ್ರತಿಬಿಂಬಿಸುತ್ತವೆ. ಅವರ ಸ್ವಂತ ವ್ಯಕ್ತಿತ್ವದಲ್ಲಿಯೇ ಒಂದಕ್ಕೊಂದು ವಿರುದ್ಧವಾದ ಒಲವುಗಳ ತಾಕಲಾಟ ನಡೆದಿದೆ. ಬೇಂದ್ರೆಯವರಂತೆಯೇ ಅಡಿಗರದು ಜೀವಂತವಾದ ಕಲ್ಪಕ-ಶಕ್ತಿ; ಆದರೆ ಅಸ್ವಸ್ಥತೆ ಬಹಳ. ಒಂದಾದ ಮೇಲೊಂದರಂತೆ ಹಳೆಯ ಒಲವುಗಳನ್ನು ಪೊರೆಯಂತೆ ಕಳಚಿ ಅವರು ಮುನ್ನಡೆದಿದ್ದಾರೆ. ಮೊದಲಿನಿಂದಲೂ ಅಡಿಗರು ಪ್ರಯೋಗಪ್ರಿಯರು, ಸ್ವಾತಂತ್ರ್ಯದ ಅಭಿಲಾಷೆಯುಳ್ಳವರು. ಅವರ ಮೊದಲ ಸಂಗ್ರಹವಾದ 'ಭಾವತರಂಗ' ಮೊದಲ ತಲೆಮಾರಿನ ಒಲವುಗಳನ್ನು ಪ್ರತಿಬಿಂಬಿಸುತ್ತಿದ್ದರೂ ಅದರ ಮೊದಲ ಕವಿತೆಯಲ್ಲೇ ಅಡಿಗರು ತಮ್ಮ ಕಾವ್ಯಕ್ಕೆ ಸ್ವಯಂಪ್ರತಿಭೆ ಬರಲೆಂದು ಹಾರೈಸಿದರು. 'ಹಲವು ಹೂಗಳ ಸುಗಂಧವ ತರುವ ಹರಿಕಾರ, ಮಂದಾನಿಲನೆ ನಿನಗಿಲ್ಲ ದಿವ್ಯಸೌರಭಸಾರ' ಎಂಬ ಮಾತಿನ ಭಾವ ಈ ಅರ್ಥವನ್ನು ಸೂಚಿಸುತ್ತದೆ. ಈ ಸಂಗ್ರಹದಲ್ಲಿಯ ಕವಿತೆಗಳು ಬಾಯ್‌ರನ್, ಶೆಲ್ಲಿ ಮುಂತಾದವರನ್ನೇ ಮೇಲ್ಪಂಕ್ತಿಯಾಗಿಟ್ಟುಕೊಂಡಿವೆ. 'ಕಲ್ಲಾಗು ಕಲ್ಲಾಗು' ಕವಿತೆಯಲ್ಲಿಯ ದೌರ್ಬಲ್ಯದ ಬಗ್ಗೆ ತಿರಸ್ಕಾರ, 'ಗೆಳೆತನ'ದಲ್ಲಿಯ ಸ್ನೇಹದ ಹಂಬಲ, 'ಮಂದರದಿ ಮಿಡಿಯುತಿದೆ'ಯಲ್ಲಿಯ ಮೂಕ ವಿಷಾದ, 'ನಿನಗೆ ನೀನೇ ಗೆಳೆಯ' ದಲ್ಲಿಯ ವ್ಯಕ್ತಿತ್ವದ ಬಗ್ಗೆ ಇರುವ ಗೌರವ ಇವೆಲ್ಲ ರೊಮ್ಯಾಂಟಿಕ್ 'ಭಾವನೆ'ಗಳೇ ಆಗಿವೆ. ಸುಕುಮಾರವಾದ ಕಲ್ಪನೆ, ಉಪಮೆರೂಪಕಗಳ ಹೆಣಿಕೆ ಈವು ಕಾವ್ಯ-ಶೈಲಿಯ ವೈಶಿಷ್ಟ್ಯಗಳಾಗಿವೆ. ಎಲ್ಲ ಕವಿತೆಗಳ ಹಿಂದೆಯೂ ಒಂದು ಆತಪ್ತಭಾವ-ನೆಯ ಬಿಸಿ ಮಾತ್ರ ಅನುಭವಕ್ಕೆ ಬಂದೇ ಬರುತ್ತದೆ. ಬೇಂದ್ರೆ, ಕು.ವೆಂ.ಪು, ಪೇಜಾವರ ಇವರಿಗಿಂತ ತೀರ ಭಿನ್ನವಾದ ಭಾವೋದ್ವೇಗ (passion) ಅಡಿಗರಲ್ಲಿ ಕಾಣುತ್ತದೆ. ಆದರೆ ಅದಕ್ಕೆ ತಕ್ಕದಾದ ಅಭಿವ್ಯಕ್ತಿ ದೊರೆಯುದಿದ್ದುದು ಅಸ್ವಸ್ಥತೆಗೆ ಕಾರಣವಾಗಿದೆ. ಈ ಸಂಗ್ರಹದ ಮುನ್ನುಡಿಯಲ್ಲಿ ಬೇಂದ್ರೆಯವರು ಹೇಳಿದಂತೆ 'ನಾವೀನ್ಯದ ಅನುಕೂಲ' ಅಡಿಗರಿಗಿಲ್ಲ. ಆದ್ದರಿಂದಲೇ ಅವರ ಕಾವ್ಯಸಿದ್ಧಿಯ ದಾರಿ ಕಠಿಣವಾಗಿದೆ. ಅಡಿಗರಿಗೆ ಈ ಕೊರತೆ ಮೊದಲೇ ಗೊತ್ತಾದದ್ದು ದೊಡ್ಡ ಮಾತಾಗಿದೆ. ಕಾವ್ಯದ ಮಾಧ್ಯಮ ಮರಗಟ್ಟಿರುವದನ್ನು ಅವರು ಕೂಡಲೆ ಮನಗಂಡರು.

ಅವರ ಮುಂದಿನ ಎರಡು ಸಂಗ್ರಹಗಳು ಪ್ರಗತಿಶೀಲತೆಯನ್ನು ಅವಲಂಬಿಸಿದವು. ನಡೆದು ಬಂದ ದಾರಿಯ ಕಡೆಗೆ ಕಣ್ಣು ಹೊರಳಿಸಬಾರದೆಂಬ ಪ್ರತಿಜ್ಞೆಯಿಂದಲೇ ಅಡಿಗರು ಮುನ್ನಡೆದರು. ಈ ಪ್ರತಿಕ್ರಿಯೆ ಕೇವಲ ಪ್ರಗತಿಶೀಲತೆಯ ಲಕ್ಷಣವೆಂದು

ಮಾತ್ರ ಹೇಳಲಾಗದು. ಅಡಿಗರ ವಿಷಯದಲ್ಲಿ ಈ ಪ್ರತಿಕ್ರಿಯೆ ಹೆಚ್ಚು ಆಳವಾಗಿದೆ. ಮೊದಲ ತಲೆಮಾರಿನ ಕವಿಗಳು ಅನುಭವಿಸದಿದ್ದ ಗತಕಾಲದ ಭಾರವನ್ನು ಅಡಿಗರು ಅನುಭವಿಸಿದರು. 'ಭಾವತರಂಗ'ದಲ್ಲಿ ಕೇವಲ ಸೂಚಿತವಾಗಿದ್ದ ಅಸ್ವಸ್ಥತೆ ಇಲ್ಲಿ ಕವಿಯ ಗುಂಗಾಗಿದೆ (obsession). ಅಡಿಗರು ತಮ್ಮ ಸಮಸ್ಯೆಗಳಲ್ಲಿಯೇ ನಿರತ ರಾದಂತೆ ತೋರುತ್ತದೆ. ಜೀವಿತದ ಯಾವ ಮೌಲ್ಯವನ್ನೂ, ಭಾವನೆಯನ್ನೂ ಒರೆಗೆ ಹಚ್ಚಿ ನೋಡುವ ಒಂದು ಪ್ರವೃತ್ತಿ ಇದೆ. ಅದರೊಂದಿಗೆ ದ್ವೇಷವೂ ಇದೆ. ಪುನ-ರ್ಜನ್ಮದ ಪೂರ್ವದಲ್ಲಿಯ ಬೇನೆ ಸಂಕಟಗಳೆಲ್ಲ ಇಲ್ಲಿ ಪ್ರತಿಬಿಂಬವನ್ನು ಪಡೆದಿವೆ. ಆವೇಶ ಹಿಂಸೆಯಾಗಿ ಪರಿಣಮಿಸಿದೆ. ನಿರಾಶೆಯ ಹೊಗೆಸುತ್ತಿದ ವಾತಾವರಣ ಈ ಕವಿತೆಗಳ ಮೇಲೆಲ್ಲ ಬಿದ್ದುಕೊಂಡಿದೆ. ರಾಜಕೀಯ ಜೀವನದ ಅರ್ಥಶೂನ್ಯತೆ, ಆದ ರ್ಶದ ವಿಫಲತೆಗಳನ್ನು ಕಂಡು ರೋಸಿಹೋದ ಮನಸ್ಥಿತಿಯ ಚಿತ್ರ ಇಲ್ಲಿದೆ. 'ನಡೆದು ಬಂದ ದಾರಿ', 'ಗಾಂಧಿ', ಈ ಕವನಗಳಲ್ಲಿ ಇಂಥ ಭಾವನೆಗಳೇ ಪ್ರಕಟ ವಾಗಿವೆ. ಈ ಭಾವನೆಗಳು ಪ್ರಾಮಾಣಿಕವಾಗಿವೆ, ಶಕ್ತಿಯುತವೂ ಆಗಿವೆ. ಆದರೆ ಅಭಿವ್ಯಕ್ತಿಯಲ್ಲಿ ಸಂಯಮವಿಲ್ಲ. ಅಡಿಗರ ಕಾಲಾತ್ಮಕ ವ್ಯಕ್ತಿತ್ವದಲ್ಲಿರುವ ಅಸ್ವಸ್ಥತೆ ಇದಕ್ಕೆ ಕಾರಣವಾಗಿದೆ. ಇಲ್ಲಿಯ ಕವಿತೆಗಳ ತಂತ್ರ ಅಸ್ಥಿರವಾಗಿದೆ, ಹೊಯ್ದಾಡು ತ್ತಿದೆ. ಮುಂದಿನ ನವ್ಯಕಾವ್ಯಕ್ಕೆ ನಾಂದಿ ಎನ್ನುವಂತೆ ಅಡಿಗರ ಕಾವ್ಯಶೈಲಿ ಈಗಾಗಲೆ ಪ್ರತಿಮಾನಿಷ್ಠವಾಗಿದೆ. ಭಾವಗೀತದ ರೂಪ ತನ್ನ ಮೇರೆಗಳನ್ನು ಮೀರಿ ಇನ್ನೊಂದು ರೂಪವನ್ನು ತಾಳಲು ಹವಣಿಸುತ್ತಿರುವಂತಿದೆ. ಅಡಿಗರು ತಮ್ಮ ವ್ಯಕ್ತಿತ್ವದ ಬಂಧನ ದಿಂದಲೂ ಬಿಡುಗಡೆಯನ್ನು ಪಡೆಯಲೆಳಸಿದ್ದಾರೆ.

ಈ ಪದ್ಧತಿಯಲ್ಲಿಯೂ ಸುಖ ಕಾಣದ ಅಡಿಗರ ಪ್ರತಿಭೆ ನವ್ಯತೆಯ ಕಡೆಗೆ ತಿರುಗಿತು. ಮುಂದಿನ ಸಂಗ್ರಹವಾದ 'ಚಂಡೆ-ಮದ್ದಳೆ' ಸಂಪೂರ್ಣವಾಗಿ ನವ್ಯ ವಾಗಿದೆ. ಕನ್ನಡ ಕಾವ್ಯದ ಇತಿಹಾಸದಲ್ಲಿ ಕೆಲವೊಂದು ಮಹತ್ವಪೂರ್ಣವಾದ ಮಾತು ಗಳನ್ನು ಈ ಸಂಗ್ರಹ ಹೇಳಬಲ್ಲದಾಗಿದೆ. ಇದರಲ್ಲಿಯ 'ಹಿಮಗಿರಿಯ ಕಂದರ', 'ಗೊಂದಲಪುರ', 'ಏನಾದರೂ ಮಾಡುತಿರು ತಮ್ಮ', 'ದೀಪಾವಳಿ' ಈ ಕವನ ಗಳು ಮೊದಲು ರಸಿಕರನ್ನು ವಿಮರ್ಶಕರನ್ನು ಗೊಂದಲಗೆಡಿಸಿದವು. ವಿಷಮ ಲಯ, ಬೆರಕೆಗೊಂಡ ಭಾಷೆ, ಅವತರಣಿಕೆಗಳು, ಪ್ರತಿಮಾನಿಷ್ಠತೆ, ತೋರಿಕೆಗೆ ಕಾಣುವ ಅಸಂಬದ್ಧತೆ ಇವೆಲ್ಲ ಕಾವ್ಯದ ಅರ್ಥಗ್ರಹಣಕ್ಕೆ ರಸಾಸ್ವಾದಕ್ಕೆ ತಡೆಯನ್ನುಂಟು ಮಾಡಿದವು. 'ಕವಿತೆ ತಿಳಿಯುವದಿಲ್ಲ, ಕಾವ್ಯ ಹೀಗಿರಬಹುದೇ, ಇಂಥ ವಿಷಯಗಳು ಕವಿತೆಯಲ್ಲಿ ಬರಬಹುದೇ' ಎಂಬ ಅನುಮಾನ, ತಕರಾರುಗಳು ಇನ್ನೂ ತಪ್ಪಿಲ್ಲ. ಬೇಂದ್ರೆಯವರ ಕವಿತೆಗಳ ಬಗ್ಗೆಯೂ ಇಂಥ ತಕರಾರು ಮೊದಲು ಬಂದಿತ್ತೆಂಬು ದನ್ನು ಮರೆಯಲಾಗದು. ಅವರ ಕವಿತೆಗಳ ಬಗ್ಗೆಯೂ ತಿಳಿಯುವದಿಲ್ಲವೆಂಬ ತಕರಾರು ಇನ್ನೂ ಹೋಗಿಲ್ಲ. ಒಂದು ಮಾತು ಮಾತ್ರ ನಿಜ, ಅಡಿಗರು ಬೇಂದ್ರೆಯ ವರಂತೆ ಕಾವ್ಯಕ್ಕೆ ಸರಿಯಾದ ಹಿನ್ನೆಲೆಯನ್ನು ಕಲ್ಪಿಸಿಕೊಡಲಿಲ್ಲ. ಆದರೆ ಈ ಮಾತು ಅಡಿಗರ ಕಾವ್ಯದ ಮೂಲ್ಯಮಾಪನಕ್ಕೆ ಅಡ್ಡಿ ಬರಲಾರದು.

ಉಳಿದ ನವ್ಯಕಾವ್ಯದಂತೆಯೇ ಜೀವನದಲ್ಲಿಯ ಬೀಭತ್ಸ, ವಿಕೃತಿ, ಪೊಳ್ಳುತನ

ಇವು ಅಡಿಗರ ಕಾವ್ಯವಸ್ತುಗಳಾಗಿವೆ. ಆದರ್ಶದ ವಿಫಲತೆ ಮುಖ್ಯವಸ್ತುವೆನ್ನ ಬಹುದು. ಆದರ್ಶ ಬದುಕಿನ ಉಸಿರಾಗದೆ ಕೇವಲ ಕನಸಾದರೆ ಅದರಂಥ ಅನಾರೋಗ್ಯ ಬೇರೆ ಇಲ್ಲ ಎಂಬ ಕಟುಸತ್ಯವನ್ನು ಅಡಿಗರು 'ಹಿಮಗಿರಿಯ ಕಂದರ', 'ಗೊಂದಲಪುರ' ಮುಂತಾದ ಕವಿತೆಗಳಲ್ಲಿ ಚಿತ್ರಿಸಿದ್ದಾರೆ. ಆದ್ದರಿಂದ ಈ ಕವಿತೆಗಳಲ್ಲಿಯ ನೋವು ಕರುಣಕ್ಕಿಂತ ಹೆಚ್ಚು ತೀಕ್ಷ್ಣವಾಗಿದೆ, ಅಂತೇ ನವ್ಯವಾಗಿದೆ. ಈ ನವ್ಯಪ್ರಜ್ಞೆಗೆ ತಕ್ಕಂತೆ ತಂತ್ರವೂ ಬದಲಾಗಿದೆ. ಭಾವಗೀತದ ಮೊದಲಿನ ಏಕ-ಮುಖತೆ ಇಲ್ಲವಾಗಿ ಸಂಕೀರ್ಣತೆ ತಲೆದೋರಿದೆ. ಒಂದು ವಸ್ತುವನ್ನು ಅದರ ಸಂದರ್ಭದಿಂದ ಬೇರ್ಪಡಿಸಿಕೊಂಡು ಮೊದಲಿನ ಕವಿಗಳು ಸುಗಮವಾದ ಕವಿತೆಗಳನ್ನು ರಚಿಸುತ್ತಿದ್ದರು. ನವ್ಯಕವಿಗಳು ವಸ್ತುವನ್ನು ಹಿಂಜಿ ಅದರ ಗಹನತೆಯನ್ನು ತೋರಿಸುವದಲ್ಲದೆ, ಅದನ್ನು ಕಾಲ-ದೇಶಗಳ, ಇತಿಹಾಸ-ಪ್ರಜ್ಞೆಯ ಸಂದರ್ಭದಲ್ಲಿ ನೋಡುತ್ತಾರೆ. ಈ ದೃಷ್ಟಿಯಿಂದ 'ಹಿಮಗಿರಿಯ ಕಂದರ'ಕ್ಕಿಂತ 'ಗೊಂದಲ-ಪುರ' ಹೆಚ್ಚು ಪರಿಪೂರ್ಣವಾಗಿದೆ. 'ಹಿಮಗಿರಿಯ ಕಂದರ'ದಲ್ಲಿ ಇಂದಿನ ಜೀವನದ ನಿಷ್ಕ್ರಿಯತೆ, ಅರ್ಥಹೀನತೆ, ಕಾಮದಂಥ ತ್ರಸ್ತಭಾವನೆಗಳು, ವಿಫಲತೆ ಹುಟ್ಟಿಸಿದ ಶೂನ್ಯ ಇವುಗಳ ಸಮಗ್ರ ಚಿತ್ರವಿದೆ. ಬಿಸಿಲು, ಖಾಂಡವದ ಬೆಂಕಿ, ಆಫೀಸು, ಕರ್ಪೂರಸುಂದರಿಯ ಕನಸು, ರೈಲುಗಾಡಿ, ಸಿದ್ಧಾರ್ಥನ ರಾಜ್ಯತ್ಯಾಗ, ಮುರಿದು ಬಿದ್ದ ಸೇತುವೆ ಇಂಥ ಪ್ರತಿಮೆ ಚಿತ್ರಗಳು ಈ ಅನುಭವವನ್ನು ಕಣ್ಣಿಗೆ ಕಾಣುವಂತೆ ಮಾಡುತ್ತವೆ. ಆದರೆ ಈ ಎಲ್ಲ ಚಿತ್ರಗಳು ಒಟ್ಟಂದದ ಪರಿಣಾಮವನ್ನು ಬೀರುವಂತೆ ಶೈಲಿ ಪಾಕವಾಗಿ ಬಂದಿಲ್ಲ. ಆ ಸಿದ್ಧಿ 'ಗೊಂದಲಪುರ'ದಲ್ಲಾಗಿದೆ. 'ಹಿಮಗಿರಿಯ ಕಂದರ'ದಲ್ಲಿಯ ಬೆಂಕಿಯ ವರ್ಣನೆ ಉಳಿದ ಚಿತ್ರಗಳೊಡನೆ ಸಜೀವವಾಗಿ ಹೊಂದಿಕೊಳ್ಳುವದಿಲ್ಲ. ಆದರೆ 'ಗೊಂದಲಪುರ'ದಲ್ಲಿಯ ತಮೋಲೋಕದ ವರ್ಣನೆ ಧ್ವನಿಪೂರ್ಣವಾದ ಭಾಷೆ ಹಾಗು ಶೈಲಿಗಳಿಂದ 'ಗೊಂದಲಪುರ ಮಹಾರಾಜ'ನ ಜನ್ಮಭೂಮಿಯಾಗಿ ಪರಿಣಮಿಸಿದೆ. ಆ ವರ್ಣನೆಯ ಅನುಭವ ಇಡೀ ಕಾವ್ಯದ ತುಂಬ ರಕ್ತವಾಗಿ ಸಂಚರಿಸುತ್ತದೆ. ಮಹಾಕಾವ್ಯ ಹಾಗೂ ವಿಡಂಬನಗಳೆರಡನ್ನೂ ಕಸಿಮಾಡಿ ಹುಟ್ಟಿಸಿರುವ ಈ ರೂಪ ತೀರ ಸಂಕೀರ್ಣವಾದ ರಸಾನುಭವವನ್ನುಂಟುಮಾಡುತ್ತದೆ. ಭಾವಗೀತದ ವ್ಯಕ್ತಿಪ್ರಧಾನತೆ ಮಾಯವಾಗಿ ವಸ್ತುಪ್ರಧಾನತೆ ತಾನೇ ತಾನಾಗಿದೆ. ಉಳಿದ ಚಿಕ್ಕ ಕವಿತೆಗಳಲ್ಲಿ 'ದೀಪಾವಳಿ' ಅತ್ಯಂತ ಸುಂದರವಾಗಿದೆ. 'ಏನಾದರೂ ಮಾಡುತಿರು ತಮ್ಮ'ದ ವಿಡಂಬನದ ತೀಕ್ಷ್ಣತೆ ಪೋಪ ಮೊದಲಾದವರನ್ನು ನೆನಪಿಗೆ ತರುವದಲ್ಲದೆ, ತಂತ್ರದ ನಾಟಕೀಯತೆಯಿಂದ ಬಹಳ ಯಶಸ್ವಿಯಾಗಿದೆ. ಇತ್ತೀಚೆಗೆ ಪ್ರಕಟವಾದ ಅಡಿಗರ 'ಭೂಮಿಗೀತ' ಅವರ ಕಾವ್ಯಸಾಮರ್ಥ್ಯದಲ್ಲಿ ಮುಂದಿನ ಹೆಜ್ಜೆಯಾಗಿರುವದಲ್ಲದೆ, ಕನ್ನಡದ ಶ್ರೇಷ್ಠ ಕವನಗಳಲ್ಲಿ ಒಂದಾಗಿದೆಯೆನ್ನಬಹುದು. ನೆಲದ ವ್ಯಕ್ತಸೌಂದರ್ಯ, ಭೀಕರತೆ, ಮನುಷ್ಯ ಅದರ ಜೊತೆಗಿಟ್ಟುಕೊಂಡ ಬಿಡಲಾರದ ಸಂಬಂಧ, ಹುಟ್ಟು-ಸಾವುಗಳ ವರ್ತುಲದಲ್ಲಿ ನಡೆದಿರುವ ಸೃಷ್ಟಿಕಾರ್ಯ ಇವುಗಳನ್ನೆಲ್ಲ ಅನೇಕ ಶಕ್ತಿಯುತವಾದ ಸಂಕೇತಗಳ ಮೂಲಕ ತೋರಿಸಿದ್ದಾರೆ. ಈ ಕೃತಿಯ ವಿವರವಾದ ಅಭ್ಯಾಸದಿಂದ ಅಡಿಗರ ಕಾವ್ಯಹೃದಯವನ್ನು ಸರಳವಾಗಿ

ಮುಟ್ಟಬಹುದಾಗಿದೆ.

ಕಲೆಯ ದೃಷ್ಟಿಯಿಂದ ಅಡಿಗರ ಕಾವ್ಯ ಇನ್ನೂ ಹೆಚ್ಚು ಬೆಳವಣಿಗೆಯನ್ನು ಪಡೆಯುವದರಲ್ಲಿದೆ. ಹೊಸ ಕವಿಗಳಲ್ಲಿ ಅಡಿಗರು ತೀರ ಮಹತ್ವದ ಕವಿಗಳಾಗಿದ್ದಾರೆ. ಬೇಂದ್ರೆಯವರ ತರುವಾಯ ಅಷ್ಟೇ ಸಾಮರ್ಥ್ಯವುಳ್ಳ ಪ್ರತಿಭೆಯೆಂದರೆ ಅಡಿಗರದೇ. ಈ ಪ್ರತಿಭೆ ಬೇಂದ್ರೆಯವರ ಪ್ರತಿಭೆಯಷ್ಟೇ ಸಂಕೀರ್ಣತೆ (complexity)ಯಿಂದ ಕೂಡಿದ್ದಾಗಿದೆ. ಆದರೆ ಪ್ರಕೃತಿ ಮಾತ್ರ ತೀರ ಭಿನ್ನವಾದದ್ದು. ನಿರ್ವಹಣಶಕ್ತಿಯಲ್ಲಿ (power of execution) ಏನೂ ಕಡಿಮೆಯಿಲ್ಲದಿದ್ದರೂ ಇದು ಮುಖ್ಯವಾಗಿ ವಿರೋಧಿಶಕ್ತಿಯಾಗಿದೆ. ಇದಕ್ಕೆ ಕಾರಣವಿಲ್ಲದಿಲ್ಲ. ಬೇಂದ್ರೆಯವರ ಎದುರಿಗಿದ್ದ ಪರಿಸ್ಥಿತಿ ಬೇರೆ, ಅಡಿಗರ ಮುಂದಿರುವ ಪರಿಸ್ಥಿತಿ ಬೇರೆ. ಮೊದಲೇ ಹೇಳಿದಂತೆ ಬೇಂದ್ರೆಯವರ ಮುಂದೆ ಜೀವನ ಸಾಗುಮಾಡದ ಹೊಲದಂತೆ ಬಿದ್ದುಬಿಟ್ಟಿತ್ತು. ಯಾವ ಅನುಭವವನ್ನೂ ಜೀರ್ಣಿಸಿಕೊಂಡು ಕಾವ್ಯವನ್ನಾಗಿ ಮಾಡಬಲ್ಲ ಶಕ್ತಿಯೂ ಅವರಿಗಿತ್ತು. ರೂಪಕದ ಮಾತಿನಲ್ಲಿ ಹೇಳುವದಾದರೆ ಬೇಂದ್ರೆಯವರ ಕಾವ್ಯ ತ್ರಿವಿಕ್ರಮನ ಒಂದು ಎರಡನೆಯ ಪಾದಗಳಾದರೆ ಅಡಿಗರದು ಮೂರನೆಯ ಪಾದವಾಗಿದೆ. ಕಾಲಿಟ್ಟ ಕ್ಷೇತ್ರ ಸಣ್ಣದು; ನಡೆದ ಕಾರ್ಯ ಬೇರೆಯಾಗಿರಬಹುದು. ಆದರೆ ಅದೇ ಪಾದವೆಂಬುದನ್ನು ಮರೆಯಲಾಗದು. ಇಬ್ಬರೂ ಕನ್ನಡಭಾಷೆಯ ಜೀವಾಳವನ್ನು ಗುರುತಿಸಿದ್ದಾರೆ; ಇವರಿಬ್ಬರ ಕಾವ್ಯದಲ್ಲಿಯೂ ಶಬ್ದಗಳ ಹೃದಯಸ್ಪಂದನವನ್ನು ಕೂಡ ಕೇಳಬಹುದಾಗಿದೆ. ಅಡಿಗರ 'ಭೂಮಿಗೀತ'ವನ್ನು ಈ ದೃಷ್ಟಿಯಿಂದಲೇ ನೋಡಬೇಕು. 'ಕಬ್ಬಿನಾಲೆಯ ತಿರುಪಿನಲ್ಲಿ ಕುಳಿತೆರೆದಳು ಅಜಸ್ರಧಾರೆಯ ಕರುಳ ತುಡಿತವನ್ನು', 'ಹಕ್ಕಿ-ಕೊರಳನ್ನು ಹಿಚುಕಿ ಲಾಲಿ ಹಾಡಿಸಿದಳು', 'ಆಹ ಪ್ರಾತಃಕಾಲದಲ್ಲಿ ಬೆಳಕಿನ ದಾಹ', 'ತುಟಿಗಗಸ್ತ್ಯಾಧರದ ತುರುಸು ತೋಟಿ', 'ಇವಳ ಹೊಟ್ಟೆಚರಂಡಿಗಾರು ಕುಕ್ಕಿದರಯ್ಯ, ಕಳ್ಳಬಸುರಿನ ಯಾವ ಜಾಣ ರಂಭೆ?' ಇಂಥ ಸಾಲುಗಳಲ್ಲಿ ಅಡಿಗರ ಭಾಷೆಯ ಶಕ್ತಿ ಹಾಗೂ ಸಂಯಮಗಳು ಕೂಡಿಯೆ ಪ್ರಕಟವಾಗಿವೆ.

ಇತ್ತೀಚೆಗೆ ಪ್ರಕಟವಾದ 'ನವ್ಯಧ್ವನಿ'ಯಲ್ಲಿ ಅನೇಕ ತರುಣ ಕವಿಗಳ ಕಾವ್ಯನಿರ್ಮಾಣವನ್ನು ಕಾಣಬಹುದಾಗಿದೆ. ರಾಮಚಂದ್ರಶರ್ಮ, ಕ. ವೆಂ. ರಾಜಗೋಪಾಲರಂಥ ನವ್ಯಕವಿತೆಯಿಂದಲೇ ಪ್ರಾರಂಭಿಸಿದ ಕವಿಗಳು ಅದರಲ್ಲಿ ಸಮಾವೇಶರಾಗಿದ್ದಾರೆ. ರಾಮಚಂದ್ರಶರ್ಮರು ಇದಕ್ಕೂ ಮೊದಲೇ ಕವನ ಸಂಗ್ರಹಗಳನ್ನು ಪ್ರಕಟಿಸಿದವರು. ಅವರ 'ಏಳುಸುತ್ತಿನ ಕೋಟೆ', 'ಕೆಂಡ-ಕಡಲು' ಈ ಕವಿತೆಗಳು ಸಂಪೂರ್ಣವಾಗಿ ನವ್ಯತಂತ್ರವನ್ನು ಅವಲಂಬಿಸಿವೆ. ಕಾಮ ಜೀವನದ ವಿಕೃತಿಯ ಅನೇಕ ಸಂಕೇತಪ್ರತಿಮೆಗಳಿಂದ ಶರ್ಮರ ಕಾವ್ಯ ತುಂಬಿ ತುಳುಕುತ್ತದೆ. ವಿಕೃತಿ ಕಾವ್ಯವಸ್ತುವಾಗಬಾರದೆಂದಿಲ್ಲ. ಆದರೆ ತಂತ್ರದ ವೈಚಿತ್ರ್ಯದ ಮೂಲಕ ವಿಕೃತಿ ಜೀವನದ್ದೋ ಕವಿಯದೋ ಗೊತ್ತಾಗುವದಿಲ್ಲ. ನವ್ಯತಂತ್ರದ ಪ್ರಧಾನಗುಣ ಅಸ್ಪಷ್ಟತೆಯೇನೂ ಅಲ್ಲ. ರಾಮಚಂದ್ರಶರ್ಮರ ಕವಿತೆಗಳು ಈ ಅಸ್ಪಷ್ಟತೆಗೆ ಗುರಿಯಾಗಿವೆ. ಇದು ವಸ್ತುವಿನ ದೋಷವಾಗಿರದೆ ಅವರ ತಂತ್ರ ಸಬಲವಾಗಿಲ್ಲವೆಂಬುದೇ ಮುಖ್ಯ ಕಾರಣವಾಗಿದೆ. ಕ. ವೆಂ. ರಾಜಗೋಪಾಲ ಹಾಗೂ

ಪಶುಪತಿರೆಡ್ಡಿ ಇಂಥ ಕವಿಗಳಲ್ಲಿಯೂ ಈ ಅಸ್ಪಷ್ಟತೆ ತಲೆದೋರಿದೆ.

ಕೆ. ಎಸ್. ಎನ್. ಕೂಡ ಈಗೀಗ ನವ್ಯಕವಿತೆಗಳನ್ನು ಬರೆಯುತ್ತಿದ್ದಾರೆ. ಮೊದಲೇ ಹೇಳಿದಂತೆ ಕೆ. ಎಸ್. ಎನ್. ಅವರ ಕಾವ್ಯದ ಭವಿಷ್ಯ ಕುತೂಹಲಕಾರಿಯಾಗಿದೆ. ಆಧುನಿಕತೆ ನವ್ಯತೆಯಾಗಿಯೇ ಬರಬೇಕೆಂದಿಲ್ಲ. ಕೆ. ಎಸ್. ಎನ್. ರಂಥ ಕವಿಗಳಲ್ಲಿ ಅದು ಸಾಂಕೇತಿಕತೆಯಾಗಿ ಬರಬಹುದೇನೋ! ಈ ಸಂದರ್ಭದಲ್ಲಿ ಇನ್ನಿಬ್ಬರು ಹೊಸ ಕವಿಗಳ ಹೆಸರನ್ನು ಹೇಳಬಹುದಾಗಿದೆ. ಎಂ. ಅಕಬರ ಅಲಿ, ಹಾಗೂ ಶಂ. ರಾ. ಮೊಕಾಶಿ. ಇವರಿಬ್ಬರ ಕಾವ್ಯ ಇನ್ನೂ ಒಂದು ಮೊತ್ತದಲ್ಲಿ ಕಾಣಸಿಗುವದಿಲ್ಲ. ಎಂ. ಅಕಬರ ಅಲಿ ಇವರ ಕಾವ್ಯದಲ್ಲಿ ವಿಡಂಬನ ಹಾಗೂ ವಿದಗ್ಧತೆಗಳ ಸಮನ್ವಯವಿದೆ. ಹಳೆಗನ್ನಡದ ವಿದ್ವತ್ತೆಯ ಕಾವ್ಯಮಯ ಉಪಯೋಗ, ಪ್ರತಿಮೆಗಳ ಸ್ಪಷ್ಟತೆ, ಮೊನೆಯಾದ ಭಾಷೆ ಹಾಗೂ ತೀಕ್ಷ್ಣವಾದ ವಸ್ತುಪ್ರಜ್ಞೆ ಇವು ಇವರ ವೈಶಿಷ್ಟ್ಯಗಳಾಗಿವೆ. ಶಂ. ರಾ. ಮೊಕಾಶಿಯವರದು ನೈಜವಾದ ಬುದ್ಧಿವಾದ. 'ನಿಸರ್ಗ' ಹಾಗೂ 'ಮಾಯಿಯ ಮೂರು ಮುಖಗಳು' ಈ ಕವಿತೆಗಳಲ್ಲಿಯ ಬುದ್ಧಿವಂತಿಕೆ ಕಲ್ಪನಾಶಕ್ತಿಯಷ್ಟೇ ಪ್ರಭಾವಶಾಲಿಯಾಗಿದೆ. ಮನಸ್ಸು ಹಾಗೂ ಬುದ್ಧಿಗಳ ಕಗ್ಗಂಟನ್ನು ಬಿಡಿಸುವದರಲ್ಲಿ ಇವರ ಕಾವ್ಯ ತೊಡಗಿರುತ್ತದೆ.

ಇದಲ್ಲದೆ ಇನ್ನೂ ಬೇರೆ ಹೊಸ ಕವಿಗಳೂ ಇದ್ದಾರೆ. ಪತ್ರಿಕೆಗಳ ತುಂಬ ಕವಿತೆಗಳು ಪ್ರಕಟವಾಗುತ್ತವೆ. ಆದರೆ ಅವೆಲ್ಲವುಗಳ ರೂಪರೇಷೆ ಹೀಗೇ ಎಂದು ನಿಶ್ಚಿತವಾಗಿ ಹೇಳಬರುವಂತಿಲ್ಲ. ಇನ್ನು ಮುಂದೆ ಕನ್ನಡ ಕಾವ್ಯ ಯಾವ ದಾರಿಯನ್ನು ಹಿಡಿಯಬಹುದೆಂಬುದೂ ನಿಶ್ಚಿತವಾಗಿಲ್ಲ. ನವ್ಯಮಾರ್ಗವೇನೋ ಈಗ ಮುಂಗಡೆಗೆ ಬಂದು ನಿಂತಿದೆ. ಅದರ ಜೊತೆಗೇ ಬೇಂದ್ರೆ, ಕು.ವೆಂ.ಪು. ಮೊದಲಾದ ಹಳಬರೆನಿಸಿದ ಕವಿಗಳು ಇನ್ನೂ ಬರೆಯುತ್ತಿದ್ದಾರೆ. ಅವರ ಕಾವ್ಯ ಸಮಕಾಲೀನತೆಯನ್ನು ಬಿಟ್ಟು ಬಿಡುವಷ್ಟು ಹಳೆಯದಾಗಿಲ್ಲ. ನವ್ಯಕಾವ್ಯದ ಬೆಳೆ ಹೆಚ್ಚಾಗಹತ್ತಿದೆ. ಇಂಥ ಹೊತ್ತಿನಲ್ಲಿ ಕೆಲವೊಂದು ಸಮಸ್ಯೆಗಳನ್ನು ಕುರಿತು ವಿಚಾರಮಾಡುವದು ಅವಶ್ಯವಾಗಿದೆ. ಅದು ಕಾವ್ಯವಸ್ತುವಿನ ಬಗ್ಗೆ. ವಿಕೃತಿ ಕಾವ್ಯವಿಷಯವಾದರೆ ತಪ್ಪೇನಿಲ್ಲ. ಆದರೆ ಅದನ್ನೇ ನವ್ಯಕಾವ್ಯದ ಮುಖ್ಯವಾದ ಅಂಗವನ್ನಾಗಿ ಮಾಡಿಕೊಂಡರೆ ಹೇಗೆ? ವಿಕೃತಿಯನ್ನು ತರಬೇಕೆಂದೇ ಕವಿಗಳು ತಮ್ಮ ಆತ್ಮದಲ್ಲಿ ಬಿರುಕು ಹುಟ್ಟಿಸಿಕೊಳ್ಳಬೇಕಾಗಿಲ್ಲ. ನಮ್ಮ ಸುತ್ತಲಿನ ಜೀವನವನ್ನು ಪ್ರಾಮಾಣಿಕವಾಗಿ ಪುನರ್ವಿಮರ್ಶಿಸಿಕೊಳ್ಳುವದು ಹೆಚ್ಚು ಒಳ್ಳೆಯದು. ಕಾವ್ಯ ಸಮಸ್ಯೆಗಳನ್ನು ಧೈರ್ಯದಿಂದ ಎದುರಿಸಬೇಕಾಗಿರುವದು ಒಳ್ಳೆಯದೇ. ಆದರೆ ಅದಕ್ಕಾಗಿ ಸಮಸ್ಯೆಗಳನ್ನು ಕಲ್ಪಿಸಿಕೊಳ್ಳುವದು ಬೇಡ. ಕವಿಗಳು ಸಾಮಾಜಿಕ ಜವಾಬ್ದಾರಿಯಿಂದ ಮುಕ್ತರಾಗಲಾರರು. ಇನ್ನೊಂದು ಮಾತೆಂದರೆ ಕಾವ್ಯದ ಸಂಪ್ರದಾಯನಿರ್ಮಾಣದ ಕಡೆಗೆ ಕವಿಗಳು ಹೆಚ್ಚು ಲಕ್ಷ್ಯವೀಯಬೇಕಾಗಿದೆ. ಹೊಸಗನ್ನಡದ ಪ್ರಾರಂಭದ ಕವಿಗಳು ಹೊಸ ದಾರಿಯನ್ನು ಹಿಡಿಯುವದು ಐತಿಹಾಸಿಕ ಅವಶ್ಯಕತೆಯಾಗಿತ್ತು. ಆಗ ಕೂಡ ಅವರು ಹಳೆಯ ಕಾವ್ಯಪರಂಪರೆಯನ್ನು ಧಿಕ್ಕರಿಸಲಿಲ್ಲ. ಹತ್ತನೆಯ ಶತಮಾನದ ಪಂಪನಿಂದ ಕೂಡ ಕೆಲವು ಮಹತ್ವದ ಮಾತುಗಳನ್ನು ಕಲಿಯಬಹುದಾಗಿದೆ. ಬರವಣಿಗೆಯು

ಯಿಂದ ಎಲ್ಲ ಕವಿಗಳೂ ಸ್ವತಂತ್ರರೇ. ಆದರೆ ಸಂಪ್ರದಾಯನಿರ್ಮಾಣದ ಕರ್ತವ್ಯ ಪ್ರತಿಯೊಬ್ಬ ಕವಿಯ ಪಾಲಿಗೂ ಇದೆ. ನವ್ಯತಂತ್ರದ ವಿಷಯವಾಗಿಯೂ ಒಂದು ಮಾತನ್ನು ಹೇಳಬಹುದಾಗಿದೆ. ಅದು ತೀರ ವೈಯಕ್ತಿಕವಾಗಿಬಿಟ್ಟರೆ ಕಾವ್ಯ ಮುಂಡಿಗೆಯಾಗುವ ಭೀತಿಯಿದೆ. ಕಾವ್ಯದ ಅತಿವ್ಯಾಖ್ಯೆಯಿಂದಾಗಿ ವಿಮರ್ಶೆಯ ಲೋಕದಲ್ಲಿ ಈಗಾಗಲೇ ಸಾಕಷ್ಟು ಬುದ್ಧಿಸಂಕರವಾಗಿದೆ. ಕಾವ್ಯವೆಂದಾಗ ಕವಿತೆಯ ಬದಲಾಗಿ ಆ ವ್ಯಾಖ್ಯೆಗಳು ಕಣ್ಣೆದುರು ಕಟ್ಟುವಂತಾಗಬಾರದು. ಮೇಲಾಗಿ ವ್ಯಕ್ತಿಗೊಂದೊಂದು ಕಾವ್ಯಮಾರ್ಗವಾಗುವದು ಸಾಹಿತ್ಯದ ದೃಷ್ಟಿಯಿಂದ ಕ್ಷೇಮಕರ ವೇನೆಂಬುದನ್ನು ವಿಚಾರಿಸಬೇಕಾಗಿದೆ. ಯಾವ ಮಾರ್ಗವನ್ನವಲಂಬಿಸಿದರೂ ಕಾವ್ಯೋತ್ಸಾಹ ಕಡಮೆಯಾಗಬಾರದು. ಹೊಸ ಕವಿಗಳಲ್ಲಿ ಕೆಲವರು ತೀರ ದಣಿ ದಂತಿದ್ದಾರೆ. ಪ್ರಯೋಗಪ್ರಿಯತೆಯ ಸಂಭ್ರಮದಲ್ಲಿ ಪ್ರಾರಂಭಿಸಿದ ಕಾರ್ಯವನ್ನು ಅದು ಪರಿಣತಿಯನ್ನು ಪಡೆಯುವ ಮೊದಲೇ ತ್ಯಜಿಸಿಬಿಡುತ್ತಾರೆ.

ಇನ್ನೊಂದು ಮಹತ್ವದ ವಿಷಯವೆಂದರೆ ಪಾಶ್ಚಾತ್ಯವಿಮರ್ಶೆಯ ಪ್ರಭಾವ. ಆಂಗ್ಲಕಾವ್ಯದ ಹೊಸ ವಿಚಾರಗಳನ್ನು ನಾವು ಜಾಗೃತಿಯ ಸಲುವಾಗಿ ಮಾತ್ರ ಸ್ವೀಕರಿಸಿದ್ದೆವು. ಜೀವನ್ಮೃತಾವಸ್ಥೆಯಲ್ಲಿ ಬಿದ್ದಿದ್ದ ಕಾವ್ಯ ಆಗ ಚೇತರಿಸಿಕೊಳ್ಳಲು ಅನುವಾಯಿತು. ಈಗ ಅವುಗಳ ಅವಶ್ಯಕತೆ ಅಷ್ಟೊಂದಿಲ್ಲ. ಬೇನೆ ಗುಣವಾದ ಮೇಲೂ ಔಷಧಕ್ಕೆ ಅಂಟಿಕೊಂಡಿರುವದು ಮಾನಸಿಕರೋಗದ ಲಕ್ಷಣವಾಗಿದೆ. ಇನ್ನುಮೇಲೆ ನಮ್ಮ ಕವಿಗಳು ಸ್ವತಂತ್ರರಾಗಿಯೇ ಹೆಜ್ಜೆಯಿಡದೆ ವಿಧಿಯಿಲ್ಲ. ಸಾಹಿತ್ಯದ ಎಲ್ಲ ಕ್ಷೇತ್ರಗಳಿಗೂ ಈ ಮಾತು ಅನ್ವಯಿಸುತ್ತದೆ. ಅಲ್ಲದೆ ಇದರ ಅರ್ಧ ಹೊಣೆಗಾರಿಕೆ ನಮ್ಮ ಪರಿಸರದ ಮೇಲೂ ಬಿದ್ದಿದೆ. ಬುದ್ಧಿಯ ಅತಿ ಸೂಕ್ಷ್ಮತೆ ಅವರ ನಿಶ್ಚಯಾತ್ಮಕತೆಯನ್ನೇ ಹಾಳುಮಾಡುತ್ತದೆ. ೧೯ನೆಯ ಶತಮಾನದ ಕೊನೆಯ ಭಾಗದಲ್ಲಿ ಇಂಗ್ಲಿಶ್‌ಸಾಹಿತ್ಯ ಈ ವಿಷಮತೆಯನ್ನು ಅನುಭವಿಸಿತು. ನಾವು ಆದಷ್ಟು ಅದರಿಂದ ದೂರವಿರುವದು ಒಳ್ಳೆಯದು. ಹಳೆಯ ಕಾವ್ಯದ ಅಭಿ-ಮಾನವೊಂದೇ ಕೆಲಸಕ್ಕೆ ಬಾರದೆಂಬ ಮಾತು ನಿಜವಾಗಿದೆ. ಆದರೆ ಇಂದಿನ ಕಾವ್ಯ ದಲ್ಲಿ ಆ ಪರಂಪರೆಯ ರಕ್ತ ಹರಿಯದಿದ್ದರೆ, ಹೊಸ ಕಾವ್ಯಕ್ಕೂ ಹಳೆಯ ಕಾವ್ಯಕ್ಕೂ ಆನುವಂಶಿಕ ಸಂಬಂಧ ಉಳಿಯದಿದ್ದರೆ, ನಮ್ಮ ನೆಲಕ್ಕೇ ನಾವು ಹೊಸಬರಾಗಿ ಬಾಳ ಬೇಕಾದೀತು. ಪ್ರಾಚೀನಕಾವ್ಯದಲ್ಲಿ ಪೂರ್ಣ ಸಫಲತೆಯನ್ನು ಪಡೆಯದೆ ಬಿದ್ದು ಕೊಂಡ ಕೆಲವು ಅಂಶಗಳಿವೆ. ಅವುಗಳ ಕಡೆಗೆ ನಮ್ಮ ಕವಿಗಳು ಕಣ್ಣು ಹಾಕ ಬೇಕಾಗಿದೆ.

ನವ್ಯಕಾವ್ಯ ರಂಗದ ಮುಂಭಾಗದಲ್ಲಿ ಬಂದು ನಿಂತಾಗ ಹಳೆಯ ಕವಿಗಳು ಯಾವ ದಾರಿಯನ್ನು ಹಿಡಿಯಬಹುದೆಂಬ ಪ್ರಶ್ನೆಯೂ ಕುತೂಹಲಕಾರಿಯಾಗಿದೆ. ಬೇಂದ್ರೆಯವರಂಥವರ ಮಾತು ಬೇರೆಯಾಗಿದೆ. ಸ್ವೋಪಜ್ಞತೆಯೇ (originality) ಅವರ ಪ್ರತಿಭೆಯ ಮುಖ್ಯ ಲಕ್ಷಣವಾಗಿದೆ. ಆದರೆ ಉಳಿದವರ ವಿಚಾರವೇನು ? ಅವರು ನವ್ಯಮಾರ್ಗಾವಲಂಬಿಗಳಾಗುವದು ಅಸಾಧ್ಯ. ಅದು ಅಪೇಕ್ಷಣೀಯವೂ ಅಲ್ಲ. ಕಾವ್ಯದ ಅಂತರಂಗ ಬದಲಾಗದೆ ಅದರ ಸ್ವರೂಪ ಬದಲಾಗಲಾರದು. ಆದರೆ

ಅವರ ಕ್ಷೇತ್ರದಲ್ಲಿಯೇ ಇನ್ನೂ ಪರಿಣತಿಯನ್ನು ಪಡೆಯುವದಿದೆ. ನವ್ಯವಾಗದೆಯೂ ಆಧುನಿಕವಾಗುವದು ಶಕ್ಯವಿದೆ.

ಅಡಿಗರದು ಇನ್ನೊಂದು ದಾರಿ. ಗ್ರೀಕರ 'Phœnix' ದಂತೆ ಸತ್ತು ಪುನರ್ಜನ್ಮವನ್ನು ಪಡೆಯುವ ಅವರ ಪ್ರತಿಭೆ ರೋಮಾಂಚಕಾರಿಯಾದಷ್ಟೇ ಭಯಜನಕವೂ ಆಗಿದೆ. ಅದು ಅಪಾಯದ ದಾರಿಯಾಗಿದೆ. ಆದರೆ ಈ ಅಪಾಯವನ್ನು ಜೀರ್ಣಿಸಿ ಕೊಳ್ಳುವಷ್ಟು ಶಕ್ತಿ ಅಡಿಗರ ಪ್ರತಿಭೆಯಲ್ಲಿದೆಯೆಂಬುದನ್ನು ಇಲ್ಲಿಯ ವರೆಗಿನ ಪ್ರಯೋಗಗಳಿಂದ ಅವರು ಸಿದ್ಧಪಡಿಸಿದ್ದಾರೆ. ಹೊಸ ಕಾವ್ಯ ಎಲ್ಲ ಕ್ಷೇತ್ರಗಳಲ್ಲಿಯೂ ಇನ್ನೂ ಯಶಸ್ಸನ್ನು ಪಡೆದಿಲ್ಲ. 'ರೊಮ್ಯಾಂಟಿಕ್' ಸಂಪ್ರದಾಯ ತನ್ನ ಪ್ರಾತಿನಿಧಿಕ ಕವಿಗಳನ್ನಲ್ಲದೆ ಬೇಂದ್ರೆಯವರಂಥ ಬಹುಮುಖ-ಪ್ರತಿಭೆಯ, ಅಕ್ಷಯ-ಶಕ್ತಿಗಳ ಕವಿಯನ್ನು ಕೊಟ್ಟಿದೆ. ನವ್ಯಮಾರ್ಗ ಇನ್ನೂ ತನ್ನ 'Waste Land'ನ್ನೂ ಕೊಟ್ಟಿಲ್ಲ. ಪುರಾಣಕತೆಗಳ ಪುನರ್ಜನ್ಮ ( revival of myths )ವನ್ನು ಸಾಧಿಸಿಲ್ಲ. ಸಾಂಕೇತಿಕತೆಯನ್ನು ಸಂಪೂರ್ಣವಾಗಿ ಉಪಯೋಗಿಸಿಕೊಂಡಿಲ್ಲ. ಕನ್ನಡ ಜನತೆಯ ಸಂಸ್ಕಾರ, ಅಭಿರುಚಿ, ವೃತ್ತಿಪ್ರವೃತ್ತಿಗಳು, ವಿಚಾರಸರಣಿ, ದೃಷ್ಟಿಕೋನ, ಕಲ್ಪಕಶಕ್ತಿ ರೀತಿ-ನೀತಿಗಳಿಗೆ ಅನುಗುಣವಾಗುವಂತೆ, ಸಹಜವಾಗುವಂತೆ ಹರಡಿಕೊಂಡಿಲ್ಲ. ವಿಜ್ಞಾನದ ಪ್ರಗತಿಯ ಮೂಲಕವಾಗಿ ಈಗ ಜಗತ್ತು ತೀರ ಹತ್ತಿರ ಬಂದಿರಬಹುದು. ಆದರೆ ಜಗತ್ತಿನ ಯಾವ ಕವಿಯ ಕೂಗೂ ಇಡೀ ಜಗತ್ತಿಗೇ ಕೇಳಿಸುವಷ್ಟು ದೊಡ್ಡದಾಗಲಾರದು. ಶೇಕ್ಸಪಿಯರ್ ಕವಿ, 'ರೋಜ್ ಹಾಗೂ ಡ್ರರಿಲೇನ ಥಿಯೇಟರಿ'ನ ಶ್ರೋತೃವರ್ಗಗಳಿಗೆ ಮಾತ್ರ ನಾಟಕಗಳನ್ನು ಬರೆದ; ಹೋಮರನದು ಅಥೆನ್ಸ ನಗರಕ್ಕೆ ಮಾತ್ರ ಪರಿಮಿತವಾಗಿತ್ತು. ಯಾವ ಕವಿಯೂ ತನ್ನ ಕಾಲ-ದೇಶಗಳನ್ನು ಮೀರಿ ಹೋಗುವಂತಿಲ್ಲ. ಹೊಸ ಕವಿಗಳು ನಮ್ಮ ಜೀವನದ ಸಮಗ್ರತೆಯನ್ನು ಇನ್ನೂ ಪ್ರತಿಬಿಂಬಿಸಿಲ್ಲ. ಅಡಿಗರಿಂದ ನಾವು ಇವೆಲ್ಲವನ್ನು ಅಪೇಕ್ಷಿಸಬಹುದಾಗಿದೆ. ಅವರ ಜನ್ಮಜಾತವಾದ ಪ್ರತಿಭೆ ಹಾಗೂ ಆಳವಾದ ಅಭ್ಯಾಸಗಳೆರಡೂ ಈ ಆಸೆಯನ್ನು ಹುಟ್ಟಿಸುತ್ತವೆ. ಈ ಅಲ್ಪಾವಧಿಯಲ್ಲಿ ಹಲವಾರು ಕ್ರಾಂತಿಗಳಾಗಿ ಹೋದವು. ಆದರೂ ಕಾವ್ಯಧರ್ಮ ತೊಂದರೆಗೀಡಾಗಿಲ್ಲವೆಂಬುದು ಸಂತೋಷದ ಮಾತಾಗಿದೆ. ಬಿ. ಎಂ. ಶ್ರೀಯವರ ಸಮರ್ಥವಾದ ನೇತೃತ್ವದಲ್ಲಿ ನಡೆದ ಕಾವ್ಯ ಅನೇಕ ಪೂರ್ಣಫಲಗಳನ್ನು ಕೊಟ್ಟಿದೆ. ಅದೇ ಉತ್ಸಾಹ ಅಭಿಮಾನಗಳಿಂದ, ಕಾವ್ಯಶ್ರದ್ಧೆಯಿಂದ ಹೊಸ ಕವಿಗಳು ಮುಂದರಿದರೆ ಕನ್ನಡ ಕಾವ್ಯಪ್ರವಾಹ ಹರಿಗಡಿಯದೆ ಸುಸೂತ್ರವಾಗಿ ಸಾಗುತ್ತದೆಂಬುದರಲ್ಲಿ ಯಾವ ಸಂಶಯವೂ ಇಲ್ಲ.



ದಿ. ಶಾಂತಕವಿ



ದಿ. ಪಂಜೆ ಮಂಗೇಶರಾಯರು



ಮುಳಿಯ ತಿಮ್ಮಪ್ಪಯ್ಯ ನಾರಾಯಣರಾಯರು



ಸಾಲಿ ರಾಮಚಂದ್ರರಾಯರು



ಪು. ತಿ. ನ.



ನಾರಾಯಣ ಸಂಗಮ



ಮೇವುಂಡಿ ಮಲ್ಲಾರಿ



‘ ಗೀತಾಪ್ರಿಯ ’



ಎಸ್. ವಿ. ಕೃಷ್ಣಮೂರ್ತಿರಾವ್



‘ ಹೇಮಂತ ’



‘ ಸಾಕ್ಷಿ ’



ಎಸ್. ವಿ. ಪರಮೇಶ್ವರಭಟ್ಟ



ಸೇಡಿಯಾಪು ಕೃಷ್ಣಭಟ್ಟ



‘ ಅಂಬಿಕಾತನಯದತ್ತ ’



ಕು. ವೆಂ. ಪು.



ವಿನಾಯಕ



ಈಶ್ವರ ಸಣಕಲ್ಲ



ಡಿ. ಎಸ್. ಕರ್ಕಿ



ಜಿ. ಎಸ್. ಶಿವರುದ್ರಪ್ಪ



ಜಿ. ಆರ್. ಪಾಂಡೇಶ್ವರ



ಗೋವಿಂದ ಪೈ



ದಿ ಪೇಜಾವರ ಸದಾಶಿವರಾಯ



'ರಸಿಕರಂಗ'



ಎಂ. ಗೋಪಾಲಕೃಷ್ಣ ಅಡಿಗ



ಕೆ. ಎಸ್. ನರಸಿಂಹಸ್ವಾಮಿ



ಚೆನ್ನವೀರ ಕಣವಿ



ಶಂಕರ ಮೊಕಾಶಿ (ಪುಣೇಕರ)



ಅರವಿಂದ ನಾಡಕರ್ಣಿ



ಗಂಗಾಧರ ಚಿತ್ತಾಲ



ಎ. ಕೆ. ರಾಮಾನುಜನ್



ವ್ಹಿ. ಜಿ. ಭಟ್ಟ



ಕಡೆಂಗೋಡ್ಲು ಶಂಕರಭಟ್ಟ



ಕೀರ್ತಿನಾಥ ಕುರ್ತಕೋಟಿ



'ಅಂಬಿಕಾತನಯದತ್ತ'



# ಕಾವ್ಯ

ಅದರೊಳಗಂ ಕಿಸುವೊಳಲಾ
ವಿದಿತಮಹಾ ಕೊಪಣನಗರದಾ ಪುರಿಗೆರೆಯಾ ।
ಸದಭಿಸ್ತುತಮಪ್ಪೊಂಕುಂ-
ದದ ನಡುವಣ ನಾಡೆ ನಾಡೆ ಕನ್ನಡದ ತಿರುಳ್ ।

—ನೃಪತುಂಗ

ಧಾರವಾಡದ ಮ್ಯಾಗ ಏರಿ ಬಂದಾವ ಮೋಡ ।
ಘೊರಿಯೆ ನೋಡೆಪ್ಪ ಕವುಕಾಳ । ಕಟ್ಟೀಮ್ಯಾಲ
ಘೋರ್‍ಯಾಡತಾನ ಮಳಿರಾಯ ॥

—ಜಾನಪದ ಕಾವ್ಯ

## ಪರಿವಿಡಿ

## ೧. ಸೂಸಿ ಹರಿದಾಳ ಭಾಗಿರ್ತಿ

( ಶಿವಾನಂದ ಜೋಶಿಯವರ ಸಂಗ್ರಹದಿಂದ )

ಬೀಸಾಕ ಕುಂತರ ಬ್ಯಾಸರಿಕಿ ನನಗಿಲ್ಲ
ಕೂಸ ಕಂದಮ್ಮ ತೊಡಿಮ್ಯಾಲ । ಮಲಗಿದರ
ಸೂಸಿ ಹರಿದಾಳ ಭಾಗಿರ್ತಿ ॥

ಹೇಸಿ ನಿನ ಬದುಕೀಗೆ ಆಸಿ ಮಾಡುವರ್‍ಯಾರ
ಈಶ್ವರನ ದಯೆಯು ನನ ಮ್ಯಾಲ । ಇದ್ದ್ವರ
ಸೂಸಿ ಹರಿದಾಳ ಭಾಗಿರ್ತಿ ॥

* * *

ಕಾಡಿಗಿ ಕುಡಿಹಾಂಗ ಏರಿ ಬಂದಾವ ಮಾಡ
ನೋಡೊ ನಮ್ಮವರ ಹೊಸ ಮಾಗಿ । ಹೊಲದಾಗ
ಕೂಡಿಸತಾನ ಮಳಿದೇವ ॥

ರಾಜರಾಜರ ಗಂಡ ರಾಜಪಂಡಿತ ಗಂಡ
ರಾಜ್ಯಾದ ಗಂಡ ಮಳಿಯಪ್ಪ-। ನಾದರ
ಭೂಮೆಲ್ಲ ತನುವನಾದೀತೊ ॥

* * *

ಕರ್‍ರನ್ನ ಎರಡೆತ್ತು ಕರಕೀಯ ಹೊಲ ಮಾಡಿ
ಕಾಡಿಗ್ಗಣ್ಣಿನ ಸೊಸಿ ಬಂದ । ಕಾಲಕ್ಕ
ಕಾಡಾಟ ಕಡಿತನಕ ಬಿಡಲಿಲ್ಲ ॥

ಬೆಳ್ಳನ್ನ ಎರಡೆತ್ತು ಹಳ್ಳಾದ ಹೊಲ ಮಾಡಿ
ಮೆಳ್ಳುಗಣ್ಣಿನ ಸೊಸಿ ಬಂದ । ಕಾಲಕ್ಕ
ನೆಳ್ಳು ಕಡಿತನಕ ಬಿಡಲಿಲ್ಲ ॥

* * *

ಅಕ್ಕತಂಗೇರ ಧನಿಯು ರೊಕ್ಕ ಬಾರಿಸಿಧಾಂಗ
ಹುಕ್ಕೇರಿ ನವಿಲು ಕುಣಿಧಾಂಗ । ರಾಮದುರ್ಗ
ಹೊತ್ತೇರಿ ತಾಸ ಬಡಿಧಾಂಗ ॥

ಅಕ್ಕತಂಗೇರು ನಾವು ಜೋಡೀಲಿ ಬರುವಾಗ
ಘಾನಾಗ್ಯಾವ ದೂರ ಪಾರಿವಾಳ । ನನ್ನಕ್ಕ
ನಾಳೆ ಬರತೀನಿ ಕೈ ಬಿಡ ॥

ಬಳಗ ಬರತೈತಂತ ಬೆಳತನಕ ಎದ್ದಾರ
ಬೆಳಗಾಂವಿ ಬೆಲ್ಲ ತರಸ್ಯಾರ । ಕರಿಸ್ಯಾರ
ಬಳಗಕ್ಕಾಕ ಊಟ ಉಣಿಸ್ಯಾರ

* * *

ಬೀಸೂದು ಬಿರಿ ಭಾಳ ಕುಟ್ಟೂದು ಕುಸಿ ಭಾಳ
ರೊಟ್ಟಿ ಮಾಡೂದು ಜಳ ಭಾಳ । ಅತ್ತೇರ ಮನಿಯು
ಹ್ಯಾಂಗಿದ್ದು ಬರಲೆ ಹಡೆದವ್ವ ॥

ಮಾತು ಮಾತಾಡುದ್ರ್ಯಾಗ ಮಾತು ರಂಗಿಗೆ ಬಂದು
ಮಾತೇನ ಇವರ ಹಿತವೇನ । ಹಿರಿ ಹೊಳಿಯು
ಗಾತ ಗಂಗ್ಯಾಗ ಕೈಬಿಟ್ಟಿ ॥

* * *

ಬೀಸ ಕುಂತವಳ ಮೈ ರೇಸಿಮಿ ಹೊಳೆಧಾಂಗ
ಏಸರಾಗ್ಹೋಳ ನನ ಮಗಳ । ಜಾನವ್ವ
ರೇಶಿಮಿ ತಂದು ಮುಡಿಸೇನು ॥

ಬಸರ್ಹಿಂಗ್ಸು ಬಯಸ್ಯಾಳ ಮಸರು ಕಲಿಸಿದ ಬುತ್ತಿ
ಹೊಳೆಸಾಲಿನ್ಹರದಿ ನಮ ತಂಗಿ । ಬಯಸ್ಯಾಳ
ಹಸರು ಬಳಿ ಮುಂದ ಹರಡಿಯು ॥

ಬಾಣಂತಿ ನನ ತಂಗಿ ಬಾಯಾಗ ಎಲಿ ಹಾಕ
ಬಾಲನ ಮ್ಯಾಲೆ ಸೆರಗ್ಹಾಕ । ಕಂದಮ್ಮಗ
ದೃಷ್ಟಿ ತಾಕೀತು ಒಳಗ್ಹೋಗ ॥

ತಿಂಗಳದ ಬಾಣಂತಿ ಅಂಗಳಕ ಬಂದಾಳ
ಬಿಸಿನೀರು ಬೆಂಕಿ ನಗತಾವ । ನನ ಮಗಳ
ಹಸಗೂಸಿನ ತಾಯಿ ಒಳಗ್ಹೋಗ ॥

ಉತ್ತತ್ತಿ ಬಣ್ಣದ ಸೀರಿ ಒಡಲಾಗ ತೆಂಗಿನಕಾಯಿ
ಎಡಗೈಯಾಗೆಡಿಯ ಹಿಡಿದಾಳ । ನನ ಬಾಲಿ
ಹಣಮಪ್ಪಗ್ಹೋಗಿ ಬರತಾಳ ॥

ಊರು ಕಂಡಲ್ಲೂಟ ನೀರು ಕಂಡಲ್ಲೆ ಜಳಕ
ನಾರಿ ಕಂಡಲ್ಲೆ ಚಲ್ಲಾಟ । ನನ ಬಾಳಾ
ತಾಯಿ ಕಂಡಲ್ಲೆ ಹಸುಮಗ ॥

ಬೆಳ್ಳನ ಬಿಳಿಯೆಲಿಗೆ ಎಲ್ಲಿತ್ತು ಗೋಟಡಿಕಿ
ನೆಲ್ಲ-ತೆನಿ ಹಾಂಗ ಬಳಕೂವ । ಮಗಳೀಗಿ
ಎಲ್ಲಿದ್ದ್ಯೋ ಗೂಗಿಮುಖದವನ ॥

* * *

ಬಡತನ ನನಗಿರಲಿ ಬಲ್ಲೀದ ಮಗನಿರಲಿ
ಕಲ್ಲ, ಘಡಿಯಾನ ಒರತಿಽಯು । ನೀರಿನ್ಹಾಂಗ
ನಿಲ್ಲಽದ ನಡಿಸೊ ಗುರುರಾಯ ॥

* * *

( ಜಿ. ಆರ್. ಹೆಗಡೆಯವರ ಸಂಗ್ರಹದಿಂದ )

ಗೀತ ಹೇಳಿದರು ಆಲಿಸಿ ಕೇಳ್ವರಿಲ್ಲ
ಮಾಣಿ ಕೇಳವನೆ ಮಠದಲ್ಲಿ
ತಿರುಪತಿ ಗೋವಿಂದ ಕೇಳವನೆ ಗಿರಿಮೇಲೆ ॥

ನೀರಿಲ್ಲದ ಕೆರೆಯಲ್ಲಿ ಬೇರಿಲ್ಲದ ಗಿಡ ಹುಟ್ಟಿ
ತೊಟ್ಟಿಲ್ಲದ ಹೂವೂ ಅರಳುವದೂ ಸ್ವಾಮಿ ।
ತಂಗಿ ಗಂಡನಿಲ್ಲದ ಮಗನ ಪಡೆವಳೂ ॥

* * *

ಹೊನ್ನೂರ ಹೊಳೆಯಲ್ಲಿ ತಣ್ಣೀರ ಸಾನಮಾಡಿ
ಕನ್ನಡಿ ತೆಗೆದಿ ಮೊಕ ನೋಡಿ । ಅಣ್ಣಯ್ಯ
ಹನ್ನೆರಡು ರಾಜ್ಯವು ತನಗೆಂದ ॥

ಪಟ್ಟೆ-ದೋತರವ ಹೆಗಲ ಮೇಲಿಟ್ಟು ಬರುವನ್ಯಾರು ಬಯಲಲ್ಲಿ
ಏಕೈಕ ರಾಣಿ ದ್ರೌಪದಿ ಕಲ್ಯಾಣಿ ಏನಾಗಬೇಕು ಅವ ನಿನಗೆ
ಕುದುರೆ ಪಲ್ಲಂಕಿ ಚದುರಂಗ ಸತ್ತಿಗೆ ಅವ ನನ್ನಣ್ಣನಾಗಬೇಕು ॥

ಅಪ್ಪನ ಮನೆಯ ಪಾಯಸೆಂಬುದ ಕೇಳಿ
ಏಳ್ಹೊಳೆ ದಾಟಿ ಉಣ ಬಂದೆ । ಅಪ್ಪಯ್ಯ
ಮಾಡಿಸು ಮಗನ ಮದುವೆಯ । ಅಪ್ಪಯ್ಯ ।
ಪಾಯಸೆಂಬುದೂ ಅಪರೂಪ ॥

ಅಳಿಯನ ನೋಡಿದರೆ ವರದ ಪುತ್ತಳಿ ಬಣ್ಣ
ವರುಷವೆ ಹತ್ತೂ ಹದಿನೈದು । ಮಾವಯ್ಯ
ಕೊಡಬಹುದು ನಿನ್ನ ಮಗಳನ್ನ ॥

ಕಾಕೆಗಿಂತ ಕರಿಯನೂ ಸೂಜಿಗಿಂತ ಸಪುರನೂ
ಅತ್ತೆ ಮಾವಗಿಂತ ಹಿರಿಯನೇ । ತಾಯಿ ಕೇಳು
ಏನು ಕಂಡು ಮಗಳ ಕೊಡುತೀರಿ ।

ಕಾಕೆಯಷ್ಟು ಕರೀಕಿಲ್ಲ ಸೂಜಿಯಷ್ಟು ಸಪುರಕಿಲ್ಲ
ಅತ್ತೆ ಮಾವಗಿಂತ ಹಿರಿಯಲ್ಲ । ನನ್ಮಗಳು
ಪಂಜರದಲ್ಲಾಡೋ ಗಿಳಿಯಲ್ಲ । ಹಾರಾಡೋ
ಗಿಳಿ ಕೂಡಾಡೋ ನನ್ಮಗಳು ॥

ಹುಟ್ಟಿದ್ಹೆಣ್ಮಕ್ಕಳು ಮೆಟ್ಟಿಲ ಇಳಿವಾಗೆ
ಹೊಟ್ಟೇಲಿ ತೊಡವು ಹೊಯ್ದಂತೆ । ಹೆಣ್ಮಕ್ಕಳು
ಹುಟ್ಟಬಾರದೇಳು ಜಲುಮಕ್ಕೆ ॥

ಪಡೆದ ಹೆಣ್ಮಕ್ಕಳು ನಡುಮನೆಯ ಇಳಿವಾಗೆ
ಕದಕದಡಿ ತೊಡವು ಹೊಯ್ದಂತೆ । ಹೆಣ್ಮಕ್ಕಳು
ಹುಟ್ಟಬಾರದೇಳು ಜಲುಮಕ್ಕೆ ॥

ಈ ಮನೆಯ ತೊಟ್ಟಿಲ ಆ ಮನೆಯೊಳ್ ಕಟ್ಟಿದೆ
ಜೋಗುಳ ಎಂದು ಸಲುಹೀದೆ । ಮಗ
ಗಂಡನ ಮನೆಗ್ಹ್ಯಾಂಗೆ ಕಳಿಸಲಿ ॥

ಕನ್ನಡಿ ಕಟ್ಟಿದ ಕಂಬ ಕತ್ತಲೆಯಾದವು
ಪುತ್ರಿ ತಂಗಮ್ಮ ಮನೆಗೆದ್ದು । ಹೋಗ್ವಾಗ
ಕತ್ತಲೆಯಾಯ್ತು ಮನೆಯೆಲ್ಲಾ ॥

ಚಿನ್ನ ಕಟ್ಟಿದ ಕಂಬ ಖಿನ್ನ ಯಾಕಾದವು
ನಾರಿ ತಂಗಮ್ಮ ಮನೆಗೆದ್ದು । ಹೋಗ್ವಾಗ
ಖಿನ್ನಗಳಾಯಿತು ಮನೆಯಲ್ಲಾ ॥

ಹೆಣ್ಣ ಕಳುಹಿಸಿ ಬಂದು ಪಟ್ಟೆಮಂಚದ ಮೇಲೆ
ಪಟ್ಟೆ ಹಚ್ಚಡವ ಮುಸುಕಿಟ್ಟು । ಹೇಳಿದನೆ
ಹೆಣ್ಣು ಹುಟ್ಟಬಾರದು ನಾಕೇಳು ಜಲುಮಕ್ಕೆ ॥

ನೀರಿಗೋದಲ್ಲಿ ನೀಲದ ಬಳೆ ಕಂಡೆ
ನಮ್ಮೂರಿನಲಿಂತ ಬಳೆಯಿಲ್ಲ । ಬಳೆಗಾರಣ್ಣ
ನನ್ ತೌರಿಗೋಗಿ ಬಳೆಯಿಡು ॥

ನಿನ್ನ ತೌರಿಗೋಗುಕೆ ದಾರಿನೂ ಕಾಣಲಿಲ್ಲ
ತೋರಿಸಿಕೊಡೆ ನಿನ್ನ ತವರೂರು ॥

ಕಲ್ಲ ಕಟ್ಸಾರೆ ಪಂಚಾಂಗ ಬಿಡಿಸಾರೆ
ಈಳಿ ಬಾಳಿಯು ನೆಡಿಸಾರೆ । ಬಳೆಗಾರಣ್ಣಾ
ಅದ್ವಾದೊ ನನ್ನ ತೌರುಮನೆ । ಅತ್ತಿಗಿದೀರು
ಹೊನ್ನಿಗೊಂದು ಬಳೆಯ ಇಡಸೂರು ॥

ತಾಯಿ ನನ್ನಮ್ಮಗೆ ಪ್ರೀತಿ ನನಮೇಲೆ
ಮೀವಾಗ ಮಡಿಯ ಉಡುವಾಗ । ಹಿತ್ತಲದ
ಹೂವ ಕೊಯ್ವಾಗ ನೆನೆವ್ವಳು ॥

ಬಾಳೆಯ ಸುಳಿಯಂತೆ ಬಳಕುತ ಬರುವಾಗ
ನನ್ನ ಕಂಡಕ್ಕೀ ತೊಳೆವಳು । ತಾಯವ್ವ
ನಿನ್ನಾಣೆಯಾಗೂ ಹಸಿವಿಲ್ಲ ॥

ಬಾಳೆಹಣ್ಣ ನೋಡು ಬಾಳೆಲೆ ಚಂದ ನೋಡು
ನೋಡವ್ವ ತೌರ ದೌಲತ್ತು । ಅಣದೀರು
ಅಲಬತ್ತ ನಮ್ಮ ಕರೆವರು ॥

* * *

ಯಾಲಕ್ಕಿ ಆಣೆಗೂ ಜಾಣ ಮನೆಯಲ್ಲಿಲ್ಲ
ಜೀರಿಗೆ ಆಣೆ ಮೆಣಸಾಣೆ । ಮೆಂತಾಣೆ
ಕಾಯಾಣೆಯಾಗಿಯೂ ಮನೆಯಲಿಲ್ಲ ॥

ತಾಯಿ ತನ್ನ ಮಗನ ಏನೆಂದು ಕರೆವಳು
ಬಾಗಿಲ ಮುಂದಿನ ಪರ್ವತ । ಚಿನ್ನದ ಗಿಡವೆ
ಬಾಲ ಬಾರೆಂದೂ ಕರೆವಳು ॥

ತಕ್ಕವರು ಬಂದರೆ ಇಕ್ಕುವರು ಮಂಚವ
ತಕ್ಕವರಲ್ಲ ಬಡವರು । ಬಂದರೆ
ಇಕ್ಕಿದ ಮಂಚವ ತೆಗೆವರು ॥

ಗಂಡನ ಹೆಜ್ಜೆಯ ಕಂಡೆನೆಂಬಳು ಜಾಣೆ
ಹಿಂಡಕ್ಕಿ ಮೇವ ನವಿಲಿನ । ಹೆಜ್ಜೆಯ
ಕಂಡೆನೆಂಬವಳು ಕಡು ಜಾಣೆ ॥

ಗುಬ್ಬಿ ಗುಬ್ಬಿಽ ಚೆಂದ ಗುಬ್ಬಿ ಮರಿಯೊಽಽ ಚೆಂದ
ಗುಬ್ಬೋಗಿ ಮೇವ ಹೊಲ ಚೆಂದ । ಬಾಳಯ್ಯನ
ಹುಬ್ಬ ತಿದ್ದಿದರೆ ಮೊಕ ಚಂದ ॥

ಮಳೆಯು ಬಂತಂದ್ಹೇಳಿ ಮರದಡಿಗೆ ಸೇರಿದೆವು
ಮಳೆ ಬಿಟ್ಟರೂ ಮಳೆ-ಹನಿ ಬಿಡ । ದಾಯಾದ್ಯರ
ನೆರೆ ಬಿಟ್ಟರೂ ಅವರ ಹಗೆ ಬಿಡ ॥

ಸೂಳಿಗೆ ಸುತ್ತಿನ ವಾಲೆ ನಾರಿಗೆ ಮುತ್ತಿನ ವಾಲೆ
ಮನೆಯ ಹೆಂಡತಿಗೆ ಮಡಲ ವಾಲೆ । ತಮ್ಮಯ್ಯ
ಮೆಚ್ಚಿ ಬಂದ ಹೆಂಗಸಿಗೆ ಹಳವಾಲೆ ॥

ತಂಗಿಯ ಕೊಡಬೇಕು ತೆಂಗಿದ್ದ ಊರಿಗೆ
ತೆಂಗಿನ ಹಾಲೂ ಬಿಸಿ ಹಾಲೂ । ಆದರೆ
ತಂಗಿಯ ಗೊಡವೆ ನಮಗಿಲ್ಲ ॥

ಹಣ್ಣಡಿಕೆ ಬಿದ್ದಿ ಕೈಯಿನ ಬಳೆ ನಗ್ಗಿ
ಅಣ್ಣಗೊಂದು ವಾಲೆಯು ಬರದಾಳೆ । ಅಣ್ಣ ಕಳಿಸು
ಹಣ್ಣಡಕಿ ನೂರು ಬಳೆ ನೂರು ॥

ಸಣ್ಣಕ್ಕಿ ಉಂಬಕೆ ಚೆನ್ನಿಗನ ಬರಹೇಳು
ಹೊನ್ನು ಬೇಡ ಅವನ ಹಣವು ಬೇಡ । ಅಣ್ಣಯ್ಯನ
ಕಣ್ಣಲ್ಲಿ ಕಾಣಬೇಕು ಬರಹೇಳು ॥

ಹಾಡಿನ ದನಿ ಕೇಳಿ ಹೂಡೂಕೋದಣ್ಣ ಬಂದ
ಹಾಡಿಲೆ ತಂಗಿ ದನಿ ಚೆಂದ । ನಿನ್ನಯ
ಹಾಡ ಕೇಳಿದರೆ ಹಸುವಿಲ್ಲ ॥

ಅಣ್ಣ ಇದ್ದರೇನು ತಮ್ಮ ಇದ್ದರೇನು
ನನ್ನ ಕೈತಡದ ಪುರುಷರು । ಇದ್ದರೆ
ಕೆನ್ನೀಗೆ ಕೇದಗೆ ಮುಡಿಬಹುದು ॥

೨. ನೀಯೂರಿಗ್ಹೋಳತಿ

( ಲಾವಣಿಯ ಧಾಟಿ )

ಹೊಲಾ ಹೊಡೀತೀ ।
ಹಸನ ಮಾಡತೀ ।
ಬೀಜಾ ಹಾಕತೀ ಕಾಯಸತೀ ॥

ಬೆಳೀ ನೋಡತೀ ।
ಕೋಲಿಗೆ ಬಂತಂತಿ ।
ಹೆರವರ್ ಚಂಡಿಯಾಡಿದಾರ ಯಾರಿಗ್ಹೇಳತೀ ॥
ನೀ ಯಾರಿಗ್ಹೇಳತಿ ॥

ಕುಡಗೋಲ ಹಾಕತೀ ।
ಗೂಡ ಬಡೀತೀ ।
ಹೋಳ್ಗೀ ಹುಗ್ಗೀ ತಂದು ಗೂಡಿಗೆಡೆ ಮಾಡತೀ ॥
ಕಣದ್ಹಬ್ಬ ಮಾಡತೀ ।
ರಾಸೀಯ ಕಟ್ಟತೀ ।
ಮೇಟಿಗೆ ಕಟ್ಟಿ ರಾಸೀ ವೈದರ ಯಾರಿಗ್ಹೇಳತೀ ॥

ಬಣವೀ ಒಟ್ಟತೀ ।
ಬೇಲೀ ಹಚ್ಚತೀ ।
ಬಳಕೀ ತಗೀತೀ ಆಳಿಡತೀ ॥
ಎಚ್ಚರದಿಂದ ಕಾಯುತೀ ।
ಲೆಕ್ಕದಮ್ಯಾಗ ಮೇಸತೀ ।
ಹೆರವರ್ ಬಣವೀ ಹೇರಿದರ ಯಾರಿಗ್ಹೇಳತೀ ॥

ಹಗಲೆಲ್ಲ ದುಡೀತೀ ।
ಹೈರಾಣ ಆಗತೀ ।
ರಾತರನ್ಯಾಗ ನಿದ್ದಿ ಬಂದು ನೀ ಬೀಳತೀ ॥
ಮನಿ ತುಂಬ ಬಾಳೇವು ।
ಹಾಂಗ ಬಿದ್ದಿರತೈತಿ ।
ಬೆಳತಂಕ ಮನಿ ಕಾಯಾಕ್ಯಾರಿಗ್ಹೇಳಿರತೀ ॥

ಹೇಣತಿನ್ನ ಮಾಡಿಕೋಂತಿ ।
ಮನೀ ತುಂಬಿಸಿಕೋಂತಿ ।
ಮನದಾಗ ಮಾರೀ ನೋಡಿ ಬಾಳ ಹಿಗ್ಗತೀ ॥
ಬಾಳೇವ ಮಾಡೇನಂತಿ ।
ಎಲ್ಲಾನು ಬೇಕಂತಿ ।
ಹೇಣತಿ ಬಾಳೇವೊಲ್ಲೊಂತ ಬಿಟ್ಟರ್ಯಾರಿಗ್ಹೇಳತೀ ॥

ಸಾಲಾನ ಕೊಡತೀ ।
ಸಾವ್‌ಕಾರಕಿ ಮಾಡತಿ ।
ಕತಬಿ ಬರಿಸಿಕೋಂತಿ ಬಡ್ಡೀ ತಿಂತೀ ॥

ಕೊಟ್ಟಿದ್ದ ಹೌದಂತಿ ।
ಬಡ್ಡೀನ ಮುಟ್ಟ್ಯೈತಂತಿ ।
ಪುಟ್ಟ್ಯಾಪೂರಾ ಮುಳುಗಿಸಿಬಿಟ್ರೆ ಯಾರಿಗ್ಹೇಳತೀ ॥

ಅಣ್ಣಾ ತಮ್ಮರ ಕೂಡ ।
ಕುಸ್ತೀ ಹಿಡೀತೀ ।
ಹಿರೇರ ಮಾಡಿದ ಬಾಳೇವ್ಯೈತಿ ನೆಟ್ಟಗ್ಹಂಚಂತೀ ॥
ನೀರಾಗಿ ಹರಿದಾಡತೀ ।
ದೈವಾನ ಕೂಡಸತೀ ।
ಹಿಸೇನ ಕೊಡದಿದ್ದರ ಯಾರಿಗ್ಹೇಳತೀ ॥

ಉಂಗುರಾ ಇಡತೀ ।
ಉಡದಾರ ಕಟ್ಟ್ಯತೀ ।
ಜರತಾರಿ ಪಾವಡಾ ತಿದ್ದಿ ತಿದ್ದಿ ಸುತ್ತತೀ ।
ಊರಾಗ್ಹರದಾಡತೀ ।
ಬಡವರನ ಬೆದರಸತೀ ।
ಅಲ್ಲೀ ನಿನ್ನ ಸುಲಕೊಂಡಬಿಟ್ಟರ್‍ಯಾರಿಗ್ಹೇಳತೀ ॥

ಕುಸ್ತೀ ಹುಡುಗನಂತಿ ।
ಕ್ಯಾವೀ ಬಟ್ಟೀ ತೊಡತೀ ।
ಖಂಡಾ ಬೆಳಸಿ ಹುಳ್ಳೀಹಾಂಗ ಮುಸಗುಟ್ಟ್ಯತೀ ॥
ಕಾಮನ್ಹಾಂಗ ಮೆರೀತೀ ।
ಊರಾಗ್ಹಾವಳೀ ಮಾಡತೀ ।
ಚಾವಡ್ಯಾಗೋದು ಕುಂಡರಸಿಬಿಟ್ರೆ ಯಾರಿಗ್ಹೇಳತೀ ॥

ಹಿರೇ ಪಾವಡಾ ಹಾಕತೀ ।
ಕಟ್ಟಿಮ್ಯಾಗ ಕುಂಡರತೀ ।
ಹೋಗಬರೋ ಮಂದೀ ಬಾಳೇವೆಲ್ಲ ಕೇಳತೀ ॥
ಹಿರೇತನ ಮಾಡತೀ ।
ನ್ಯಾಯಾ ಹರ್‍ಯಾಕ ಬರತೀ ।
ನೀ ಯಾರಂತ ಮಾರಿಮ್ಯಾಲ್ ಬಡದರ ಯಾರಿಗ್ಹೇಳತೀ ॥

ಯಾಪಾರಕ್ಹೋಗತೀ ।
ಸರಕ ತುಂಬತೀ ।
ಸರ್‍ರಾತ್ರ್ಯಾಗ ಬಂಡಿ ಹೊಡಕೊಂಡ್ಹೊಳ್ಳಿ ಬರತೀ ॥

ಸಂತ್ಯಾಗ ತರತೀ ।
ಬೇಗ ಮಾರೇನಂಬುತೀ ।
ಸಂತ್ಯಾಗ ಜಾಗಾ ಕೊಡದಿದ್ದರ ಯಾರಿಗ್ಹೇಳತೀ ॥
ನೀರಡಿಸಿರತೀ ।
ಕೊಡಾ ತಗೊಂತೀ ।
ಹೊಂಡದ್ಹೊಳಿ ದಾರೀ ಹಿಡದಕ್ಯಾಸ ಹೋಗತೀ ॥
ಒಳೇ ಒತ್ರಾ ಮಾಡತೀ ।
ಕೊಡಪಾನ ತುಂಬತೀ ।
ತುಂಬಿದ ಕೊಡಪಾನೊಯ್ಗೊಡದಿದ್ದರ್‍ಯಾರಿಗ್ಹೇಳತೀ ॥

ಬ್ಯಾನೀ ಬೀಳತೀ ।
ಬಾಳ ನೆಳ್ಳಸ್ಯಾಡತೀ ।
ಡಾಗದಾರ್ಹಂತ್ಯಾಕ್ಹೋಗಿ ಅಗಸುದ್ದೆ ಬೇಡತೀ ॥
ಬಿದ್ದ ಹೇಳಕೊಳ್ಳತೀ ।
ಬಿದ್ದದ್ದ ಕೊಡತೇನಂತಿ ।
ದಾಗದಾರಗಸುದ್ದೆ ಕೊಡೊದಿಲ್ಲಂದ್ರ ಯಾರಿಗ್ಳೇಳತೀ ॥

ಗೌಡಗ್ಹೇಳತೀ ।
ಫೋಜ್‌ದಾರಗ್ಹೇಳತೀ ।
ಮಾಮಲೇದಾರಕಡಿಗೆ ಬಂದು ಅರ್ಜಿ ಕೊಡತೀ ॥
ದಿಮಾಕ ಮಾಡತೀ ।
ಸಾಬರ್ಹಂತ್ಯಾಕ್ಹೋಗತೀ ।
ಇವರೆಲ್ಲರ್‍ಯಾರಂತ ನೀ ತಿಳದಿರತೀ
( ನಿನ್ನ ಅರ್ಜಿ ಹಿಡಿಯದಿದ್ದರೆ ನೀನು )

ಅಳತೀ ಕರೀತೀ ।
ರಂಬಾಟ ಮಾಡತೀ ।
ಕೈಕಾಲ ಬೀಳತೀ ಬೇಡಿಕೊಳ್ಳತೀ ॥
ಮಕ್ಕಳ ಮರಿಗಳ ತೋರಸ್ತೀ ।
ತಂದ ಅಡ್ಡ ಕೆಡವತೀ ।
ಬಾಳ ಗಾತ ಆಗೇತೆಂತೀ ಬಾಯ ಬಿಡತೀ ॥

ಊರಾನ್ನ ರಯತಂತಿ ।
ಶೆಟ್ಟಿ ಸಾವಕಾರನಂತಿ ।
ದುಡಕೊಂಡು ತಿಂಬೊ ಬಡವನಂತಿ ತಿರಕನಂತೀ ॥

ಬಿಟ್ಟಿಬೇಗ್ರಿ ಮಾಡತೇನಂತಿ ।
ಬಾಳಬಾಳ ತೋಡಿಕೊಂತೀ ।
ಕರಿಸಿದಾಗ ಅಷ್ಟ ಮಾತರ ಮಾರಿ ತಪ್ಪಿಸತೀ ॥

ಕಾವಳದಾಗ ನಡೀತೀ ।
ದಾರಿ ಬಿಟ್ಟಿಬಿಡತೀ ।
ಅಡವೀ ಪಾಲಾಗತೀ ನೀ ಕೆಡತೀ ॥
ನಾನ ಶಾಣ್ಯಾ ಅನ್ನತಿ ।
ಮಾಡಬಾರದ್ದ ಮಾಡತೀ ।
ಇದ್ದಟ್ಟ ಬುದ್ದಿ ಕಳಕೊಂತಿ ಬಳಿಕಳತೀ ॥

ಸುಳ್ಳ ಮಾಸಿ ಹೊರತೀ ।
ಮೈಯಾಗಿಲ್ಲ ಸಗತೀ ।
ನಿನ್ನದ ನೀನು ಕಾಯ್ಲಾರದ್ಯಾತಕಳತೀ ॥
ಬಡ್ಡೀನ ಬಿಡತೀ ।
ಟೊಂಗಿಗೆ ನೀರ ಹಣಿಸತೀ ।
ಗಿಡಾ ಚಿಗತ ಬರತೈತೆಂತ ಸುಳ್ಳ ಉಬ್ಬತೀ ॥

ಮನೀ ಮಾರು ನನ್ನದಂತೀ ।
ದೇಶದ ಗುರ್ತ ಇಲ್ಲವಂತಿ ।
ದೇಶಾ ಬಿಟ್ಟು ಮನಿಮಾರು ಎಲ್ಲಿ ತರತೀ ॥
ದೇಶದಾಗ ಹುಟ್ಟಿತೀ ।
ದೇಶದಾಗ ಬೆಳೀತೀ ।
ದೇಶದಾಗ ಬಾಳೇವ ಮಾಡಿ ಸತ್ತುಹೋಗತೀ ॥

ಮೈಯ್ಯಾಗ ಎಣ್ಣೈತಿ ।
ಮಾರಿಮ್ಯಾಗ ಬಣ್ಣೈತಿ ।
ಮುದಕಲ್ಲ ತದಕಲ್ಲ ಹರೇವೈತಿ ॥
ಕೂಳ ಪಡಶಾ ಮಾಡತೀ ।
ಗೂಳಿ ಹಾಂಗ ತಿರಗತೀ ।
ಉಡಾಳಮೂಳ ನಿನ್ನಿಂದುಪ್ಯಾಗ್ಯಾರಿಗೇನೈತಿ ॥

000 000

## ೩. ಶೋಕಗೀತೆ

ಹೋದುದಲ್ಲಾ ಎಲ್ಲಾ ಹೋದುದಲ್ಲಾ ।
ಹೋದುದೆಲ್ಲವು ಕಣ್ಣ ಹಿಂದೆ ॥
ಖೇದವಿನ್ನೆನಗುಳಿದುದೊಂದೆ ।
ಹೇ ದಯಾನಿಧೆ ಪ್ರೇಮದಿಂದೆ
ಹಾದಿ ತೋರಿಸಿ ನಡಿಸು ಮುಂದೆ
ಹೋದುದಲ್ಲಾ.. ॥ ೧ ॥

ತೊಡೆಯ ತೊಟ್ಟಿಲೊಳೆನ್ನನಿಟ್ಟು ।
ಕುಡಿಸಿ ಮಮತೆಯ ಗುಣವ ನೆಟ್ಟು ॥
ಬಿಡದೆ ವಿದ್ಯೆಯ ಬಾಯ್ಗೆ ಕೊಟ್ಟು ।
ನಡೆದನೆನ್ನನು ಮರುಗ ಬಿಟ್ಟು
ಹೋದನಲ್ಲಾ ಅಪ್ಪ ಹೋದನಲ್ಲಾ ॥ ೨ ॥

ಆಟದಿಂದೆನ್ನೊಡನೆ ಬೆಳೆದು ।
ಊಟಕೂಟದ ಪ್ರೇಮ ತಳೆದು ॥
ಕೋಟಲೆಯ ಸಂಸಾರ ಕಳೆದು ।
ದಾಟಿದನು ಮಮ ಹೃದಯ ಸೆಳೆದು
ಹೋದನಲ್ಲಾ ತಮ್ಮ ಹೋದನಲ್ಲಾ ॥ ೩ ॥

ಮನದಿ ಕೃಷ್ಣತೆಯನ್ನು ಮುಚ್ಚಿ ।
ಕನಕತನು-ಸೌಂದರ್ಯ ಬಿಚ್ಚಿ ॥
ಧನದ ಕಪಟಸ್ನೇಹ ಹಚ್ಚಿ ।
ಕೊನೆಗೆ ಮಿತ್ರಭುಜಂಗ ಕಚ್ಚಿ
ಹೋದನಲ್ಲಾ ಮಿತ್ರ ಹೋದನಲ್ಲಾ ॥ ೪ ॥

ಅಲೆಯ ಬಡಿತಕೆ ಜಾರ್‍ವ ಮಳಲೋಲ್ ।
ಕೆಳಗಿಳಿವ ಹೊತ್ತೆರೆಯ ನೆಳಲೋಲ್, ॥
ತಳದ ತೂತಿನ ಗಡಿಗೆ ಜಲದೋಲ್ ।
ತಿಳಿದು ತಿಳಿಯದೆ ನೂರಬುದದೋಲ್
ಹೋದುದಲ್ಲಾ ಪ್ರಾಯ ಹೋದುದಲ್ಲಾ ॥ ೫ ॥

ತೋರದಂದದಿ ಸೇರಿ ತೋರುತ ।
ಭೂರಿ ಸುಖಸಂತಸವ ಕೋರುತ ॥

ನೀರಿನೋಲ್ ಕೈಯಿಂದ ಜಾರುತ ।
ಹಾರಿಹೋದುದು ದುಃಖ ಕಾರುತ
ಹೋದುದಲ್ಲ ದ್ರವ್ಯ ಹೋದುದಲ್ಲಾ ॥ ೬ ॥

ಅಕಟ ಈ ಸಂಸಾರದೊಳಗೆ ।
ಸಕಲ ನಾಶಕೆ ಮೂರು ಗಳಿಗೆ ॥
ಶಕಟನಂದದಿ ತಿರುಗಿ ಕೆಳಗೆ ।
ವಿಕಟ ಭಾರಕನಾದೆನಿಳೆಗೆ ॥ ೭ ॥

ಹೋದುದನು ನಾ ಮರುಗದಂದವ ।
ಗೈದು ಬಿಗಿ ವೈರಾಗ್ಯ ಬಂಧವ ॥
ಓ ದಯಾನಿಧೆ ಭಕ್ತ ಬಾಂಧವ ।
ಮೋದದಿಂದವತರಿಸಿ ಬಂದವ ॥ ೮ ॥

೦೦೦ ೦೦೦

## ೪. ಕೇಳಿಸಲೊಲ್ಲದೇನೊ ?

( ರಾಗ: ರೇಗುಪ್ತಿ ತಾಳ: ಅಟತಾಳ )

ಕೇಳಿಸಲೊಲ್ಲದೇನೊ । ಕೃಷ್ಣಾ ಕೇಳಿ ।
ಕೇಳದಂತಿರುವೆಯೇನೊ ? ॥ ಪಲ್ಲ ॥

ಬಾಳುವೆಯೊಳು ಬಲು । ಕೀಳಾದೆ ನಾನಿಂತು ।
ಏಳಿಸೆನ್ನನು ಎಂದು । ಕೇಳಿಕೊಳ್ಳುವದಿನ್ನು ॥ ಅನುಪಲ್ಲ ॥

ಯಾವತ್ತು ತಿಳಿದವನು । ಎಂಬರು ನನ್ನ ।
ನೋವು ತಿಳಿಯದಾಯ್ತೇನು ॥
ಸಾವಿರ ಕಿವಿಗಳಿದ್ದೆನ್ನಯ ಪಾಲಿಗೆ ।
ದೇವಾ ಅವೆಲ್ಲವು ಕಿವುಡಾದವೇನೊ ॥ ೧ ॥

ಈ ವಿಶ್ವವನು ತುಂಬಿ । ನಿಂತಿಹನೆಂಬೀ ।
ಭಾವಕೆ ನೀನೇನೆಂಬಿ ॥
ಆವಾವ ಜೀವರ ಭಾವವನರಿತು ನೀ ।
ಕಾವುದೆಂತೆಂಬೊ ಈ ವಚನವು ನಿನಗೆ ॥ ೨ ॥

ಭೇದಭಾವವು ಇಲ್ಲೆಂದು । ಸಾಧಿಸುವುವು ।
ವೇದಗಳೆಲ್ಲವಿಂದು ।
ಬಾಧೆಯ ಬಿಡಿಸೆಂದು ಬೇಡುವೆ ಗದುಗಿನ
ಆಧಾರಿ ದೇವನೆ ವೀರನಾರಾಯಣ ॥ ೩ ॥

ಂಂಂ ಂಂಂ

## ೫. ಪ್ರಾರ್ಥನೆ

ಏಕೆನಗೆ ಸಂತತವೂ ಭೀತಿ, ದೇವ ।
ಸಾಕುವನು ನೀನಿರಲು ಸರ್ವಸಾಕ್ಷೀ ॥ ಪಲ್ಲ ॥

ಚೇಳು ಹಾವುಗಳೆಂದು ಸಂದಿಯೊಳಗಂಜುವೆನು
ಕೀಳರುಪಟಳಕಂಜುವೆನು ಬಯಲೊಳು ॥
ಹಾಳುಮನೆಗಳ ದೆವ್ವಭೂತಗಳಿಗಂಜುವೆನು,
ಮೇಳಕಂಜುವೆನು ತುಂಬಿದ ಮನೆಯೊಳು ॥ ೧ ॥

ಸಂತೆಯೊಳು ಭೀತಿ, ಏಕಾಂತದೊಳಗೂ ಭೀತಿ,
ಎಂತಿದ್ದರೂ ಭೀತಿ ತಪ್ಪದಯ್ಯ ॥
ಎಂತೊ ಎದೆಯೊಳು ಹೊಕ್ಕು ತನ್ನ ನೆರಳನು ಭೀತಿ
ಇಂತೆನ್ನ ಸುತ್ತಲೂ ಹರಹುತಿಹುದು ॥ ೨ ॥

ಭ್ರಾಂತಿ ಮುಸುಕಿದ ಮನಕೆ ನೀನೆನ್ನ ಬಳಿಯೊಳೇ
ನಿಂತಿಹುದು ಕಾಣಿಸದು, ಕರುಣಾನಿಧೀ ॥
ಅಂತರಂಗದೊಳಾಯ್ತೊ ಭೀತಿಗಾಸ್ಪದವಿಂತು !
ಶಾಂತಿಯೆನಗೆಂತಹುದು ಕಲಿಸು, ತಂದೇ ! ॥ ೩ ॥

ಂಂಂ ಂಂಂ

## ೬. ಶ್ಯಾಮಸಂಗ ಜಗದ್ರಂಗ

ನುಡಿ ನುಡಿಯೊಳು ಮಲೆಯೆ ಮಲೆ
ಛಂದದೊಳಗೆ ಹರಿಯೆ ಹೊಳೆ
ತೆಳು ಮನದೊಳು ಮೆಲ್ಲೆಲರು
ಸುಳಿಯೆ, ಬಿರಿಯೆ ಚೆಲುವಿನರಳು

ಇರವಿದಾಗೆ ರಸ ರುಚಿರ
ಬಯಸಿದೊಂದು ನಲ್ಮೆ ಚಿರ
ಶ್ಯಾಮನೊಡನೆ ಬೇಹರಿಸುವ
ಚಿತ್ತಕಿಲ್ಲ ಕಾಹುರ ?

ಆ ಯಾ ಮೈ ನೀಲಿಗಪ್ಪು
ಅಲ್ಲೆನ್ನಯ ತಿಳಿವು ಹೆಪ್ಪು
ಎನ್ನಾಸೆಗಳೊಡೆವವಲ್ಲಿ
ಒಡವೆಗಳೆನೆ ಕಳೆಯೆ ಚೆಲ್ಲಿ
ನೂರು ಹೊಳಹಿನೆನ್ನ ಬಯಕೆ
ಸಿರಿಯೊಲು ಹತ್ತಿದೆ ಹೃದಯಕೆ
ನೀಲ ನೀಲ ಸುವಿಶಾಲ
ವ್ಯಕ್ತಿ ಮಾ ಜಾಲ ಜಾಲ
ನಾನು ನಾನೆ ಎಂಬ ಮೆರುಗು
ನೀನೆ ನೀನೆ ಎಂಬ ಬೆರಗು
ಶ್ಯಾಮಸಂಗ ಜಗದ್ರಂಗ
ತತ್ಸಂಗನೆ ನಿಸ್ಸಂಗ
ಅಂಥವಗೆಲ್ಲೆತ್ತ ಭಂಗ ?

೦೦೦ ೦೦೦

## ೭. ಇಲ್ಲೇ ಇದ್ದೇನಿದ್ದೇನಿಲ್ಲೇ

ಇಲ್ಲೇ ಇದ್ದೇನಿದ್ದೇನಿಲ್ಲೇ
ಎಂದಾ ಅಭಯದ ನುಡಿ ನಿಜವೆ ? ॥ ಪಲ್ಲ ॥

ಎಲ್ಲೆಲ್ಲೂ ಶ್ರೀಕೃಷ್ಣನ ಕಾಣುತ
ಹಿಂದಕೆ ಕಲಕಲಿಸಿತು ವ್ರಜವೇ
ತಲ್ಲೀಲೆಗೆ ಪುನರಪಿ ಸಾಕಾರವ
ಹೊಂದಲಿ ಗುರು, ತವ ಪದರಜವೇ ॥ ೧ ॥

ಮತಿಮಂದರು, ಗತಿಮುಂದರು, ಅಂಧರು
ಮುಂಗಾಣದ ಜನ ರತಿಜಡರು
ಪತನೋನ್ಮುಖ-ಜೀವರು, ತನುಮುನಪ್ರಾ-
ಣಂಗಳು ನಮನಮಗಹ ! ತೊಡರು ! ॥ ೨ ॥

ಕಲ್ಮಣ್‌ಕತ್ತಲೆ ನಿಮ್ನಪ್ರಕೃತಿಯು
ಪೃಥ್ವಿಯ ಪ್ರತಿಕಣ ಪ್ರತಿಸ್ತರವ
ಪಲ್ಲಟಗೊಳಿಸಲು ವೀಳ್ಯವನೆತ್ತಿದ
ವ್ಯೆ ಮನ ಬಲ ಯಾವನು ಅರಿವ? ॥ ೩ ॥

ಬಿದ್ದೇಳುತ ಬಂದಿವ ಬಾಗುವ ಶ್ರೀ—
ಅರವಿಂದರ ಪದಕಮಲಕ್ಕೆ
ಬದ್ಧನಿಗೂ ಉದ್ಧಾರವು ಸಾಧ್ಯವೆ?
ಇದ್ದರೆ ಎತ್ತಿರಿ ಮೇಲಕ್ಕೆ ॥ ೪ ॥

ಭೋಗಕೆ ಕೇವಲ ಕಷ್ಟವೆ ಒಟ್ಟಿತು
ಬೇಡುವೆ ಪರಿಹರಿಸಲು ಇದನು
ಮಾಗಿಸಿ ಮನ, ಶರಣಾಗತಿ ಶ್ರದ್ಧೆಯ
ನೀಡಿರಿ ಹಂಬಲದಾ ಹದನು ॥ ೫ ॥

ಬಿಸಿಲಿಗೆ ಗುಬ್ಬಿಯು ಬಾಯ್ಬಿಡುವಂತಿರೆ
ಬಾಳ್ವಿಗೆ ಬಸವಳಿದೇದುವೆನು
ಮಸೆಮಸೆದೊಬ್ಬನೆ ಎಡರಿಗೆ ಸರಿದೊರೆ
ಕೈದುಗಳಿಲ್ಲದೆ ಕಾದುವೆನು ॥ ೬ ॥

ಯಾವಾಗಲು ಕೈ ಮೀರಿದ ಮೇಲೆಯೆ
ಕಣ್ದೆರೆದೆಡಬಲ ಹುಡುಕುವವ
ಕಾವಾರಿದ ಕಬ್ಬಿಣ ಹಣಿಹಣಿದಾ-
ಯಾಸವ ಪಡುತಿಹ ದುಡುಕಿನವ ॥ ೭ ॥

ಸೊತ್ತು ಸರಕುಗಳ, ಕಲಿತಿಹ ವಿದ್ಯೆಯ
ಹೊಳೆಯ ಹೋಮವನು ಕಂಡವನು
ಹೊತ್ತಿನ ಕೊರತೆಗೆ ವಿಭ್ರಮ ವಿರತಿಗೆ
ಗೊತ್ತುಗುರಿಯ ಕಳಕೊಂಡವನು ॥ ೮ ॥

ಈ ಪರಿ ಹೋರುವ ಬಾಳಿಗೆ ಹೊಸ ಕಳೆ
ತುಂಬುವರೆಂದೇ ನೆರೆನಂಬಿ
ಆಲ್ಪರಿವೆನು ನರಗುಂದಿದ ಚೇತನ,
ನಾನಿಷ್ಠೆಯನರಿಯದ ಗೊಂಬಿ ॥ ೯ ॥

ಬಿಡು ಬಿಡು ಸರ್ವಸ್ವವನೂ ಎನುವರು
ನನಗೋ ತಿಳಿಯದು ಇದರರ್ಥಾ

ದುಡಿದುಡಿದನುದಿನ ಪಡೆದಿಹ ಫಲಗಳು
ಎಂತವು ಸಾದ್ಯಂತ ವ್ಯರ್ಥಾ ? ॥ ೧೦ ॥

ಕಳಚಿದರೊಂದೊಂದೇ ಅಭಿರುಚಿ ಅಭಿ-
ರಾಮತೆ ಅನುರಾಗದ ಲೇಪ
ಉಳಿವಸ್ತಿತ್ವವು, ಉರುಟೊರಟಾತ್ಮವೊ
ಮ್ಮೆ ತೀಡದ ಹರಳಿನ ರೂಪ ॥ ೧೧ ॥

ಹಿಂದಿನ ಸಂಸ್ಕಾರಂಗಳು, ಕಡಿಯಲು
ಬಾರದ ಇಂದಿನ ಋಣಬಂಧ
ಸಂದಣಿಸಿದ ಜಟಿಲ ವ್ಯಕ್ತಿಯ ಇಡಿ-
ಇಡಿ ಕೈಕೊಳಿ ಶ್ರೀಅರವಿಂದ ॥ ೧೨ ॥

ಇಲ್ಲೇ ಇದ್ದೇನಿದ್ದೇನಿಲ್ಲೇ
ಎಂದಾ ಅಭಯದ ನುಡಿ ನಿಜವೇ ?

೦೦೦ ೦೦೦

## ೮. ಧ್ರುವ-ಪದ

ಏನ ಪಡೆದೆ ? ಧ್ರುವ,
ಏನ ಪಡೆದೆ ?
ಬಯಸಿ ಕಂಗಾಲಾಗಿ
ಏನ ಕೇಳ್ದೆ ?
ಅದಕೇನ ಪಡೆದೆ ?
ಅಡವಿಯಲಿ ತೊಳಲಾಡಿ,
ಉಪವಾಸ ಬಳಲಾಡಿ,
ಜಪ ಮಾಡಿ, ತಪ ಮಾಡಿ,
ದೇವರೆಂದೊರಲಾಡಿ
ನೀನೇನ ಪಡೆದೆ ?
ಮಲತಾಯಿಯೆಡಗಾಲಿ-
ನಿಂದೊದೆದ ಅಪಮಾನ,—
ಮೇಲೆ, ಹಡೆದವನೆ ಕ-
ಣ್ಣಾರೆ ಕಂಡೂ ತೆಪ್ಪ-
ಗಿದ್ದನಾ ದುಮ್ಮಾನ,—
ತಾಯಿಯಲಿ ಗೋಳಿಟ್ಟು
ತೋಡಿಕೊಂಡೇಂ ಪಡೆದೆ,
ನೀ ಸಮಾಧಾನ ?
ತಾಯ್ಗುರುಳು ಕರಗಿ ಕಣ್-
ಕೋಡಿಯಲಿ ಹರಿದ ನೀರು,
ತಳಮಳಿಸಿ ಎದೆ ಬೆಂದು
ಹೊಮ್ಮಿದುಗಿ ಬೆಚ್ಚನುಸಿರು !
ಒಡನೆ ಬಂತೊಂದಾಸೆ—
ಯಿಲ್ಲದಾಸೆಯ ಸಬುದ,
ಬಡಪಾಯಿ ತಾಯಿ ಬಾ-
ಯಲಿ— ನೇತಿ ನೇತಿಯೆನಿ-
ಸಿದ ದೇವರೆಂಬವನ
ಯಾವುದೋ ಒಂದು ಹೆಸರು !

‘ ಪಡೆದು ಹುಟ್ಟಿದ ಹಸುಳೆ
ನೀನೆ’ಂದಳುವ ಅಬಲೆ !
ಆಕೆಯಿಂದೇನ ಪಡೆವೆ ?

ಮಲತಾಯಿಗೊಳ್ತನವು
ಬರಲು ದೇವರೆ ಬೇಕೆ ?
ತಂದೆ ಕಂದನಲಿ ಕಕು-
ಲಾತಿ ತೋರಿಸುವುದಕೆ
ಕೂಡ ದೇವರೆ ಬೇಕೆ ?
ಯಾರಿಲ್ಲವೇನು ?
ಅವನಾರು ? ಎಲ್ಲಿರುವ ?
ಇರುವನೋ ಇಲ್ಲವೋ ?
ಹಸಿಮುಳ್ಳು ಹಸುಳೆ, ಧ್ರುವ,
ನೀನೆತ್ತ ಬಲ್ಲೆ ಬ-
ಲ್ಲಿದರು ಬೀಸಿದ ಕವಡು ?
ಎಲ್ಲೆಡೆಯಲಿಹನೆಂದು
ಕೇಳಿ ಹೊರಟೇ ಹೊರಟೆ,
ಅಡವಿಯೊಳಗೇನ ಕಂಡೆ ?
ಅಲ್ಲೇನ ಪಡೆದುಕೊಂಡೆ ?

ಯಾರೊ ನಾರದನಂತೆ,
ಹರಿಯು ವಿಶನರಿಯಂತೆ,
ಅವ ಬಂದನಂತೆ.
ತಂಬೂರಿ ಗಾಯನದಿ
ಬಕುತಿ ಮಂತ್ರವನೂದಿ
ಭಾವುಕರ ಮರುಳಿಸುವ
ದಗದದವನಂತೆ !

ಪಿತನೊಲವಿಗೆರವಾಗಿ
ತಾಯು ಮಡಲಿಂದಗಲಿ
ನೆಲೆ-ನಾಡ ತೊರೆದ
ಕಂದಮ್ಮ ನಿನ್ನ ಮನ-
ದಳಲುರಿಯನಾರಿಸಲು,
ಅವನು ಆ ದೇವಮುನಿ
ನಿನಗೇನನೊರೆದ ?

‘ ತಮ್ಮ , ಏನೂ ಬೇಡ,
ಇದನು ಕುಡಿ ಸಾಕೆ’ಂದು
ನಾಮಸುಧೆಯೆರೆದ.
ಬೇಕಾದುದೇನು, ಧ್ರುವ ?
ನೀ ಪಡೆದುದೇನು ?

‘ ಹುಲಿ ದಾಳಿಯಿಟ್ಟರೂ
ಸಿಡಿಲೆರಗಿ ಸುಟ್ಟರೂ
ನಿರ್ಜನದ ಠಾವಿಲ-
ಟ್ಟಂಬಟ್ಟರಣ್ಯದಲಿ
ನೀನಂಜಬೇಡ;
ಕಂದರೆಯಬೇಡ.
ಇಲ್ಲೆ ಕುಳಿತಿರು ಮಗುವೆ,
ಚಲಿಸದಿರು ಅತ್ತಿತ್ತ;
ಈಗ ಬರುತಾನೆ ಹರಿ —
ನೆನೆಯುವನ ಮರೆಯಬೇಡ.’
ಎಂದು ನಾರದ ನುಡಿದ
ಕೈಕೊಟ್ಟು ನಡೆದ !

ಅಂತೆ ಹರಿ ಹರಿ ಎಂದು
ಕಾಡೊಳಿರೆ ನೀನಂದು,
ನಿಂತನಂತವ ಬಂದು
ಹರಿ ದೀನಬಂಧು !
ಅಹುದೆ ? ಇದ್ದೀತು, ಒಂ-
ದಿರಬಹುದು, ಅವನು ದೊ-
ಡ್ಡವನಂತೆ, ಬಿರುದಾತ-
ಗಿದೆ ದಯಾಸಿಂಧು !
ಇಹದಿ ಮಲೆತಾಯೊದೆತ
ಇಲ್ಲದೆಡೆ ಬೇಕೆಂದು
ಕೋರಿದರೆ ಆ ಸರ್ವ-
ಶಕ್ತನೇನಿತ್ತ ?
ಪಡೆದವನ ಪ್ರೀತಿಯಲಿ
ಸಮಪಾಲು ಬೇಡಿದರೆ,
ಸ್ವಾರಾಜ್ಯಸೌಖ್ಯದಲಿ

ಸಮತೆಯನು ಬೇಡಿದರೆ,
ಧರ್ಮವನು ಬೇಡಿದರೆ,
ನ್ಯಾಯವನು ಬೇಡಿದರೆ,
ಹರಿ ಏನನಿತ್ತ ?

ತಂದೆಯೊಲವಿಂ ದೂರ —
ತಾಯ್ಗುರುಳಿನಿಂ ದೂರ —
ನಾಡಿನಿಂ ದೂರ —
ಜನಗಳಿಂ ದೂರ ಬಲು-
ದೂರ ವ್ಯೋಮದಪಾರ
ಅಂಗಳಕೆ ಚಿಮ್ಮಿದನೊ !
ಚಿಮ್ಮಿದನು ಚಿಣ್ಣಿವೋಲ್
ಚಿನ್ನನನು ಚಿಕ್ಕೆ ಮಾಡಿ !
'ಸುಖವೊ ? ಹಾಗಾದರೆಲೆ
ವತ್ಸ, ನಡೆ ನಡೆ ಅಲ್ಲೆ,
ನಿನಗದೇ ಸೊಗ ಕುಮಾರ.
ನನ್ನವರು ಬಣ್ಣಿಸಿದ
ಸಗ್ಗ ಸುಖಕಾಗಿಯೇ
ಇದೆ, ಅದಕೆ ಸಾವೆ ದ್ವಾರ !
ಹೊಕ್ಕವನೆ ಶೂರ ಧೀರ !'

'ಇದು ನಿನ್ನ ಚಿರಪಟ್ಟ-'
ವೆಂದು ಬಯಲೊಳಗಿಟ್ಟ! —
'ಮಲತಾಯಿಯೊದೆಯಿಲ್ಲ,
ದಾಳಿ ಭಯವಿಲ್ಲಿಲ್ಲ,
ಶಾಂತಿಯ ಸ್ವರಾಜ್ಯ !'
ಎಂದು ಸಂತಯಿಸಿ, ಹರಿ
ಕರುಣಾಳುವೈಸೆ ! ಸರಿ,
ಸುಳ್ಳಲ್ಲ — ಯಾರಿಲ್ಲ,
ಏನಿಲ್ಲ, ಏಕಾಕಿ !
ಎತ್ತಣದು ವ್ಯಾಜ್ಯ ?

ಮಲತಾಯಿತನಕಿಲ್ಲಿ
ಚಿರಪಟ್ಟವನು ಕೊಟ್ಟೆ,
ಅಕ್ಕರೆಯ ಅಬ್ಬೆಯನು
ಸವತಿತನಕಾಳಿಟ್ಟೆ,
ಒಡಹುಟ್ಟಿನಬಲರನು
ಸಬಲರ ಕುಟಿಲ ಕಪಟ-
ಕುತ್ಸಿತ ಕುತಂತ್ರದ ಪಿ-
ಚಂಡಿಯಲಿ ಬನ್ನಬಡು-
ವಂತಿರಿಸಿಬಿಟ್ಟೆ !
ಗುಣಿಯೆಂದು, ಸಾಹಸಿಗ-
ನೆಂದು, ಜಯಿಯೆಂದು ಡಂ-
ಗುರ ಹೊಯ್ಸಿಕೊಂಬೆ; — ನಿಜ,
ನೀ ಪಡೆದುದಿಷ್ಟೇ !

ಧ್ರುವತಾರೆ ಇದ್ದುದು-
ತ್ತರವೆಂದು ತಿಳಿಕೊಂಬೆ.
ಆದರದು ವಿಷಮ-ಮ-
ತ್ಸರ-ಸ್ವಾರ್ಥಜೀವನ ಸ-
ಮಸ್ಯೆಗುತ್ತರವಲ್ಲ ;
ಅದು ಬರಿಯ ದಿಕ್ಕು !
ಪ್ರಶ್ನೆ ಬಗೆಹರಿಯದಿಕ್ಕು.
ದೇವ ಸೃಷ್ಟಿಯ ಗೆಯ್ದು
ಬಲಿಗಿತ್ತ ವಿಶ್ವದಲಿ
ಸಮಭಾವ ಸದ್ಭಾವ
ಸುಖ-ಸು-ಸ್ವರಾಜ್ಯವನು
ಕೋರುವಗೆ ಬಡಗಣದ
ದಿಕ್ಕ ತೋರಿದರೇನು ?
ಉತ್ತರವನೀವೆಯಾ,–
'ಅವು ದೊರೆವುದೆಲ್ಲಿ ?'

ತೆಂಕಣದ ದಿಕ್ಕಿನಲಿ, —
ಮೃತ್ಯುಮುಖದಿಂದಾಚೆ —
ತಾನಿಲ್ಲದಿನ್ನಿಲ್ಲ-
ದಿಹ ನಭೋಮಂಡಲದ-
ಭೋ ಎಂಬ ತಾಣದಲಿ —
ಸುಖ-ಶಾಂತಿ ಅಲ್ಲಿ !
ನಿನ್ನಂತೆ ಬೇಡುವಗೆ

ಇದುವೆ ಹಾಡಕ್ಕ್ಕ,
ಇದೆ ಹರಿಯ ಮಿಶನರಿಯು
ತೋರಿಸಿದ ದಿಕ್ಕು !
ಮಿನುಕುಂಟು ಬೆಳಕಿಲ್ಲ,
ಇರಬಹುದೊ ?— ಅದು ಬಟಾ
ಬಯಲೊಳಗೆ ಹರಿಹಂಚು,
ವ್ಯರ್ಥ ! ಚಿರಪಟ್ಟವೊ ?
ಮಿಸುಕದೊಲು ಗದ್ದುಗೆಗೆ
ಗಟ್ಟಿ ಬಂಧನವೊ ? ಮಗು,
ನೀ ಪಡೆದುದೇನು ?

೦೦೦ ೦೦೦

## ೯. ಮೌನ



ಯಾವ ಹೊಸ ಮಾತನ್ನು ಹೇಳಬಂದಿಹೆ ನೀನು ?
ಮೌನವೇ ನನಗಿರುವದೊಂದೇ ಮಾತು.
ಸುಖ-ದುಃಖಗಳನೆಲ್ಲ ನುಂಗಿ ನಿಂತಿಹ ಮೌನ
ಅದಕೆ ವ್ಯಾಖ್ಯೆಯನಿಂತು ಬರೆಯುತಿಹೆನು.

ಸುಖ-ದುಃಖಗಳ ಹೊಳೆಯ ಸಂಗಮವು ನನ್ನೆದೆಯು
ಆ ಹೃದಯ-ಸಾಗರದ ಆಳ ನಾನರಿಯೆ
ಸುಖದ ತೆರೆಗಳ ಮೇಲೆ ದುಃಖ ತಾನೇರಿ ಬಹ
ನೋಟವೆಂತಹ ರಮ್ಯ ! ಕಂಡವನೆ ಬಲ್ಲ.

ಕಣ್ಣು ಕಂಡಿತು ಅದನು ; ಹೇಳ ಹೊರಟರೆ ಮಾತು
ಮಣ್ಣು ಮುಕ್ಕುವ ತೆರದಿ ಮುಗ್ಗರಿಸಿತು.
ಹೇಳಲಾಗದೆ ಬಾಯಿ ಮುಚ್ಚಿಕೊಂಡಿತು ಮತ್ತೆ
ಕಣ್ಣೆರಡು ಕಣ್ದೆರೆದು ನೋಡುತಿತ್ತು.

ಸುಖವೆಂದೆನೆ ದುಃಖ ತನ್ನ ತಾಂಡವನೃತ್ಯ
ನಗ್ನಸತ್ಯವ ತೋರಿ ಕುಣಿಕುಣಿಯುತಿತ್ತು.
ಈ ದೃಶ್ಯ ಸಾಕೆಂದು ಬೆದರಿ ಕಣ್ಮುಚ್ಚುವೆನೆ
ಸುಖದ ಶೀತಲ ತೆರೆಯು ಬಿಗಿದಪ್ಪಿತು.

ಕ್ಷಣಕೊಂದು ಹೊಸ ಬಗೆಯು ನನ್ನ ಜೀವನದಲ್ಲಿ
ಅಸ್ಥಿರತೆ ಸ್ಥಿರವಾಗಿ ನೆಲೆಸಿರುವುದು.
ಕ್ಷಣಕ್ಷಣಕು ಹೊಸ ಬಾಳು ಹೊಸ ಸೃಷ್ಟಿ ಸೃಜಿಸುತಿರೆ
ಮನಕೆ ಮುಪ್ಪಿನ ಸೋಂಕು ತಾಗುವುದದೆಂತು ? !

ಹೊಸ ಕನಸು ಹೊಸ ಕಣಸು ಹೊಸ ಮುನಿಸು–ಪ್ರೇಮ
ಹೊಸ ಹಿಗ್ಗಿ ನಿಂಗಡಲ ತೆರೆಯನೇರಿಹ ನಾನು
ಹೊಸ ದುಃಖದೌತಣಕೆ ಹೊರಟಿರುವೆನು
ಅದರ ಸುಖವನು ಸವಿದು ಹಾಡುತಿಹೆನು.

೦೦೦ ೦೦೦

## ೧೦. 'ಅಣುಮಾತ್ರ ನಾನು'

ನೀಲ ನಭದಾಳದಲಿ ಮಿನುಗುತಿಹ ತಾರೆಗಳು ಒಂದೊಂದು
ಒಂದೊಂದು ವಿಶ್ವವಂತೆ
ಉರಿವ ಉಂಡೆಗಳಂತೆ, ಅನಿಲ ವ್ಯಾಪಕವಂತೆ, ಅಪಾರದೂರದಿ
ಸದಾ ಸುತ್ತುತಿಹವಂತೆ
ಮೂಲ ವಸ್ತುಗಳೆಲ್ಲ ಅಲ್ಲಿ ಇಹವಂತೆ, ವಿದ್ಯುದಣುರೂಪ-
ದಲಿ ಶಕ್ತಿಯಾಕರ್ಷದಲಿ ಅಲೆಯುತಿಹವಂತೆ
ನಮಗೆ ವಿಶ್ವದಿ ಇನನು ಶಕ್ತಿದಾಯಕನಂತೆ, ಭೂಮಿಯಲಿ
ಜೀವನವು ಕುರುಡುಗೈಯಂತೆ;
ಮೂಲದಣುಗಳು ಎಲ್ಲ ವಿದ್ಯುದಣುಗಳ ಸಣ್ಣ ಪ್ರತಿವಿಶ್ವವಂತೆ
ವಸುಧೆ ತಣಿಯಲು ಅಂದು ಮೂಲದಣು ಮಿಲನದಲಿ
ಜೀವದಣು ಸಾಗರದಿ ಹೊರಹೊಮ್ಮಿತಂತೆ,
ಅಣುವಾಗಿ, ತೃಣವಾಗಿ ಮಿಗವಾಗಿ ಜೀವನದ ಶಿಖರದಲಿ
ಮಾನವನು ಉನ್ನತನು ಅಂತೆ,
ಅಹುದೊ ಅಲ್ಲವೊ ದೇವ ಅರಿಯದಾದೆ, ಕುಟಿಲತೆಯ
ಮೆರುಗಿನಲಿ ಕುರುಡನಾದೆ
ಮುಂಬೆಳಗು ತಂಗಾಳಿ ಉದಯ ದೇವಗೆ ತರುವ ಅಲರ
ಒಸಗೆಯಲಿ
ಅಗಣಿತದ ಪಕ್ಷಿಗಳ ಗಾನಮೇಳದಲಿ, ಚಂದ್ರಗ್ರಹ
ತಾರೆಗಳ ಲಯತಾನಗಳಲಿ
ಸಂಜೆವೆಣ್ಣಿನ ವರ್ಣಚಿತ್ರ ವಿನ್ಯಾಸದಲಿ ಕುದಿವ ಮನಕಾನಂದ-
ವೀವ ಬೆಳ್ದಿಂಗಳಲಿ

ಆಯು ಮಾನವ ಕಳೆದ ಶುಷ್ಕ ಜೀವಕೆ ಬರುವ ಮುಕ್ತಿ
ಸಾವಿನಲಿ
ಲಯದ ಕಾವಿನಲಿರುವ ಜೀವದಂಕುರದಲ್ಲಿ ಆನಂದದಲ್ಲಿ
ನಿನ್ನ ಕಾಣುವ ತೆರನ ನೀಡೆನಗೆ ದೇವ, ನಿನ್ನ ಲೀಲೆಯುಲೊಂದು
ಅಣುಮಾತ್ರ ನಾನು.

## ೧೧. ಗೋಲ್‌ಗೊಥಾ

ಈ ಪೃಥ್ವಿಯು ಗೋಲ ' ಗೋಲ್‌ಗೊಥಾ '
ತಲೆಯ ಬಿಳಿ ಬುರುಡೆಗಳ
ಬರಡು ದಿನ್ನೆಯ ಮೇಲೆ
ಗಾಳಿ ಗೀತಿಸುತಿಹುದು ಗೋಳ ಗೀತ
ಈ ಪೃಥ್ವಿಯು ಗೋಲ ' ಗೋಲ್‌ಗೊಥಾ '
ಮುರಿದ ಬೆನ್ನಿನ ಮೇಲೆ
ಜಗವು ಕಟ್ಟಿದ ಸಿಲುಬೆ
ಸುತ್ತಲೂ ಕೆರಳಿಹುದು
ಕಷ್ಟಗಳ ಗಲಭೆ !
ತಲೆಗೆ ಮುಳ್ಳಿನ ಮುಕುಟ
ಮರಣ ನಗುತಿದೆ ವಿಕಟ
ಪಾಪಕೂಪದಿ ಕೆಳಗೆ ಎಲುಬು ಕಾದಾಟ .
ಮೇಲೆ ಬಾನಿನ ಗೋರಿ ಗೋಲ ಗುಮಟ !
ಈ ಪೃಥ್ವಿಯು ಗೋಲ ಗೋಲ್‌ಗೊಥಾ
ಗಾಳಿ ಗೀತಿಸುತಿಹುದು ಗೋಳ ಗೀತ !

ಪ್ರಮಾಥ ಜೀವನ ಮುರಿದ ದುರಂತ-
ಮರಣ ಜಯಿಸಿದಾ ಅಮರ ಸಂಹಿತಾ !
ಮುಳ್ಳುವೊಳೆಗಳೂ ಕುಸುಮಗಂಧಿತಾ
ಗೋರಿಯೊಡೆದು ನೆಗೆದಿರುವ ಜೀವಿತಾ
ಈ ಪೃಥ್ವಿಯು ಗೋಲ ಗೋಲ್‌ಗೊಥಾ
ಗಾಳಿ ಗೀತಿಸುತಿಹುದು ಗೋಳ ಗೀತ !

## ೧೨. ಶಿವಗಂಗಾ

ಉನ್ಮತ್ತ ಕತ್ತಲೆಯೊ
ಹಳ್ಳಕೊಳ್ಳದ ನಡುವೆ
ದಾರಿ ಮಸಣದ ಕಡೆಗೆ ಎತ್ತೊ ಚಿತ್ತ ?
ಕಣ್ಣ ಕಪ್ಪಡಿಯಾಟ
ಗೂಗೆಗಳ ಕೂಗಾಟ
ಕೊಳ್ಳಿದೆವ್ವದ ಕುಣಿತ ಸುತ್ತಮುತ್ತ

ಮಡುವುಗಟ್ಟಿದೆ ಎದುರು
ಮಲೆತು ನಾರುವ ನೀರು
ಮೇಲೆ ಹುಣಿಸೆಯ ಮರದ ಕರಿಯ ನೆರಳು
ಯಾವ ಪ್ರೇತವೊ ಎಲ್ಲೊ
ಬಿಕ್ಕಿ ನರಳುವದಲ್ಲೊ
ಬಿಕೊ ಎಂದು ಕೂಗುವದೊ ಇರುಳ ಕರುಳು.

ನಿಶ್ಚಿಂತ ನಿಂತಿದ್ದ.
ನೀರವ ಭಗೀರಥ
ಮುಖವೆತ್ತಿ ಮುಗಿಲತ್ತ ನಿರ್ಭೀತ ಚಿತ್ತ
ಭೋ ಶಂಭೊ ಶಿವ ಭೋ
ಮುಗಿಲೊಡೆದು ಸಿಡಿಯಿತೊ
ಕಣ್ಕೊರೆವ ಕೋಲ್ಮಿಂಚು ಸುರಿದಿತ್ತೊ ಇತ್ತ

ಸುರಗಂಗೆ ಕಡೆದೊಡೆದು
ಚಂದ್ರಗಿರಿ ತುಡುಕಿದಳೊ
ಗೌರಾಂಗ ಪ್ರಭೊ ತಡೆಯೊ ! ಶಿವಧೋ ಶಿವಧೋ !!
ಬಾನ್ಕೊರೆದು ಬಂದಳೋ !
ತಿರೆಯೆರೆದು ಮೊರೆದಳೋ !
ಶಿವಗಂಗೆ ಸುರಿದಳೋ ! ಶಿವಧೋ ಶಿವಧೋ !!

ಬೆಳ್ಳಿಚುಕ್ಕೆಯೆ ಕರಗಿ
ಬೆಳಕಾಗಿ ಹರಿಯುತಿರೆ
ಮೂಡಲದ ಮುತ್ತೈದೆ ಮಿಂದೆದ್ದಳೊ !

ಕುಂಕುಮದ ಹಣೆ ಎತ್ತಿ
ರನ್ನದಾರತಿ ಹಿಡಿದು
ತಾಯಿ ಕಂದನಿಗೆದುರು ನಿಂದಿದ್ದಳೊ !

ಶಿವಧೋ ! ಶಿವಧೋ !! ಶಿವಧೋ !!!

೦೦೦ ೦೦೦

## ೧೩. ಶರದೃತು ಆಗಮನ

೧

ದಿವಿಯಿನಿಳೆಗವತರಿಸಿ ಬರುತಿರುವಾ ಶರದೃತು ರಾಜ್ಞಿಯ
ಹಂತಿ ಹಂತಿಯ ಹಣತೆ ಹಣತೆಯ ಬೆಳಕೊಳಿಸೆವ ಮನೋಜ್ಞಿಯ
ಕಂಡೆನಾಹಾ ಊರ ಗುಡಿಯೊಳು ಹೊಲದ ಗಡಿಯೊಳು ತೊರೆಯೊಳು
ಅಡವಿಯೆಡೆಯೊಳು ಬಯಲ ನಡುವೊಳು ಮಲೆಯ ಮುಡಿಯೊಳು ಕೆರೆಯೊಳು.

೨

ಗಗನತಳ ಮಂಟಪದೊಳೆಸೆವೋಲಗದಿನಿಳೆಗೈತಹಳನು
ತಿಳಿಯ ಮುಗಿಲಿನ ಬಿಳಿಯ ತೆಳ್ಳನೆಯುಡೆಯ ತಳೆದೈತಹಳನು
ಮಿರುಗುವರಿಲುಗಳರಲ ಮಾಲೆಯ ಹೆಣೆದು ಮುಡಿದೈತಹಳನು
ನೆಲದ ಮಕ್ಕಳು ಮೋದಗೊಂಡಿದಿರೆಳ್ದು ಕರೆತಹರವಳನು.

೩

ತೋಳ ನೀಳದ ಗರಿ-ಡವಾಲಿಯ ಪಾಯದಳದವರಾರಿದು
ಜೂಲುಗುಚ್ಚಿನ ತೆನೆಯ ಭಲ್ಲೆಯನೆತ್ತಿ ತಿರುಹುವರೇನಿದು
ಬಯಲುಸೀಮೆಯ ಹೊಲದ ಕೆಚ್ಚಿನ ಜೋಳಬಂಟರ ಫೌಜಿದು
ಧರೆ ಶರದೃತುಗಾಹ ಗೌರವರಕ್ಷೆಯೀಯುವ ಪರಿಯಿದು.

ಗಿಣ್ಣು ಗಿಣ್ಣಿಗೆ ಕೆಂಪು ಬಿಳಿಕರಿ ಗೆರೆಗಳೊಡಲೊಳಗೊಪ್ಪಿರೆ
ಹಸಿರು ರವದೆಯ ಕೋರೆ ಪಾಗನು ತಲೆಯೊಳಿಂತೋ ಬಿಗಿದಿರೆ
ನಿಮಿರಿ ನಿಂತಿರುವಿಕ್ಷು ಸುಪ್ರಜರಿತ್ತ ಪೆರತೊಂದೆಡೆಯೊಳು
ಮಣಿಯುತಿರ್ದಪರೀ ಶರದೃತು ವಿಜಯಗೈಯುವ ಪಥದೊಳು.

೫

ತುಂಗಭದ್ರೆಯು ಬಯಲ ಸುತ್ತಿನ ಹಸಿರು ಕಳವೆಯು ಪೆಣ್ಗಳು
ಬರುವ ಸುಗ್ಗಿಯ ಬೆಳೆಯ ಮುನ್ಸೂಚನೆಯು ಕನಸಿನ ಕಣ್ಗಳು
ಹೊಡೆಯು ಕದಿರಿಡೆಯೆಡೆಯು ಪಾಲ್ನೆಲ್ಗಳನು ಬಲಿಯಿಪುದೆನ್ನುತೆ
ತಮ್ಮ ಬೇಡಿಕೆಗಳನು ಸಲ್ಲಿಸುವಂತೆ ತೊನೆದಪರಿಸೆಯುತೆ.

೬

'ನೀವು ಬಂದುದರಿಂದೆ ಕೆರೆ ಹೊಳೆ ನೀರು ಕನ್ನಡಿಯಾಗಿದೆ
ನೀವು ಬಂದುದರಿಂದೆ ಹೂಗಳ ಕಂಪು ಇಮ್ಮಡಿಯಾಗಿದೆ'
ಎಂದು ಸುದ್ದಿಯ ಸಾರುವಂದದೊಳೆಲರು ತಣ್ಣನೆ ಸುಳಿವುದು
ಕಂಪಿನಿಂಪಿನಲಂಪು ಮಳೆಗರೆದಂದಮೆತ್ತಲು ಮೊಳೆವುದು

೭

ದೇವಲೋಕದ ನಂದನದ ವನವೊಂದು ಪೆಂಪನು ತಳೆದೊಲು
ತೆಂಗು ಕಂಗಿನ ತೋಟದಂಗಳ ಮಿಂದು ತಿಂಗಳ ಬೆಳಕೊಳು
ಗ್ರೈವ ಸೋಗೆಯ ಗರಿಯ ಮರ್ಮರದ ವೇದಘೋಷದೊಲೆಸೆದಿದೆ
ಪೂರ್ಣಕುಂಭದ ಗೌರವಂದೋರ್ಪಂತೆ ಪಣ್ಗೊನೆ ಮೆರೆದಿದೆ.

೮

ದೇವಿ ಋತುಗಳ ರಾಣಿ ಶಾರದೆ ನಾಡ ನೋದಂಗೊಂಡಳು
ತನ್ನ ಬರುವಿಕೆಗಿಂತು ಸಡಗರಗೊಂಡ ಬುವಿಯನು ಕಂಡಳು
ಸಸ್ಮಿತೋಜ್ವಳ ಧವಳ ಶೋಭೆಯ ಚಾರು ಚಂದ್ರಿಕೆಯಕ್ಷಯ
ತೆರೆದು ಸುರಿದಳು ತನ್ನ ಕರುಣಾಮೃತದ ಧಾರಾವೃಷ್ಟಿಯ !

೯

ಮುಗಿಲ ಕೆಸರನು ತೊಳೆದ ತೆರದೊಳು ಬಾನಿನಂಗಳ ಬೆಳಗಿದೆ
ಸೋನೆ ಮಳೆಯುಬ್ಬರವದುಡುಗಿದೆ ಮುಗಿಲದಿಬ್ಬಣವಡಗಿದೆ
ಕಾನು ಹೊಲ ಮಲೆ ಬಯಲೊಳೆತ್ತಲು ಬಿಸಿಲ ಕುಣಿತವು ತೊಡಗಿದೆ
ಮಿಂದು ತಿರೆ ಮಡಿಯುಟ್ಟ ತೆರದೊಳು ಗರಿಕೆಯಂಗಳ ಹೊಳೆದಿದೆ.

೧೦

ಹೊಲವು ನಲಿಯಿತು ನೆಲವು ನಕ್ಕಿತು ಹೊಳೆಯು ಹೊಳಪನು ತಳೆಯಿತು
ಜೋಳವುಬ್ಬಿತು ಶಾಲಿ ಬಲಿಯಿತು ಕಬ್ಬು ಕೊಬ್ಬಿತು ಬೆಳೆಯಿತು
ಹಸಿರು ಶಾಲನು ಕಾನು ಹೊದೆಯಿತು ಬಾನು ಪಡೆಯಿತು ನೀಲಿಯ
ಹೂವು ಮುಡಿಯನು ಬಳ್ಳಿ ಪಡೆಯಿತು ನಾಡು ಪಡೆಯಿತು ಲೀಲೆಯ.

೧೧

ಬೆಳೆವ ಸಸಿಯೊಳು ರಸವ ಬಲಿಯಿಪ ಋತುಗಳರಸಿಯೆ ಸರಸೆಯೆ
ತಂಬು ತಿಂಗಳ ತಣುಪು ಸೂಸುವ ಬೆಳಕಿನೊಡತಿಯೆ ಕಾಂತಿಯೆ
ಬುವಿಯ ದಿವಿಗೈದೋವಿ ಸಲಹೌ ನಮ್ಮನೋವೋ ಮಾಯಿಯೆ
ಮಣ್ಣ ಮಕ್ಕಳಿಗಮೃತವೂಡೌ ಮಂಗಳಾಂಗಿಯೆ ತಾಯಿಯೆ !

ooo ooo

## ೧೪. ನೌಕೆಯುಲೆನ್ನ ಕುಳ್ಳಿರಿಸು

ಅಮ್ಮ ! ನಿನ್ನ ವಿಹಾರ-ನೌಕೆಯುಲೆನ್ನ ಕುಳ್ಳಿರಿಸು.
ಸಣ್ಣ ಬೆಳಗಿಂದೀಜಿ ಈಜಿ, ಬೆನ್ನುಹುರಿ ಕೈಕಾಲು ಕುಸಿಯಿತು
ಅಮ್ಮ ! ನಿನ್ನ ವಿಹಾರ-ನೌಕೆಯುಲೆನ್ನ ಕ್ಕುಳಿರಿಸು.

ಹೊತ್ತು ನೆತ್ತಿಯು ದಾಟಿ ಕೆಳಗೆ, ಕೆಳಗೆ ಹೋಗುತಿದೆ — ಸುತ್ತಲು
ಎತ್ತಲೂ ಮೊದಲಿದ್ದ ಸ್ವಚ್ಛತೆ ಕಾಣದಾಗುತಿದೆ — ತಲೆಯನು
ಎತ್ತಿ ಹಿಡಿದು, ಹಿಡಿದು ಬಳಲಿದ ಕೊರಳು ಸೋಲುತಿದೆ — ಉಸಿರನು
ಎತ್ತಿ ಮೊಗೆದು, ಮೊಗೆದು ಚೆಲ್ಲುತ ತೆಗಲೆ ಬತ್ತುತ್ತಿದೆ — ಅಮ್ಮಾ !
ನನಸು ಕನಸುತಿದೆ — ಆದರು
ಮನಸು ನೆಗೆಯುತಿದೆ—ನೀರಿನ
ಚೆಲುವನೆಣಿಸುತಿದೆ—ಬಾ ಬಾ
ಅಮ್ಮ ನಿನ್ನ ವಿಹಾರ-ನೌಕೆಯುಲೊಮ್ಮೆ ಕುಳ್ಳಿರಿಸು.

ದೂರದಿಂ ಭೋರೆನುವ ಗಾಳಿಯ ದಾಳಿ ಕೇಳುತಿದೆ — ತೆರೆತೆರೆ
ಮೀರಿ ನೊರೆಗಳ ಹಲ್ಲ ಕಿಸಿಯುತ ಮೇಲೆ ಹಾರುತಿದೆ — ಕತ್ತಲೆ
ಕಾಳಿಯಾಗುತ ಮಿಂಚ ಮಸೆಯುವ ಕನಸು ಕಟ್ಟುತಿದೆ — ಕಾಣದ
ನೀಳದಾಳದ ನೀರು ಮೆಯ್ಯನು ಕೆಳಗೆ ಸೆಳೆಯುತಿದೆ—ಅಮ್ಮಾ !
ಮನಸು ನಡುಗುತಿದೆ — ಆದರು
ಚೆಲುವ ಹುಡುಕುತಿದೆ — ಓವೋ !
ಸಮಯ ಮೀರುತಿದೆ — ತಾ ತಾ
ಅಮ್ಮ ನಿನ್ನ ವಿಹಾರ-ನೌಕೆಯುನೆನ್ನ ಬಳಿಗಿರಿಸು.

ಸೂರ್ಯ ಸಂಜೆಯ ಕೂಡಿ ಓಕುಳಿಯಾಡುತಿರುವಾಗ — ಬಾನಲಿ
ಏಳು ಬಣ್ಣದ ತೋರಣವು ಮೇಲೇರುತಿರುವಾಗ — ನೋಡಲು

ತಾರಕೆಗಳೋಡೋಡಿ ಬರುತಿರೆ ಚಂದ್ರ ನಗುವಾಗ — ಕಾಣುತ
ಭೂರಿ ದೃಶ್ಯವ ನಲಿದು ನಲಿದಾಂ ಪಾಡುತಿರುವಾಗ — ಸಂತಸ
ವೇರಿ ತಲೆ ಭಾರಯಿಸಿ ಕಣ್ಗಳು ತೂಗುತಿರುವಾಗ — ಮಗನೇ
ಬಾರೆನುತ ಮಡಿಲಲ್ಲಿ ಮಲಗಿಸಿ ಹಾಯಿಯುಗಲಿಸಿ ದಡಕೆ ನಡೆಯಿಸು.

ಅಮ್ಮ ! ನಿನ್ನ ವಿಹಾರ-ನೌಕೆಯಲೆನ್ನ ಕುಳ್ಳಿರಿಸು — ಅಮ್ಮಾ !
ನಿನ್ನ ದಯೆಯ ವಿಲಾಸ-ನೌಕೆಯಲೆನ್ನ ಕುಳ್ಳಿರಿಸು — ಕೈನೀ-
ಡಮ್ಮ ಕೈಕೊಳ್ಳಮ್ಮ ಮೇಲೆತ್ತಮ್ಮ ! ಕುಳ್ಳಿರಿಸು.

೦೦೦ ೦೦೦

## ೧೫. ಸಂದೇಹ ಸೂಕ್ತ

(ಸಾಮರಾಗ)

ದೇವನಂತೆ !
ಜೀವನಂತೆ !
ಆರ ಮಾತದು ? ॥
ಸ್ವರ್ಗವಂತೆ !
ನರಕವಂತೆ ! ।
ಆರ ಕಥೆಯದು ? ॥
ಕನವರಿಕ್ಕೆಯೊ ! ।
ಮನದ ಪೂಣ್ಕೆಯೋ ! ॥ ೧ ॥

ದೇವರೆಂಬ ।
ಭಾವ ಕೃತಕ ।
ಚಿತ್ರ ಭೂತವೇ ॥
ನಿಜವೆ ನೀನು ?
ಋಜುವೆ ನೀನು ?
ವಾಸ್ತವೀಕವೇ ? ॥
ಬರಿಯ ನಚ್ಚಿನಾ ।
ಹೊರಗದೆಲ್ಲಿ ನೀಂ ? ॥ ೨ ॥

ಮಹಿಮೆ ಕೇಳಿ, ।
ರಹಸಿ, ನಿನ್ನ ।
ತಡುಕುವರ್ ಜನರ್ ॥
ಇಹೆಯೊ ನೀನು ? ।
ನಹಿಯೊ ನೀನು ? ।
ಪಿಡಿಯುದಲೆಯುವರ್ ॥
ಮರೆಯೊಳಿರ್ಪೆಯೋ ! ।
ಕುರುಹುಡು ಸುದ್ದಿಯೋ ! ॥ ೩ ॥

ಜಗದಿ ನೂರು ।
ಬಗೆಯ ರುಚಿಯ ।
ರಾಶಿಯಾಗಿಸಿ ॥
ಎದೆಯ ಕೆಣಕಿ
ಬದುಕ ಕುಲುಕಿ ।
ಘಾಸಿಯಾಗಿಸಿ ॥
ಪಾಶ ಬಿಗಿದು ನೀ ।
ನೀಶ ನೆನಿಸಿಹೆ ॥ ೪ ॥

ನೋವ ಬೀರಿ ।
ಸಾವ ತೋರಿ ।
ಭಯುವ ಬಿತ್ತುತಾ ॥
ಓವನಂತೆ ।
ಕಾವನಂತೆ ।
ನಯುವ ನಟಿಸುತಾ ॥
ಮನುಜ ಕುಲವ ನೀ ।
ನಣಕುಗೆಯುತಿಹೆ ॥ ೫ ॥

ಅಳುಕುವಡಿಸಿ ।
ಅಳುವ ಬರಿಸಿ ।
ಹರಕೆ ಸಲಿಕೆಯ ॥
ಕೊಳುತ ಮೌನ ।
ದೊಳಗೆ ನಗುವ ।
ಬರಡು ದೈವವೇ ॥
ಕಾಟ ಕೊಡುತ ನೀ ।
ನಾಟವಾಡುವೆ ॥ ೬ ॥

ವಾಂಛೆ ಸಲಿಪ ।
ಸಂಚುಗೈದು ।
ಭಕ್ತನ ಕರೆದು ।
ಹೊಂಚಿ ನೋಡಿ ।
ಲಂಚ ಕೊಂಡು ।
ರಿಕ್ತನ ಗೆಯ್ವೆ ॥
ಎಷ್ಟು ಜನಕೆ ನೀಂ ।
ಹೊಟ್ಟೆಯುರಿಸಿಹೆ ॥ ೭ ॥

ಮಂತ್ರ ನುಡಿದು ।
ತಂತ್ರವಿಡಿದು ।
ವ್ರತವ ನೋಂತವರ್ ॥
ಸಂತಸಂಗ ।
ಶಾಂತು ಶುಭದ ।
ಗತಿಯ ಕಂಡರೇಂ ? ॥
ಎನಿಬರಳಲ ನೀಂ ।
ಕೊನೆಗೆ ತಂದಿಹೆ ? ॥ ೮ ॥

ಸ್ವಾಮಿ ಸರ್ವ ।
ಪ್ರೇಮಿಯೆಂಬ ।
ಕೀರ್ತಿ ನಿನ್ನದು ॥
ಕ್ಷಾಮ ಯುದ್ಧ ।
ಡಾಮರಂಗ ।
ಆರ್ತಿ ನಮ್ಮದು ॥
ನಿನ್ನ ರಾಜ್ಯಮೇಂ ।
ಶೂನ್ಯ ಭೋಜ್ಯವೈ ॥ ೯ ॥

ನ್ಯಾಯ ಜಗದಿ ।
ಗಾಯವಡೆದು ।
ಕುಗ್ಗುತಿರ್ಪುದುಂ.॥
ಆಯುದಿಂದ ।
ಹೇಯ ಹೂಟ ।
ಹಿಗ್ಗುತಿರ್ಪುದುಂ ॥
ನಿನ್ನ ನೀತಿಯೊಂ ।
ದುನ್ನತಿಕ್ಕೆಯೇಂ ॥ ೧೦ ॥

ಕರದೊಳಭಯ ।
ವರದ ಮುದ್ರೆ ।
ತಳೆದು ಭಜಿಕರಂ ॥
ಮರುಳು ಕವಿಸಿ ।
ಚರುವ ಗಳಿಸಿ ।
ಕೊಳುತ ನಲಿಯುವೆ ।
ಅಕಟವಿಕಟಿಯೋ ! ।
ಬಕತಪಸ್ವಿಯೋ ॥ ೧೧ ॥

ಊಹೆ ರೂಢಿ ।
ಈಹೆ ಭೀತಿ ।
ಯೋಜಿಸಿರ್ಪುದಂ ॥
ದಾಹ ದುಗುಡ ।
ಮೋಹ ಚಿಂತೆ ।
ಪೂಜೆ ಮಾಡಿಕುಂ ॥
ಮನುಜ ಮನದೊಳೇ ।
ಜನಿಸಿ ಬಾಳ್ವೆ ನೀಂ ॥ ೧೨ ॥

ನರನು ಕಂಡುಮ್ ।
ಅರಿಯಲಾಗ ।
ದನಿತು ಚೋದ್ಯಮಂ ॥
ನಿರವಿಸಿ ನೀಂ ।
ತೆರೆಯೊಳಣಗಿ ।
ಇಣಿಕಿ ನೋಳ್ಪುದೇಂ ? ॥
ನಾಣ್ಚೆ ನಿನಗೆ ? ನೀಂ ।
ವಂಚನಾರ್ಥಿಯೇಂ ? ॥ ೧೩ ॥

ಇರುಳು ಪಗಲು ।
ಬೆರೆತ ಮಬ್ಬೊ ।
ಳಿರಿಸಿ ನರನೆ ನೀಂ ॥
ಅರೆಯರಿ ವಿಂ ।
ದರಸಿಸುತ್ತೆ ।
ಕರವ ಚಾಚಿಸಿ ॥
ಸಾರಿ ಬರಲವಂ
ಜಾರಿಕೊಳುತಿಹೆ ॥ ೧೪ ॥

ಗಾಳಿ ಧೂಳು ।
ಮೋಡ ವಾಡು
ವಾಟವೆಲ್ಲವು ॥
ಆಳ್ವನಾರು ? ।
ಕೇಳ್ವನಾರು ? ।
ತೀಟಿಯೆಲ್ಲವು ॥
ಸೃಷ್ಟಿಯು ಸ್ವತ ।
ಶ್ಶ್ರೇಷ್ಟೆ ವಿಶ್ವವು ॥ ೧೫ ॥

ಆವಿ ಹೊಗೆಯು !
ಡಾವು ಡವುಲು ।
ದೈವವದರೊಳೇಂ ? ॥
ಕೋವಿಯುಸಿರು ।
ಗಾವು ಗಡಣೆ ।
ಜೀವವದರೊಳೇಂ ? ॥
ಭ್ರಮೆಯ ಶಿಶುವೊ ನೀ ।
ನಮರ ಮರ್ಮವೋ ! ॥ ೧೬ ॥

ನರನ ಭಯವೆ ।
ಹರಿಯು ಜಯುವೆ ?
ತಥ್ಯವಾವುದೋ ! ॥
ಎರಡುವೊಂದೆ ।
ಬೆರಿತಿರಲದೆ ।
ಪಥ್ಯವಪ್ಪುದೊ ! ॥
ನೆಳಲ ತೋರಿದಿಹಾ !
ಬೆಳಕದೆಲ್ಲಿಯೋ ! ॥ ೧೭ ॥

ನರರು ಸುರರು !
ಕುರಿ ಹುಲಿವೊಲು ।
ಬೇರೆ ಬೇರೆಯೇಂ ? ॥
ಧರಣಿ ತರಣಿ ।
ಯರಿಗಳವೊಲು ।
ದೂರ ದೂರವೇಂ ? ॥
ಪಿಂಡಿಯೊಂದೆ ಬ್ರ- ।
ಹ್ಮಾಂಡವಲ್ಲವೇಂ ? ॥ ೧೮ ॥

ವಿಕಸಿತಾಕ್ಷಿ ।
ಯಕಲು ಷಾ ಕ್ಷಿ ।
ದೃಷ್ಟಿಯಿರ್ದೊಡೀ ॥
ವಸ್ತು ಬಹುತೆ ।
ಯಸ್ತಿಯೈಕ್ಯ ।
ಸ್ಪಷ್ಟವಾಗದೇ ? ॥
ರುಂಡವೊಂದು ಭೇ- ।
ರುಂಡ ದ್ವಿಮುಖಕೆ ॥ ೧೯ ॥

ಜೀವವೇನು ? ।
ದೈವವೇನು ? ।
ಯಮಕ ಕವಿತೆಯೋ ! ॥
ಚಿಂತೆಗೊಂದು ।
ಶಾಂತಿಗೊಂದು ।
ಗಮಕರೀತಿಯೋ ! ॥
ಅಂತರಂಗಕೇಂ ।
ಮಂತು ಶಿಕ್ಷೆಯೋ ! ॥ ೨೦ ॥

## ೧೬. ಭಾವ-ದೀಪ

ನೆಲವು ಕಾದು, ಅಂಗಾಲು ಕಾದು, ಮೈ ಕಾದು ಉರಿದು ನೆತ್ತಿ
ಬಿಸಿಲ ಎಣ್ಣೆಯಲಿ ಹೊತ್ತಿ ಆದೆ ನಾ ಬೆಂಕಿಗೊಂಡ ಬತ್ತಿ.
ಕಣ್ಣು ಉರಿದು ಕೆಂಗಂಡವಾಗೆ ಭಗಭಗನೆ ಬಾನ ಭಾಗ,
ನೆತ್ತಿಯಲ್ಲಿ ಸುಡುತಿದ್ದ ಸೂರ್ಯ ಕತ್ತೆತ್ತಿ ನೋಡಿದಾಗ.

ಮಣ್ಣು ನೆಲದ ಈ ಅನ್ನಪಿಂಡ ಉರಿಯಾಗೆ ಉಸಿರ ತಿದಿಗೆ
ಬದಿಗೆ ಹರಿಯುತಿದೆ ತಣ್ಣ-ನೀರು ಸುಖವಾಗಿ ಸುಖದ ನದಿಗೆ.
ನೀರಿನಲ್ಲಿ ಕಾಲಿಟ್ಟ ಮಾತ್ರ ನಾ ನಂದಿ ನನಗೆ ಹೊರತು
ಜಲಕ್ರೀಡೆಯಾಡುತ್ತಲಿದ್ದ ರವಿ ಕೂಡ ತಾಪ ಮರೆತು.

ತಂಪು ಜೊಂಪು ಏರಿತ್ತು ತಲೆಗು ಹುಟ್ಟಿತ್ತು ಕುಸುಮ-ಕಂಪ
ನಾಡಿ ನಾಡಿ ಜುಣುಗುಡತ ಬಂತು ನಾನಾದೆನೋ ನಿಲಿಂಪ !
ಯಾವ ನಾಡೊ ಇದು ಗಾಳಿ ತೀಡುತಿದೆ ಯಾರೊ ಹಾಡಿದಂತೆ ?
ಉಸಿರ ಪಂಜರವು ಭಗ್ನವಾಗಿ ನಾ ನಗ್ನನಾಗಿ ನಿಂತೆ.

ಏನು ದೇವ ! ಓ ನಾನು ದೇವ ? ಈ ಭಾನುದೇವ ಸುಡನೇ ?
ಬಯಲ ಹಾರಹೊಡೆದಿರಲು ಬಯಲು ಬಯಲಾಯ್ತು ಬಯಲಿನೊಡನೇ.
ಸುತ್ತತಿತ್ತಲೂ ಶಮವು ! ತಮವೊ ? ನಂದಿಸಿತು ನಂಜು ನೋವ ;
ಗಾಜುಗೊಳವಿಯಲಿ ದೀಪ ಬೆಳಗುವೊಲು ಬೆಳಗುತಿತ್ತು ಭಾವ.

೦೦೦ ೦ ೦

## ೧೭. ಪ್ರಯೋಜನ

ತಂಬಿಗೆ ಕೇಳಿತು ಬಿಂದಿಗೆಯ :
" ಓ ನೀರು ತುಂಬಿದ ಬಿಂದಿಗೆ,
ಸಹರಾ ಮರುಭೂಮಿಗೆ ಹೊರಟಿದ್ದೀಯಾ ? "

ದೊಡ್ಡ ಬಿಂದಿಗೆ ಹೇಳಿತು ಹಿಗ್ಗಿ :
" ಹೌದು ಅದನು ಮಾಡೆ ಫಲವತ್ತಾಗಿ ! "

ಪುಟ್ಟ ತಂಬಿಗೆ ತನ್ನ ಸಂದೇಹವನು
ಒರೆಯಿತಿಂತು :
" ಹೇಳುತ್ತಾರೆ,

ಅದರ ವಿಸ್ತೀರ್ಣ ಸಾವಿರಾರು ಚದರ ಮೈಲಿಗಳಂತೆ ;
ಅಲ್ಲಿ ಮಳೆಯಿಲ್ಲ ; ಬರಿಯ ಉರಿಬಿಸಿಲಂತೆ ;
ಹಸುರು ಎಸಳಿಲ್ಲದಿಹ ಬರಿಯ ಮರಳುಗಾಡಂತೆ !
ಒಂದಲ್ಲ, ಎರಡಲ್ಲ,
ನೂರು ಸಾಗರಗಳೆ ಅದರ ಮೇಲುಕ್ಕಿದರೂ
ಇಂಗಿ ಹೋಗುವ ಬಡಬಬೇಗೆ ಅದಕಂತೆ !
ನೀನು,
ಒಂದೆರಡು ಕೊಡ ನೀರು ತುಂಬಿರುವ ಬಿಂದಿಗೆ,
ನನಗೆನಿತು ಹಿರಿಯನಾದರೂ,
ಕ್ಷಮಿಸು,
ಕೋಟಿಯೋಜನದಗಲ ಮರುಭೂಮಿಯನು
ಮಾಡಬಲ್ಲೆಯ ಹೇಳು ಫಲವತ್ತಾಗಿ ?
ಹಿರಿಯ ಆ ವ್ಯರ್ಥಸಾಹಸವನುಳಿದು,
ನಮ್ಮ ಈ ಚಿಕ್ಕ ತೋಟದಲ್ಲಿಯೆ ನಿಂತು
ಈ ಸಣ್ಣ ಗಿಡಗಳಿಗೆ ನೀರೆರೆದರೆ
ಅಲ್ಪವಾದರು, ಅಣ್ಣ, ಸಫಲವಲ್ತೆ ? "

ತಂಬಿಗೆಯ ನುಡಿಗೇಳಿ
ಹಿತ್ತಳೆಯ ಬಿಂದಿಗೆ ರಬ್ಬರಿನಂತುಬ್ಬಿ
ನಕ್ಕಿತು ತಿರಸ್ಕರಿಸಿ :
" ಬೆಪ್ಪೆ,
ಈ ಕೊಂಪೆಯಲಿ ನನ್ನ ಸಾಹಸವ ನೋಡುವವರಾರು ?
ಅದನು ನೋಡಲು ನೆರೆಯಲಾದರೂ ನಾಲ್ಕು ಜನ ಇಹರೆ ಇಲ್ಲಿ ?
ಇಲ್ಲಿರುವ ನಿನ್ನ ಪತ್ರಿಕೆಯೊ ಮೂರು ಕಾಸಿನದು !
ಅದಕಿರುವುದೊಂದೆ ಹಾಳೆ !
ಅದಕೆ ಚಂದಾದಾರರೋ
ಬೆರಳೆ ಮಿಗುವುವು ಎಣಿಸೆ !
'ಸಹರಾ'ಕ್ಕೆ ನೀರೆರೆಯೆ ನಾ ಹೊರಟರೆ
ಸುದ್ದಿ ಹಬ್ಬುವುದು ದೇಶ ದೇಶದಲಿ !
ಬೇರೆ ಬೇರೆ ಭಾಷೆಯ ಮಹಾ ಪತ್ರಿಕೆಗಳಲಿ,
( ನಿನ್ನ ಮೂರು ಕಾಸಿನ ಒಂದೆ ಹಾಳೆಯ ಪತ್ರಿಕೆಗಳಲ್ಲ )
ಪುಟ ಪುಟಗಳನೆ ತುಂಬುವುವು ನನ್ನ ಚಿತ್ರಗಳೆ !
ಬರೆವರು ಮಹಾಕವಿಗಳೆನ್ನನೆ ಹಾಡಿ !

ಹೋಲಿಸುವರೆನ್ನನು ಭಗೀರಥಗೆ ಎಣೆಮಾಡಿ ! ”

“ ಆದರೇನು ಪ್ರಯೋಜನ, ಅಣ್ಣಾ !
ನಿನ್ನೆರಡು ಕೊಡ ನೀರಿನಲಿ ಸಹರಾ ಫಲವತ್ತಾಗುವುದೆ ? ”

“ ಅದು ಫಲವತ್ತಾದರೇನು ? ಆಗದಿದ್ದರೇನು ?
ನನ್ನ ಹೆಸರಾಗುವುದು ಲೋಕಪ್ರಸಿದ್ಧ !
ಅದಕಿಂತಲೂ ಯಾವುದಯ್ಯಾ **ಪ್ರಯೋಜನ ?** ”

## ೧೮. ಬಹುರತ್ನಾ ವಸುಂಧರಾ

ಬಹುರತ್ನಾ ವಸುಂಧರಾ.
ಬಹುಕುಸುಮಾ ವಸುಂಧರಾ.
ಅತಿಧವಲಾ ವಸುಂಧರಾ.
ಅತಿಶ್ಯಾಮಾ ವಸುಂಧರಾ.

೧

ಸಸ್ಯಶಾಸ್ತ್ರವನೆಲ್ಲ ಗಾಜಿನಾಕೃತಿಯಲ್ಲಿವ-
ಎಲೆಯು, ಹೂ, ಹೂದೇಟು ಮೂಡಿಸುತ್ತ
ಅದ್ವಿತೀಯವು ಕುಸಿರು ; ತದ್ರೂಪ ವರ್ಣವಿದೆ ;
ಅನುಪಮವಿದೆಂದು ದನಿಗೂಡಿಸುತ್ತ
ಜನವು ಸೋಜಿಗಗೊಳಲು ಬದಿಯ ಕೋಣೆಯಲಿಹುದು
ವಸುಂಧರೆಯ ಕಲೆಯು ಮೌನವಾಗಿ ;
ಅತ್ಯದ್ಭುತವು ; ವಿವಿಧ ವರ್ಣವೈಖರಿಯುತವು :
ನಿಸರ್ಗಕೃತಿಯೆಂದು ಗೌಣವಾಗಿ !

ಭೂಮಿಯಂಗಾಂಗದಲಿ ನೂರು ವರ್ಣದ ಕುಸುಮ
ಅರಳುವವು, ಮರಳುವವು ಮತ್ತರಳುತ.
ಇಲ್ಲಿದೋ ! ಭೂಗರ್ಭದಲ್ಲಿ ಕಣ್ದೆರೆದಿರುವ
ಕುಸುಮ ಕರೆವವು ನನ್ನ ಬಗೆ ಕೆರಳುತ.
ಎನಿತು ಸಾವಿರ ವರ್ಷ ಭೂಗರ್ಭದಲಿ ತಪಿಸಿ
ನೀರುಂಡು ಬೆಳೆದವೋ ಕಲ್ಲು ಹೂವು !
ತಮಗಿರುವ ಸುಗ್ಗಿ ಶಾಶ್ವತವೆನುತಿಹವು ಹಿಗ್ಗಿ.
ಕುಸುಮಭಂಜಕ ಬರದೆ ಇಲ್ಲ ಸಾವು !

ಅಗಿದಷ್ಟು ಭಾಗ್ಯವಿದೆಯೆಂದಳು ಭೂಮಾತೆ ;
ತೆಗೆದಷ್ಟು ವಿಸ್ಮಯ ಕಲಾಕೃತಿಗಳು !
ಅವಳನಂತಾನಂತ ಚೆಲುವನಳೆದವರಿಲ್ಲ :
ನಭಗರ್ಭದಲ್ಲೆಂತೊ ನವಶ್ರುತಿಗಳು !
ವಿವಿಧ ಧಾತುಗಳಲ್ಲಿ ವಿವಿಧ ವರ್ಣಗಳಲ್ಲಿ
ವಿವಿಧ ರೂಪಗಳಲ್ಲಿ ನವ್ಯ ರಸನ !
ಕಣ್ತುಂಬ ನೋಡಯ್ಯ ಬೆರಗು ಬಡಿಸುವ ಚೆಲುವ :
ನೋಡಿ ಮಾಡಿರು ನಿನ್ನ ಬಾಳು ಹಸನ.

೨

ತೂರ್ಮಲೀನಿನ ಸ್ಫಟಿಕಸ್ತಂಭಮಾಲೆ ;
ಸ್ಟಿಲ್‌ಬೈಟಿನ ಬಿಳಿ ಪಾತರಗಿತ್ತಿ ಪಕ್ಕ ;
ಕ್ರೋಕುಐಟಿನ ಗೊರಟಿಗೆಯ ಕಿತ್ತಳೆ-ಗೊಂಚಲು ;
ಪ್ರೆಹ್‌ನೈಟಿನ ಬಿಳಿ-ಹಸಿರು ಕಲ್ಲುಸಕ್ಕರೆ ಲೆಕ್ಕ !
ವೇವ್‌ಲೈಟಿನ ಶ್ಯಾಂಡೆಲಿಯರು ವ್ಯೂಹ ;
ಸೆಲೆಸ್ಟೈಟಿನ ಬಿಳಿಗುಂಡುಗಳ ಮೊತ್ತ ;
ಕ್ವಾರ್‌ಯಿನ ನೂರು ಲೋಲಕದಾಟ ;
ಮ್ಯಾಲಕೈಟಿನ ಅಚ್ಚ ಹಸಿರಿನ ಲೆತ್ತ !
ಗಂಧಕ ಶಿಲೆಯ ಕ್ಯೂಬು, ಪೀರವಿೂಡು ;
ಲೆಬ್‌ರ್ಯಾಡರೈಟಿನ ಹಸಿರು-ನೀಲಿ ಪಾಟಿಯ ನುಣುಪು !
ಬೈಸೊಲೈಟಿನ ಬೂದಿ-ಹಸಿರು ಕೂದಲ ಕುಸಿರು ;
ಬೆರಿಲ್ ಶಿಲೆಯ ಬೆಕ್ಕುಗಣ್ಣಿನ ಒನಪು !
ಆಕೃತಿಯೇ ಕಾವ್ಯಮಯ ಸಿದ್ಧಾಂತವಾಗಿದೆಯಿಲ್ಲಿ ;
ರೂಹೇ ವ್ಯವಹಾರ-ವೇದಾಂತವಾಗಿದೆಯಿಲ್ಲಿ !

೩

ಮಸ್ಕೊವೈಟಿನ ಬೂದಿ ಬಂಗಾರ.
ಲೆಪಿಡೊಲೈಟಿನ ಪಾರಜ ಸಿಂಗಾರ.
ಕ್ಯಾಲ್‌ಸೈಟಿನ ಜಾಂಬಳಿಗೆಂಪು ;
ಏಕ್ಸಿಮೈಟಿನ ಕಲ್ಲಿದ್ದಲಿ ಪೆಂಪು.
ನೆಪ್ಪೈಟಿನ ಹಚ್ಚಹಸಿರು ;
ಹೆಮಟೈಟಿನ ಶ್ವೇತ-ಶ್ಯಾಮ ಸಂಗಮ ;
ಗ್ರೆಫೈಟಿನ ಸೀಸಪದ್ಯ ದುರ್ಗಮ !
ಫ್ಲುಓರೈಟಿನ ಹಳದಿ-ನೀಲಿ ಕುಸಿರು.

ಗಂಧಕದ ಕ್ಯೂಬಿನ ಹುಚ್ಚು ಹಳದಿ ಕೇಸರಿ.
ಮ್ಯಾಲಕೈಟಿನ ಹಚ್ಚ ಹಸರಿನ ಗರಿ !
ಎಷ್ಟೊಂದು ಬಣ್ಣ ಬಣ್ಣ ! ಏನು ಸಿಂಗಾರ !
ಇದೆಲ್ಲ ತಾಯ ಕರುಳ ಬಂಗಾರ.

೪

ಇಲ್ಲಿದೋ ತಾಮ್ರದ ಪಿಂಡ ;
ಅಲ್ಲಿದೆ ರಜತದ ಗರ್ಭಕೋಶ
ಇತ್ತಿದೋ ಕಾರ್ಬೊನ್ನಿನ ರಕ್ಕಸಗಡಲೆ ;
ಅತ್ತದೋ ಹೊಂಗೂದಲ ಮಾಯಾಪಾಶ.
ತಾಯ ಮೋಹವೆಲ್ಲ ಪಂಚಲೋಹವಾಗಿದೆ.
ಶಿಲಾಪಿಂಡದಲ್ಲಿ ತಾಯಿ ತೋರಿದ ಕಲಾಕೃತಿ
ಧಾತುವಿನ ಮಾಧ್ಯಮವಾಗಿ
ಮಾನವನ ಶಿಲ್ಪವೈಚಿತ್ರ್ಯದ ಸನ್ನಾಹವಾಗಿದೆ !

೫

ರತ್ನ, ವಜ್ರ, ಮಾಣಿಕ.
ಮನುಜ ತಾಯ ಸಿರಿಯ ಕರಣಿಕ !
ಪುಷ್ಯರಾಗ, ಪದ್ಮರಾಗ, ಸಿತರಾಗ :
ಉಣ್ಣದಲೀ ವರ್ಣಭೋಗ
ನಿರರ್ಥಕವು ತ್ಯಾಗ !
ಶಿಲಾಕುಸುಮವರಳಿಸಿದಳು ;
ಧಾತುವಾಗಿ ಹೊರಳಿಸಿದಳು ;
ಕಲಾಸೀಮಂತಿನಿಯ ಶಿರಕೆ
ಇದೋ ಸ್ಯಮಂತಕಮಣಿ !
ಉಪಲ, ವಜ್ರ, ರತ್ನ: ಪೂರ್ಣ,—
ಪೂರ್ಣನೆಂತೊ ದಿನಮಣಿ !

ಒಂದೊಂದು ಹರಳಿನಲ್ಲಿ ಒಂದೊಂದು ವರ್ಣದಾ
ವಿದ್ಯುಲ್ಲತೆಯೆ ಆಗಿ ಬಿಂದು
ಉಕ್ಕುತಿಹುದದರಲ್ಲಿ ಸರ್ವಸಂಗ್ರಹವಾಗಿ
ಆ ಬೆಳಕಿನೊಂದು ಸಿಂಧು !
ಸಾರಬಿಂದುವದಾತ್ಮ ;
ವಜ್ರದೇಹವ ನೋಡು :
ಗೋಲಾಕಾರ,

ಅಂಡಾಕಾರ,
ಷಟ್ಕೋನಾಕಾರ,
ಪದರು ಪದರು ತೆರೆದು.
ಜ್ಯೋತಿಯಾತ್ಮ ಪೂರ್ಣ;
ಅದಕೆ ಬೀಡಾದ ರೂಪವು ಪೂರ್ಣ;
ಇಹುದು ಸಮನ್ವಯ ಸಂಪೂರ್ಣ!
ದೇವನೊಲು ಪೂರ್ಣವೀ ಪಾಡು.
ಲೋಕದೊಳಿದೆ ಮೆರೆದು.

೬

ಕೋಟಿ ವರುಷಗಳ, ಕಲಾತಪಸ್ವಿನಿ
ಕಳೆದಳು ಕಂದನಿಗಾಗಿ
ಕಳೆದಳು ಆ ಮೇದಿನಿ, ತೇಜಸ್ವಿನಿ
ಉಳಿದೆಲ್ಲವ ನೀಗಿ.
ಪೂರ್ಣದ ಕುರುಹೊಂದನು ಕೊಡಬಯಸಿ
ಪ್ರಯೋಗಿಸುತ ನಭರಾಜನ ಪ್ರೇಯಸಿ
ಶಿಲಾಕುಸುಮಗಳ ಸೃಜಿಸಿದಳು,
ಲೋಹವ್ಯೂಹಗಳ ರಚಿಸಿದಳು,
ಮತ್ತೆ ಆಲೋಚಿಸಿದಳು.
ವರವನು ಬೇಡಿದಳು.
ಪ್ರಿಯನನು ಕಾಡಿದಳು.
ಆಗ ಬಂದಿತಾ ಸಮ್ಯಕ್‌ದರ್ಶನ
ಸ್ವಾಮಿಯ ಪ್ರೇಮದ ಅನಂತ ಸ್ಪರ್ಶನ:
ಪೂರ್ಣತೇಜ ಬಿಂಬ:
ಹೊಳೆದಿತ್ತದು ಬಿಂದು
ಸುಳಿದೆದುರಿಗೆ ಬಂದು!
ಆ ಜ್ಯೋತಿ-ಬಿಂದುವಿಗೆ ಆ ವಜ್ರದೇಹ
ಸಮರಸದ ಅನ್ಯೋನ್ಯವೀ ಮಧುರಸ್ನೇಹ.
ಇದೇ ಕಲಾಸಿದ್ಧಿ.
ಇದೇ ಬಾಳಿನ ಪಾವನತಮ ವೃದ್ಧಿ.
ವಜ್ರಕಠೋರವದೀ ಶಿಲಾಶರೀರ:
ಆದರೆ ಪ್ರಭೆಗದು ನೀರದ್ವಾರ ಪೂರ!
ಅಷ್ಟಪೈಲುಗಳ, ಅಷ್ಟಾಂಗದ ಶೋಭೆ:

ಹೊರಳಿಸಿದೆಡೆ ತುಳುಕಾಡಿದೆ ಸ್ವಯಂಪ್ರಭೆ !
ಮೊನೆಗಾರ ರತ್ನರಸಿಕನು ಮಲ್ಲಿನಾಥ ;
ಹರಳಿಹುದು ಭೂದೇವಿಯೊರೆದಿಹ ಪ್ರಗಾಥ.

ಬಹುರತ್ನಾ ವಸುಂಧರಾ.
ಬಹುಕುಸುಮಾ ವಸುಂಧರಾ.
ಅತಿಧವಲಾ ವಸುಂಧರಾ.
ಅತಿಶ್ಯಾಮಾ ವಸುಂಧರಾ.

## ೧೯. ಉದಾತ್ತ-ಮಾನವತೆ ಜೀವಂತ ರಸಕವಿತೆ

೧

ವಿಶ್ವಮಂ ಕಬಳಿಸುವ ಪ್ರಳಯಾಗ್ನಿ-ಭೂಮಿಯಲಿ,
ಅಮೃತ-ಶೀತಳ-ರಸದ 'ದರ್ಶನ'ದಿ ನೆರೆ ಮಿಂದು
ರಾರಾಜಿಸಲಿ ಸತತ ದೇವ-ನಂದನ-ಸೃಷ್ಟಿ !
ಜೀವನಾನಂತ-ಸಹರಾ-ಮಳಲ ಸೀಮೆಯಲಿ
ಓ ಕವಿಯೆ, ನಿನ್ನಾ ತಪಃಪ್ರಭಾವಕೆ ಸಂದು
ಸುಮಲೋಕವರಳಿ ಸುರಿಯಲಿ ಜೀನ-ರಸ-ವೃಷ್ಟಿ !
ನೈರಾಶ್ಯ-ಕಟು-ನಿಬಿಡ-ತಮಿಸ್ರ-ಕರಾಲತೆಯು
ಅಕ್ಕೆ ರೋದ್ದೋಂತಮಂ ತೊಳಪ ಜ್ಯೋತಿರ್ಲತೆಯು !
ವೈರಮಂ ಸ್ನೇಹಕ್ಕೆ, ಕೋಪಮಂ ಸ್ಯೆರಣೆಗೆ
ತಾಪಮಂ ತನಿರಸಕೆ, ಕೋಪಮಂ ಸ್ಯೆರಣೆಗೆ
ಶಾಪ-ವ್ಯಾಪಂಗಳನು ನಿಶ್ಯಾಪದೊಳ್ದನಿಗೆ
ಸಂಕುಚಿತ-ಮೌಢ್ಯವ ವಿಶಾಲ ನೈಪುಣ್ಯಕ್ಕೆ
ಪರಿವರ್ತಿಸುವ ಮಹೋದಾತ್ತ ಮಾನವತೆಯೇ
ಸಾಕು ಸಾಕಿದುವೆ ಜೀವಂತ ರಸ-ಕವಿತೆಯೆ !

ಇಂತಹ ಉದಾತ್ತ-ಮಾನವತೆಯೇ ರಸ-ಋಷಿಯು !
ಇದರ ಒಂದೊಂದೆ ಕೃತಿ ದಿಟದಿ ರಸವತ್-ಸುಕೃತಿ !

ಇದರ ಘನವಮೌನವೂ ನಿಶ್ಯಬ್ದ-ಕಾವ್ಯ-ಸ್ಥಿತಿ !
ಇದುವೆ ಕೃತಿ ! ಇದುವೆ ಘನಕೃತಿಗೆ ಓ ಘನ-ವಸ್ತು !
ಇದು ಸತ್ಯ-ಶಿವ-ಸುಂದರಂಗಳಾಡುವ ಹಸೆಯು !
ಇಲ್ಲಿ ಅತಿದೇವ-ಮಾನವ-ಪ್ರಭೆಯು ಮೂಡುವದು !
ಪ್ರತಿಭೆ ವಿದ್ಯುಲ್ಲತೆಯ ಹೊಗರಿನಲಿ ತೀಡುವದು !
ಅನುಭವವು ಮಾಗುತನುಭಾವ-ಪದಕೇರುವದು !
ಓ ಅತೀಂದ್ರಿಯ-ದೃಷ್ಟಿ-ಸೃಷ್ಟಿ ಕೈಸಾರುವದು !
ಇಂತಹ ಉದಾತ್ತ-ಮಾನವತೆಯಂ ಪಡೆ ಮೊದಲು !
ಇಲ್ಲದೊಡೆ ನಿನ್ನ ಕೃತಿಯೆಲ್ಲವೂ ಬರಿ ತೊದಲು !
ಬಂದಾಗ ಬರಲಿ ಕೃತಿ ! ಅಪ್ಪುದದೆ ರಸ-ಗಂಗೆ !
ಬರದಿರೇಂ ? ಭವ್ಯ ಬಾಳಿದೆ ಮಹಾ-ಕೃತಿ-ತುಂಗೆ !

 

## ೨೦. ಐದು ಬಾಗಿಲು

‘ ಐದು ಬಾಗಿಲ ತೆರೆದು ನಿಂದಿಹೆ ಬರುವನವನೆಂದು ’

೧

ಒಂದು ಬಾಗಿಲು ಬೆಳಕ ಹರಿಸೆ
ಒಂದು ನಾದ ತರಂಗಗೊಳಿಸೆ
ಒಂದು ಸ್ಪರ್ಶದ ಹರ್ಷ ಸುರಿಸೆ
ಬರುವನವನೆಂದು
ಒಂದು ಗಂಧವನೊಂದು ಸ್ವಾದವ
ಸ್ವಾಗತಿಸಲೆಂದು

೨

ಪೂರ ತೆರೆದಿರೆ ಐದು ಬಾಗಿಲು
ಪಟ್ಟಮಂಚವದೊಳಗೆ ತೂಗಲು
ಬಯಕೆಯೆಂಬುವ ಗಾಳಿ ತೀಡಲು
ಸುಖದ ಸುಳುಹಿನೊಳು
ಅಂತರಂಗದೊಳಿಂತು ರಂಗವ
ರಚಿಸಿ ಬಹನೆಂದು

೩

ಕೋಟಿ ಯುಗಗಳ ಆಚೆಯಿಂದ
ಕೋಟಿ ಚಂದ್ರರ ಕಾಂತಿಯಿಂದ
ಪ್ರೀತಿಯೆಂಬುವ ದಾರಿಯಿಂದ
ತಾನೆ ಬಹನೆಂದು
ಒಲಿದ ಎದೆಯನು ಒಲವಿನುಲಿಯಲಿ
ಕರೆವನವನೆಂದು

೪

ಎಂತು ಇರುವುದೊ ದಿಟದ ನಿಲವು !
ಮಾರುಗೊಂಡಿದೆ ಅವನ ಚೆಲುವು
ಸೌಂದರದ ಸಂಗದಲಿ ದಿನವೂ
ಬರುವನವನೆಂದು
ಕರಣ ಕರಣವ ತೆರೆದು ನಿಂದಿಹೆ
ಬರುವನವನೆಂದು

೫

ಇದು ಬಾಗಿಲಿಗೊಂದೆ ಗುರಿಯು
ಅನು ಅನುಭವಕೆ ಒಂದೆ ಝುರಿಯು
ಒಂದೆ ಪರಮಾನಂದ ಕೆರೆಯು
ತುಂಬಿ ನಿಲಲೆಂದು
ತೆರೆದು ನಿಂದಿಹೆನೆಲ್ಲ ಬಾಗಿಲ
ಬಾರನೇ ಇಂದು ?

೦೦೦ ೦೦೦

## ೨೧. ಶಾರದೆ

ಓ, ಇವಳು ಶಾರದೆ !
ಬಂದ ಬೆಳ್ಳಕ್ಕಿಗಳ ಕಣ್ಣೊಳಗೆ
ಇವಳ ಕತೆ ಹೀಗೆಂದು ಬರೆದಿದೆ :

ಮಾಗಿ ಮಂಜಿನ ಹಾಲು ತೊಟ್ಟಿಲಲಿ ಕಣ್ ತೆರೆದು
ಬೆಳೆದ ಚೆಲುವೆ.
ಚೈತ್ರಮಾಸದ ಹೂವುಗಳ ತೇರಿನಲಿ
ಇವಳ ಮೆರವಣಿಗೆ !

ರಂಗು ರಂಗಿನ ಜರಿಯ ಪಟ್ಟೆಸೀರೆಯನುಟ್ಟು
ದಿಕ್ಕೆಲ್ಲವನು ದಂಗುಬಡಿಸಿದ ಪ್ರಮದೆ.
ಲಕ್ಷ ಪಕ್ಷಿಗಳ ಕೊರಳಿನುಯ್ಯಾಲೆಯಲಿ
ಜೋಕಾಲಿಯಾಡಿದ ಮುಗುದೆ.

ಆಗಾಗ, ಮುಗಿಲ ಹಂಡೆಯ ಮೊಗೆದು ಸಾಗಿತ್ತು
ಇವಳ ಅಭ್ಯಂಜನ.
ಗುಡುಗು ಮಿಂಚಿನ ತೊಡವು ; ಕಡಲ ಕನ್ನಡಿಯಲ್ಲಿ
ತಿಲಕ ತಿದ್ದುವ ಬಯಕೆ ;
ಮಾತೆತ್ತಿದರೆ ಬಿರುಗಾಳಿಯುಸಿರು ;
ಕಣ್ಣೆತ್ತಿ ನಿಂತು ಮಾತನಾಡಿಸಬಹುದೆ
ಇವಳನ್ನು ಯಾರಾದರೂ !

ಮಾವು-ಬೇವುಗಳ ತೇರೇರಿ ಗಂಡನ ಮನೆಗೆ ಬಂದಾಮೇಲೆ
ಮುಖಕ್ಕೆ ಸದಾ ಮಳೆಯ ನೂಲಿನ ಮುಸುಕು.
ಹೊಗೆಮೋಡದಡುಗೆಮನೆಯೊಳಗೂ ತಂಪಾಗಿ ಹರಡಿತ್ತು

ಇವಳ ಕಣ್‌ಬೆಳಕು !

ಈ ನಡುವೆ ಕೆಲವು ದಿನ ಮೊಗದಲ್ಲಿ ನಗೆಯಿಲ್ಲ ;
ನೀರವ ನಿರುತ್ಸಾಹ ; ತಲೆ ತುಂಬ ನೋಡದ ತುಮುಲ.
ಅರ್ಥವಿಲ್ಲದ ಕವಿತೆ ; ಕಾಲಿಟ್ಟಲ್ಲಿ ಕೆಸರು.
ಏನೆಂದು ಕೇಳಿದರೆ ತಣ್ಣನೆಯ ನಿಟ್ಟುಸಿರು.
' ಶ್ರಾವಣಾ ಬಂತು ಶ್ರಾವಣಾ '
ಹಾಡಿದುದು ಕವಿಗಣ.
ಇವಳು ಉಸಿರಾಡಿದರೆ ಹಸಿರು ; ಮಾತಾಡಿದರೆ ಜುಳುಜುಳು ;
ಹೆಜ್ಜೆ ಹೆಜ್ಜೆಗೆ ಹೂವು ; ತುರುಬಿನ ತುಂಬ ಮಲ್ಲಿಗೆ-ನೋಡ !

ಅಂದೊಮ್ಮೆ ಕಾಳಿ ; ಆ ಅನಂತರ ಗೌರಿ ; ಈಗಿವಳು ಶಾರದೆ.
ಪಟ್ಟೆಸೀರೆಗಳೆಲ್ಲ ಪೆಟ್ಟಿಗೆಯ ಸೇರಿದುವು ; ಈಗ
ಇವಳಿಗೆ ಬಿಳಿಯ ಬಟ್ಟೆಗಳಿಷ್ಟ ; ಮನವೆಲ್ಲ
ಥಳ ಥಳ ನೀಲಿ ; ಅದರ ತುಂಬಾ ಕೈಲಾಸಗಳ ಕನಸು !
ಹೊಲಗದ್ದೆಯಲಿ ನಿಂತ ತೆನೆಯ ತುಟಿಗಳಿಗಿವಳು
ಮುತ್ತಿಟ್ಟು ಹಾಲೂಡಿಸುವಳು ; ಎತ್ತಿ ಆಡಿಸುವಳು.

ಈಗಿವಳು ಶಾರದೆ—ಸದಾ ಶಾಂತೆ ; ಶುಚಿಸ್ಮಿತೆ ;
ಗಂಭೀರೆ ; ತೇಜೋನ್ವಿತೆ ; ಕ್ರೌಂಚಕ್ವಣಿತೆ.
ನಮೋಸ್ತುತೇ—

## ೨೨. ಬೇಕು-ಸಾಕು

ಬೇಕೆಂಬುದೇ ಬದುಕು, ಸಾಕೆಂಬುದೇ ಸಾವು.
ಬೇಕು-ಸಾಕುಗಳಿಕ್ಕುಳಕೆ ಸಿಲುಕುವುದೇ ನೋವು !
ಬೇಕು, ಬಯಕೆಯ ಹಗಲು, ಸಾಕು, ತೃಪ್ತಿಯ ಇರುಳು,
ಬೇಕು, ದ್ವೈತವು, ಸಾಕು, ಅದ್ವೈತ– ಇದು ತಿರುಳು.
ಬೇಕೆಂಬ ಹಗಲಿಗಿದೆ ನೂರಾರು ಕೆಲಸಗಳು,
ಸಾಕೆಂಬ ಇರುಳಿಗೋ ಶಾಂತಿ-ವಿಶ್ರಾಂತಿಗಳು.
ಬೇಕಿನ ಪ್ರಪಂಚದಲಿ ಭಿನ್ನ ಭೇದಗಳ ವ್ಯಥೆ,
ಸಾಕಿನಾಕಾಶದಲಿ ಏಕಾತ್ಮದನುಪಮತೆ.

ಬೇಕು, ಹೊಳೆಹಳ್ಳಗಳ ಹಿರಿ-ಕಿರಿಯ ಹಲ ಹಾದಿ,
ಸಾಕು, ಘನ ಗಂಭೀರ ಶರಧಿಮಾರ್ಗ–ಅನಾದಿ.
ಬೇಕೆಂಬ ಕರ್ಮ ಕಟ್ಟಿದ ಬಾಳದೇಗುಲಕೆ
ಸಾಕೆಂಬ ಸಂತೋಷ ಸ್ವರ್ಣಕಲಶವು ತಲೆಗೆ.
ಬೇಕು-ಸಾಕುಗಳು ದ್ವೈತಾದ್ವೈತವನೆ ಮೀರಿ,
ಜೀವ ದೇವರ ಪ್ರತಿಷ್ಠಿಸು ಸತ್ಯ ಸುಖ ಸೇರಿ !

## ೨೩. ಜೇಡನಬಲೆ

ಕಂಡ ಜೀವಿಯ ಕೊಲ್ವ, ಹಾದಿಗರ ತಲೆ ಹೊಯ್ವ
ಬೇಡನೊಮ್ಮೆ ವಿನೋದಕಾಗಿ, ಕಾಡೆಲ್ಲ
ಕಡಲಾಗಲಾ [೧]ಆನೆಸೆಳವೀಸಿ, [೨]ಹೊನಲೊಯ್ವ
[೩]ಜೇಡಗೆಡೆ ಮಾಡಿ ಮರಳ್ವಂ ಮರಳಲಿಲ್ಲ !
ಕನಮನದಿ ದುರುಳನವನಾ ಹುಳವನುದ್ಧರಿಸಿ
ಮಡಿದುದಲ್ಲದೆ ಬೇರೆ ಒಳಿತನೆಸಗಿಲ್ಲ ;
ಸಾಯಲವನಂ ಕೃತಾಂತನ ದೂತರಾವರಿಸಿ
ಕೊಂಡೋದರೆಳದೆಳದು [೪]ನಿರಯಪಥವೆಲ್ಲ.
ನರಕಮುಖ ತಡೆದೊಂದು ಘೋರ ಬಲೆ [೫]ಕಣ್ಣಲೆಯು
ಲೋಡೆ ಯಮನವರರಿನಿನ ಕೋಟಿ ಕಲೆಯು
[೬]ಸಾಸಿರಕ್ಷಿಯ ಸಾಸಿರಡಿಯು ಸಾಸಿರ ತಲೆಯು
ಜೇಡನಿಳಿದವನನೇರಿಸೆ ತನ್ನ ಬಲೆಯು,
ಗಾಳಿಯಲಿ ಗಾಳಿಯಹ ಹೊಗೆಯಂತೆ ನೋಡ
ತೇಜೋಬ್ಧಿಯಲಿ ತೇಜವಾದನಾ ಬೇಡ !

೧. ಆನೆಸೆಳವು = ಆನೆಯನ್ನೂ ಕೊಚ್ಚಿಕೊಂಡು ಹೋಗುವ ನೀರಿನ ಪ್ರವಾಹದ ವೇಗ. ೨. ಹೊನಲು = ಪ್ರವಾಹ. ೩. ಜೇಡ = ಜೇಡರಹುಳ. ೪. ನಿರಯಪಥ = ನರಕಕ್ಕೆ ಹೋಗುವ ದಾರಿ. ೫. ಕಣ್ಣಲೆ(ಯು) = ಕಣ್ಣಿನ ಕಡೆಗೆ ಬರುತ್ತಿರು. ೬. ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್. (ಋಗ್ವೇದ ೧೦.೯೦).

## ೨೪. ನಾಟ್ಯೋತ್ಸವ

ಲೋರೆನ್ಸೊ ಇಲ್ ಮನ್ನಿಫಿಕೊ
ಹಾಡನರ್ಪಿಸಿಹೆನು ತಕೊ!
ಇಂದಿನೆಮ್ಮ ಉತ್ಸವದಲಿ
ಯೌವನದೀ ಸಂಭ್ರಮದಲಿ
ಹರಯವಿದರ ಯಾಗದಲ್ಲಿ
ಜೀವಿತಗಳ ಭೋಗದಲ್ಲಿ
ಗುರುವೆ ನಿನಗೆ ಅಗ್ರಪೀಠ
ಕಲಿತೆವಿಂದು ನಿನ್ನ ಪಾಠ!
ತೇಲಿ ಬರುವ ಬಾಸ್ ಗಾನ
ನಮ್ಮ ಕುಣಿತಕಲ್ಲವೇನ!
ಅದೊ ದ್ರಾಕ್ಷೆರಸದ ಪಾನ–
ನಮ್ಮ ಕುಡಿತಕಲ್ಲವೇನ!
ವೆನೇಶ್ಶಿಯದ ಕಡೆದ ಗಾಜು
ಸಾರ್ಡೀನಿಯದ ಸುರೆಯ ಮೋಜು
ಮುತ್ತಿರುವರೆ ಕತ್ತಲು;
ಹಾಡಿನೊಡನೆ ಮೂಡಿ ಬರುವ
ಬೇರೆ ನಾಡ ಕನಸ ತರುವ
ಸೌರಭದಲಿ ಎತ್ತಲು;
ಯೌವನವನು ಸೂಸುತಿರುವ
ಬಯಕೆಯನ್ನು ಬೀಸುತಿರುವ
ಸುಂದರಿಯರು ಸುತ್ತಲು!
ಯಾರೆ ನೀನು? ನಾನು ಸ್ಪಾನ್ಯ
ಅದು ಇತಾಲ್ಯ ಇದು ಜರ್ಮಾನ್ಯ.
ಯಾರೆ ನೀನು? ನಾನು ಫ್ರಾಂಚ.
ಮತ್ತೆ ನೀನೊ? ನಾನು ಗ್ರೀಚ.
ಮಿಂಚುತಿರುವ ರೇಶ್ಮೆಯಲ್ಲಿ
ಅರ್ಧ ಮುಚ್ಚಿ ಅರ್ಧ ಬಿಚ್ಚಿ
ಜಘನ ಧ್ವಜವ ಗಗನದಲ್ಲಿ
ವಿಜಯದಾಸೆಯಿಂದ ಚುಚ್ಚಿ
ಗಂಡಿಗಾಗಿ ಕಾದುತಿರುವ
ಹಿಂಡು ಎದುರಿದೆ!

ಕಾಯದಲ್ಲಿ ಕದನದಿಚ್ಛೆ
ಆದರದನು ಕೊಂಚ ಮುಚ್ಚಿ.
ಅರಳುತಿರುವ ಮರುಳು ನಗೆ
ಸಾವಿರ ಸಿಗರೇಟ ಹೊಗೆ;
ಮಧುವಿನಲ್ಲಿ ಮಿಂದ ಮುದವು
ಮನಸ ಕೆದರಿದೆ!
ಹಾಡಿನೊಂದು ತೆರೆಯ ಮೇಲೆ
ನರ್ತನಗಳ ತೆಪ್ಪ ತೇಲೆ
ಧೀವರಿಯರು ಬಲೆಯ ಬೀಸಿ
ಮತ್ಸ್ಯಕಾಗಿ ಕಾಯ್ದರೆ,
ಮೀಂಗಳಿವೂ ಗುಣಿಸಿ ಗುಣಿಸಿ
ಅವಳನೆಣಿಸಿ ಇವಳ ಕುಣಿಸಿ
ಮುಗುಳುನಗುತ ಮೆಲ್ಲನೀಸಿ
ಬಲೆಯ ಹಾಯ್ದರೆ!
ಜೀವನಕ್ಕೆ ಎರಡು ಮುಖ—
ಒಂದು ಸುಖ ಒಂದು ದುಃಖ;
ನಾಳಿನರಿವು ಯಾಕೆ ಸಖಾ?
ಇಂದಿಗಿಹುದು ತುಂಬ ಸುಖ!
ನೋಡು ಗಾನವೇರುತಿಹುದು!
ದೀಪವೆಲ್ಲ ಆರುತಿಹುದು!
ಕುರುಡು ನೀಲ ಬೆಳಕಿನಲ್ಲಿ
ಕೊಳ್ಳೊ ಅವಳ ಬಾಹುಗಳಲಿ.
ಒಟ್ಟಿನಲ್ಲಿ ಗುಟ್ಟಿನಾಡೆ
ಮೊಗವನಿರಿಸೆ ಹೆಗಲ ಕೊಡು.
ಬಳ್ಳಿಗೊಂದು ಬಲವ ನೀಡೆ
ಕಟಿಗೆ ಕೈಯ ಇಂಬನಿಡು.
ತಾಳದೊಡನೆ ಮೇಳವಿಸುವ
ಎರಡು ಮಧುರ ನುಡಿಯಲಿ
ಜೀವನಗಳ ಜೀವರಸವ
ಅಧರಕಧರ ಕುಡಿಯಲಿ!
ಮುತ್ತಿರುವರೆ ಕತ್ತಲು

ಸೌರಭವಿದೆ ಎತ್ತಲು
ಸುಂದರಿಯರು ಸುತ್ತಲು !
ಒಂದು ರಾತ್ರಿ ಒಮ್ಮೆ ಸೊಕ್ಕಿ
ಶಾಸ್ತ್ರಗಳನ ದೂಡ್ಯೇನ !
ಇಂದು ರಾತ್ರಿ ಬಂದ ಹಾಗೆ
ನನ್ನ ಬಾಳ ಮಾಡ್ಯೇನ !
ಪೃಥಿವಿಯಿದರ ಮಡಿಲನೊಕ್ಕಿ
ಸಾರವನ್ನ ನೋಡೇನ !
ಮಿಂಚಿನೊಡನೆ ಮಿಂಚುತೊಮ್ಮೆ
ಕತ್ತಲೆಯನೆ ಕೂಡ್ಯೇನ !

೦೦೦ ೦೦೦

## ೨೫. ಅಚಲೋಽಯಂ ಸನಾತನಃ

ಜಡದ ಜಂಜಡ !
ಕಬ್ಬಿಣ ಕೋಟಿಗಳ ಕೋಟಿ ಭಾರ !
ಜೀವ ಹುಲುಹುಳು ಸಿಕ್ಕಿಹುದು ಬುಡಬುಡದಲ್ಲಿ.
ಕಣ್ಣು ಪಿಳುಕಿಸಿ ಮಣ್ಣು ಸರಿಯಿಸಿ
ಏಳಲೆನ್ನುವುದು, ಕತ್ತನೆತ್ತುವುದು.
ಬೀಳುವುದು ಮತ್ತೆ, ಬೀಳುವುದು ಮತ್ತೆ,
ಮಿಗಿಲಾದ ಕುಳಿಯಲ್ಲಿ, ಅಗಲಾದ ಸುಳಿಯಲ್ಲಿ,
'ಬೇಡ ಬೇಡೆಂದರೂ ಎದ್ದೆಯು, ಹೇಗಾಯ್ತು, **ಬೀಳು**'
ಎಂದೊದರಿ ಮರುದನಿಗೊಡುತ ಹೇಳುತಿದೆ
ಕೋಟಿಯು ಕಣಕಣದ ಮೇಲೆ
ಯಾರೊ ಬಾರಿಸುವ ಜಾಗಟೆ !

* * *

ಬೆದಬೆದಕಿ ಬದುಬದುಕಿ ಏನು ಪಡೆದಿತು ಜೀವ ?
ಜಡ-ಜಡದ ಸಾಕ್ಷಾತ್ಕಾರ !
'ನಾನು ಜಡ, ಎಲ್ಲವೂ ಜಡ,
ಜಗವ ಮಾಡಿದವನೂ ಜಡದ ಮುದ್ದೆ'
ಕೊಳದ ಕೊಳಚೆಯೊಳಿದ್ದು ರುಚಿಯೆಂದು ಅದನೆ ಮೆದ್ದು
ಇದ್ದಲ್ಲಿ ಇರವುದೆ ಸರಿವುದಕಿಂತ ಮುಕ್ತಿ ಎಂಬೊಲು
ಇರುವ ಹಾವಸೆಯು ಈ ಜೀವನ !

ಮಳೆಮೋಡ, ಹಸುರು ಹೂ, ಚಿಕ್ಕೆ ಚಂದ್ರಮ ಸೂರ್ಯ-
ಚೆಂದದೀ ಪಸರಕ್ಕೆ ಮನಸೋತು ಮೈಮರೆತು,

ಸ್ನೇಹದಲಿ ಸರಸಸಲ್ಲಾಪದಲಿ ಬೆಳೆಬೆಳೆದು
ಅನಂತವಪ್ಪುವ ಆಸೆಯಲಿ ರೆಕ್ಕೆ ಬೀಸಿ ಆಗಸದಿ ಈಸಿ
ನೆಗೆನೆಗೆದು ಚಿಕ್ಕೆಗಳೊಡ ಚಕ್ಕಂದವಾಡೆ,
ಗಕ್ಕನಿಳಿಯಿತು ನೆಲಕೆ ಝಗ್ಗೆಂದು ಹೊಳೆಹೊಳೆದು
ಬಿದ್ದ ಚಿಕ್ಕೆಯದಾಗಿ, ಜಡಕೆ ಮುತ್ತನು ಕೊಟ್ಟು
ಕೆಡೆದ ಕಿಡಿಮುಸಿಯಾಗಿ.

ಪೂಜಿಸಲೆಂದು ಭಾವುಕರು ಸುರಿದೆಣ್ಣೆಯ ಧಾರೆ
ಸುಂದರಮೂರ್ತಿಯ ಸುತ್ತುವರಿದು
ಜಿಡ್ಡುಗಟ್ಟಿದಂತೆ ಚೆಲುವಿಗೆ ಅಡ್ಡಕಟ್ಟಿದಂತೆ
ನೇಹನಲುಮೆಗಳು ಭಾವ-ಭಕುತಿಗಳು ಹಸಗೆಡುತ
ಜೀವಪ್ರತಿಮೆಗೆ ಜಡದ ಲೇಪವನು ತೊಡಿಸಿವೆ,
ಜನ್ಮಜನ್ಮದ ಶಾಪವನು ಸಫಲಗೊಳಿಸಿವೆ.
ಚೆಲುವ ನೋಡುವ ಕಣ್ಣಿನಲಿ
ತಿಳಿಯ ಬೆಸ್ನೇರಿ ಮಲೆತು ನಿಂತ ಹೊಲೆಯಿಹುದು.
ಒಲುಮೆಯಲಿ ಅಳಿಯಾಸೆ, ಅತೃಪ್ತಿ ತಳವೂರಿಹುದು.
ಮನವು ಭೀತಿಯ ತವರು, ಹೃದಯ ಕಾಮದ ಕಿಚ್ಚು
ಕಲ್ಪನೆಯು ಮಂಗಳದ ನಿಗಿನಿಗಿ ಚಿತೆಯು
ಬಗೆ ತುಂಬ ತನ್ನದೆ ಸರಿಯೆಂದು ಸಾಧಿಸಲೆಂಬ
ಮತಿಯು ತಾನೆ ಯತಿಯೆಂಬ ಬಡಬಡಿಕೆ.
ಜಡವ ಕೊಡಹುವೆನೆಂದು ಹೆಣಗಿದಾಕ್ಷಣ
ಜಡವು ಬಡಿದೆಬ್ಬಿಸಿದಂತೆ ಚೇತರಿಸುವುದು,
ತೊರೆಯಿತು ತೊಲಗಿತೆಂಬ ನಿಮಿಷಭ್ರಮೆಯ ಪ್ರೇರಿಸುವುದು
ಜೀವಮಧ್ಯದ ತನ್ನಾಸನವ ಇನ್ನಿನಿತು ಬಲಿಸುವುದು.
ಜೀವನವೆಲ್ಲ ಜಡಮಯ !
ಜಡವೆ ಜೀವನ !

ಕಾಯದಾ ಹಾಲ ಕೆನೆ ಬೇಡಿ ಅಳುವ ಕೂಸಿನ ಅಳವು ಮೀರಿದ ಹಟದಲ್ಲಿ,
ಬೆಳೆಯಲಾರದೆ ಬಿದ್ದುಕೊಂಡಿರುವ ಜೀವರಾಶಿಯ ಭಾಂದಸಿಕೆಯ ಛಲದಲ್ಲಿ,
ಕಾಲಕಾಲಕೆ ಬಂದ ನೆರೆತೆರೆಯಂತೆ ಕಾರಣಪುರುಷರು ಹಾಯ್ದು ಹೋದರೂ
ತುಸು ಮಿಸುಕಿ ಮರಮರಳಿ ಮುಸುಕಿನ ಮರೆಹೊಗುವ
ಸಾಮಾನ್ಯನೆಂಬ ಈ ಮನುಜನ ಅಸಾಮಾನ್ಯ ಸೋಮಾರಿತನದಲ್ಲಿ,

ಶತಶತಮಾನಗಳ ರಾಗದ್ವೇಷಗಳಿಂದ
ದಿಕ್ಕುದಿಕ್ಕಿಗೆ ಕೆನ್ನೀರು ಕೆಂಪು ಸಿಂಪಡಿಸಿ ಸಾಲದೆ
ಹೆಸರುದಸೆ ಬದಲಾದರೇನು
ದೇಶಕೋಶ ಬೇರಾದರೇನು
ವಿಜ್ಞಾನ ಬುದ್ಧಿಯಲಿ ಅಣುಶಸ್ತ್ರಸನ್ನದ್ಧವಾಗಿ
ಸನಾತನ ಸುಳಿಯೊಳಗೆಯೇ ತಿರುಗುವ ಸುಧಾರಕ ಮಲೆಯಲ್ಲಿ,
ಜಡವೆ ಆಳುತಲಿಹುದು ಸಾರ್ವಭೌಮ ಶಕ್ತಿಯಾಗಿ

* * * *

ಓ ! ಜಡದ ಹಟಸಾಧನೆಗೆ ಕೊನೆಯುಂಟೆ ?
ದುರ್ದಮ್ಯ ನಿಯತಿಗೆ ತಡೆಯುಂಟೆ ?
ತನ್ನನ್ನು ಹಿಂದಿರಿಸಿ ಪ್ರಾಣ-ಮನ-ಬುದ್ಧಿ-ಅಹಂಕೃತಿಯಲ್ಲಿ
ಚೈತನ್ಯ ಪಲ್ಲವಿಸಿ ಮುಂದರಿಯೆ
ದಿವ್ಯತ್ವದಾಗಸಕೆ ಕೈಚಾಚೆ,
ಖಂಗಿಟ್ಟ ಹಾವಿನೊಲು ತನ್ನ ಹೆಡೆಯಪ್ಪಳಿಸಿ
ಜಡವೊಮ್ಮೆ ಅಜಡವಾಗಿ ಸೇಡು ತೀರಿಸಲೆಂದೊ
ಪ್ರಾಣದಲಿ ಮನದಲ್ಲಿ ಬುದ್ಧಿ-ಅಹಂಕೃತಿಯಲ್ಲಿ
ಬೀಡು ಬಿಟ್ಟಿಹುದಿಂದು, ನಾಡು ಕಾಡಾಗಿಸುತಿಹುದು.

ಜಡವ ಜಂಜಡವೆಂದೆ, ಜಡವೆ ಜೀವನವೆಂದೆ,
ಜಡದ ಹಟವ ಬಣ್ಣಿಸಿದೆ, ನೊಂದೆ ಬೆಂದೆ.
ತಿಳಿಯಿತೀಗಳೆ ಹೊಳೆಯಿತೊಮ್ಮಿಗಿಲೆ
ಜಡವಿದೆ ದಿಟ, ಜಡವೆಂದೆ ಹಟವಿದೆ,
ಹಟದಿಂದ ಜೀವನಕೆ ರುಚಿಯಿದೆ, ಸಾಧನಕೆ ತಿವಿತವಿದೆ.
ಜಡವೆಲ್ಲವೂ ಅಗಮ್ಯ ಅಜಡದ ಮೊಗವಡವಯ್ಯ !
ಮಲಗಿಹುದೆಂದರೂ ನಿಚ್ಚ ಎಚ್ಚರದಲ್ಲಿ
ಕೋಟಿ ಕಣ್ಣಿನಲಿ ಕೋಟಿ ಕೈಗಳಲಿ
ಬಾಳ ನಡಸುತಲಿರುವ ಚೇತನಕೆ
ಜಡವೊಂದು ಬತ್ತಳಿಕೆ !
ಜಡವೆ ಸಾಕ್ಷಿ ಚೈತನ್ಯ ಸಾಂನಿಧ್ಯಕ್ಕೆ.
ಜಡವೆಂಬ ಶೇಷನಲಿ ಅಶೇಷ ಅನಂತ ಅಂತರ್ಯಾಮಿ
ಶಾಯಿಯಾಗಿಹನು ಹಿಗ್ಗು ಹಾಲುಗಡಲಿನಲಿ,
ತಾಯಿ ಲಕುಮಿ ಕುಳಿತಿಹಳು ಪಾದದೆಡೆಗೆ

ಜೀವಜಾತಕ್ಕೆ ಜಗನ್ಮಾತೆಯಾಗಿ ಪೋಷಿಸುತ,
ಜಡವ ಕಂಡು, ಜಡದಿ ಅಜಡವನರಿತು ಕೂಗಿತು ಜೀವ :
' ಅಚಲೋಽಯಂ ಸನಾತನಃ
ಅಚಲೋಽಯಂ ಸನಾತನಃ ! '

೦೦೦ ೦೦೦

## ೨೬. ಭೂತ

೧

ಕಾಡುತ್ತಿವೆ ಭೂತಕಾಲದ ಭ್ರೂಣಗೂಢಗಳು :
ಹುಗಿದ ಹಳಬಾವಿಯೊಳ ಕತ್ತಲ ಹಳಸುಗಾಳಿ
ಅಂಬೆಗಾಲಿಟ್ಟು ತಲೆಕೆಳಗು ತೆವಳುತ್ತೇರಿ
ಅಳ್ಳೆಳ್ಳಾಯಿ ಜಪಿಸುವ ಬಿಸಿಲಕೋಲಿಗೆಗರಿ ತೆಕ್ಕಾಮುಕ್ಕಿ
ಹಾಯುತ್ತಿದೆ ಆಗಾಗ್ಗೆ ತುಳಸಿವೃಂದಾವನದ ಹೊದರಿಗೂ.
ತೊಟ್ಟು ಕಳಚಿದ ಹೊಕ್ಕುಳಿನ ಬಳ್ಳಿ ದಡದಲ್ಲಿ
ಕತ್ತರಿಸಿದಿಲಿಬಾಲ ಮಿಡುಕುತ್ತದೆ.
ಕತ್ತಲಲ್ಲೇ ಕಣ್ಣು ನೆಟ್ಟು ತಡಕುವ ನನಗೆ
ಹೊಳೆವುದು ಹಠಾತ್ತನೊಂದೊಂದು ಚಿನ್ನದ ಗೆರೆ :
ಅಮಾವಾಸ್ಯೆ ಕಂದಕಗಳಲ್ಲಿ ಹೇಗೋ ಬಿದ್ದು ಒದ್ದಾಡುತಿರುವ
ಗರಿ ಸುಟ, ತಾರೆ.

ವರ್ತಮಾನಪತ್ರಿಕೆಯ ತುಂಬ ಭೂತದ ಸುದ್ದಿ :
ನೀರ ಮೇಲಕ್ಕೊಂದು ಮಡಿ, ಕೆಳಕ್ಕೇಳು ಮಂಜಿನ ಶಿಖರಿ ;
ಇದ್ದಕಿದ್ದಂತಕಸ್ಮಾತ್ತಗ್ನಿನುಡಿಯುಗಿದ
ಮಂಜು ಮುಸುಕಿದ ಮುಗ್ಧ ಜ್ವಾಲಾಮುಖಿ.
ಪತ್ರಿಕೆಯ ಮುಚ್ಚಿದರು—
ಸದ್ದಿರದ ಖಾಲಿಕಂಕಾಲ ಕೋಣೆಗಳಲ್ಲಿ
ತಾಳವಿಲ್ಲದೆ ಮೂಕಸನ್ನೆ ಮುಲುಕುವ ತಿರುಗುಮುರುಗು ಪಾದದ ಪರಿಷೆ
ಅಂತರಾಳಗಳಲ್ಲಿ ನಿಂತ ನೀರುಗಳಲ್ಲಿ
ಕಂತಿ ಕೈಬಡಿವ ಬೀಜಾಣುಜಾಲ ;
ಕಾಳರಂಗಸ್ಥಳದ ಥರದೆ ಮುರಿಮುರಿಯಲ್ಲಿ

ಮಾತು ಹೆಕ್ಕುವ ಮಿಣುಕು ಮೊನೆಯ ಬಾಲ— ಇವು
ಬಯಸವೆ ಹೊರಂಗಳದ ರಂಗುರಂಗಿನ ಬಳ್ಳಿ ಹೂವು ಹೊದರ ?

೩

ನೀರು ನೆಲೆಯಿಲ್ಲದಲೆವರು ಪಿತೃಪಿತಾಮಹರು,
ಗಾಳಿಹೆದ್ದೆರೆಲಾಳಿಗಂಟಿ ನೆಲಸಿಕ್ಕಿಯೂ ದಕ್ಕದವರು.
ಉಚ್ಚಾಟನೆಯ, ತರ್ಪಣದ ತಂತ್ರ ಬಲ್ಲೆ ; ಆದರು ಮಂತ್ರ ಮರೆತೆ ;
ಬರಿದೇ ಹೀಗೆ ಆಡಿಸುತ್ತಿದ್ದೇನೆ ಮಂತ್ರದಂಡ.
ಪುರೋಹಿತರ ನೆಚ್ಚಿ, ಪಶ್ಚಿಮಬುದ್ಧಿಯಾದೆವೋ ;
ಇನ್ನಾದರೂ ಪೂರ್ವಮೀಮಾಂಸೆ ಕರ್ಮಕಾಂಡಗಳನ್ನು ಬಗೆಯಬೇಕು.
ಅಗೆವಾಗ್ಗೆ ಮೊದಲು ಕೋಶಾವಸ್ಥೆ ಮಣ್ಣು ;
ಕೆಳಕ್ಕೆ ತಳಕ್ಕೆ ಗುದ್ದಲಿಯೊತ್ತಿ ಕುಕ್ಕಿದರೆ
ಕಂಡೀತು ಗೆರೆ ಮಿರಿವ ಚಿನ್ನದದಿರು.
ಹೊರತೆಗೆದು ಸುಟ್ಟು ಸೋಸುವಪರಂಜಿ ವಿದ್ಯೆಗಳ
ಇನ್ನಾದರೂ ಕೊಂಚ ಕಲಿಯಬೇಕು :
ಹೊನ್ನ ಕಾಯಿಸಿ ಹಿಡಿದು ಬಡಿದಿಷ್ಟದೇವತಾ—
ವಿಗ್ರಹಕ್ಕೊಗ್ಗಿಸುವ ಅಸಲು ಕಸುಬು.

೪

ಬಾವಿಯೊಳಗಡೆ ಕೊಳೆವ ನೀರು ; ಮೇಲಕ್ಕಾವಿ
ಆಕಾಶದುದ್ದವೂ ಅದರ ಕಾರಣ ಬೀದಿ ;
ಕಾರ್ಮುಗಿಲ ಖಾಲಿಕೋಣೆಯ ಅಗೋಚರ ಬಿಂದು
ನವಮಾಸವೂ ಕಾವ ಭ್ರೂಣರೂಪಿ—
ಅಂತರಪಿಶಾಚಿ ಗುಡುಗಾಟೆ, ಸಿಡಲಿನ ಕಾಟ—
ಭೂತರೂಪಕ್ಕೆ ಮಳೆ ವರ್ತಮಾನ ;
ಅಗೆದುತ್ತ ಗದ್ದೆಗಳ ಕರ್ಮಭೂಮಿಯ ವರಣ ;
ಭತ್ತಗೋಧುವೆ ಹಣ್ಣುಬಿಟ್ಟ ವೃಂದಾವನ,
ಗುಡಿಗೋಪುರಗಳ ಬಂಗಾರ ಶಿಖರ.

೦೦೦

## ೨೭. ಮಡಕೆ ಹೆಚ್ಚಿತು

೧

'ಮಣ್ಣು ನಿನ್ನದು, ಮಡಕೆ ನನ್ನದು;
ಇಬ್ಬರ ಕೈಲಿದೆ ಕೋಲು.
ಯಾರು ಒಡೆದರೂ ಹೋಯಿತು ಮಡಕೆ,
ನಾನೆ ಒಡೆಯುವುದು ಮೇಲು !'
ಇದ ಕೇಳಿ ಕುಂಬಾರ ನಕ್ಕ ;
ಚಕ್ರ ತಿರುಗಿತು ಅವನ ಪಕ್ಕ.
ಒಂದಾದ ಮೇಲೊಂದು ಮಡಕೆ,
ಊರ ನೆತ್ತಿಯಮೇಲೆ ಉರಿಬಿಸಿಲ ಮಡಕೆ.

೨

ಓಡಿ ಹೋದವರು ಸಂಜೆಗೆ ಬಂದರು;
ತಲೆಯ ಮೇಲೆ ಮಡಕೆ !
ಮನೆಯ ಬಾಗಿಲಲಿ ಮಡಕೆಯನೊಗೆದರು
ಮನೆಯ ತುಂಬ ಮಡಕೆ.
ಸೊಪ್ಪಿನ ಪಾತಿಯ ಕಾಯುತ್ತಿತ್ತು
ತಳವಿಲ್ಲದ ಮಡಕೆ;
ಒಪ್ಪು ತಪ್ಪುಗಳ ಹೆಣವಾಗಿತ್ತು
ಕೆಳಗೆ ಬಿದ್ದ ಮಡಕೆ.
ತೂತು ಬಿದ್ದರೂ ಸೋರಿರಲಿಲ್ಲ
ಹಣ ತುಂಬಿದ ಮಡಕೆ;
ಬಡವರ ಬೀದಿಗೆ ಬರಲೇ ಇಲ್ಲ
ಬೆಳ್ದಿಂಗಳ ಮಡಕೆ.
ಬಾನ ಬೀದಿಯಲಿ ಬಾಗಿಲ ತಟ್ಟಿತು
ವಿಜ್ಞಾನದ ಮಡಕೆ;
ಬಾಯಿಬಡುಕರಿಗೆ ಕಿರೀಟವಿಟ್ಟಿತು
ಅಜ್ಞಾನದ ಮಡಕೆ.
ಕರಡಿನಾಟಕದ ಮಡಕೆಯನೊಡೆದ
ಕುರುಡ ನೇತ್ರದಾನಿ;
ಒಡೆದ ಚೂರುಗಳ ಕೂಡಿಸಿ ಹಾಡಿದ
ನೋಡಿದ ಅಭಿಮಾನಿ,
ಮಣ್ಣು ಪದರಗಳ ಕತ್ತಲೆಯೊಳಗೆ
ಹುಟ್ಟಿ ಬಂತು ಮಡಕೆ.
ಬೆಳಕು ಬೆಂಕಿಗಳ ಘರ್ಷಣೆಯೊಳಗೆ
ಬಣ್ಣ ಬಂತು ಅದಕೆ.
ಹುಟ್ಟುಬಣ್ಣವನೆ ಮರೆತಿದೆ ಮಡಕೆ ;
ಕಟ್ಟುಬಣ್ಣಗಳ ಬೆರಕೆ.
ತಲೆಯಿಲ್ಲದ ಕಲೆ ಕುಣಿಯುತ್ತಲೆ ಇದೆ;
ಹೆಜ್ಜೆಗೊಂದು ಗೊರಕೆ.
ಹಸುವಿನ ಕೊಂಬಿಗೆ ಬಣ್ಣ ಹಚ್ಚಿದರೆ
ಗಟ್ಟಿಯಾಗುವುದೆ ಹಾಲು ?
ಹೊನ್ನ ಸೂಜಿಯಲಿ ಗಲ್ಲವನಿರಿದರೆ
ಕಣ್ಣು ತುಂಬುವುದು ನೀರು.

೩

'ಮಡಕೆ ಹೆಚ್ಚಿತು' ಎಂದರೆ ಮುಗಿಯದು
ದುಡಿದು ಪಡೆದ ಕರ್ಮ.
ಕೆಲವರಿದನು ನಂಬದೆ ಮೈಮುರಿವರು;
ದಪ್ಪ ಕೆಲವು ಚರ್ಮ.
ಮಡಕೆ ಹೆಚ್ಚಿದರೆ ಮಾಡುವುದೇನಿದೆ ?
ಒಡೆದುಬಿಡುವುದೇ ದಾರಿ.
ಮಡಕೆ ಇಡಲು ಮೂಲೆಗಳೇ ಇಲ್ಲದೆ
ಒಡೆದಳು ಗಾಂಧಾರಿ !

## ೨೮. ವಕ್ರರೇಖೆ

೧

ನಗರಮಧ್ಯಕೆ ನುಗ್ಗಿ ದೂರದ ದಿಗಂತಗಳ
ಕನಸು ಕಾಣುತ್ತಿರುವ ಟಾರು-ಬೀದಿ-
ಸಂತೆ ಮೂಟೆಯ ಹೊತ್ತ ಬಾಡಿಗೆಯ ಚಕ್ಕಡಿಗೆ
ಸನಿಹದಲ್ಲಿಯೆ ಬೇರೆ ಹೊರಳು-ಹಾದಿ.

ಓಣಿ ಓಣಿಯ ಸುತ್ತಿ ಸಂದಿಗೊಂದಿಗೆ ಹಾಯ್ದು
ಇದ್ದಲ್ಲಿಯೇ ಇಹುದು ಬೀದಿನಾಯಿ–
ಗಂಟೆ ಗಂಟೆಯ ನಡುವೆ ಕಾಲ ಚಡಪಡಿಸಿಹುದು
ಇಲ್ಲಿಗೂ ಬಂದೆಯು, ನೀನು ಬೊಂಬಾಯಿ!

ಈ ಸಮಾಂತರ ಹಳಿಯ ಮೇಲೆ ಓಡುವ ರೈಲು
ವಕ್ರರೇಖೆಗೆ ತಿರುಗಿ ನೂರು ಮೈಲು
ಎಲ್ಲ ರಾಜ್ಯದ ಗಡಿಯ ತುಳಿದು ದಾಟುತ್ತಿಹುದು
ಕೆಂಪು ಹಸುರಿನ ದೀಪ ಎರಡು ಕೈಲು.

ಕಣಿವೆ ಬೆಟ್ಟದ ಅಂಕುಡೊಂಕಿನಲಿ ಒಡಮುರಿದು
ಕಡಲ ಹುಡುಕುವ ನದಿಗು ಬೇರೆ ದಾಹ –
ಮಳೆಗಾಲ ಬೇಸಿಗೆಯ ಹರಯ ಮುಪ್ಪಿನ ತಿರುವು
ತಳದ ಒರತೆಗೆ ನೂರು ಸೆಲೆಯ ಸ್ನೇಹ.

ಏಳು ಹೊರಸಿನ ನುಲಿಯ ಬಿಟ್ಟರೂ ತಳಮುಟ್ಟಿ
ಬರುವ ಭರವಸೆಯಿಲ್ಲ, ಬೋಳು-ಬಾವಿ
ಪಾವಟಿಗೆ ತುಂಬ ಹಾವಸೆಗಟ್ಟಿದಿಳಿಜಾರು
ಎಷ್ಟು ಕುಡಿದರು ಆರದಂಥ ಬಾಯಿ!

೨

ಮರಿಗೆ ಮರಿಯಿಕ್ಕಿರುವ ಶೂನ್ಯಮಂಡಲ; ಕೆಳಗೆ
ತಿರುಗೆ ತಿರುಗುತ್ತಿರುವ ಪೃಥ್ವಿಗೋಲ
ಜಾಳಿಗೆಯ ಬಿಚ್ಚಿರುವ ಬುಗುರಿಗಿನ್ನೂ ನಿದ್ದೆ
ದೀರ್ಘ ವರ್ತುಲದಲ್ಲಿ ಸ್ವಪ್ನಲೋಲ.

ತೆರೆದ ಕಣ್ಣಿನ ತಾರೆ ತೇಲು-ನೌಕೆಯ ಮೋಡ
ಮಳೆಯಿಳಿದ ಸಲಕೊಮ್ಮೆ ಹೊಸತು ನೀರು,
ನಿಂತಲ್ಲಿಯೇ ನೀಲಿಗಟ್ಟಿರುವ ಆಕಾಶ –
ನೆಲದ ಬಸಿರೊಳು ಸದಾ ಹಚ್ಚ ಹಸುರು !

ಗಾಳಿಪಟ ಹೆಡೆ ತೆರೆದು ಆಡುವಾಗಲು ಜಗ್ಗಿ
ಕೊಸರಿಕೊಂಡೇಳುವದು ಒಡಲ ಸೂತ್ರ,
ಕಡಲಿನುದ್ದಕು ಒಳಗೆ ಹರಿವ ಊಷ್ಣಪ್ರವಾಹ–
ಮೇಲೆ ತೆರೆಯಾಡುವದು ಬೇರೆ ಪಾತ್ರ.

ಸಂಜೆ ಕತ್ತಲೆಯೊಡನೆ ಹತ್ತು ಸಾವಿರ ದೀಪ
ಬೆಳಕು ಬಟ್ಟೆಯ ಕಳಚಿ ನಿಂತ ನಿಲವು.
ನಿಂತ ನೀರೆಲ್ಲವೂ ತಿಳಿದು ತಳ ಕಂಡಾಗ
ದುಷ್ಯಂತನಿಗೆ ಬೇರೆ ಅರಿವು-ಮರೆವು.

ಈಚೆ ಬಾಗಿಲಿನಲ್ಲಿ ಬೆಳಕು ಕರಗುತ್ತಿರಲು
ಇರುಳು ತೆರೆವುದು ಮರೆಯ ವಸ್ತುಕೋಶ –
ನಡುವೆ ಪಡಸಾಲೆಯಲಿ ನೆರಳು ಹೊಡಮರಳುವದು
ಇವನ ಎದೆಯೊಳು ಸದಾ ಸಂಧಿಪ್ರಕಾಶ!

೦೦೦ ೦೦೦

## ೨೯. ಗಂಧಕೊರಡು

( ದಿವಂಗತ ಗುರುನಾಥಭಟ್ಟ ಹಾದಿಮನಿ ಇವರ ಪವಿತ್ರಸ್ಮೃತಿಗೆ ಸಮರ್ಪಿತ )

ಕಲ್ಲ ಮೇಲೆ ಗಂಧಕೊರಡು
ಜೀವ ಜೀವ ತೇಯುತಿರಲು
ನೋಡಿರುವೆಯಾ ?

ತಾಯಿ-ಗಿಡದ ತೊಡೆಯ ಸೀಳಿ
ಯಾಕೊ ಏನೊ ಜನುಮ ತಾಳಿ
ಬಲಿತು ನಿಂದಿತು.
ಗಂಧವಾದ ತಪ್ಪಿಗಾಗಿ
ಪ್ರಾಯ ಕೊಟ್ಟ ಸೊಪ್ಪ ನೀಗಿ
ಕೊರಡುಗೊಂಡಿತು.
ಯಾರೊ ಅದನು ತೇಯುತಿಹರು;
ಯಾವ ದೇವಗಾಗಿಯೋ.
ಮೈಗೆ ತಣ್ಣೀರನೆರಚಿ
ಪಾಷಾಣಕೆ ಒತ್ತಿ ಪರಚಿ

ಕಣಕಣವನು ನೀರುಗೊಳಿಸಿ
ಹೇಳ ಹೆಸರು ಕೂಡ ಅಳಿಸಿ
ಮರಳಿ ಮತ್ತೆ ಮೊಳೆಯದಂತೆ
ನವೆವುದುದೊಂದೆ ಉಳಿಯುವಂತೆ
ತೇಯುತಿರುವರು.
ಇದಕೆ ನೋವು ಎಂಬುದಿಲ್ಲ.
ಏಕೆ ? – ಯಾರು ನಂಬಲಿಲ್ಲ.
ಅದುವೆ ಪಾಪವಿದರದು.
ಅಂತೆ ಲೋಕವಿಪರ ನೋವ
ಗಣನೆ ಮಾಡಲರಿಯದು.
ಕಲ್ಲು ದೇವನೊಬ್ಬನನ್ನು
ಸುಳ್ಳು ಪೂಜಾರಿಯೊಬ್ಬ
ಪೂಜೆಗಟ್ಟುತಿರುವನು.

ಭಕುತಿಯು ಬಾಜಾರದಲ್ಲಿ
ಮುಕುತಿಯು ಕಿರುವತ್ತಿಗಾಗಿ
ಮಧ್ಯಸ್ಥಿಯ ಭತ್ತೆಗಾಗಿ
ಕಲ್ಲಿನ ಮೈನುಣುಪ ಹೆಚ್ಚು-
ಗೊಳಿಸಲೆಂದೊ ಗಂಧ ಹಚ್ಚು-
ತಿರುವ ಕಾಣಿರೇ.
ಬಾವನ್ನವು ಬಗೆದುದಿಷ್ಟೆ:
ತನ್ನ ತೆಯ್ಯುವವನ ಕೈಯ್ಯು
ತನ್ನ ಮೈಗುಣವ ಪಡೆಯಿತು;
ಮೂಸಬಲ್ಲ ಜೀವಕನಿತೆ
ಸೂಸುಗಂಪು ಹೊಡೆಯಿತು.
ಇದೇ ಮೂರ್ಖ ಪ್ರೇರಣೆ
ಗಂಧಯೋನಿಯನ್ನು ಬದುಕಿಸಿರುವ
ದೃಶ್ಯಧಾರಣೆ
ಗಂಧವಾಗಿ ಬಂದ ಬಳಿಕ
ಗಂಧಗೊಳಲು ನೊಂದರುಂಟೆ ?
ಒಲ್ಲೆ ಒಲ್ಲೆ ಎಂದರುಂಟೆ ?
ತನ್ನ ತಾನು ಕೊಂದರುಂಟೆ ?
ನವೆವ ಕಾರ್ಯವು
ಅಪರಿಹಾರ್ಯವು.

ಅಂದ ಮೇಲೆ ನವೆಯುವಾಗ
ಚೆಂದವಾಗಿ ನವೆಯಬೇಕು.
ನವೆಯಬೇಕು ನವೆವುದೆಲ್ಲ.
ಜೊಲ್ಲ ನುಡಿಯೆ ಬಾಯಿಯಿಲ್ಲ.
ಮೈಯ್ಯುಳಿಸುವ ಬದುಕಿದಲ್ಲ.
'ಎಲ್ಲ!' ಎನುತೆ ಕೊಡುವದೆಲ್ಲ.
ಅದರ ಜೀವನೋತ್ಸಾಹ
ಕಾಯಲುಂಟು ಅದರ ಸ್ಪರ್ಶ-
ದಷ್ಟೇ ಸೂಕ್ಷ್ಮ ದೇವಹರ್ಷ.
ಕೊರಡು ಅರಳಿ ಗಂಧವಾಯ್ತು.
ಯಾರ ಮುಖವೊ ಚಂದವಾಯ್ತು.
ತೇಕಿದಷ್ಟೇ ತನ್ನದಾಯ್ತು.
ಬರುವ ಬದುಕಿಗನ್ನವಾಯ್ತು.
ಹಳೆಯ ಸಾಲ ಕೊಟ್ಟುದಾಯ್ತು
ಲೆಕ್ಕ ಬಾಕಿ ಚೊಕ್ಕವಾಯ್ತು.
ನವೆದು ಸಣ್ಣ ದೇವಭೋಗ್ಯ
ವಾದುದಷ್ಟೇ ಬಂದ ಭಾಗ್ಯ.
ಗಂಧ ಪಡೆದ ಗಂಧ-ತೃಪ್ತಿ
ಗಂಧಕುಂಟು ! ಗಂಧಕುಂಟು !
ನಮಗದೇನು ತಿಳಿವುದೆಂತು ?
ನಮಗು ಅದಕು ಯಾವ ನಂಟು ?

೦೦೦ ೦೦೦

## ೩೦. ಬಿದ್ದಿಹುದು ನೆರಳು

ಬಿದ್ದಿಹುದು ನೆರಳು, ಅದೊ ವಿಶ್ವದಗಲಕ್ಕೆ! ನಿಜ –
ನಡೆದಿಹಿರಿ ನೀವೆಲ್ಲ ನಿದ್ರೆಯೊಳಗೆಚ್ಚರದಿ!
ಆದೊಡೀ ನೆರಳೆಲ್ಲಿ? ಎಂತಹುದು? ಏತರದು?
ಬಾಳ ನರಕಕೆ ಎದ್ದು ಕಣ್ತೆರೆದು ಎವೆ ಬಿಚ್ಚಿ
ನೋವನನುಭವಿಪರಿಗೆ ಹೊರತರಿಗೆ ಕಾಣದದು!
ಆ ನೆರಳು! ಕಡು ನೆಳಲು! ಭೀತಿಯಾ ಮಹಾಜ್ವಾಲೆ

ನೆಲ ಮುಗಿಲ ಒಂದೆನಿಸಿ, ಮೋಡ ಕಡಲಿಗೆ ಇಳಿಸಿ
ಹೊರಗೆಸೆದ ಕರಿ ನೆರಳು! ಅದ ನಾನು ಕಂಡಿಹೆನು!
ಕಂಡಿಹೆನು! ಕಂಡಿಹೆನು! —
ಕನ್ನಡಿಯಲೊಂದು ದಿನ, ಕಣ್ಣ ನೀಲಾಲಿಗಳ
ಹಿಂದೆ, ಲಂಕೆಯೊಡಲಿಗೆ ಹೊಗಲು ಬಲು ಸೂಕ್ಷ್ಮ
ರೂಪವೊಂದನು ಪಡೆದು ಅಣುವಿನಲ್ಲಣುವಾಗಿ
ಬಾಗಿಲಲಿ ನಿಂದು ಇಳಿದಿಳಿದ ಕಪಿಯಂತೆ,
ಸೂಜಿಯ ಮೊನೆಯ ತೀವ್ರತೆಯೊಳೆದ್ದು ಬಲು
ಬೆಳೆದು ರಾಕ್ಷಸರೂಪ ಪಡೆದ ನೆರಳನು ಕಂಡು
ಚೀರಿದೆನು, ಕನ್ನಡಿಯನೊಡೆದೆ ಭೀತಿಯನೊಡೆವ
ಭ್ರಾಂತಿಯಲಿ. ಓಡಿದೆನು, ಭೀತಿ ಹಿಂಬಾಲಿಸಿತು!
ಎತ್ತ ತಿರುಗಿದರತ್ತ ಅದು! ಕಣ್ಣು ಮುಚ್ಚಲು ಎದೆಯ
ಹುತ್ತದಿಂ ಹೊರಗೆದ್ದು, ಹೊಗೆಯಾಗಿ, ಹಾವಾಗಿ
ರುದ್ರರಾಗಕೆ ಹೆಡೆಯ ತಾಂಡವವನಾಡುವದು!
"ಬದುಕಲೂ ಭೀತಿ ಸಾಯಲೂ ಭೀತಿ, ಉಸಿರು
ಆಡುವದು ಭೀತಿಯನೆ – ಇಂತಿರುವ ಬಾಳುವೆಯ
ನೆರಳುಗಳ ನಂಬುತ್ತ ನೆರಳುಗಳ ಬೆನ್ನಟ್ಟಿ
ನೆರಳಿಗಡಿಯಾಳಾಗಿ ನೆರಳಿನಡಿ ಧೂಳಾಗಿ
ಸೊರಗಿ ದಿನ ನರಳುತಿಹ ಜೀವವೆ ಮಹಾರೋಗಿ"
ಜೀವಾತ್ಮ ಹೇಳುತಿದೆ :
ಅಯ್ಯೊ ಎಂತಿದರಿಂದ ಮುಕ್ತಿ?
ಅಯ್ಯೊ ಎಂದೆನೆಗೆ ಬಿಡುವು?

೦೦೦ ೦೦೦

## ೩೧. ಹಾವು ಹೆಡೆ ಬಿಡಿಸಿದಾಗ

೧

ಎಂತೇನೊ ಐತಂದ ಮಾಂತ್ರಿಕ ವಸಂತ
ಬಡಿದು ಡಂ ಡಂ ಡೋಲು
ಬೀಸಿ ಮಾಯದ ಕೋಲು
ಹೂ-ಭಾರ ಸೌರಭಸಾರ ಸೂರೆಗೈದ;

ಇಂದ್ರನಮರಾವತಿಯ ನೆಲೆಕಿಳಿಸಿದ.
ಮಹೇಂದ್ರಜಾಲದ ಆ ಬೃಹತ್‌ಸಂಪುಷ್ಟಕೆ
ಕೋಗಿಲೆಯು ಬರೆದಿತ್ತು ಚುಟುಕ-ಟೀಕೆ :
"ನೀನೊಲಿದರೆ ಕೊರಡು ಕೊನರುವುದಯ್ಯ !
ನೀನೊಲಿದರೆ ಬರಡು ಹಯನಹುದಯ್ಯ !"

೨

ಇಂಬಾಗಿ ಸಿಂಬೆಯ ಸುತ್ತಿ
ಬಿದಿರುಬುಟ್ಟಿಯಲೊರಗಿ ಗೊರಕೆ ಹೊಡೆಯುತ್ತಿದ್ದ ಹಾವ
ಹೊಡೆದೆಬ್ಬಿಸಿದನೀ ಮಹಾನುಭಾವ.
ಕಮನೀಯ ಕಾಮನಬಿಲ್ಲೆ ಮೈದಾಳಿತೆಂಬೊಲಿಹ
ಆ ಹಾವೊ,
ಮುಗುಳಾಗಿ ಮೇಲೆದ್ದು
ಹೂವಾಗಿ ಹೆಡೆ ಬಿಡಿಸಿ
ಮೋಹಿನಿಯ ಅಪರಾವತಾರವಾಗಿ
ಕೆಣಕುತಿರೆ ಕಣ್ಮನವ,
ತೇಲಿ ಬಂದಿತ್ತೊಂದು
ನಿತ್ಯನಿರಂಜನ ಪ್ರಣವಸ್ವರೂಪಿಯ ಮೃದು-ಮಧುರವಚನ ಅಕ್ಷಯ್ಯ:
"ಹುತ್ತವ ಬಡಿದೊಡೆ ಹಾವು ಸಾಯಬಲ್ಲುದೆ ಅಯ್ಯ?"

೩

ಮಿದುಳು ಮದಡಾಗಿತ್ತು.
ಸಂತೆ ನೆರೆಯುತ್ತಿತ್ತು.
ಮನವು ಕಿತ್ತೋಡಿತ್ತು – ಕೈಲಾಸಕೆ.
ಅಕಟಕಟ !
ಅಲ್ಲಿಯೂ ಸಿಕ್ಕಿತ್ತು ಹಾವಿಗೇ ಪಟ್ಟ ! —
ಆ ಪರಶಿವನ ಕೊರಳಿಗೇ ಹಾರ
ತಲೆಗೋ ಕಿರೀಟದ ಭಾರ !!

ನಿಲ್ಲಲಾಗದೆ ಅಲ್ಲಿ
ಜರ್‍ರನೇ ಜಾರಿದೆನು ವೈಕುಂಠವಿರುವಲ್ಲಿ.
ಕಣ್ಣು ತೆರೆದುದೆ ತಡ
ಮೈಯೆಲ್ಲ ನಡುಗಿದುದು ಗಡಗಡ; —
ಅಲ್ಲಿಯೂ ಹಾವಿನದೇ ಉಗ್ಗಡ !

ಹಾವ-ಹಾಸುಗೆ ಮೇಲೆ ಹೊರಳಾಡುತ್ತಿದ್ದನ್ನೈ ಶೇಷಶಾಯಿ !
— ಬಡಪಾಯಿ !

ಶಾಂತಿಸಾಗರದೆದೆಯಲಾಗಿರಲು ಅಣುಬಾಂಬಿನಾಸ್ಫೋಟನ !
ಎದ್ದೆದ್ದು ಬಿದ್ದ ಹೆದ್ದೆರೆಗಳೊದೆತಕ್ಕೆ ಹೋಳು ಹೋಳಾಯಿತ್ತು
ಹೆಬ್ಬಂಡೆ ಮೇಳ !
ಆದರೂ,
ಭದ್ರವಾಗಿಯೆ ಇತ್ತು ದೀಪಸ್ತಂಭ.
ನಡೆಯುತ್ತಲಿದೆ ಅಲ್ಲಿ ಅಭಯಜ್ಯೋತಿಯ ಲೀಲೆ,
ಸಾಗರದ ಎದೆಯ ಮೇಲೆ;
ಮೂಡಿಕೊಂಡಿತ್ತೊಂದು ರಮ್ಯಾದ್ಭುತ-ಬಿಂಬ:
ಆದಿಶೇಷ ಅರಳಿಸಿದ್ದ
ತನ್ನ ಸಪ್ತ ಫಣಾ
ಸುತ್ತುತಿದ್ದಿತದರ ಮೇಲೆ
ಸರ್ವ ವಿಶ್ವ ಕಣಾ!
ಅದ ಕಂಡು ಮನದೆದುರು ಮೂಡಿಕೊಂಡಿತ್ತೊಂದು ನೂತನಪಥ.
ಬೇಡ ನನಗೆಂದಿಗೂ ಬಡ ಜೋಗಿ ಕೈಕೊಳ್ವ ಪಲಾಯನ ವ್ರತ
ಈ ಕಾಳಿಂಗನ ಕುಲದವನ ಹೆಡೆಯ ಕುಟ್ಟಿ
ಕೃಷ್ಣನಾಗಿ ನಿಲ್ಲುವೆ ಆ ಅದರ ತಲೆಯ ಮೆಟ್ಟಿ!

೩೩೩ ೩೩೪

## ೩೨. ನವೋ ನವೋ ಭವತಿ

ಬಾ ಮಡದಿ ! ಬೆಳಕು ಹರಿದಿಲ್ಲಿನ್ನು,
ಮುಂಜಾವ ಕೋಳಿ ಕೂಗಿತು ಅಷ್ಟೆ.
ಅಳಿಯನುಪಚಾರಕ್ಕೆ ಅಣಿಯಾಗುತಿದೆ
ಅಡುಗೆಮನೆಯಲ್ಲಿ.
ಜೇನು ತುಂಬಿದ ತಟ್ಟೆ ಮುಚ್ಚಳವ ತೆಗೆದಿಲ್ಲ.
ಬೇಲಿಯೊಳಗಿನ ಬಳ್ಳಿಗಿಡಗಳಲಿ
ಗಾಳಿ ಮೆಲ್ಲೆ ಹೊರಳಿ ಏಳುತಿದೆ ತುಂದವಾಗಿ.

ತಾರುಣ್ಯ ಚಿಗುರೊಡೆವ ಮುನ್ನ
ಮಗುವಿನ ಭಾವ ಸಂಚರಿಸುತಿದೆ ಇಲ್ಲಿ ಲೀನವಾಗಿ.

* * *

ಅಂದು ಗೌತಮ ಕಂಡ ರಾಹುಲನ ಮುಖಮುದ್ರೆ—
" ಕರುಳ ಕುಡಿ ಕೊರಳ ಸುತ್ತಿದೆ ಪಾಶವಾಗಿ ;
ಸಾವು ಬಂದರೆ ತನ್ನ ರಾಜಮಾರ್ಗದಿ ಬರಲಿ,
ದುರ್ಮರಣ ಸದ್ಗತಿಶೂನ್ಯ "
ಎಂದು ಹೊರಟಿತು ನೆನ್ನೆ ಬುದ್ಧಗಯೆಗೆ
ಕೊರಲ ಗೂಡಿನ ಹಕ್ಕಿ ಕಾವ ಕೊಡುತಿದೆ
ಕುಳಿತು ಕಣ್ಮುಚ್ಚಿ.
ಮೊಟ್ಟೆಯೊಳಗಿನ ಗುಳದ ಪರಿಕರ್ಮ
ಹಕ್ಕಿ ರೂಪಾಗುತಿದೆ ಧ್ಯಾನನಿರ್ಮಗ್ನವಾಗಿ.
ನೆಲದ ಹುತ್ತದಿ ಹಾವು
ಗರುಡ ರೇಖೆಗೆ ಹೆದರಿ ತೆವ್ವಗಿದೆ.

* * *

ಬೋಧಿವೃಕ್ಷದ ನೆರಳ ಸಿದ್ಧಾರ್ಥನೇಳುವ ಸಮಯ.
ಸುರುವಾಗಲಿದೆ ಮತ್ತೆ ಕುರುಕುಲ ಕುರುಕ್ಷೇತ್ರ ;
ತನ್ಮಧ್ಯೆ ಹುಟ್ಟಿ ಬರಲಿದೆ ಗೀತೆ—ಬಾಳು ಸಂವಾದವಾಗಿ.
' ನವೋ ನವೋ ಭವತಿ ಜಾಯಮಾನಃ '

೦೦೦

## ೩೩. ದಾರಿ

೧

ಹಬ್ಬಿಹುದು !
ಬೆಳೆ ಬೆಳೆದು ಹಬ್ಬಿಹುದು !
ತಾಳ ಮೇಳವೆ ಇಲ್ಲ !
ಮಿತಿ ಮೇರೆ ಅದಕಿಲ್ಲ !
ನೆಲದಗಲ ತುಂಬಿಹುದು.
ಜಲದೊಡಲ ಬಯಸಿಹುದು.

೨

ಹಾದ ಹಾದಲ್ಲೆಲ್ಲ
ಬೇರು ಬಿಟ್ಟಿಹುದಲ್ಲ !
ಕುಡಿಯೆಣಿಸುವವನಿಲ್ಲ.
ಎಲೆಯಿಲ್ಲ ! ಹೂವಿಲ್ಲ !
ಎಡ ಬಲಕು ಹಾದಲ್ಲು
ಕಾಯಿಗಳದೇ ಗುಲ್ಲು !

೩

ಋತುಮಾನ ಬೇಕಿಲ್ಲ.
ಬೇಡೆಂಬ ಹಟವಿಲ್ಲ.
ಹಗಲು ರಾತ್ರಿಗಳಿಲ್ಲ
ಸಾಕೆಂಬ ಮಾತಿಲ್ಲ.
ನಗವಿರಲಿ ನದಿಯಿರಲಿ
ದಾಟುವುದು ಸಹಜದಲಿ.

೪

ಅರಸರುಗಳಾಳಿದರು,
ಮಣಿಮುಕುಟ ಉರುಳಿದರು,
ದುಡಿಯದೆಯೆ ಒದುಕಿದರು,
ದುಡಿದು ಗೋಳಾಡಿದರು,
ಗುಡಿಯೊಳಿಹ ದೇವನೊಲು
ಇದೆ ನಿರ್ವಿಕಾರನೊಲು.

೫

ಏನೆಂಥ ಕಾಯಿಗಳು !
ವಿಷಮವಾಕಾರದೊಳು
ಒಂದೊಂದೆ ಕಾಯಿಯೊಳು
ಸಂಸಾರಿ-ಜೀವಿಗಳು
ಹುಟ್ಟಿ ಸಾಯುವರಲ್ಲ !
ಕಾಯಿಗರುವೇ ಇಲ್ಲ.

೬

ಎಂದು ನಾಟಿತೊ ಏನೊ !
ಮೊದಲಾವ ಮಾನವನೊ
ಬೀಜ ನೆಟ್ಟಿಹನೇನೊ !
ತಿಳಿಯದಿದ್ದರು ಏನು ?
ಬಳ್ಳಿ ಬೆಳೆಯುತಲಿಹುದು
ಬಾಳುವೆಯ ನಡೆಸಿಹುದು.

೦೦೦ ೦೦೦

## ೩೪. ಕಾಲ-ಹೃದಯ

ಕಿಡಕಿಯೊಳಗಿಂದ ಎಡವಿ ಬಿತ್ತು
ಬಹು ಪುರಾತನ ಬೆಳಕು . . . ಇನ್ನು,
ತೋಳ ಸಡಲಿಸಬೇಕು !
ಅನ್ಯಾಯ ಅನ್ಯಾಯ !
ಅಯ್ಯೊ,
ಆ ಪ್ರೇಮಸಮಾಧಿಯಲಿ
ಹಾರಲಿಲ್ಲೇಕಯ್ಯಾ ಏಕಪ್ರಾಣ ?
ಬೆಳಕಿನಲಿ ಸಂಸಾರ
ಹೆಣೆಯುವದು ಕಠಿಣವಯ್ಯ !
ದುಡಿತ-ಊಟ-ಬೆವರು-ವಾದ
ಅಪವಾದ-ಪಾಪ-ಪುಣ್ಯ
ಕೈಕಾಲು-ನಾಲಗೆ-ಕಿವಿ-ಕಣ್ಣ

ಇವುಗಳ ತೊಡಕಿನಿಂದ
ಪ್ರೇಮವನು ಬಿಡಿಸುವದು
ಕಠಿಣವಯ್ಯ !
ಕಿಡಕಿಯೊಳಗಿಂದ ಎಡವಿ ಬಿತ್ತು
ಬಹು ಪುರಾತನ ಬೆಳಕು,
ಮತ್ತೆ—ಕಂಗಳಂಗಳದಲ್ಲಿ
ಬಡೆಯತೊಡಿಗಿತು ಡಮರ . . .
ಜಾರಿತಹ ಕೈ-ಕಾಲು-ತುಟಿ-ಎದೆ
ಗಳ ಅನಂತ ಅಪಾರ ವಿಶ್ವ
ಜಾರಿದಳು ಮನದನ್ನೆ
ಅಡಿಗೆಯ ಮನೆಗೆ !
ಇರುಳು ಅರಳಿದ ಪಾರಿಜಾತ ಕೆಳ-

ಗುರುಳಿತು ಬಾಡಿ ಮುದುಡಿ ...
ಕತ್ತಲೆಯ ನೊತ್ತದಲಿ ಕಂಡ
ನಕ್ಷತ ಚಂದ್ರಾಮಗಳು
ಕಾಣದಾದವು, ಕರಗಿ
ಹಗಲ ಹಳೆ ಬೆಳಕಿನಲಿ !
'ಏಳಿರೇಳಿರಿ, ಹಲ್ಲು
ತೊಳೆಯಿರಿ, ಚಹಾ
ಕುಡಿಯಿರಿ,'
ಒಂದೆಕೊಂದು ಅಂಟಿ ನಿಂತ
ಮಿದುಳಿನ ಪರೆಗಳ ನಡುವೆ
ಬೆಳಕು ಚಹಗಳ ಲಹರಿ
ಹರಿಯುತೊಡಗಿತು .... ಇನ್ನು
ಹೊರಡಬೇಕು ದಿನದ ಕೆಲಸಕ್ಕೆ
ಹತ್ತೂವರೆ ! ... ಅಕಟ,
ನಿನ್ನೆ ರಾತ್ರೆ, ನಡುರಾತ್ರೆಯೇ
ಬಂದುಬೀಳಲಿಲ್ಲೇಕೆ
ಜಗದ ಗಡಿಯಾರ
ನನ್ನ ನಾಡಿ ! —
ನನ್ನ ಹೃದಯ ?
ಕಾಲಕ್ಕೆ ಹೃದಯವೇ ಇಲ್ಲ!

೦೦೦

## ೩೫. ಸಂಜೆ ಆಯಿತು

ನಮ್ಮೂರಲ್ಲಿ
ಅಕಾರಣವಾಗಿ ಬೆಳಗಾದ ತಪ್ಪಿಗೆ
ಸಂಜೆ ಆಯಿತು .... ....

ಪಡುವಣ ನಿಟ್ಟಿನಿಂದ ಬಿಟ್ಟೀ ಚಾಕರಿಯ ಹೊತ್ತು
ಬಿಟ್ಟ ನಿಟ್ಟುಸುರಿಗೆ
ಕಲ್ಪವೃಕ್ಷಕಾಮಿನಿ ತಲೆದೂಗಿ ಸಮ್ಮತಿ ಸೂಚಿಸಿದಾಗ
ಸಂಜೆ ಆಯಿತು..... ....
ಬಾಯಾರಿಕೆಯಿಂದ ಬಳಲಿ
ಸಮುದ್ರದೆಡೆಗೆ ಓಡಿಬಂದ ಸೂರ್ಯನು
ಉಪ್ಪುನೀರಿನ ಈ ಸಿಂಧುವಿನಲ್ಲಿ
ಕುಡಿಯಲೊಂದು ಬಿಂದುವಿಲ್ಲ
ಎಂದು ಅಲ್ಲೇ ಅಂಚಿನಲ್ಲಿ
ಕಂಗಲಾಗಿ ಕಸಿವಿಸಿಗೊಂಡು ಕೆಂಪೇರಿ ನಿಂತಾಗ
ಸಂಜೆ ಆಯಿತು .... ....

ಕುರುಕ್ಷೇತ್ರಕ್ಕೆ ಹೊರಟ ಬಲರಾಮನಿಗೆ
ಎದುರು ಬಂದ ಗೋವುಗಳು
ಅಭ್ಯಾಸಬಲದಿಂದ ಬಾಯಾಡಿಸುತ್ತ

ದಾರ್ಶನಿಕರಂತೆ ಮೇವಿನ ಕನಸು ಕಾಣುತ್ತ
ಬೀದಿಯಲ್ಲಿ ಅಲ್ಲಲ್ಲಿ ಪವಡಿಸಿದ್ದವು.
ಕ್ಷಯವಿಡಿದ ಕೊಟ್ಟಿಗೆಗಳ ಬಾಗಿಲು ತೆರೆದು
ಕಮಗಾಗಿ ಧೇನಿಸುತ್ತಿದ್ದ
ಒಡೆಯರನ್ನು ಅವು ಮರೆತಿಲ್ಲ.
ಆದರೂ ಬಂಜೆ ಹೆಂಡತಿ
ಷಂಢಗಂಡನ ತೋಳ ತೆಕ್ಕೆಯಲ್ಲಿ
ಹೋಗುವಷ್ಟು ನಿರುತ್ಸಾಹ
ಹುಟ್ಟಿಸಿದ ದೇವ ತಾ ಹುಲ್ಲ ಮೇಯಿಸದಿದ್ದರೂ
ನಾಕಿದ ಒಡೆಯನೊಡನಿರುವ
ಸೆಗಣಿಯ ಋಣಾನುಬಂಧವನ್ನು ನೆನೆದು
ಅವು ಮೈಮುದುಡಿ ಎದ್ದಾಗ
ಸಂಜೆ ಆಯಿತು .... ....

ನಮ್ಮೂರ ಅಗಸನಲ್ಲಿ ಒಂದು ಕತ್ತೆ ಇತ್ತು.
ಒಡೆಯ ಹೊಡೆದ ಹೊಟ್ಟೆಯುರಿಗೆ
ಹೊಲದ ಪೈರನ್ನೊದ್ದು ಕೆಡಿಸುವ ಚಟವಿತ್ತು ಅದಕ್ಕೆ.
ಒಮ್ಮೆ ಹೇಗೋ ಅದರ ಕಾಲು ಮೊಂಡಾಗಿಬಿಟ್ಟಿತು.
ಆಗ ಅದು ಕಾಲೆಳೆಯುತ್ತ
ಧೂಳೆಬ್ಬಿಸುತ್ತ ತಿರುಗುತ್ತಿತ್ತು.
ಅದೇ ದಾರಿಯಿಂದ
ಮುಂಬಯಿಯಲ್ಲಿ ಆಫೀಸ ಮ್ಯಾನೇಜರರು
ಬಯ್ದುದ್ದನ್ನು ನಮ್ಮೂರ ಗುಡ್ಡಗಳು
ಮಾರ್ದನಿಗೊಡುತ್ತಿದ್ದುದಕ್ಕೆ ಅಚ್ಚರಿಬಟ್ಟು
ಸಂಕಟಪಟ್ಟು ಕಾಲೆಳೆಯುತ್ತ —
ಹಿಂದೊಮ್ಮೆ ಎಷ್ಟುದ್ದವಿದ್ದವಾ ಕಾಲುಗಳು !
ಮುಂಬೈಯಿಂದ ಇಳಿಬಿಟ್ಟ
ಕಾಲಿನ ಕಾಯಿದೆಯ ಬೂಟು .
ನಮ್ಮೂರ ಕೆಂಚನ ಹೊಟ್ಟೆಗೆ ನಿಲುಕುತ್ತಿತ್ತು
— ಕಾಲೆಳೆಯುತ್ತ
ವಾಯುಸೇವನೆಗೆ ಹೊರಟ
ಜಮೀನದಾರರ ಔರಸಪುತ್ರರ
ಇಸ್ತ್ರೀ ಪಾಯಿಜಮಗಳು ದಾರಿಯ
ಕೆಂಧೂಳಿಗೆ ಮುದುಡಿಕೊಳ್ಳುತ್ತಿದ್ದಾಗ

## ಕಾವ್ಯ

ಸಂಜೆ ಆಯಿತು . . . . . .
ಅದು ಪೇಟೆ, ಮೀನ ಪೇಟೆ.
ಅಲ್ಲಿ ನೆರೆದವರೆಲ್ಲರೂ ಸಂಸಾರಸಾಗರದಲ್ಲಿ
ಮುಗ್ಗಿದ ಜೀವಗಳೇ.
ಉಂಡ ನೋವಿಗೊಂದರಂತೆ
ಕರಿಮಣಿಗಳ ಪೋಣಿಸಿ
ಎದೆತುಂಬ ಸರಗಳನ್ನು ಹೊತ್ತ
ಅರೆಬೆತ್ತಲೆ ಒಕ್ಕಲಗಿತ್ತಿಯರುಂಟು
ಅಲ್ಲಿ.
ಕಳ್ಳ ನಾಯಿಗಳುಂಟ
ಧೂರ್ತ ಕಾಗೆಗಳುಂಟು
ಮತ್ಸ್ಯಗಂಧಿಯರಿಗೂ ಇವಕೂ
ಕಣ್ಣು ಮುಚ್ಚಾಲೆ ಆಟವುಂಟು.
ಮೀನಸಂತೆಯಲ್ಲಿಯೇ ಗಾಳಹಾಕಿ ನಿಂತ
ಶಿಕಾರಿ ಪುರುಷಮೃಗಗಳುಂಟು.
ಇವರೆಲ್ಲರ ಕಂಠಕಲರವದಲ್ಲಿ
ಮೀನು ಪಸಂದ ನಾರುವಲ್ಲಿ
ಆಗೇರ ಹೆಂಗಸೊಬ್ಬಳು
ತನ್ನ ಸೀರೆಯ ಚುಂಗಿನಲ್ಲಿ
ನಾಲ್ಕು ಹಿಡಿ ನುಚ್ಚಕ್ಕಿ ತಂದಿರುವಳು.
ತನ್ನ ದಿನದ ಗೆಯ್ಮೆಯನ್ನು
ಎದೆಗಾನಿಸಿ ಧೇನಿಸಹತ್ತಿಹಳು.
" ಗಂಡನ ಅಕ್ಕಿ ಗಂಜಿಗಾಯ್ತು.
ನನ್ನ ಅಕ್ಕಿ ಮೀನಿಗಾಯ್ತು.
ಒಂದು ಬಿಲ್ಲಿ ಉಪ್ಪು ಮೆಣಸು
ಉದ್ರಿಯಾಗಿ ಕೊಂಡರಾಯ್ತು.
ಎಲೆ ಅಡಿಕೆ ತರಲಿಲ್ಲವೆಂದು
ಗಂಡ ಹೊಡೆದರೆ .... ....
ನಿತ್ಯದಂತೆ ಸುಮ್ಮನಿದ್ದರಾಯ್ತು "
ಎಂದು ಹರುಷದಿಂದ ಅಕ್ಕಿ ಕೊಟ್ಟು
ಮೀನ ಕೊಂಡು ಬಿನದಮಾಗೆ
ಮನೆಗೆ ನಡೆಯುತಿರಲು

ಎಲ್ಲಿಂದಲೊ ಹದ್ದು ಬಂದು
ಅದನು ಕಸಿದು ಹಾರಿದಾಗ
ಸಂಜೆ ಆಯಿತು

ಅದು ನಮ್ಮೂರ ರಾಮದೇವರ ಗುಡಿ
ಅಲ್ಲಿ ಅವನಿಗೆ ಚಿರಕಾಲವೂ ವನವಾಸ.
ಗೂಗೆಗಳ ಶಂಖವಾದ್ಯ ರಾತ್ರಿ ಎಲ್ಲವೂ
ಕಣ್ಣು ಕಪ್ಪಡಿಗಳ ಚಾಮರಸೇವೆ ಹಗಲೆಲ್ಲವೂ
ಮಳೆಗಾಲದಲ್ಲಿ ಪರ್ಜನ್ಯಾಭಿಷೇಕ
ಹೊರಗೆ ಕಟ್ಟೆಯ ಮೇಲೆ ಶಿಷ್ಯಸಮೇತರಾಗಿ
ಪದ್ಮಾಸನಸ್ಥರಾದ ಭಟ್ಟರು
ಗುಲಾಮರಾಣಿ ಗುರುತಿಸಲಾಗದಷ್ಟು
ಕತ್ತಲಾಯ್ತೆಂದು ಆಟ ಬಿಟ್ಟಿದ್ದಾಗ
ಸಂಜೆ ಆಯಿತು .... ....

ಹಗಲಿನ ಉರಿಬಿಸಿಲಿನಲ್ಲಿ ಬರಿಹೊಟ್ಟೆಯಲ್ಲಿ
ದಣಿದ ಕೆಂಧೂಳಿಯ ಬೀದಿಯು ಈಗ
ದಣಿದು ವಿರಮಿಸುವ ನಾಯಿಯ ನಾಲಿಗೆಯಂತಿತ್ತು
ಅನ್ನದ ಬಂಗಾರದ ಜಿಂಕೆಯನ್ನು ಬೆಳಗಿನಿಂದಲೂ
ಅಟ್ಟಟ್ಟಿ ವಿಫಲರಾದ ಎಲುಬಿನ ಹಂದರಗಳು
'ಹಾ ರಾಮ' 'ಹಾ ರಾಮ' ಎಂದು ಪರಿತಾಪಪಡುತ್ತ
ಅದರ ಮೇಲೆ ಅಲ್ಲಿಲ್ಲಿ ಹರಿದಾಡುತ್ತಿದ್ದವು.
ಕಂಕುಳಲ್ಲಿ ಟೊಪ್ಪಿಗೆ ಹಿಡಿದ ವಿದ್ಯಾವಂತರು
ಬೊಕ್ಕ ತಲೆಗಳ ಶೋಧಕ್ಕಾಗಿ ಅಲೆದಾಡುತ್ತಿದ್ದರು.
ಸುದಾಮನ ಮೇಲುದವನ್ನು ಹೊದ್ದ
ಮನೆಗಳು ಹೊರಗಿನ ಕತ್ತಲನ್ನು
ಸ್ವಾಗತಿಸುತ್ತಿದ್ದವು.
ಅಡಿಗೆಯ ಒಲೆ ಉರಿಯದಿದ್ದುದನ್ನು
ಕಂಡು ಮಕ್ಕಳು ಅಳಹತ್ತಿದಾಗ
ಸಂಜೆ ಆಯಿತು. .... ....

ಅಕಾರಣವಾಗಿ
ನಮ್ಮೂರಲ್ಲಿ ಬೆಳಗಾಗಿತ್ತು.
ಆ ತಪ್ಪಿಗೆ

ಸಂಜೆ ಆಯಿತು.
ಕತ್ತಲೆ
ತನ್ನ ತವರೂರಿಗೆ ಬಂತು.

## ೩೬. ಅವತಾರ-ಪುರುಷ

೧

ಕತ್ತೆ ಕಿರುಚುವ ಧ್ವನಿಯೋ,
ಮತ್ತೆ ಮತ್ತೆನ್ನುವ ನುಡಿಯು ಮರೆಸುವ
ನಮ್ಮ ಕತ್ತೆ ಕಿರುಬ ಮಗ
ತೆಂಗಿನ ಮರದುದ್ದ ಬೆಳೆದರೂ
ಮುಳ್ಳು ಗಿಡದ ಬುದ್ಧಿ.
ಅರ್ಜುನನ ಮಗ ಅಭಿಮನ್ಯು
ನನ್ನ ಮಗ ಬರಿ ಶೂನ್ಯ
ಚಕ್ರವ್ಯೂಹ ಮುರಿದು ಸತ್ತ
ಅದೇ ಅವತಾರ ಉರುಳಿ ಬಂತು ನನ್ನ ಉದರದೊಳಿತ್ತ.
ಸೆರೆಮನೆಯ ವಸುದೇವರೆದುರು
ಬರ್ತಕಂಟ್ರೋಲ್ ಕಂಸನ ಆಟ ಬರಿದಾಯ್ತು.
ಸಂಭವಾಮಿ ಕ್ಷಣೆ ಕ್ಷಣೆ.
ನಿಜರೂಪವ ನೊಂದು ಕಾಣೆ.
ಅಭಿಮನ್ಯು ಶೂರ ಸ್ಫುರದ್ರೂಪಿ
ಇವ ಬಕಾಸುರ ಕುರೂಪಿ.
ಅವ ಅಪರೂಪಿ, ನನ್ನ ಮಗ ಬಹುರೂಪಿ
ಸಂಸಾರಸಮರ ಒಂದೆಡೆ,
ಕುರುಕ್ಷೇತ್ರ ಕೋಲಾಹಲ ಆಕಡೆ
ಕಲಿಂಗದ ಯುದ್ಧ ಇನ್ನೊಂದೆಡೆ
ಅಂತು ಕೋಲಾಹಲ ಕೇಳಬೇಕೇ
ಮುಟ್ಟಿದ್ದ ಹಾಲೆಲ್ಲ ಹಾಲಾಹಲ
ಅತ್ತೆಯ ಮಗು ?

ಹುಟ್ಟಿಸಿದ ನಾ ನಗುತಿರುವಾಗ ನೀನೇಕೆ ಅಳುವೆ ?
ಸುಂಬಳ ಸುರಿಸಿ ಅತ್ತ ನನ್ನ ಮಗ
ನಗು ಕಲಿಯನೇ ?
ಅತ್ತರೇನಂತೆ ?
ಚಂದಿರನ ಕಂಡು ರಾಮನಂತಳಲಿಲ್ಲ
ತುಂಟನಾದನೇ ?
ಹೆಂಗಸರ ಪೀಡಿಸುವ ಕೃಷ್ಣನಂತಾಗಿಲ್ಲ.
ಹೇಡಿಯಾದನೇ ?
ಅಬಲೆಯುರ ಮಧ್ಯದುತ್ತರನ ಗುಣವಿಲ್ಲ
ಕ್ರೂರತನವಾಯಿತೇ ?
ತೈಮೂರರಂತೆ ದುಷ್ಕರ್ಮಕ್ಕಿಳಿದಿಲ್ಲ.
ಪರಸತಿಯನಾಳುವ ಜಹಾಂಗೀರನಲ್ಲ
ಅರಸಿಕತೆಯ ಔರಂಗಜೇಬನಲ್ಲ.

೨

ಇವ ವಿಚಾರಶೂನ್ಯ
ವಿಷುವೃತ್ತದ ಕಾಡಿನಂತಿದೆ ಒಮ್ಮೆ
ಸಹರಾದ ಮರುಭೂಮಿ ಅದು ಇನ್ನೊಮ್ಮೆ
ಇವ ಸುಡುಬಿಸಿಲ ಮಳಲರಾಶಿಯ ಒಂಟೆ
ಮುನಸಿಪಾಲಟಿಯ ಗಟಾರ ಕೊಳಚೆ ನೀರಿನಂತೆ
ಇವನ ಚಿತ್ತ ಕದಡಿದೆ
ಕಲಕಿದೆ ಅಯ್ಯೋ, ನಾತ ಬೇರೆ ಬರುತಿದೆ
ಎಷ್ಟು ಜನ್ಮದ ಹೊಲಸಿದು ? ಪ್ರಾಯವೆಷ್ಟು ಹಳೆಯದು ?

೩

ಎಲೆ ಮರುಳಾ,
ಹಳೆಯ ಹರಕಂಗಿ ತಲೆ ಬೇಡ ಮುದಿಗೊಡ್ಡ
ಕಿತ್ತೊಗೆ ನಿನ್ನ ತಲೆಯ ಬುರುಸಿಡಿದ ರಾಡು
'ಅಬ ತೇರೆ ಸಿವಾ ಕೌನ ಮೆರಾ' ಮರೆತು
ಹಚ್ಚು 'ಬದಲಾಜಮಾನಾ' ದ ಹೊಸ ರೆಕಾರ್ಡು
ಹುಚ್ಚಿಡಿದ ತಲೆಗೆ ಇದು ಸಾಕ್ಷಿ ರಿಕಾರ್ಡು
ಕಂದಾ,
ಕೇಳು, ನೋಡು,
ತಿಳಿ, ಮಾಡು.

ಕಟ್ಟು ನಿನ್ನ ಪ್ರಗತಿಮನೆಗೆ ನ್ಯೂ ಮೊಡೆಲ್ ' ಮಾಡು '
ಇದು ನಿನಗೆ ಋತುಕಾಲ
ಬದುಕಿಗಿದು ಹದಗಾಲ
ಎವೆಯಿಕ್ಕದೇ ನೋಡು
ಎತ್ತ ಹೋದರೂ ಎದುರಿರುವ
ಮುದಿ ಎತ್ತಿಗೆ ಹಿಂದೂಡು.
ಜೊಲ್ಲು ಸುರಿಸಿದ ನಿನ್ನ ಬಾಯಲಿ
ಉತ್ಸಾಹದ ಜಪ ಧರಿಸು.
ಹೊಲಸು ತುಂಬಿದ ನಿನ್ನ ಕಣ್ಣಲಿ
ಆನಂದದ ಬಾಷ್ಪ ಹರಿಸು.
ಅತ್ತತ್ತು ಅಪಸ್ವರವಾದ ನಿನ್ನ ಕಂಠದಲಿ
ಸುಸ್ವರದ ಕಷಾಯ ಸುರಿಸು
ಕೊಡಲಿವರ್ ಕುಡಿದು ಬೆಳೆಸಿದ ನಿನ್ನ ದೇಹಕೆ
ವ್ಯಕ್ತಿತ್ವದ ' ವಿಟಾಮಿನ್ ' ಕೊಡಿಸು
ನಿನಗೆ ಹುಟ್ಟಿಸಿದ ನನಗೊಂದು ಹೆಸರಿಡು
" ಇದಕಾವ ಸಂದೇಹ "
ಭಕ್ತವತ್ಸಲನನ್ನು ಬುಶ್‌ಕೋಟಿನ ಕಿಸೆಯಲಿರಿಸಿದ
ನನ್ನ ಕಂದನಿಗಿದು ಗೊಂಬೆಯಾಟ.
ಮಕ್ಕಳೇ ಬೇಡೆಂದಿದ್ದೆ
ಇನ್ನು ಹುಟ್ಟಲಿ ನನಗೆ ಮನೆತುಂಬ ಇವರೇ.
ತಂತಿಯಿಲ್ಲದ ತಂತಿಯಿಂದ ಸುದ್ದಿ ಮುಟ್ಟಿತು ' ಅವನಲ್ಲಿ '
ಬರೆದೇ ಬಿಟ್ಟ ಬಜೆಟ್ಟು ಭಗವಂತ ಅಲ್ಲಿ.
ಆದ ತಿಳಿದು,
ನಗು ಅಳುವು ಒಮ್ಮೆಲೇ ಎನಗಾಯಿತಿಲ್ಲಿ.

೦೦೦

## ೩೭. ನಾ ಮಾನವ

ಚಿನ್ನದ ಕೈಗಡಿಯಾರ ಕಟ್ಟಿ
ಕಾರಿನಲ್ಲಿ ಹೋಗುವನದೋ ಜಗಜಟ್ಟಿ
ನಿಲ್ಲೆಂದರೆ ನಿಲ್ಲುವನೇ ?
ಹಿಂದಿರುಗಿ ಒಮ್ಮೆಯಾದರೂ ದೃಷ್ಟಿ ಚೆಲ್ಲುವನೇ ?

ಓ, ಬಂದೆ ಬಂದೆ ಬಂದೆ
ಅಯ್ಯೋ ಕಾಲ್ಗಳೆರಡೂ ಮುರಿದು ಬೀಳಲು ಜಟಕಾ ಹಿಡಿದೆ.
ಕಾರಿನಲಿ ಸಾಹೇಬ ನೋಡುತಿರೆ ನಾನಿಂದು ಕುದುರೇಸವಾರಿ !
ನೋಡುವವರಿಗಿದಾಯ್ತಲ್ಲವೇ ಮಜಾ ಭಾರಿ.
ಅಲ್ಲದೇ ನಾನೇನು ಮಾಡಲಿ ? ನಾನೇನು ಮಾಡಲಿ ?

" ವೇಸ್ಟಲೆಂಡ್ ' ಕೆಂಟೋಸ್ 'ಗಳನು ಓದಿರುವೆಯಾ ಹುಚ್ಚ ?
ಅಣುಶೋಧಗಳನೆಲ್ಲ ತಿಳಿದಿರುವೆಯಾ ಮರುಳ ?
' ಏನ್‌ಸ್ಟೇನ್ ' ' ರಸೆಲ್ಲ 'ರನ್ನು ಬಲ್ಲೆಯಾ ತಮ್ಮ ?
ಕಣ್ಣೆದುರು ಹಾಯುವದಿದಾವ ಚಿತ್ರಪಟ ?
ಬಾಂಬು, ವಿಮಾನ ಅಣು-ರಿಆಕ್ಟರು ನ್ಯೂಯಾರ್ಕ ಮಾಸ್ಕೋ ....
ಬರಿಗಣ್ಣಿನಿಂದ ನೋಡಿ ಬಾಯಿ ಮುಚ್ಚು.
ಅಲ್ಲದೇ ಮಾಡುವೆಯೇನು ಅದಕಿಂತ ಹೆಚ್ಚು ?

ಪಂಖದ ಗಾಳಿ ಮೈಗೆ ತಣ್ಣಗೆ ಸೋಂಕುತಿರೆ
ರೇಡಿಯೋ ಗಾನದ ಧ್ವನಿ ಕೋಣೆ ತುಂಬ ಜೀಕುತಿರೆ
ಬಲ್ಬುಗಳ ಪ್ರಖರ ಬೆಳಕು ಮೂಲೆಗಳ ಬೆಳಗುತಿರೆ
ದಣಿದ ಮೈಗೆ ಬಿಸಿ ಚಹದ ತುಸು ಸಂಸ್ಕಾರವಾಗಲು
ಬೇಸತ್ತ ಮನಕೆ ಸವಿನುಡಿಗಳ ನೀಹಾರ ತಾಗಲು
ನಾ ಕೂಡುವೆ ಮಕ್ಕಳೊಡನಾಡಲು ಇಸ್ಪೀಟಿನಾಟ.
ಬೇಸರ ಕಳೆಯಲು ಅದೊಂದೇ ಯೋಗ್ಯ ಚಟ.

ಹಗಲಲಿ ನಿತ್ಯದ ಬೆವರ ದುಡಿತ
ಪೇಟೆಯಲೊಂದಿಷ್ಟು ಖರೀದಿಯಲೆತ
ವೃತ್ತಪತ್ರಿಕೆಯ ಸಮಾಚಾರ ವಾಚನ
ನೆರೆಮನೆಯಲಿ ತುಸು ಹರಟೆ ಭಾಷಣ
ಉದ್ಯಾನ ಕಿನಾರೆಗಳೆಡೆ ವಿಹಾರ
ತಲೆನೋವಿಗೊಂದಿಷ್ಟು ನಿದ್ರಾಧಾರ
ಬಂದ ಅತಿಥಿಗಳಿಗೆ ಚಹಾ ಮತ್ತೆ ಸಿಗಾರೇಟು
ಖುರ್ಚಿ ಮೇಜುಗಳ ಶಿಸ್ತಿನ ಥಾಟು
ಒಂದರ ನಂತರ ಒಂದೊಂದು
ಸಾಲೆಯ ವೇಳಾಪತ್ರಿಕೆಯಂತಿಂದು
ಕಾಲಪ್ರವಾಹದ ಘಟಿ ಘಟಿ ಘಟಿ
ಉದುರುತಿವೆ ಒಂದಕೊಂದಂಟಿ

ಇನ್ನೂ ಮಾಡುವದೇನಿಲ್ಲ ಚಿಂತೆ

ಏಕಾಂತದಲಿ ಬಿಚ್ಚುವದು ಆಕಳಿಕೆಗಳ ಕಂತೆ.
ಇಲ್ಲದಿರೆ ನೋಡುವದು ಮಡದಿಯ ಮುದ್ದುಮುಖ
ಇಲ್ಲದಿರೆ ಮನೆಯು ಕಸಗುಡಿಸುವದೂ ಒಂದು ಸುಖ
ಇಲ್ಲದಿರೆ ಕೂಡುವೆನು ಮಕ್ಕಳೊಡನಾಡಲು ಇಸ್ಪೀಟಿನಾಟ,
ಬೇಸರ ಕಳೆಯಲು ಅದೊಂದೇ ಯೋಗ್ಯ ಚಟ.

ಓ, ಅದೇನು ನಾರುತಿದೆ ಮನೆಯಲ್ಲಿ ?
ಸಿಗಾರೇಟಿನ ಧೂಮ್ರಗೋಲಕಗಳು ಹಾರಾಡುವಲ್ಲಿ ?
ಅಗರುಬತ್ತಿಗಳು ಸುಗಂಧಿಸುವಲ್ಲಿ ?
ಅತ್ತರು ಪೌಡರುಗಳ ಸಮುದಾಯದಲ್ಲಿ ?
ಏನು ನಾರುತಿದೆ ?
ಏನಿಲ್ಲ ಅದು ಬರಿಯ ಭ್ರಮೆ ಕಣೋ
ತನ್ನ ಪಾಲಿಗೆ ತಾನಾಗಿದ್ದರೆ ಏನಾಯ್ತು ಹಾಳು ?
ಮತ್ತೆ ಯಾಕೀ ವ್ಯರ್ಥ ಗೋಳು
ಸುಗಮವಾಗಿ ಸಾಗುತಿರೆ ಬಾಳು ?

ಓ, ಯಂತ್ರಗಳೇ ಗಡಿಯಾರಗಳೇ ಬಸ್ಸುಗಳೇ ರೈಲುಗಳೇ
ಮತ್ತೆ ನಾ ನಿತ್ಯ ತುಳಿವ ತುಳಿತುಳಿದ ಮೈಲುಗಳೇ
ಕೆಣಕಬೇಡಿ ತೆಗಳಬೇಡಿ ನಾ ಮಾನವ ಮಾನವ
ಮೀನ ಕಪ್ಪೆ ಮೃಗಗಳ ಮೆಟ್ಟಿ ನಿಂತ ದೇವಬಾಂಧವ
ಓ, ಹೇಗೆ ತಿಳಿಸಲಿ ಹೇಗೆ ಜಯಿಸಲೀ ವಾದವ ?

ಭವಚಕ್ರದ ಒಂದು ಕೀಲಾದರೂ
ಒಂದು ಕೀಲಾದರೂ ಒಂದು ಹೋಳಾದರೂ
ಒಂದು ಹೋಳಾದರೂ ಒಂದು ಅಣುವಾದರೂ
ಕನಿಷ್ಠಕ್ಕೊಂದು ಪರಮಾಣುವಾದರೂ ಆದರೂ ... ...

ಓ, ಜಗವೇ ತೊರೆಯಬೇಡ ನನ್ನನ್ನು
ನಾ ನಿನ್ನವನಲ್ಲವೇನು ?
ಎಡಬಲದಲ್ಲಿ ಹಾಯುತಿರೆ ಬೆಳಕು
ನನ್ನ ಮೇಲೇ ಬೀಳುವದಲ್ಲ ಸದಾ ಯಾತರದೋ ನೆರಳು ಕೊಳಕು !
ಓ, ಪಥಿಕ ನಾನು ಕಣೋ ನಾನು ಕಣೋ ನಾನು ಕಣೋ .....
.... .... ನಾ ಮಾ .... ನ .... ವ .... !

## ೩೮. ಮೂರು ಸಮುದ್ರಗೀತೆಗಳು

ನಾಲ್ಕು ದಿನ ಕಂಡಕಂಡಲ್ಲಿ ನೀರೇ ನೀರು !
ಕಣ್ ಸುತ್ತಿ, ಮೈ ಸುತ್ತಿ, ಮತ್ತೆ ಮನವನು ಸುತ್ತಿ
ಬರಿಯ ನೀರೇ ನೀರು !
ದಿಕ್ಕುಗಳ ಕಂಠಮಟ ತುಂಬಿ ಅಪರಂಪಾರ
ನೀಲ-ಜಲಲೋಕ ಹಬ್ಬಿತ್ತು ತೆರೆತೆರೆ ತೂಗಿ
ಅವಿರತ ಅವಿಶ್ರಾಂತ
ಪ್ರಜ್ಞೆಯನ್ನಾವರಿಸಿ ನಿಂತ ಅತಿಪ್ರಜ್ಞೆಯೊಲು.

ಹಾಯಿ ಬೀಸುತ ತೇಲಿ ಬಂದೆವಯ್ಯಾ ಇಲ್ಲಿ
ಜಲಮಯ ಜಗತ್ತಿನಲಿ
ನಿದ್ದೆಯಲಿ ಕನಸು ಬಂದಂತೆ.
ನೀರ್ತಡಿಗೆ ನಿಂತು ಕೈಯಲೆದು ಬೀಳ್ಕೊಡ ಬಂದ
ಬಂದರಿನ ಬಂಧು-ಹಾಸವನು ದಂಡೆಗೆ ಬಿಟ್ಟು.
ಹೆಜ್ಜೆ ಮೂಡದ ನಾಡಿನಲ್ಲೀಸಿ ನಡೆದಿತ್ತು
ಹಡಗ ದಿಗ್ದೇಶಕ್ಕೆ
ಮೂಗು ಗಾಳಿಯ ನಂಬಿ ನಡೆದ ಜಲಚರದವೊಲು.

ದಂಗುವಡೆದಿತು ಜೀವ ದಿಙ್ಮಂಡಲವ ತುಂಬಿ
ತೆರೆಯೆ ಜಲಮಂಡಲದ ನೀಲ ರೇಖಾವಲಯ
ದಿಕ್ಕಿಲ್ಲ ದಿಶೆಯಿಲ್ಲದಂಥ ಲೋಕವಿದಯ್ಯ
ವಿಜನರಮಣೀಯ, ಗಭೀರ, ಗೋಲಾಕಾರ.
ಸುತ್ತ ವ್ಯೋಮದಪಾರ
ಮೈಯೊಡ್ಡಿದಲ್ಲೆಲ್ಲ ನಿಸ್ಸೀಮದಿಂದ ನಿಸ್ಸೀಮಕೂ
ಹಾಯ್ದು ಬಹ ಮರುತನುಚ್ಛ್ವಾಸ
ಶೀತಲ ಅನಿರ್ಬಂಧ ಸ್ವಚ್ಛಂದ ಸ್ವಚ್ಛಂದ
ಸಡಲಿದುವು ಅಹಾ ನಿಂತಲ್ಲೆ ಜೀವದ ಬಂಧ !
ಮನಸಿನಾಳದಲೆಲ್ಲ
ಧವಲ ಮೇಘಗಳ ಆಕಾಶಗಮನದ ಚೆಂದ !

ಅಡಿಗೆ ತೂಗುತಲಿತ್ತು ತನ್ನ ಕಾಲಾತೀತ
ತಾಲದಲಿ ಸಾಗರದಪಾರ ಬಲ.
ಹಬ್ಬಿತ್ತು ನಾಲ್ದೆಸೆಗು ಸ್ವಜನ-ಹನನ-ನಿಮಗ್ನ
ಲವಣ ಸಿಂಧುವಿನ ಪ್ರಾಚೀನ ಚೇತನದುಸಿರು.

ಕಣ್ಣಂಚಿನಾಚೆಗೂ ಕುಣಿದು ಕಂಗೊಳಿಸಿತ್ತು
ಖಂಡಗಳನೆತ್ತಿ ಖಂಡಗಳಳಿಸಿ ಉಚ್ಛಲಿಪ
ಅಹ ತಿಮಿಂಗಿಲ ಜನನಿ ! ಅಹಾ ನವರಂಗಜಲ !

೨

ನೀರಂಚಿನಲಿ ಕುಳಿತ ಬಿಳಿಯ ಕೊಕ್ಕರೆ ಪಕ್ಕ
ತೆರೆದು ಹವ್ವನೆ ಹವೆಗೆ ಹಾರಿ, ಬೆಳ್ಳಗೆ ಮಿಂಚಿ
ಹೊಡೆಯೆ ಚಕ್ಕರು
ಬಾಯಿಲ್ಲದಭಿಲಾಷೆಗಳು ಕೆರಳಿ ನಿಂತವನೆ
ಬಾ ಇಲ್ಲಿ.

ಮಳಲಲಲೆದಾಡಿ ಓಂಕಾರವಡಗಿಹ ಶಂಖ
ಮಳೆಬಿಲ್ಲಿನೇಳು ಬಣ್ಣಗಳ ಪಡೆದಿಹ ಶಿಂಪು
ಕಡಲ ಬಳ್ಳಿಯ ಬೀಜ
ರವಿಯಗ್ನಿಯುಂಡು ಝಳಪಿಸುವ ಮೀನದ ಎಲುಬು–
ಒಂದೊಂದು ಕೌತುಕವನೂ ಎತ್ತಿ ಕಡಲ ಗೂ-
ಢಗಳನ್ನೆ ಧೇನಿಸುತ ನಡೆದವನೆ
ಬಾ ಇಲ್ಲಿ.

ನೆಲವ ವ್ಯೂಹಿಸಿ ಮೊರೆವ ವರುಣಸಾಮ್ರಾಜ್ಯವನು
ಬ್ರಹ್ಮದೇವರ ಗುಡ್ಡವೇರಿ ಝುಗ್ಗನೆ ಕಂಡು
ಜಲ ಚಕಿತನಾದವನೆ
ಬಾ ಇಲ್ಲಿ.

ಮನೆಗೆ ಮರಳಿದರೂನು, ದಿನಗಳುರುಳಿದರೂನು,
ದಿಗ್ದೇಶಗಳಿಗೆ ತೆರಳಿದರೂನು ಉದಧಿಯುದ್–
ಘೋಷವನಗಾಧ ವಿಶ್ವದ ಕೂಗಿನೊಲು
ಎದೆಯಲಿ ಹೊತ್ತು ನಡೆದವನೆ
ಬಾ ಇಲ್ಲಿ.

ಇದು ನೀರು !

ಮನೆಯ ಹಿತ್ತಿಲ ಬಾವಿಯಲ್ಲಿ ತುಂಬುವ
ಪ್ರಾಣಜಲವಲ್ಲ.
ಊರು ಕೇರಿಗೆ ಹಸಿರ ಹಾಸಿ ಹರಿಯುವ
ಹಳ್ಳ-ಹೊಳೆಯಲ್ಲ.
ನೆಲವುತ್ತು ಬಿತ್ತುವರೆ

ಮುಗಿಲಿಂದ ಸುರಿವ ಸೋನೆಯಿದಲ್ಲ.
ಕಲ್ಪಾಂತ ಜಲವೆ ನವಖಂಡ ಪೃಥ್ವಿಯ ನುಂಗಿ
ನೊರೆಯುವ್ವೊಲು
ಮುಗಿಲಿಗೂ ತೆರೆಹಾಯ್ಸಿ ಹರಿಹಾಯ್ವ ನೀರು !
ಎಲೆಲೇ ಭೀರು,

ಕ್ಷಿತಿಜ ಪರಿವೃತ ಜಲಧಿ
ದಿಕ್ಕುಗಳ ಮುಕ್ಕುಳಿಸುವೀ ವಿರಾಟವ ಕಾಣೆ
ನಡುಗು—
ದಂಡೆಯಿದಕಿಲ್ಲ ಬಂಧನವಿಲ್ಲ ಹಿಂಡು ಹಿಂಡಾಗಿ
ಅಂಡಲೆಯುತಿದೆ ಜಲರಾಶಿ
ಕಾಲನ ಕಿರಿಯ ತಂಗಿ, ನೆಲನ ಹಿರಿಯಕ್ಕ
ಇದನಾಳಬಲ್ಲವ ಗಂಡು ಯಾರಯ್ಯ ?
ನೆಲದಣುಗ,

ಕಾಲನಿಟ್ಟಲ್ಲಲ್ಲಿ ನುಂಗೆ ಕಾದಿಹುದು ಬಾಯ್
ತೆರೆದು ಪಾತಾಳದೊಲು
ದುಂಡು ತೆಕ್ಕೆಯ ಹಾಕಿ ಕರಿ-ನೀಲ ಜಲ-ಶೇಷ
ಕ್ಷಣ ಸ್ತಬ್ಧ ಮರುಕ್ಷಣವೆ ವಿಕ್ಷುಬ್ಧ ಪ್ರಕ್ಷುಬ್ಧ.

ಕಣ್ಣೀರ ಹೊಲವಯ್ಯ, ಬರಿಯ ಉಪ್ಪಿನ ಹಳುವು-
ದುಡುಕದಿರು ಈ ಅಮಾನುಷ ವಿಫಲ ಸೀಮೆಯ ಸೇರಿ-
ಇದರ ಬಾಳ್ ಬೇರೆ, ಗತಿ ಬೇರೆ, ತಾಳವೆ ಬೇರೆ
ಮೈ ಬೇರೆ, ಮನ ಬೇರೆ, ಅಂತರಂಗವೆ ಬೇರೆ
ಉಸಿರ ಮೇಲುಸಿರಿನಲಿ ದಿಕ್ತಟಗಳಾಚೆಗೂ
ಹಾಯ್ವ ಉರುಬೇ ಬೇರೆ;
ಬಸಿರಲ್ಲಿ ತುಡಿವ ಬಲವೇ ಬೇರೆ.
ಎದೆಯ ಬಯಲಲ್ಲಿ ಹಗಲಿರುಳು ತೆರೆಗಳನಟ್ಟಿ
ತುರುಬಿ ಹುಯಿಲುವ ಗಾಳಿ,
ಒಡಲ ಕಂದಕದಿ ಹೊಯ್ದಾಡುವಂಧಃಕಾರ-
ದಲ್ಲಿ ಯುಗ ಯುಗ ಜನಿತ ಹಿಂಸ್ರ-ಭೀಕರ-ಸೃಷ್ಟಿ.
ತನ್ನ ತೋಷವನೊ ರೋಷವನೊ ಮಡಿಲೊಳಗಿಟ್ಟು
ಯಾವ ಛಂದಕೊ ತೂಗಿ ನೂಗುವದು ದಿನರಾತ್ರಿ.
ಹೊಗದಿರಯ್ಯಾ ಇದರ ನೀಲ ಏಕಾಂತವನು.

ಈಚೆಯಿಂದಾಚೆಗೂ ಚಾಚಿ ಕುದಿಯುವದಿಲ್ಲಿ
ಮತ್ಸ್ಯಗಂಧಿತ ತಿಮಿತಿಮಿಂಗೋಲದರ ಮರಣ !

೩

(ಒಂದು)

ಇಂದ್ರನೀಲದಂಥ ನಭ
ಪುಷ್ಪರಾಗದಂಥ ಶರಧಿ
ಎಲ್ಲೆಡೆಗೂ ಶುಭ್ರ ಶುಭ
ಶಾಂತಿಗಿಲ್ಲ ಅಂತ ಪರಿಧಿ.

ಬೀಳೇಳುವ ಈ ಕ್ಷಿತಿಜ
ನಡೆದಷ್ಟೂ ಬೆಂಬತ್ತುವ ಈ ವಿಶಾಲ ಜಲವಲಯ
ನಾವು ಬಂದು ಸೇರಿದೊಡನೆ
ಬಂತು ಇವಕೆ ತಾಳ ಲಯ
ಈ ತಟಸ್ಥ ಏಕಾಂತಕೆ
ಬಂತು ರಂಗು ಬಂತು ರೂಪ
ಬಂತು ನೀಲವದನ ಚೆಲುವು
ಬಂತು ಮಾನವೀಯ ಭಯ.

ನಾವು ಬರುವ ಮುನ್ನ ಶೂನ್ಯ-
ದಲ್ಲಿ ತೂಗುತಿತ್ತು ಸಿಂಧು
ಈ ನೀರಿಗೆ ಅರ್ಥ ಬಂತು
ಆಹಾ ನಾವು ಸೇರಿದಂದು
ಸುತ್ತುವರಿದ ಈ ಪರಿಘಕೆ
ನಾವೆ ನಾವೆ ಮಧ್ಯಬಿಂದು.

ಇದು ಗಾಳಿಯೆ ಇವ ಮರುತ
ಇದು ನೀರೇ ಇವ ವರುಣ
ತೆಕ್ಕೆಯಾಡುತಿವೆ ನಿರುತ
ಇಗೊ ಜೀವನ ಇಗೋ ಮರಣ.

(ಎರಡು)

ಇಲ್ಲಿ ನಿರಾತಂಕ ದೃಷ್ಟಿ
ಎನಿತು ಸಂಕ್ಷಿಪ್ತ ಸೃಷ್ಟಿ
ಜಲವರ್ತುಲ ಕೆಳಗೆ, ಮೇಲೆ ಮಗುಚಿ ನಭದ ಅರ್ಧಗೋಲ
ಮಧ್ಯ ಪ್ರಾಣಕೇಂದ್ರ ಜಹಜು ನಿರಾಯಾಸಗಮನಲೋಲ.

ಗೆರೆಯೆಳೆ ಭಾಗಿಸು ಗುಣಿಸು
ಚಿಂತಿಸು ಧೇನಿಸು ಧ್ವನಿಸು
ಈ ಭೂಮಿತಿ ಈ ಗಣಿತ
ಕಿವಿಗೊಡು ಮೆಲ್ಲಗೆ ಆಲಿಸು
ಈ ಪ್ರಚಂಡ ಎದೆ-ಬಡಿತ.
ಈ ದೀರ್ಘ ಈ ಹ್ರಸ್ವ
ಇದು ಉಸಿರಾಡಿಪ ವಿಶ್ವ.

ಆಳ ಆಳ ಆಳ

ಗಂಟಲೊಡೆದು ಕೂಗಿದರೂ ಮರುದನಿ ಏಳದ ಆಳ
ಅಲ್ಲೆಲ್ಲಿಂದಲೊ ಎದ್ದಿತು ನಮ್ಮಯ ನಾಭಿಯ ನಾಳ
ಈ ಬಲ ಮಾರ್ಮಲೆದೆದ್ದರೆ ನಾವಿದಕೇತರ ಭಾರ

ಆದರೂ ಇದ ಹಿಡಿದಿರಿಸಿ
ಎಲ್ಲೆಗಳಿಲ್ಲವ ಮೀರುತ ಸೂಸುತ ಚೆಲ್ಲುವ ಇದನು
ಕಣ್ಣಳತೆಗೆ ಮನದಳತೆಗೆ ಎದೆಯಳತೆಗೆ ಅಳವಡಿಸಿ
ಅರಿವಲ ಹಿಡಿದಿರಿಸಿ
ಇದರೊಳಗಿಂದೆದ್ದೂ ಇದರೊಳಗಿದ್ದೂ ಬೇರೆ ನೆಲಸಿ
ದಿನ ದಿನ ಇದ ಸಮ್ಮುಖಿಸಿ ಸ್ವೀಕರಿಸಿ
ಕಂಡು ಉಂಡು ಉಸಿರಾಡಿಸಿ ಗರ್ಭಕೋಶದೊಲು ಧರಿಸಿ

ಹೆಸರನಿಟ್ಟು ಕೂಗಿ ಕರೆದು
ವಿಧ ವಿಧ ವಿಧ ಅರ್ಥ ತೆರೆದು
ಕಾಣ್ಕೆಯಲಿ ಕ್ಷೆಮೆಯಲಿ ಮೂಳ್ಕೆಯಲಿ ಮೈಮೆಯಲಿ
ಕ್ಷಣ ಕ್ಷಣ ಇದ ಮಾರ್ಮಡಿಸಿ
ನಮ್ಮೊಳಗನು ಇದಕುಡಿಸಿ
ಈ ಹೊರಗನು ಒಳಪಡಿಸಿ
ಪ್ರತಿಬಿಂಬಿಸಿ ಪ್ರತಿನಿರ್ಮಿಸಿ ದಿನ ದಿನ ನಡೆವೆವು ನಾವು

ನಮ್ಮದೆ ದಾರಿಯ ತುಳಿದು ಭವಿತವ್ಯವ ತೆರೆದು
ಹಾಸ್ಯದಲಿ ಶೋಕದಲಿ ಇತಿಹಾಸವ ಬರೆದು
ಬೆಳಕಿಗೆ ನೀರಡಿಸಿ ನಡೆದು ಎದ್ದೂ ಬಿದ್ದೂ ತಡೆದು
ಪ್ರತಿಸೃಷ್ಟಿಯ ಕಟ್ಟುತ ಕೆಡವುತ ಕಟ್ಟುತ
ಸ್ಥಿತಿಲಯಗಳ ಪಡೆದು.

ಮನೆ, ಬೀದಿ, ಆಡುಂಬೊಲ, ಅನ್ನಾ ವಸನಾ ಉಸಿರು
ಕರ್ಮಕ್ಷೇತ್ರ ಧರ್ಮಸ್ಥಲ ಮಣ್ಣಿನ ಕಣ್ಣಿನ ಹಸಿರು
ಮಿತಿ ಪರಿಮಿತಿ ಪರಿಮಾಣ, ಕೊನೆ ಮೊದಲಿನ ಬಸಿರು

ಇದು ವಿಶ್ವ,
ಇದು ವಿಧಿ, ನಾವೆ ವಿಧಾತರು
ಇದು ತಾಯಿ, ನಾವ್ ತಾತರು
ನಿರ್ಮಿತರು ನಿರ್ಮಾತರು

ಅರ್ಭಕರಾಗಿಯೂ ಜನಕ
ಈ ವಿಶ್ವವು ಇರಬಹುದು ನಾವು ಇಲ್ಲಿ ಇರುವನಕ
ಬೆಳೆಯುವನಕ ಬಾಳಿನ ಈ ಕನಸು ಕಣಸು ಕನಕ.

## ೩೯. ಇದೂ ಒಂದು ಕವನ

[ ಹೇಳದಿದ್ದರೆ ತಿಳಿಯಲಾರರೆಂಬ ಆಧುನಿಕ ಶಂಕೆಯಿಂದ ಹೇಳಿಬಿಟ್ಟಿದ್ದೇನೆ, ಕ್ಷಮಿಸಿ. ]

ಕವಿತೆ ಬರೆಯುವುದು ಕಷ್ಟ ಎನ್ನುವರು.
ಬರೆಯುವುದಕಿಂತ
ಬರೆಯದಿರುವುದೆ ಕಷ್ಟ.

ಪಿಂಗಾಣಿ ಹೂಜಿಯು ನೆನಪು
ಸುಂದರಿಯ ಮುಂಗೈಯ ನುಣುಪು.

ಅವಳ ಕನ್ನಡಿಯ ಅವಳಿಕಲ್ಪನೆಯಂತೆ
ಎಡಕೆ ಬಲ, ಬಲಕೆ ಎಡ
ಕನ್ನಡಿಸಿ ಕಡೆದಿರುವ ಕುಪ್ಪುಸದ ಶಿಲ್ಪ
ಒಂದೊಂದು ಉಸಿರಿನವು ತನ್ನಚ್ಚನೊತ್ತೊತ್ತಿ ತೆಗೆದರೂ
ಈ ಗಾಳಿ ಬೈರಾಗಿಯ ಮೈಗೆ,
ತಪ್ಪಿ ಹುಟ್ಟಿದ ಈ ಚೆಲುವಿನಚ್ಚನ್ನು
ಮಣ್ಣಿಗಾದರು ಒತ್ತಿ
ತೆಗೆದಿಡುವ
ನಾಳೆ ನೆನಪಿನ ಮೋಹವಿಲ್ಲ.

ಕವಿತೆ ಬರೆಯುವುದು ಕಷ್ಟವೇ ಸ್ವಾಮಿ,
 ಬರೆಯದಿರುವುದೆ ಕಷ್ಟ.

ಯೌವನದ ಭಾಷೆಗೆ ಹೆಣ್ಣಾಡೆಯ ಮಂದಾಕ್ರಾಂತ,
 ಹೆಣ್ಣೆಯೆ ಕವನ.
ಹೆಣ್ಣು ಹೋಗಲಿ. ಇನ್ನು ಮಿನುಗು-ಬೆಳಕಿನ ಕೊಚ್ಚೆಯಲಿ
 ಕಪ್ಪೆಗೊರಲಿನ ಪ್ರೇಮ.

ಗುಪ್ತರೋಗವ ದಾಟಿ ಸಪ್ತಸ್ವರಗಳನೊಮ್ಮೆಗೇ ಮೀಟಿ,
 ಅರ್ಥದೀಟಿಯನು ಮೆದುಳೊಳಗೆ
ನಟ್ಟು ಬಹ ಓಂಕಾರ ಬಾಣಗಳ ಬತ್ತಳಿಕೆ-ಬಂಜೆಯರ
 ಭಗ್ನಕಾಮ. ಭೂಕಂಪ,
 ಮೂದೇವಿಯಾತುರದ ಬಿಕ್ಕಳಿಕೆ.
ಹುಳುದೀಪದಲಿ ಕತ್ತಲೆಯ ಒಳಸಂಚು, ಎಲೆಯೆ ಇಲ್ಲದ
 ಕೊಂಬೆ-ಮಿಂಚಿನ ಬೆತ್ತಲೆ.

ಬೂದಿಯೊಳಗೂ ರತಿಯನರಸುವ ಕಾಮ. ಒಡೆದೊಡೆದು
 ಎರಡಾಗಿ, ಎಂಟಾಗಿ,
ಲಕ್ಷವ್ಯೂಹದಕ್ಷೌಹಿಣಿಯಾಗಿ, ತಾತ ಮೊಮ್ಮಗನಾಗಿ
 ನಂಬಿದರೆ ತುಂಬಿ ಬಹ
ಬ್ಯಾಕ್ಟೀರಿಯಾ ಬನ್ನ. ಕೆಲವರಿಗೆ ಎಟುಕದಿಹ ನಾಲ್ಕಗಳು ಅನ್ನ.

ಎಂಟು ಭಾಗದ ನೀರೊಳಗೆ ಹೂತಿಟ್ಟು ಮೂಗುಗೆಡ್ಡೆಯ ಮಾತ್ರ
 ಹೊರಚಾಚಿ ತೋರಿಸುವ
ಮಂಜುಗಲ್ಲಿನ ಗುಪ್ತಶಕ್ತಿಯ ಶಾಂತಿ. ತಾರಕಕ್ಕೆ ಎಳೆದಿಟ್ಟ
 ತಂಬೂರಿ ತಂತಿ.

ಸೌಗಂಧಿ ಹುಡುಕಿದ ಭೀಮ. ಬಾಯಲ್ಲಿ ಕಬ್ಬಿಣವ
 ಕಚ್ಚಿದರು ಬಿಡದ
 ಮೂರ್ಛೆಯೊಳಗಿನ ನಡುಕ.
ಸೀತೆಯಪ್ಪಿದ ರಾಮ. ಹಾವುಗಳ ಹೆಡೆಮೇಲೆ ಕಡೆದಿರುವ ಕನ್ನಡಕ.
 ಅದು,
 ಇದು,
 ಈ ಹತ್ತುಪದ; ಅವನೆದೆಯ ಮಾತ್ಸರ್ಯ
ಇವಳೆದೆಯ ಮೋಹಮದ.

ಇವನೆಲ್ಲ ನೋಡಿದರೆ ಕಾಡುವುದು
ಕವನ. ಕೂಗುವುದು ದವನ,
ವಾಸನೆಯ ಮೆಲುಕವನ.

ಎರಡು ಕತ್ತಲೆಯ ನಡುವೆ, ನಡು ನಡುವೆ, ಆಡುವುವು
ಈ ನೆರಳು ನೂರೆಂಟು: ಊಳಿಡುವ ಆಚೆ ಮೌನವ ಕೆಣಕಿ,
ನವಿರೆದ್ದ ನಗ್ನತೆಯ ಕುಳಿರನ್ನು ಬೆಚ್ಚನೆಯೆ ಬಳಸಿ,
ಭ್ರಮೆಗಳನು ಬಾ ಎಂದು
ಮುತ್ತಿಟ್ಟು ಬೆಳಸಿ.

ಮಿಥ್ಯೆಯೋನಿಯ ಒಳಗೆ
ಸತ್ಯದೇವರ ಶುಕ್ರ : ಎಂದೆಂದಿನಿಂದಲೋ
ತಿರುಗುತಿದೆ ಈ ಪ್ರಕೃತಿ-ಪುರುಷರ ಪೋಲಿಕೆಲಸದ ಚಕ್ರ.

ಹೆಸರಿಲ್ಲದೀ ತಬ್ಬಲಿಗೆ
ನಾಮಕರಣವೆ ಬೇಡವೆ ?
ಕುಪ್ಪೆ ತಿಪ್ಪೆ ಕಾಡ ಗುಂಡ ಹಾಳು ಮೂಳಯ್ಯ ಕಲ್ಲಪ್ಪ

ಎಂದಾದರೂ ಹೆಸರಿಡುವ
ಪ್ರೀತಿಯುದ್ಧಟತನ ಕಾಡದೇ
ಮಾತಿರುವ ನಮ್ಮನ್ನು ?

ಬರೆಯುವುದು
ಕವಿತೆಗಳ ಬರೆಯುವುದು
ಕಷ್ಟವೇ ಸ್ವಾಮೀ ? ಕಾಡುವುದು ಕವನ
ಕೂಗುವುದು ದವನ,
ಲೋಕ ಮುಟ್ಟಿದ ಮನ-ಬಸಿರು ಬೀಗಿ ತೂಗುವುದು;

ಕುಲಗೆಟ್ಟರು ಕವನ,
ಬರೆಯದಿರುವುದೆ ಕಷ್ಟ,
ಬರೆಯದಿರುವುದೆ ಕಷ್ಟ.

ooo ooo

## ೪೦. ಗರುಡವಾಹನ ಬಂದ

ಗರುಡವಾಹನ ಬಂದ.
ಗರುಡವಾಹನನಲ್ಲ. ಬರಿ ಗರುಡ
ಗರುಡನೂ ಅಲ್ಲ – ಥೂ – ರಣಹದ್ದು
ಸುತ್ತಾಡಿ ತಲೆ ಮೇಲೆ ಬಂತು ಇಳಿದು.
ಸತ್ತು ಬಿದ್ದಿದೆ ಪ್ರಾಣಿ, ನಾರುತಿದೆ ಹೆಣವೆಂದು
ಎಲ್ಲಿಂದಲೋ ಏನೊ ಹೇಗೋ ತಿಳಿದು.

ಸತ್ತು ಬಿದ್ದಿದೆ ಪ್ರಾಣಿ. ಮುತ್ತುತಿದೆ ನೊಣ
ನಾರುತಿದೆ ಹೆಣ.
ಕೊಳ್ಳಿ ಮೇಲಿಟ್ಟರೂ ಸುಡದು
ಬೆಂಕಿಯೆ ನಾಚಿ ನಂದುತಿದೆ.
ಹೊಂಡದಲಿ ಹೂಳಿದರೆ ಕವಳ ತೂಪಿದ ಹಾಗೆ
ತೂರುತಿದೆ ಭೂಮಿಯೇ ಮಣ್ಣ ಬಾನಿನ ಕಡೆಗೆ
ನೀರಿನಲಿ ಒಗೆದಾಯ್ತು, ಸ್ವೀಕರಿಸಳಾ ಗಂಗೆ
ಅಂತೂ ಕೊನೆಗೆ
ಗರುಡವಾಹನ ಬಂದ !

ವಿಷಮಜ್ವರದಿ ರೋಗಿ ಬಡಬಡಿಸುವಂತೆಯೇ
ಹಂಬಲಿಸಿ ಕನವರಿಸಿ ಹಲುಬಿ ಹಲ್ಕಿಸಿದ ಹಾ ! ಹಸುಳೆ
ಮೂರು ವರುಷದ ಮಗುವು :

" ಅಹಂ ಮಾತರಿ–ಶಃ
ಅಹಂ ಮಾತರಿ–ಶಃ "

ನವ್ಯಕವಿ-ಕೂಸೊಂದು ಪಾಪ ಖರ್ಚಿನ ಖಾತೆ
ಹೆಣವ ಕುಕ್ಕಲು ಹದ್ದು
ಬಿದ್ದು ನಕ್ಕಳು ಮಾತೆ !!

೦೦೦ ೦೦೦

## ೪೧. ಹೆಣ್ಣು

(ಒಂದು)

ಅವಳ ಹೆಸರ ಕೇಳಬೇಡ !
ಊರನರಸಿ ದಣಿಯಬೇಡ !
ಹೆಣ್ಣೆ ಅವಳು ಹೊತ್ತ ಹೆಸರು ;
ಹೆಣ್ಣೆ ಅವಳ ಹೆತ್ತ ಬಸಿರು ;
ಇರಲು ಕಣ್ಣನೀರ ಸುರಿಸು ;
ಇಲ್ಲದಿರಲು ನೆನಪನೊರಸು ;
ಕಾಲದ ಹೆಗಲೇರಿ ನಿಂತು,
ಬಾಳದೇನೊ ಸತಿಯ ಕನಸು ?

ಭರತಮಾತೆ ಪುಣ್ಯಭೂಮಿ –
ಅವಳ ಮುದ್ದು ಮಗಳೆ ಆಕೆ.
ಶೀಲವೆನಲು ಕಲ್ಪವೃಕ್ಷ–
ಅದರ ಪಕ್ವಫಲವೆ ಆಕೆ.
ಚೆಲ್ವ ಪಡೆದ ಪಾಪವಿತ್ತು ;
ಕೊರಳ ತಾಳಿಗಿತ್ತು ಶಾಪ !
ನಂಬಿಕೆಯಲಿ ಬಿಂಬಿಸಿತ್ತು
ಪತಿಯದೊಂದೆ ಭಕ್ತಿರೂಪ !

ಕುರುಡು ಬಗೆಯ ಹಳ್ಳಿಯಲ್ಲಿ
ಬೆಳಕ ಕಂಡ ಬಾಲೆಯವಳು ;
ತವರ ಮುದ್ದು ಬಳ್ಳಿಯಲ್ಲಿ
ಮೂಡಿ ಬಂದ ಸುಗ್ಗಿ ಮುಗುಳು !
ಕೈಯ ಕೊಟ್ಟು ನಡೆಯ ಕಲಿಪ
ಮಾತ ಕೇಳಿ ತೊದಲನುಲಿವ
ಅಣ್ಣನಿರಲು, ತಮ್ಮನಿರಲು,
ಬಳಗಕೆಲ್ಲ ತಂಗಿಯವಳು.

ಕವಿಯ ವಾಣಿ ಜಸವ ಸಾರೆ,
ಹುಟ್ಟಿ ಸತ್ತ ಸಾಧ್ವಿಯಲ್ಲ.
ಸವೆಯದಿರಲು ಪೂರ್ವಕರ್ಮ,
ಮುಗಿಯದಿರಲು ದುಃಖಿಜನ್ಮ,
ದೇವರಿಂದೆ ಮನುಜರಿಂದೆ,
ಅಳಿಡರಿಂದೆ ಉಳಿದರಿಂದೆ
ಧರ್ಮ ಬೇಡಿ, ದಯೆಯ ಬೇಡಿ
ಬಾಡಿ ಬಿತ್ತೊ ಬಡವು ಜೀವ !

ತುಂಬು ಮನೆಯ ತುಳುಕು ಸೊಗದ
ಹಂಬಲಲ್ಲಿ ಬಳೆದಳವಳು ;
'ಮಗಳೆ ! ತಾಯೆ !' ಎಂಬ ಕರೆಯ
ಚಿಮುಕುಸೊದೆಯನೀಂಟಿದವಳು ;
ಕುದುರೆಯಾಗಿ ಹೊರುವ ಹೆಗಲು,
ತೊಟ್ಟಿಲಾಗಿ ತೊನೆವ ತೋಳು,
ಏರಲಿರಲು, ತೊಡೆಯ ಪೀಠ —
ಮನೆಯೊಳರಸು-ಕುವರಿಯವಳು.

ಕವಿಯು ಬಣ್ಣ-ನುಡಿಗಳಲ್ಲಿ
ಬರೆಯಲಾರದಂಥ ಸೈಪು ;
ಸುಗ್ಗಿ ಸೊಬಗ ಚಾಕಿಗೆಯಲಿ,
ಕಟ್ಟಲಾರದಂಥ ರೂಪು ;
ತುಟಿಯ ಮೇಲೆ ನಗೆಯು ಕುಣಿಯೆ,
ನಗೆಯು ಮಾತಿನೊಳಗೆ ಹೆಣೆಯೆ,
ಮಾತಿನೊಳಗೆ ಹೃದಯ ತುಳುಕೆ,
ಬಾಲೆಯಾಕೆ ರಸದ ಟೀಕೆ !

ಮುಗಿಲ ಮೇಲೆ ಕಣ್ಣನೆಟ್ಟು,
ನೇಗಿಲಲ್ಲಿ ಕೈಯ ಕೊಟ್ಟು,
ತಂಪು ಮಳೆಗೆ ಬಸಿವ ಬೆವರ
ಬಿಸುಪನಿತ್ತು ದುಡಿವ ಹುಟ್ಟು.
ಗುಡಿಸಲಗುಳಿ, ಹೊಲದ ಬೇಲಿ,
ಅವಳ ನುಡಿಗೆ ನಹೆಗೆ ಗೊತ್ತು
ಹುಟ್ಟಿನೊಡನೆ ಬಂದ ಲಜ್ಜೆ
ಗುರುವಿನಂತೆ ಕಲಿಸಲಿತ್ತು.

ಆಗಲಿಹುದು ಹೋಗಲಿಹುದು
ನಮ್ಮ ಕೈಯ ಮಾಟವೇನೊ !
ಹಿರಿಯರಿಟ್ಟ ನೀತಿಯೊಂದೆ
ಹೊಲಬು, ಬೇರೆ ಪಾಟವೇನೊ !

ನೆಲದ ಹುಳುಗಳಾವು—ಸಮಗೆ
ಕಲಿವುದೇನು ? ಕಲ್ಪಿಯೇನು ?
ಎಂಬುದಿದುವೆ ಲಲ್ಲೆಹಾಡು ;
ಕೇಳಿ ಬಳೆದುದವಳ ಪಾಡು.

ಗಂಡು ಬೆಳಕು ; ಹೆಣ್ಣು ನೆರಳು ;
ದಿವಸವೆರಡರೊಂದು ಮೇಳ.
ಆತ್ಮ ಗಂಡು, ಮಾಯೆ ಹೆಣ್ಣು,
ಎರಡು ಕೂಡೆ ಸೃಷ್ಟಿಜಾಲ.
ಚೆನ್ನೆಯಿವಳಿಗೊಬ್ಬ ಚೆನ್ನ,
ಅಬಲೆಯಿವಳಿಗೊಬ್ಬ ಸಬಲ,
ಎಲ್ಲಿ ಬರುವನೆಂತು ನೆರೆವ-
ನೆಂಬ ಚಿಂತೆ ಹಲವು ಕಾಲ —

ತಾಯ ಮೊಗವ ಕನಿಸಲಿಲ್ಲ !
ತಂದೆ ಹುಬ್ಬ ಹೆಣೆಯಲಿಲ್ಲ ;
ಕಣ್ಣನೀರ ಝರಿಗಳುರುಳಿ,
ಎದೆಯ ತಳವ ಕೊರೆಯಲಿಲ್ಲ.
ಕೂಗಿನಳತೆಯಲ್ಲಿ—ಸುಗ್ಗಿ
ಗದ್ದೆಯಂಚಿನಲ್ಲಿ—ಹಿಗ್ಗಿ
ನಿಂತು ನಿಗುರಿ ನೋಡುತಿದ್ದ
ಅವಳ ಹೃದಯಚೋರ—ಮಾರ !

ಏನು ರೂಪವೇನು ಠೀವಿ ?
ಉಗುವ ನಗೆಯ ಹೊಡೆತವೇನು ?
ಉಬ್ಬಿದೆದೆಯ ಹಬ್ಬು-ಹೆಗಲ
ಹೊಂತಗಾರನಲ್ಲವೇನು ?
ಚಿಗುರುಮೀಸೆ, ಕೊಂಕುಗುರುಳು,
ಹುಬ್ಬಿನೊಂದು ಜರ್ಬದೇನು ?
ಇವನ ಕಂಡ ಮುಗುದೆ ತಂಡ
ಹಾರಿ ಪದಕೆ ಮಣಿಯದೇನು ?

ಮಾರನೆಂಬ ನಾಮಧೇಯ ;
ತಕ್ಕ ರತಿಗೆ ತಕ್ಕ ಮಾರ !
ಬಣ್ಣ ನುಡಿಯ ಕಣ್ಣ ಮಾತ-
ನಾಡಿ ಬಗೆಯ ಬಿಚ್ಚಲಾರ ;

ಬಿರುಸುಗಾಳಿಯಂತೆ ಬಂದ ;
ಬಂದು ಬೆಟ್ಟದಂತೆ ನಿಂದ ;
ಮುಗುದೆಯೆದೆಯ ಸೂರೆಗೊಂಡ
ತನ್ನ ಮನವ ಮಾರಿಕೊಂಡ.

ಹಳ್ಳಿಹಳ್ಳಿ ಕುಣಿಯುತಿತ್ತು
ಹುಬ್ಬು ಕೈಯನೆತ್ತಿ ನೋಡಿ.
ಕಾಡು ಕಾಡು ಹೊಗಳುತಿತ್ತು
ಹಕ್ಕಿದನಿಯ ಕೂಡಿ ಹಾಡಿ;
ಇರುಳ ಬಾನ ಚುಕ್ಕಿಯೆರಡು
ನುಡಿದುವಿಂತು ನಕ್ಕು ನೆಗೆದು
“ ಬಾನಿನೊಳಗು ಇಂಥ ಜೋಡಿ
ಕಾಣಲುಂಟೆ ಮುದ್ದು ನೋಡಿ ? ”

ತಂದೆ ತಾಯಿ, ಬಂಧು ಬಳಗ,
ಎಲ್ಲರಿದ್ದು ಒಸಗೆಯಾಯ್ತು ;
ಊರ ಹಿರಿಯ ಮಂದಿಯೆಲ್ಲ
ಕಂಡು ಹಾಡಿ ಹರಸಿ ಹೋಯ್ತು ;
ಒಡಲ ಗಟ್ಟಿಮುಟ್ಟಿಗಿಂತ,
ಮನದ ಕಟ್ಟುನಿಟ್ಟಿಗಿಂತ,
ಬೇರೆ ಭಾಗ್ಯವೇನೊ ? ಮಾರ
ಬಡವನಾದರೂ ಕುಬೇರ !

ಕಣ್ಣ ನೀರ ನಗೆಯ ಬೆರಸಿ,
ಒಲವುನಲವುಗಳನು ಕಲಸಿ,
ಭಾವರಸದ ಪಾಕಗಳನು
ಹೃದಯ ಪಾತ್ರದಲ್ಲಿ ಬಡಿಸಿ,
ಅಳಿಯ ಮಕ್ಕಳನ್ನು ಕಳುಹಿ
ತಂದೆ-ತಾಯಿ ಅತ್ತೆ-ಮಾವ,
ಹೆಗಲ ಭಾರ ಹಗುರವೆಂದು
ಶಾಂತಿ ಸುಖವ ಪಡೆದರಂದು.

ಇಂದು ತಂಗಿ ಬಾಲೆಯಲ್ಲ —
ಗರತಿ, ಮನೆಯ ಪಟ್ಟದರಸಿ ;
ಮಾರನೆದೆಯ ಸೀಮೆಯೊಡತಿ—
ತಪ್ಪುತಡೆಗೆ ಹೊಡೆವ ಕೊಡತಿ.

ಅವನ ಕಣ್ಣಿನೊಳಗು ಕಣ್ಣು—
ಅವನ ಭಾವದೊಳಗು ಭಾವ ;
ಅವನ ದೇಹದರ್ಧ ದೇಹ
ಅವನ ಜೀವದರ್ಧ ಜೀವ.

ವರ್ಷಗಳಲಿ ಹೆಜ್ಜೆಯಿಟ್ಟು
ಕಳೆದುಹೋಗುತಿತ್ತು ಕಾಲ ;
ಗರತಿತನದ ಮೋಡಿ ಬಲಿತು
ಮಾಗುತಿದ್ದುದವಳ ಶೀಲ ;
ನುಡಿಗಳಲ್ಲಿ ನಡೆಗಳಲ್ಲಿ
ಹಾವಭಾವಭಂಗಿಗಳಲಿ,
ಹೆಣ್ಣುತನದ ಹೆಮ್ಮೆ ಗುಡಿಯ
ಹಾರಿಸಿದ್ದುದವಳ ಚರ್ಯೆ.

ಬೆಳಗಿನಿಂದ ಸಂಜೆವರೆಗೆ—
ಮುರಿದು ಮೈಯ ಸಂದುಕೀಲು
ಕಳಚುವಷ್ಟು ಗೈಯಬೇಕು ;
ಒಂದು ತುತ್ತ ಸವಿಯಬೇಕು ;
ಗುಡಿಸಲೊಳಗೆ ನಲ್ಲೆ ಮೊಗದ
ಬಯಕೆ ಬಟ್ಟಲೆಲ್ಲ ಸೊಗದ
ನಿಧಿಯೊ ಎನಲು, ನೋಡಿ ಜಗವ,
ಕಡೆಗಣಿಸಿದ ಧೀರ—ಮಾರ !

ಇಬ್ಬರಾಗಿ ಸವಿಯುತಿದ್ದ
ಅನುಭವಸುಖಸಾರವಿದನು
ತುಬ್ಬು ಮಾಡಿ ಹಿಡಿಯಲೆಂದು,
ತನ್ನ ಋಣವ ಕೇಳಲೆಂದು,
ತಾಯಿತಂದೆ ಬಿರುದನಿತ್ತು
ಒಂದು ಜೀವವೋಡಿ ಬಂತು ;
ಕರ್ಮಶೃಂಖಲೆಯಲಿ ಹೊಸದು
ಬೆಸೆದು ಗೊಣಸು ಹೊಂದಿತೊಂದು.

( ಎರಡು )

ಪಡುವ ನಾಡ ಕಡಲ ಮೇಲೆ
ನೆತ್ತರ ತೆರೆ ಕುಣಿಯುತಿತ್ತು ;
ಬಾನ ಮೇಲೆ ಗುಂಡುಸಿಡಿಲ
ಹಾರಾಟದ ಮಸಕವಿತ್ತು ;
ನೇಸರುರಿಯ ಕಣ್ಣಿನಿಂದ
ಕಿಚ್ಚಿನ ಮಳೆ ಜಡಿಯುತಿತ್ತು ;
ಗಾಳಿ ವಿಷದ ಪಾಕಗಳನು
ನೆಲದ ಬಾಯ್ಗೆ ಗಿಡಿಯುತಿತ್ತು.

ಕರಿಯ ಹೆಣವು ಬಿಳಿಯ ಹೆಣವು
ತೆಕ್ಕೆ ಬಿದ್ದು ಕೆಡೆದುವಲ್ಲಿ ;
ಕರಿಯ ರಕ್ತ ಬಿಳಿಯ ರಕ್ತ
ಸೆಳವುಗೂಡಿ ಹರಿದುವಲ್ಲಿ ;
ಮೂಡಣವನೊ ಪಡುವಣವನೊ ?
ತಿನುವ ಮಣ್ಣು ಕೇಳಲಿಲ್ಲ ;
ಮೂಡಣವನೊ ಪಡುವಣವನೊ ?
ನುಂಗುವ ತೆರೆ ಹೇಳಲಿಲ್ಲ.

ಸಾವರೆಲ್ಲ ವೀರರಾಗಿ
ಸಗ್ಗವಡರಿ ಹೋಗಲಾಗಿ,
ರೌರವಕ್ಕೆ ಹಸಿವೊ ಹಸಿವು !
ಬದುಕಿದವರ ತುಡುಕುತಿತ್ತು
ಬರದ ಬಾಯ ತೆರೆದು, ರೋಗ
ರುಜೆಯ ಕೋರೆಹಲ್ಲ ಮಸೆದು,
ಕಡಿಯುತಿತ್ತು, ಕೀಳುತಿತ್ತು,
ಹಸಿಯ ಮಾಂಸ ಮಜ್ಜೆಗಳನು.

ತಾಯ ತೊಡೆಯೆ ದೂಪೆಯಾಗೆ
ಮಲಗಿದ ಶಿಶುವೇಳಲಿಲ್ಲ ;
ಎಲುಬುಗೂಡ ಪಾಪೆಯಾಗೆ,
ಉಣಿಪ ತಾಯಿ ಬಾಳಲಿಲ್ಲ ;
ಉದರ ರುದ್ರಭೂಮಿಯಲ್ಲಿ
ಕ್ಷುಧೆಯ ಭೂತನೃತ್ಯ ಶೈಲಿ
ಇರಲು ಬಾಳುಗೋಳಗೀತ
ತಾಳವಾಗುತಿತ್ತು ರುದಿತ.

ಮೊಗದಿ ಮೊಗದಿ ಮೃತ್ಯು-ಮುದ್ರೆ !
ಎದೆಬಡಿತದೊಳದರ ಮಿಡಿತ !
ರಕ್ತಜೀವಕಣಕಣದಲಿ

ಸಾವು ರಣರಣಿಸುವ ನಾದ !
ದಳ್ಳಿಸುತಿರೆ ಕಾಡುಕಿಚ್ಚು,
ಬೇಯುತಿರಲು ಹಸಿಯು ಬಿಸಿಯು,
ದೋರೆ ಹಣ್ಣೊ ಮಿಡಿಯೊ ಕುಡಿಯೊ
ಬೂದಿಗುಂಟೆ ಗಣನೆ, ಭೇದ ?

ನಾಯಿಗಳಿವೆ ನರಿಗಳಿಹವು ;
ಬಿದ್ದ ಜನರನಾರೈವುವು ;
ಕಾಗೆಗಳಿವೆ ಹದ್ದುಗಳಿವೆ —
ಶವಗಳ ಹಾರೈಸುತಿಹವು ;
ಸವರೆ ಧರೆಯ ಭಾರಗಳನು,
ದೇವರೆ ಅವತರಿಸೆ ಹಿಂದೆ —
ಇಂದು ದೈವಚರಿತಗಳನು
ಚರಿಸುತಿಹುದು ಮೃಗದ ಮಂದೆ.

ರಣದ ಕೂಗೆ ಕೂಗೆಲ್ಲಿಯು
ಕರುಳ ಮೊರೆಯ ಕೇಳ್ವರಿಲ್ಲ ;
ಊರೆ ಊರೆ ಪಡಲು ಬೀಳೆ
ಕೂಗಲುಳ್ಳ ಕರುಳೆ ಇಲ್ಲ.
ತಂಗಿ ಮಾರರವರ ಮನೆಯ
ಕರುಣಕಥೆಯ ಹೇಳಬೇಕೆ ?
ಅಗಣಿತದೊಳದೊಂದು ಗಣಿತ
ಅಸಫಲತೆಯದೊಂದು ಕುಣಿತ !

ತವರುಮನೆಯು ಮಸಣವಾಯ್ತು
ಬರದ ಬಾಯಿಗೊಂದು ತುತ್ತು !
ತಾನೆ ತನಗೆ ಹಿರಿಯಳೆಂಬ
ನೋವು ಮನವನಾಕುತಿತ್ತು
ಓಲೆಭಾಗ್ಯದೊಂದು ನಚ್ಚು
ಹಸುಳೆಮೊಗದ ನಗೆಯ ಹುಚ್ಚು —
ಬಡವೆಯವಳ ಜೀವನಕ್ಕೆ
ದೈವವೊಲಿದು ಕೊಟ್ಟ ಮೆಚ್ಚು.

ಗುಡಿಗೆ ಹರಕೆಗಳನು ಹೊತ್ತು
ಬನಕೆ ತಂಬಲಗಳ ಸಲಿಸಿ
ಇರುವ ಬರುವ ಸಕಲದೈವ
ದೇವತೆಗಳ ಸಂತವಿರಿಸಿ,
ಕೈಯು ದಣಿದು, ಮನವು ಬಳಲಿ,
ಒಡಲು ಬತ್ತಿಯಾಗುತಿತ್ತು ;
ಕ್ಷೀಣ ಜೀವಕಳೆಯ ಬೆಳಕು,
ಆರುವಂತೆ ತೋರುತಿತ್ತು.

ನೇಸರೊಡನೆ ಎದ್ದು ದಣಿದು
ಹೊಟ್ಟೆಹೊರೆವುದದುವೆ ಪುಣ್ಯ ;
ತನ್ನ ಹೆಣ್ಣಿನೆದೆಗೆ ತಾನೆ
ಒಡೆಯನೆಂಬ ಗಂಡು ಧನ್ಯ.
ಇಹದ ಸುಖದ ಸಾರವುಂಡು
ಸುಖಿತನಾದ ತೃಪ್ತಿಗೊಂಡು.
ಅದಕು ತುಟ್ಟಿ ಬರಲು, ಗಟ್ಟಿ
ಯೆದೆಯು ಕಾರುತಿತ್ತು ನೀರ.

ನೀರೆನೋಟದಲಿ ನಿರಾಶೆ
ಗೆಲವು ಗುಡಿಯನೆತ್ತಿರುವುದು ;
ಮುದ್ದುಮಗನ ಹಾಸದಲ್ಲಿ
ಭಂಗುರತೆಯು ಬಿತ್ತಿರುವುದು ;
ಸತ್ಯವಿದನು ಕಾಣದವನೆ ?
ಕಂಗಳಿದ್ದು ಕುರುಡನೇನೊ ?
ಗುಡಿಯ ದೇವರಂತೆ ಮಾರ
ಕಡೆದ ಕಲ್ಲ ಮೂರ್ತಿಯೇನೊ ?

ಉದಯದ ಹೊಂಗದಿರು ಹುಡುಕಿ
ಎಚ್ಚರಿಸದ ಮುನ್ನ, ಗೈಮೆ
ಯುಡಿಗೆಯುಟ್ಟು ಕರ್ಮವೀರ
ನಂತೆ ನಡೆವ ಮಾರನೊಮ್ಮೆ—
ಏರೆ ಹೊತ್ತು ನಾಲ್ಕು ಮಾರು
ಏಳದಿದ್ದು, ನೆಲದಿ ಬಿದ್ದು,
ಬಂಡೆಯಂತೆ ಭಾರವಾಗಿ
ಒರಗಿದ್ದನು ಮಿಡುಕದಿದ್ದು.

ಮಡದಿ ಬಂದು ಸನಿಹದಲ್ಲಿ
ನಿಂತು ಬಾಗಿ ನೋಡುತಿಹಳು ;
ಮೊಗವ ಮುಟ್ಟಿ ಮೈಯ ತಟ್ಟಿ

ಆರೈಯುವಳಾಲಿಸುವಳು ;
ಕಣ್ಣನೀರ ತುಂಬಿಸುವಳು ;
ಬಿಕ್ಕುನುಡಿಯ ಚೆಲ್ಲುತಿಹಳು
" ಬೇನೆಯೇನೊ ಬೇಸರೇನೋ ? "
ಸೆರಗನೊಡ್ಡಿ ಬೇಡುತಿಹಳು.

ಎಳೆದನು ನಿಟ್ಟುಸಿರನೊಮ್ಮೆ
ಹೊಸೆದನೊದ್ದೆ ಗಣ್ಣನೊಮ್ಮೆ ;
ಎತ್ತಿ ಭಾರವಾದ ನುಡಿಯ
ಆಯಾಸದಿ ಗದ್ಗದಿಸಿದ ;
ಎದೆಯ ಹತ್ತಿರಕ್ಕೆ ಕರೆದ ;
ಬಾಹುಬಂಧದಲ್ಲಿ ಬಿಗಿದ ;
ಭಾವಮುದ್ರೆಗಳನು ಹೊಡೆದ –
ಮೌನದ ಬಾಗಿಲನು ತೆರೆದ :

ಬೇನೆಯೇನೊ ಕುತ್ತವೇನೊ
ಜೀವನವೇ ಕುತ್ತ ಬೇನೆ ;
ಆರದುಸಿರ ಹೊತ್ತು ನಡೆದು
ಲಾಲಿಸುವುದೆ ಕುತ್ತ ಬೇನೆ ;
ಕುಂದಿ ಮುಗಿಯದಿರುವ ದಿನವ,
ಕೂಡಿಯುಗಲಲಿರುವ ಜನವ
ನ್ನೋಡಿ ಕಣ್ಣನೀರ ತೋಡಿ,
ಕು[illegible]ವ ಕುತ್ತಕುಂಟೆ ಜೋಡಿ ?

ಆತ್ಮವೆನ್ನೊಳಿಹುದೆಂಬೆಯ ?
ಇದ್ದರದರ ಬಿಂಬ ನೀನು !
ದೇವನೊಬ್ಬನಿಹನೆಂಬೆಯ ?
ಇದ್ದರವನೆ ಈ ಕಂದನು !
ಕಣ್ಣಮುಂದೆ ಆತ್ಮದಳಿವ,
ದೇವರಳಿವ ಸಹಿಸಲಾರೆ,
ಹೊಟ್ಟೆಯೊಂದೆ ಹಗೆಯ ತೆರದೆ
ಮಲೆಯೆ ಸೋಲನೊಪ್ಪಲಾರೆ !

ಅಳಿವಿನೊಳಚ್ಚರಿಯ ಕಾಣೆ !
ಉಳಿವೆ ಸೋಜಿಗಕ್ಕೆ ತಾಯಿ.
ಜೀವದ ಕಿರುದೋಣಿಯಿದನು
ತೇಲಿಸಲಿದೆ ಸಾವು-ಹಾಯಿ !
ಮುಗಿಲ ಮೇಲೆ ಮುಗಿಲನೆಗೆತ —
ತೆರೆಯ ಮೇಲೆ ತೆರೆಯ ಬಡಿತ—
ದೂರದ ದಡ ತೋರದಿಹುದು
ಒಡಲು ಬದುಕಿಗಂಟಿರುವುದು !

ಚೋದ್ಯವಿದುವೆ ಇದುವೆ ಸತ್ಯ !
ಆಸೆಯ ಮೂಲದಲಿ ತಥ್ಯ.
ಒಡವೊಡೆಯೆ ತಿಳಿಮ ತಿಳಿದು,
ಹೊರೆಯ ಹೇರುತಿಹೆವು ನಿತ್ಯ.
ಸಂತಯಿಸುವ ಮಾತು-ಗೀತು
ಹೊಟ್ಟೆ ತಣಿದ ತಂಪಿನುಸಿರು ;
ಭುಜಕೆ ಭುಜವನೊರಸಿ ಬಾಳ
ಗೆಲ್ಲಬೇಹುದಿದುವೆ ಚದುರು.

ನಾಲ್ಕು ಹೊಸತಿನೂಟವುಂಡು
ತಿಳಿದನಲ್ಲ ; ಗಾಳಿಮಳೆಗೆ
ಒಡ್ಡಿ ಬಲಿತನಲ್ಲ ; ನೆಲದಿ
ಹತ್ತುಹಜ್ಜೆಯಿಟ್ಟನಲ್ಲ ;
ಬಾಲನಿವನಭಾಗದೇಯ
ನೀಚಕೀಟಕಿಂತ ಹೇಯ !
ಮುಂದಣಾಸೆ ಟೊಳ್ಳುಮೂಟೆ
ಎಂದು ಸಾರಿ ಹೇಳಲುಂಟೆ ?

ಆಗದಾಗದೆನ್ನನಲ್ಲಿ
ಕೆನ್ನೆ ಮುದುಡಲಾಗದಿವನ !
ನಮ್ಮ ಬೇಗೆಯುಸಿರಿನಲ್ಲಿ
ಕರಿಕಲಾಗದಿವನ ಜನ್ಮ.
ಮೃತ್ಯುಧರೆಗೆ ಲಗ್ಗೆ ಹೊಡೆವೆ —
ಅದರ ಕೊರಳನಾಕಿ ಹಿಡಿವೆ !
ಗೆದ್ದು ತರುವೆನವನ ತುತ್ತ
ಹಣೆಗೆ ಕೊಡುವೆ ಸವಿಯ ಮುತ್ತ !

ಹಕ್ಕಿ ಮೂರರೊಲವು ಗೂಡು
ನಮ್ಮದಿಲ್ಲಿ ಕಿರಿಯ ಬೀಡು.
ರೆಕ್ಕೆ ಬಲಿವ ಮೊದಲೆ ಮರಿಯ

ತುಡುಕಲೋಡಿ ಬಂತು ಕೇಡು.
ಕಳೆದ ದಿನವನೆಣಿಸು ಬಾಲೆ !
ಇವನೊಳೆನ್ನ ಕಂಡ ಮೇಲೆ
ಇರುವ ದುಃಖಗಳನು ಮರೆತು
ಬರುವ ಸುಖವ ನಂಬಬಲ್ಲೆ !

ಹೆಣದ ಬಣಬೆಯೊಟ್ಟುತಿಹರು ;
ನೆತ್ತರ ಹೊಳೆ ಕಡಿಯುತಿಹರು.
ಹಗೆಯ ಹೊಗೆಯ ಮುಸುಕಿನೊಳಗೆ
ಕಗ್ಗೊಲೆಯನು ಕಲಿಯುತಿಹರು.
ಕೂಗುತಿಹುದು ರಣದ ಭೇರಿ
ಕರೆದು ಮಸಣದಿಬ್ಬಣಕ್ಕೆ !
ಬೇಯುತಿಹುದು ಹಬ್ಬದಡುಗೆ
ಭೂತಗಣಗಳೌತಣಕ್ಕೆ !

ನೇಗಿಲುಗಳ ಹಿಡಿವ ತೋಳು
ಕೈದುಗಳನು ತುಡುಕಲಿಹುದು !
ಹಲಗೆ ಮೆಟ್ಟಿ ತುಳಿವ ಕಾಲು-
ವೈರಿಯೆದೆಯ ಮೆಟ್ಟಲಿಹುದು !
ಕಿತ್ತುಕಳೆಯನುತ್ತು ಬಿತ್ತಿ,
ಬೆಳೆಯನೆತ್ತ ಬಲ್ಲ ಜನಕೆ
ವೈರಿಯೆದೆಯ ಬೆಡೆಯ ಮಾಡಿ
ಕುಯಿಲ ಕೊಯ್ವುದೇನು ಹಿರಿದೆ ?

ತಿಳಿದೆಯೇನೊ ಮುಗುದೆ ಹೆಣ್ಣೆ
ಕಳೆದುಹೋಗೆ ಬರಿಸ ಹಲವು ;
ಮಾರನಾಗಿ ಬರುವೆನಿಲ್ಲ ;
ವೀರನಾಗಿ ಬರುವೆನಲ್ಲ !
ಕೆನ್ನೆಯೆಲುಬು ತುಂಬಿನಿಂಬೆ
ಹಣ್ಣಿನಂತೆ ನಳನಳಿಸಲು,
ಆರಲಿರುವ ಕಣ್ಣ ತಾರೆ
ತಾರೆಯಂತೆ ತಳತಳಿಸಲು

ಹಸಿದ ಹೊಟ್ಟೆ ತಣ್ಣನಾಗಿ,
ಒಡಲು ತೀವಿ ತಿಣ್ಣವಾಗಿ,
ಪ್ರೀತಿರಸದಿ ತುಂಬಿ ತುಳುಕಿ,
ಮಾತು ಮಾಗಿ ಹೆಮ್ಮೆ ಬೀಗಿ,
ಹೊಸ್ತಿಲೊಳಗೆ ಹಜ್ಜೆಯಿಟ್ಟು,
ಗಟ್ಟಿಯಾಗಿ ಕರೆಯಲಾನು,
ಬೆಚ್ಚಿ ಬೀಳ್ವ ಮುಗುದನಿವನ
ಹುಚ್ಚನಂತೆ ತಬ್ಬಲಿಹೆನು.

ಆಗಳೆನ್ನ ಮನದ ರಾಣಿ !
ನಿನ್ನ ಮೊಗದಿ ನಗೆಯು ಚಿಗುರಿ,
ಹಿಂದಿನಂತೆ ಮಿಳಿರಲಿಹುದು
ಹಾಸ್ಯ ಲಾಸ್ಯವಾಡಲಿಹುದು.
ಕಾಲಗತಿಯು ಕುಟಿಲವಹುದು,
ಕಳ್ಳನಂತೆ ಬಹುದು ಕೇಡು ;
ಎನ್ನ ರಾಯಭಾರಿಯಿವನ
ರಕ್ಷೆಯಿರಲು ಭಯವ ಬಿಸುಡು.

ತುತ್ತಿನೊಂದು ಚಿಂತೆಯಿರದು ;
ನಾಳೆಯೆಣಿಕೆ ಗೋಳಿಡಿಸದು.
ಹುಬ್ಬುಗಂಟು, ಸಿಡುಕು ಮೋರೆ,
ನಿನ್ನ ಪಥವನಡ್ಡಗಿಸದು.
ಬರದ ಹಾಳುಬೀಳ ನಡುವೆ
ಬೀಡು ಬಿಟ್ಟ ಭಾಗ್ಯಲಕ್ಷ್ಮಿ
ಎನುವ ತೆರದಿ ಮೆರೆಯಲಿರುವೆ
ಕರುಬು ಮೊಗಕೆ ಮುರಿವ ತರುವೆ

ಅಲ್ಲಿ ಸಮರಭೂಮಿಯಲ್ಲಿ
ಕೊಲುವ ಶಕ್ತಿ ಶಸ್ತ್ರವೊಂದೆ.
ಇಲ್ಲಿ ಜನ್ಮಭೂಮಿಯಲ್ಲಿ
ಕಡಿದು ತಿನುವ ಮೃಗದ ಮಂದೆ.
ಬಿದ್ದು ಕೊಳೆತು ಸಾಯುದಿದ್ದು,
ಬಾಳುವಾಸೆ ಯಾರದಿದ್ದು,
ಬದುಕು ಗೊತ್ತು ತೋರದಿದ್ದು
ಕೇಳಬೇಕೆ ಉಸಿರ ಸದ್ದು ?

ಗಂಡುತನಕೆ ತಲೆಯ ಬಾಗಿ
ಗೌರವಿಸಿದ ಸಿಗ್ಗುಗಾರ್ತಿ
ಬಿಡುವ ದುಗುಡವೆಂತು ವಿಗಡ

ಅರಿಯದಿರುವ ಕಲ್ಲೆದೆಯನೆ ?
ಮೈಯ ನುಣುಪು, ಕಣ್ಣ ಹೊಳಪು,
ಎನ್ನ ಕೈಯ ಹಿಡಿದುವೇನೊ ?
ಹೆಣ್ಣುತನದ ಚೆಲುವ ಕಂಡು
ಸೂರೆಹೋದನಲ್ಲವೇನೊ ?

ಎನ್ನ ಕುರುಡಿನೋದುಬರೆಹ
ತಂದ ತಿಳಿವ ನಿನಗೆ ಕೊಟ್ಟೆ.
ವೀರ ಕಥೆಯ ಹೇಳಿ ಮೈಗೆ
ಪುಳಕದ ಸಿಂಗರವನಿಟ್ಟೆ.
ಓದಿದೋದು ಬರೆದ ಬರೆಹ
ಕುಂಟುಗೊಳಿಸೆ ಬುದ್ಧಿ ಮನವ,
ಒದೆಯದಿರಲು ಬಹುದೆ ತಿಳಿವ,
ಗುಡಿಸುವಂತೆ ಮನೆಯ ಕಸವ ?

ಗಂಡುತನದ ಬಲವ ನಚ್ಚು ;
ಐದೆತನದ ನಲವ ಮೆಚ್ಚು
ತೊಗಲ ಕಣ್ಣ ಮರೆಗೆ ನಿಂತ
ನನ್ನಿಯದನು ಗುರುತು ಹಚ್ಚು ;
ಲಜ್ಜೆಯೆ ಹೆಣ್ತನದ ಹಿರಿಮೆ,
ನೀತಿಯಿಡುವ ಹಜ್ಜೆಯದುವೆ,
ಮೌನವೆ ಮಾನಕ್ಕೆ ಮಹಿಮೆ,
ಶೀಲವತಿಯ ಬಿಜ್ಜೆಯದುವೆ !

ಏನೊ ಏನೊ ಗಳಹುತಿಂತು,
ಕೈ ಹಿಡಿದಳ ಮನವ ಹಿಡಿದ.
ನಿಟ್ಟುಸಿರನು, ಬಿಕ್ಕು ಮಾತ
ಕಣ್ಣಹನಿಯನೆಂತೊ ತಡೆದ.
ಉಸಿಕನಾಗಿ ಬಂದು ಹೆಣ್ಣ —
ನೊಲಿದು ಮದುವೆನಿಂದ ಗಂಡ
ಉಸಿರಿಲ್ಲದ ಬಗೆಯ ನುಡಿಯ
ಅರ್ಥವರಿತು ಬೀಳುಕೊಂಡ.

ಅವನು ಹೋದ ಹಾದಿಯಲ್ಲಿ
ದೃಷ್ಟಿಯಾತ್ರೆ ಮಾಡುತಿತ್ತು.
ಅವನ ನೀತಿ ಮುಂದಿರದಲಿ;
ಬುದ್ಧಿ ಕಾವಲಾಗುತಿತ್ತು
ಹೋದ ದಿನದ ನೆನಪು ಮಣಿಯ
ಕೋದು ಕೋದು ಕಟ್ಟಿ ಸರವ
ಭಾವರೂಪ ವಿಗ್ರಹಕ್ಕೆ
ಇಟ್ಟ ವೀರಸತಿಯೆ ಆಕೆ !

( ಮೂರು )

ಕಿರಿಯ ಹಗಲ ಮೊಟ್ಟೆಯೊಡೆದು
ವಾರಗಳಲಿ ಕಣ್ಣ ಬಿಟ್ಟು,
ಮಾಸಗಳಲಿ ರೆಕ್ಕೆಗೆದರಿ,
ಹಾರಿದುದಾ ಕಾಲಪಕ್ಷಿ ;
ರಾಗವಿಭ್ರಮದಲಿ, ಸೌರ-
ಮಂಡಲವನು ಬಳಸಿ ಧಾತ್ರಿ
ಸುಗ್ಗಿ ಸೊಗವ ಸವಿದಿದ್ದಳು ;
ಚಳಿಯ ಕೋಡಿಗಗಿದಿದ್ದಳು.

ಜೀವವಿರದ ಬರಿಯ ದೇಹ-
ವಿವಳು, ಲಕ್ಷ ಜನರ ನಡುವೆ
ಒಬ್ಬಳಾಗಿ, ಕೋರೆಮೊಗಕೆ
ಮೊಗವ ತೋರೆ ತಿಳಿದಿರುವಳು.
ಹೊಡೆವ ಗಾಳಿ ಕೊರೆವ ಕುಳಿರು
ಇರಿವ ಮಾತು, ತರಿವ ನೋಟ—
ಸ್ವಾನುಭವದ ಸಮರಶಸ್ತ್ರ
ಘಾತಕೆದೆಯ ಕೊಟ್ಟಿರುವಳು.

ಗುಡಿಸಲೊಳಗೆ ಶಾಂತಿಮಯದ
ಬಾಳ್ವೆ ಕಡಲಿನಾಳದಿಂದ
ಮುದ್ದುಮಗನ ತೊದಲ ನಗೆಯ
ತೆರಳಿಕೆಗಳೆ ತೆರೆಗಳಾಗಿ,
ನೊರೆಗಳಾಗಿ ವಲಿಗಳಾಗಿ
ಇಳಿತವಾಗೆ ಭರಿತವಾಗೆ
ತನ್ನ ತಾನೆ ಮರೆಯುತಿಹಳು
ಧುಮುಕಿ ತೇಲಿ ಮುಳುಗುತಿಹಳು.

ನಡುವೆ ನಡುವೆ ಮಾರನೋಲೆ
ಕೈಯ ಸೀರವೇರುತಿತ್ತು.

ಅವನ ರೂಪು ಜಗ್ಗನೆಡೆಗೆ
ಉಗ್ಗೆ ಹೊಡೆದು ನುಗ್ಗುತಿತ್ತು.
ಭಾವ-ಗಗನಮಂಡಲದಲಿ,
ಎಣಿಕೆ ಹಲವು ಮಿರುಗುತಿದ್ದು.
ಒಂದೆ ಜ್ಯೋತಿಯೊಂದೆ ಬಿಂಬ
ಕತ್ತಲೆಯನು ಬೆಳಗಿಸಿದುದು.

ತರಣಿ ಕದಿರಸೋಟದಿಂದ
ತುಂತುರೆಡೆಯೊಳಿಣುಕುತಿರಲು,
ಬಣ್ಣ ಬಣ್ಣದಿಂದ್ರಚಾಪ
ಅವನ ಕಣ್ಣ ಕಟ್ಟುತಿರದೆ?
ದೂರದಲ್ಲಿ ನಿಂತು, ನಯನ
ವಾರಿಯೆಡೆಯೊಳೀಕ್ಷಿಸಲ್ಕೆ
ಮಾರ ಕಂಡ ಬಣ್ಣಗೊಂಡ
ದಿವ್ಯಗುಣದ ಮೂರ್ತಿಯೊಂದ.

ಎದೆಯನದುಮುತಿರುವ ಭಾವ-
ರಸವ ಚೆಲ್ಲಲಿರುವ ನೋವ
ಹಾಳು ಲೆಕ್ಕಣಿಕೆಗೆ ತಿಳಿಯ
ಹೇಳಬಲ್ಲನೆಂತು ಮಾರ?
ಓದಿಯೋದಿ ಕೊಡೆವನೊಮ್ಮೆ,
ತೊಡೆದು ತೀಡಿ, ತಡವನೊಮ್ಮೆ,
ಬರೆಯದಿರಲು ಜೀವ ನಿಲದು,
ಎಂತೊ ಲಿಪಿಯ ಕೊರೆವನೊಮ್ಮೆ.

ಅಗಲಿಕೆಯಲಿ ಬೇಯುತಿಹೆನೊ
ಅತ್ತು ಅತ್ತು ಸಾಯದಿಹೆನೊ
ಕರ್ಮವೆಂದೊ ಧರ್ಮವೆಂದೊ
ಕೈದು ಹಿಡಿದು ಕಾದುತಿಹೆನೊ
ಊರು ದೂರ . . ನಿನ್ನ ಎಣಿಕೆ
ಹಾರಲಾರದಷ್ಟು ದೂರ . . .
ಧರೆಯ ಮೈಯ ಹರವದೆಷ್ಟೊ
ಕಾಲು ಹರಿವುದಷ್ಟು ದೂರ . .

ಗುಡ್ಡ, ಬೆಟ್ಟ, ನದವು ನದಿಯು
ಒಡ್ಡಿ ಮೊರೆವ ಕಡಲಿನೆದೆಯು

ಮರಳಗಾಳಿ ಹಿಮದ ವೃಷ್ಟಿ
ತಡೆಯುವೆಮ್ಮ ರಭಸಗತಿಯ
ಕಹಳೆ ಕರೆದ ಕಡೆಗೆ ಮನವು —
ಮನವು ನಡೆದ ಕಡೆಗೆ ತನುವು —
ಒಡಲು ಹೊತ್ತ ಕಡೆಗೆ ಮಾರ
ಹರಿವನವನೆ ಲೋಕವೀರ!

ಬಳ್ಳಿ ಕವಲಕಂಕುಳಲ್ಲಿ
ಅರಳಿ ನೇಲುತಿರುವ ಹೂವ
ಬಾನನೆತ್ತಿ ಮೇಲೆ ತೊಡಿಸೆ
ಏನಾಗದು ಹೇಳು ಮುಗುದೆ!
ಲೆಕ್ಕವಿರದ ಚುಕ್ಕಿಗಡಣ—
ಪಾರವಿರದ ಶೂನ್ಯಗಗನ—
ಅಚ್ಚರಿಗಳ ಬೆಸುಗೆಯಲ್ಲಿ
ತಾನೆ ತನ್ನ ಮರೆಯದಿಹುವೆ?

ಹೊಲದ ನಡುವೆ ಗುಡಿಸಲಲ್ಲಿ
ಗೋಡೆ ಸೂರದಾಟದಲ್ಲಿ
ಅಲ್ಲೆ ನಮಗೆ ಸಕಲ ಲೋಕ
ಸ್ವರ್ಗನರಕವಿರುವುದಲ್ಲಿ!
ಮಾರನಿಂದು ಮನೆಯ ಬಂದಿ
ಜೀತಗಾರನಲ್ಲ ಹೆಣ್ಣೆ!
ದೆಸೆಯ ಗೋಡೆ, ಬಾನೆ ಮಾಡು,
ಇಡಿಯ ಜಗವೆ ಅವನ ಬೀಡು.

ಕರಿಯರುಂಟು, ಬಿಳಿಯರುಂಟು,
ಕುಳ್ಳರುಂಟು, ದಡಿಗರುಂಟು,
ಗುಣದ ಕಪ್ಪು ಬಿಳಿಯು ಕುಂಟು
ದಡಿಗತನವ ಕಾಣಲಿಲ್ಲ.
ತಾಯಿ-ಮಕ್ಕಳೆದೆಯ ಬೆರಕೆ,
ಸತಿಯ-ಪತಿಯ ಸರಸ-ವಿರಸ,
ನೋವು-ಬೇವು ಹಿಗ್ಗು-ಕುಗ್ಗು
ಒಂದೆ ಬೇರೆ ಭಂಗಿಯಿಲ್ಲ.

ನಿಮ್ಮ ನೆನಪು ಬಾರದಾಗ
ಎಲ್ಲರೊಂದೆ ಎನಲು ಬಲ್ಲೆ;

ಎಲ್ಲರೊಳಗೆ ನಾನು, ನನ್ನೊ-
ಳೆಲ್ಲರೆಂದು ಬಗೆಯ ಬಲ್ಲೆ !
ಮುದ್ದು ಮೊಗಗಳಿದ್ದು ಬಂದು,
ಎಲ್ಲರಂತೆ ನಾವೆ ? ಎಂದು,
ಕಾಡಿ ಕರೆದು ಕೇಳುವಂದು
ಕಣ್ಣು ಕರಗೆ, ತಡೆಯಲೊಲ್ಲೆ !

ಎಲ್ಲಿ ನನ್ನ ಹೊಲವು ಮನೆಯು
ಬಾಳತಾಯಿ ಬೇರದೆಲ್ಲಿ !
ತಿಂಡಿತುತ್ತ ಕಾಣುವತ್ತ
ನೆಗೆವ ಕುನ್ನಿಯೊಡಲಿದೆಲ್ಲಿ ?
ಕಳೆಯುತಿತ್ತು, ನೆಲವನುತ್ತು,
ದೈವ ಭಕ್ತಿಗೊಡಲ ತೆತ್ತು,
ಸಲುವ ಶಾಂತ ದಿನಗಳೆಲ್ಲಿ
ನಿತ್ಯವಧೆಯ ದಿನಗಳೆಲ್ಲಿ ?

ನರರ ಜೀವವೆನಿತು ಹಗುರು ?
ಕೊಲೆಯ ಕೆಲಸವೆನಿತು ನೇರ ?
ಮಿಗದ ದಾರಿ ಹಿಡಿಯೆ ಮನುಜ,
ಪಂಥದೋಟದಲ್ಲಿ ಮಿಗುವ
ಸಾವಜನಕೆ ದೇವನಿರಲು,
ಕೊಲುವ ಜನಕು ದೇವನಿರನೆ ?
ಸದಯತೆಯನು ನಿರ್ದಯತೆಯ
ಮನುಜರಿಂದೆ ಕಲಿಯದಿಹನೆ ?

ಅನುಭವದಲಿ ಹಿರಿಯನಾದೆ,
ತೋಳಬಲದಿ ದಡಿಗನಾದೆ,
ಕೈಯ ಗುಂಡು ಸಿಡಿಲಿನಂತೆ
ಹೊಡೆದು ಕೆಡಹಬಲ್ಲುದೈಸೆ,
ಕೊಲೆಗ ನಾನು, ಸಾವರವರು, !
ಮನುಜ ನಾನು ಮನುಜರವರು !
ಏಕೆ ಕೊಲುವೆ ? ಸಾವರೇಕೆ ?
ಇದರ ಗುಟ್ಟ ಹಿಡಿದರಾರು ?

ಒಮ್ಮೆಗೊಮ್ಮೆ ಮನೆಯ ಚಿಂತೆ
ತಿಂದು ತೇಗೆ ಬಗೆಯ ತುತ್ತ,
ಕಹಳೆ ಕೂಗಿ ಕರೆಯೆ ಕೊಲೆಯ
ಕಳಕೆ ಕಾಲು ಹೊರುವುದತ್ತ !
ನೀತಿದಯೆಯ ಪಾಪಭಯವ,
ಮನುಜ ಗುಣದ ಮಂಜುಲತೆಯ
ಮನದೊಳಿರಿಸಿ, ಪೂಜೆ ಸಲಿಸಿ,
ಬದುಕಲುಂಟೆ ಸಮರವೀರ ?

ಕೊಂದು ಕೊಂದು ಕಲ್ಲಿನೆದೆಯು
ಬೆಟ್ಟವಾಗಿ ಬೆಳೆದಿರುವುದು.
ಮಾಂಸ ರಕ್ತ ಕಣಗಳೊಳಗು
ತುಳುಕುತಿಹುದು ಜೀವಹಿಂಸೆ.
ನಗುವನೊರಸೆ ಅಟ್ಟಹಾಸ,
ನಲವನೊತ್ತೆ ರುದ್ರರೋಷ,
ಮಾನವೀಯ ಗುಣಗಳಲ್ಲಿ—
ಮಾರನಿವನ ತುಬ್ಬಲಾರೆ.

ಹೆಣ್ಣುತನದ ಸಿರಿಯ ಸೊಬಗ,
ಮಾನವತಿಯ ಮಧುರಗುಣವ,
ಮುಡಿಪು ಕಟ್ಟಿ ಕಾಯುತಿರುವೆ,
ಅರ್ಧ ದೇಹದಲ್ಲಿ ಚೆಲುವೆ !
ಭೇರಿಗಿಲ್ಲವೇನೊ ದಣಿವು ?
ಮಾರಿಗಿಲ್ಲವೇನೊ ತಣಿವು ?
ಕುಳಿತು ಬುಡದಿ ನಿನ್ನ ಕಾಲ
ಕಲಿಯೆ ತಿದ್ದದೇನೊ ಶೀಲ ?

ದೇಶ ದೇಶ ಸುತ್ತಿ ಬಂದೆ
ಉನ್ನತೋನ್ನತಗಳ ಕಂಡೆ.
ನಿನ್ನ ಹೃದಯುದೆತ್ತರಕ್ಕೆ
ಏರಬಲ್ಲ ಹೆಣ್ಣ ಕಾಣೆ !
ರಕ್ತನದಿಯ ದಾಟಬಲ್ಲೆ.
ಕರುಳ ಹಿಣಿಲ ಮೀಟಬಲ್ಲೆ.
ನಿನ್ನ ಬಗೆಯ ನೋಟದಲ್ಲಿ
ಬಾಳ್ವ ತೃಪ್ತಿಯಿರಲು ನಲ್ಲೆ !

ಬೀರ ಸಿರಿಯು ಮಾಲೆ ಹಿಡಿದು,

ಕರೆಯೆ ಹಿಂದೆ ಸರಿಯಲಾರ,
ಮೃತ್ಯು ಹುಬ್ಬು ಸನ್ನೆಗೈಯೆ,
ಬೆನ್ನ ತೋರಲಾರ ವೀರ !
ಎನ್ನ ರಾಗಸಂಪದಕ್ಕೆ
ಬೇರೆ ದಾಯ ಭಾಗವಿಲ್ಲ.
ನಿನ್ನ ಪುರುಷನೆನಿಸುವುದಕೆ
ಮೇಲೆನಿಸುವ ಭೋಗವಿಲ್ಲ !

ಆವುದೊಂದು ಕಣಿವೆ ಕಾಡು
ಮರಳ ಬಯಲು ಹಿಮದ ಬೀಡು.
ನೆತ್ತರಾಸರಾರದಿರಲು
ಕೂಗಿ ಕರೆಯುತಿರಲು ಬಹುದು !
ಪೊಡವಿತಾಯಿ ಮುದ್ದು ಮಗನ
ತೋಳೊಳಪ್ಪಿ ಹಿಡಿಯಬಹುದು
ಅಂದು ನೆನಪಿನಲ್ಲಿ ಬಿಂಬ
ಹೊಂದಿ ಬಾಳಲರಿಯಬಹುದು !

ಜೇನು-ಬೇವು ಕಲಸಿದಂತೆ
ಸಿಹಿಯ ಕಹಿಯ ಪದವನಿಡುವ ;
ನಲ್ಮೆಗೆಲವ ಸಾರುವಂತೆ
ವಿರಹ ಶಾಸನವನು ಬರೆವ.
ದಾಳಿ ಹೊಡೆವ ಬವಣೆಯಿಲ್ಲ—
ಕೋಟೆ ಮುರಿವ ತೋಟೆಯಿಲ್ಲ.
ತನ್ನ ತಾನೆ ಶರಣು ಕೊಟ್ಟ—
ಪುಣ್ಯಸತಿಯ ಪತಿಯೊ ಮಾರ !

ದೇವರಿರಲು ದೈವವಿರಲು,
ಸೇವೆಗೊಂಡು ತಣಿಯುತಿರಲು
ತನ್ನ ಗಂಡು ತನ್ನದೆಂದು
ಧೈರ್ಯಗೊಂಬ ಬಾಲೆಯವಳು.
ದೀನಜೀವಿ ಕೊಡುವ ದೇಯ
ದೇವ ದೈವಗಳಿಗು ಹೇಯ !
ಬಡವರಾ ಅದೃಷ್ಟವೆನಲು
ದೃಷ್ಟವೆನಿಸದಿರುವ ಕಷ್ಟ.

( ನಾಲ್ಕು )

ತನ್ನ ಹೆಸರ ಕರೆಯ ಕೇಳಿ
ಒಳಗು ಮನೆಯೊಳಿದ್ದ ಹೆಣ್ಣು
ಚೆಂಡಿನಂತೆ ಪುಟಿಸಿ ನೆಗೆದು,
ದಾರವಂದ ಕೊರಗಿ ನಿಂತು,
ಮಾರನಾಕೆಯೆಂಬ ಹೆಮ್ಮೆ
ರೋಮರಂಧ್ರದಲ್ಲಿ ಹೊಮ್ಮೆ
ಲಜ್ಜೆಯ ನುಡಿ ತಡವರಿಸಲು,
ಬಂದವರ ವಿಚಾರಿಸಿದಳು.

ನುಡಿದರವರು : ರಾಯಸಿಗರು
ನಾವು ; ಕೇಳುಕಜ್ಜವಲ್ಲ ;
ಬೀರಸಿರಿಯ ಮದುವೆನಿಂದ
ಮಾರನೊಡತಿಯಾದ ಪುಣ್ಯ
ನಿನ್ನದಮ್ಮ ; ತಕ್ಕ ಮಾನ
ಸಲಿಸಲೆಂದು ಬಂದಿರುವೆವು
ರಾಜನಾಜ್ಞೆಯೋದಲಿಹೆವು
ಭಕ್ತಿಯ ತಲೆಬಾಗಲಿಹೆವು.

ಭರತಮಾತೆಯಿಂಥ ವೀರ
ಸುತನ ಪಡೆದುದಿಲ್ಲ ಹಿಂದೆ ;
ಇಂಥ ವೀರ ಸುತನ ಹೆರುವ
ಭಾಗ್ಯವಿಲ್ಲದಾಕೆ ಬಂಜೆ ;
ಮೈಯ ಕೊಟ್ಟ ತಾಯ ಋಣವ
ಅನ್ನವಿತ್ತ ದೊರೆಯ ಋಣವ
ತೀರಿಸಿದನು ಮಾರ—ಧರ್ಮ-
ವೀರನಗ್ರಗಣ್ಯ ಶೂರ.

ಸಮರ ಮಸುಗುತಿತ್ತು ಪಡುವ
ಹಿಮದ ಸೀಮೆಯಲ್ಲಿ ; ಸೇನೆ
ಮುರಿದುಬೀಳುತಿತ್ತು ; ಶತ್ರು
ಜಯದ ಘೋಷ ಬಾನದೆಸೆಯ
ಕಿವುಡುಕಿವಿಯ ಸೀಳುತಿತ್ತು,
ಏರುತಿತ್ತು ಶವದ ಬೆಟ್ಟ.

ಜೀವರಾಶಿಯೋಡುತಿತ್ತು
ಪ್ರಾಣಗಳನು ಕೈಯೊಳಿಟ್ಟು

ಅಡ್ಡಗಟ್ಟಿ ಹಳ್ಳವೊಂದು
ಪಾಯದಳವ ತಡೆಯಲಾಗಿ,
ಒಂದೆ ಸೇತು, ಬದುಕಿನೆಡೆಗೆ
ತೋರುತಿತ್ತು ದಾರಿಯಾಗಿ,
ದಳದಪತಿಯ ಗುಡುಗುಮಾತು
ಹೊಡೆಯಿತಿಂತು ; ಗಂಡೆದೆಗಳೆ !
ಸೇತುಮುಖಕೆ ಕಾವಲಾಗಿ,
ಸತ್ತು, ಬದುಕುವವರನುಳುಹಿ.

ರಣದಹದ್ದು ಕವಿವ ತೆರದೆ
ಮುಸುಕುತಿರೆ ವಿಮಾನರಾಜಿ,
ವಿಷದ ಮೊಟ್ಟೆ ಸುರಿವ ತೆರದೆ,
ಬೀಳುತಿರಲು ಬೆಂಕಿಗುಂಡು,
ಯಂತ್ರರಥದ, ಘಟ್ಟನೆಯಲಿ
ಪಿಷ್ಟವಾದುದಸ್ಥಿ ಮಾಂಸ,
ಕೋವಿನಳಿಗೆಯುಳುತಲಿತ್ತು
ಬದುಕಿಗಾಗಿ ಮಿಡುಕುವವರ.

ಅಣ್ಣ ಹೋಗು ! ತಮ್ಮ ಸಾಗು !
ಬದುಕಿನತ್ತ ದಡಕೆ ದುಮುಕು.
ನಿಮಿಷ ಕಳುವೆ ಕೇಡಿಗಳುವೆ.
ಎಂದು ಕೂಗಿ ಕೊನೆಯ ವರೆಗೆ
ಸಿಡಿವ ಗುಂಡಿಗೆದೆಯನೊಡ್ಡಿ
ವೀರನಂತೆ ತಲೆಯನೆತ್ತಿ
ಶತ್ರುವಟ್ಟಹಾಸದಲ್ಲಿ
ಸಾವ ಗೆಲ್ವ ನಗೆಯನೊತ್ತಿ

ವೀರನೊಬ್ಬನಚಲನಾಗಿ
ಹಗೆಯ ಸೊಕ್ಕ ತರುಬಿ ನಿಂತ ;
ಬೇರೆ ಜನಕೆ ಬದುಕ ಹಂಚಿ
ತನಗೆ ಸಾವನಿಟ್ಟುಕೊಂಡ.
ಎಂಥ ಸಫಲ ಜೀವನವೋ
ಎಂಥ ಧನ್ಯ ಮರಣವೋ ದು-
ರಂತ ತಮದ ನಡುವೆ ಮೂಡಿ
ಮಾಯವಾದ ತಾರೆಯೋ !

ಶತ್ರುಜನರು ಮಿತ್ರಜನರು
ಕಣ್ಣು ಬಿಟ್ಟು ನೋಡುತಿರಲು,
ಅಳ್ಳೆದೆಗಳು, ಗಂಡೆದೆಗಳು,
ಜಸದ ಹಾಡ ಹಾಡುತಿರಲು,
ಅಲ್ಲೆ ಇಟ್ಟ ನೆಲದೊಡವೆಯು
ಅಲ್ಲೆ ನೆಟ್ಟ ಜಯದ ಗುಡಿಯು
ಅವನೆ ಮಾರ—ಜಗದ ವೀರ
ಅಮರಲೋಕದೊಡವೆಯಾದ !

ಮಾತ ಕೇಳುತಿದ್ದಳೆಂತೊ
ಕೇಳಿ ಸಹಿಸುತಿದ್ದಳೆಂತೊ
ಗಾಳಿಯೊಳಗದೃಶ್ಯಳಾಗಿ
ಬಿಸಿಲಿನಲ್ಲಿ ಬೆಂಕೆಯಾಗಿ,
ಧೂಲಿಯಲ್ಲಿ ಕಣಗಳಾಗಿ
ಮಂಜಿನಲ್ಲಿ ತುಂತುರಾಗಿ
ನಾದದ ಪರಮಾಣುವಾಗಿ
ಮಾಯವಾಗದಿದ್ದಳೆಂತೊ !

ಬಾನ ನೆಲದ ಸಂದುಗಟ್ಟು
ಕಡಿದು ಉರುಳಿದಂತೆ, ನಭದ
ಸೂರ್ಯಚಂದ್ರ ಭಗಣರಾಶಿ
ಅಂಧತಮಕೆ ಹೊರಳಿದಂತೆ,
ಪಂಚಭೂತ ಮೇಳ ತಪ್ಪಿ
ವಿಲಯದಲ್ಲಿ ನರ್ತಿಪಂತೆ,
ಪ್ರಕೃತಿಸೂತ್ರ ನಿಯಮವೆಲ್ಲ
ಕಡಿದು ಉಂಡೆ ಸುತ್ತಿದಂತೆ.

ಇರುವುದೆಲ್ಲ ಇಲ್ಲದಾಗಿ,
ಇಲ್ಲದುದೇ ಇರುವುದಾಗಿ,
ನಿಜವೆ ಸುಳ್ಳು, ಸುಳ್ಳೆ ನಿಜವು
ಎಂಬುದೊಂದೆ ತಿಳಿವುದಾಗಿ,
ಒಡಲ ಭಾರ ನೆಲಕೆ ಕೆಡೆಯೆ,
ಬುದ್ಧಿಯ ಹೊರೆ ಮಳವೆಗಿಳಿಯೆ,

ಚೇಷ್ಟೆಯಿರದೆ ಬಿದ್ದಳಾಕೆ
ಅಂಕೆಯಿರದಸಹ್ಯ ಶೋಕೆ.

ಅವಳ ಕೇಳುತೊತ್ತು ಮುದುಕಿ
ಕೋಲಾಹಲ ಕೇಳಿ ಬಂದು
"ಏನು ಮಗಳೆ ಏನಿದು ಪರಿ
ಏನಾದೆಯೊ ತಾಯೆ ಹೇಳು"
ಹಲುಬುತಿಂತು ಹಾರಿಬಿದ್ದು
ಕಿರಿಯ ಕೂಸನೆತ್ತಿ ತಂದು,
"ನೋಡು ಹೆಣ್ಣೆ ನೋಡು ದೇವಿ!
ನಿನ್ನ ಭಾಗ್ಯವಿಲ್ಲಿರುವುದು".

ಕರೆದು ಗೋಳಿಡುತ್ತಲಿರಲು.
ನೆರೆದ ಮಂದಿ ಬೆಚ್ಚಿಬಿದ್ದು
ಉಪಚರಿಸಲು ಹಲವು ನಿಮಿಷ
ಬೀಸಿತೊಂದು ಮೃದು ಸಮೀರ;
ಕಡಿದ ಉಸಿರ ಹುರಿಯ ಕೂಡಿ,
ಪ್ರಾಣತಂತು ಚಲಿಸಿತಾಗ,
ತುದಿಯೊಳದರ ಭಾರವಾದ
ಜೀವ ತೊನೆಯತೊಡಗಿತಾಗ.

ಅಮ್ಮ! ಗರವು ಹೊಡೆದುದೇನೊ
ಬರಿಯ ನೆಲದಿ ಬಿದ್ದೆಯೇಕೆ?
ಕರೆದು ಮಾತನಾಡೆ, ನುಡಿಯು
ದೇಕೆ ಸುಮ್ಮನಿದ್ದೆ? ಕಣ್ಣೆ-
ದೇಕೆ ಒದ್ದೆ? ತಾಯಿಯೆಂದು
ಕರೆವೆನಾರ? ಮೌನವಿದನು
ತೊರೆಯದಿರಲು, ತಂದೆ ಬರಲು,
ನಿನ್ನ ದೂರ ಹೇಳಲಿಹೆನು.

ಬಾಲನಿಂತು ಮರುಳಾಡಲು
ಮಿಂಚಿನಂತೆ ನೆಗೆದು ನಿಂತು,
ಎತ್ತಿಯೆದೆಗೆ ತಬ್ಬಿ ಮಗನ
ಜಗವ ಸುಡುವ ತೇಜವಾಂತು,
ಶೋಕತಪ್ತಹೃದಯಲೋಹ
ರಸವ ಮೊಗೆದು ಚೆಲ್ಲುವಂತೆ,

ಒರೆದಳಿಂತು: ನಿನಗಾಗಿಯೆ
ಬಾಳಬಂಜರಿನಲಿ ಉಳುವೆ.

ಸಿಡಿಲು ಬಡಿದು ಹಾಳು ಬಸಿರ
ಕೆಡಹಲಿಲ್ಲ ಮುದ್ದು ಮಗನೆ!
ಹಣೆಯ ಬೊಟ್ಟು ಕೊರಳ ತಾಳಿ
ಹೊರಲು ಭಾರವಾಯ್ತು ಮಗನೆ!
ಬಾರದಿಹನೆ ನಿನ್ನ ತಂದೆ
ನಿನ್ನ ಕಿರಿಯ ಜೀವದೊಳಗೆ?
ತಾರದಿಹನೆ ತನ್ನ ಸಿರಿಯ
ನಿನ್ನ ನುಡಿಯ ನಡೆಗಳೊಳಗೆ?

ಅವನ ವೀರಕಥೆಯನೊರೆದು
ಹೊಗಳಬಂದ ಮಂದಿಯಿವರು,
ಹಾಡೊಳಿಹನು, ಹೆಸರೊಳಿಹನು,
ಮೈಯೊಳಿಲ್ಲವೆನ್ನುತಿಹರು,
ಎಲ್ಲಿ ತಂದೆ? ಕೇಳಬೇಡ!
ಎಲ್ಲೆಲ್ಲಿಯು ನೆಲಸಿರುವನು.
ಎನ್ನ ಭಾವದಲ್ಲಿ ನಿಂತು
ನಿನ್ನ ಕರೆಗೆ ಓಗೊಡುವನು.

ಗದ್ದೆಯಂಚಿನಿಂದಲಾಚೆ
ಹಜ್ಜೆಯೆರಡನಿಟ್ಟರಿಯಳು;
ಮನೆಯ ಮಾಡುಗೋಡೆಗಳಿಗೆ
ತನ್ನ ದನಿಯ ಕೇಳಿಸದಳು
ಹೃದಯಕೋಶದೊಳಗೊಳಗೇ
ಭಕ್ತಿಯೆಸಳ ಮುಚ್ಚಿದವಳು
ಅರಳಿಸುತಿರೆ ಮಾತನಿಂತು
ಬೆಪ್ಪಾದರು ಬಂದ ಜನರು.

ತಿಮ್ಮಗೌಡ ಸಂತವಿಸಿದ:
ನಮ್ಮ ನಡೆಯಿಸುವುದು ದೈವ
ಸಾಯುವವನೆ ಪುಣ್ಯವಂತ
ಉಳಿಯುವವನೆ ಪಾಪಿ ಜೀವ!
ಇಂದಿನ ದಿನ ನಮ್ಮದೆಂದು
ನಾಳೆಯ ದಿನವವನದೆಂದು,

ಎಣಿಸಿ ಬೇಯುವೆದೆಯ ತಣಿಸಿ,
ಬಾಳ ದೂಡಬೇಕು ಸಹಿಸಿ.

ಬೀಡು ಕಿತ್ತು ಹೋಗುವವರ
ಬೇಡವೆಂದು ತಡೆವ ಶಕ್ತಿ
ನರನಿಗಿರಲು ದೇವನವನೆ
ಎನಿಸಿ ಲೋಕವಾಳದಿಹನೆ?
ಅವನ ಪಾದದಲ್ಲಿ ಬಿದ್ದು
ಕೀಟದಂತೆ ನವೆಯುತಿದ್ದು,
ನೋವಿನಲ್ಲಿ ಸವಿಯ ಮೆದ್ದು,
ಜೀವಿಸಲದೆ ಸುಖದ ಹದ್ದು.

ಹೇಡಿಯಾಗಿ ಸತ್ತನಲ್ಲ;
ವೀರನಾಗಿ ಹೋದನವನು
ತಮ್ಮ ನೆಲದಿ ತಮ್ಮ ಹೊಲದಿ
ತಮ್ಮ ಮನೆಯ ಹೊಸ್ತಿಲೊಳಗೆ
ಹೊರುವ ಹೆಗಲ ಭಾರವಾಗಿ
ಮಡಿವರಂತೆ ಮಡಿದನಲ್ಲ;
ಪಡುವನೇಸರಂತೆ ನಡೆದ
ವೀರ ವಿಜಯಯಾತ್ರಿಯಾದ!

ಹಲವು ಬಾರಿ ಪಾಕಗೊಂಡ
ಹಳೆಯ ಮಾತು; ಹಳಸು-ತುತ್ತು!
ತಿಮ್ಮಗೌಡ ತೊಳಸಿ ತೋಡಿ
ಬಡಿಸುತಿರಲು ಹೊಲದ ನಾರಿ,
"ಎಮ್ಮ ಗೋಳನೆಮಗೆ ಬಿಡಿರಿ
ಕಣ್ಣ ನೀರ ತೊಡೆದುಬಿಡಿರಿ"
ಎನುತೆ ದಾರಿ ತೋರಿಸಿದಳು
ತನ್ನ ತಾನೆ ಎಚ್ಚರಿಸಿದಳು.

ಮಾರನೆಣಿಕೆಯೊಂದು ಪಾರ-
ಮಗನ ಲಲ್ಲೆಯೊಂದು ತೀರ-
ನಡುವೆ ಜೀವನಪ್ರಸಾರ
ಎಂದಿನಂತೆ ಸಾಗುತಿತ್ತು.
ತೆರೆಗಳಿರವೆ? ಗರ್ತವಿರದೆ?
ಘಾತವಿರದೆ? ಪಾತವಿರದೆ?
ಎಲ್ಲವಿದ್ದು "ಎನ್ನ ಗೋಳ
ಎನಗೆ ಬಿಡಿರಿ"—ಎಂದಳಲ್ಲ!

(ಐದು)

ಊರ ಹಿರಿಯ ಮಂದಿಗಳಲಿ
ತುತ್ತ ತುದಿಯ ಹಂತದವನು;
ಹುಬ್ಬು ಬೆರಳ ಸನ್ನೆಯಿಂದೆ
ಜನರನಾಳ್ವ ಪಂತದವನು;
ಹುಲುಮನುಷ್ಯನಲ್ಲ ತಿಮ್ಮ-
ಪ್ರೇತಭೂತ ಕಿಲ್ಲದಿರುವ
ಕಾರಣಿಕದಿ ಹಳ್ಳಿಯವರ
ಗೋಳಾಡಿಸಬಲ್ಲನವನು.

ಆಳುವವರ ಬಂಟನಾಗಿ
ಸಮರಮಾರಿಗೀವ ಬಲಿಯ;
ಅಳುತಲಿಹರ ನೆಂಟನಾಗಿ
ಕರೆಯಬಲ್ಲ ಕಂಬನಿಗಳ!
ನುಡಿಯ ನುಣ್ಪು, ನಗೆಯ ತಣ್ಪು,
ಕವಡು ಬಗೆಯ ಉಡುಗೆ ತೊಡುಗೆ,
ಮೃಗವನುತ್ತೆ ಕರೆಯಲವನ
ಕಾಡಜಾತಿ ಕೆರಳದಿಹುದೆ?

ಎಲುಬುಗೂಡು, ತೊಗಲಮೂಡೆ,
ಎನಿಸಿ ದುಡಿವ ಜನದ ರಕ್ತ
ಅವನ ಕೊಬ್ಬು ಸಿರಿಯ ನೆರೆಗೆ
ಭರಿತವಾಗಿ ಕೂಡುತಿಹುದು.
ಮನೆಗಳಿರದೆ, ನೆಲೆಗಳಿರದೆ,
ಹಾದಿಯೊಕ್ಕಲಾದ ಮಂದಿ,
ಅವನ ಭೋಗ ಭೂಮಿಯಲ್ಲಿ
ಬೀಜವಾಗಿ ಬೀಳುತಿಹುದು.

ಇಳೆಯ ಸಗ್ಗವಾಗಿಸಲ್ಕೆ
ನೆರೆವ ಸುಖಗಳಿದ್ದುವವಗೆ
ಕುಲದ ಕೀರ್ತಿ, ಸಿರಿಯ ಹೆಮ್ಮೆ,
ಹರೆಯದೇರು, ಸೊಕ್ಕಿನುಕ್ಕು,

ಬಂಧು ಬಳಗ, ಹಿತರ ಮೇಳ,
ಸರಸ ಹೃದಯ, ತೋಳ ಬಲುಹು,
ಬಳಿಯು ಬಳ್ಳಿ ಚಿಗುರ ಬಿಡದು
ಎಂಬುದೊಂದೆ ಕರುಳ ಸಿಕ್ಕು.

ಗಾಳಿಯಲ್ಲಿ ಮೌನದಲ್ಲಿ
ನಿಟ್ಟುಸಿರನು ತೇಲಿಸುವನು.
ಸರಸದಲ್ಲಿ ವಿರಸದಲ್ಲಿ,
ದುಃಖರಸವ ಚಿಮ್ಮಿಸುವನು ;
ರಾಜನೊಲವಿನೊಂದು ಬಲದಿ,
ಊರ ತುಳಿದು ಬಾಳಬಹುದು ;
ಪುತ್ರಬಲವ ಪಡೆಯದಿರಲು,
ಎಂತು ಸಗ್ಗಕೇರಲಹುದು ?

ಪಡುವ ದೆಸೆಯ ಕಾಳೆಗದಲಿ,
ಮಣ್ಣಿನೊಡಲ ಮಣ್ಣಿಗಿತ್ತು,
ವೀರನಾದ ಮಾರನೆಣಿಕೆ-
ಗೊಂದು ವರ್ಷ ತುಂಬುತಿತ್ತು ;
ಹೆಣ್ಣೊ ಅರ್ಧಜೀವವಾಗಿ,
ಪ್ರಾಣತಂತು ಮಾತ್ರವಾಗಿ,
ಅಳ್ಳೆದೆಯಲಿ ಅಸುವನಿಟ್ಟು
ಎಂತೊ ದಿನವ ನೂಕುತಿತ್ತು.

ನೆಲದ ಹೊಲದ ಒಡೆತನಕ್ಕೆ
ಕೆತ್ತಿಗನೆ ಅದೊಬ್ಬ ಗೌಡ.
ಎನಲು ಗಾಳಿ, ಬಿಸಿಲು, ನೀರು—
ಆತನೊಡವೆ— ಒಡೆಯನಾತ.
ಅವನ ಗದ್ದೆ ಗುಡಿಸಲಲ್ಲಿ
ಮೂಡಿ ಬಂದ ಚೆಲುವ ಬೆಳ್ಳಿ,
ಸೊಬಗುಗಾರ್ತಿಯವಳ ಕೀರ್ತಿ
ಉಂಟೆ ಬೇರೆ ಧನಿಯು ತಳ್ಳಿ ?

ಬಯಲಿನಲ್ಲಿ ಸುತ್ತಿ ದಣಿವ-
ನೊರಸಲೆಂದು ಬರುವನೊಮ್ಮೆ ;
ಊರ ಜನರ ಕೋಟಲೆಗಳ,
ಮರಸಲೆಂದು ಬರುವನೊಮ್ಮೆ ;

ಆವ ಗಾಳಿ ತಂಪಿನೊಳಗು,
ಆವ ಸುಮದ ಕಂಪಿನೊಳಗು.
ಇರದ ತಂಪು ಕಂಪುಗಳನು,
ಅರಸಲೆಂದು ಬರುವನೊಮ್ಮೆ.

ಗುಡಿಸಲೊಳಗೆ ನೆರಳಿನಂತೆ
ಸುಳಿವ ಹೆಣ್ಣು ಜೀವವದರ
ಕಷ್ಟದವಸರಕ್ಕೆ ಬಂದು,
ತುಷ್ಟಿಗೊಳಿಸಲೆಳಸುತಿಹನು,
ಸುಯ್ಯುವವಳ ಕೂಡೆ ಸುಯ್ದು,
ನೋಯುವವಳ ಕೂಡೆ ನೊಂದು,
ಹಣೆಯುಬರಹಗಳನು ಜರೆದು,
ಮಾತುಗಳನು ಬೆರಸುತಿಹನು.

ಶಿಲೆಯ ಮೂಕ ಮೂರ್ತಿಯಿದಿರು
ಹಣ್ಣುಕಾಯ ಹೊರೆಯನಿಳಿಸಿ,
ಹಣತೆ ಹಚ್ಚಿ, ಹಣೆಯ ಚಾಚಿ,
ಮಣಿದು ವರವ ಬೇಡುವಂತೆ
ಹೊಸತು ಹೊಸತು ಕಣಿಯನಿಡುವ,
ಒಲಿಯದಿರಲು ಸುಯ್ಯ ಬಿಡುವ,
ಬೆನ್ನ ತೋರುವವಳ ಹಿಂದೆ,
ಮನದ ಹಜ್ಜೆಯಿಟ್ಟು ನಡೆವ.

ತನಗೆ ತಾನೆ ನುಡಿವನಿಂತು :
ಓಡುತಿಹುದು ಜೀವವೆದ್ದು ;
ಇವಳ ಮುಗುದತನವು ಮುದ್ದು,
ಆವುದಿದಕೆ ರಕ್ಷೆಯಹುದು ?
ಕಾವಲಾಗಿ ನಿಲ್ಲಬಲ್ಲೆ
ಕಾವನಾಗಿ ಕಾಯಬಲ್ಲೆ
ದೇವನಾಗಿ ಒಸೆಯಬಲ್ಲೆ
ಎನ್ನ ಕನಸಿಗಿದುವೆ ಎಲ್ಲೆ !

ಹಲವು ಹಾಳುಕತೆಯ ಹಿಡಿದು,
ಸರಸವಾಗಿ ಬಣ್ಣಿಸುವನು.
ಅವಳ ಮೊಗದ ನಗೆಯ ನೋಡೆ,
ಹಾಸ್ಯರಸವನುಣ್ಣಿಸುವನು.

ಅವಳ ಮನದ ಹತ್ತಿರದಲಿ,
ಭಾವನೆಗಳ ಎತ್ತರದಲಿ,
ಕಾಣಿಕೆಗಳನಿಡುವ ತೆರದೆ,
ಪ್ರೇಮಪದವ ಜೋಡಿಸುವನು.

ಜನರ ಹಣೆಯ ನೋಡಬಲ್ಲ;
ಅವರ ಬಯಕೆ ಹೊಲಬಿನಲ್ಲಿ
ಸುಳಿದು ಬಲ್ಲ ಹೆಣ್ಣಿನಾಸೆ
ಸವಿಯುಗಂಟು! ನೋಡಿ ಬಲ್ಲ.
ಕೇಡಿನೊಡನೆ ಜೋಡುಗೊಂಡು,
ಅದನೆನೆಮ್ಮಿ ತಬ್ಬಿಕೊಂಡು,
ಸೊಗವನೊದೆದು ಕಳೆವ ಹೆಣ್ಣ
ತಿಮ್ಮಗೌಡ ಕಂಡನಿಲ್ಲ.

ಒಲಿಯುದಿರುವ ದೇವಕುಲಕೆ
ಹರಕೆಹೊತ್ತು ದಣಿದ ಗೌಡ;
ತನ್ನ ಮನದೊಳಿಂತು ನುಡಿದ:
ಮುತ್ತಿತೆನ್ನದಿನವ ನೋಡ!
ಹಚ್ಚನೆ ಹಸಿಯಾದ ರೂಪ–
ಬೆಚ್ಚನೆ ಬಿಸಿಯಾದ ಕೋಪ–
ಅಣಕಿಸುವುದು ಒಂದನೊಂದು!
ಕೆಣಕುತಿಹುದು ಒಂದನೊಂದು!

ಕಣ್ಣು ಕಂಡು, ಸೊಬಗ ಹೀರಿ,
ಮನವು ಮೆಚ್ಚಿತೆಂದು ಸಾರಿ,
ಒಡನೆ ಕೈಗೆ ಸೇರದಿರುವ
ಮೊದಲ ಸೋಲ ಪಡೆದೆನಿಂದು.
ಅಪಜಯಕ್ಕೆ ಗೌಡನಲ್ಲ;
ಗೌಡನಿಗಪಜಯವು ಸಲ್ಲ-
ದೆಂಬ ರೂಢಿ ಹಳಸಿಹೋಯ್ತು;
ಪೌರುಷಕ್ಕೆ ಕೇಡು ಬಂತು.

ವಿಫಲರಾಗದಲಿ ವಿರಾಗ-
ಗೊಂಡು ನವೆವ ಹೆಡ್ಡನಲ್ಲ.
ಮೀಸೆ ಹೊತ್ತ ಗಂಡನಾಗಿ
ಹೆಣ್ಣಿನಿಂದೆ ಸೋಲವಲ್ಲ.

ಸುಗ್ಗಿ ಬೆಳೆಯು ಕುಯಿಲಿನಲ್ಲಿ
ಜಳ್ಳು ಕದಿರನೊಕ್ಕನಲ್ಲ;
ಎದೆಯ ಬಡಿತವಿರುವ ವರೆಗೆ
ಗೌಡ ಸುಮ್ಮನಿರುವನಲ್ಲ.

ನಾರಿಯೊಬ್ಬಳಾಗಿ ಸುಯ್ಯು-
ತಿದ್ದ ಗಳಿಗೆ ಹುಡುಕಿ ತಡಕಿ,
ಮನೆಯ ಹಿಂದೆ ಬೇಲಿ ದಾಟಿ,
ಬಾಗಿಲಗುಳಿ ಮುರಿದು ಮೀಟಿ,
ಮರುಳು-ಗಾಳಿಯಂತೆ ಬಂದು,
ಸರ್ಪದಂತೆ ಕಣ್ಣನಿಟ್ಟು,
ಬಡವೆಯವಳ ಬಳಿಗೆ ಕರೆದ,
ನುಡಿಯ ವಿಷವನಿಂತುಸುರಿದ!

ಸತ್ಯದಿರವನೊಪ್ಪದಿರುವ
ಪಾಪಕಿಲ್ಲ ಸಾಟಿ ಹೆಣ್ಣೆ!
ಹತ್ತುಮಂದಿ ತಲೆಯ ತೂಗಿ
'ಸತ್ಯ' ಎನ್ನಲದುವೆ ನನ್ನಿ.
ಏಕೆ ನಿನಗೆ ಕುರುಡು ಕಣ್ಣು?
ಹೆಣ್ಣೆದೆಯಲಿ ಸಿಡಿವ ಹುಣ್ಣು?
ಕೈಯ ಹಿಡಿದು ನಡೆವ ರೂಢಿ
ಇರದೆ? ಮೆಚ್ಚಲಾರೆಯಿನ್ನು!

ಒಕ್ಕಲಿಹುದು ಜೀವವಿಲ್ಲಿ –
ಹಸಿಯ ಮಾಂಸ ಪಂಜರದಲಿ –
ಸಿಕ್ಕಲಿಹುದು ಸೊಗದ ಕುಟುಕು
ಹೊರಗೆ – ಲೋಕಪದ್ಧತಿಯಲಿ –
ಪತಿಯ ಹಿಂದೆ ಸತಿಯು ಬಾಳ್ವ
ದೆಂಬ ದುಗುಡಕೊಬ್ಬಳೇನು?
ಒಂದು ಸೊಗವು ಕಲೆಯ ಮರಸೆ
ಬೇರೆ ಹೊಸತ ತುಬ್ಬರೇನು?

ಗಂಡು-ಹೆಣ್ಣ ಸೃಷ್ಟಿಯಲ್ಲೆ
ಅವರ ನಲವು ನೆಚ್ಚಿರುವುದು.
ಎದೆಯ ಬೆದೆಯ ಭೂಮಿಯಲ್ಲಿ
ತಾಯಿಬೇರ ಬಿಟ್ಟಿರುವುದು.

ಕೂಟವನ್ನು ಕೊಡುವನವನೆ !
ಕಾಟವನ್ನು ಕೊಡುವನವನೆ !
ವಿರಹಪುರಿಗೆ ಬೇಟವೆಂಬ
ತಂಪು ಮದ್ದನಿಡುವನವನೆ !

ದೈವವನ್ನು ಶಪಿಸಲೇಕೆ ?
ದೊರಿಯದುದಕೆ ಜಪಿಸಲೇಕೆ ?
ಲೋಕನಿಯತಿ-ಕಾಲದ ಗತಿ-
ವೈರಿಯೆನುತೆ ಶಪಿಸಲೇಕೆ ?
ದುಃಖ ಸುಖವು ಹೊಂದಿ ಬೆರಸೆ
ಜೀವನ-ರಸ ಪಾಕವಹುದು ;
ಒಂದೆ ನಲ್ಮೆ ಒಂದೆ ನೋವು–
ಅದುವೆ ವಿಷದ ಪಾಕವಹುದು.

ಮಾರನೊಬ್ಬ ಪುರುಷರತ್ನ –
ಗುಣಕೆ ತಗುವ ತೆರದಿ ಸತ್ತ
ಹೊಟ್ಟೆಹೊಸೆದು ಅತ್ತು ಕರೆಯೆ
ತೋರಲುಂಟೆ ಮೊಗವನಿತ್ತ ?
ಇಲ್ಲದವನ ನೆನಪಿಗಾಗಿ
ಮಿಾಸಲಿರಲಿ ಕಣ್ಣನೀರು !
ಇರುವ ಧರೆಯ ಭೋಗಕಾಗಿ
ನಿಜದ ದೃಷ್ಟಿಯದನು ಬೀರು !

ನಿನ್ನ ಕೆನ್ನೆ-ಕೆಂಪನಿನ್ನು
ಕಾಲವೊರಸಿ ತೊಡೆಯಲಿಲ್ಲ.
ಕರಿಯ ಕುರುಳ ಮೇಲೆ ನರೆಯ
ಬಿಳಿಯ ಗೆರೆಯ ಬರೆಯಲಿಲ್ಲ !
ಆಸೆಯ ಕಾರ್ಮುಗಿಲ ಮೋಡ
ನಿನ್ನ ಹುಬ್ಬು ಹೊಡೆಯುತಿಹುದು.
ಹಾಸಿನಂತೆ ಮಂದಹಾಸ
ಬೇಟದೆದೆಯ ಹಿಡಿಯುತಿಹುದು.

ವಿತಕಾಗಿ ಧರಣಿ ಕೊಡುವ
ರಸದ ಕಾಣಿಕೆಗಳನೊಲ್ಲೆ ?
ಪ್ರೀತಿಯೆಂಬ ಕಲ್ಪಲತೆಯ
ಹೂತೊಡಬೆಯ ಸೂಡಲಾರೆ ?

ಕಾಲ ಬುಡಕೆ ನಂದನ ವನ
ಇಳಿದು ಬಂದು ನೆಲಸಬಹುದು.
ಕೊಟ್ಟಿಗೆಯಲಿ ಕಾಮಧೇನು
ಸುಖದ ಹಾಲ ಸುರಿಸಬಹುದು.

ನಿನ್ನ ನಳಿಯ ತೋಳುಬಳುಕೆ,
ಎನ್ನ ಜೀವ ಬಳುಕುತಿತ್ತು.
ನಿನ್ನ ಹಜ್ಜೆ ಸದ್ದು ಕೇಳಿ,
ತಿಕಿಟ ಧಿಕಿಟ ಕುಣಿಯುತಿತ್ತು.
ಕೋರೆನೋಟದೊಂದು ಪುಣ್ಯ
ಪಡೆಯಲುಂಗುಟದಲಿ ನಿಂತು,
ನಿಗುರಿ ನಿಲುಕಿ ನೋಡುತಿತ್ತು.
ದೊರೆಯದಿರಲು ಬಾಡುತಿತ್ತು.

ಒಟ್ಟುಗೂಡಿ ಬಾಳುವುದೇ
ಜೀವನಕ್ಕೆ ಸಹಜಧರ್ಮ.
ಬಿಟ್ಟು ತೊಲಗಿ ತೇಲುವುದೆ ವಿ-
ನಾಶದತ್ತ ಸುಳಿವ ಕರ್ಮ.
ಮುಚ್ಚುಗಣ್ಣ ತೆರೆದು ನೋಡು ;
ಬಗೆಯ ಬಿಚ್ಚಿ ಸರಸವಾಡು.
ಮರೆತ ರಾಗವೆಲ್ಲ ಹಾಡು.
ಎನ್ನ ದಾಸನಾಗಿ ಮಾಡು.

ದೊಡ್ಡ ಗರದ ಸುತ್ತು ತಿರುಗಿ
ಹಿಗ್ಗುತಿಹುದು ಚಿಕ್ಕ ತಾರೆ !
ಒಡವೆ ತನ್ನದೆಂದು ಧರೆಯ
ಬಲಬರುವನು ದೇವಭಾನು !
ಶರದಿ ನೆಲವನಪ್ಪಿ ಬಾಚಿ,
ಭೂಮಿ ಕಡಲಿನತ್ತ ಚಾಚಿ,
ಭುಜಕೆ ಭುಜವ ಮೊಗಕೆ ಮೊಗವ
ಒಪ್ಪಿಗೊಟ್ಟು ಬಾಳವೇನು ?

ಕೈಯ ಹಿಡಿದು, ಮನವ ಗೆದ್ದು,
ನುನೆಯ ದೇವಿಯಾಗಬಹುದು.
ಎಳೆಯತನದ ಕೇಡುಕನಸ
ಕಳೆವ ಶಾಂತಿ ಮೂಡಬಹುದು.

ಸುಖದಾಶೆಯು ದಣಿಸಬಹುದು.
ನೈರಾಶ್ಯವ ತಣಿಸಬಹುದು.
ಆದುದಾಗಲಿಲ್ಲವೆಂದು
ಹೊಸತು ನಗೆಯ ಕುಣಿಸಬಹುದು.

ಅಯ್ಯೊ ! ನಿನ್ನ ಸಿಂಗಾರವು
ಬೆಲೆಯಿಲ್ಲದ ಬಂಗಾರವು !
ಒಬ್ಬಳಾಗಿ ಗುಡಿಸಲಲ್ಲಿ
ಕಾಪಾಡುವೆಯೆಂತು ಮುಗುದೆ ?
ಮುಗುಳು-ನಗುವನರಳಿಸದೇ
ಕಣ್ಣಕೊನೆಯ ಹೊರಳಿಸದೇ
ಭಾವಗಳನು ಕೆರಳಿಸದೇ
ಶವದ ಹಾಗೆ ನಟಿಸಲಹುದೆ ?

ನಿನ್ನ ಲಜ್ಜೆ-ಸಿಂಗರಕ್ಕೆ
ಎನ್ನ ಕೈಗಳಿರಲಿ ರಕ್ಷೆ !
ಗರತಿಯಾಗಿ ತಿಮ್ಮಗೌಡ-
ನರಸಿಯಾಗಿ ಮೆರೆಯಲಿರುವೆ !
ಮೆಚ್ಚದವಳ ಕಾಲ ಬುಡದಿ
ಕುನ್ನಿಯಂತೆ ನುಸುಳಲಾರೆ.
ಕೈಯ ಹಿಡಿದ ಹೆಣ್ಣ ಬಿಟ್ಟು
ಅತ್ತ ಇತ್ತ ನೋಡಲಾರೆ !

ಎನಿತೊ ಬಾರಿ ತಿಮ್ಮಗೌಡ
ಹಾಡುತಿದ್ದನೀ ಧಾಟಿಯ
ಕನಲು ಕೆಂಡವಾರುತಿರಲು,
ಊದಿಯೂದಿ ಉರಿಸುತಿದ್ದ.
ಮನದಿ ಬೇಯುತಿದ್ದಳಾಕೆ,
ಸುಟ್ಟು ಸುಣ್ಣವಾಗುತಿದ್ದು,
ಬದುಕುವಾಸೆ ಹಿಂಗದಿರಲು,
ನುಡಿಯುವಂತೆ ನಟಿಸುತಿದ್ದು.

## ಆರು

ಮನುಜ ದಯೆಯ ಬೇಡದಿರುವ
ಅಮರಲೋಕದಾಕೆಯಲ್ಲ.
ಇರಲು ಹಚ್ಚ ಹಸಿಯ ಸೊಗದ
ಹಸನು ಹಬ್ಬಿ ಕಣ್ಣಮುಂದೆ—
ಸವಿಯದಿರಲು ಕಷ್ಟವಾಯ್ತು
ಸವಿವೆನೆನಲು ಭೀತಿಯಿತ್ತು.
ಆಶೆಯಲಿ ನಿರಾಶೆಯಲ್ಲಿ
ಹೃದಯ ತೂಗಿ ತೊನೆಯುತಿತ್ತು.

ಕಾಳೆಗದಲಿ ತನುವ ಬಿಟ್ಟು
ಅಳಿಯದೊಲವ ತನಗೆ ಕೊಟ್ಟು,
ಕಿರಿಯ ಜೀವವೊಂದ ತನ್ನ
ಬಳಿಯಲ್ಲಿಯೆ ಕಾವಲಿಟ್ಟು,
ಹೋದನಲ್ಲನವನ ನೆನಪು,
ಹಾದಿಯ ನಡಹಾಯ್ದು ತಡೆದು,
ನಿಲಿಸುತಿತ್ತು, ಸಂಕಟದಲಿ
ಸವೆದುಹೋಯ್ತು ಮಣ್ಣಿನೊಡಲು.

ನೀರನೆಂದು ನೀರೆಯೆಂದು,
ಒಡೆಯನೆಂದು ಒಡತಿಯೆಂದು,
ಬಿರುದನಿತ್ತು, ಕೊಡಲು ಪಡೆದು,
ಒಂದುಗೂಡಿ ಕಾಲ ಕಳೆದು,
ಜೀವವೊಂದು ಮಾಯವಾಗೆ
ಕೂಡುಗಟ್ಟ ಮರೆವುದೆನಲು,
ಮಾತು ಸುಳ್ಳ ಗುಳ್ಳೆಯೇನು ?
ಎದೆಯು ನಂಜಿನೊರತೆಯೇನು ?

ಪೂರ್ವಕರ್ಮದಂತೆ ಗೌಡ
ಹೊಂಚುತಿದ್ದ ; ಚಲದ ಬಲದ
ಧನಿಕತೆಯನು ನೆಮ್ಮಿ ನಿಂತು
ನಿತ್ಯ ಹಿಂಸೆ ಮಾಡುತಿದ್ದ.
ಸಹಿಸುವಷ್ಟು ಸಹಿಸಿ, ತಾಳ್ಮೆ
ಬತ್ತಿಹೋಗುತಿರಲದೊಮ್ಮೆ
ನಯದ ಭಯದ ಭಾಷೆಯಲ್ಲಿ
ಗದ್ಗದಿಸುತ ನಿರವಿಸಿದಳು :

ಅಲ್ಲವೆಂದು ನುಡಿಯಲಾರೆ,
ನೀವೆ ನಮ್ಮ ಧನಿಗಳೈಸೆ —
ನೆಲವು ಹೊಲವು ಮನೆಯು ದಿನಕೆ

ದಿನಕೆ ಹೊಗೆಯು ಕಾಣದೊಲೆಯು,
ಮಾಡು, ಗೋಡೆ, ಸಂಜೆಯಲ್ಲಿ
ಹಣತೆಯುರಿವ ತುಳಸಿಕಟ್ಟೆ,
ಬದುಕೊ, ಸಾವೊ, ಹೊರುವ ಮಣ್ಣು—
ಎಲ್ಲ ನಿಮ್ಮ ಗಂಟು ಮೂಟೆ !

ಒಪ್ಪುಕೊಳ್ಳಿ ನಿಮ್ಮೊಡವೆಯ
ಬಯಸಬೇಡಿ ಪರರ ಸೊತ್ತ ;
ಕೆಂಪು ಮಾಸದಿರುವ ಕೆನ್ನೆ
ಕಪ್ಪು ಕುರುಳು, ಬಳ್ಳಿ ಹುಬ್ಬು,
ಚೆಂದುಟಿಗಳು, ಕಣ್ಣ ಹಬ್ಬ,
ಅಂಗಾಂಗದ ತಗ್ಗು ಉಬ್ಬು,
ಎಲ್ಲದಕ್ಕೆ ಧನಿಗಳಿಹರು,
ಕೊಡುವೆನೆಂತು ? ಕೇಳ್ವರಾರು ?

ಒಡೆಯನೂರ ಬಿಟ್ಟು ನಡೆಯ-
ಲಿಂತು ಭಾಷೆಯಿತ್ತೆನಣ್ಣ :
ಒಡಲಿದೆನ್ನ ಒಕ್ಕಲು-ಮನೆ—
ಇಲ್ಲಿ ಕಾಯುತಿರುವೆನಲ್ಲ
ಹೆಣ್ಣತನದ ಸಿರಿಯ—ಬಂದು
ಕೇಳುವಂದು, ಮಿಾಸಲಳಿಯ-
ದಿರುವ ಭಕ್ತಿಭಾವದಿಂದ
ನಿನ್ನ ಸೇವೆಗೈವೆ ನಲ್ಲ !

ಹೋದನವನು—ಕಣ್ಗೆ ತೋರ
ನೊಂದು, ಕೆಟ್ಟನುಡಿಯ ಮಿಾರ-
ಲಾವ ಸೊಬಗು ಹೆಣ್ತನಕ್ಕೆ ?
ಅವನ ನೆನಪಿನೊಂದು ಕೋಳಿಕೆ
ಕಟ್ಟಿರುವುದು – ತೂಗಿರುವುದು –
ಎದೆಯ ಗೂಡನವನ ಪದಕೆ !
ಕಳಿದ ಜನಕೆ ಮರುಗಲಾರೆ
ಉಳಿದ ಜನಕೆ ಮರುಗುತಿಹೆನು.

ಬಡವೆ ಹೆಣ್ಣು ರೂಪ ಪಡೆವ
ಪಾಪಕಾವುದುಂಟು ಮಿಗಿಲು ?
ಕಾಯವೊಣಗಿ ಬತ್ತಿಯಾಯ್ತು ;
ಸುಟ್ಟುಕರಿಕಲಿಲ್ಲ ತೊಗಲು.
ದುಗುಡ-ಬೆಂಕಿ ದಗೆಯು ಹೊಯ್ದು
ಹಿಟ್ಟಿನಂತೆ ಬೇಯಲಿಲ್ಲ
ಮಾಂಸರಾಶಿ ; ಬಣ್ಣ – ನುಣುಪು
ಇನ್ನು ಮೈಯನಂಟಿರುವುದು.

ಬಗೆಯನಿನಿತು ಹರಹಲಹವದೊ
ಅಲ್ಲಿ ಕರುಣೆಯೊರತೆಯಿಹುದೊ ?
ನೀವೆ ನೋಡಿ ! ಹೇಳಿ ನೀವೆ !
ನಿಮ್ಮ ತಂಗಿ ಮಗಳು ನಿಮ್ಮ,
ಕಿರಿವಗಲದ ನೆಲದ ಮೇಲೆ
ಗುಡಿಸಲ ಕಗ್ಗತ್ತಲಲ್ಲಿ,
ಕಣ್ಣನೀರ ಕುಡಿಯುತಿಹಳು ;
ಭೂಮಿಗೆಂತು ಭಾರವಹಳು ?

ತಾಯ ನಲ್ಮೆ ಸವಿಯ ಮೆದ್ದ
ಪುತ್ರಭಾವದರಿಯದವರೆ ?
ಅಕ್ಕ-ತಂಗಿ - ಅಣ್ಣ -ತಮ್ಮ
ನಕ್ಕು ಸರಸವಾಡದವರೆ ?
ಈ ಪರಿಯನು ಬಂಧವಿದ್ದ,
ಬಂಧದಲ್ಲಿ ಚಂದವಿದ್ದ,
ನೆನಪಿನ ಲವಲೇಶವಿರಲು,
ಕೆಲವು ದಿವಸ ಬಾಳಬಿಡಿರೆ ?

ಎನ್ನ ತಂದೆ ತಾಯಿ ನೀವೆ !
ಬಾಹ್ಯಲೋಕದೊಡೆಯ ನೀವೆ !
ಸಾವ ಕೂಗಿ ಕರೆವುದಾತ್ಮ !
ಒಲ್ಲೆನೆನ್ನುತಿರುವುದಾಶೆ.
ಉಣ್ಣೆಯಂತೆ ನೆಲದ ಮೈಯ
ಕಚ್ಚಿ ಹಿಡಿದಿರುವುದು ಭಾವ ;
ಮುದ್ದು ಹಸುಳೆ ಮೊಗದ ನಗೆಯ
ಬಳಸುತಿದೆ ಪಿಶಾಚಿ ಜೀವ !

ನೆಲವನುತ್ತು ಬೀಜ ಬಿತ್ತಿ,
ಮೊಳೆಯನೆತ್ತಿ ತಂದುದಾಯ್ತು ;
ಊರಿ, ನೀರನೆರೆದು ಬೇರು

ಬಲಿಯುವುದನು ಕಂಡುದಾಯ್ತು ;
ಒಂದು ಚಿಗುರು ಮೂಡುತಿರಲಿ !
ಕಿರಿಯ ಕವಲು ಕೂಡುತಿರಲಿ !
ಅಸಿತುಕಾಲವೆನ್ನ ನೆನಗೆ
ಬಿಟ್ಟು ಪುಣ್ಯ ಗಳಿಸಿಕೊಳ್ಳಿ !

ಅವಳದೊಂದು ಹಾಡು ಬೇರೆ–
ತನ್ನದೊಂದು ರಾಗ ಬೇರೆ !
ಮೇಳ ಕೂಡದೆಂಬ ಸತ್ಯ
ಹೊಳೆಯುತಿತ್ತು ಗೌಡನೆದೆಗೆ.
ಮುನಿಸು ಮೊಗಕೆ ಬಣ್ಣ ಬರೆಯೆ,
ನೋಟದಿಂದ ಕಿಡಿಗಳುದುರೆ,
ತನ್ನ ತಾನೆ ಕಡಿಯುತಿದ್ದ ;
ತನ್ನ ತಾನೆ ತಡೆಯುತಿದ್ದ.

ಭೋಗ ಭಾಗ್ಯ ಕಣ್ಣ ಮುಂದೆ
ನಿಂತು ಕರೆಯಲೊಲ್ಲೆನೆನುವ
ಹೆಣ್ಣ ರೀತಿನೀತಿಗಳನು
ಮೆಚ್ಚಿ ಸಹಿಪನಲ್ಲ ಗೌಡ.
ವಿನಯದಿಂದ ಮಾನದಿಂದ
ದೈನ್ಯದಿಂದ ಜೋಡಿ ಕೈಯ
ಬೇಡುತಿದ್ದ ಪಾಡ ನೋಡಿ
ಒಂದು ನಿಮಿಷಕಾದ ಮೂಢ.

ನಿಟ್ಟುಸಿರನು ಕರೆದನೊಮ್ಮೆ ;
ಕೂರ್ನೋಟವ ಮಸೆದನೊಮ್ಮೆ ;
ಅಟ್ಟಹಾಸದಿಂದೆ ನುಡಿದ :
ಹಲವು ನುಡಿಗಳೇಕೆ ಹೆಣ್ಣೆ ?
ಗೌಡನಂಥ ಗಂಡು ಬಂದು,
ಎದೆಯ ಕಾಲ ಬುಡದೊಳಿಡಲು,
ಒದೆವ ಸೊಕ್ಕು ಜೌವನೆಯನು,
ಕಾವ ಬಂಟನಾರೊ ಕಾಣೆ !

ನಿನ್ನ ಮರುಳುತನದ ಕಹಿಯ
ಫಲವ ನೀನೆ ಮೆಲ್ಲಲುಂಟು,
ಗೌಡ ಮುನಿಯಲಾವ ಲೋಕ
ದಯೆಗೊಂಬುದೊ ನೋಡಲುಂಟು.
ಒಂದು ಮಾಸ ಗಡುವನಿಡುವೆ,
ಇಲ್ಲಿ ನಿನ್ನ ನಿಂತೆ ಬಿಡುವೆ,
ಸವೆಯಲವಧಿ – ಬಾಗಿಲಲ್ಲಿ
ನಿಂತು ಮತ್ತೆ ಕೇಳಲಿರುವೆ !

ಪ್ರೇಮನಿಧಿಯ ನಿನ್ನ ಪಾದ-
ತಲದೊಳಿಟ್ಟು ಹರಹಿದಂದೆ,
ಹದುಳದಿಂದ ಬಗೆಯ ಕದವ,
ಬಲಿಯಲಾವುದಿಹುದು ಚಿಂತೆ ?
ಆರ ದಯೆಯ ಬೇಡುವೆಯೋ ?
ಆರ ನೆರಳೊಳೋಡುವೆಯೋ !
ಹಚ್ಚಹಸಿಯ ರೂಪದೊಡಲ
ಎಲ್ಲಿಯೆಂತು ಕಾಪಿಡುವೆಯೊ ?

ನಿನ್ನ ತೆರದೆ ಗತಿಯ ಕೇಡ
ವರಿಸಿಕೊಂಡ ಬಡವೆ ಹೆಣ್ಣು
ಮಾನ ಜೀವಗಳನು ಕೂಡಿ
ಹಿಡಿವಳೆಂತೊ ಕಾಂಬೆನಿನ್ನು !
ಬಡತನಕ್ಕೆ ಮಾನವೆ ಹಗೆ–
ಒಡೆತನಕ್ಕೆ ದೈನ್ಯವೆ ಹಗೆ–
ನಮ್ಮ ನಮ್ಮ ವೈರಿಗಳನು
ನಾವೆ ನಾವೆ ಸಾಕುತಿರೆವೆ ?

ಕೊನೆಯ ಬಾರಿ ಸಾರ್ವೆ ಹೆಣ್ಣೆ !
ತಿಮ್ಮಗೌಡನರಮನೆಯುಲಿ,
ಅಂಚೆನಡೆಯ ತುಂಬಿಗುರುಳ
ಮುದ್ದು ಮೋಹದರಿಸಿಯೆನಿಸಿ
ಮೆರೆಯಬಹುದು ; ಮೆಚ್ಚದಿರಲು
ತಿಂಗಳವಧಿ ಸವೆದ ಮೇಲೆ,
ಬೀದಿಯಲ್ಲಿ ಕುನ್ನಿಯಂತೆ
ಎಂಜಲೆಲೆಯ ನಕ್ಕಬಹುದು.

ಗಂಡ ಶೈಲವುರುಳಿದಂತೆ
ಗೌಡ ಹೊರಗೆ ಹೊರಳುತಿದ್ದ.
ಸಂಜೆಯೊಡನೆ ಮುದ್ದ ಬಂದು.

ಗೋಗರೆಯುತೆ ಕೇಳುತಿದ್ದ !
" ಅಪ್ಪನೆಂದು ಬರುವ ನಮ್ಮ
ಎಂದು ಕಾಂಬೆವವನ ? ಕಳಕೆ
ಹೋದ ಜನರು ಮರುಳುತಿಹರು,
ಮರೆತನೇನೊ ತಂದೆ ನಮ್ಮ ? "

ಮುದ್ದು ಕಂದ ! ಮರೆಯಲುಂಟೆ ?
ತಂದೆ ನಮ್ಮ ತೊರೆಯಲುಂಟೆ ?
ಬಾನಿನಲ್ಲಿ ನಿಂತು ನಿಗುರಿ
ತಾರೆಯಲ್ಲಿ ನೋಡುತಿಹನು.
ತಂಗಾಳಿಯ ಮುತ್ತನಿಟ್ಟು
ಬೆಂಗದಿರಲಿ ಮೈಯ ತಡವಿ,
ಏಳು ಕಂದ ! ಧೀರನಾಗಿ
ಬಾಳೆನ್ನುತೆ ಹರಸುತಿಹನು.

ಉಸಿರಿನಲ್ಲಿ ಬಿರುಗಾಳಿಯ
ಹೊತ್ತು ತಡೆದು ನಿಲಿಸಿದಾಕೆ,
ಮಾತಿನಲ್ಲಿ ಸಿಡಿಲ ಮುಚ್ಚಿ,
ಸಾಕಿ ಸಾಧುಮಾಡಿದಾಕೆ,
ಸಹಿಸಲಾರದಾದಳಿಂದು,
ತಡಿಯನೊಡೆಯೆ ಶೋಕ-ಸಿಂಧು,
ಮುದ್ದು ಮಗನನೆದೆಗೆ ಬಿಗಿದು
ಗದ್ಗದಿಸಿ ವಿಲಾಪಿಸಿದಳು.

ಅಯ್ಯೋ ! ಒಡಲು ಹಸಿಯ ಮಾಂಸ
ಮಣ್ಣು ಮೆತ್ತಿದೆಲುಬುಗೂಡು.
ಬೆಂಕಿಯಲ್ಲಿ ಬೆಂದು ಬೆಂದು
ಒಡೆದು ಸಿಡಿಯಲಾರದಿನ್ನು !
ಬಳಿದ ಬಣ್ಣ ರೂಪವಂತೆ
ಕಣ್ಣ ಹೊಳಪು ಮೋಡಿಯಂತೆ,
ಎಲ್ಲ ಗುಣಗಳೊಂದುಗೂಡಿ
ಕಾಡುತಿಹವು ಕೇಡಿನಂತೆ.

ಹೊಟ್ಟೆಯುರಿಯು ಕೊಳ್ಳಿಯಾಗಿ,
ಸುಡುವ ಜನಕೆ ರಕ್ಷೆಯಿಲ್ಲ.
ಆತ್ಮವಧೆಯು ಗೈವ ಜನಕೆ

ಘೋರ ನರಕ – ಮೋಕ್ಷವಿಲ್ಲ !
ಕಾಣದಿರುವ ನರಕಕಿಂತ
ಕಾಂಬ ನರಕ ಘೋರ–ಘೋರ.
ಮಾನವತಿಯ ಬಾಳ ಬಿಡದ
ಸ್ವರ್ಗವಿರಲು – ಘೋರ ! ಘೋರ !

ಸಾವ ಜನರ ಸಂತಪಡುವ
ಬಾಳುವವರ ಕಾಲಲೊದೆವ,
ನೀತಿನಿಯತಿಗಳನು ನಂಬಿ,
ನೇತು ಜೋತು ಬದುಕಲಾರೆ,
ಹಿಂದೆ ನಡೆದ ದಾರಿ ಕಪ್ಪು-
ಮುಂದೆ ಕಾಂಬ ದಾರಿ ಕಪ್ಪು.
ತಿಳಿವಿನೊಳಗೆ ಹೊಳೆಯುತಿಹುದು
ಕಪ್ಪು ಬಣ್ಣದೊಂದು ಹೊಳಪು !

ಅಪ್ಪಿಕೊಳ್ಳು ನೆಲವೆ ತಾಯೆ !
ಹುಲ್ಲು ಚಿಗುರ ಸೆರಗಿನಲ್ಲಿ ;
ಒಪ್ಪಿಕೊಳ್ಳು ನಿನ್ನ ಮಗಳ
ದೋಷವಿರಲು, ಮರವೆಯಲ್ಲಿ.
ಕಾಲ ಕಳೆಯೆ ಮಾಸೆ ಬಣ್ಣ
ಮಾಂಸ ಧಾತು ಸೇರೆ ಮಣ್ಣ
ಎಲುಬುಗೂಡ ಭರದೆ ಕೀಳು
ನಾಯ ನರಿಯ ಬಾಯ್ಗೆ ಕೊಳು !

ಗಂಟಲೊಣಗುವಷ್ಟು ಹೃದಯ,
ಒಡೆಯುವಷ್ಟು, ಚೇತನಗಳ
ದೆಸೆಗೆ ದೆಸೆಗೆ ತೊನೆಯುತಿರುವ
ಪ್ರಾಣತಂತು ಕಡಿಯುವಷ್ಟು
ಅತ್ತು ಅತ್ತು ಹಮ್ಮಯಿಸುತ,
ಸತ್ತು ಸತ್ತು ಚೇತರಿಸುತ,
ಧ್ಯಾನಗೊಂಡು, ಮೌನಗೊಂಡು
ಇದ್ದಳಾಕೆ ತನ್ನ ಕಂಡು.

ಅಂದಿನಿಂದಲವಳ ಮೊಗವು
ಕಂದುವುದನು, ಮುರಿಯುವುದನು,
ಮೊಗ್ಗೆ ನಗೆಯ ಬಾಡುವುದನು;

ಕಣ್ಣ ತಂಪು ಕೊಡುವುದನು,
ಕೊರಳ ಗದ್ಗದವನು, ನುಡಿಯ
ತಡವರವನು ಕಂಡರಿಲ್ಲ.
ಕವಿಯ ಕನಸು ಹೆಣ್ಣ ರೂಪ
ತಳೆದ ತೆರದೆ ಮೆರೆದಳಲ್ಲ !

ಕಾಡಬುಗ್ಗೆಯಂತೆ ಹಾಡಿ,
ಬಾಲರವಿಯ ಕದಿರಿನಂತೆ
ನಗುವ ಚೆಲ್ಲಿ, ಗಿಳಿಯ ತೆರದಿ,
ತೊಂಡುಗೆಡೆದು ಮಾತನಾಡಿ,
ಕೂಟಗಳಲಿ ಕೂಡುತಿದ್ದು
ನೋಟಗಳಲಿ ನೋಡುತಿದ್ದು
ಆದುದೆಲ್ಲವಾಗದಿದ್ದು-
ದೆಂಬ ತೆರದೆ ತೋರುತಿದ್ದು—

ಮುದುಕಿ ತೊತ್ತನೊಮ್ಮೆ ಕರೆದು
ನುಡಿದಳಿಂತು : ತಾಯೆ ನಮ್ಮ
ನೆಲದ ನೀರು ಬತ್ತಿಹೋಯ್ತು ;
ದಿನದ ಲೆಕ್ಕ ಕುಂದಿ ಬಂತು ;
ನೆತ್ತರಿರುವ ಕಣ್ಣನರಸು ;
ಅದರ ನೋಟದಲ್ಲಿ ನೆಲಸು ;
ಹತ್ತಿರವೇ ನಿಂತು ಕರೆವ
ಮೃತ್ಯುಗೆ ಕಾಣಿಕೆಯ ಸಲಿಸು !

ತಿಮ್ಮಗೌಡ ನಾಡ ದೆವ್ವ
ಅವನ ವಿಧಿಯ ತಡೆವನಾವ ?
ಮೀರಿನೆಂಬಿ ಬಾಳಲುಂಟೆ ?
ಮೀರದಿರಲು ಮಾನವುಂಟೆ ?
ಅವನ ರಾಜ್ಯ ಮೆರೆಯುತಿರಲಿ :
ಅವನ ಕೀರ್ತಿ ಬೆಳಗುತಿರಲಿ !
ಅವನ ಶಾಸನವನು ಹೊತ್ತು
ತಲೆಗಳೆಲ್ಲ ಬಾಗುತಿರಲಿ !

ಎನುತೆ ತಿಮ್ಮಗೌಡನಿತ್ತ
ನಲ್ಮೆ ಕಾಣಿಕೆಗಳನ್ನೆಲ್ಲ
ಮುದುಕಿಯವಳ ಬಾಗಿಲಬಿನ್ನ

ಮೇಲೆ ಹೊರಿಸಿ ಕಾಲ ಹಿಡಿದು,
ಕ್ಷಮೆಯ ಬೇಡಿ, ಬೀಳುಕೊಟ್ಟು
ತನಗೆ ತಾನೆ ಒಡತಿಯಾಗಿ,
ಕಿವಿಗೆ ಕೇಳದೊಂದು ಹಾಡ
ಮನಕೆ ಹಾಡುತಿದ್ದಳವಳು

( ಏಳು )

ಬೆಳಕು ಕತ್ತಲೆಗಳ ಹುಯಿಲ.
ದಿಮುಕಿನ ನುಗ್ಗಾಟದಲ್ಲಿ
ಬಾನ ಕಡಲ ತೀರದಲ್ಲಿ
ತಾರೆಯ ಹೆಣ ತೇಲುತಿತ್ತು.
ಮೂಡುದೆಸೆಯ ಮೊಗದಿ ರಕ್ತ
ಧಾರೆ ಧಾರೆ ಸೂಸುತಿತ್ತು ;
ಚಳಿಯ ಸೆರೆಗೆ ಸಿಕ್ಕಿ ಬಿದ್ದ
ಪಕ್ಷಿ ರೆಕ್ಕೆ ಹೊಡೆಯುತಿತ್ತು.

ಶಾಂತಿರಸದ ಹಣ್ಣು-ನಿದ್ದೆ
ಮಾಗಿ ಕೂಗಿ ಬೀಳಲಿತ್ತು.
ಎಚ್ಚರ ಮಿಡುಕಿನಲಿ ಜೀವ
ಸಂಕಟದಲಿ ನವೆಯಲಿತ್ತು.
ನಿದ್ದೆ ಸಕಲ ಸುಖದ ಬೇರು,
ಎಚ್ಚರೆ, ದುಗುಡಕ್ಕೆ ತವರು,
ಸಾರುತಿಹನು ಚಂಡಭಾನು
ನಿಯತಿಯ ನಿಷ್ಕರುಣತೆಯನು.

ಗೌಡನವನ ಸೃಷ್ಟಿಯಲ್ಲಿ
ರಾತ್ರಿಯಿಲ್ಲ ಹಗಲೆಯಿಲ್ಲ ;
ಬೆಳಗು ಬೈಗು ಬೇರೆಯಿಲ್ಲ.
ಸೂರ್ಯ ಚಂದ್ರಗತಿಗಳಿಲ್ಲ.
ಮಾಸದವಧಿಯೊಂದೆ ಕಾಲ !
ಮೂಡು ಗೆಲವು ಪಡುವೆ ಸೋಲ
ಕಣ್ಣು ತೆರೆದು ನೋಡೆ ದೇವಿ
ಅಲ್ಲೆ ಸೂರ್ಯ ಚಂದ್ರರೆಲ್ಲ.

ತಾನೆ ತನ್ನ ಕಳ್ಳನಾಗಿ
ತನ್ನೊಡವೆಯನೊಯ್ಯುವಂತೆ,

ತಾನೆ ತುಬ್ಬುಗೊಂಡ ಮೇಲೆ
ತನ್ನ ತಾನೆ ಹೊಯ್ಯುವಂತೆ,
ದೊರೆತಳೆಂದು ಹಿಗ್ಗುತಿದ್ದ ;
ದೊರೆಯಳೆಂದು ಹಲುಬುತಿದ್ದ ;
ಎರಡೆಣಿಕೆಯ ತಪ್ಪನೆಣಿಸಿ
ಕರಗುತಿದ್ದ ಕೊರಗುತಿದ್ದ.

ಮಾಸದವಧಿ ಮುಗಿದುದಕ್ಕೆ
ದೈವ ಬಲವ ಹೊಗಳುತಿದ್ದ ;
ಗಾಳಿಯ ಒಳ ಕಂಪಿನಂತೆ,
ನೀರಿನ ಒಳ ತಂಪಿನಂತೆ,
ಹಾಡಿನೊಳಗಣಿಂಪಿನಂತೆ,
ಹೊರಗೆ ತೋರದೊಳಗೆ ಕವಿದು
ಅನುಭವಕ್ಕೆ ಬರುವ ಸೊಗದ
ಹಾರೈಕೆಯ ಹುದುಗಿಸಿದ್ದ.

ಮೊದಲ ಹೊನ್ನ ಕದಿರು ಜಗದ
ಮೂಡುದೆಸೆಯ ಕಿಟಕಿಯಿಂದ
ಇಳಿವ ಮೊದಲೆ ಸಿದ್ಧನಾಗಿ
ಪ್ರೇಮಯಾತ್ರಿ ಹೊರಟು ನಿಂತ.
ಅವಳ ಮುಖವ ಕಂಡು ತರಣಿ
ರಾಗದಿಂದ ಕೆಂಗಲಿಸುವ
ಮುನ್ನ ತಾನೆ ಒಲಿಪೆನೆಂಬ
ತವಕದಿಂದ ಓಡುತಿದ್ದ.

ಓಡುತಿದ್ದ ನೇದುತಿದ್ದ
ಸೇಂಕುತಿದ್ದ ತಿಮ್ಮಗೌಡ —
ಪ್ರೇಮಕಿಂತು ಕುಂಟು ನಡೆಯೆ ?
ಎಂದು ತನಗೆ ಹೇಸುತಿದ್ದ.
ಹಾದಿಯೆಲ್ಲ ಮನದ ಹಾದಿ !
ಬೀದಿಯೆಲ್ಲ ಬಯಕೆ ಬೀದಿ !
ಒಂದೆ ಗುರಿಯ ನೋಡಿ ನೆಟ್ಟ
ಬಾಣದಂತೆ ಹಾರುತಿದ್ದ.

ಬಾನ ಮೋರೆ ಬೆಳ್ಳನಾಯ್ತು ;
ಮಬ್ಬು ಕರಗಿ ತೆಳ್ಳನಾಯ್ತು ;
ಗೌಡನ ಬಗೆ ಕಳ್ಳನಂತೆ
ಹುಳ್ಳಹುಳ್ಳನಾಗುತಿತ್ತು.
ಕೃತಿಯ ಘೋರತೆಯನು ಬಲ್ಲ
ಹಿಡಿದ ಚಲವ ತೊರೆಯಲೊಲ್ಲ
ಹೆಣ್ಣ ಕನಸ ಮರೆಯಲೊಲ್ಲ
ಜಯಿಪ ವರೆಗೆ ಧೈರ್ಯಗೊಳ್ಳ.

ಗುಡಿಸಲಿದಿರು ನಿಂತನಿರುಳ
ಕಡೆದು ನೆಟ್ಟ ಮೂರ್ತಿಯೆನಲು ;
ಹಜ್ಜೆಯಿಡಲು ಮೆಟ್ಟಿಲಲ್ಲಿ
ಕುಸಿಯುತಿತ್ತು ಹಿಂದೆ ಕಾಲು,
ಮುದಿಯ ಗೂಬೆ ರೆಕ್ಕೆಗೆದರಿ
ಮೂಕವಾಗಿ ನಿಂತ ತೆರದಿ,
ಹೊದೆದ ಹುಲ್ಲ ಕರಿಯಮಾಡು
ತೋರುತ್ತಿತ್ತು ಕತ್ತಲಲ್ಲಿ.

ಎಣಿಕೆಯೋಟ ಕೊಡುವ ಕಾಟ
ವೇನೊ ? ತಿಮ್ಮ ತಿಳಿದನಂತೆ !
ಹಗುರವಾಗಿ ಬಯಕೆ ಹಾರೆ
ಎಳೆಯುತಿತ್ತು ಭೀತಿ ಹಿಂದೆ.
ಭಯದ ಗಂಟೊಳೇನಿರುವುದೊ
ಬಿಚ್ಚಿ ನೋಡಲಿಲ್ಲ ತೆರಪು !
ನೋಡಲಿಹನು, ಹುಡುಕಲಿಹನು,
ತಿಳಿದ ಮೇಲೆ ದೇವಿಯೊಲವು.

ನಿಮಿಷವೆಣಿಸಿ ಕಳುವುತಿದ್ದ
ಆಸೆ ತಳ್ಳುತಿರಲು ಮನವ,
ಅತ್ತ ಇತ್ತ ಸುತ್ತುವರಿದು,
ಇಣಿಕಿ ಹಣಿಕಿ ನೋಡುತಿದ್ದ.
ಉಸಿರ ಗತಿಯ ಸದ್ದೆ ಇಲ್ಲ !
ಕನವರಿಕೆಯ ಸನ್ನೆಯಿಲ್ಲ !
ಎದೆಯ ಬಡಿತವಿಲ್ಲದೊಡಲ
ಶೂನ್ಯತೆಯಲಿ ಗುಡಿಸಲಿತ್ತು.

ಕರೆಯದೊಳಗೆ ನುಗ್ಗಿ ನಡೆಯೆ,
ಗೌಡತನದ ಕೀವಿಯಲ್ಲ ;

ಅವಳೆ ಕರೆದು ತಾನೆ ನೆರೆಯೆ
ಸಕಲಸಿದ್ಧಿಯಾಗದಿಲ್ಲ ;
ಎನಿತು ಕಾಲ ತಡೆವನಿಂತು !
ಮನವು ಸಿಲದೆ, ಚಲವ ಬಿಡದೆ,
ದಟ್ಟಿಸುತ್ತ ನುಡಿದ ನೆಲವೊ
ದಿಟ್ಟೆ ! ಸಮಯ ಮೀರೆ ಬಂದೆ !

ಎನುತೆ ಜಗಲಿಯೇರಿ ಬರಲು
ಕದದ ಬಾಯಿ ತೆರೆದೆ ಇತ್ತು ;
ಮುರಿದು ಬಿದ್ದ ಅಗುಳಿ-ಕೀಲು
ಮುರಿದ ಸೆರೆಯ ತೆರದೆ ಇತ್ತು ;
ಹಜ್ಜೆ ಹಜ್ಜೆ ಮುಂದೆ ನಡೆದ-
ನೆದೆಯು ಭಾರವಾಗುತಿರಲು,
ನಿಂತು ನಿಂತು ನೋಟವಿಟ್ಟ
ಕಾಣದಿರಲು ಹೆಣ್ಣ ನೆರಳು.

ಹಿಂದೆ ಮುಂದೆ ಹುಡುಕುತಿದ್ದ ;
ಮೂಲೆಮೂಲೆ ಬೆದಕುತಿದ್ದ ;
ಒದ್ದೆಗಣ್ಣ ನಡುಗು-ದನಿಯ
ಉದ್ವೇಗದಿ ಕೇಳುತಿದ್ದ :
ಕಾಣೆನಿಲ್ಲಿ ಮುಗುದೆ ಹೆಣ್ಣ
ಪ್ರೇಮರಸದ ಕಳಿತ ಹಣ್ಣ—
ಬಾನ ಬಾಯಿ ನುಂಗಿತೇನೊ !
ಭೂಮಿಯೆದೆಯೊಳಿಂಗಿತೇನೊ !

ಎತ್ತಿ ಮುಗಿಲು ಕೊಂಡುದೇನೊ
ಬಿರುಸು ಗಾಳಿ ಹೊತ್ತಿತೇನೊ !
ಸಂಜೆ ಮಂಜು ಮುಸುಕಿನಲ್ಲಿ
ಕಾಳರಾತ್ರಿ ಕಿತ್ತಿತೇನೊ !
ಇಂಥ ಚೆಲುವಿನಿಂಥನುಣುಪಿ-
ನಿಂಥ ಕಣ್ಣ ಪುಣ್ಯ ಫಲಕೆ
ಬಾರದಿರುವುದೆಂತು ಕೇಡು—
ಇಂಥ ಬಡವು ಜೀವನಕ್ಕೆ ?

ದುಗುಡದಿಂದ ಸಿಡಿಲೆರಗಿದ
ವೇಗದಿಂದ ಬಿದ್ದನಿಲ್ಲ ;
ಜಗದ ಸುಖದಿ ದುಃಖಗಳಲಿ—
ತೇಲಿಬಂದ ತಿಮ್ಮಗೌಡ.
ತಿಳಿವಿನಂಕೆ ಕೆಡದೆ, ಶಂಕೆ
ಬಿಡದೆ, ವಿಫಲತೆಯಲಿ ನೊಂದ.
ಲೇಸೊ ! ಹೇಸೊ ! ಏನೆ ಇರಲಿ,
ಹೀಗು ಆಗಬೇಕೆ ? ಎಂದ.

ಯೋಚಿಸುತ್ತ ಯಾಚಿಸುತ್ತ
ತನ್ನ ತಾನೆ ಕಾಡುತಿದ್ದ.
ಭಾವಿಸುತ ವಿಭಾವಿಸುತ್ತ
ಬೆಕ್ಕಸದಲಿ ನೋಡುತಿದ್ದ.
ಬುದ್ಧಿಯ ಬುಡ ಬೇರಿನಲ್ಲಿ—
ರಕ್ತದ ನರ ನಾಡಿಯಲ್ಲಿ—
ಎಂದು ಹಿಂದೆ ಬಾರದಿದ್ದ
ನೋವೊಂದನು ಸಹಿಸುತಿದ್ದ.

ನೋವೊಂದನನುಭವಿಸುತಿದ್ದ—
ಜೀವ ಜೀವ ಹಿಂಡುತಿದ್ದ ;
ಏನಾದಳೋ ಗೈದೆಯೇನ ?
ಭಯಗೊಳಿಪುದು ಮೃತ್ಯು ಮೌನ !
ಅವಳಿಲ್ಲದ ಹಸುರು ಹೊಲದ
ಸುಗ್ಗಿ ತೆನೆಯೊಳಾವ ಚಂದ ?
ಅವಳ ಕಡೆಯ ಕಣ್ಣ ಬಣ್ಣ
ಬರೆಯದ ಚಿಗುರಾವ ಅಂದ ?

ಇಂತು ಹಲುಬಿ ಹೊಲಬುದಪ್ಪಿ
ದುಗುಡದೊಡವೆಯಾಗುತಿರಲು,
ಅಂತರಂಗದಂಧಕಾರ
ತಿಳಿವಿನಿಂದೆ ಕರಗುತಿರಲು,
ಬಾನಿನಿಂದ ತೇಲಿ ಬಂದು
ಗಾಳಿ ಹಜ್ಜೆಯಲ್ಲಿ ನಿಂದು,
ಆರೊ ಏನೊ ನುಡಿದ ಹಾಗೆ
ಕೇಳಿತೊಂದು ಮಾತು ಬಗೆಗೆ.

ಇನಿತು ಕಾಲ ನಿಮ್ಮ ದಯದಿ
ನೆಲದ ನೀರ ಕುಡಿಯುತಿದ್ದೆ.

ಹೆಣ್ಣುತನದ ಚೆಲುವನುಳಿಸೆ
ಎಚ್ಚರಲ್ಲಿ ಮಿಡುಕುತಿದ್ದೆ.
ಕರುಣೆದೋರಿ ಕಣ್ಣ ಕಾವ-
ಲಿತ್ತು ಪೊರೆದ ನಿಮ್ಮ ಪುಣ್ಯ
ಋಣವ ಸಲಿಪೆನೆನಲು ಸಾಕೆ ?
ಹತ್ತು ಬಾರಿ ಜನನ ಮರಣ ?

ಹಣೆಯ ಬೊಟ್ಟಿನೊಡನೆ ಭಾಗ್ಯ
ಅಳಿಸಿ ಹೋದ ಗಳಿಗೆಯಿಂದ,
ತಾಯಿತಂದೆಯಾಗಿ ಮಗನ
ಬಳಸಿ ನಿಂತೆ ಮೋಹದಿಂದ.
ಹೆಣ್ಣು ಹದ್ದು, ಗಿಡುಗ, ಚಿರತೆ,
ಕೋಟಿಯಾಗಿ ಕಾವಲಿರುತೆ,
ಮರಿಯ ಪೊರೆವುದೆನಲು ಮನುಜೆ
ಇವಳಿಗುಂಟೆ ಬೇರೆ ಚರಿತೆ ?

ಮಣ್ಣು ಮಣ್ಣಿಗಿರುವ ನಂಟು
ಹಸುಳೆಗೆನ್ನನಂಟಿಸಿತ್ತು.
ಅವನ ಸವಿಯ ಮುತ್ತಿನಿಂದ
ಕೆನ್ನೆ ಕೆಂಪನಾಗುತಿತ್ತು.
ಮಿಡಿಯ ತೋರದಡಗಿಸಿಟ್ಟು
ಹಬ್ಬುವೊಣಗು-ಬಳ್ಳಿಯಂತೆ,
ಅವನ ಸುತ್ತಿ ನಗುವ ಬಿಟ್ಟು
ಅಡಗುತಿದ್ದುದೆನ್ನ ಗುಟ್ಟು

ಕಣ್ಣು ತುಟಿಯ ಹುಬ್ಬು ನಗೆಯ
ದೋಷವೇನೊ ತಿಳಿಯದಿದ್ದೆ.
ನೀವು ತಿಳಿಸೆ ಲೇಪವಿದನು
ತೊಡೆಯಲೆಂದು ಸಿದ್ಧಳಾದೆ.
ನಿಮ್ಮೊಡವೆಯ ನಿಮಗೆ ಬಿಟ್ಟೆ.
ಎನ್ನ ಹೊರೆಯ ನಾನೆ ಹೊತ್ತೆ
ಬಾಳಿನಲ್ಲಿ ಸೋಲವೊಪ್ಪಿ
ಸಾವಿನಲ್ಲಿ ಧೈರ್ಯವಿಟ್ಟೆ.

* * *

ಭಾವಜೀವಿಯಲ್ಲ ಗೌಡ ;
ಅನ್ನಜೀವಿಯೆನಲು ಸತ್ಯ ;
ಆದರೇನು ? ತನ್ನ ಪಾಪ-
ದುಸಿರ ಕೇಡ ಮರೆಯಲಾರ.
ಹುಟ್ಟಿನಗಲಿ ಹರಿದ ತುಂಬಿ
ದಿಕ್ಕುಗೆಟ್ಟು ಹಾರುವಂತೆ,
ಗುಡಿಸಲಿಂದೆ ಹಾರಿ ನಡೆದ
ತನ್ನ ದಾರಿ ತೋರಿದಂತೆ.

ಬಲೆಗೆ ಬಿದ್ದ ಬಾಳೆ ಮೀನ
ಕೆರೆಯೊಳಿಳಿಸಿ ಸಲಹಲಿದ್ದೆ.
ಜಾಲದಿಂದ ನುಣುಚಿಕೊಂಡು
ಹದ್ದಿಗಾಯ್ತು ಬೋನ ಮುದ್ದೆ—
ನೆಲವು ಬೇಕೆ ? ಹೊಲವು ಬೇಕೆ ?
ಹಾಳುಮನೆಯೊಳಿರಲು ಬೇಕೆ ?
ಅವಳ ಹೊರುವ ಭಾಗ್ಯವಿರದ,
ನಾಡನಿನ್ನು ನೋಡಬೇಕೆ ?

ತಪ್ಪೊ ಒಪ್ಪೊ ಆರದಿರಲಿ,
ತಿಳಿಸಿ ಬದುಕಬಾರದಿತ್ತೆ ?
ಪಾಪ ತಮದ ನಡುವೆ ದಿವ್ಯ
ದೀಪ ಬೆಳಗಬಾರದಿತ್ತೆ ?
ಬದುಕು ಬೆಳಕು ಭೂಮಿಗಿತ್ತು ;
ಭೂಮಿ ಹಿಗ್ಗಿ ನಲಿವುದಿತ್ತು ;
ಭೂತಕಾಲ ಕಾಯ್ತು ತುತ್ತು !
ಎಂದ ಗೌಡ ಮನದೊಳತ್ತು.

* * *

ಸೀತೆಯೊಂದು ತಾರೆಯೊಂದು,
ಗುಡಿಯೊಳಿಟ್ಟು ಕರೆದರಿಲ್ಲ.
ಶಿಲ್ಪಶಿಲೆಯ ಚಿತ್ರಕಲೆಯ
ಮೈಯ ಕೈಯ ಬರೆದರಿಲ್ಲ.
ಅವಳ ಮೂಳೆ ಬಿದ್ದ ನೆಲದಿ
ಮಣ್ಣ ದೂಪೆಯೇಳಲಿಲ್ಲ.

ಕಲ್ಲೊ ಮುಳ್ಳೊ ಆವುದಿರಲಿ —
ಅವಳ ಹೆಸರ ಹೇಳಲಿಲ್ಲ.

ಅವಳು ಮಾಯವಾದ ಬಳಿಕ
ಹಕ್ಕಿಯೊಂದು ಹಾಡಲಿಲ್ಲ;
ತುಂಬಿಯೊಂದು ಮೊರೆಯಲಿಲ್ಲ;
ಸುಗ್ಗಿ ಲಾಸ್ಯವಾಡಲಿಲ್ಲ.
ಕಾಡುಗುಡ್ಡ ವಳುತಲಿತ್ತು
ಹಳ್ಳಕೊಳ್ಳ ಹಲುಬುತಿತ್ತು
ಬೆಟ್ಟಬಯಲು ನಿಟ್ಟುಸಿರಲಿ
ಕೆಂಡಗಳನು ಕಾರುತಿತ್ತು.

ರಥವ ಹೂಡಲಾರೆನೆಂದು
ಅರುಣ ಹಿಂದೆ ಸರಿದು ನಿಂತ;
ವಿರಲಾರೆನೆಂದು ತರಣಿ
ಮೊಗವನತ್ತ ಚಾಚಿ ನಿಂತ;
ಪ್ರಕೃತಿ ತನ್ನ ಶೂನ್ಯತೆಯನು
ತಾನೆ ತಿಂದು ತೇಗುತಿತ್ತು.
ವಿಲಯಶಕ್ತಿ ಬಾಯ ತೆರೆದು
ಇಡಿ ಸೃಷ್ಟಿಯ ನುಂಗುತಿತ್ತು.

ಎಂದು ಬಣ್ಣ ಬಣ್ಣನೆಯಲಿ,
ಬರೆವ ಕವಿಯೆ! ಸುಮ್ಮನಾಗು!
ಸಾಕು ನಿನ್ನ ಸರಸ ಮಿಥ್ಯ!
ಕಾಣದಿಹುದೆ ವಿರಸ ಸತ್ಯ?
ಹಿಂದಿನಂತೆ ಸಕಲವಿಹುದು!
ದೇವರೊಲುಮೆ ಪೂರ್ಣವಿಹುದು.
ಇರುಳುಹಗಲ ಕೂಡು ಕಟ್ಟಿ
ಚಂದವಾಗಿ ಹೊಂದುತಿಹುದು.

ಸಂದರ್ಭಸೂಚನೆ: ಇದು ೧೯೪೫ರಲ್ಲಿ ರಚಿತವಾದ ಕೃತಿ. ಬಂಗಾಳದ ಭೀಕರ ಕ್ಷಾಮದ ಹಿನ್ನೆಲೆಯಲ್ಲಿ ಈ ಸ್ತ್ರೀಚಿತ್ರವನ್ನು ಕಲ್ಪಿಸಲಾಗಿದೆ.

ooo ooo

## ೪೨. ಊರ್ಮಿಳೆ

೧

ಜನಕನಂದಿನಿ ವಿದೇಹರಾಜಕುವರಿ
ಕುವರ ಲಕ್ಷ್ಮಣನ ಚರಣಕಮಲ ಸಾರಿ.
ನುಡಿದಳೂರ್ಮಿಳೆಯು ಕಂಠ ತುಂಬಿ ಬಂದು
ಕಣ್ಣ ಹೂವುಗಳು ಬಾಷ್ಪಜಲದಿ ನೊಂದು:
“ಚರಣಕಮಲಗಳ ಕಾಂಬುದೆಂದು ನಾಥ?
ನಿಮ್ಮ ದೃಷ್ಟಿಸೌಭಾಗ್ಯವೆಂದು ನಾಥ?
ಮೀಸಲೊಲವು ಪಾರಣೆಯ ಪಡೆವುದೆಂದು?
ಮುಗ್ಧ ಶೈಶವಕೆ ಹರಕೆ ನುಡಿವುದೆಂದು?
ಸುಡುವ ವಿರಹದಲಿ ಬಾಳ ಕಳೆವುದೆಂತು?

ಕಣ್ಣ ಬೆಳಕು ಮರೆಯಾಗಿ ಇರುಳು ಬಂತು. ೧೦
ನಿಮ್ಮ ಧ್ಯಾನದಲಿ ಬದುಕು ಲೀನವಾಗಿ
ನಿಮ್ಮ ಚಿಂತೆಯೇ ಚಿತ್ತದಾಟವಾಗಿ
ಕಾಯುತಿರುವೆ ಜೀವನವೆ ಹೆಪ್ಪುಗಟ್ಟಿ
ನೋಯುತಿರುವೆ ದುಃಖಾಬ್ಧಿ ತಳವ ಮುಟ್ಟಿ.
ವಿಪಿನವಾಸದಲಿ ಮರೆವು ಮೂಡದಿರಲಿ
ಅನ್ಯರೂಪ ಕಂಗಳನು ಕಾಡದಿರಲಿ.
ಹೋಗು ನಾಥ ಇದು ಒಂದೆ ಬಾಳ್ವ ಗಳಿಗೆ
ಕಾಲವಿನ್ನು ಮರೆಯಾಯ್ತು ಕರಣಗಳಿಗೆ.
ನೋಟದೊಂದು ಕಾಣಿಕೆಯನಿತ್ತು ಹೋಗು
ಉಸಿರಿನೊಂದು ಚೇತನೆಯನೂದಿ ಸಾಗು. ೨೦
ಕಣ್ಣ ಹನಿಯ ನೆನಪೊಂದು ಬಿಟ್ಟು ತೆರಳು.
ಬದುಕಿಗಾಗಿ ನೆವವೊಂದ ಕೊಟ್ಟು ತೆರಳು.
ಮರಣ ಬಂದರೂ ಆಸೆ ಉಳಿಯಬಹುದು
ಮೈಯು ಅಡಗಿದರೂ ಜೀವ ಸುಳಿಯಬಹುದು
ಈ ನಿರೀಕ್ಷೆ ನಿನ್ನನ್ನೆ ಅರಸಿ ಬಹುದು
ಬಿಂಬಕಾಗಿ ಪ್ರತಿಬಿಂಬ ಕಾಯುತಿಹುದು."
ಮಾತು ಕೇಳಿ ಲಕ್ಷ್ಮಣನು ಮೂಕನಾಗಿ
ಉಕ್ಕಿ ಬಂದ ಶೋಕಕ್ಕೆ ಮನವ ನೀಗಿ
ತೆರಳಲಿಲ್ಲ ಸರಿ ಮರಳಲಿಲ್ಲ ಕುವರ
ನೋಡಲಿಲ್ಲ ಮಾತಾಡಲಿಲ್ಲ ಕುವರ ೩೦
ಅಣ್ಣನಡಿಯನನುಸರಿಸಿ ಸಾಗಬೇಕು
ರಾಮಚರಣರಜವಾಗಿ ಬದುಕಬೇಕು.
ಒಲವಿನತ್ತಿಗೆಗೆ ನೆರಳು ನೀಡಬೇಕು
ದೂರ ಕಾಡಿನಲಿ ದಾರಿ ತೆರೆಯಬೇಕು.
ಪ್ರಥಮಪ್ರಣಯವಿರಹದಲಿ ಸಫಲವಾಗಿ
ಮಧುರ ರೂಪ ಕನಸಿನಲಿ ಸತ್ಯವಾಗಿ
ಮದುವೆ ಸುಖವು ಪೀಡಿಸುವ ಸ್ಮೃತಿಯ ಲೀಲೆ
ಕಣ್ಣುಗಳಿಗೆ ಮರೆಯಾಗಲಿಹಳು ಬಾಲೆ.
ಸುಡುವ ಉಸಿರು ನುಡಿದಿತ್ತು ಮನದ ಮಾತು
ಮೌನ-ಶಯ್ಯೆಗೊರಗಿತ್ತು ತುಂಬ ಸೋತು. ೪೦
ಮುರಿದು ಬಿದ್ದಿರಲು ಉಸಿರಿನೊಂದು ಸೇತು

ಭಯದಿ ನಡುಗಿ ತಿರುಗಿದವು ಮನದಿ ಮಾತು.
ಬಂತು ಅಗಲಿಕೆಯ ಕ್ಷಣವು ಪ್ರಾಣಕಾಂತೆ
ಕಣ್ಣುಗೊಂಬೆ ಸರಿದಾಡಿ ನುಡಿದವಂತೆ
ಬಾಲೆ ಮಣಿದಳಿಬ್ಬನಿಯು ಎರಗುವಂತೆ
ದೀಪದೊಂದು ಕುಡಿ ನೆಲದೊಳೊರಗುವಂತೆ.
ಅಡಿಯ ನೇವರಿಸೆ ಕುರುಳು ತೊಯ್ದು ಕದಪು
ತಲೆಯ ಸಾವರಿಸೆ ಕೈಗೆ ಬಂತು ನೆನಪು.
ನಡೆದ ಲಕ್ಷ್ಮಣನು ಮನದ ತೊಡಕ ಬಿಡಿಸಿ
ಬಿಲ್ಲ ತುದಿಯ ಸೆರಗಿಂದ ದೂರ ಸರಿಸಿ ೩೦
ದೇಹ ಸಾಗಿ ಉಳಿದಿತ್ತು ಜೀವವಿಲ್ಲಿ
ಬಿದ್ದ ದುಃಖಕೆದುರಾಗಿ ಶೋಕದಲ್ಲಿ
ಜನಕನಂದಿನಿ ವಿದೇಹರಾಜಕುವರಿ
ಬಿದ್ದಳೂರ್ಮಿಳೆಯು ವಿರಹವಿಪಿನ ಸಾರಿ.

ಮಲಗಿದಲ್ಲೆ ಮಲಗಿದ್ದಳು
ಬಾಳಿನರಿವ ತೊಲಗಿದ್ದಳು.
ದೂರ ನಡೆದ ಪ್ರಿಯನ ಚರಣ-
ದಲ್ಲೆ ಲೀನವಾಯ್ತು ಹರಣ.
ಮೂರ್ಛೆಯೆನೊ ಮರಣವೇನೊ !
ಹರಿಯದಂಥ ಮೋಹವೇನೊ ! ೬೦
ಕಲ್ಲಾಗಿದೆ ಈ ಜೀವನ
ಕಾಲನಿಗಿದೆ ದಿಗ್ಬಂಧನ.
ಜೀವದ ಹನಿ ಹರಳಾಯಿತು.
ನಿಂತು ಬಿಟ್ಟ ಹೊಳೆಯಾಯಿತು.
ನೋವದೊಂದೆ ಉರಿಯುತಿಹುದು
ನೆನಪು ತುಪ್ಪ ಸುರಿಯುತಿಹುದು.
ನೆಲದ ಬಸಿರು ಕುದಿಯುವಂತೆ
ಕುದಿಕುದಿದರು ಒಡೆಯದಂತೆ,
ಸಿಡಿಲ ಹೊತ್ತ ಮೋಡದಂತೆ,
ಕಡಲ ಕಡೆವ ವಡವನಂತೆ, ೭೦
ಒಂದೆ ನೋವು ಕುದಿಯುತಿಹುದು
ಜೀವ ಸೆರೆಗೆ ಮಿಡುಕುತಿಹುದು,

ಕೈಯು ಗಾಯ ಸವರುವಂತೆ,
ಭಯಕೆ ಮೈಯು ಬೆವರುವಂತೆ
ನೆನಪು ನೋವ ಮುಟ್ಟುತಿಹುದು
ಹೊಸತು ನೋವು ಹುಟ್ಟುತಿಹುದು.
ಸುತ್ತು ಬಾಳು ಚಲಿಸುತಲಿದೆ
ನಗರವೆಲ್ಲ ಗಜಬಜಿಸಿದೆ
ದುಃಖ ಸುಖವು ಬಿದ್ದೆದ್ದಿವೆ
ರಾಗದ್ವೇಷ ತಳಮಳಿಸಿವೆ. ೮೦
ಹುಟ್ಟಿ, ಬೆಳೆದು, ಸತ್ತ ಬಾಳು
ಬಿತ್ತಿ, ಬೆಳೆದು, ತಿಂದ ಕಾಳು.
ಇದ್ದರೇನು, ಸತ್ತರೇನು ?
ಕಾಡಿನಲ್ಲಿ ಅತ್ತರೇನು ?
ಲಜ್ಜೆಗೆಟ್ಟು ನಡೆಯೆ ಬಾಳು,
ತಡೆಯಬಲ್ಲದಾವ ತೋಳು
ತೆರೆಯಾಗಿದೆ ಜನನ ಮರಣ
ಸೀರ್ಪಣಿಯೊಲು ಕುದಿವ ಹರಣ !
ದನಿಯ ಕಡಲು ಮೊರೆಯುತಿಹುದು
ಬಾನೊಡಲನೆ ತಿವಿಯುತಿಹುದು. ೯೦
ಮಧ್ಯದಲ್ಲಿ ಮೌನದ್ವೀಪ
ಬಂಧಿಸಿಹುದು ವಿರಹಶಾಪ
ಕಣ್ದೆರೆದರು ನೋಟವಿಲ್ಲ
ಉಸಿರೆಳೆದರು ಜೀವವಿಲ್ಲ.
ನೆಲದ ಜೊತೆಗೆ ನೆಲವೆ ಆಗಿ
ಗಾಳಿಯಲ್ಲೆ ಉಸಿರು ಕರಗಿ
ಜೀವದಲ್ಲೆ ಜೀವ ಬೆರೆತು
ಅರಿವೆ ಇಲ್ಲ ಅದರ ಹೊರತು.
ಮರೆತಿರುವದು ಸುತ್ತು ಜಗವ
ಮೂಡಿಯಳಿವ ದಿನಮಾನವ. ೧೦೦
ಕಾಯ್ವುದೊಂದೆ ಮನಕೆ ಧ್ಯಾನ
ದುಃಖವೊಂದೆ ಅದಕೆ ತ್ರಾಣ
ಜನ್ಮಾಂತರ ಪ್ರಣಯಕಾಗಿ
ಆಚೆದಡದ ನೋಟಕಾಗಿ

ಕಾಯುತಿಹುದು ಜೀವವಿಲ್ಲಿ
ಮರಗಟ್ಟಿದೆ ಭಾವವಲ್ಲಿ.
ಮಲಗಿದಲ್ಲೆ ಮಲಗಿದ್ದಳು.
ಬಾಳಿನರಿವ ತೊಲಗಿದ್ದಳು.

ಸರಯೂತೀರದ ಗಾಳಿಯು ಬೀಸಿತು
ಬನದೊಳಗರಳಿದ ಹೂಗಳ ಮೂಸಿತು. ೧೧೦
ವಸಂತ ಪ್ರಾಣಾನಿಲವನ್ನೂದಿದ
ಜಡತೆಯಿದಿರು ಮಧುವಾಕ್ಯವನೋದಿದ.
ಸುಗ್ಗಿಯ ಜೊತೆಯೊಳೆ ಬಂದಿತು ಯೌವನ
ಬಣ್ಣಗೊಂಡು ಮದ್ದವೇರಲು ಜೀವನ
ಅನಂಗ ಬಂದನು ಕಾಣಿಕೆಯೊಡನೆ
ಪ್ರಾಯವ ಸಿಂಗರಗೊಳಿಸಲೆನೆ.
ಹಣಿಕಿಕ್ಕಿದ ವಾತಾಯನದೊಳಗೆ
ಮಿಂಚಿನ ನೋಟವ ಬೀರಿದ ಕೆಳಗೆ.
ಚಲುವಿನ ಪ್ರತಿಮೆಯ ನಿರ್ಮಿಸುತಿರಲು
ಮೂಡಿದ ಚಲುವಿಗೆ ಮನ ಸೋತಿರಲು ೧೨೦
ಮರೆತನೆ ಬ್ರಹ್ಮನು ಪ್ರಾಣವನೆರೆಯಲು ?
ಮಾಸುವ ಭಯವೋ ಬಾಳಲಿ ಬೆರೆಯಲು ?
ಭಗ್ನಮನೋರಥ ತಿರುಗಿದ ಕಾಮ
ಬೆರಗಲಿ ತಿರುಗಿತು ಚಲುವಿನ ಸ್ತೋಮ !
ಋತುಮಾನದ ಚಿರಪಯಣವು ಸಾಗಿತು.
ಚಂದ್ರನ ವ್ಯಕ್ತೈ ತುಂಬಿತು ಸೊರಗಿತು.
ಮೇಘಗಳೆರೆದವು ಅಮೃತದ ವರ್ಷ
ಅರಳಿತು ಅಡಗಿತು ಶರದದ ಹರ್ಷ
ಬಿಸಿಲುರಿಯುತಲಿರೆ, ಮಳೆ ಬೀಳುತಲಿರೆ
ಬಾಯ್‌ಬಿಟ್ಟಿತು, ಬಾಯ್‌ಮುಚ್ಚಿತು ಧರೆ ೧೩೦
ಹಗಲು ಇರುಳುಗಳ ರೆಕ್ಕೆಯು ಕೆಳಗೆ
ಬೆಳಕು ನೆರಳುಗಳ ಲೀಲೆಯು ತೊಳಗೆ
ಮುಗಿಲಿನ ಮಾರೀಚಗೆ ಹಲ ಬಣ್ಣ
ತೆರೆದು ಮೋಹಿಸಿದ ಸಾವಿರ ಕಣ್ಣ.

ಕಾಲನ ಹೊಳೆ ಧುಮ್ಮಿಕ್ಕಲು ಕರೆಗೆ
ಘೂರ್ಮಿಸುತಿಹ ಹೆಬ್ಬಾವಿನ ತೆರೆಗೆ
ತಲೆ ಕೆಳಗಾಯಿತು ಜಗದೊಳು ಬಾಳು
ಕೇಳುವರಿಲ್ಲವೊ ನೌಕೆಯ ಗೋಳು.
ಮಾಂತ್ರಿಕ ಕಾಲನು ಮುಂದಡಿಯಿಡಲು
ಇಗೊ ಬದಲಾಗಿದೆ ಜೀವನದೊಡಲು
ಆದರು ಬೆಳೆಯದೊ ಕಾಲನ ಪಾದ ೧೪೦
ಜಗಕಾದಳು ಊರ್ಮಿಳೆ ಅಪವಾದ.
ಊರ್ಮಿಳೆಯ ಹೃದಯವು ವಿರಹದಿ ತಪಿಸಿದೆ
ಕಾಲನ ಕಾಲಿಗೆ ದಿಗ್ಬಂಧನವಿದೆ.
ಪ್ರಿಯನ ನೋಟವದು ಚಲಿಸದೆ ಇಹುದು
ಚರಣದ ಸ್ಪರ್ಶವು ಚಿರವಾಗಿರುವದು.
ಸ್ತಂಭಿತವಾಗಿದೆ ದರ್ಶನದಾಕ್ಷಣ
ಚಿತ್ತದಿ ಕೆತ್ತಿದೆ ಪ್ರೀತಿಯ ವೀಕ್ಷಣ.
ಕೆನ್ನೆಯ ಕಂಬನಿ ಆರದೆ ಉಳಿದಿದೆ
ಕದಪಿನ ಪುಲಕವು ಒಲವನು ತಳೆದಿದೆ. ೧೫೦
ದೇಹವು ಜಡವಾಗುತ ನೆಲಕುಳಿದಿರೆ
ನಲ್ಲನ ಚರಣದ ಧೂಳಿಯೊಳುರುಳಿರೆ
ಜೀವಕೆ ದೂರದ ಕಣ್ದೆರೆದಿತ್ತು
ನಲ್ಲನ ಪಯಣವನನುಸರಿಸಿತ್ತು.
ನೋಟಕೆ ತೆರೆದಿರೆ ಆಚೆಯ ತೀರ
ಕುಳಿತಲ್ಲಿಯೆ ಜೀವಕೆ ಅಭಿಸಾರ.
ಒಳಗೇ ಮರುಗಿತು ಒಳಗೇ ನೊಂದಿತು
ಒಳಗೊಳಗೇ ಕಡುದುಃಖದಿ ಬೆಂದಿತು.
ಎಂದಿಗೆ ಮುಗಿವುದೊ ವಿರಹದ ಶಾಪ ?
ಕೊನೆಯ ಕಾಂಬುದೆ ಮನದನುತಾಪ ? ೧೬೦
ಸರಯೂತೀರದ ಗಾಳಿಯು ಬೀಸಿತು
ಜೀವದ ಬಿಸಿಯುಸಿರಿಗೆ ತಂಪೆಸೆಯಿತು.

೪

ಬೆಳಕಾರಿತು; ಸಂಜೆ-ನೆರಳು
ನೀಳವಾಗಿ, ಆಳವಾಗಿ

ಗಾಢವಾದ ಕತ್ತಲೆಯನು
ಸುತ್ತು ಮುತ್ತು ಮೇಲೆ ಕೆಳಗೆ
ಹರಡಿ, ವಿಸ್ಮಯದಾ ಮಾಯೆ
ಬೀಸಿ, ಇರುಳು ಬಂತು ಇರುಳು.
ಸೆರೆಗೆ ಸಿಕ್ಕ ಅಪ್ಸರೆಯರ
ತಂಡವೆನಲು ನೂರು ತಾರೆ, ೧೭೦
ನಡುಗಿ, ನಡುಗಿ, ಮಿಣುಕಿ, ಮಿಣುಕಿ,
ಹೊಳೆಯುತಿರಲು, ಇರುಳು ಬಂತು.
ನೆರಳಿನೊಡನೆ ಪಾರಿವಾಳ
ನೆಲೆಮನೆಯನು ಏರಿ ಬಂದು,
ಬೆಸೆದ ರೆಕ್ಕೆಗಳಲಿ ಹುದುಗಿ
ಒಲವು ಕಾವಿನಲ್ಲಿ ಕರಗಿ
ಗುಟುಕರಿಸಿವೆ ಗುಟುಕನಿತ್ತು.
ದುಃಖ ಕಡೆದ ಪ್ರತಿಮೆಯನ್ನು
ನೋಡಲೆಂದು, ಅಗಲಿಕೆಯೊಳು
ತಪಿಸುತಿರುವ ಬಾಲೆಯನ್ನು ೧೮೦
ಕಾಣಲೆಂದು, ತವಿಸಲೆಂದು
ಇರುಳು ಬಂತು, ಇಳಿದು ಬಂತು.
ಬೆಳಕಿಗಾಗಿ ಹುಡುಕಿ ಹುಡುಕಿ,
ಕಾಣದಿರಲು ಮಿಡುಕಿ ನೊಂದು,
ನಭದೊಡಲಿಗೆ ಮೈಯ ಚಾಚಿ
ಬಿದ್ದುಕೊಂಡ ರಾತ್ರಿಯಂತೆ
ಮಲಗಿರುವಳು ಮುಗ್ಧಕನ್ನೆ
ಜಡವೆ ದೇಹವಾದ ತೆರದೆ.
ನೋಡುತಿರಲು ಇರುಳು ಹಾಗೆ,
ಮಣ್ಣದೇಹ ಬೆಚ್ಚಿಬಿತ್ತು; ೧೯೦
ಮುಡಿಗೆದರಿತು, ಅಲಕ ಚಲಿಸಿ,
ಮೊಗ ನೋಡಿತು ಸುತ್ತಮುತ್ತು.
ಮೊಗ್ಗೆಯಾಗಿ ತಪದೊಳಿದ್ದು
ಯುಗದ ಕೊನೆಗೆ ಅರಳಲಿರುವ
ತಾವರೆ ದಳ ಬಿಚ್ಚುವಂತೆ
ಕಣ್ಣರಳಿಸಿ, ನೋಟ ಚೆಲ್ಲಿ,

ನೋಡುತಿರಲು ಸೂಸುತಿತ್ತು
ಕಣ್ಣೀರಿನ ಧಾರೆ ಧಾರೆ.
ಬೆವರು ತುಳುಕಿ, ರೋಮಹರ್ಷ
ಹೊರೆಯೇರುತ, ಅಧರ ನಡುಗಿ ೨೦೦
ಬೇರು ಹಿಡಿದು ಅಲುಗಿಸಿದೊಲು
ಮೈಗೆ ಮೈಯೆ ನಡುಗುತಿಹುದು!
ಕಂಡ ನೋಟವಾವುದಿಹುದೊ ?
ಜನ್ಮಾಂತರ ಸ್ಮೃತಿಯ ಮಿಂಚು,
ಭವಿತವ್ಯದ ಮೊದಲ ಸಂಚು
ಕಾಣಬಂತೆ? ಯುಗದ ತಪಕೆ
ಭಂಗ ತರುವ, ಮೌನ ಜಲವ
ಕಲಕಿಬಿಡುವ ಭಯುವಾವುದು?
ಜೀವ ತನ್ನ ಕಣ್ಣು ತೆರೆದು
ದೆಸೆದೆಸೆಗಳ ತನ್ನ ಹವಣಿ- ೨೧೦
ನಲ್ಲಿ ಅಳಿಯುತಿಹುದು. ಯಾವ
ನೋಟ ದೂರದಿಂದ ಸೆಳೆದು,
ಜೀವನವನೆ ಕಬಳಿಸುತ್ತ
ನೆನೆಯುತಿಹುದೊ, ಕರೆಯುತಿಹುದೊ!

೫

ಇಲ್ಲಿ ಊರ್ಮಿಳೆಯ ಕಣ್ಣು ನೋಡುತಿರಲು
ಪತಿಯ ಬಾಳ್ಗೆ ಬಿದ್ದಿತ್ತು ಸಾವಿನುರುಲು.
ಮೇಘನಾದ ಎಸೆದಿರುವ ಮೃತ್ಯುಬಾಣ
ಸೆಳೆಯುತಿಹವು ಲಕ್ಷ್ಮಣನ ಮುಗ್ಧಪ್ರಾಣ.
ಕೋಲ ಮೊನೆಗೆ ಏರಿಳಿಯುತಿತ್ತು ಜೀವ
ಕೊನೆಯ ಉಸಿರು ಕರೆಯುತ್ತಲಿತ್ತು ಸಾವ. ೨೨೦
ಕೈಗೆ ಕೀಲಿಸಿದ ಕದಪು, ಸುಡುವ ವದನ,
ಕುದಿವ ಕಂಬನಿಯ ಸುರಿಯುತಿರುವ ನಯನ.
ವೀರ ರಾಘವನ ವಜ್ರಹೃದಯ ಕರಗಿ
ಮಾತು ಹೊಮ್ಮಿದವು ಕುದಿವ ಶೋಕವಾಗಿ.
"ತೊರೆಯಲಾರೆ ಸೌಮಿತ್ರಿ ತೊರೆಯಲಾರೆ.
ತಮ್ಮ ನೀನಿರದೆ ಬಾಳ ಕಳೆಯಲಾರೆ

ತಂದೆಯಾಜ್ಞೆ, ವನವಾಸ, ನನ್ನ ವಿರಹ,
ಸೇತುಬಂಧ, ದಾನವರ ಜೊತೆಗೆ ಕಲಹ,
ನನ್ನ ಕಾರಣಕೆ ನಿನಗೆ ಮರಣವೇಕೆ?
ನಾನು ಬದುಕಲೆನೆ ನೀನು ಸಾಯಬೇಕೆ?" ೨೩೦
ರಾಮ ನಿಗ್ರಹಿಸಿ ಮನದ ಶೋಕವನ್ನು
ಸಂಜೀವನಿಯನು ತರಲು ಹನುಮನನು,
ಕಳಿಸಿ ಕಾಯುತಿಹ ಗಳಿಗೆ ಯುಗಗಳಾಗಿ
ತಮ್ಮನಗಲಿಕೆಯ ಶೋಕದುರಿಯು ತಾಗಿ.
ಸುತ್ತ ಕಪಿಯ ಪರಿವಾರ ನೋಡುತಿಹುದು
ಆಂಜನೇಯನಾ ಬರವ ಕಾಯುತಿಹುದು.
ಇಲ್ಲಿ ಊರ್ಮಿಳೆಯ ಜೀವ ನೋಡುತಿತ್ತು
ಪತಿಯ ಜೀವವನು ಬಿಡದೆ ಕಾಯುತಿತ್ತು.
"ವಿರಹದಡವಿಯಲಿ ತೊರೆಯಬೇಡ ನಾಥ
ಕೊಟ್ಟ ವಚನವನು ಮರೆಯಬೇಡ ನಾಥ ೨೪೦
ವಿರಹ ಸಾಗರವ ದಾಟಬೇಕು ದೇವ
ನೊಂದ ಜೀವವನು ತಣಿಸಬೇಕು ದೇವ.
ಕಾಯುತಿಹೆನು ಈ ದೀರ್ಘಕಾಲವೆಲ್ಲ
ಒಂದೆ ಇರುಳು ಹದಿನಾಲ್ಕು ವರ್ಷವೆಲ್ಲ.
ರೂಪವಿಲ್ಲ ಕಂಗಳಿಗೆ ನಿನ್ನ ಬಿಟ್ಟು
ನಿನ್ನ ದರ್ಶನವೆ ಕಣ್ಣು ತುಂಬಿ ಬಿಟ್ಟು.
ಈ ದೀರ್ಘತಪಕೆ ಮರಣಫಲವೆ ಹೇಳು?
ತಪದ ಜೀವಿತಕೆ ಅರ್ಥವೇನು ಹೇಳು?
ಹಗಲಿನಲ್ಲಿ ಬದುಕಿರುವ ಬಾಳ ನೆರಳು,
ಸೇರಬೇಕೆ ಅಡಿಯಿಡಲು ಸಾವಿನಿರುಳು?" ೨೫೦
ನೆನೆಯಲೂರ್ಮಿಳೆಯು ಹಾರಿ ಹನುಮ ಬಂದ.
ದ್ರೋಣಗಿರಿಯ ತಪ್ಪಲನೆ ಹೊತ್ತು ತಂದ.
ನೆನೆಯಲೂರ್ಮಿಳೆಯು ಪ್ರಾಣ ಮರಳಿ ಬಂತು
ಕುವರ ಲಕ್ಷ್ಮಣನ ಜೀವ ಅರಳಿ ಬಂತು.
ಗಾಯ ನೋಯುತಿರೆ ನರಳುತೆದ್ದ ಕುವರ
ರಾಮನಪ್ಪಿದನು ಸುರಿಸಿ ಕಣ್ಣನೀರ.
ಸತಿಯು ಅಡಗಿದಳು ಮತ್ತೆ ಮೌನದಲ್ಲಿ
ವಿರಹಮಂತ್ರವನು ಜಪಿಸಿ ಧ್ಯಾನದಲ್ಲಿ.

ತಪದ ಸೂಜಿಮೊನೆ ಮೇಲೆ ಒಲವು ನಿಂತು
ದೂರ ನಡೆದ ಬದುಕನ್ನು ಸಲಹುತಿತ್ತು. ೨೬೦
ಜನಕನಂದಿನಿ ವಿದೇಹರಾಜಕುವರಿ
ಮತ್ತೆ ಮಲಗಿದಳು ತಪದ ಗುಹೆಯ ಸಾರಿ
ಕುವರ ಲಕ್ಷ್ಮಣನ ನೆನಪು ಮೂಡಿ ಬಂತು
ವಿರಹತಪ್ತಜೀವವನು ಬದುಕಿಸಿತ್ತು.
ನೂರು ತಾರೆ ಹೊಳೆಯಿಸುತ ನೋಡಿತಿರುಳು
ಮಿಲನದಕ್ಷಯದ ಸುಖದ ಹರಕೆಯಿಡಲು. ೨೬೬

೦೦೦ ೦೦೦

## ೪೩. ನಮ್ಮ ಕೊನೆಯ ಶರಣು

ಡಾಕ್ಟರ ಜೋಸ ರಿಝ್ಯಾಲ (1861-1896) ಇವರು ಫಿಲಿಪಾಯಿನ ದ್ವೀಪದ ಸ್ವಾತಂತ್ರ್ಯಸಮರದಲ್ಲಿ 'ಹುತಾತ್ಮ'ರಾದರು. ಇವರನ್ನು ಗಲ್ಲೇರಿಸುವ ಮುನ್ನಾ ದಿನ, ಡಿಸೆಂಬರ ೨೯, ೧೮೯೬. "My Last Farewell" ಈ ಕವನ ಅವರು ಬರೆದರು. ಅವರ ಶತಸಾಂವತ್ಸರಿಕ ಉತ್ಸವ ೧೯೬೧ರಲ್ಲಿ ಆಗುವದಿದೆ. ಇದನ್ನು ಇಂಗ್ಲೀಷಿನಲ್ಲಿ ತರ್ಜುಮೆ ಮಾಡಿದವರು 'ನಿಕ್ ಟೊಕ್ವಿನ್' ಅವರು. ಮೂಲ ಕವನ ಸ್ಪಾನಿಶ್ ಭಾಷೆಯಲ್ಲಿದೆ. ಅದರ ಭಾವಾನುವಾದವನ್ನು ಲಾವಣಿ ಛಂದದ ಗತ್ತಿನಲ್ಲಿ ಮಾಡಿದ್ದಾಗಿದೆ.

— ಅಂಬಿಕಾತನಯದತ್ತ

ನಾಳೆ। ಬೆಳಿಗ್ಗೆ ಐತಿ ಮಹ ಮರಣಾ
ಶರ। ಣಂತಾವ ನಮ್ಮ ಪಂಚ ಹರಣಾ
ಹಸ। ನುಳದಾವ ನಮ್ಮಂತಃಕರಣಾ
ದೇವ। ದೇವನು ಮಾಡ್ಯಾನೊ ಕರುಣಾ
ನಾಳೆ। ಹೊತ್ತ-ಮೂಡ ಬಂದೈತಿ ಮರಣಾ. ॥ ಪಲ್ಲ ॥

ಶರಣು, ಶರಣೆಂಬೆ ನೆಚ್ಚಿನ ನಾಡಽ
ನೀ। ಸೂರ್ಯಾನ ಮೆಚ್ಚಿನಾಕಿ ನೋಡಽ
ಮೂಡಲ। ಕಡಲಾಗ ಮುತ್ತು ಹುಟ್ಟಿಧಾಂಗಽ
ಇಂದ್ರನ। ಬನಾನ ಕಡಕೊಂಡು ಬಿತ್ತ್ರೊ ಹೀಂಗಽ
ಇಂಥಾ। ನಾಡಿಗಾಗಿ ನಮ್ಮ ದೇಹಾ
      ಬೇಡಿದಾಗ ನೀಡಲಿಕ್ಕೆ
ನಿಂತೇವು। ಒಂಟಿಕಾಲ ಮ್ಯಾಗಽಽಽ
      ಉಳಿದಿ। ಲ್ಲೇನೇನು ಇನ್ನಿದರಾಸೀಽ
      ಏನೊ। ಆಗ್ಯೆತಿ ಒಂದಿಷ್ಟು ಬಾಸೀಽ
      ಆದ್ರೂ। ಕೊಟ್ಟೇವು ಪ್ಯೆ-ಹಡದಿ ಹಾಸಿಽ

ನಮ್ಮ ಹೊಸಾ ಹರೇದಾಗ
ಎಳೇತನಾ ಖರೇದಾಗ
ಮಿಂಚತಿತ್ತು ಬರೇದಾಗ
      ಉಕ್ಕುಕ್ಕಿ ಉತ್ಸಾಹ ಕಿರಣಾ
ಆವಾಗ। ಬರಬೇಕು ಇತ್ತಽ ಈ ಮರಣಾ
ಆಗ। ಕೊಡಬೇಕು ಇತ್ತಽ ತಾಯೀ ಚರಣಾ
      ಈಗಾದರೂ ಏನಾತು
      ಸಲ್ಲಿಸತೇವು ಕೊಟ್ಟ ಮಾತು
            ನಿಮ್ಮ ಒಳಿತಿಗಾಗಿ ಆತ ಸಾವು

ಶರ। ಣಂದೇವು ಅಂತಽ ನಿಮಗಽ ನಾವು
            ನಾಳೆ ಹೊತ್ತ ಮೂಡ ... ... ...

ವ್ಯೂಹಕ್ಕೆ ವ್ಯೂಹಾ ಹೂಡಿ
ಯುದ್ಧದ*ಸನ್ನಿ ಮೂಡಿ
      ಸಂಶಯ ಗಿಂಶಯ ಕಳೆದೂಽಽ
ವೀರ ಬಿಟ್ಟ ಗರಿ-ಬಾಣಾ
ತೂರತಾರ ತಮ್ಮ ಪ್ರಾಣಾ
      ದುಮ್ಮಾನ ದುಃಖಾನ ತೊಳದುಽಽ.

   ತಾವರಿಯಾ ತಂಪಿನ್ಯಾಗ
   ಕಣಗೀಲಿ ಕಂಪಿನ್ಯಾಗ
   ಮದುಗುಣಿಕಿಯ ಜಂಪಿನ್ಯಾಗ

ಎಲ್ಲಿ ಬಂದ್ರು ಏನು ನಮಗ ಮರಣಾ
ಶೂಲಾನ ನೆಟ್ಟಿರಲಿ
ಹಾಳ ಬಯಲ ಮೆಟ್ಟಿರಲಿ
ಯಮನವರ ನಿಟ್ಟಿರಲಿ
ಅಗ್ಗಿ ಹೊಕ್ಕು ಏರಿಸೇವು ದವನಾ
ಮನಿಗಾಗಿ, ನಾಡಿಗಾಗಿ
ಹ್ಯಾಂಗ ಸತ್ತರೇನು ನಾವು
ಎಲ್ಲಾನು ನಮಗ ಸರಿ ಸವನಾ
ನಾಳೆ ಹೊತ್ತ ಮೂಡ ...

ಪಂಚ ಪಂಚ ಉಷಃಕಾಲಾ
ಇಂಥಾ ಮೂರ್ತಾ ಬರಾಕಿಲ್ಲಾ
ಬಂತಣ್ಣಾ ಎಂಥಾದೀ ಹಗಲಾಽಽ
ಖುಲ್ಲಾ ಆಗ್ಯಾವ ಸ್ವರ್ಗದ ಬಾಗಿಲಾಽಽ
ಸೂರ್ಯನ ಜ್ಯೋತಿ ಝಗ್ ಅಂತಽ
ಬೆಳಗೋ ಸಂಪ ಹೊತ್ತಿನ್ಯಾಗ
ಬಂದೈತಿ ಪರಲೋಕ ಪಯಣಾಽ
ಕಾಳರಾತ್ರಿ ಕಪ್ಪಗಾಗಿ
ಸಪ್ಪಗಾಗಿ, ತೆಪ್ಪಗಾಗಿ
ಹಿಂದ ಬಿದ್ದ ಮುಂದ ಬಂತೊ ಹವನಾಽ
ಸುಣ್ಣಾ ಬಣ್ಣಾ ಮಾಡಬೇಕು
ತೋರಣಾ ಕಟ್ಟಿ ನೋಡಬೇಕು
ಮಾನವ್ಮಿ ದಸರೆಧಾಂಗ ಮನೀಽಽ
ಮುಂಜಾವಿನ ಕೆಂಜ ಬೆಳಕಿಗೆ
ಕೆಂಪು ಕಡಿಮೀ ಬಿದ್ದಿದ್ರ
ಥಳೀ ಹಾಕ್ರಿ ನಮ್ಮ ರಕ್ತದ ಹನೀಽಽ
ಜಳಕಾ ಮಾಡ್ರಿ
ಓಕಳಿಯಾಡ್ರಿ
ಆಸೀಮೀಸಿ ನೋಡಬ್ಯಾಡ್ರಿ
ಬಂದೈತಿ ನಮ್ಮ ಬಾಳಿಗ್ಗೊನೀಽಽ
ನಾಳೆ ಹೊತ್ತ ಮೂಡ .... .... ....

ಮಕವೀಸಿ ಒಡೆದಿರಲಿಲ್ಲಾ
ಆಗಽನ ನಮಗೆಲ್ಲಾ
ಬಿದ್ದಿತ್ತವ್ವಾ ತಾಯಿ ನಿನ್ನ ಕನಸುಽ
ಹರೇದಾಗಽ ಕೇಳಿಯೋದೇನೂ
ರಕ್ತದಾಗಽ ಹೊಕ್ಕಿ ನೀನು
ನೀನಽ ಆಗಿಬಿಟ್ಟಿ ನಮ್ಮ ಮನಸುಽ
ರತ್ನದ ಕಂಬಿಯಂಥಾ
ಜಗದಂಬಿ ಮೂಡಿ ಬಂದಿ
ಮೂಡಽಲ ಕಡಲಽ ಒಡಲಽ ಸೀಳಿಽಽ
ಕಣ್ಣಾಗ ಸುಖಾ ಉಕ್ಕಿ
ಹುಬ್ಬೇರಿಸಿ ನೀನು ನಕ್ಕಿ
ಹೊಕ್ಕಿತವ್ವಾ ನಮ್ಮೆಯ್ಯಾಗ ಗಾಳಿಽಽ
ದುಃಖಿಲ್ಲಾ ಸುಕ್ಕಿಲ್ಲಾ
ಕುಂದಿಲ್ಲಾ ಬಂದೆವ್ವಾ
ಗೌರವದಲೆ ಗೌರೀ ರೂಪಾ ತಾಳಿಽಽ
ನಾಳೆ ಹೊತ್ತ ಮೂಡ ... ...
ಏನು ಮಂತ್ರಾ ಹಾಕಿದೆವ್ವಾ
ನಮ್ಮಽ ಜೀವಕ್ಕ ನೀನು
ನಮ್ಮ ಜೀವಾ ಪ್ರಾಣಾ ನೀನಽ ಆದೀಽಽ
ಅಲಕ್ಕಂತ ಹಾರಿಕೊಂಡು
ಹೊತ್ತಿಕೊಂಡ ಕೊಂಡದಾಗ
ಹಿಡಿದೇವವ್ವಾ ನಿನ್ನ ಸ್ವರ್ಗದ ಹಾದೀಽಽ
ನಮ್ಮ ಸಾವಿನ್ಯಾಗ ನಿನಗಽ
ಬದುಕಾದ್ರು ಸಾಕು ನಮಗಽ
ಬಿದ್ದಿರ್ತೇವಿ ಹೊತ್ತುಕೊಂಡು ಗಗನಾಽಽಽ
ನಾಽವು ಬಿದ್ದರೇನಾತು
ನೀನು ಎದ್ದೀ ಅದೇ ಸಾಕು
ನೋಡತಿರಲಿ ನಿನ್ನ ನೀಲೀ ನಯನಾಽಽ
ತಾಯೀ, ನಿನ್ನ ತೊಡಿ ಮ್ಯಾಲೆ
ಜೋಗುಳಿಸಿದ ಹುಡೀ ಮ್ಯಾಲೆ
ಹಾಕಿರ್ತೇವಿ ಶಾಶ್ವತ ಶಯನಾಽಽ
ನಾಳೆ ಹೊತ್ತ ಮೂಡ ... ... ...

ನಮ್ಮ ಗೋರೀ ದಿನ್ನಿ ಮ್ಯಾಲೆ
ಎಂದಾರೆ ಒಂದ ದಿನಾ
ಎದ್ದು ಮೂಡಿತೊಂದು ಸಾದಾ ಹೂವುಽಽ.
ಕಸಾ ಕಡ್ಡೀ ತಲೀಮ್ಯಾಲೆ
ತೂಗ್ಯಾಽಡಿದರೂಽ ಸಾಕು
ತಿಳದೇಽವಿ ಪೂಜಿ ಅಂತ ನಾವುಽಽ
ಮುದ್ದಿಟ್ರೆ ಅದನ್ನಽ ನೀವು
ಮರತ್ಽ ಹೋದೀತು ಸಾವು
ಬಂದೀತಣ್ಣಾ ನಮಗ ಜೀವಾ ಮರಳಿಽಽ
ತಣ್ಣಗಾದ ಕಲ್ಲಿನೊಳಗೂ
ಹುಟ್ಟೀತು ಸಣ್ಣ ಕಂಪಾ
ಮಾರೀ ಸವರೀಧಾಂಗ ನಮಗ ಹೊರಳಿಽಽ
ನಿಮ್ಮ ಉಸಿರೀನುಸರೀನೊಳಗೂ
ಹೆಸರುಗೊಂಡು ಕರೆಧಾಂಗ
ನಿಮ್ಮ ಕರುಳೂ ಬಂದೀತು ಅರಳಿಽಽ:
ನಾಳೆ ಹೊತ್ತು ಮೂಡ ... ... ....

ಶಾಂತನಾಗಿ ಕಾಂತೀಯಿಂದ
ರಾತ್ರೀ ಚಂದ್ರಾಮರಾಯ
ಪಾಹರೀ ಮಾಡತಿರಲಿ ನಮ್ಮ ಮ್ಯಾಲಽಽ.
ಬೆಳಕೀನ ಕೆಚ್ಚಲಾಗಿ
ನಿಚ್ಚ ಮೂಡಲಾಗಿ ನಮಗ
ನಸುಕಿನ್ಯಾಕಿ ಕುಡಿಸತಿರಲಿ ಹಾಲಽಽ
ಮರಾಮರಾ ಮರಗತಿರಲಿ
ಮರಾ ಗಿಡಾ ಸೇರಿಕೊಂಡು
ಭರಾ ಭರಾ ಹರಿಯೋ ಗಾಳಿ ಕೂಡಾಽಽ
ಹಾರೊ ಹಕ್ಕಿ ಎರಗಿ ಸೋತು
ನಮ್ಮ ಶಿಲಬೀ ಮ್ಯಾಲ ಕೂತು
ಹೇಳತಿದ್ದ್ರಽ ಹೇಳಲೊಂದು ಹಾಡಾಽಽ
ಶಾಂತೀ ಸೋಬಾನೆ ಹೇಳಿ
ಸಮಾಧಾನಾ ಮಾಡತಿದ್ದ್ರ
ಬ್ಯಾಡೊ ಗೆಣೆಯಾ ಅದನ್ನ ತಡವಬ್ಯಾಡಾಽಽ
ನಾಳೆ ಹೊತ್ತು ಮೂಡ ... ... ...

ರವಿ ಸಾಕ್ಷಿಯಾಗಿ ನರೀ—
—ಮದಿವೀ ಆಗೊ ಹೊತ್ತಿನ್ಯಾಗ
ಮಳಿ ಉದ್ಧುರ್ಲಿ ಅಕ್ಕಿಕಾಳದತ್ತೀss
ಉಗೀ ಆಗಿ ಮಂಜ ಆಗಿ
ಮತ್ತ ಮ್ಯಾಲೆ ಏರಿ ಹೋಗಿ
ಸ್ವರ್ಗದ್ಬಾಗ ಹೇಳ್ಲಿ ನಮ್ಮ ಕಥೀss
ಅರ್ಧಾ ಆಟದಾಗ ಹೀಂಗ
ಕೈಬಿಟ್ಟು ಹೋದ ಹ್ಯಾಂಗ
ಅತ್ತರಳಲಿ ಗೆಳೆಯ್ಯಾ ಯಾಕ್ಷ್ನಾರೆss
ಸಂಜೀ ತಂಪು ಹೊತ್ತಿನ್ಯಾಗ
ನಮ್ಮನ್ನ ನೆನಿಸಿಕೊಂಡು
ಬೇಡಿಕೊಳ್ಳಲಿ ನಮ್ಮಗಾಗಿ ಬ್ಯಾರೆss
ನಮ್ಮ ನಾಡು, ನಮ್ಮ ಜನಾ
ನಮಗಾಗಿ ಬೇಡಿಕೊಳ್ಳಲಿ
ದೇವರೊಳಗ ಆಗ್ಲೋ ಹ್ಯಾಂಗ ಸ್ನೇಹss
[illegible]

ಅತ್ತ್ಯಾ ಬ್ಯಾಡಿಕೊಳ್ಳೀ
ಸತ್ತಾವ್ರನ್ನ ನೋಡಿಕೊಳ್ಳೀ
ಗತಿ ಇಲ್ದ ಸತ್ತಾರೆಷ್ಟೋ ಜನಾss
ತಡೀಲಾರ್ದೆ ತಡಕೊಂಡು
ಬಾಯಿ ಬಿಗಿ ಹಿಡಕೊಂಡು
ಸತ್ತವರಂತss ನೀಗೆತಾರೆ ಪ್ರಾಣಾss
ಹಡದ ಹೊಟ್ಟೀ ಕಿಚ್ಚು ಹೊತ್ತಿ
ಬಾಯಿ ಬಾಯಿ ಬಡಕ್ಕೋತಾರ
ಕಳಕೊಂಡು ಹೊಟ್ಟಿ ಸಂತಾನಾss
ರಂಡೀ ಮುಂಡೀ ಪರಾಧೀನಾ
ಪರದ್ರೋಹಿ ಮಕ್ಕಳು ಹೀನಾ
ತುರಂಗದ ನರಕದಾಗ ದೀನಾss
ನಾನಾ ರೀತಿ ನಾನಾ ಜನಾ
ಸಾಯ್ತಾರ ಸ್ವಾಧೀನಾ
ನಿಮ್ಮ ಮುಕ್ತಿಗಾದರೂ ಮಾಡ್ರಿ ಧ್ಯಾನಾss
ನಾಳೆ ಹೊತ್ತ ಮೂಡ

ಅಮಾಸಿ ಇರುಳು ಹೊತ್ತು
ಮಸಣದಾಗ ಯಾರಿಗ್ಗೊತ್ತು
ಸತ್ತವರ್ದ್ಹ ಸತ್ತವರ ಮ್ಯಾಲೆ ಗಸ್ತೀ॥
ಸ್ಮಶಾನಾ ಶಿವನ ಸ್ಥಾನಾ
ಗಹನಾ, ಗಹನಾ ಅಲ್ಲಿ ಧ್ಯಾನಾ
ಕೋಟಿ, ಕೋಟಿ ಭೂತ ಪ್ರೇತ ವಸ್ತೀ॥
ಏನಾರೇ ಧನಿ ಕೇಳಿ
ಏನಾರೇ ತಿಳೀಬ್ಯಾಡ್ರಿ
ದೇಶಭಕ್ತರದೆಲ್ಲ್ಯಾಹತೋ ಹನನಾ॥
ಅಲ್ಲಿ। ಇರಬಹುದು ದೆವ್ವಗಾಳಿ
ಬರಬಹುದು ಭದ್ರಕಾಳಿ
ಮಳಿಗಾಳಿ, ಛಳಿಗಾಳಿ ಝಣಣಾ॥
ದೇಶಭಕ್ತಿ। ಗಾನಾ ಏಕ ತಾನದಾಗ
ಗಗನದಾಗ
ನಡದಿರತೈತಿ ತೋಂ ತೋಂ ತನನಾ॥
ನೆನಸ್ತಿರತೈತಿ। ಜೀವಾಶಕ್ತಿ ಶಿವನಾ॥
ಕಟ್ಟತಿರತೈತಿ। ನಮ್ಮ ಭಾವಾ ಕವನಾ॥
ನಾಳೆ ಹೊತ್ತ ಮೂಡ ... ... ...

ಹೇಳಹ ಹೆಸರಿಲ್ಲದಾಗಿ
ಹೋದೀತು ಒಂದ ದಿನಾ
ನಮ್ಮ ಹುಗಿದ ಮಣ್ಣ ಗುಡ್ಡಿ ಸ್ಥಳಾ॥
ಶಿಲುಬೀಯ ಕಲ್ಲು ಕುರುಹು
ಅಲ್ಲೋ, ಇಲ್ಲೋ, ಎಲ್ಲೋ ಬಿದ್ದು
ಸಪಾಟು ಆದೀತೀ ನೆಲಾ॥
ಗುದ್ಲೀಲೆ ಹಡ್ಡಿ ತೆಗೆದು
ಸಲಕೀಲೆ ಸರಿ ಮಾಡಿ
ನೇಗಿಲ ಹೊಡೆದು ನೋಡಿ ಬಿಡ್ರಿ ರಣಾ॥
ಮಣ್ಣ ಆಗಿ, ಸುಣ್ಣ ಆಗಿ
ಬೂದಿ ಆಗಿ, ಭಸ್ಮ ಆಗಿ
ಹೋಗೋದೈತಿ ಎಲ್ಲಾ ಒಂದಿನಾ॥
ನಮ್ಮ ಮಣ್ಣ ಕಸಾ ಕೂಡ
ಹಸಾ ಆಗಿ ಹುಲ್ಲ ಬೆಳೆದು

ಸಸಿ-ಹಸಿ ಕಾಣಲಿ ತಾಯಿ ಕ್ಷಣಾ॥
ನಾಳೆ ಹೊತ್ತು ಮೂಡ

ಯಾರು ನಮ್ಮ ಅರತರೇನು
ಯಾರು ನಮ್ಮ ಮರತರೇನು
ನಾವು ಮರ್‍ಯಾಕಿಲ್ಲಾ ನಮ್ಮ ದೇಶಾ॥
ಇದೇ ಈ ಗಾಳಿವೊಳಗ
ಮುಗಿಲ ತುಂಬ ಧೂಳೀವೊಳಗ
ದಾರೀ ಉದ್ದಾ ತೊಟ್ಟು ಬ್ಯಾರೆ ವೇಷಾ॥
ಕಿನ್ನರರ್‍ಹಾಂಗ ಕಿನ್ನರಿ ಮಿಡಿದು
ಗಂಧರ್ವರ ಗತ್ತು ಹಿಡಿದು
ಕಿವಿ ತುಂಬತಿರ್ತೇವಿ ನಿಮ್ಮಾ ಜೋಡಿ॥
ಗಂಧಾ ತೂರಿ ಬೆಳಕ ತೂರಿ
ಬಣ್ಣಾ ತೂರಿ ಹರಾಹೂರಿ
ಗುಜ್ಜಾರಿ ಲಾವಣಿ ಕಟ್ಟಿ ತೋಡಿ॥
ನಂಬಿಗೀಯ ಪಲ್ಲಾ ಮಾಡಿ
ಜೀವದ ನುಡಿ ಜೋಡಿ
ಹಾಡತಿರ್ತೇವಿ ಹಗಲು ರಾತ್ರಿ ಕೂಡಿ॥
ನಾಳೆ ಹೊತ್ತು ಮೂಡ ... ... ...

ದೇವೀ ಅಂತ ನಾವು ನಿಮಗ
ಎಂದ॥ನ ಅಂದೇವಿ
ಅದ॥ ನಮ್ಮ ಕೊರಳಿಗಾತು ಹಗ್ಗಾ॥
ಫಿಲೀಪೀನಾ ! ನಾಡದೇವಿ !
ನಮ್ಮ ಕೊನಿ ಶರಣು ಕೇಳ॥
ಅದ॥ ನಮ್ಮ ಜೀವಾಳದ ಹಿಗ್ಗಾ॥
ಇದ್ದಿಲ್ಲಾ ಮನೀ ಮಾರು
ಮುಡುಪು ನಮ್ಮ ಚೂರು ಚಾರು
ಋಣಾನುಬಂಧ ಬ್ಯಾರೇ ಬಂಧಾ ಭಾವಾ॥
ನಂಬಿಗ್ಗೆ ಸಾವಿಲ್ಲದಲ್ಲಿ
ಗುಲಾಮರಿಗೆ ಬಾಳಿಲ್ಲದಲ್ಲಿ
ಕಾಟಕಾಯಿ ಕಟಕರಿಲ್ಲದ್ಮಠಾವಾ॥
ದೇವರಿದ್ದ ರಾಜ್ಯೇದಾಗ

ಹಳೆಗನ್ನಡ ಸಾಹಿತ್ಯದಲ್ಲಿ ನಾಟಕಗಳಿಲ್ಲದಿರುವದು ಸಾಹಿತ್ಯದ ಇತಿಹಾಸದ ದೃಷ್ಟಿಯಿಂದ ಇನ್ನೂ ಒಂದು ಸಮಸ್ಯೆಯಾಗಿಯೇ ಉಳಿದಿದೆ. ನಮ್ಮ ಪೂರ್ವಜರಿಗೆ ನಾಟಕ ಅಪರಿಚಿತವಾದ ರೂಪವೇನೂ ಅಲ್ಲ. ಸಂಸ್ಕೃತ ಕಾವ್ಯವನ್ನು ಕೆಲವು ಸಾರೆ ಅಕ್ಷರಶಃ ಅನುಸರಿಸಿದ ಕವಿಗಳಿಗೆ ನಾಟಕದ ಕಡೆಗೆ ಲಕ್ಷ್ಯಹೋಗಲಿಲ್ಲವಾದರೂ ಹೇಗೆ ? ಇನ್ನು ಕೆಲವು ಕವಿಗಳು ನಾಟಕಗಳನ್ನು ಬರೆದಿರಬೇಕೆಂದೂ, ಅವು ಕಳೆದುಹೋಗಿರಬೇಕೆಂದೂ ಕೆಲವರ ಊಹೆ. ಆದರೆ ಇದೇನೂ ಅಂಥ ಸುಖಕರವಾದ ಮಾತಲ್ಲ. "ಕೃತಾನುಕರಣಮೆ ನಾಟ್ಯಂ" ಎಂದು ನಾಟಕದ ಜೀವಾಳವನ್ನೆ ಒಂದು ಸೂತ್ರದಲ್ಲಿ ಉಸಿರಿದ ಪಂಪ ನಾಟಕವನ್ನೇಕೆ ಬರೆಯಲಿಲ್ಲವೊ ! ರನ್ನನ ಸಂವಿಧಾನರಚನೆಯಲ್ಲಿ, ರಾಘವಾಂಕನ ಸಂವಾದಕುಶಲತೆಯಲ್ಲಿ, ಕುಮಾರವ್ಯಾಸನ ಜೀವಂತ ಪಾತ್ರಸೃಷ್ಟಿಯಲ್ಲಿ ಕಂಡುಬರುವ ನಾಟಕೀಯತೆ ಒಮ್ಮೊಮ್ಮೆ ಎಷ್ಟೋ ಮಹತ್ವದ ನಾಟಕಗಳಲ್ಲಿಯೇ ಕಂಡುಬರಲಾರದು. ಸಂಸ್ಕೃತದ ಅವನತಿಕಾಲದ ಸಾಹಿತ್ಯದ ಪ್ರಭಾವದಲ್ಲಿ ಬೆಳೆದು ಬಂದ ನಮ್ಮ ಕವಿಗಳು, ಬಾಣ, ದಂಡಿ ಮೊದಲಾದವರ ವಾಗ್ವೈಭವದೊಡನೆ ಸ್ಪರ್ಧಿಸುವದಷ್ಟನ್ನೇ ಕಲಿತರೆಂದು ಕಾಣುತ್ತದೆ. ಅರಮನೆಗಳಲ್ಲಿ ಬಹುಶಃ ಸಂಸ್ಕೃತನಾಟಕಗಳ ಪ್ರಯೋಗವೇ ನಡೆಯುತ್ತಿರಬೇಕು. ಸಾಮಾನ್ಯರಿಗೆ ಜಾನಪದ-ರಂಗಭೂಮಿ ಸಾಕಾಗಿತ್ತು. ಹೀಗಾಗಿ ಹಳೆಗನ್ನಡ ಸಾಹಿತ್ಯದಲ್ಲಿ ನಾಟಕ ಒಂದು ರೂಪವಾಗಿ ಕಾಣಿಸಿಕೊಳ್ಳಲೇ ಇಲ್ಲ.

ನಾಟಕಗಳಿಲ್ಲದಿದ್ದರೂ ರಂಗಭೂಮಿ ಇದ್ದೇ ಇತ್ತು. ಮೈಸೂರೊಡೆಯರ ಅರಮನೆಯ ರಂಗಭೂಮಿಗೆಂದೇ ಸಿಂಗರಾರ್ಯನ 'ಮಿತ್ರವಿಂದಾ ಗೋವಿಂದ' ಹುಟ್ಟಿತು. ಕಥೆ ಸಂಸ್ಕೃತ "ರತ್ನಾವಲಿ" ನಾಟಕದ್ದು; ಭಾಷೆ ಹಳೆಗನ್ನಡ. ಕೃತಕವಾದರೂ ಲಲಿತಶೃಂಗಾರದ, ನರ್ಮವಿನೋದದ ಈ ನಾಟಕ ಅರಮನೆಯ ರಂಗಭೂಮಿಗೆ ಕಳೆ ತಂದಿರಬೇಕು. ಮುಂದೆ ಮೈಸೂರಿನ ಅರಮನೆಗೆ ಒಂದು ಪಾರ್ಸೀ ಕಂಪನಿ ಭೆಟ್ಟಿ ಕೊಟ್ಟಂದಿನಿಂದ ಕನ್ನಡ ನಾಟಕಗಳ ಚಟುವಟಿಕೆಗಳಿಗೆ ಒಂದು ಹುರುಪು ಬಂದಿತು. ಅರಮನೆಯ ವಿದ್ವಾಂಸರು ಇಂಗ್ಲಿಶ್ ಹಾಗೂ ಸಂಸ್ಕೃತಗಳಿಂದ ನಾಟಕಗಳನ್ನು ಕನ್ನಡಕ್ಕೆ ಪರಿವರ್ತಿಸಿದರು. ವಿದ್ವಾಂಸರ ಅಭಿಜಾತ ರುಚಿ ಶೇಕ್ಸಪಿಯರ್, ಕಾಳಿದಾಸ, ಭವಭೂತಿ ಮೊದಲಾದ ಶ್ರೇಷ್ಠ ನಾಟಕಕಾರರ ಕಡೆಗೆ ತಿರುಗಿತು. ಇವರ ಬರವಣಿಗೆಯ ರೀತಿಯೂ ಅಂಥ ನಾಟಕಕಾರರ ಅನುಕರಣೆಯೇ ಆಗಿತ್ತು. ಸಂಭಾಷಣೆಗಳಿಗೆ ಪ್ರೌಢವಾದ ಗದ್ಯ ಹಾಗೂ ಪದ್ಯಗಳಿಗೆ

ವೃತ್ತಗಳನ್ನು ಬಳಸಿಕೊಂಡರು. ಈ ಮಾದರಿಯ ನಾಟಕ ಅಕ್ಷರಶಃ ಚಂಪೂ-ಕಾವ್ಯವಾಗಿತ್ತು. ಇವು ಕೇವಲ ಪ್ರಯೋಗಕ್ಕಾಗಿಯೇ ಬರೆದವುಗಳಾದ್ದರಿಂದ, ಹೊಸ ದೃಷ್ಟಿಯಾಗಲಿ, ದರ್ಶನವಾಗಲಿ ಇವುಗಳಲ್ಲಿ ಕಂಡುಬರುವದಿಲ್ಲ. ಈ ಕೃತಿಗಳನ್ನು ಸಾಹಿತ್ಯದ ಪ್ರಯೋಗಗಳೆಂದೇ ನೋಡಬೇಕೇ ಹೊರತು, ಅವುಗಳಲ್ಲಿ ಜೀವನದೃಷ್ಟಿಯನ್ನು ಅರಸಲಾಗದು. ಬಸವಪ್ಪಶಾಸ್ತ್ರಿಗಳ 'ಕನ್ನಡ ಶಾಕುಂತಲ' ತನ್ನ ಓಜಸ್ಸು ತೇಜಸ್ಸುಗಳಿಂದ ನವೀನಸೃಷ್ಟಿಯಾಗಿದೆ. ಕಾಳಿದಾಸನ ಪ್ರತಿಭಾ-ವಿಲಾಸಕ್ಕೆ ಕೂದಲೆಳೆಯಷ್ಟು ಕಡಿಮೆತನ ಬಂದಿಲ್ಲ. ಆದರೆ ಅವರೇ ಬರೆದ ಶೇಕ್ಸಪಿಯರನ 'ಆಥೆಲ್ಲೋ'ದ ಕನ್ನಡ ರೂಪವಾದ 'ಶೂರಸೇನಚರಿತ್ರೆ' ಅಷ್ಟೊಂದು ಯಶಸ್ವಿಯಾಗಿಲ್ಲ. ಇದಕ್ಕೆ ಕಾರಣವೆಂದರೆ ಶೇಕ್ಸಪಿಯರನ ನಾಟ್ಯ-ತಂತ್ರ ಕನ್ನಡದಲ್ಲಿ ಬಂದಿಲ್ಲ. ಅಭಿವ್ಯಕ್ತಿ ವಸ್ತುವಿನ ಮೈದೊಗಲಿನಂತಿರುವಾಗ ಅದನ್ನು ಬೇರ್ಪಡಿಸುವದು ಅಸಾಧ್ಯ. ಮೇಲಾಗಿ ಪಾಶ್ಚಾತ್ಯ ನಾಟಕಗಳ ಪ್ರಭಾವ ಇನ್ನೂ ಮುಂದೆ ಬರಬೇಕಾಗಿತ್ತು. ಆದರೆ ಒಂದು ಮಾತು ಮಾತ್ರ ನಿಜ. ಈ ಭಾಷಾಂತರಯುಗದ ನಾಟಕಗಳು ವರದಾಚಾರ್ಯರಂಥ ಪ್ರತಿಭಾಶಾಲಿಗಳಾದ ನಟರ ಮೂಲಕ ಅತ್ಯಂತ ಲೋಕಪ್ರಿಯತೆಯನ್ನು ಪಡೆದು, ಸ್ವತಂತ್ರ ನಾಟಕ-ಗಳನ್ನು ಸೃಷ್ಟಿಸಲು ಅವಕಾಶ ಒದಗಿಸಿದವು. ಯಾರಾದರೂ ಹೇಗೋ ಚಟುವಟಿಕೆ ಯನ್ನು ಪ್ರಾರಂಭಿಸಬೇಕಾಗಿತ್ತು. ಒಮ್ಮೆ ಪ್ರಾರಂಭಗೊಂಡ ಸೃಷ್ಟಿಕ್ರಮ ತನ್ನ ನೈಜವಾದ ದಾರಿಯನ್ನು ತಾನೇ ಕಂಡುಕೊಳ್ಳುತ್ತದೆ.

ಉತ್ತರಕರ್ನಾಟಕದಲ್ಲಿಯೂ: ನಾಟಕಗಳ ಬರವಣಿಗೆ ಚುರುಕಿನಿಂದಲೇ ಸಾಗಿತ್ತು. ಶಾಂತಕವಿಗಳು ಯಕ್ಷಗಾನ-ಬಯಲಾಟಗಳ ತಂತ್ರವನ್ನುಪಯೋಗಿಸಿ, ಮಾರ್ಪಡಿಸಿ ನಾಟಕಗಳನ್ನು ಬರೆದರು. ಆದರೆ ಶಾಂತಕವಿಗಳ ಮೂಲ ಉದ್ದೇಶ ಕನ್ನಡದ ಪ್ರಚಾರವಾಗಿತ್ತಾದ್ದರಿಂದ ಈ ನಾಟಕಗಳು ಸ್ವಯಂಪೂರ್ಣವಾಗಿ ಬರಲಿಲ್ಲ. ಕನ್ನಡದಲ್ಲಿ ನಾಟಕಗಳನ್ನು ಬರೆಯುವದು, ಅವುಗಳನ್ನು ಆಡಿಸಿ, ಲೋಕಪ್ರಿಯ-ವಾಗಿಸುವದು ಇದಿಷ್ಟೇ ಅವರ ಧ್ಯೇಯವಾಗಿತ್ತು. ಗದುಗಿನ ಹತ್ತಿರದ ಹೊಂಬಳ ದಲ್ಲಿ ಅವರು ಶಿಕ್ಷಕರೆಂದು ಕೆಲಸ ಮಾಡುತ್ತಿದ್ದಾಗ, ಪ್ರತಿ ಶನಿವಾರ ಸಂಜೆಗೆ ತಪ್ಪದೆ, ಎಮ್ಮೆಯ ಮೇಲೆ ಕುಳಿತು ಗದುಗಿಗೆ ಬಂದು ನಾಟಕದ ರಂಗತಾಲೀಮನ್ನು ನಡೆಸುತ್ತಿದ್ದರಂತೆ. ಇಂಥ ಮಹನೀಯರ ಅದಮ್ಯ ಉತ್ಸಾಹವೇ ಕನ್ನಡ ನಾಟಕ-ಗಳಿಗೆ ಗಟ್ಟಿಯಾದ ತಳಹದಿಯನ್ನು ಹಾಕಿಕೊಟ್ಟಿತು. ಚೂರಮರಿ ಶೇಷಗಿರಿ-ರಾಯರು ಬರೆದ 'ಕನ್ನಡ ಶಾಕುಂತಲ' ಮಾತ್ರ ಅನೇಕ ದೃಷ್ಟಿಗಳಿಂದ ಗಮನಾರ್ಹವಾಗಿದೆ. ಸಂಭಾಷಣೆಗೆ ಸುಲಭವಾದ ಗದ್ಯವನ್ನಲ್ಲದೆ, ಅಲ್ಲಲ್ಲಿ ಹೃದ್ಯ ವಾದ ದೇಸಿ-ನುಡಿಯನ್ನೂ ಮೊಟ್ಟಮೊದಲಿಗೆ 'ಶಾಕುಂತಲ'ದಂಥ ನಾಟಕಗಳಲ್ಲಿ ಉಪಯೋಗಿಸುವದು ಆಗಿನ ಕಾಲಕ್ಕಂತೂ ಸಾಹಸದ ಮಾತಾಗಿತ್ತು. ಇದ-ರಲ್ಲಿಯ ಕೆಲ ಅಮುಖ್ಯ ಪಾತ್ರಗಳು ಗಡಿನಾಡಿನ ದೇಸಿಯನ್ನು ಉಪಯೋಗಿಸುತ್ತವೆ. ವರ್ಣನಾತ್ಮಕ ಭಾಗಗಳನ್ನು ಅಲ್ಲಲ್ಲಿ ಹಿಗ್ಗಿಸಲಾಗಿದೆ. ಚೂರಮರಿಯವರ ಸೌಂದರ್ಯದೃಷ್ಟಿ ಹಾಗೂ ರಸಿಕತೆಗಳನ್ನು ಅಲ್ಲಿ ಕಾಣಬಹುದಾಗಿದೆ. ಮೇಲಾಗಿ ಈ ನಾಟಕದಲ್ಲಿಯ ಗೀತಗಳ ವಿಷಯವಾಗಿಯೇ ಎಷ್ಟೋ ಮಾತುಗಳನ್ನು ಹೇಳ-

ಬಹುದಾಗಿದೆ. ಸಾಮಾನ್ಯವಾಗಿ ನಾಟ್ಯಗೀತಗಳೆಲ್ಲ ಸಂಗೀತದ ಬಲೆಯಲ್ಲಿ ಸಿಕ್ಕಿ ತಮ್ಮ ಸಾಹಿತ್ಯಿಕ ಸತ್ವವನ್ನು ಕಳೆದುಕೊಂಡಿರುತ್ತವೆ. 'ಶಾಕುಂತಲ' ದಲ್ಲಿಯ 'ಮುನಿಗಳ ಮಗಳಲ್ಲ ತಿಳಿಯೊ,' 'ಪದವ ರಚಿಸುತಿಹಳೊ,' 'ಇಳಿಯಲಿಲ್ಲವೋ ರೂಪಾ। ಇಳಿಯಲಿಲ್ಲವೋ' ಮುಂತಾದ ಮನೋಜ್ಞವಾದ ಹಾಡುಗಳು ಕನ್ನಡದ ಗೇಯಕಾವ್ಯಕ್ಕೆ ಅಪೂರ್ವ ಕಾಣಿಕೆಗಳಾಗಿವೆ. ಅವುಗಳ ಶುದ್ಧ ಕನ್ನಡ ಲಯ, ಹೃದ್ಯತೆ, ಮಾರ್ಮಿಕವಾದ ಶೈಲಿಗಳು ಇನ್ನೂ ಆದರ್ಶಪ್ರಾಯವಾಗಿವೆ. ಇದೇ ದಾರಿಯನ್ನು ನಮ್ಮ ಕಂಪನಿ-ನಾಟಕಗಳು ಅನುಸರಿಸಿದ್ದರೆ ಕನ್ನಡದಲ್ಲಿ ಗೀತಗಳಿಗೆ ಏನೂ ಕೊರತೆಯಾಗುತ್ತಿರಲಿಲ್ಲ. ಇದೂ ಅಲ್ಲದೆ ಚೂರಮರಿಯವರು ನಾಟಕದ ಸಂವಿಧಾನದಲ್ಲಿಯೂ ಉಚಿತ ಮಾರ್ಪಾಡುಗಳನ್ನುಂಟುಮಾಡಿದ್ದಾರೆ. ಇದರಿಂದಾಗಿ ಮೂಲ ನಾಟಕದ ಬಂಧ ಸಡಿಲಾಗಿದ್ದರೂ, ಅನುವಾದದಲ್ಲಿ ಕನ್ನಡದ ನವೀನ ಉತ್ಸಾಹ ಮಾತ್ರ ಕಾಣುತ್ತಿದೆ. ಮೂಲ ನಾಟಕಕ್ಕಿಂತ ಅನುವಾದದ ಗಾತ್ರ ದೊಡ್ಡದು. ಕತೆ ಮಂದಗಮನದಿಂದ ಅನೇಕ ವಿಲಾಸಗಳಲ್ಲಿ ಸಾಗುತ್ತದೆ.

ಚೂರಮರಿಯವರ ಸ್ಫೂರ್ತಿಯ ನೆರಳಿನಲ್ಲಿಯೇ ಮುದುವೀಡಕರ ಕೃಷ್ಣ-ರಾಯರು 'ಪ್ರೇಮಭಂಗ'ವನ್ನು ಬರೆದರು. ಆದರೆ ಇಲ್ಲಿಯೂ ಕಲಾತ್ಮಕತೆಗಿಂತ ಕನ್ನಡದ ವಿಷಯವಾಗಿರುವ ಕಳಕಳಿಯೇ ಮುಖ್ಯವಾದದ್ದು. ಇದೇ ಗುಂಪಿನಲ್ಲಿ ಕೆರೂರ ವಾಸುದೇವಾಚಾರ್ಯರ ಹೆಸರನ್ನೂ ಹೇಳಬಹುದಾಗಿದೆ. ಅವರ 'ಸುರತ ನಗರದ ಶ್ರೇಷ್ಠಿ' ಹಾಗೂ 'ವಸಂತಯಾಮಿನಿಸ್ವಪ್ನಚಮತ್ಕಾರ'ಗಳು ಶೇಕ್ಸ-ಪಿಯರನ ಅನುವಾದಗಳಾಗಿವೆ. 'ನಲದಮಯಂತಿ' ಒಂದು ಸ್ವತಂತ್ರವಾದ ಪೌರಾಣಿಕನಾಟಕ. 'ಪತಿವಶೀಕರಣ' ವೆನ್ನುವದು ಗೋಲ್ಡಸ್ಮಿಥನ ನಾಟಕದ ಅನುವಾದವಾಗಿದ್ದರೂ, ಐತಿಹಾಸಿಕವಾಗಿ ಅದರ ಸ್ಥಾನ ಮಹತ್ವದ್ದಾಗಿದೆ. ಚೂರ-ಮರಿಯವರಂತೆ ಕೆರೂರರವರೂ ಸಂಭಾಷಣೆಗೆ ದೇಸಿನುಡಿಯನ್ನೇ ಬಳಸಿಕೊಂಡರು. ಶೇಕ್ಸಪಿಯರನ ಅನುವಾದಗಳಲ್ಲಿ ಕೂಡ ಕಂಡುಬರುವ ಈ ಸ್ವಾತಂತ್ರ್ಯ ಅಷ್ಟು ಯೋಗ್ಯವಾಗಿ ಕಾಣದಿದ್ದರೂ, ಅದನ್ನು ಮರೆತು ಓದಿದಾಗ ನಾಟಕಗಳು ರಂಜಿಸುತ್ತವೆ. 'ಪತಿವಶೀಕರಣ' ರೂಪಾಂತರವಾಗಿರುವದರಿಂದ ಈ ತೊಡಕು ಅಲ್ಲಿ ಹುಟ್ಟುವದೇ ಇಲ್ಲ. ಮಾರ್ಮಿಕವಾದ ಚತುರ ಸಂಭಾಷಣೆ ಕೆರೂರರವರ ನಾಟಕ-ಶೈಲಿಯ ವೈಶಿಷ್ಟ್ಯವಾಗಿದ್ದು, ಅದೇ ಪರಂಪರೆ ಮುಂದೆ ಶ್ರೀರಂಗರಂಥ ನಾಟಕಕಾರರಿಗೆ ದಾರಿಯಾಯಿತು. ಅನುವಾದವನ್ನೂ ಮೀರಿದ ಸ್ವತಂತ್ರ ಪ್ರತಿಭೆಯೊಂದು ವಾಸುದೇವಾಚಾರ್ಯರ ನಾಟಕಗಳಲ್ಲಿ ಪ್ರಮುಖವಾಗಿ ಕಾಣುತ್ತದೆ. ವೃತ್ತ ಪತ್ರಿಕಾ ವ್ಯವಸಾಯ, ಹಾಗೂ ಉಳಿದ ಚಟುವಟಿಕೆಗಳಿಲ್ಲದಿದ್ದರೆ ಕೆರೂರರವರು ಸ್ವಯಂಪೂರ್ಣವಾದ ನಾಟಕಗಳನ್ನು ಬರೆಯಬಹುದಾಗಿತ್ತೆಂದು ತೋರುತ್ತದೆ.

ನಮ್ಮ ನಾಟಕ-ಕಂಪನಿಗಳು ಈ ಕಾಲದಿಂದಲೂ ನಾಟಕಗಳನ್ನು ಒಂದಾದ ಮೇಲೊಂದರಂತೆ ಪ್ರಯೋಗಿಸುತ್ತಲೇ ಇವೆ. ಸಂಘಟನೆಯ ಅಭಾವ, ಜನರ ಅಭಿರುಚಿ, ನಾಟಕಕಾರರ ಕೊರತೆ, ಕಂಪನಿಯ ಅನೇಕ ಕಷ್ಟನಷ್ಟಗಳು ಇವು-ಗಳಿಂದಾಗಿ ನಮ್ಮ ನಾಟಕ-ಕಂಪನಿಗಳು ಉಜ್ವಲವಾದ ಸಂಪ್ರದಾಯವನ್ನು ನಿರ್ಮಿ-ಸಲು ಅಸಮರ್ಥವಾದವು. ವರದಾಚಾರ್ಯರ ಕಂಪನಿ ಅನೇಕ ಅವಸ್ಥಾಂತರ-

ಗಳನ್ನು ಪಡೆಯಿತೆಂಬುದನ್ನು ತಮ್ಮ ಜೀವಮಾನದಲ್ಲಿ ಕಂಡ ಜನರಿದ್ದಾರೆ. ಅದೇ ಗತಿ ಉತ್ತರಕರ್ನಾಟಕದ ಕಂಪನಿಗಳಿಗೂ ಬಂದಿತೆಂಬುದನ್ನು ಬೇರೆ ಹೇಳುವ ಅವಶ್ಯಕತೆಯಿಲ್ಲ. ನಮ್ಮ ಪ್ರೇಕ್ಷಕರ ಅಭಿರುಚಿಯೂ ಮನೋರಂಜನೆಯ ಮಟ್ಟಿಗೆ ಮಾತ್ರ ನಿಂತಿತೇ ಹೊರತು, ಅದು ಸಾಮಾಜಿಕ ಸಂಸ್ಕೃತಿಯ ಅಂಗವಾಗಿ ಬೆಳೆಯ-ಲಿಲ್ಲ. ಇನ್ನೂ ಒಂದು ಮಹತ್ವದ ಅಡಚಣೆಯೆಂದರೆ ಶ್ರೇಷ್ಠ ನಟರ ಕೊರತೆ. ಮೈಸೂರಿನಲ್ಲಿ ಕೂಡ ವರದಾಚಾರ್ಯರ ಕಾಲ ಮುಗಿದು ಹೋದ ಮೇಲೆ ಅವರಷ್ಟು ಪ್ರತಿಭೆಯುಳ್ಳ ನಟರಾರೂ ಮುಂದೆ ಬರಲಿಲ್ಲ. ಉತ್ತರಕರ್ನಾಟಕದ ರಂಗಭೂಮಿ ಮರಾಠಿ ಕಂಪನಿಗಳ ದಾಳಿಗೆ ತುತ್ತಾಯಿತು. ಇಷ್ಟಾದರೂ ನಾಟಕ ಕಂಪನಿಗಳ ಪ್ರಯತ್ನ ಅವ್ಯಾಹತವಾಗಿ ಸಾಗಿದ್ದು ಅಭಿನಂದನೀಯವಾಗಿದೆ. ಅವುಗಳ ಅದ್ಭುತ ರಮ್ಯವಾದ ಇತಿಹಾಸವನ್ನು ಬರೆಯುವವರೊಬ್ಬರು ಹುಟ್ಟಬೇಕಾಗಿದೆ. ಜನರ ಅಭಿರುಚಿಯ ಮೂಲಕವಾಗಿಯೇ ಕಂಪನಿ-ನಾಟಕಗಳಲ್ಲಿ ಕೀಳು ದರ್ಜೆಯ-ಹಾಸ್ಯ, ಅದ್ಭುತದ ಆವಿಷ್ಕಾರ, ಸೀನ್ ಸೀನರಿಗಳ ವೈಭವ, ಲಘುವಾದ ಸಂಗೀತ, ವೇಷಭೂಷಣಗಳು ಅನಿವಾರ್ಯವಾದವು. ಸವಣೂರ ವಾಮನರಾಯರಂಥವರು ಮರಾಠಿ ನಾಟಕಗಳನ್ನು ರಂಗದ ಮೇಲೆ ಕೂಡ ಅನುವಾದಮಾಡಿದರು. ಆದರೆ ಇಂಥಲ್ಲಿಯೂ ಸ್ತುತ್ಯ ಪ್ರಯತ್ನಗಳಾಗದೆ ಇಲ್ಲ. 'ಉಷಾಹರಣ', 'ಶಾಕುಂತಲ', 'ಶ್ರೀರಾಮಪಾದುಕಾಪಟ್ಟಾಭಿಷೇಕ'ದಂಥ ನಾಟಕಗಳು ಕಂಪನಿ ಸಂಪ್ರದಾಯದ ಶ್ರೇಷ್ಠ ಪ್ರತಿನಿಧಿಗಳಾಗಿವೆ. ಅಲ್ಲಲ್ಲಿ ಸಾಹಿತ್ಯಿಕ ಪ್ರಯತ್ನಗಳೂ ಆಗಿವೆ. ಗರೂಡ ಸದಾಶಿವರಾಯರು ಪೌರಾಣಿಕ ಕತೆಗಳಿಗೆ ನವೀನದೃಷ್ಟಿಯ ಒಪ್ಪ ಹಾಕಿದರು; 'ರಾಯರ ಸೊಸೆ', 'ಸಂಸಾರನೌಕಾ'ದಂಥ ಸಾಮಾಜಿಕ-ನಾಟಕಗಳು ಲೋಕ ಪ್ರಿಯವಾದವು; ಕಂದಗಲ್ಲರು ಸರಳರಗಳೆಯನ್ನು ರಂಗದ ಮೇಲೆ ತಂದರು. ಅವರ 'ಚಿತ್ರಾಂಗದಾ' 'ಕುವೆಂಪು'ರವರ ಕಾವ್ಯವನ್ನು ಬಹುಮಟ್ಟಿಗೆ ಅನುಸರಿಸಿದ್ದರೂ, ಅಂಥ ಬರವಣಿಗೆಯ ರೀತಿಯನ್ನು ಪ್ರಚಾರಗೊಳಿಸುವ ಉತ್ತಮ ಸಾಧನವಾಗಿದೆ.

ಆದರೆ ಇನ್ನೂ ಕಂಪನಿ-ನಾಟಕಗಳ ಉದ್ಧಾರವಾಗದಿರುವದು ಶೋಚನೀಯ ವಾದ ಮಾತಾಗಿದೆ. ಆರ್ಥಿಕ ತಾಪತ್ರಯಗಳು, ಸಾಮಾಜಿಕ ಮನ್ನಣೆಯಿಲ್ಲ-ದಿರುವದು, ನಟರ ವಿಕ್ಷಿಪ್ತತೆ ಇವೆಲ್ಲ ಕಂಪನಿಗಳಿಗೆ ಶಾಪದಂತೆ ಅಂಟಿಕೊಂಡಿವೆ. ಸಾಹಿತ್ಯಿಕ ನಾಟಕಕಾರರು ಇನ್ನುಮೇಲಾದರೂ ಕಂಪನಿಗಳ ಕಡೆಗೆ ನೋಡ ಬೇಕಾದದ್ದು ಅವಶ್ಯವಾಗಿದೆ. ಅಮೆಚ್ಯೂರ ಹಾಗೂ ಕಂಪನಿಗಳಲ್ಲಿರುವ ಭೇದ ಹಾಗೂ ವೈಮನಸ್ಯ ತೊಲಗಬೇಕಾಗಿದೆ. ಸುಶಿಕ್ಷಿತತೆಗಿಂತ ಸಂಸ್ಕೃತಿ, ಉಪಕಾರ-ಬುದ್ಧಿಗಿಂತ ಪ್ರಾಮಾಣಿಕತೆ ಇವು ಕಂಪನಿ-ನಾಟಕಗಳಿಗೆ ಹೆಚ್ಚಾಗಿ ಬೇಕಾಗಿವೆ. ಅಷ್ಟು ಬಂದರೆ ಈಗಿರುವ ಕೀಳು ಪರಿಸ್ಥಿತಿ ಕೆಲಮಟ್ಟಿಗಾದರೂ ಸುಧಾರಿಸೀತು. ಇಂಥ ನಿರಾಶೆಯ ಪರಿಸ್ಥಿತಿಯಲ್ಲೂ, ಮಹಮ್ಮದ ಪೀರ, ಹಂದಿಗನೂರು ಸಿದ್ಧ-ರಾಮಪ್ಪ, ಸವಣೂರ ವಾಮನರಾಯರು, ನಾಗೇಂದ್ರರಾಯರು, ಬಸವರಾಜ ಮನ್ಸೂರರಂಥ ಶ್ರೇಷ್ಠ ನಟರ ಅವ್ಯಾಹತ ಪ್ರಯತ್ನಗಳ ಮೂಲಕವಾಗಿಯೇ ನಮ್ಮ ಕಂಪನಿಗಳು ಇನ್ನೂ ಜೀವ ಹಿಡಿದುಕೊಂಡಿವೆ. ಹಾಗೆ ನೋಡಿದರೆ ಕಂಪನಿಗಳಿಗೇನೂ ಕೊರತೆಯಿಲ್ಲ. ಪ್ರತಿಹಳ್ಳಿಯಲ್ಲೂ ಐದಾರು ಕಂಪನಿಗಳು ಹುಟ್ಟಿ ಸಾಯುತ್ತವೆ.

ಆದರೆ ಸಂಪ್ರದಾಯವೊಂದು ನಿರ್ಮಾಣವಾಗಿಲ್ಲ. ಏನೇಯಾದರೂ ಕಂಪನಿಗಳು ನೋಡ ಲಿಕ್ಕಾದರೂ ದೊರೆಯುತ್ತವಲ್ಲ ಎಂಬುದೊಂದು ಸಮಾಧಾನವಿದೆ. ಇಲ್ಲದಿದ್ದರೆ ರಂಗದ ಬೆಳಕು ಎಂದೋ ಆರಿಹೋಗಿ ನಾಟಕ ಅಮೆಚ್ಯೂರ ರಂಗಭೂಮಿಯ ಬೆಳುದಿಂಗಳನ್ನೇ ಆಶ್ರಯಿಸಬೇಕಾಗುತ್ತಿತ್ತು. ಕೇವಲ ಕಲೆಯ ಹುಚ್ಚಿಗಾಗಿಯೇ ಬದುಕುವ ಜನರು ಮುಂದೆ ಬಂದು ನಮ್ಮ ಕಂಪನಿಗಳಿಗೆ ಬದುಕುವ ದಾರಿಯನ್ನು ತೋರಿಸಬೇಕಾಗಿದೆ. ನಾಟಕ ವ್ಯವಸಾಯವಾದರೂ ಕಲಾತ್ಮಕತೆಯನ್ನು ಕಳೆದು ಕೊಳ್ಳಲಾರದೆಂದು ಸಿದ್ಧಗೊಳಿಸಬೇಕಾಗಿದೆ.

## ಸಾಮಾಜಿಕತೆಯ ಅರಿವು

ನಾಟಕಗಳಲ್ಲಿ ವಾಸ್ತವತೆ ತಡವಾಗಿಯೇ ಬಂದಿತು. ಕನ್ನಡದಲ್ಲಿ ಸಾಮಾಜಿಕ ನಾಟಕ ಮೊಟ್ಟಮೊದಲಿಗೆ ಕಾರವಾರದಿಂದ ಬಂದಿತೆಂಬುದು ಇತ್ತೀಚೆಗೆ ಸಂಶೋಧನೆ ಯಾಗಿದೆ. 'ಇಗ್ಗಪ್ಪ ಹೆಗ್ಗಡೆ ಪ್ರಹಸನ' ಎಂಬ ನಾಟಕ ತಂತ್ರ, ವಸ್ತು, ಭಾಷೆಗಳ ದೃಷ್ಟಿಯಿಂದ ಮಹತ್ವವನ್ನು ಪಡೆದಿದ್ದರೂ, ಅದರ ಪ್ರಯೋಗವಾಗದ್ದ ರಿಂದ ಅದು ಜನತೆಯ ಮೇಲೆ ತನ್ನ ಪ್ರಭಾವವನ್ನು ಬೀರಲಿಲ್ಲ. ಅದರಲ್ಲಿರುವ ವಿಷಮ ವಿವಾಹದ ಸಮಸ್ಯೆಗಿಂತ, ಅದರ ಸಾಮಾಜಿಕತೆಯ ಅರಿವು, ಶಕ್ತಿಯುತವಾದ ಹವ್ಯ ಕರ ಬಳಕೆ-ನುಡಿ ಈಗ ಹೆಚ್ಚು ಮಹತ್ವದವಾಗಿ ಕಾಣುತ್ತವೆ. ಇಂಥ ನಾಟಕಗಳು ಬೇರೆ ಪ್ರಾಂತದಲ್ಲಾಗಿದ್ದರೆ ಲೋಕಪ್ರಿಯವಾಗುತ್ತಿದ್ದವು. ಆದರೆ ಕರ್ನಾಟಕದ ಪ್ರೇಕ್ಷಕರ ಸಾಮಾನ್ಯ ಅನಾಸ್ಥೆಯ ಮೂಲಕ ಈ ನಾಟಕ ಮೂಲೆಗುಂಪಾಯಿತು. ಮರಾಠಿಯಲ್ಲಿ 'ಶಾರದಾ' ಹಾಗೂ 'ಏಕಚಪ್ಯಾಲಾ'ದಂಥ ಸಾಮಾಜಿಕ ನಾಟಕ ಗಳು ಇಡೀ ಪ್ರಾಂತದ ಅಭಿರುಚಿಯ ಮಟ್ಟವನ್ನೇ ಇನ್ನೂ ಎತ್ತರವಾಗಿಸಿದವು. ಕನ್ನಡ ರಂಗಭೂಮಿಗೆ ಅಂಥ ಸೇವೆಯನ್ನು ಮಾಡುವ ಸುಯೋಗವೇ ಒದಗಿಬರ ಲಿಲ್ಲ. ಹುಯಿಲಗೋಳ ನಾರಾಯಣರಾಯರ 'ಶಿಕ್ಷಣಸಂಭ್ರಮ' ಹಾಗೂ 'ಸ್ತ್ರೀ-ಧರ್ಮರಹಸ್ಯ'ಗಳು ಸತತಪ್ರಯೋಗದಿಂದ ಜನಮನವನ್ನು ಸೂರೆಗೊಂಡರೂ, ಅಖಿಲ ಕರ್ನಾಟಕದಲ್ಲಿ ವ್ಯಾಪ್ತಿಯನ್ನು ಪಡೆಯಲಿಲ್ಲ. ಈ ನಾಟಕಗಳು ಸುಧಾರಣೆಯ ಹುಚ್ಚುತನ, ಹಾಗೂ ಕೆಡುಕುಗಳನ್ನು ಚೇಷ್ಟೆಮಾಡುವ ವಿನೋದ-ರೂಪಕಗಳಾ ಗಿವೆ. ಆದರೆ ಇವುಗಳಲ್ಲಿಯ ವಿರೋಧಾಭಾಸದಲ್ಲಿ ಹೆಚ್ಚು ಆಳ ಕಂಡುಬರುವದಿಲ್ಲ. ವಿಚಾರದ ಬೆನ್ನೆಲುಬು ಗಟ್ಟಿಯಾಗಿಲ್ಲದ ಮೂಲಕ ನಾಟಕ ಕೇವಲ ಪ್ರಹಸನವಾಗಿ ಬಿಟ್ಟಿದೆ. ಪಾತ್ರಗಳ ವೈವಿಧ್ಯ ಹಾಗೂ ವಿನೋದಪ್ರಿಯತೆಗಳು ಮಾತ್ರ ಈ ಕೃತಿಗಳ ವೈಶಿಷ್ಟ್ಯಗಳಾಗಿವೆ. ಆದರೆ ತಂತ್ರ ಮಾತ್ರ ಇನ್ನೂ ಸಂಸ್ಕೃತ ನಾಟಕಗಳದೇ ಇದೆ. ನಾಟಕದ ದರ್ಶನ ಬದಲಾಗದೆ ಅದರ ರೂಪವೂ ಬದಲಾಗಲಾರದು. ಈ ನಾಟಕ ಗಳ ವಸ್ತು ಸಾಮಾಜಿಕವಾಗಿದ್ದರೂ ಅದರ ಅರ್ಥಪೂರ್ಣತೆ ಕಣ್ಣಿಗೆ ಕಾಣುವಷ್ಟು ಸ್ಪಷ್ಟವಾಗಿ ಗೋಚರವಾಗಿಲ್ಲ. ಇದಕ್ಕೆ ಅವರ ೧೯೩೦ರಲ್ಲಿ ಪ್ರಕಟವಾದ 'ಪತಿ ತೋದ್ಧಾರ'ವೇ ಸಾಕ್ಷಿಯಾಗಿದೆ. ಜಾತೀಯತೆಯನ್ನೇ ಮೂಲಸಮಸ್ಯೆಯನ್ನಾಗಿಟ್ಟು ಕೊಂಡು ನಾಟಕವನ್ನು ರಚಿಸಲಾಗಿದೆ. ಆದರೆ ಸಮಸ್ಯೆಯ ಬೆಳವಣಿಗೆ ಹಾಗೂ

ಪರಿಹಾರಗಳೆಲ್ಲ ನಾಟಕಕಾರರ ಬುದ್ಧಿವಂತಿಕೆಯ ಫಲಗಳಾಗಿ ಬಂದಿವೆ. ಅವುಗಳಲ್ಲಿ ಮಾನವೀಯ ಅಂತಃಕರಣದ ಸ್ವೈಜವಾದ ಮಿಡಿತ ಕೇಳಬರುವದಿಲ್ಲ. ನಾಟಕ ಪ್ರಗತಿಯ ಮಾತನ್ನೇ ಹೇಳುತ್ತಿದ್ದರೂ ಅದರ ದನಿಯಲ್ಲಿ ಧೈರ್ಯವಿಲ್ಲ, ಸಂಕೋಚ ಮಾತ್ರ ಬೇಕಾದಷ್ಟಿದೆ. ಸರ್ವೋತ್ತಮ, ಅಂಜನಾ ಇವರ ಮದುವೆ ಆಕಸ್ಮಿಕವಾಗಿ ಗೊತ್ತಾಪ ಪೂರ್ವಸಂಬಂಧದ ಫಲ ಎಂದು ಗೊತ್ತಾದಾಗ ಮೊದಲಿನ ಆವೇಶವೆಲ್ಲ ಇಳಿದುಹೋಗುತ್ತದೆ. ಆಧುನಿಕತೆ ಈ ನಾಟಕಗಳ ಹೊರಗಿನ ಸ್ವರೂಪವಾಗಿ ಮಾತ್ರ ಕಾಣುತ್ತದೆ.

ಇಂಥ ನಿರಾಶಾದಾಯಕವಾದ ಹಿನ್ನೆಲೆಯಲ್ಲಿಯೂ ಕೂಡ, ಕನ್ನಡ ಸಾಮಾಜಿಕ ನಾಟಕ ತನ್ನ ಸಮಗ್ರತೆಯೊಂದಿಗೆ ಪ್ರಕಟವಾದದ್ದು ಸೋಜಿಗದ ಮಾತಾಗಿದೆ. ಅದಕ್ಕೆ ಇಬ್ಬರು ನಾಟಕಕಾರರು ಕಾರಣಪುರುಷರಾದರು : ಕೈಲಾಸಂ ಹಾಗೂ ಶ್ರೀರಂಗರು. ಇವರಿಬ್ಬರೂ ಸಮುದ್ರದಾಚೆಗೆ ಪ್ರಯಾಣಮಾಡಿ ಅಲ್ಲಿಯ ರಂಗಭೂಮಿಯಲ್ಲಿ ಹೊಸ ನಾಟಕದ ಕನಸನ್ನು ಕಂಡರು. ಆದರೆ ಇಬ್ಬರೂ ಸಂಸ್ಕೃತ ಸಾಹಿತ್ಯದ ಪ್ರಭಾವದಲ್ಲಿ ಬೆಳೆದು ಬಂದವರು. ಅಂತೆಯೇ ಇವರಿಬ್ಬರ ಸವ್ಯಸಾಚಿತ್ವ ಹೊಸ ನಾಟಕಕ್ಕೆ ಪ್ರೇರಕಶಕ್ತಿಯಾಯಿತು.

ಕೈಲಾಸಂ ಜನ್ಮಜಾತರಾದ ನಟರು. ಅನುಕೃತಿ ಅವರ ಸ್ವಭಾವದಲ್ಲಿಯೇ ಒಡಮೂಡಿ ಬಂದ ಗುಣವಾಗಿತ್ತು. ಅವರಿಗೆ ಕುಳಿತಲ್ಲಿ, ನಿಂತಲ್ಲಿ ರಂಗಭೂಮಿಯಾಗುತ್ತಿತ್ತು. ನಿಲ್ಲಲಿಕ್ಕೊಂದು ಸ್ಥಳ, ಕೈಲಾಸಂ, ಅವರ ಗೆಳೆಯರು ಇಷ್ಟಿದ್ದರೆ ಸಾಕು, ನಾಟಕ ಸಿದ್ಧವಾಗಿಬಿಡುತ್ತಿತ್ತು. ಅದಕ್ಕಾಗಿಯೇ ಏನೋ ಕೈಲಾಸಂರ ನಾಟಕ ಒಂದು ಸಾಮೂಹಿಕ ಕಲೆಯಾಗಿ ಬೆಳೆಯದೆ ಭಾವಗೀತದಂತೆ ವ್ಯಕ್ತಿಪ್ರಧಾನತೆಯಿಂದ ಕೂಡಿಬಂದಿತು. ನಾಟಕ ಜನಜೀವನದ ಪ್ರತಿಬಿಂಬ ಎಂಬ ಮಾತನ್ನೇ ಕೈಲಾಸಂ ಹೇಳಿದರು. ಆದರೆ ಸಮಾಜದ ಮುಖಕ್ಕೆ ಕನ್ನಡಿ ಹಿಡಿಯುವ ಉದ್ದೇಶ ಮಾತ್ರ ಬೇರೆಯಾಗಿತ್ತು. ಸಂದರ್ಭವನ್ನೂ, ಸ್ಥಳವನ್ನೂ ಬದಲು ಮಾಡಿದಾಗ ಎಂಥ ಪ್ರತಿಷ್ಠಿತನೂ ನಗೆಗೀಡಾಗಬಹುದೆಂಬುದನ್ನು ಅವರು ಅರಿತಿದ್ದರು. 'ಟೊಳ್ಳು-ಗಟ್ಟಿ'ಯಿಂದ ಹಿಡಿದು 'ಸೂಳೆ'ಯ ವರೆಗೆ ಅವರ ಎಲ್ಲ ನಾಟಕಗಳು ಸಾಮಾಜಿಕ ಕುಂದುಕೊರತೆಗಳ ಮೇಲೆ ಹಾಸ್ಯದ ಚಿಕಿತ್ಸೆಯನ್ನು ನಡೆಸಿದವು. ಉಳಿದ ಹಾಸ್ಯ-ನಾಟಕಗಳಲ್ಲಿಯಂತೆಯೆ, ಇವರ ನಾಟಕದಲ್ಲಿಯೂ ನಗೆಗೀಡಾದ ಗುಣವೆಂದರೆ ಸಾಮಾಜಿಕ-ಪ್ರತಿಷ್ಠೆ. 'ಹೋಂರೂಲಿ'ನ ರಾಮಣ್ಣ, 'ಬಂಡ್ವಾಳಿಲ್ಲದ ಬಡಾಯಿ'ಯಲ್ಲಿಯ ಅಹೋಬ್ಲು, 'ಅಮ್ಮಾವ್ರ ಗಂಡ'ದಲ್ಲಿಯ ಹುಲಿಯೂರು ನರಸಿಂಹಯ್ಯ ಇವೆಲ್ಲ ಹೀಗೆ ನಗೆಗೀಡಾದ ಪಾತ್ರಗಳಾಗಿವೆ. 'ಬಂಡ್ವಾಳಿಲ್ಲದ ಬಡಾಯಿ' ಈ ಜಾತಿಯ ಶ್ರೇಷ್ಠ ಪ್ರಹಸನವಾಗಿದೆ. 'ಬಾಃಬಡಿಲ್', 'ಫಾಲ್‌ಸ್ಟಾಫ್' ಮುಂತಾದ ಪಾತ್ರಗಳ ಹತ್ತಿರ ಹತ್ತಿರ ಬಂದೂ, ಅಹೋಬ್ಲು ಸಮಕಾಲೀನ ವ್ಯಕ್ತಿಯಾಗಿ ಉಳಿಯುತ್ತಾನೆ. ಕೊನೆಯಲ್ಲಿ ಜೀವೂ ಅಹೋಬ್ಲುವಿನ ತಲೆಯ ಮೇಲೆ 'Fool's cap' ಹಾಕುವ ಸನ್ನಿವೇಶವಂತೂ ಹಾಸ್ಯಕ್ಕೆ ಕಿರೀಟವಿಟ್ಟಂತಾಗಿ, ವಿನೋದ ಸಾಂಕೇತಿಕ ಸಾಮರ್ಥ್ಯವನ್ನು ಪಡೆದು ನಾಟಕದ ಧ್ವನಿಶಕ್ತಿಯನ್ನು ಹೆಚ್ಚಿಸಿಬಿಡು

ತ್ತದೆ. ಕೈಲಾಸಂರ ಉಳಿದ ನಾಟಕಗಳಲ್ಲಿ ಈ ರೀತಿಯ ಏಕಮುಖತೆ ಕಂಡು ಬರುವದಿಲ್ಲ. 'ಹುತ್ತದಲ್ಲಿ ಹುತ್ತ' ಕೇವಲ ನಗೆ-ಮಾತುಗಳ ಸರಪಣಿಯಾಗುತ್ತದೆ; 'ಅಮ್ಮಾವ್ರಗಂಡ'ದಲ್ಲಿ ಕೆಲ ಪಾತ್ರಗಳ ವಿಚಿತ್ರ ಗಾಂಭೀರ್ಯ ವಿನೋದದ ಏಕ-ಮುಖತೆಗೆ ಭಂಗ ತರುತ್ತದೆ. ರಸನಿರ್ಮಿತಿಯಲ್ಲಿ ಸಂಕೀರ್ಣತೆ (complexity) ಒಳ್ಳೆಯದೇ; ಆದರೆ ಕಲಬೆರಕೆ ಸರ್ವಥಾ ಯೋಗ್ಯವಾಗಲಾರದು.

ಎರಡನೆಯದಾಗಿ ಕೈಲಾಸಂ ಜೀವನದ ಸಮಸ್ಯೆಗಳನ್ನು ನಾಟಕಗಳಲ್ಲಿ ಚರ್ಚಿಸುವ ಪ್ರಯತ್ನಮಾಡಿದರು. ಶಿಕ್ಷಣ, ಮದುವೆ, ನಿರುದ್ಯೋಗ, ವೇಶ್ಯಾವ್ಯವಸಾಯ, ಹೆಣ್ಣಿನ ಗೋಳು, ಗೃಹಸೌಖ್ಯ ಮೊದಲಾದ ಸಮಾಜದ ಜೀವಂತ ಸಮಸ್ಯೆಗಳನ್ನು ಅವರು ನಾಟಕಗಳಲ್ಲಿ ಚಿತ್ರಿಸಿದರು. ಕೈಲಾಸಂರಲ್ಲಿ ಗಂಭೀರ ವಿಚಾರಗಳಿಗೇನೂ ಕೊರತೆಯಿಲ್ಲ. ಆದರೆ ಅವರ ಕಲಾತ್ಮಕ ವ್ಯಕ್ತಿತ್ವದಲ್ಲಿ( artistic personality )ಯ ವಿದೂಷಕ ಆ ವಿಚಾರಸರಣಿಯನ್ನೆಲ್ಲ ಕತ್ತರಿಸಿಬಿಡುತ್ತಾನೆ. ಇವರ ನಾಟಕಗಳಲ್ಲಿ ಎತ್ತಿಕೊಂಡ ಸಮಸ್ಯೆಯನ್ನು ಹಾಸ್ಯದ ಬೆಳಕಿನಲ್ಲಿ ಕಂಡು ಕೊನೆಗೆ ಒಂದು ಚೇಷ್ಟೆಯಿಂದಲೇ ಅದನ್ನು ಬಿಡಿಸಲಾಗುತ್ತದೆ. 'ಅಮ್ಮಾವ್ರ ಗಂಡ'ದಲ್ಲಿಯ ಸಮಸ್ಯೆ ಗಂಡ ಹೆಂಡಿರ ಸಂಬಂಧವನ್ನು ಕುರಿತದ್ದು, ನಿಜವಾಗಿಯೂ ಗಂಭೀರವಾಗಿದೆ. ನರಸಿಂಹಯ್ಯ ಹಾಗೂ ಸರೋಜ ಇವರ ಹಟಮಾರಿತನದ ಸ್ವಭಾವ ಪರಿಸ್ಥಿತಿಗಿಂತ ಹೆಚ್ಚು ಘೋರವಾಗಿದೆ. ಕಮಲ ಹಾಗೂ ಸುಬ್ಬಣ್ಣ ಇವರ ಸ್ವಭಾವಗಳು ತದ್ವಿರುದ್ಧವಾಗಿ, ಇಬ್ಬರೂ ನರಸಿಂಹಯ್ಯ ಹಾಗೂ ಸರೋಜಳಂಥವರಿಗೆ ಬಲಿಯಾಗಿದ್ದಾರೆ. ಇದರಿಂದಾಗಿ ಗೃಹಸೌಖ್ಯ ಹಾಳಾಗಿಹೋಗಿದೆ. ನರಸಿಂಹಯ್ಯ ಸುಬ್ಬಣ್ಣನನ್ನು ನೋಡಿ ಕನಿಕರಪಡುತ್ತಾನೆ. ಆದರೆ ಇಂಥ ಗಂಭೀರವಾದ ಸಮಸ್ಯೆ ಕಮಲಳ ಒಂದು ದೀರ್ಘಭಾಷಣದಿಂದಲೇ ಸುಖವಾಗಿ ಕೊನೆಗಾಣುವದನ್ನು ನೋಡಿದಾಗ ಹೃದಯಕ್ಕೆ ಹಿತವೆನಿಸಿದರೂ ಬುದ್ಧಿಗೆ ಸಮಂಜಸವಾಗಿ ಕಾಣಲಾರದು. ಗಂಭೀರವಾದ ಸಮಸ್ಯೆಗಳು ಈ ಜಾತಿಯ ನಾಟಕಕ್ಕೆ ತಲೆಭಾರವಾಗುತ್ತವೆ. ಚೇಷ್ಟೆಯಿಂದ ಸಮಸ್ಯೆಯ ದಾರುಣತೆಯನ್ನು ಕಡಿಮೆ ಮಾಡಬಹುದು. ಆದರೆ ಅದೇ ಅದಕ್ಕೆ ಪರಿಹಾರವಾಗಲಾರದು. ಕೈಲಾಸಂರ ನಾಟಕಗಳು ಒಮ್ಮೊಮ್ಮೆ ಹಾಸ್ಯದ ವಿಚಿತ್ರ ವೇಷಸ್ಪರ್ಧೆಯಾಗಿ ಪರಿಣಮಿಸುತ್ತವೆ; ಪಾತ್ರಗಳು ನಗೆ-ಮಾತುಗಳ ಅಲಾರ್ಮ ಗಡಿಯಾರಗಳಾಗಿ ಕಿರಿಚುತ್ತವೆ. ಇಲ್ಲದಿದ್ದರೆ ಕೇವಲ ಚರ್ಚೆಯಲ್ಲೇ ಸಮಸ್ಯೆಯ ಪರಿಹಾರವಾದ ಆಭಾಸ ಉಂಟಾಗಿಬಿಡುತ್ತದೆ. 'ನಮ್‌ಬ್ರಾಹ್ಮಣ್ಕೆ'ಯನ್ನು ಇದಕ್ಕೆ ಉದಾಹರಣೆಯಾಗಿ ಕೊಡಬಹುದು. ಕೈಲಾಸಂರ ಯಾವ ನಾಟಕದಲ್ಲಿಯೂ ('ಬಹಿಷ್ಕಾರ' ಒಂದನ್ನು ಬಿಟ್ಟು) ಸಮಸ್ಯೆ ನಾಟಕದ ಕ್ರಿಯೆಯಲ್ಲಿ ಸರ್ವವ್ಯಾಪಿಯಾಗಿ ಬರುವದಿಲ್ಲ. ಯಾವುದೋ ಪಾತ್ರದ ವಿಕೃತಿಯ ಚಿತ್ರಣದಲ್ಲಿ ಅದನ್ನು ಗುರುತಿಸಬೇಕಾಗುತ್ತದೆ. ಕೈಲಾಸಂರ ನಾಟ್ಯ-ಪ್ರತಿಭೆ ಮುಖ್ಯವಾಗಿ ಜೀವನದಲ್ಲಿಯ ವಿರೋಧಾಭಾಸವನ್ನು, ಹುಚ್ಚುತನವನ್ನು, ಅಹಂಕಾರವನ್ನು ಕಂಡು, ಅದನ್ನು ಕಾಣಿಸುವದರಲ್ಲೆ ತೃಪ್ತಿಯನ್ನು ಪಡೆಯಿತು.

ಜೀವನದಲ್ಲಿಯ ರೌದ್ರವನ್ನು ಕೂಡ ಕೈಲಾಸಂ ಕಂಡಿದ್ದರೆನ್ನುವದಕ್ಕೆ ಅವರ

'ಬಹಿಷ್ಕಾರ' ಹಾಗೂ 'ಸೂಳೆ' ನಾಟಕಗಳೇ ಸಾಕ್ಷಿಯಾಗಿವೆ. 'ಬಹಿಷ್ಕಾರ' ಸಾಮಾಜಿಕ ನೀತಿ-ನಿಯಮಗಳ ನಿಷ್ಠುರತೆಯ ಅಡಿಯಲ್ಲಿ ಗೋಳಾಡಿ ಸತ್ತ ಒಬ್ಬ ಹುಡುಗಿಯ ಕರುಣಚಿತ್ರವಾಗಿದೆ. ವಯಸ್ಸಾದರೂ ಮದುವೆಯಾಗದಿರುವದೇ ನರಸೂ ಮಾಡಿದ ತಪ್ಪು. ಅದಕ್ಕಾಗಿ ಅವಳು ಜೀವನವನ್ನೇ ದಂಡವಾಗಿ ಕೊಡ ಬೇಕಾಗುತ್ತದೆ. ಅವಳ ಜೊತೆಗೆ ಅವಳ ಅಸಹಾಯ ತಂದೆಯಾದ ರಂಗಣ್ಣನೂ ದುರಂತಪಾತ್ರವಾಗುತ್ತಾನೆ. ಅಜ್ಜಿ ಬೈಯುತ್ತ ಸತ್ತದ್ದು, ಶ್ರಾದ್ಧಕ್ಕೆ ಬ್ರಾಹ್ಮಣರು ದೊರೆಯದಿರುವದು ಈ ಸಂಗತಿಗಳು ನರಸೂಳ ಮನಸ್ಸಿನಲ್ಲಿ ತಾನು ಹುಟ್ಟಿರುವದೇ ತಪ್ಪೆಂಬ ಭಾವನೆಯನ್ನು ಅಚ್ಚೊತ್ತಿಸುತ್ತವೆ. ಕ್ರಮೇಣ ಆ ಮನೋವ್ಯಥೆಯೇ ಒಂದು ಮಾನಸಿಕ ಉಲ್ಬಣವಾಗಿ, ಔಷಧಕ್ಕಾಗಿ ತಂದ ವಿಷವನ್ನು ಕುಡಿದು ನರಸೂ ಸಾಯುತ್ತಾಳೆ. 'ಸೂಳೆ' ಸಮಾಜದ ವಿಕೃತಿಯ, ಅನ್ಯಾಯದ ಇನ್ನೊಂದು ಘೋರ ಚಿತ್ರವಾಗಿದೆ. ಅದರ ಭೀಭತ್ಸದ ಕಹಿಯನ್ನು ಕೈಲಾಸಂ-ಕರುಣೆ ಮುರಿದಿದೆ. ಲೇಡಿ ಶಿವದಾಸ ಅಯ್ಯರ ಈ ಪಾತ್ರ ಆ ಕರುಣೆಯ ಪ್ರತಿನಿಧಿಯಾಗಿ ಬಂದಿದೆ. ಹೆಣ್ಣು ಈ ದುರಂತಕ್ಕೆ ಕೇಂದ್ರವ್ಯಕ್ತಿಯಾಗಿರುವದು ಈ ನಾಟಕಗಳ ವೈಶಿಷ್ಟ್ಯ-ವಾಗಿದೆ. ತಂತ್ರದ ದೃಷ್ಟಿಯಿಂದ ನೋಡಿದಾಗ 'ಬಹಿಷ್ಕಾರ' 'ಸೂಳೆ'ಗಿಂತ ಹೆಚ್ಚು ಪರಿಣಾಮಕಾರಿಯಾಗಿದೆ. 'ಬಹಿಷ್ಕಾರ'ದ ಸಬಲ ವೇಗ ನಾಟಕದ ಕೊನೆ-ಯನ್ನು ಸಿಡಿಲಿನಂತೆ ಎರಗಿಸುತ್ತದೆ. "ಯಾಕ್ಹುಟ್ಟಿದ್ಲೀ ಶನಿ" ಎಂಬ ಅಜ್ಜಿಯ ಮಾತು ನರಸೂಳ ಜೀವನದ ಶಾಪವಾಣಿಯಂತೆ ಮೇಲಿಂದ ಮೇಲೆ ಬಂದು ನಾಟಕದ ಪ್ರತಿಕ್ರಿಯೆಗೂ ನೋವಿನ ಮುರಿತವನ್ನು ಕೊಡುತ್ತದೆ. ನರಸೂ ಸಾಯುವ ಸನ್ನಿವೇಶ ನಾಟ್ಯಕುಶಲತೆಯ ಕಳಸವಾಗಿ ಬಂದಿದೆ. 'ಸೂಳೆ'ಯಲ್ಲಿಯ ಕತೆ ಹೇಳುವ ಸನ್ನಿವೇಶ ತಾಂತ್ರಿಕವಾಗಿ ಮಹತ್ವಪೂರ್ಣವಾಗಿದೆ.

ದುರಂತನಾಟಕದಲ್ಲಿ ಕೈಲಾಸಂರದು ಆಧುನಿಕ ರೀತಿಯಾಗಿದೆ. ಇಲ್ಲಿಯ ದುರಂತ, ದೈವ ಅಥವಾ ವ್ಯಕ್ತಿಗಳ ಸ್ವಭಾವದ ಮೂಲಕ ಉಂಟಾದದ್ದಲ್ಲ. ಆದರೆ ಗಾಲ್ಸವರ್ದಿಯಲ್ಲಿಯಂತೆ, ಸಾಮಾಜಿಕ ನೀತಿಯೇ ಇಲ್ಲಿ ದುರ್ವಿಪಾಕವನ್ನು ತಂದೊದ-ಗಿಸುತ್ತದೆ. ಪರಿಣಾಮದ ದೃಷ್ಟಿಯಿಂದ ಈ ನಾಟಕಗಳು ಶ್ರೇಷ್ಠವಾಗಿಯೇ ಇವೆ. ಆದರೆ ಕೈಲಾಸಂರ ಎಲ್ಲ ನಾಟಕಗಳಲ್ಲಿಯೂ ಪ್ರಮುಖವಾಗಿ ಕಂಡುಬರುವ ದೋಷವೇ ಇಲ್ಲಿಯೂ ಕಾಣುತ್ತದೆ. ಅದು ಕೈಲಾಸಂರ ಭಾವನಾವಶತೆ. (sentimentality) 'ಪೋಲಿಕಿಟ್ಟಿ'ಯಲ್ಲಿ ಅದು ಒಬ್ಬ ಒಳ್ಳೆಯ ಮನಸ್ಸಿನ ಹುಂಬ ಹುಡುಗ ಶಿಕ್ಷಣಕ್ರಮವನ್ನೇ ನಿರಾಕರಿಸುವಷ್ಟು ಅತಿರೇಕಕ್ಕೆ ಮುಟ್ಟಿದೆ. 'ಅಮ್ಮಾವ್ರ ಗಂಡ', 'ನಮ್ ಬ್ರಾಹ್ಮಣ್ಕೆ' ಮೊದಲಾದ ವಿನೋದಪ್ರಧಾನ ನಾಟಕಗಳಲ್ಲಿಯೂ ಅದು ರಸನಿರ್ಮಿತಿಗೆ ತಡೆಯನ್ನುಂಟುಮಾಡುತ್ತದೆ. ಈ ದುರಂತ-ನಾಟಕಗಳಲ್ಲಿ ಈ ಭಾವನಾವಶತೆ ಆಕ್ರೋಶವಾಗಿ ಬರುತ್ತದೆ. ಅಸಹಾಯತೆಯ ಚಿತ್ರ ಎಂದೂ ದುರಂತ-ವಾಗಲಾರದು. ಗಾಲ್ಸವರ್ದಿಯ 'Strife' ನಾಟಕದಲ್ಲಿಯ 'ರಾಬರ್ಟ್ಸ್' ಕೂಡ ಧೀರವ್ಯಕ್ತಿಯಾಗಿದ್ದಾನೆ. ಕೈಲಾಸಂರ ನರಸೂ ದುರ್ಬಲಜೀವಿಯೇನೂ ಅಲ್ಲ. ಆದರೆ ಕೈಲಾಸಂ, ಅವಳ ಹಾಗೂ ರಂಗಣ್ಣನ ಅಸಹಾಯ ಸ್ಥಿತಿಯ ಕರುಣವನ್ನಷ್ಟೇ ಚಿತ್ರಿಸಿ-

ತೃಪ್ತರಾಗುತ್ತಾರೆ. ನರಸೂ ಹಾಗೂ ರಂಗಣ್ಣ ಇವರು ಸೂಕ್ಷ್ಮ ಜೀವಿಗಳಾಗಿ ಮಾನಸಿಕ ವೇದನೆಗೇ ಬಲಿಯಾದ ವ್ಯಕ್ತಿಗಳಾಗುತ್ತಾರೆ. ನರಸೂಳ ಆತ್ಮಹತ್ಯೆ ಇಂಥ ಸ್ವಭಾವದ ಸಹಜಫಲವೆನ್ನುವಂತೆ ಬಂದುಬಿಟ್ಟಿದೆ.

ಆದರೆ ಇವೆಲ್ಲ ಕೊರತೆಗಳನ್ನೂ ಮೀರಿ ಕೈಲಾಸಂ-ಪ್ರತಿಭೆ ಪ್ರತಿನಾಟಕದಲ್ಲಿಯೂ ಬೆಳಗುವದನ್ನು ಕಾಣಬಹುದು. ಅವರು ಕನ್ನಡ ನಾಟಕಕ್ಕೆ ಕೊಟ್ಟ ಅಮೂಲ್ಯ ಕಾಣಿಕೆಗಳನ್ನು ಮರೆಯಲಾಗದು. ಮೊದಲನೆಯದಾಗಿ ಕನ್ನಡ ರಂಗಭೂಮಿಯನ್ನು ಅವರು ಚೇತರಿಸಿಕೊಳ್ಳುವಂತೆ ಮಾಡಿದರು. ಕನ್ನಡ ನಾಟಕ ಅವರ ಕೈಯಲ್ಲಿ ಒಮ್ಮೆಲೆ ಮೈಕೊಡವಿ ಎದ್ದವರಂತೆ ಅದ್ಭುತ ಚಟುವಟಿಕೆಯನ್ನು ಪ್ರದರ್ಶಿಸಿತು. ಮಲಗಿದ್ದ ಸಮಾಜವನ್ನು ತಡವಿ, ಎಬ್ಬಿಸಿ, ಚೇಷ್ಟೆಮಾಡಿ ಅವರು ರಂಗದ ಮೇಲೆ ತಂದರು. ವಿಶ್ವವಿದ್ಯಾಲಯದ ಪದವಿಯನ್ನು ಪಡೆದೂ ಟೊಳ್ಳಾದ ವಿದ್ಯಾರ್ಥಿಗಳು, ಬಂಡ್ವಾಳಿಲ್ಲದ ಬಡಾಯಿಯನ್ನು ಕೊಚ್ಚುವ ವಕೀಲರು, ಅರಿವಿಲ್ಲದೆಯೇ ಉದಾತ್ತತೆ ಯನ್ನು ತೋರುವ ಬಾ:ಯ್‌ಸ್ಕೌಟುಗಳು, ಗೋಳಿನ ಕಹಿಯನ್ನುಂಡ ವಿಧವೆಯರು, ಹೆಂಡಂದಿರ ಹಿಡಿತದಲ್ಲಿ ಮೆತ್ತಗಾದ ಗಂಡಂದಿರು ಇವರೆಲ್ಲ ಮೊಟ್ಟಮೊದಲಿಗೆ ರಂಗದ ಬೆಳಕನ್ನು ಕಂಡರು. ಅದಲ್ಲದೆ ಈ ವ್ಯಕ್ತಿಗಳೆಲ್ಲ ಶ್ರೇಷ್ಠ ಮಾತುಗಾರರು. ಅವರು ಉಪಯೋಗಿಸುವ ಕೈಲಾಸಂ-ಛಾಪಿನ ಭಾಷೆ, ಆ ನಾಟಕಗಳ ಮಟ್ಟಿಗಂತೂ ಅಪೂರ್ವ ವಾದ ಮಾಧ್ಯಮವಾಗಿದೆ. ಇದೇ ಸ್ವತಂತ್ರ ಮನೋವೃತ್ತಿ ಉಳಿದ ನಾಟಕಕಾರರಿಗೂ ಆದರ್ಶವಾಗಬೇಕು. ಈ ಭಾಷೆ ಇನ್ನು ಕೆಲ ವರ್ಷಗಳಾದ ನಂತರ ತಿಳಿಯಲಿಕ್ಕಿಲ್ಲ ವೆಂದು ಆಕ್ಷೇಪ ಬಂದಿದೆ. ಆದರೆ ಕೈಲಾಸಂ ತಮ್ಮ ವಸ್ತುವಿಗೆ ತಕ್ಕಂತೆ ಅಭಿವ್ಯಕ್ತಿ ಯನ್ನು ಹದಗೊಳಿಸಿದ್ದಾರೆ. ಆ ಭಾಷೆ ಒಂದು ದೃಷ್ಟಿಯಿಂದ ಪಾತ್ರಗಳ ಸಹಜ ಮಾಧ್ಯಮವಾಗಿ ಬಂದರೆ, ಇನ್ನೊಂದು ದೃಷ್ಟಿಯಿಂದ ವಿನೋದಕಾರನ ಶಕ್ತಿಯುತ ವಾದ ಅಸ್ತ್ರವಾಗಿ ಬರುತ್ತದೆ. ಅದು ಕೈಲಾಸಂರ ವಿಡಂಬನದ ಅಪೂರ್ವ ರೀತಿ.

ಎರಡನೆಯದಾಗಿ ಕೈಲಾಸಂ ಶುದ್ಧಹಾಸ್ಯದ ವಿವಿಧ ಪದರುಗಳನ್ನು ನಾಟಕದ ಮುಖಾಂತರ ಬಿಡಿಸಿ ತೋರಿದರು. ಸರಸವಿನೋದ ( humour )ದಿಂದ ಹಿಡಿದು ವಿದಗ್ಧತೆಯ (wit)ವರೆಗೆ ಅವರ ಹಾಸ್ಯ ಮೈಚಾಚಿಕೊಂಡಿದೆ. ಮುಧ್ಮಣಿಯ ತೊದಲು ಮಾತು, ಅಹೋಬ್ಲುವಿನ ಕಲ್ಪನಾವಿಲಾಸ, ನಾಗತ್ತೆಯ ಅಲೌಕಿಕ ತಿರಸ್ಕಾರ, ನರಸಿಂಹಯ್ಯನ ಕ್ರೂರವ್ಯಂಗ್ಯ, ಸುಬ್ಬಣ್ಣನ ನರ್ಮವಿನೋದ ಇವೆಲ್ಲ ಆಚ್ಚರಿಗೊಳಿಸು ವಷ್ಟು ವೈವಿಧ್ಯಪೂರ್ಣವಾಗಿವೆ. ಸ್ವಭಾವ, ಸಂಭಾಷಣೆ; ಸನ್ನಿವೇಶ, ವಾತಾವರಣ ಎಲ್ಲಕಡೆಗೂ ಹಾಸ್ಯ ತುಂಬಿತುಳುಕುವಂತೆ ಕೈಲಾಸಂ ಮಾಡಿದರು. ನಾಯಕಪಾತ್ರ ದಲ್ಲಿಯೂ ವಿದೂಷಕತ್ವದ ಅಂಶವನ್ನು ಅವರು ಗುರುತಿಸಿದರು. ಕೈಲಾಸಂರ ನಾಟಕ-ದೃಷ್ಟಿಯಲ್ಲಿ ಅದು ಮಹತ್ವದ ಅಂಶವಾಗಿದೆ. 'ಮೊಲಿಯರ್' ಜಾತಿಯ ಅವರ ಪಾತ್ರ ವರ್ಗ ತನ್ನ ಅನನ್ಯತೆ ( uniqueness ) ಯಿಂದ ಇಂದಿಗೂ ಆಶ್ಚರ್ಯಕರವಾಗಿದೆ. ರಾಮಣ್ಣ, ಸುಬ್ಬಣ್ಣ, ನರಸಿಂಹಯ್ಯ, ಅಹೋಬ್ಲು, ನಾಗತ್ತೆ, ಮುಧ್ಮಣಿ, ಮಿಸ್ ಪ್ರಭಾಮಣಿ ಇವೆಲ್ಲ ಅವಾಸ್ತವ ಜೀವನವನ್ನು ನಡೆಸುವ ವಾಸ್ತವ ಪಾತ್ರಗಳು. ಈ ವ್ಯಕ್ತಿಗಳು ವಾಸ್ತವವಾಗಿರುವದೇ ಕೈಲಾಸಂರ ದೃಷ್ಟಿಯಲ್ಲಿ ಒಂದು 'ದೊಡ್ಡ

ಜೋಕು. ' ಅಂತೇ ಅವರ ನಾಟಕಗಳ ಮೂಲಕ್ಕಿರುವ ಈ ವಿನೋದಪ್ರಜ್ಞೆ ಜಾಗೃತವಾದಾಗಲೆಲ್ಲ ಕೈಲಾಸಂ ಅದ್ವಿತೀಯರಾಗುತ್ತಾರೆ. ಅದು ಮಲಗಿದಾಗ ಅವರ ನಾಟಕವೂ ತೂಕಡಿಸಲಾರಂಭಿಸುತ್ತದೆ. ಈ ನಾಟಕದಲ್ಲಿಯ ವ್ಯಕ್ತಿಗಳಿಗೆ ನಗುವ ದೊಂದನ್ನು ಬಿಟ್ಟರೆ, ದ್ವೇಷ, ಅಸೂಯೆ, ಪ್ರೀತಿ, ಮೋಹ, ರೋಷ ಮೊದಲಾದ ಉಳಿದ ಭಾವಗಳು ಅಪರಿಚಿತವಾಗಿವೆ. ಅವು ನಗುವಾಗ, ಆ ನಗೆಯ ವಿವಿಧ ವಿಲಾಸ ಗಳಲ್ಲಿಯೇ ಉಳಿದ ಭಾವಗಳು ಸಂಚರಿಸುತ್ತಿರುವದನ್ನು ಕಾಣಬೇಕಾಗುತ್ತದೆ.

ಕೈಲಾಸಂರಿಗಿಂತ ಶ್ರೀರಂಗರ ಕೈಯಲ್ಲಿ ನಾಟಕ ಹೆಚ್ಚಾಗಿ ಜೀವನವಿಮರ್ಶೆಯ ಮಾಧ್ಯಮವಾಯಿತು. ಕೈಲಾಸಂ ನಾಟಕದ ಮೂಲಕ ಜೀವನವನ್ನು ಅರ್ಥವತ್ತಾಗಿ ನಿರೂಪಿಸಿದರೇನೋ ನಿಜ. ಆದರೆ ಅವರ ಲಕ್ಷ್ಯ ಹೆಚ್ಚಾಗಿ ವಿನೋದದ ಕಡೆಗೆ. ' ತಾಳಿಕಟ್ಟೋಕ್ಕೂಲೀನೇ ' ಎಂಬ ನಾಟಕದಲ್ಲಿ ವರದಕ್ಷಿಣೆಯ ಸಮಸ್ಯೆಗಿಂತ ನರಸಿಂಹಯ್ಯ, ಮಿಸ್ ಪ್ರಭಾಮಣಿ, ನಾಗತ್ತೆ, ಬೋರ ಇವರ ಚೇಷ್ಟೆ-ಕುಚೇಷ್ಟೆಗಳೇ ಹೆಚ್ಚು ಪ್ರಮುಖವಾಗಿವೆ. ' ಬಂಡ್ವಾಳಿಲ್ಲದ ಬಡಾಯಿ ', ' ಹುತ್ತದಲ್ಲಿ ಹುತ್ತ ' ಇವಂತೂ ಅಚ್ಚ ಪ್ರಹಸನ ( farce ) ಗಳಾಗಿವೆ. ಕೈಲಾಸಂ ಶ್ರೇಷ್ಠತರಗತಿಯ ಪ್ರಹಸನಕಾರರೆಂದೇ ಉಳಿಯುತ್ತಾರೆ. ಶ್ರೀರಂಗರಲ್ಲಿ ಸಮಸ್ಯೆ ಹೆಚ್ಚು ಪ್ರಾಮುಖ್ಯ ವನ್ನು ಪಡೆಯಿತು. ಜಗತ್ತಿನಲ್ಲಿಯ ನೂರಾರು ವೈಷಮ್ಯಗಳು ಕೈಲಾಸಂರ ಹಾಸ್ಯ-ಶಕ್ತಿ ಯನ್ನು ಕೆರಳಿಸಿದವು. ಅಂತೇ ಸಾಮಾನ್ಯವಾದದ್ದನ್ನೂ ಅಸಮಾನ್ಯಗೊಳಿಸಿ ಸರಳ ವಾಗಿದ್ದದ್ದನ್ನು ವಕ್ರವಾಗಿಸಿ ಕೂಡ ಅವರು ಚೇಷ್ಟೆಮಾಡಿದ್ದಾರೆ. ಮುಧ್ಮಣಿಯ ಪಾತ್ರ ಈ ಮಾತಿಗೆ ಉತ್ತಮ ಉದಾಹರಣೆಯಾಗಿದೆ. ಶ್ರೀರಂಗರು ಹಾಸ್ಯವನ್ನು ಟೀಕೆಯ ಒಂದು ಅಸ್ತ್ರವಾಗಿ ಪ್ರಯೋಗಿಸಿದರು. ಕೈಲಾಸಂರ ಹಾಸ್ಯಕ್ಕೆ ನಿರುದ್ದಿಶ್ಯ-ವಾದ ( above purpose ) ಸ್ವೈರಸಂಚಾರವಿದೆ. ಶ್ರೀರಂಗರ ಹಾಸ್ಯಕ್ಕೆ ವಿಮ ರ್ಶೆಯ ಪ್ರಬಲವಾದ ಉದ್ದೇಶ ಪ್ರೇರಕ-ಶಕ್ತಿಯಾಗಿದೆ.

ಬುದ್ಧಿವಂತಿಕೆ ( intellectuality ) ಶ್ರೀರಂಗರಲ್ಲಿ ಭಾವನೆಯಷ್ಟೇ ಉತ್ಕಟ ವಾಗಿದೆ. ಅಜ್ಞಾನದ ಬಗ್ಗೆ ಎಳ್ಳಷ್ಟೂ ಸಹನೆಯಿರದ ಅವರು, ಸಮಾಜದ ಪುನರ್ನಿ-ಮಾಣದ ಅವಶ್ಯಕತೆಯನ್ನು ಮತ್ತೆ ಮತ್ತೆ ಹೇಳಹೊರಟರು. ಈ ರೊಚ್ಚೇ ಅವರ ಪ್ರತಿನಾಟಕಕ್ಕೂ ಮೂಲಭಾವವಾಗಿ ಬಂದಿತು. ಮತ್ತು ಅವರ ನಾಟಕಗಳ ವ್ಯಕ್ತಿ ಗಳಲ್ಲಿ ಶ್ರೀರಂಗರದೂ ಒಂದು ಪ್ರಮುಖಪಾತ್ರವಿರುವದಕ್ಕೂ ಇದೇ ಕಾರಣ-ವಾಗಿದೆ. ಅದೇ ಕಾರಣಕ್ಕಾಗಿಯೇ ಹೋರಾಟ ( conflict ) ಅವರ ನಾಟಕಗಳ ವಸ್ತುವಿನಲ್ಲಿ ಅನಿವಾರ್ಯವಾದ ಅಂಶವಾಗಿಬಿಡುತ್ತದೆ. ಹಳೆದು-ಹೊಸದು, ಮುಪ್ಪು-ಯೌವನ, ದಾಂಭಿಕತೆ-ಸರಳತನ, ಪ್ರಾಮಾಣಿಕತೆ-ಕುತಂತ್ರ ಇವುಗಳ ಹೋರಾಟದ ಸ್ಥೂಲ-ಸೂಕ್ಷ್ಮಗಳನ್ನೆಲ್ಲ ಅವರು ನಾಟಕದಲ್ಲಿ ಚಿತ್ರಿಸಿದರು. ಈ ಮಾತಿಗೆ ಅವರ ' ಹರಿಜನ್ವಾರ ' ಶ್ರೇಷ್ಠ ಉದಾಹರಣೆಯಾಗಿದೆ. ಸ್ವಂತ ಯೋಗ್ಯತೆಯಿಲ್ಲದೆ ಇಲೆ-ಕ್ಶನ್ನಿಗೆ ನಿಂತು ದೊಡ್ಡವರಾಗಬೇಕೆಂಬ ಹಂಬಲವುಳ್ಳ ದೊಡ್ಡರಾಯರು, ಅನೇಕ ದ್ವಂದ್ವಗಳ ಮೂರ್ತಿಯಾಗಿದ್ದಾರೆ ; ನಾಟಕದ ಅನೇಕ ಹೋರಾಟಗಳಿಗೆ ಕೇಂದ್ರ ವ್ಯಕ್ತಿಯಾಗಿದ್ದಾರೆ. ಮಡಿವಂತಿಕೆ-ಸುಧಾರಣೆ, ಅಂತಃಕರಣ-ಪ್ರತಿಷ್ಠೆ, ಕರುಳ

ಸಂಬಂಧ-ತತ್ವ, ತೋರಿಕೆ ( appearance ) ನಿಜರೂಪ ( reality ) ಇವೆಲ್ಲವುಗಳ ಹೋರಾಟ ಅವರ ವ್ಯಕ್ತಿತ್ವದಲ್ಲಿಯೇ ನಡೆಯುತ್ತಿದೆ. "ಥೂ ಈ ಹೆಂಗ್ಸರದು ತಿಳಿಯೋದೇ ಇಲ್ಲ, ಹೊರಗೊಂದು ಒಳಗೊಂದು" ಈ ಮಾತು ತಮಗೇ ಅನ್ವಯಿಸುತ್ತದೆಂಬುದನ್ನು ತಿಳಿಯದಷ್ಟು ಅವರ ಮನಸ್ಸಿನಲ್ಲಿ ಹೋರಾಟ ನಡೆದಿದೆ. ಆದರೆ ಈ ಹೋರಾಟ ಮಾತ್ರ ಅವರದಲ್ಲ. ಪರಿಸ್ಥಿತಿಗೆ ಹೊಂದಿಕೊಂಡು ನಡೆಯುವ ಸೌಹಾರ್ದವಿಲ್ಲ, ಅದರ ವಿರುದ್ಧ ಹೋರಾಡುವಷ್ಟು ತ್ರಾಣವೂ ಅವರಲ್ಲಿಲ್ಲ. ಹೊರಗೆ ನಡೆದ ಇಲೆಕ್ಶನ್ನಿನ ಹೋರಾಟ, ಸಮಾಜದ ಟೀಕೆ-ಟಿಪ್ಪಣಿಗಳು ರಾಯರ ಮನಸ್ಸಿನ ಒಳತೋಟಿಗೆ ಶಕ್ತಿಯುತವಾದ ಸಂಕೇತಗಳಾಗಿವೆ. ವೇಣಕ್ಕನಿಂದ ಮೊದಲು-ಗೊಂಡು ಉಳಿದ ಎಲ್ಲ ಪಾತ್ರಗಳು ಈ ಹೋರಾಟಗಳ ಪ್ರಬಲ ಅಂಶಗಳ ಜೀವಂತ ಪ್ರತಿನಿಧಿಗಳಾಗಿ ಬರುತ್ತವೆ. ಅಂತೆಯೇ ಬಿಡಿಸಲು ಹೋದ ಸಮಸ್ಯೆ ಹೆಚ್ಚು ಗಂಟು ಗಂಟಾಗಿ ಕೊನೆಗೆ ಜನಿವಾರವನ್ನು ಹರಿಯುವಂತೆ, ಕತ್ತರಿಸಲ್ಪಡುತ್ತದೆ. ಶ್ರೀರಂಗರ ನಾಟಕದೃಷ್ಟಿ ಇದನ್ನು ಬಿಟ್ಟರೆ ಪರಿಹಾರಕ್ಕೆ ಬೇರೆ ಮಾರ್ಗವನ್ನು ಕಾಣಲಾರದು.

ಇದೇ ನಾಟಕ ಶ್ರೀರಂಗರ ನಾಟ್ಯಕಲೆಯ ಇನ್ನೊಂದು ಮಹತ್ವದ ಅಂಶ-ವನ್ನೂ ಪ್ರಕಟಿಸುತ್ತದೆ. ಇದೇ ನಾಟಕದಲ್ಲಿ ಶ್ರೀರಂಗರು ಹಾಸ್ಯ-ನಾಟಕ ಹಾಗೂ ರುದ್ರ-ನಾಟಕಗಳ ಭೇದವನ್ನು ತೊಡೆದುಹಾಕಿಬಿಟ್ಟರು. ಇದಕ್ಕೂ ಮೊದಲು ಬಂದ 'ಉದರವೈರಾಗ್ಯ', 'ಮುಕ್ಕಣ್ಣನ ವಿರಾಟಪುರುಷ' ಮೊದಲಾದವುಗಳಲ್ಲಿ (ಶ್ರೀರಂಗರ ಮಾದರಿ pattern) ಇನ್ನೂ ಸ್ಥಿರವಾಗಿರಲಿಲ್ಲ. ಅವುಗಳಲ್ಲಿಯ ವ್ಯಂಗ್ಯಕ್ಕೆ ಧ್ವನಿಸಾಮರ್ಥ್ಯವಿಲ್ಲ. ವಿನೋದಕ್ಕೆ ವಿಚಾರದ ಬೆನ್ನೆಲುಬಾಗಲಿ, ವಿಚಾರಕ್ಕೆ ವಿನೋದದ ಕಾಂತಿಯಾಗಲಿ ಇಲ್ಲ. 'ಹರಿಜನ್ವಾರ' ಶ್ರೀರಂಗರ ಮುಖ್ಯರೂಪವಾದ 'tragi-comedy'ಗೆ ಮೊದಲ ಉದಾಹರಣೆಯಾಗಿದೆ. ಶ್ರೀರಂಗರು ಆರಿಸಿಕೊಂಡ ಮಧ್ಯಮ ವರ್ಗದ ಜೀವನ ಹಾಸ್ಯಾಸ್ಪದವೂ ಹೌದು. ಕರುಣಾಸ್ಪದವೂ ಹೌದು. ಆದ್ದ-ರಿಂದ ನಾಟ್ಯವಸ್ತು ತನ್ನ ಅಭಿವ್ಯಕ್ತಿಯನ್ನು ಹೀಗೆ ಕಂಡುಕೊಳ್ಳಬೇಕಾಯಿತು. ಕೈಲಾಸಂರ ನಗೆಯ ಹಿಂದಿರುವ ದುಃಖಕ್ಕೆ ಭಾವನಾಮಯತೆಯಿದೆ. ಶ್ರೀರಂಗರು ನಗೆಯೊಡನೆ, ನಗೆಯ ಮೂಲಕ ಜೀವನದ ರೌದ್ರವನ್ನು ಪ್ರಕಟಿಸಿದರು. 'ಹರಿ-ಜನ್ವಾರ'ದಲ್ಲಿ ತಾತಾಚಾರಿ ಹಾಗೂ ವಸಂತ ಇವರಿಬ್ಬರ ಸಂಭಾಷಣೆಯಲ್ಲಿ ಈ ಮಾತು ಸ್ಪಷ್ಟವಾಗಿ ಗೋಚರಿಸುತ್ತದೆ. "ಓಹೋ ಮಾವ ಅಳಿಯಾ ಒಬ್ಬರಿಗೊಬ್ಬರು ನಮಸ್ಕಾರ ಮಾಡೋ ರೀತಿ ಏನಿದು?" ಎಂದು ಅಂತಪ್ಪನೊಡನೆ ನಾವೂ ದಿಙ್ಮೂಢರಾಗಬೇಕಾಗುತ್ತದೆ. ಮಾವ ಅಳಿಯಂದಿರ ಅವಿವೇಕದ ಸಂಬಂಧಕ್ಕೆ ಅಳಬೇಕೋ ನಗಬೇಕೋ ತಿಳಿಯುವದಿಲ್ಲ. ತಾತಾಚಾರಿ ಯಮುನಾಳೊಡನೆ ಆಡಿದ ಸರಸದ ಮಾತುಗಳನ್ನು ವಸಂತನೇ ಅಂತಪ್ಪನೆದುರು ಬಯಲಿಗೆಳೆಯುತ್ತಾನೆ. ಮುಂದೆ ವೇಣಕ್ಕನ ಯಾವುದೋ ಮಾತಿನಲ್ಲಿ ಅದರ ಸೂಚನೆಯನ್ನು ಕಂಡ ತಾತಾಚಾರಿ ತನ್ನ ರಹಸ್ಯ ಬಯಲಿಗೆ ಬಂದದ್ದಕ್ಕೆ ಬೆಚ್ಚುತ್ತಾನೆ. ಈ ಸನ್ನಿವೇಶಕ್ಕೆ ನಗೆ ಬಂದರೂ, ತಾತಾಚಾರಿಯ ಮನೋವೃತ್ತಿಯ ಬಗ್ಗೆ ಹೇಸಿಗೆ ಹುಟ್ಟಿ ಯಮುನಾಳ ದುರಂತಕ್ಕೆ ಮೈ ನಡುಗುತ್ತದೆ. ಹೊಲೆಯರ ಕೂಸು ಗಟಾರ-

ದಲ್ಲಿ ಬಿದ್ದಿರುವಾಗ, ತಾತಾಚಾರಿಗಿಂತ ಹೆಚ್ಚು ಮಡಿವಂತಿಕೆಯನ್ನು ತೋರಿಸುವ ನಬೀಸಾಬನ ಹೃದಯ-ಹೀನತೆ, ವೇಣಕ್ಕನ ಸಹಜ-ಕರುಣೆ ಇವು ಒಂದನ್ನೊಂದು ಸಂಧಿಸಿದಾಗ ನಾಟಕ ಹಾಸ್ಯ ಕರುಣಗಳ ಸಂಕರಸೃಷ್ಟಿಯಾಗುತ್ತಿದೆ. ಜೀವನದ ಸಂಕೀರ್ಣತೆ ಕಲಾತ್ಮಕವಾಗಿ ತೆರೆಯುತ್ತ ಹೋಗುತ್ತದೆ. ಶ್ರೀರಂಗರ ಈ ಅನೋಘ ಗುಣ ಇದೇ ಕಾಲಕ್ಕೆ ಬರೆದ ಅವರ 'ಸಂಸಾರಿಗ ಕಂಸ'ದಲ್ಲಿ ಹೆಚ್ಚು ಸುವ್ಯಕ್ತ ವಾಗಿದೆ. ಹೊರಗೆ ಸಂತಾನಸಂಯಮದ ಮೇಲೆ ದೀರ್ಘ ಭಾಷಣ ಮಾಡುವ ಶೀನಣ್ಣರಾಯರ ಮನೆಯ ಜೀವನದ ವಿರೋಧಾಭಾಸ ಅದರ ಹಾಸ್ಯವನ್ನು ಮರೆ ಯಿಸುವಷ್ಟು ಘೋರವಾಗಿದೆ. ರಾಮಣ್ಣನ ರುದ್ರ ಆವೇಶದೊಂದಿಗಿರುವ ಅವನ ನಿರ್ವಿಣ್ಣತೆ ಹಾಸ್ಯಾಸ್ಪದವಾಗಿದೆ. ಈ ನಾಟಕದ ಪಾತ್ರಗಳೆಲ್ಲ ತಮ್ಮ ನೆರಳಿಗೇ ಅಂಜಿ ನಡೆಯುವಂಥವುಗಳು; ಯಾಕಂದರೆ ತಿರುಳಿಲ್ಲದಿದ್ದರೂ ಈ ನೆರಳುಗಳ ಆಕಾರಗಳು ನಿಜರೂಪವನ್ನು ಮರೆಸುವಷ್ಟು ದೊಡ್ಡವಾಗಿವೆ. ಗೋಪಾಲಾಚಾರಿ ಹಾಗೂ ಪದ್ಮನಾಭಾಚಾರಿ ಇವರಿಬ್ಬರೂ ತುಳಸಿಕಟ್ಟೆಯ ಮೇಲೆ ನಡೆಸಿದ ಹರಟೆ ಯಲ್ಲಿ ಹಾಸ್ಯ ಬೇಕಾದಷ್ಟಿದೆ. ಆದರೆ ಮನೆಯೊಳಗೆ ನಡೆದ ದಾರುಣವಾದ ಸಂಗತಿಯ ಕಪ್ಪು ನೆರಳು ಈ ಹಾಸ್ಯದ ಮೇಲೆ ಬಿದ್ದು ಅದನ್ನು ದುರಂತವಾಗಿಸಿದೆ. ಮಧ್ಯಾಹ್ನದ ರಣರಣ ಹೊಡೆಯುವ ಬಿಸಿಲಿನಂತೆ ಇಡೀ ನಾಟಕ ದುಃಸಹವಾಗಿದೆ. "ಪ್ರಪಂಚಪಾಣಿಪತ್ತು'ದ ಶ್ರೀಪತಿ ಇಂಥ ಹೊಸ ಬಗೆಯ ದುರಂತ-ನಾಯಕನಾಗಿ ನಮ್ಮ ಮನಸ್ಸನ್ನು ತುಂಬುತ್ತಾನೆ. ಅಣ್ಣತಮ್ಮಂದಿರು ಪಾಲಾಗಬೇಕಾಗುವ ಒಂದು ಸಹಜ ಸಂಗತಿ, ಒಂದು ಸಮಸ್ಯೆಯಾಗಿ ಪರಿಣಮಿಸುತ್ತದೆ. ಅದರಿಂದುಂಟಾಗುವ ಪರಿಸ್ಥಿತಿ ಭೀಕರವಾಗಿದೆ. ಆದರೆ ಶ್ರೀಪತಿ ಎಂಥ ಅಸಹನೀಯವಾದ ಪರಿಸ್ಥಿತಿ ಯನ್ನೂ ಲಘುವಾಗಿ ಕಂಡು ಅದರ ವಿಷಮತೆಯನ್ನು ಇನ್ನೂ ಹೆಚ್ಚಿಸುತ್ತಾನೆ. ಅದೊಂದೇ ಉಪಾಯವೆಂಬಂತೆ ಪ್ರಾಮಾಣಿಕತೆಯಿಂದ ವರ್ತಿಸುತ್ತಾನೆ. ಈ ಹೇಡಿ ತನದಂತೆ ಕಾಣುವ ಧೈರ್ಯವೊಂದೇ ನಮಗೆ ಆಧಾರವೆಂಬಂತೆ ವೇದಾಂತ ಹೇಳು ತ್ತಾನೆ. ಕೊನೆಗೆ ಎಲ್ಲ ಅವಿವೇಕದ ಪರಿಣಾಮ ರಮಾಳ ಮರಣದಲ್ಲಿ ಆದಾಗ ಅದನ್ನು ಮೊದಲೇ ಊಹಿಸಿದವನಂತೆ ಹುಚ್ಚುಚ್ಚಾಗಿ ಹಾಡುತ್ತಾನೆ. ಸೀರೆಯನ್ನು ಧೋತರ ದಂತೆ ಉಟ್ಟುಕೊಂಡು, ಖಣದ ಶರ್ಟೊಂದನ್ನು ಹಾಕಿಕೊಂಡ ಈ ಅಸಂಬದ್ಧ ದುರಂತ-ನಾಯಕ, ಅತ್ಯಂತ ಧೈರ್ಯದಿಂದ ಮನುಷ್ಯನ ಆಂತರಿಕ ಅಸಹಾಯತೆ ಯನ್ನು ಚಿತ್ರಿಸುವ ವಿಡಂಬನಕಾರನೂ ಆಗಿದ್ದಾನೆ.

'ಹರಿಜನ್ವಾರ', 'ಸಂಸಾರಿಗ ಕಂಸ', 'ನರಕದಲ್ಲಿ ನರಸಿಂಹ', 'ಪ್ರಪಂಚ ಪಾಣಿಪತ್ತು' ಶ್ರೀರಂಗರ ಈ ನಾಲ್ಕು ನಾಟಕಗಳಲ್ಲಿ ಇಂಥ ರುದ್ರತೆಯ ವಾತಾವರಣ ಇದೆ. ಜೀವನದ ಮೌಲ್ಯಗಳೆಲ್ಲ ವಿಪರೀತ ಅರ್ಥವನ್ನು ಪಡೆದಿರುವದನ್ನು ಇಲ್ಲಿ ಕಾಣ ಬಹುದಾಗಿದೆ. ಕಲಿತ, ಕಲಿಯದ, ಅರ್ಧ ಕಲಿತ ವ್ಯಕ್ತಿಗಳೆಲ್ಲ ಯಾವುದೋ ಮೂಲಭೂತ ಅಜ್ಞಾನದಲ್ಲಿ ಸಿಕ್ಕು ಬೇಗುದಿಗೊಳ್ಳುತ್ತಿದ್ದಾರೆ. ಅಂತೇ ಕೈಗೆ ಬಂದ ಹೊನ್ನು ಕೂಡ ಮಣ್ಣಾಗುತ್ತದೆ. ಬದುಕಿನ ಸರಿಯಾದ ತಿಳಿವು ದೊರೆಯದಿರುವದೇ ಈ ಎಲ್ಲ ದುಃಖ ಹಾಗೂ ನಗೆಗೇಡಿತನಕ್ಕೆ ಕಾರಣವೆಂದು ಶ್ರೀರಂಗರ ವಾದ. ಹೊರಗಿ

ನಿಂದ ಬಂದ ಯಾವ ಕಾರಣಗಳೂ ಅಲ್ಲ, ಈ ಮೂಲಭೂತ ಅಜ್ಞಾನದಿಂದಲೆ ಸಾಮಾಜಿಕ ಜೀವನ ಅವ್ಯವಸ್ಥೆಗೀಡಾಗಿದೆ. ನಾಟಕಗಳಲ್ಲಿ ಚಿತ್ರಿತವಾದ ಜಗತ್ತು ಅದರ ಚಿತ್ರವನ್ನು ಕೊಡುತ್ತದೆ. ಜಾತೀಯತೆ, ಗುಲಾಮಗಿರಿ, ಅರ್ಥವನ್ನು ಕಳೆದುಕೊಂಡ ಧರ್ಮ, ಬಡತನ, ದಾಂಭಿಕತೆ ಈ ಲೋಕವನ್ನು ಹಿಗ್ಗಾಮುಗ್ಗಾ ಎಳೆಯುತ್ತಲಿವೆ; ಜೀವಂತ ದೆವ್ವಗಳಾಗಿ ಕಾಡುತ್ತವೆ. ವಿಧಿಯೂ ಅಲ್ಲ, ಸ್ವಭಾವವೂ ಅಲ್ಲ, ನೋಡುವ ಕಣ್ಣನ್ನು ಮನುಷ್ಯರೆಲ್ಲರೂ ಕಳೆದುಕೊಂಡಿರುವದೇ ಈ ದುರಂತಕ್ಕೆ ಕಾರಣವೆಂದು ಚೀರಿ ಹೇಳುವಂತೆ ಈ ನಾಟಕಗಳ ದನಿಯಿದೆ. ಅದಕ್ಕಾಗಿಯೇ ಧರ್ಮ ವಿಶೇಷವಾಗಿ ಶ್ರೀರಂಗರ ಚಟಿಕಿಗೆ ಗುರಿಯಾಗುತ್ತದೆ. ಮನುಷ್ಯನ ಉದ್ಧಾರಕ್ಕಾಗಿ ಹುಟ್ಟಿದ ಸಾಧನ ಅವನನ್ನೇ ನುಂಗಿ ನೀರು ಹಿಡಿಯುವಂತಾದರೆ ಮುಂದೇನು ಗತಿ? ಒಂದು ಕಾಲಕ್ಕೆ ವೈಭವದಿಂದ, ಅರ್ಥಪೂರ್ಣವಾಗಿ ಬಾಳಿದ ಜನತೆ, ಆ ವೈಭವದ ನೆನಪನ್ನು ಸಂಸ್ಕೃತಿಯೆಂದು ತಿಳಿದು, ಅದರ ನಿಜವಾದ ವಾರಸುದಾರರು ತಾವೆಂದು ಹೇಳಿಕೊಳ್ಳುವದೇ ಒಂದು ಕಟುಹಾಸ್ಯವಾಗಿದೆ. ಸಂಸ್ಕೃತನಾಟಕಗಳಲ್ಲಿಯ ವಿದೂಷಕನ ಸ್ಥಾನವನ್ನು ಶ್ರೀರಂಗರ 'ಆಚಾರಿ' ತುಂಬಿದ್ದಾನೆ. ಆದರೆ ಅಂತರವೇನಂದರೆ, ಶ್ರೀರಂಗರ 'ಆಚಾರಿ' ವಿದೂಷಕನಗಿಂತ ಹೆಚ್ಚು ಅಪಾಯಕಾರಿಯಾಗಿದ್ದಾನೆ. ಹಿಂದಿನ ಕಾಲದ ಮುನಿಗಳ ವ್ಯಂಗ್ಯಚಿತ್ರದಂತೆ ಕಾಣುತ್ತಾನೆ. ಧರ್ಮದ ಅರ್ಥಹೀನತೆಯ ಜೀವಂತ ಪರಿಣಾಮವಾಗಿದ್ದಾನೆ. ಇದನ್ನು ಸೂಚಿಸುವದಕ್ಕೋ ಏನೋ, ಶ್ರೀರಂಗರ ನಾಟಕಗಳ ಹಿಂದೆ ಒಂದು ಪೌರಾಣಿಕ ವ್ಯಂಗ್ಯ ಅಡಗಿರುತ್ತದೆ. 'ನರಕದಲ್ಲಿ ನರಸಿಂಹ', 'ಸಂಸಾರಿಗ ಕಂಸ', 'ನಿರುತ್ತರ-ಕುಮಾರ' ಈ ತಲೆಬರಹಗಳೇ ಧ್ವನಿಪೂರ್ಣವಾಗಿವೆ.

ಹೀಗೆ ಶ್ರೀರಂಗರ ಈ ಮೊದಲಿನ ನಾಟಕಗಳು ಅನೇಕ ಆಸೆಗಳನ್ನು ಹುಟ್ಟಿಸಿದವು. ಹೊಸ ಜಾತಿಯ ನಾಟಕದ ಪ್ರವರ್ತಕರಾಗಿ 'ಶಾ:', 'ಇಬ್ಸೆನ್ನ'ರಂತೆ ಬರೆಯಬಲ್ಲರೆಂಬ ವಿಶ್ವಾಸವನ್ನೂ ಅವರು ಹುಟ್ಟಿಸಿದರು. ಅವರ ವಿಚಾರಸರಣಿಗಿರುವ ತೀಕ್ಷ್ಣಧಾರೆ, ಅವರ ಹಾಸ್ಯಕ್ಕಿರುವ ಮೊನೆ ಎಲ್ಲವೂ ಕಣ್ಣುಕುಕ್ಕಿಸಿದವು. ಪಾತ್ರಸೃಷ್ಟಿ ಹಾಗೂ ಸಂವಿಧಾನರಚನೆಯಂತೆಯೇ ಸಮಸ್ಯೆಯೂ ನಾಟಕದ ಮಹತ್ವದ ಅಂಗವಾಗಿ ಅವರಲ್ಲಿ ಬಂದಿತು. ಆದರೆ 'ಸಂಧ್ಯಾಕಾಲ'ವಾದ ಮೇಲಿನ ಇತ್ತೀಚಿನ ಯಾವ ನಾಟಕವೂ ಈ ಆಸೆಗಳನ್ನು ಪೂರ್ಣಗೊಳಿಸಲು ಸಮರ್ಥವಾಗಲಿಲ್ಲ. ತಮ್ಮ ಪ್ರತಿಭೆಯ ಸಂಧ್ಯಾಕಾಲ ಪ್ರಾರಂಭವಾಯಿತೆಂದು ಅವರೇ ಆ ನಾಟಕದ ಮುನ್ನುಡಿಯಲ್ಲಿ ಒಪ್ಪಿಕೊಂಡಿದ್ದಾರೆ. ಇಂಥ ಪರ್ಯವಸಾನಕ್ಕೆ ಕಾರಣವೇನಾಯಿತೋ ಹೇಳುವದು ಬಿಗಿಯಾದ ಮಾತು. ಬಹುಶಃ ಶ್ರೀರಂಗರ ನಾಟಕದ ರೀತಿಗೆ ಒಗ್ಗುವ ಸಮಸ್ಯೆಗಳೇ ನಮ್ಮ ಜೀವನದಲ್ಲಿ ಇಲ್ಲದಾಗಿರಬೇಕು.

'ಸಂಧ್ಯಾಕಾಲ'ದ ವಸ್ತುವೇ ಶ್ರೀರಂಗರ ನಾಟಕತಂತ್ರವನ್ನು ವಿಫಲಗೊಳಿಸುವಂತಹದಾಗಿದೆ. ಅರ್ಥಹೀನವಾದ ಬ್ರಾಹ್ಮಣ್ಯದ ವ್ಯಂಗ್ಯಚಿತ್ರವನ್ನು ಕೊಡಲು ಶ್ರೀರಂಗರು ಇಲ್ಲಿ ಪ್ರಯತ್ನಿಸಿದ್ದಾರೆ. ಪೆನ್ಶನ್ ಪಡೆದ ಮೇಲೆ ಧರ್ಮಜಾಗೃತಿಯಾಗಿ, ಸಂಧ್ಯಾವಂದನೆಯಂಥ ಪವಿತ್ರಕರ್ಮದಲ್ಲಿ ತೊಡಗಲೆಳಸುವ ಮುದುಕ ಇನ್ನೂ

ನಂಜಾಸಾನಿಯ ಹುಚ್ಚನ್ನು ಬಿಟ್ಟಿಲ್ಲ. ಗತಜೀವನದ ಚಟ ಅವನಿಗೆ ಮೈಯುಂಡಿದೆ. ಅವನ ಮಗ ಪುಟ್ಟು–ಧರ್ಮಲಂಡ–ಬಾಲವಿಧವೆಯೊಬ್ಬಳನ್ನು ಮದುವೆಯಾಗ ಬಯಸುತ್ತಾನೆ. ಆದರೆ ಅದೆಲ್ಲ ಅಪ್ಪನಿಗೆ ತಿಳಿಯದೆ ಸಾಗಿದ ವ್ಯವಹಾರ. ಈ ನಡುವೆ ಆಚಾರ್ಯರ ವೇಷದಲ್ಲಿ ಬಂದ ಪುಟ್ಟುವಿನ ಗೆಳೆಯ ವೆಂಕಣ್ಣ ವಿನೋದವನ್ನು ಕೆಣಕಿ ನಾಟಕವನ್ನು ಮುಂದುವರಿಸುತ್ತಾನೆ. ಮುದುಕನ ಹೆಂಡತಿ ಹಾಗೂ ಧರಿಯಪ್ಪ ಪೋಷಕಪಾತ್ರವಾಗಿ ಬರುತ್ತಾರೆ. ಇಡೀ ನಾಟಕವನ್ನು ಓದಿ ಮುಗಿಸಿದಾಗ ಇಂಥ ವಿಡಂಬನಕ್ಕೆ ಅರ್ಥವೇನೆಂದು ಕೇಳುವಂತಾಗುತ್ತದೆ. ಹಿಂದಿನ ನಾಟಕಗಳಲ್ಲಿ ಸಮ ಸ್ಯೆಗಳು ಸಾಮಾಜಿಕವಾಗಿದ್ದವು. ಇಲ್ಲಿ ವೈಯಕ್ತಿಕವಾಗಿವೆ. ಮೊದಲ ನಾಟಕಗಳ ಲ್ಲಿಯ ದಾಂಭಿಕತೆ ಹಾಗು ಅಜ್ಞಾನಗಳು ವಿನಾಶಕವಾಗಿದ್ದವು. ಮೇಲಾಗಿ ದೊಡ್ಡ ರಾಯರು, ತಾತಾಚಾರಿ, 'ಪ್ರಪಂಚಪಾಣಿಪತ್ತ'ದ ಅಣ್ಣ-ತಮ್ಮಂದಿರು ಇವರೆಲ್ಲ ಅಪಾಯವನ್ನುಂಟುಮಾಡಬಲ್ಲ ವ್ಯಕ್ತಿಗಳು ಮತ್ತು ಸತ್ವಶಾಲಿಗಳು. ಶ್ರೀಪತಿಯ ಸತ್ವಹೀನತೆಯಲ್ಲಿಯೂ ಅಲೌಕಿಕ ಸತ್ವವಿದೆ. ಆದರೆ 'ಸಂಧ್ಯಾಕಾಲ'ದ ವ್ಯಕ್ತಿಗಳೆಲ್ಲ ಕೆಳಮಟ್ಟದವು. ಇಲ್ಲಿಯ ಮುದುಕನನ್ನು ನೋಡಿ ಕನಿಕರ ಉಂಟಾಗುತ್ತದೆ. ಅವನ ಧರ್ಮಜಾಗೃತಿ ಹಾಸ್ಯಾಸ್ಪದವಾಗಿರಬಹುದು, ಆದರೆ ಅದು ಬದುಕನ್ನು ಕೆಡಿಸು ವಷ್ಟು ವಿನಾಶಕವಾಗಿಲ್ಲ. ನಾಟಕದ ತಿರುಳು ಬದಲಾದರೂ ತಂತ್ರ ಬದಲಾಗದಿರು ವದೇ ಈ ನಾಟಕದ ದೋಷವಾಗಿದೆ.

ಶ್ರೀರಂಗರ ಮುಂದಿನ ನಾಟಕಗಳೆಲ್ಲ ಇದೇ ರೀತಿಯಾಗಿ ತಪ್ಪುದಾರಿಯಲ್ಲಿ ನಡೆದುಬಿಟ್ಟವು. ಅದೇ ಜಾತಿಯ ಪಾತ್ರಗಳು, ಅದೇ ರೀತಿಯ ಸನ್ನಿವೇಶದಲ್ಲಿ ಬೇರೊಂದು ಸಮಸ್ಯೆಯನ್ನು ಚರ್ಚಿಸಲು ಬಂದಾಗ ಉಂಟಾಗುವ ಆಭಾಸವನ್ನು ಈ ನಾಟಕಗಳಲ್ಲಿ ಕಾಣುತ್ತೇವೆ. 'ಜರಾಸಂಧಿ' ಯಲ್ಲಿ ಮೂರು ತಲೆಮಾರಿನ ಜೀವನ ವನ್ನು ಐತಿಹಾಸಿಕವಾಗಿ ಚಿತ್ರಿಸಲಾಗಿದೆಯೆಂದು ಹೇಳಲಾಗಿದೆ. ಆದರೆ ಅಲ್ಲಿ ಬರುವ ಪಾತ್ರಗಳನ್ನು ಆಯಾ ಕಾಲದ ಮಾದರಿಗಳೆಂದು ತಿಳಿಯುವದೇ ಕಠಿಣವಾಗುತ್ತದೆ. ಅವು ಮಾದರಿಗಳಾಗದಿದ್ದರೆ ಐತಿಹಾಸಿಕತೆಯನ್ನು ಎಲ್ಲಿ ಕಾಣಬೇಕು ? ಪಿತ್ತದ ಪಾಂಡಪ್ಪ ತನ್ನ ಸಂಸ್ಕಾರಕ್ಕೆ ತಕ್ಕಂತೆ ಮೊಮ್ಮಗಳೊಂದಿಗೆ ಸಲಿಗೆಯಿಂದ ವರ್ತಿಸ ಬೇಕಾಗಿತ್ತು. ಆದರೆ ಅವನು ಅವಳೊಂದಿಗೇ ಎಲ್ಲಿಲ್ಲದ ಸಭ್ಯತೆಯಿಂದ ವರ್ತಿಸು ತ್ತಾನೆ. ಬಿಂದೂರಾಯನಂತೂ ತೀರ ಅಸಂಭವನೀಯವಾದ ವ್ಯಕ್ತಿಯಾಗಿದ್ದಾನೆ. ಉಲಕ್ಷ್ಯವೊಂದನ್ನು ಬಿಟ್ಟರೆ ಬೇರೆ ಯಾವ ಗುಣವೂ ಅವನಲ್ಲಿ ಕಾಣದಿರುವದು ಸೋಜಿಗವಾಗಿದೆ. ಇದನ್ನೇ ಅವನ ಕಾಲದ ಪ್ರಾತಿನಿಧಿಕ ಗುಣವೆಂದು ಹೇಗೆ ನಂಬ ಬೇಕು ? ಸುಬ್ಬಣ್ಣನ ಅನಿಶ್ಚಯ ಹಾಗೂ ಭಾವನಾವಶತೆಗಳು ಅಸಂಭವವಲ್ಲದಿದ್ದರೂ ಸುತ್ತಲಿನ ಸನ್ನಿವೇಶಕ್ಕೆ ಹೊಂದಿಕೆಯಾಗುವದಿಲ್ಲ. ಅನಂತ ಹಾಗೂ ಚನ್ನ ಇವರಿ ಬ್ಬರೂ ನಾಟಕದ ದೃಷ್ಟಿಯಿಂದ ಅನವಶ್ಯಕವೆನಿಸಿ ಕೇವಲ ರಂಗಭೂಮಿಯ ಸಲಕ- ರಣೆಗಳಾಗಿ ಕಾಣುತ್ತಾರೆ. ವಿಂಗಿನ ಆಚೆಗೆ ಪಡದೆ ಎಳೆಯುವವರು ಮಾಡುವ ಕೆಲಸ ವನ್ನೇ ಇವರು ರಂಗದ ಮೇಲೆ ಮಾಡುತ್ತಾರೆ. ಇಡೀ ನಾಟಕದ ಕ್ರಿಯೆ ಚಹ ಕುಡಿ- ದೇಳುವದರಲ್ಲಿಯೇ ಮುಗಿಯುವದು ಪ್ರಶಸ್ತವೆನಿಸುವದಿಲ್ಲ. ನಾಟಕ ಚರ್ಚಾತ್ಮಕ

ವೆನ್ನಬೇಕೆಂದರೆ ಚರ್ಚೆ ಹುಟ್ಟಿ, ಬೆಳೆದು, ಮುಕ್ತಾಯಗೊಳ್ಳುವದಿಲ್ಲ. ಇಷ್ಟೆಲ್ಲ ಮಾಡಿಯೂ ಕೊನೆಗೆ ಆದದ್ದೇನು ? ಮನಸ್ಸಿನ ತೊಡಕು ಮನಸ್ಸಿನಲ್ಲಿಯೇ ಉಳಿದು ಬಿಡುತ್ತದೆ. ಸುಬ್ಬಣ್ಣ ಹಾಗೂ ಮಂದಾಕಿನಿಯರ ಸುಸೂತ್ರದ ಮದುವೆಗೆ ಇಷ್ಟೆಲ್ಲ ಬರವಣಿಗೆ ಕಾರಣವಿತ್ತೇ ಎಂದು ಅನಿಸುತ್ತದೆ. ನಾಟಕದ ಪರಿಣಾಮ ಕೂಡ ಸಪ್ಪಗಾಗಿ ಬಿಡುತ್ತದೆ.

'ಶೋಕಚಕ್ರ' ಇಂಥ ಅವನತಿಯ ಕಾಲದಲ್ಲೂ ಮೂಡಿಬಂದ ಒಳ್ಳೆಯ ನಾಟಕವಾಗಿದೆ. ಜಯರಾಯನಂಥ ಒಬ್ಬ ಪ್ರಾಮಾಣಿಕ ವ್ಯಕ್ತಿಯ ಸುತ್ತಲೂ ಕತೆ ಕಟ್ಟಲಾಗಿದೆ. ಜಯರಾಯ ಅನೇಕ ಹೋರಾಟಗಳನ್ನು ಒಳಗಿಟ್ಟುಕೊಂಡರೂ ಮೌನವಾಗಿದ್ದಾನೆ. ಅವನ ಹಾಗೂ ಅವನ ಸುತ್ತಲಿನ ವಾತಾವರಣ ಇವುಗಳ ನಡುವೆ ನಡೆದ ಸೂಕ್ಷ್ಮವಾದ ಹೋರಾಟ ಮನುಕುಲದ ಹೋರಾಟವನ್ನೇ ಸಾಂಕೇತಿಕವಾಗಿ ನಿರೂಪಿಸುತ್ತದೆ. 'ಹರಿಜನ್ವಾರ'ದಲ್ಲಿ ಬೇರೆ ಬೇರೆ ಜಾತಿಯ ಹೋರಾಟಗಳು ಒಂದನ್ನೊಂದು ಸಂಧಿಸಿ ಚಕ್ರವ್ಯೂಹವನ್ನು ರಚಿಸಿದ್ದರೆ, ಇಲ್ಲಿ ಅವುಗಳ ತರಂಗ-ಗತಿಯನ್ನು ಕಾಣಬಹುದಾಗಿದೆ. ಜಯರಾಯನ ಒಳತೋಟಿ ನಡೆದಿರುವಾಗಲೇ ಗಾಂಧೀಜಿಯವರ ಮರಣದ ಸುದ್ದಿ ಬರುವದು, ಅವನ ಸುಪ್ತ ನಿರಾಶೆಗೆ ಮೂರ್ತತೆಯನ್ನು ತಂದುಕೊಡುತ್ತದೆ. ಆದರೆ ಇಲ್ಲಿಯೂ ಶ್ರೀರಂಗರ ಮಾನಸಿಕ ಬದಲಾವಣೆಯ ಚಿತ್ರ ನಿಚ್ಚಳವಾಗಿ ಮೂಡದೆ ಅವರ ನಾಟಕದ ಪದ್ಧತಿ ತನ್ನ ಉದ್ದೇಶವನ್ನು ಎಂದೋ ಪೂರ್ತಿಗೊಳಿಸಿದೆಯೆಂಬ ಮಾತು ಇಲ್ಲಿ ಗೊತ್ತಾಗುತ್ತದೆ. ಇಂಥ ನಾಟಕಗಳಿಗೆ ಬೇರೊಂದು ರೀತಿಯ, ಹೆಚ್ಚು ಸೂಕ್ಷ್ಮವಾದ ರೀತಿ ಬೇಕಾಗಿತ್ತು. ಶ್ರೀರಂಗರ ಪ್ರಾಮಾಣಿಕವಾದ ಉತ್ಕಟತೆಯೊಂದೇ ಈ ನಾಟಕವನ್ನು ಅರ್ಥಹೀನವಾಗದಂತೆ ನೋಡಿಕೊಂಡಿದೆ.

ಶ್ರೀರಂಗರ – ಈಗಿನ ಮಟ್ಟಿಗಂತೂ – ಕೊನೆಯ ನಾಟಕವಾದ 'ಜೀವನ ಜೋಕಾಲಿ', 'ಜರಾಸಂಧಿ'ಯಂತೆಯೇ ಒಣ ಚರ್ಚೆಯಾಗಿದೆ. ಇಲ್ಲಿಯೂ ಹಳೆ-ಹೊಸತುಗಳ ಹೋರಾಟವಿದೆ. ಆದರೆ ಎರಡೂ ಪಕ್ಷಗಳಲ್ಲಿ ಬಲವಿಲ್ಲದ ಮೂಲಕ ಅದು ಹೋರಾಟದಂತೆ ಕಾಣುವದೇ ಇಲ್ಲ. ಸುಬ್ಬಣ್ಣ ಹಾಗೂ ನಾರಾಯಣಪ್ಪನಷ್ಟೇ, ಹೊಸ ಕಾಲದ ಹುಡುಗರೂ ಬಲವಿಲ್ಲದವರಂತೆ ಕಾಣುತ್ತಾರೆ. ಇದರಿಂದಾಗಿ ತಂತ್ರದ ಕಣ್ಣುಮುಚ್ಚಾಣಿಕೆಯಾಟ ಕೇವಲ ಒಂದು ಚಮತ್ಕಾರವಾಗಿ ಮಾತ್ರ ಕಾಣುತ್ತದೆ. ಕೊನೆಯ ಭಾಗದಲ್ಲಿ ನಾಟಕ ಅನವಶ್ಯಕ ಗೊಂದಲದಿಂದ ಕೂಡಿದೆ. ನಾಟಕದಲ್ಲಿ ಹೇಳಿಕೊಳ್ಳುವಂಥ ಸಮಸ್ಯೆಯೂ ಇಲ್ಲ. ವ್ಯಂಗ್ಯ ಕರುಣಗಳೂ ಕೂಡ ಮುದಿ-ಹುಚ್ಚಿನ ಬಡಬಡಿಕೆಯಂತೆ ನಿರ್ವೀರ್ಣವಾಗಿವೆ.

ಹಾಗಾದರೆ ಶ್ರೀರಂಗರ ಈ ಅವನತಿಗೆ ಕಾರಣವಾದರೂ ಏನು ಎಂದು ಪ್ರಶ್ನೆಯೇಳುವದು ಸಹಜವಾಗಿದೆ. ಮೊದಲಿನಿಂದಲೂ ಶ್ರೀರಂಗರದು ಬಂಡೆಬ್ಬಿಸುವ ಸ್ವಭಾವ. ಮೂರ್ತಿಭಂಜಕತೆ ಆ ಸ್ವಭಾವಕ್ಕೆ ಸಹಜವಾದದ್ದು. ಆಗ ಅವರು ಆರಿಸಿಕೊಂಡ ನಾಟಕದ ರೀತಿಯೂ ಸಹಜವಾಗಿತ್ತು. ಆದರೆ ಮುಂದೆ ಅವರ ಸ್ವಭಾವದಲ್ಲಾದ ಬದಲಾವಣೆಗೆ ತಕ್ಕಂತೆ ಅವರ ರೀತಿಯಲ್ಲಿ ಬದಲಾವಣೆಯಾಗ-

ಲಿಲ್ಲ. ಯಾವ ಮಾರ್ಗವೂ ಲೇಖಕನ ವ್ಯಕ್ತಿತ್ವದೊಂದಿಗೆ ಬೆಳವಣಿಗೆಯನ್ನು ಪಡೆಯಬೇಕಾದದ್ದು ಅತ್ಯಗತ್ಯವಾಗಿದೆ. ಮೊದಲಿನ ನಾಟಕಗಳನ್ನು ಬರೆಯುವಾಗ ಶ್ರೀರಂಗರು ತಮ್ಮ ಉತ್ಕಟವಾದ ಮನೋಗತವನ್ನು ನಾಟಕಗಳ ಮೂಲಕ ಹೇಳಬೇಕಾದ ಅವಶ್ಯಕತೆಯಿತ್ತು. ಆದ್ದರಿಂದಲೇ ಎಷ್ಟೋ ದೋಷಗಳಿದ್ದರೂ ಆ ನಾಟಕಗಳ ಉತ್ಕಟತೆಗೆ ಕುಂದು ಬಂದಿಲ್ಲ. ಬರಬರುತ್ತ ಉದ್ದೇಶ ಬದಲಾದರೂ ರೀತಿ ಮೊದಲಿನದೇ ಉಳಿದುಬಿಟ್ಟಿತು. ಮೊದಲು ಕಣ್ಣಿಗೆ ಕಾಣದಿದ್ದ ದೋಷಗಳು ಈಗ ಸ್ಪಷ್ಟವಾಗಿ ಗೋಚರಿಸತೊಡಗಿದವು. ಎಲ್ಲ ವಾಸ್ತವಮಾರ್ಗದ ನಾಟಕ-ಗಳಲ್ಲಿಯೂ ಪಾತ್ರ ಹಾಗು ಸಂವಿಧಾನಗಳಲ್ಲಿ ಅಭಿನ್ನತೆ ಇರಲೇಬೇಕು. ಅಪರಿ-ಹಾರ್ಯತೆ ಜೀವನದ ಮುಖ್ಯ ಲಕ್ಷಣವಾಗಿರುವಂತೆಯೇ ನಾಟಕದಲ್ಲಿಯೂ ಆಗಬೇಕು. ನಾಟಕದ ಜಗತ್ತು ಪರಿಮಿತವಾಗಿದ್ದರೂ ಅದರ ಸಮಗ್ರತೆಗೆ ಕುಂದು ಬರಬಾರದು. ಪಾತ್ರಗಳು ಸಜೀವವಾಗಿ ಜೀವನದಲ್ಲಿಯಷ್ಟೇ ನಿಜವಾಗಿದ್ದರೆ ಸಾಲದು. ಅವು ತಮ್ಮ ನಾಟ್ಯೋದ್ದೇಶವನ್ನು ಪೂರೈಸುತ್ತಲೇ ನಾಟಕದ ವಸ್ತು-ವನ್ನೂ ಸೃಷ್ಟಿಸುತ್ತಿರಬೇಕು. ಶ್ರೀರಂಗರ ಆಮೇಲಿನ ನಾಟಕಗಳಲ್ಲಿ ಮುಖ್ಯವಾಗಿ ಈ ಕೊರತೆಯನ್ನು ನಾವು ಕಾಣುತ್ತೇವೆ. ಸಂವಿಧಾನದ ನೇಯ್ಗೆ ಉದ್ದೇಶಕ್ಕಿಂತ ಕಡಿಮೆಯಾಗಿಬಿಡುವದರಿಂದ, ಪಾತ್ರಗಳು ಅಡ್ಡಮಾತಿಗೆ ಪ್ರಾರಂಭಿಸುತ್ತವೆ. 'ಸಂಧ್ಯಾಕಾಲ'ದಲ್ಲಿಯ ವೆಂಕಣ್ಣನ ಪ್ರವೇಶ ನಾಟಕವನ್ನು ಬೇರೆ ದಿಕ್ಕಿಗೇ ಒಯ್ದು ಬಿಡುತ್ತದೆ. ಪುಟ್ಟುವಿನ ಹೊರಗಿನ ವ್ಯವಹಾರದ ಗತಿ ಏನಾಯಿತೋ ತಿಳಿದು ಬರುವದಿಲ್ಲ. 'ಜರಾಸಂಧಿ'ಯಲ್ಲಿಯ ಚನ್ನ ಹಾಗೂ ಅನಂತ, 'ಜೀವನ ಜೋಕಾಲಿ'ಯಲ್ಲಿಯ 'ಎಂ. ಬಿ.' ಈ ಪಾತ್ರಗಳು ಕೇವಲ ಮಾತಾಡಲಿಕ್ಕೆಂದೇ ರಂಗಭೂಮಿಯ ಮೇಲೆ ಬರುತ್ತವೆ. ನಾಟಕದ ರೂಪ ತನ್ನ ಅರ್ಥವನ್ನು ಇಂಥ ಹೊತ್ತಿಗೆ ಕಳೆದು ಕೊಂಡುಬಿಡುತ್ತದೆ. ಮುಖ್ಯವಾಗಿ ಶ್ರೀರಂಗರ ನಾಟಕತಂತ್ರ ತನ್ನ ಉದ್ದೇಶ ಮುಗಿದ ಮೇಲೆ, ಮುಂದಿನ ಬೆಳವಣಿಗೆಯನ್ನು ಕಾಣಲಿಲ್ಲ.

ಇಷ್ಟಾಗಿಯೂ ಶ್ರೀರಂಗರು ಈ ಕಾಲದ ಮಹತ್ವದ ನಾಟಕಕಾರರಾಗಿದ್ದಾರೆ. ಕೈಲಾಸಂರ ನಾಟಕದ ರೀತಿ ಪರಂಪರೆಯನ್ನು ನಿರ್ಮಿಸುವಂಥದಲ್ಲ. ಒಂದು ದೃಷ್ಟಿ-ಯಿಂದ ಅವರ ದಾರಿ ಅನನುಕರಣೀಯವಾದದ್ದು. 'ಕನ್ನಡಕ್ಕೊಬ್ಬನೇ ಕೈಲಾಸಂ' ಎಂಬ ಮಾತು ಈ ಅರ್ಥದಲ್ಲಂತೂ ಅಕ್ಷರಶಃ ನಿಜವಾಗಿದೆ. ಶ್ರೀರಂಗರ ನಾಟಕ ಪರಂಪರೆಯನ್ನು ನಿರ್ಮಿಸಬಲ್ಲದು. ಸಂಸ್ಕೃತನಾಟಕಗಳ ಹಿನ್ನೆಲೆಯಲ್ಲಿ ಬೆಳೆದು ಬಂದ ಅವರ ನಾಟಕ ಕ್ರಮೇಣ ಹಳೆಯ ತಂತ್ರಗಳನ್ನೆಲ್ಲ ಬೀಸಾಡಿ ಸ್ವಯಂಪೂರ್ಣ-ವಾಯಿತು. ಮಧ್ಯಮವರ್ಗದ ಸಮಾಜದ ಸ್ಥಿತಿಗತಿ ಹಾಗೂ ಸಮಸ್ಯೆಗಳು ಜೀವಂತವಾಗಿ ಇರುವ ವರೆಗೆ ಈ ಮಾದರಿಯ ನಾಟಕ ಉಳಿಯುತ್ತದೆಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಇದೇ ಮಾದರಿಯನ್ನು ಎತ್ತಿಕೊಂಡು ಅದನ್ನು ಪೂರ್ಣಗೊಳಿಸುವ ಇನ್ನೊಬ್ಬ ನಾಟಕಕಾರ ಹುಟ್ಟಬೇಕಾಗಿದೆ. ವಾಸ್ತವ ಮಾರ್ಗದ ಅನೇಕ ವೈವಿಧ್ಯಗಳನ್ನು ಈ ಜಾತಿಯ ನಾಟಕದ ಮುಖಾಂತರ ಚಿತ್ರಿಸಬಹುದಾಗಿದೆ. ಇದಕ್ಕೂ ಹೆಚ್ಚು ಶಕ್ತಿಯುತವಾದ ನಾಟಕಗಳನ್ನು ಶ್ರೀರಂಗರಿಂದಲೇ ನಾವು ಅಪೇಕ್ಷಿಸಬಹುದಾಗಿದೆ. ಇದೇ ಮಾದರಿಯಲ್ಲಿ ಬರೆದರೂ ಇತರರು ತಮ್ಮ

ವ್ಯಕ್ತಿತ್ವವನ್ನು ಸಹಜವಾಗಿ ಕಾಯ್ದುಕೊಳ್ಳಬಹುದಾಗಿದೆ. ಈ ಮಾದರಿಯ ನಾಟಕ-ದಲ್ಲಿ ಸಮಸ್ಯೆಯೇ ಮುಖ್ಯವಾದದ್ದು; ಅದರ ಮೇಲಿನ ಚರ್ಚೆ ನಾಟಕದ ಕ್ರಿಯೆ-ಯಾಗಿ, ಅಭಿವ್ಯಕ್ತಿಯಾಗಿ ಬರುತ್ತದೆ. ಇದರ ಪ್ರಯೋಜನ ಪ್ರಮುಖವಾಗಿ ವಿವೇಕದ ಜಾಗೃತಿ. ಯುರೋಪಿನಲ್ಲಿ 'ಶಾ:','ಇಬ್ಸೆನ್',ಹಾಗೂ'ಸ್ಟ್ರಿಂಡ್‌ಬರ್ಗ'ರಂಥ ನಾಟಕಕಾರರ ದಾರಿಯೂ ಇದೇ ಆಗಿದೆ. ಅನವಶ್ಯಕವಾದ ಕಲ್ಪಕತೆ, ಭಾವನಾ-ವಶತೆ, ಅರ್ಥವಿಲ್ಲದ ಕ್ರಿಯೆ ಇವುಗಳಿಂದ ತುಂಬಿದ ಹಳೆಯ ನಾಟಕಗಳಿಗೆ ಪ್ರತಿ-ಕ್ರಿಯೆಯಾಗಿಯೇ ಹುಟ್ಟಿಕೊಂಡ ದಾರಿ ಇದು. ಸಾಹಿತ್ಯದಲ್ಲಿ ವಾಸ್ತವಮಾರ್ಗ ಅಚ್ಚಳಿಯದೆ ನಿಲ್ಲಲೆಂದೇ ಬಂದದ್ದು. ಆದರೆ ಪ್ರತಿಯೊಬ್ಬ ಕಲಾವಿದನೂ ಈ ಸಂಪ್ರದಾಯಕ್ಕೆ ಹೊಸ ಮಾತುಗಳನ್ನು ಜೋಡಿಸುತ್ತಲೇ ಹೋಗಬೇಕಾದದು ಅವಶ್ಯವಾಗಿದೆ. ಶ್ರೀರಂಗರ ಈ ಮಾದರಿಯ ( tragi-comedy ) ಅವರು ಕನ್ನಡ ನಾಟ್ಯಕಲೆಗೆ ಕೊಟ್ಟ ಅಮೌಲ್ಯ ಕಾಣಿಕೆಯಾಗಿದೆ.

ಶ್ರೀರಂಗರ ನಾಟಕದ ಪ್ರಯೋಜನ ವಿವೇಕದ ಜಾಗೃತಿ ಎಂದು ಈ ಮೊದಲೇ ಹೇಳಲಾಗಿದೆ. ಈ ಭರದಲ್ಲಿ ಅದು ನಾಟಕದ ಇನ್ನೊಂದು ಮಹತ್ವದ ಅಂಶವಾದ ರಸನಿರ್ಮಿತಿಯನ್ನು ಮರೆತುಬಿಟ್ಟಿತು. ಅದಕ್ಕೆ ಶ್ರೀರಂಗರ ಬುದ್ಧಿವಂತಿಕೆಯೂ ಬಹುಮಟ್ಟಿಗೆ ಕಾರಣವಾಗಿದೆ. ವೇಣಕ್ಕ, ಸುಂದರಮ್ಮ, ಜಯರಾಯರು ಇಂಥ ಕೆಲ ಪಾತ್ರಗಳಲ್ಲಿ ಮಾತ್ರ ಮಾನವೀಯ ಅಂತಃಕರಣದ ಸೆಲೆಯನ್ನು ಗುರುತಿಸ ಬಹುದಾಗಿದೆ ಇಲ್ಲದಿದ್ದರೆ ಉಳಿದ ವ್ಯಕ್ತಿಗಳು ನಗಲಿಕ್ಕೋ, ನಗಿಸಿಕೊಳ್ಳಲಿಕ್ಕೋ ಮಾತ್ರ ಬರುತ್ತವೆ. ಹೀಗಾಗಿ ಆ ವ್ಯಕ್ತಿಗಳ ಭಾವಪ್ರಪಂಚ ಸಣ್ಣದಾಗಿ ರಸನಿರ್ಮಾಣ ಸಾಧ್ಯವಾಗುವದಿಲ್ಲ. ನಾಟಕ ಏನಿದ್ದರೂ ಕಲೆಯೆಂಬುದನ್ನು ಮರೆಯಲಾಗದು. 'ನಾನು ಉಪದೇಶಮಾಡಲಿಕ್ಕೆಂದೇ ಬರೆಯುತ್ತೇನೆ'ಂದು ಸ್ಪಷ್ಟವಾಗಿ ಹೇಳಿದ 'ಶಾ: ಕೂಡ ಈ ಮಾತನ್ನು ಮರೆಯಲಿಲ್ಲ. ಚರ್ಚಿನಲ್ಲಿಯ ವಾದ್ಯಗಳು ಕೂಡ ಶ್ರುತಿ-ಯಲ್ಲಿ ಇರಬಹುದಾದಂತೆ, ನೀತಿಪರವಾದ ವಸ್ತು ಕೂಡ ಕಲಾತ್ಮಕವಾಗಬಹು-ದೆಂದು ಅವನ ವಾದವಾಗಿತ್ತು. ಮೇಲಾಗಿ ಅದು ' ಕಲೆಗಾಗಿ ಕಲೆ ' ಎಂಬ ತತ್ವದ ಅತಿರೇಕಕ್ಕೆ ಪ್ರತಿಕ್ರಿಯೆಯಾಗಿತ್ತು. 'ಶಾ:'ನ ಎಲ್ಲ ನಾಟಕಗಳು ನೀತಿಪರವಾಗಿರು-ವಂತೆಯೇ ಕಲಾತ್ಮಕವೂ ಆಗಿವೆ. ಶ್ರೀರಂಗರ ಕೆಲ ನಾಟಕಗಳು ಈ ಮಾತನ್ನು ಮರೆತುಬಿಟ್ಟಿವೆ. 'ಶಾ:'ನಂತೆ ಶ್ರೀರಂಗರು ಯಾವ ತತ್ವವನ್ನೂ ಪ್ರತಿಪಾದಿಸಹೋಗಿಲ್ಲ ನಿಜ. ಆದರ ಬದಲಾಗಿ ಅತಿಬುದ್ಧಿವಂತಿಕೆ ಹಾಗೂ ವಿನೋದಪ್ರಿಯತೆಗಳು ಅವರ ಕೆಲವು ನಾಟಕಗಳ ಕಲಾವಂತಿಕೆಯನ್ನು ಹಾಳುಮಾಡಿವೆ. ಶ್ರೀರಂಗರ ಮಾದರಿಯಲ್ಲಿ ಕಲಾತ್ಮಕವಾದ ನಾಟಕಗಳು ಹುಟ್ಟುವದು ಸಾಧ್ಯವೆಂಬ ಮಾತನ್ನು ಬೇಂದ್ರೆಯವರ ನಾಟಕಗಳಿಂದ ಅರಿತುಕೊಳ್ಳಬಹುದಾಗಿದೆ.

ಕಾವ್ಯನಿರ್ಮಾಣದ ಅವಸರದಲ್ಲಿ ಬೇಂದ್ರೆಯವರು ನಾಟಕದ ಕಡೆಗೆ ಲಕ್ಷ್ಯ-ವೀಯದೆ ಇದ್ದದ್ದು ನಾಟಕದ ದೃಷ್ಟಿಯಿಂದಂತೂ ದುರ್ದೈವದ ಮಾತಾಗಿದೆ. ಮೊದಲಿನಿಂದಲೂ ಅವರ ಅಲಿಖಿತ ನಾಟಕಗಳು ರಸಿಕರ ಲಕ್ಷ್ಯವನ್ನು ಕೆಣಕಿ ನಿರಾಶೆ-ಗೊಳಿಸುತ್ತಿವೆ. ಇಲ್ಲಿಯವರೆಗೆ ಅವರು ಬರೆದ ನಾಟಕಗಳೂ ಏಕಾಂಕಪ್ರಯೋಗ-ಗಳಾಗಿವೆ. ಒಂದು ಸಮಗ್ರವಾದ ನಾಟಕಗಳ ಪರಂಪರೆ ಅವರಿಂದ ಬರಲಿಲ್ಲ.

ಭಾವಗೀತಕ್ಕೆ ಒಲಿದ ಅವರ ಪ್ರತಿಭೆಗೆ ದೊಡ್ಡ ನಾಟಕಗಳ ರಚನೆ ಒಗ್ಗುವದಿಲ್ಲ-ವೇನೋ ! ಹೀಗಿದ್ದರೂ, ಚಿಕ್ಕ ಏಕಾಂಕಗಳನ್ನು ಬಿಟ್ಟರೆ ಅವರು ಬರೆದ, 'ಉದ್ಧಾರ', 'ನಗೆಯ ಹೊಗೆ' ಹಾಗೂ 'ಹೊಸಸಂಸಾರ' ಈ ಮೂರು ನಾಟಕಗಳು ಕಲೆಯ ದೃಷ್ಟಿಯಿಂದ ಗಮನಾರ್ಹವಾಗಿವೆ.

ಇವುಗಳಲ್ಲಿ ಮೊದಲಿನವೆರಡು ಆವಿದ್ಧಪ್ರಯೋಗಗಳು. (ದುರಂತ-ನಾಟಕಕ್ಕೆ ಬೇಂದ್ರೆಯವರು ಕೊಟ್ಟ ಹೆಸರು). ಕೊನೆಯದು ಗಂಭೀರವಾದ ಒಂದು ಸುಕುಮಾರ ಪ್ರಯೋಗ. ಪಾಶ್ಚಾತ್ಯ ರುದ್ರ-ನಾಟಕಗಳ ರೀತಿ ಲಕ್ಷಣಗಳನ್ನು 'ಶ್ರೀ'ಯವರು ತಮ್ಮ ನಾಟಕಗಳ ಮುಖಾಂತರ ಬೆಳಕಿಗೆ ತಂದರು. ಅವರ 'ಅಶ್ವತ್ಥಾಮನ್' ಗ್ರೀಕ್ ಮಾದರಿಯಲ್ಲಿ ಬರೆದ ಒಂದು ಪೌರಾಣಿಕ ರುದ್ರ-ನಾಟಕವಾದರೆ, 'ಗದಾಯುದ್ಧ' ರನ್ನನ ಕಾವ್ಯಕ್ಕೆ ಹಾಕಿದ ಗ್ರೀಕ್ ನಾಟಕದ ಒಪ್ಪವಾಗಿದೆ. ಕೈಲಾಸಂ ಸಾಮಾಜಿಕ ವಸ್ತುವನ್ನೊಳಗೊಂಡ ಎರಡು ರುದ್ರ-ನಾಟಕಗಳನ್ನು ಬರೆದರು. ಶ್ರೀರಂಗರಂತೂ ಹಾಸ್ಯ ನಾಟಕಗಳಂತೆ ಕಾಣುವ ರುದ್ರ-ನಾಟಕಗಳನ್ನು ಬರೆದರು. ವಿನಾಯಕರು ಶೇಕ್ಸಪಿಯರ ಮಾದರಿಯ ನಾಟಕವೊಂದನ್ನು 'ಜನನಾಯಕ'ದ ಮುಖಾಂತರವಾಗಿ ತೋರಿದರು. ಹೀಗೆ ಪಾಶ್ಚಾತ್ಯ ರುದ್ರ-ನಾಟಕಗಳ ಘನತೆ ಗೌರವಗಳು, ಹೃದಯ ವೇಧಕತೆ ನಮ್ಮ ನಾಟಕಕಾರರನ್ನು ಬಹುವಾಗಿ ಸೆಳೆದವು. ಆದರೆ ಪಾಶ್ಚಾತ್ಯ ಸಾಹಿತ್ಯದಲ್ಲೇ ಈಗೀಗ ರುದ್ರ-ನಾಟಕಗಳನ್ನು ಹೇಗೆ ಬರೆಯಬೇಕೆಂಬುದು ಸಮಸ್ಯೆಯಾಗಿದೆ. ಗ್ರೀಕಸಾಹಿತ್ಯದಲ್ಲಿ ರುದ್ರ-ನಾಟಕ ಮಹಾಕಾವ್ಯದ ಜೊತೆಯಲ್ಲಿಯೇ ಬೆಳೆದು ಬಂದ ರೂಪವಾಗಿದೆ. ಆ ಕಾಲದ ವೀರಾದ್ಭುತ ಜೀವನದಿಂದ ರುದ್ರ-ನಾಟಕಕ್ಕೆ ಅನುರೂಪವಾದ ವಸ್ತು ದೊರಕುವದು ಸಾಧ್ಯವಿತ್ತು. ಕಾಲ ಬದಲಾದಂತೆ ಈ ಮಾದರಿಯ ನಾಟಕದ ಸ್ವರೂಪವೂ ಬಹುಮಟ್ಟಿಗೆ ಬದಲಾಗುತ್ತ ಬಂದಿತು. ಈ ಕಾಲದಲ್ಲಿ ಗಾಃಲ್ಸವರ್ದಿಯ ನಾಟಕಗಳಷ್ಟೇ ರುದ್ರ-ನಾಟಕದ ಧೀರೋದಾತ್ತತೆಯನ್ನು ಕಾಯ್ದುಕೊಂಡು ಬಂದಿವೆ. ಇವನ್ನು ಬಿಟ್ಟರೆ ಯುರೋಪಿನಲ್ಲಿ ಶ್ರೀರಂಗರ ಮಾದರಿಯ 'tragi-comedy ಗಳೇ ಹೆಚ್ಚಾಗಿವೆ. ಕನ್ನಡದಲ್ಲಿಯೂ ಇದೇ ಸಮಸ್ಯೆಯಾಗಿದೆ. ರುದ್ರ-ನಾಟಕದ ಘನತೆಗೆ ಸರಿದೂಗುವ ವಸ್ತುವನ್ನು ದೊರಕಿ-ಸುವದೇ ಬಿಗಿಯಾದ ಮಾತು. ಅದರಲ್ಲಿಯೂ ಭಾರತೀಯ ಸಂಸ್ಕೃತಿಯ ನೆರಳಿನಲ್ಲಿ ಬೆಳೆದ ನಮಗೆ, ಜೀವನದಲ್ಲಿಯ ದುರಂತಕ್ಕಿಂತ ಶಾಂತಿಯ ಕಡೆಗೆ ಲಕ್ಷ್ಯ ಹೆಚ್ಚು. ಸಂಸ್ಕೃತದಲ್ಲಿ ಈ ನಾಟಕಪ್ರಕಾರ ತನ್ನ ರೂಪವೈಶಿಷ್ಟ್ಯವನ್ನು ಕಾಯ್ದುಕೊಳ್ಳಲಿಲ್ಲ. 'ಉತ್ತರರಾಮಚರಿತ', 'ಮೃಚ್ಛಕಟಿಕ'ದಂಥ ನಾಟಕಗಳು ಈ ಮಾತಿಗೆ ಸಾಕ್ಷಿ-ಯಾಗಿವೆ. ಭಾಸನ 'ಊರುಭಂಗ' ಕೂಡ ಹದಿನಾರಾಣೆ ದುರಂತ-ನಾಟಕವಲ್ಲ. ಹೀಗಾಗಿ ಕನ್ನಡದಲ್ಲಿ ರುದ್ರ-ನಾಟಕಕ್ಕೆ ಜೀವನದಿಂದ ವಸ್ತುವಾಗಲಿ, ಸಾಹಿತ್ಯದಿಂದ ಪರಂಪರೆಯಾಗಲಿ ದೊರೆಯುವದು ಕಠಿಣವಾಗಿದೆ.

ಈ ಸಮಸ್ಯೆಯನ್ನು ಶ್ರೀರಂಗರೇನೋ ತಮ್ಮ ರೀತಿಯಲ್ಲಿ ಬಿಡಿಸಿಕೊಂಡು ಮುಂದೆ ಸಾಗಿದರು. ಕೈಲಾಸಂರ ನಾಟಕಗಳು ಪರಿಣಾಮದ ದೃಷ್ಟಿಯಿಂದ ದುರಂತವಾಗಿದ್ದರೂ, ಅವುಗಳಲ್ಲಿಯ ದುರಂತ ಸಾಮಾಜಿಕವಾಗಿರದೆ ವೈಯಕ್ತಿಕ-ವಾಗಿದೆ. ದುರಂತ-ನಾಟಕದಲ್ಲಿ 'ಸಾಮಾನ್ಯರ ಭಾವಪ್ರಪಂಚ' (emotions of

the multitude) ಇರಲೇಬೇಕೆಂದು ಯೇಟ್ಸ್ ಹೇಳುತ್ತಾನೆ. ಪೂರ್ವಕಾಲದ ರುದ್ರ ನಾಟಕಗಳಲ್ಲಿ ಸಾಮಾನ್ಯವಾಗಿ ಅರಸನೊಬ್ಬ ದುರಂತನಾಯಕನಾಗುತ್ತಿದ್ದ. ಅವನ ಪತನ ಇಡೀ ದೇಶದ ಪತನವನ್ನೇ ನಿರೂಪಿಸಬಲ್ಲದಾಗಿತ್ತು. ಗ್ರೀಕರ ಮೇಳ-ಗೀತಗಳು, ಶೇಕ್ಸಪಿಯರನ ಉಪಕಥೆಗಳು ಸಾಮಾನ್ಯರ ದುರಂತವನ್ನು ಧ್ವನಿಸುತ್ತಿದ್ದವು. ಆಧುನಿಕ ನಾಟಕದಲ್ಲಿ ಇದೆಲ್ಲ ಅಳಿದು ಹೋಗಿದ್ದರೂ, ಸಾಮಾನ್ಯರ ದುರಂತಜೀವನವನ್ನು ಸಾಮಾಜಿಕವಾಗಿ ಇದ್ದಕ್ಕಿದ್ದಂತೆ ಚಿತ್ರಿಸಲಾಗುತ್ತದೆ. ಕೈಲಾಸಂರ ನಾಟಕದಲ್ಲಿ ಇದನ್ನು ಕಾಣಲಾಗುವದಿಲ್ಲ.

ಬೇಂದ್ರೆಯವರ ಎರಡೂ ನಾಟಕಗಳು—'ನಗೆಯ ಹೊಗೆ' 'ಉದ್ಧಾರ'—ದುರಂತ-ನಾಟಕದ ರೂಪಲಕ್ಷಣಗಳನ್ನೆಲ್ಲ ಒಳಗೊಂಡಿವೆ. 'ನಗೆಯ ಹೊಗೆ'ಯಲ್ಲಿ ನಗೆಯಿದ್ದರೂ ಅದು ಕರುಣಕ್ಕಿಂತ ಹೆಚ್ಚು ಕಟುವಾಗಿದೆ. ಈ ನಾಟಕದ ಕಥಾನಕ ಕೈಲಾಸಂರ 'ಬಹಿಷ್ಕಾರ'ವನು ಎಲ್ಲ ವಿವರಗಳಲ್ಲಿಯೂ ಹೋಲುತ್ತದೆ. ಇಲ್ಲಿಯೂ ವಯಸ್ಸಾದರೂ ಮದುವೆಯಾಗದ ಒಬ್ಬ ಹುಡುಗಿಯ ಕರುಣ-ಚಿತ್ರವೇ ಬಂದಿದೆ. ಆದರೆ ಮೇಲೆ ಹೇಳಿದಂತೆ 'ಬಹಿಷ್ಕಾರ'ದ ದುರಂತ ವೈಯಕ್ತಿಕವಾಗಿದೆ. ಸಾಮಾಜಿಕ ನೀತಿನಿಯಮಗಳು ನಿಷ್ಠುರ ಪಾತ್ರವನ್ನು ವಹಿಸಿದ್ದರೂ ಅವು ಪ್ರತ್ಯಕ್ಷ-ವಾಗಿ ರಂಗದ ಮೇಲೆ ಬರುವದಿಲ್ಲ. ನರಸೂಳ ಮದುವೆಯಾಗದಿದ್ದದ್ದಕ್ಕೆ ರಂಗಣ್ಣನ ಮನೆಗೆ ಶ್ರಾದ್ಧಕ್ಕಾಗಿ ಬ್ರಾಹ್ಮಣರು ಬರುವದಿಲ್ಲ ಅಷ್ಟೇ. ಅದನ್ನು ಬಿಟ್ಟರೆ ಉಳಿದೆಲ್ಲ ಸನ್ನಿವೇಶಗಳು ಕೌಟುಂಬಿಕವಾಗಿವೆ. ಅವಳ ಮದುವೆಯಾಗದಿದ್ದದ್ದಕ್ಕೆ ನೊಂದು-ಕೊಂಡ ಮನೆಯವರು (ವಿಶೇಷವಾಗಿ ಅಜ್ಜಿಯ 'ಯಾಕ್ಹುಟ್ಟಿದ್ಲೀ ಶನಿ') ತಮಗರಿಯದಂತೆಯೇ ಅವಳನ್ನು ಸಾವಿಗೀಡುಮಾಡುತ್ತಾರೆ. ನರಸೂ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಇಲ್ಲಿ ದುರಂತದ ಕಾರಣಗಳು ಅನಿವಾರ್ಯವಾಗಿ ಬರುವದಿಲ್ಲ. ಈ ನಾಟಕದ ಕಾರಣ ಹಾಗೂ ಪರಿಣಾಮಗಳನ್ನು, ಕೌಟುಂಬಿಕ ಭಾವನಾವಶತೆ ಬಿಗಿದುಕೊಂಡಿದೆ. 'ನಗೆಯ ಹೊಗೆ'ಯಲ್ಲಿಯ ಬಹಿಷ್ಕಾರ ನಾಟಕೀಯವಾಗಿ ಕೂಡ ಸಾಮಾಜಿಕವಾಗಿದೆ. ಅದಕ್ಕೆಂದೇ ಇಲ್ಲಿಯ ಕ್ರಿಯೆ, ಇನ್ನೊಬ್ಬರ ಮನೆ, ಬೀದಿ, ಗುಡಿ, ಸ್ಮಶಾನಗಳನ್ನು ಹೊಗೆಯಂತೆ ವ್ಯಾಪಿಸಿದೆ. ನಾಗವೇಣಿ, ಪುರಾಣದ ಆಚಾರ್ಯರು, ಇಂಥವರ ಟೀಕೆಟಿಪ್ಪಣಿಗಳೇ ಆ ಹುಡುಗಿಯ ಮನೆಯವರಿಗೆ ಅನಧಿಕೃತ ಬಹಿಷ್ಕಾರವನ್ನು ಹಾಕಿವೆ. ಈ ಸಾಮಾಜಿಕ ಚಿತ್ರಣದಿಂದ ಬೇಂದ್ರೆ-ಯವರು ಎರಡು ಉದ್ದೇಶಗಳನ್ನು ಸಾಧಿಸಿದ್ದಾರೆ. ಒಂದು, ದುರಂತದ ಕಾರಣ-ಪರಂಪರೆಯನ್ನು ಆದಷ್ಟು ಗಟ್ಟಿಮುಟ್ಟಾಗಿಸುವದು. ಸಮಾಜದ ತೋಳಗಳೆಲ್ಲ ಸುತ್ತುಗಟ್ಟಿ ಭಾಗೀರಥಿಯನ್ನು ನುಂಗಲು ಹಾತೊರೆಯುವಂತಿವೆ. ಇನ್ನೊಂದೆಂದರೆ, ಇದರ ಮೂಲಕ ಸಾಮಾಜಿಕ ಅವನತಿಯನ್ನು ಚಿತ್ರಿಸುವದು. ಈ ಎರಡನೆಯ ಉದ್ದೇಶ ದುರಂತ-ನಾಟಕದ ಮಹತ್ವದ ಅಂಗವಾಗಿದೆ. ಇದಿಲ್ಲದಿದ್ದರೆ ದುರಂತ-ನಾಟಕ ಕೇವಲ ಒಂದು ಕರುಣ-ಚಿತ್ರವಾಗಬಹುದು. 'ನಗೆಯ ಹೊಗೆ'ಯಲ್ಲಿಯ ಸಮಾಜದ ವಿಕೃತಿ ಹೇಸಿಗೆ ಬರುವಷ್ಟು ಘೋರವಾಗಿದೆ. ಇಂಥ ವಾತಾವರಣದ ಮಧ್ಯಗಲ್ಲಿ ಭಾಗೀರಥಿ ಇದ್ದೂ ಸತ್ತಂತಾಗಿದ್ದಾಳೆ; ಅವಳು ಮಾತೇ ಆಡಲಾರಳು. ಈ ನಾಟಕದ ದೋಷವೆಂದರೆ ಕೇಂದ್ರಪಾತ್ರದ ಅಸಹಾಯತೆ. ಇದರಿಂದ ನಾಟಕದಲ್ಲಿ

ಹೋರಾಟವೇ ಇಲ್ಲದಾಗಿದೆ. ಭಾಗೀರಥಿಯ ಸಾವು ಒಂದು ತಣ್ಣಗಿನ ಕೊಲೆ-ಯಾಗುವದರಿಂದ, ದುರಂತ ಸಹಿಸಲಸಾಧ್ಯವಾಗಿಬಿಡುತ್ತದೆ.

'ಉದ್ಧಾರ' ಇನ್ನೂ ಹೆಚ್ಚು ಬೆಳವಣಿಗೆಯನ್ನು ಪಡೆದ ನಾಟಕವಾಗಿದೆ. ಇಲ್ಲಿಯ ಸಮಸ್ಯೆ 'ನಗೆಯಹೊಗೆ'ಯಲ್ಲಿಯದಕ್ಕಿಂತ ಹೆಚ್ಚು ವ್ಯಾಪಕವಾಗಿದೆ. ಸಮಾಜದ ಬೇರೆ ಬೇರೆ ಪಂಗಡಗಳ ನಡುವೆ ನಡೆಯುವ ಹೋರಾಟ ನಾಟಕದ ಕ್ರಿಯೆಗೆ ಹೆಚ್ಚು ಶಕ್ತಿಯನ್ನೊದಗಿಸುತ್ತದೆ. ಆದ್ದರಿಂದಲೇ 'ನಗೆಯಹೊಗೆ'ಗಿಂತ ಈ ನಾಟಕದ ಹೂರಣ ಹೆಚ್ಚಾಗಿದೆ. ಈ ನಾಟಕದ ಸಮಸ್ಯೆ ಹರಿಜನೋದ್ಧಾರದ್ದು; ಕ್ರಿಯೆಯ ಶಿಖರ ಮಂದಿರಪ್ರವೇಶದಲ್ಲಿ. ಪಾತ್ರಗಳೆಲ್ಲ ವೈಯಕ್ತಿಕವಾಗಿರದೆ ಸಾಮಾ-ಜಿಕವಾಗಿವೆ. ಹರಿಜನರ ಮಂದಿರಪ್ರವೇಶಕ್ಕೆ ಅನುಕೂಲ ಶಕ್ತಿಗಳೂ ಇವೆ, ಪ್ರತಿಕೂಲ ಶಕ್ತಿಗಳೂ ಇವೆ. ಆದರೆ ಆಧುನಿಕ ಯುಗಕ್ಕೆ ತಕ್ಕಂತೆ ಎಲ್ಲ ಶಕ್ತಿಗಳೂ ಪ್ರಾಮಾಣಿಕವಾಗಿಲ್ಲ. ಇದರಿಂದಾಗಿ ಸಮಸ್ಯೆ ಮತ್ತಿಷ್ಟು ತೊಡಕಿನದಾಗುತ್ತದೆ. ಮೊದಮೊದಲು ಮನೋರಂಜಕವಾದ ಸುದ್ದಿಯಾಗಿದ್ದು, ಜಾತೀಯತೆಯ ಅಭಿ-ಮಾನ ಕೆರಳಿ, ವೈಯಕ್ತಿಕ ಗೌರವ ಕೆಣಕಿ ಈ ಸಮಸ್ಯೆ ವಿನಾಶವನ್ನು ಕೈಮಾಡಿ ಕರೆಯುತ್ತದೆ. ನಾಟಕದಲ್ಲಿ ನಡೆಯುವ ಉಳಿದ ಸಂಗತಿಗಳೂ (ಉದಾಹರಣೆಗೆ ರುದ್ರಪ್ಪನ ಹೊಲದ ಪ್ರಕರಣ) ಜಾತೀಯತೆಯ ಬಣ್ಣವನ್ನು ಬಳಿದುಕೊಂಡು ಮುಖ್ಯ ಸಮಸ್ಯೆಗೆ ಬೆಂಬಲವಾಗಿಯೊ, ವಿರುದ್ಧವಾಗಿಯೊ ಕೆಲಸಮಾಡುತ್ತವೆ. ಮಂದಿರಪ್ರವೇಶದ ವಿರುದ್ಧವಾಗಿ ನಡೆದ ಸಭೆ, ಸ್ಪರ್ಶಾನಂದರ ಪ್ರಾರ್ಥನಾಸಭೆ, ಸಿದ್ದಪ್ಪನ ಭಜನೆಯ ಮೇಳ— ಇಂಥ ಸಾರ್ವಜನಿಕ ಘಟನೆಗಳು ಒಂದಕ್ಕೊಂದು ವಿರುದ್ಧವಾಗಿ ನಡೆಯುತ್ತ ಸಂವಿಧಾನದ ಸುಸಂಬದ್ಧತೆಯನ್ನು ಕಾಪಾಡುತ್ತವೆ. ಕೌಟುಂಬಿಕ ಸ್ವರೂಪದ ಯಾವ ಘಟನೆಯೂ ಇಲ್ಲಿ ನಡೆಯದಿರುವದು ನಾಟಕದ ಉದ್ದೇಶದ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಇಲ್ಲಿಯ ಪಾತ್ರಗಳ ವೈವಿಧ್ಯವೂ ಬೆರಗುಗೊಳಿಸುವಂಥದಿದೆ. ಕೋದಂಡರಾಯನಂಥ ತುಂಟತನವೇ ಗುಣವಾಗಿ ಉಳ್ಳ ವಕೀಲರು,ಸಮಾಜಸೇವೆಯ ನೆವದಲ್ಲಿ ಸ್ವಾರ್ಥ ಸಾಧಿಸುವ ಸ್ಪರ್ಶಾನಂದರಂಥ ಆಧುನಿಕ ಸಾಧುಗಳು, ಒಳ್ಳೆಯತನವಿದ್ದೂ ಅಂಧಶ್ರದ್ಧೆಯ ಹಿಡಿತದಲ್ಲಿ ಸಿಕ್ಕ ವಿಘ್ನೇಶ್ವರಭಟ್ಟರು ಹಾಗೂ ರುದ್ರಪ್ಪ ಇಂಥ ಜನಜಂಗುಳಿಯಿಂದಲೇ ನಾಟಕ ಗಜಬಜಿಸುತ್ತದೆ. ಪ್ರತಿವ್ಯಕ್ತಿಯ ಜಾತಿಯೂ ಅವನಾಡುವ ಮಾತಿನ ರೀತಿಯಿಂದ ಸ್ಪಷ್ಟವಾಗುತ್ತದೆ. ಯಾಕಂದರೆ ಪ್ರತಿಯೊಬ್ಬನನ್ನೂ ಜಾತೀಯತೆಯ ದೃಷ್ಟಿ-ಯಿಂದಲೇ ನೋಡಬೇಕಾಗಿದೆ. ಇಷ್ಟಿದ್ದೂ ತಿಳಿದೋ ತಿಳಿಯದೆಯೋ ಎಲ್ಲರೂ ದುರಂತದ ಜ್ವಾಲೆಗೆ ಆಕರ್ಷಿತವಾದ ಪತಂಗಗಳಾಗಿದ್ದಾರೆ. ಕೊನೆಯಲ್ಲಿ ಹಾವು ಕಡಿದು ಸಾಯುವ ವ್ಯಕ್ತಿ ದುರಗಪ್ಪನಾದರೂ,ದುರಂತ ಅವನಿಗೊಬ್ಬನಿಗೇ ಸಂಬಂಧಿಸಿಲ್ಲ. ಕೊನೆಗೆ ಸಿದ್ದಪ್ಪ ಹೇಳುವ, "ಬಿದ್ದವರು ನೀವಲ್ಲಾ, ಅಕಾ ಅಲ್ಲೆ ನಿಂತಾರ ನೋಡು ಜೋಡಿಲೆ "ಎಂದು ಪ್ರಾರಂಭವಾಗುವ ಮಾತಿನಲ್ಲಿ ದುರಂತದ ಸಾಮಾಜಿಕತೆ ಕಣ್ಣಿಗೆ ಕಾಣುವಷ್ಟು ಸ್ಪಷ್ಟವಾಗಿದೆ. ಜನಾಂಗದ ಮಧ್ಯದಲ್ಲಿ ಹುಟ್ಟಿದ ಅವಿವೇಕ ಇಡೀ ಜನಾಂಗವನ್ನು ದುರಂತದ ಸುಳಿಯಲ್ಲಿ ಕೆಡಹುವ ಸನ್ನಿವೇಶ ಕರುಣ ಭಯಗಳನ್ನು ಹುಟ್ಟಿಸುತ್ತದೆ. 'ಉದ್ಧಾರ' ಪಾಪವಿಲ್ಲದಲ್ಲಿ ಪಾಪದ ಭ್ರಮೆಯನ್ನು ಹುಟ್ಟಿಸಿ,

ತಮ್ಮ ಸ್ಪರ್ಶದಿಂದ ಅದನ್ನು ಪುಣ್ಯವಾಗಿಸಲು ಹೊರಟ ಪಾಪ-ಜೀವಿಗಳ ಕತೆಯಾಗಿದೆ. ಈ ವಾತಾವರಣದಲ್ಲಿ ಬುದ್ಧಿವಂತಿಕೆ, ಧರ್ಮಶ್ರದ್ಧೆ, ಹಣ ಮೊದಲಾವ ಪುರುಷಾರ್ಥಗಳು ಕೂಡ ನುಗ್ಗಿ ಬರುವ ವಿನಾಶದ ವೇಗವನ್ನು ಇನ್ನಷ್ಟು ಹೆಚ್ಚು ಮಾಡುತ್ತವೆ. ಕೊನೆಗೆ ಮಂದಿರದಲ್ಲಿ ಆಕಸ್ಮಿಕವಾಗಿ ಬಂದ ಹಾವು ಮನುಷ್ಯನಿಗೆ ದೊರಿದ ನ್ಯಾಯವೊಂದು ಕುರುಡಾಗಿಲ್ಲವೆಂಬ ಮಾತಿಗೆ ಸಂಕೇತವಾಗಿ ಮಾತ್ರ ಬರುತ್ತದೆ. ಆದ್ದರಿಂದ ಆ ಸನ್ನಿವೇಶ ಗೂಢದಿಂದ ತುಂಬಿದೆ. ಹೀಗೆ ನೈಜತೆ, ಜೀವಂತತನ, ಸಂಕೀರ್ಣತೆ, ರುದ್ರ-ನಾಟಕಕ್ಕೊಪ್ಪುವ ರಸಪ್ರಕರ, ಸಾಂಕೇತಿಕತೆ, ಕಾವ್ಯಮಯತೆ ಇವುಗಳಿಂದ ತುಂಬಿದ ಈ ನಾಟಕದ ಗತಿಚಿತ್ರ ( pattern ) ಅಸಾಮಾನ್ಯವಾಗಿದೆ. ಅನೇಕ ದಾರಿಗಳು ಒಂದೆಡೆಗೆ ಕೂಡಿದಂತೆ, ಈ ನಾಟಕದ ವಿವೇಕ-ಅವಿವೇಕದ ದಾರಿಗಳು ಗುಡಿಯ ಕಡೆಗೆ ಕೇಂದ್ರೀಕೃತವಾಗಿವೆ. ಒಂದು ದುರಂತ ಆವೇಶ ಇಡಿಯ ಪಾತ್ರವರ್ಗವನ್ನು ನುಂಗಿ ನೀರು ಹಿಡಿಯುತ್ತದೆ. ಈ ನಾಟಕಕ್ಕೆ ಮೊಸಲಾಗಿರುವ ಕುಶಲಕರ್ಮ, 'ಇಬ್ಸೆನ್', 'ಸಿಯಾನ್-ಓ-ಕ್ಯಾಸೀ' ಮೊದಲಾದವರ ಶ್ರೇಷ್ಠಕೃತಿಗಳನ್ನು ನೆನಪಿಗೆ ತಂದು ಕೊಡುತ್ತದೆ.

'ಉದ್ಧಾರ'ಕ್ಕಿಂತ 'ಹೊಸ ಸಂಸಾರ'ದ ಬೆಳವಣಿಗೆ ಹೆಚ್ಚು ಏಕಮುಖವಾಗಿದೆ. 'ಉದ್ಧಾರ'ದ ಸಮಸ್ಯೆ ಸಾರ್ವಜನಿಕವಾಗಿರುವದರಿಂದ ಬಹಿರಂಗ ಸ್ವರೂಪವುಳ್ಳದ್ದು. 'ಹೊಸ ಸಂಸಾರ'ದ ಸಮಸ್ಯೆ ಅಂತರಂಗಕ್ಕೆ ಮಾತ್ರ ಸಂಬಂಧಿಸಿದ್ದಾಗಿದೆ. ಈ ನಾಟಕದ ಕತೆ ಶ್ರೀರಂಗರ 'ಜರಾಸಂಧಿ'ಯನ್ನು ಬಹುಮಟ್ಟಿಗೆ ಹೋಲುತ್ತದೆ. ಅದೇ ಜಾತಿಯ ಅಷ್ಟೇ ಪಾತ್ರಗಳಿವೆ. (ಎರಡನೆಯ ಅಂಕಿನಲ್ಲಿ ಒಂದು ಪಾತ್ರ ಹೆಚ್ಚಾಗುತ್ತದೆ.) ಮೊದಲನೆಯ ಅಂಕಿನ ಕತೆಯೂ 'ಜರಾಸಂಧಿ' ಯದೇ ಆಗಿದೆ. ಆದರೆ ಪಾತ್ರರಚನೆಯಲ್ಲಿ, ಕ್ರಿಯೆಯ ಓಟದಲ್ಲಿ, ಒಟ್ಟಂದದ ಪ್ರಭಾವದಲ್ಲಿ ಕಂಡುಬರುವ ಅಂತರ ಬಹಳವಾಗಿದೆ. ಉಳಿದ ನಾಟಕಗಳಲ್ಲಿಯಂತೆ ಇಲ್ಲಿಯೂ ಬೇಂದ್ರೆಯವರು ನಾಟಕದ ಮೂಲದರ್ಶನವನ್ನು ಸ್ಪಷ್ಟವಾಗಿಸಲು ಪ್ರಯತ್ನಿಸಿದ್ದಾರೆ. ಹೆಸರೇ ಸೂಚಿಸುವಂತೆ, ಇದು ಹದಗೆಟ್ಟ ಬಾಳುವೆಯನ್ನು ಅಂತಃಕರಣದ ಕುಶಲತೆಯಿಂದ ಸರಿಪಡಿಸುವ ಕತೆ. ಅಜ್ಜ ಯಾತ್ರೆಗೆಂದು ಹೊರಟು ಹೋಗಿದ್ದಾನೆ; ಮಗ ನಾಟಕಕಾರ ತನ್ನ ಗುಂಗಿನಲ್ಲಿ ತೊಡಗಿದ್ದಾನೆ. ಮೊಮ್ಮಗಳಾದ ಮಂದಾ ಮುಂದಿನ ಜೀವನಕ್ಕೆ ತಾನೇ ಅಧಿಕಾರಿಯಾಗಿರುವದರಿಂದ, ತನಗೆ ಸರಿಕಂಡಂತೆ ಮನೆಯನ್ನು ಬದಲಿಸಿದ್ದಾಳೆ. ಯಾತ್ರೆಯಿಂದ ತಿರುಗಿ ಬಂದ ಅಜ್ಜನಿಗೆ ಈ ಬದಲಾವಣೆ ಅರ್ಥವಾಗುವದಿಲ್ಲ. ಅದಕ್ಕೆಂದು ಇನ್ನೊಬ್ಬರ ಮನೆಯನ್ನು ಪ್ರವೇಶಿಸುವಂತೆ ಬರುವ ಅವನ ಅನುಮಾನ, ಅದಕ್ಕೆ ಡಾಕ್ಟರನ ಪ್ರತಿಕ್ರಿಯೆ, ಅದರಿಂದುಂಟಾಗುವ ತಪ್ಪುತಿಳುವಳಿಕೆ ಈ ಘಟನೆಗಳು ಸ್ವಾಭಾವಿಕವಾಗಿರುವವಲ್ಲದೆ, ನಾಟಕದ ಒಳ ಬಾಳನ್ನು ಸಾವಕಾಶವಾಗಿ ತೆರೆಯುತ್ತವೆ. ನಾಟಕದ ಮುಖ್ಯ ಕ್ರಿಯೆಯನ್ನು ದುರಂತದ ಅಂಚಿಗೆ ತಂದು ನಿಲ್ಲಿಸುತ್ತವೆ. ಆದರೆ ಇದೆಲ್ಲದರ ಮೂಲಕ್ಕಿರುವದು ತಪ್ಪುತಿಳುವಳಿಕೆಯಾದ್ದರಿಂದ ನಾಟಕ ಸ್ವಾಭಾವಿಕವಾಗಿಯೇ ಸುಖದ ಕಡೆಗೆ ಮುಖ ಮಾಡಿದೆ. 'ಮಂದಿ'ಯ ಮದುವೆಯಲ್ಲಿ ಕೊನೆಗೊಳ್ಳುತ್ತದೆ. ಎರಡನೆಯ

ಅಂಕಿನಲ್ಲಿಯೂ ಇಂಥದೇ, ಇನ್ನೊಂದು ಬಗೆಯ, ಆದರೆ ಹೆಚ್ಚು ಆಳವಾದ ತಪ್ಪು ತಿಳುವಳಿಕೆಯಿದೆ. ಅಡಿಗೆಯವಳಾಗಿದ್ದ ಅಂಬಕ್ಕ ಈಗ ರಂಗಣ್ಣನ ದವಾಖಾನೆಯಲ್ಲಿ ನರ್ಸ್ ಆಗಿದ್ದಾಳೆ. ಮಂದಾನ ಸಂಶಯ ಅವಳ ಹಾಗೂ ರಂಗಣ್ಣನ ಸಹವಾಸವನ್ನು ನಂಜಿನ ಕಣ್ಣಿನಿಂದ ನೋಡುತ್ತದೆ. ಈ ಸಾರೆಯ ಪರಿಹಾರ ಮಾತ್ರ ನಾಟಕಕಾರನ ಕುಶಲತೆಗೇ ಸೇರಿದೆ. ಹೀಗೆ ಎರಡು ಅಂಕುಗಳಲ್ಲಿ ಬೆಳವಣಿಗೆ ಪಡೆದ ನಾಟಕ ಇಷ್ಟಕ್ಕೇ ಪೂರ್ಣತೆಯನ್ನು ಪಡೆದಿದ್ದರೂ ಅದು ಇನ್ನೂ ಮುಂದೆ ಬೆಳೆಯಬಹುದೆಂಬ ಸೂಚನೆಯನ್ನು ನಾಟಕಕಾರರು ಕೊಟ್ಟಿದ್ದಾರೆ.

ಈ ನಾಟಕದ ತಂತ್ರ ಇಬ್ಸೆನ್ನನ ಶ್ರೇಷ್ಠ ನಾಟಕಗಳ ತಂತ್ರದಂತೆ ಅತ್ಯಂತ ಸತ್ವಯುತವಾಗಿದೆ. ನಾಟಕದ ಕ್ರಿಯೆ ಮುಂದುವರಿದಂತೆ, ಹುದುಗಿಕೊಂಡಿರುವ ಕತೆ ಪದರುಪದರಾಗಿ ಬಿಚ್ಚಿಕೊಳ್ಳುತ್ತದೆ. ಫಕ್ಕ್ಯಾ, ರಂಗಣ್ಣ, ಅಂಬಕ್ಕ ಇವರ ಪರಿಚಯವಿಲ್ಲದ ಗುಂಡಪ್ಪ ತಾನು ಮನೆಯ ಯಜಮಾನನೆಂಬುದನ್ನು ಸೂಚಿಸಿದಾಗ, ಒಳಗಿದ್ದವರ ಸಂಶಯ ದ್ವಿಗುಣಿತವಾಗುತ್ತದೆ. ಆದರೆ ಈ ಪರಸ್ಪರ ತಪ್ಪುತಿಳುವಳಿಕೆ, ಅಪರಿಚಯದ ತೆರೆಯೇ ಅವರ ಪರಿಚಯವನ್ನು ಹೆಚ್ಚು ಆಳವಾಗಿಸುತ್ತದೆ. ಇದರ ಪರಿಣಾಮವೆಂದರೆ ರಂಗಣ್ಣ ಮಂದಾಳನ್ನು ಮದುವೆಯಾಗುತ್ತಾನೆ; ಅಡಿಗೆಯ ಅಂಬಕ್ಕ ಮನೆಯವಳಾಗಿ ನರ್ಸ್ ಆಗುತ್ತಾಳೆ; ಮಂದಿಯ ಮನೆ ಸ್ವಂತ ಮನೆಯಾಗುತ್ತದೆ. ಆದರೆ ಸಮಸ್ಯೆ ಇನ್ನೂ ಮುಗಿದಿಲ್ಲ. ಮನೆಯಲ್ಲಿಯ ಈ ಆತ್ಮೀಯತೆಯೇ ಇನ್ನೊಂದು ಸಂಶಯವನ್ನು ಮಂದಾಳ ಮನಸ್ಸಿನಲ್ಲಿ ಬಿತ್ತುತ್ತದೆ. ಆಗ ನಾಟಕಕಾರ ಈ ತೊಡಕನ್ನು ಎಳೆಎಳೆಯಾಗಿ ಬಿಡಿಸುತ್ತಾನೆ. ಮೊದಲಂಕಿನಲ್ಲಿ ಜೀವ-ನವನ್ನು ನಾಟಕವೆಂಬಂತೆ ಕಂಡು ನಗೆಗೀಡಾದ ಬಂಡೆಪ್ಪನ ಅವ್ಯವಹಾರಬುದ್ಧಿಯೇ ಬದುಕನ್ನು ಸುಖಮಯವಾಗಿಸುತ್ತದೆ. ಜೀವನ ನಾಟಕದಷ್ಟು ಹೃದ್ಯವಾಗಿ ಸಮರಸದಿಂದ ಕೂಡಿಬಿಡುತ್ತದೆ. ಹೀಗೆ ಮೂಲದರ್ಶನದ ಅನೇಕ ಪರಿಗಳನ್ನು ತೋರುವದೇ ಈ ಬಗೆಯ ತಂತ್ರದ ವೈಶಿಷ್ಟ್ಯವಾಗಿದೆ. ಬೇಂದ್ರೆಯವರ ಭಾಷೆಯ ಮೇಲಿನ ಅಸಾಮಾನ್ಯ ಪ್ರಭುತ್ವವೇ ಇದಕ್ಕೆ ಕಾರಣವಾಗಿದೆಯೆನ್ನಬಹುದು. ಬೇಂದ್ರೆಯವರು ಭಾಷೆಯನ್ನು ಇಲ್ಲಿ ಅಕ್ಷರಶಃ ದುಡಿಸಿಕೊಂಡಿದ್ದಾರೆ. ಮಾತಿಗೆ ಇಲ್ಲಿ ಅನೇಕ ಕೆಲಸಗಳಿವೆ. ಆಡಿದ ಪ್ರತಿ ಮಾತೂ ಆಡಿದವನ, ಆಡಿಸಿಕೊಂಡವನ ಪಾತ್ರವೈಶಿಷ್ಟ್ಯವನ್ನು ಪ್ರಕಟಿಸುತ್ತದೆ; ಸನ್ನಿವೇಶವನ್ನು ರಚಿಸುತ್ತದೆ; ಎಲ್ಲಕ್ಕೂ ಹೆಚ್ಚಾಗಿ ಪಾತ್ರ ಹಾಗೂ ಸಂವಿಧಾನಗಳ ನಡುವಿನ ಅಂತರವನ್ನು ಒಂದು ಜೀವಂತವಾದ ನಾಟ್ಯಧ್ವನಿಯಿಂದ ವ್ಯಾಪಿಸಿಬಿಡುತ್ತದೆ. ಬಂಡೆಪ್ಪ ಎದುರಿಗೆ ನಡೆದ ಸಂಗತಿಯನ್ನು ನಾಟಕದಲ್ಲಿಯ ದೃಶ್ಯವೆಂದು ತಿಳಿದು ಮಾತಾಡುತ್ತಿರುವಾಗ ಉಳಿದವರು ಅದಕ್ಕೆ ಹೇಗೆ ಪ್ರತಿಕ್ರಿಯೆ ತೋರಿಸುತ್ತಾರೆಂಬುದನ್ನು ಇಲ್ಲಿ ನೆನೆಯಬಹುದಾಗಿದೆ. ಇನ್ನೂ ವಿನೋದ ನಡೆಯಲಿ ಎಂದು ಆಸೆಯುಳ್ಳ ಫಕ್ಕ್ಯಾ ವಿನೋದವನ್ನು ಬೇಕೆಂದೇ ಕೆಣಕುತ್ತಾನೆ; ಬೇಸರ-ಗೊಂಡ ಅಂಬಕ್ಕನ ಪ್ರತಿಕ್ರಿಯೆ ಸನ್ನಿವೇಶಕ್ಕೆ ಹೆಚ್ಚಿನ ಕಳೆ ತಂದುಕೊಡುತ್ತದೆ. ಮೇಲುನೋಟಕ್ಕೆ ಗುಂಡಪ್ಪ ಅಪರಾಧಿಯಂತೆ ನಟಿಸುತ್ತಿದ್ದರೂ ಒಳಗೊಳಗೆ ತಾನೇ ಯಜಮಾನ ಎಂಬ ನಂಬಿಕೆಯನ್ನೂ ಸೂಚಿಸುತ್ತಾನೆ. ಡಾ. ರಂಗಣ್ಣ ಗುಂಡಪ್ಪ

ನನ್ನು ಕಳ್ಳನೆಂದು ತಿಳಿದು, ಮಂದಾಳ ಮನೆಕಾಯುವ ಹೊಣೆಗಾರಿಕೆಯ ಆವಿರ್ಭಾವವನ್ನು ತೋರಿದರೂ, ತನಗರಿಯದಂತೆಯೇ ತನ್ನ ನಿಜರೂಪವನ್ನು ಪ್ರಕಟಿಸುತ್ತಾನೆ. ಈ ಮುಚ್ಚಿ ತೆರೆಯುವ ಆಟವೆಲ್ಲ ಮಾತಿನ ಕುಶಲತೆಯಿಂದ ಸಾಗಬೇಕಾದದ್ದು ಇಲ್ಲಿಯ ವೈಶಿಷ್ಟ್ಯವಾಗಿದೆ. ಮಾತು ವಿನೋದದ ಆಚೆಗಿನ ಗಾಂಭೀರ್ಯವನ್ನು ಹೊಳೆಯಿಸುತ್ತ, ಅಪರಿಚಯದಲ್ಲಿ ಅಂತಃಕರಣದ ಪರಿಚಯ ಮಾಡಿಸುತ್ತದೆ. ಎರಡನೆಯ ಅಂಕಿನಲ್ಲಿ ಮಂದಾಳ ಒದ್ದಾಟದ ಪ್ರಸಂಗವನ್ನೂ ನೋಡಬಹುದಾಗಿದೆ. ತನ್ನನ್ನು ಯಾರೂ ಕೇಳುವದಿಲ್ಲವೆಂದು ಮಂದಾ ಸಂಕಟಪಡುತ್ತಾಳೆ; ಸಂಕಟಕ್ಕೆ ಕಾರಣ ತನ್ನ ಅಸೂಯೆ ಎಂದು ಗೊತ್ತಿದ್ದರೂ ಅದನ್ನು ಮುಚ್ಚಿ ಡಾಕ್ಟರನ ಮೇಲೆ ತಪ್ಪು ಹೊರಿಸುತ್ತಿದ್ದಾಳೆ. ಆದರೆ ಸಂಕಟವಾದದ್ದೇನೂ ಸುಳ್ಳಲ್ಲ. ಗುಂಡಪ್ಪ ಅದನ್ನು ಲಘುವಾಗಿ ಕಂಡು ಗೊತ್ತಿದ್ದೂ ಗೊತ್ತಿಲ್ಲದವನಂತೆ ನಟಿಸಿ, ಮಂದಾಳ ಸಂಕಟದ ಕಾರಣವನ್ನು ಹೊರಗೆಡವುತ್ತಾನೆ. ಮಂದಾಳ ಕರುಣ ಗಂಭೀರವಾಗುತ್ತ ನಡೆದಂತೆ, ಗುಂಡಪ್ಪನ ಗಾಂಭೀರ್ಯ ರೊಚ್ಚುಗಳು ಲಘುವಾಗುತ್ತ ನಡೆಯುತ್ತವೆ. ಮಂದಾ ಅಸಹಾಯಳಾಗಿ ಬಂದಾಗ ಗುಂಡಪ್ಪ ಅವಳನ್ನು ಮೇಲೆ ತೂರಿ ತನ್ನ ಅಂಗೈಯಲ್ಲಿ ಹಿಡಿಯುತ್ತಾನೆ. ಬಂಡೆಪ್ಪ ಆ ಸಮಸ್ಯೆಯ ತೊಡಕನ್ನು ಇನ್ನೊಂದು ನಾಟಕವಾಡಿ ಬಿಡಿಸುತ್ತಾನೆ. ಇಡೀ ಅಂಕು ನಾಟಕದೊಳಗಿನ ನಾಟಕವಾಗಿ ಜೀವನದ ಸತ್ಯವನ್ನು ಬಯಲಿಗೆ ತರುತ್ತದೆ.

ಆದರೆ ಈ ಎಲ್ಲ ಕುಶಲತೆ ನಾಟಕದ ಮೇಲೆ ಭಾರವಾಗಿಲ್ಲ. ಇದರಲ್ಲಿಯ ಯಾವ ಪಾತ್ರವೂ ಬುದ್ಧಿವಂತಿಕೆಯ ಮಾತುಗಳನ್ನಾಡುವದಿಲ್ಲ. ಬದುಕಿನ ಸಮಸ್ಯೆಯನ್ನು ಅಂತಃಕರಣದ ಆತ್ಮೀಯತೆಯಿಂದ ಬಿಡಿಸಲಾಗಿದೆ. ನಾಟಕದೊಳಗೆ ಹುದುಗಿದ ಅರ್ಥಪ್ರಪಂಚಕ್ಕೆ ಕಾರಣ ನಾಟ್ಯಧ್ವನಿಯೇ ಹೊರತು, ಪಾತ್ರಗಳ ಬುದ್ಧಿವಂತಿಕೆ ಅಲ್ಲ. ಬೇಂದ್ರೆಯವರು ನಾಟಕಕಲೆಯ ಒಂದು ತೀರ ಮಹತ್ವದ ಅಂಗವನ್ನು ಗುರುತಿಸಿದ್ದಾರೆ. ಪಾತ್ರ ಹಾಗೂ ಸಂವಿಧಾನದಲ್ಲಿ ಭಿನ್ನತೆ ತಲೆದೋರಬಾರದೆಂಬುದೇ ಆ ರಹಸ್ಯವಾಗಿದೆ. ಇಲ್ಲಿಯ ವ್ಯಕ್ತಿಗಳು ಕೇವಲ ರಂಗದ ಮೇಲೆ ನಡೆಯುವ ಸಂಗತಿಗಳಿಗಷ್ಟೇ ಸಂಬಂಧಿಸಿಲ್ಲ. ಅವರ ಗತಜೀವನದ ಸಂಸ್ಕಾರಗಳಿಂದ ಅವರ ಸ್ವಭಾವ ನಿರ್ದಿಷ್ಟವಾಗಿದೆ. ಅವರವರ ಸಂವೇದನೆಗಳ, ಸುಖ-ದುಃಖಗಳ ವೈಯಕ್ತಿಕ ಲೋಕವೊಂದು ಬೇರೆಯಾಗಿಯೇ ಇದೆ. ನಾಟಕದ ಕ್ರಿಯೆಯಲ್ಲಿ ಅವರು ತಂತಮ್ಮ ಸ್ವಭಾವ ಸಂಸ್ಕಾರಗಳಿಗನುಣವಾಗಿ ವರ್ತಿಸುತ್ತಾರೆ. ಈ ಕೊಡಕೊಳ್ಳಿಯಲ್ಲಿ ನಾಟಕದ ಸಂವಿಧಾನದ ಹಬ್ಬುಗೆಯಿದೆ. ಹೀಗೆ ಪಾತ್ರಗಳು ಹಾಗೂ ಸಂವಿಧಾನ ಒಂದಕ್ಕೊಂದು ಸಜೀವ ಪೂರಕಗಳಾಗಿ, ಅವು ಒಂದರಿಂದೊಂದು ಬೇರೆಯಲ್ಲವೆನ್ನುವಷ್ಟು ಐಕ್ಯ ತಲೆದೋರಿದೆ. ಬೇಂದ್ರೆಯವರ ನಾಟಕೀಯ ಕಲ್ಪನೆ ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ, ನಾಟಕದ ವಸ್ತುವನ್ನು ಅನೇಕಾರ್ಥಗಳ ಅಕ್ಷಯಪಾತ್ರೆಯನ್ನಾಗಿ ಮಾಡಿದೆ. ಇಲ್ಲಿಯೇ ಸಾಂಕೇತಿಕತೆ ತಲೆದೋರುವದು. ಬದಲಾವಣೆ ಹೊಂದಿದ ಮಂದಾಳ ಮನೆ ಗುಂಡಪ್ಪನಿಗೆ ಮಂದಿಯ ಮನೆಯಾಗುವದು, ಮಂದಾಳ ಕೂಸು ಅಂಬಕ್ಕನಿಗೆ ಮಂದಿಯ ಮಕ್ಕಳಾಗುವದು, ಬಂಡೆಪ್ಪನಿಗೆ ಜೀವನ

ನಾಟಕದಂತೆ ಕಾಣುವದು, ಮಂದಾಳ ಬಾಳಿನ ದುಃಖ ದಂತಕತೆಯಾಗುವದು ಈ ಸಂಗತಿಗಳು ಸಂಕೇತಧ್ವನಿಯನ್ನು ಒಂದಾದ ಮೇಲೊಂದರಂತೆ ಮಿಂಚಿಸುತ್ತವೆ. ವಾಸ್ತವರೀತಿಯ ನಾಟಕದಲ್ಲಿ ಬೇಂದ್ರೆಯವರು ಕೊನೆಯ ಹಂತವನ್ನು ಮುಟ್ಟಿ ಬಿಟ್ಟಿದ್ದಾರೆ. ಅವರ ಕೈಯಲ್ಲಿ ಪಾತ್ರಗಳು ಸಜೀವ ಸೃಷ್ಟಿಯಾಗಿ, ಮೂಲದರ್ಶನದ ಪ್ರತಿಮೆಗಳಾಗುತ್ತವೆ; ವಸ್ತು ರೂಪಕವಾಗುತ್ತದೆ. ನಾಟಕ ಎಲ್ಲ ಅರ್ಥದಲ್ಲೂ ದೃಶ್ಯಕಾವ್ಯವಾಗಿ ಪರಿಣಮಿಸುತ್ತದೆ.

ಹೀಗೆ ಕೈಲಾಸಂರಿಂದ ನಿರ್ಮಿತವಾದ ಸಾಮಾಜಿಕ ನಾಟಕಪರಂಪರೆ ಇಷ್ಟು ಅಲ್ಪಾವಕಾಶದಲ್ಲಿ ತನ್ನ ಪರಿಣತಿಯನ್ನು ಕಂಡುಕೊಂಡದ್ದು ಸೋಜಿಗವಾಗಿದೆ. ಕೈಲಾಸಂ ಸಾಮಾಜಿಕ ಜೀವನದಲ್ಲಿಯ ದೋಷಗಳನ್ನು ನಗೆಯ ಬೆಳಕಿನಲ್ಲಿ ಎತ್ತಿ ತೋರಿಸಿದರು; ಶ್ರೀರಂಗರು ಜೀವನದ ರೀತಿ ಈಗಿದ್ದಂತೆ ಸರಿಯಾಗಿಲ್ಲವೆಂದು ಆದಷ್ಟು ಕಹಿಯಾಗಿಯೇ ಹೇಳಿದರು; ಬೇಂದ್ರೆ ಸಾಮಾಜಿಕ ಹಾಗೂ ಕೌಟುಂಬಿಕ ಜೀವನದ ಕೆಡುಕುಗಳೊಂದಿಗೆ ಶಾಶ್ವತ ಮೌಲ್ಯಗಳನ್ನು ಕಾವ್ಯದ ನಿಲುವಿನಲ್ಲಿ ತೋರಿಸಿದರು. ಈ ದಾರಿಯಲ್ಲಿ ಇನ್ನಿತರರು ಮಾಡಿದ ಕೆಲಸವನ್ನು ಮರೆಯಲಾಗದು. ಕಾರಂತರ 'ಗರ್ಭಗುಡಿ' ತನ್ನ ವಿಡಂಬನದಿಂದ ಶ್ರೀರಂಗರ ಮಾದರಿಯ ನಾಟಕ ವಾಗಿದ್ದರೆ, ಅದರ ಸಾಂಕೇತಿಕತೆ ಅವರದೇ ಕಾದಂಬರಿಯಾದ 'ಸರಸಮ್ಮನ ಸಮಾಧಿ' ಯನ್ನು ನೆನಪಿಗೆ ತರುತ್ತದೆ. 'ಗರ್ಭಗುಡಿ'ಯಲ್ಲಿಯ ಸಾಮಾಜಿಕ ಚಿತ್ರಣ ಭಯ ಗೊಳಿಸುವಷ್ಟು ವಾಸ್ತವವಾಗಿದೆ. ಈ ವಾಸ್ತವತೆಯ ಉತ್ಕಟತೆ ಜನಜೀವನದ ಆಳ ಕ್ಕಿರುವ ಅಜ್ಞಾನವನ್ನು ಸ್ಪಷ್ಟವಾಗಿ ಕಾಣಿಸುತ್ತದೆ. ಅದರೆ ಕಶ್ಯಪ ಹಾಗೂ ದೇವರ ಮೂರ್ತಿ ಗತಜೀವನದ ನಿಷ್ಫಲತೆಯನ್ನು ಎತ್ತಿ ತೋರಿಸುತ್ತವೆ. ಆ ಕಾಲದ ತಿರುಳು ಈಗ ವ್ಯರ್ಥವೆಂದೆನಿಸುತ್ತದೆ. ಕಾರಂತರ 'ಬಿತ್ತಿದ ಬೆಳೆ'ಯಲ್ಲಿ ಸುಗಮವಾದ ಕತೆ ಯೊಂದನ್ನು ನಾಟ್ಯರೂಪದಲ್ಲಿ ಹೆಣೆಯಲಾಗಿದೆ. ಇದರ ಬಾಹ್ಯರೂಪ ಚೆಕಾವ್ನ ಶೈಲಿ ಯನ್ನು ನೆನಪಿಗೆ ತರುವಂತಿದ್ದರೂ, ಆ ಶೈಲಿಯ ಧ್ವನಿಪೂರ್ಣತೆ, ಕಾವ್ಯಮಯತೆ ಗಳು ಇಲ್ಲಿ ಕಾಣುವದಿಲ್ಲ. ಮಾಸ್ತಿಯವರ 'ಮಂಜುಳಾ' ಹಾಗು ಸಿ. ಕೆ. ವೆಂಕಟ ರಾಮಯ್ಯನವರ 'ಸುಂದರಿ' ಇವು ಸಾಮಾಜಿಕ ಸುಕುಮಾರ-ಪ್ರಯೋಗಗಳಾಗಿವೆ. ಅ.ನ.ಕೃ ತಮ್ಮ ನಾಟಕಗಳ ಮೂಲಕ ಸಮಾಜದ ವ್ಯಂಗ್ಯ-ರುದ್ರ ಚಿತ್ರಗಳನ್ನು ನಿರೂಪಿಸಲು ಪ್ರಯತ್ನಿಸಿದರು. ಆದರೆ ಅವು ಹೆಚ್ಚಾಗಿ ಕೌಟುಂಬಿಕ ಸ್ವರೂಪದ ವಾಗಿವೆ. ಮೇಲಾಗಿ ಅಲ್ಲಿಯ ಸಂಭಾಷಣೆಗೆ ಕಥನಕೌಶಲವಿಲ್ಲದ್ದರಿಂದ ಕತೆಯ ಪಾರ್ಶ್ವನೋಟ ಮಾತ್ರ ನಮಗೆ ಕಾಣಸಿಗುತ್ತದೆ. ರಂ. ಶ್ರೀ. ಮುಗಳಿಯವರು ಮೂರು ಸಾಮಾಜಿಕನಾಟಕಗಳನ್ನು ಬರೆದರು. ಅವುಗಳಲ್ಲಿ ಕೊನೆಯವೆರಡು ('ಮನೋರಾಜ್ಯ', 'ಧನಂಜಯ') ಅನಿಶ್ಚಿತವಾದ ಸಂವಿಧಾನದ ಮೂಲಕ ಯಶಸ್ವಿಯಾಗಲಿಲ್ಲ. ಆದರೆ ಅವರ ಮೊದಲ ನಾಟಕವಾದ 'ನಾಮಧಾರಿ' ಅನನ್ಯ ವಾದ ನಾಯಕ-ಪಾತ್ರವುಳ್ಳ ಶಕ್ತಿಯುತವಾದ ನಾಟಕವಾಗಿದೆ. ಕೆಂಚನಗೌಡ ಜಾತೀ ಯತೆಯ ತೂಕ ತಪ್ಪಿದ ಈ ಕಾಲದಲ್ಲಿಯೇ ಹುಟ್ಟಬಹುದಾದ ಮಾನವ-ಪ್ರಾಣಿ ಯಾಗಿದ್ದಾನೆ. ಅವನ ಸ್ವಭಾವ-ವಿಭಜನೆಯೇ ಇಡೀ ನಾಟಕದ ಸಂವಿಧಾನವಾಗಿದೆ. ಅದರಿಂದುಂಟಾಗುವ ವಿನೋದ ಮಹತ್ವದ ರಸವಾಗಿ, ಉಳಿದ ರಸಗಳ ಕೆಲಸವನ್ನೂ

ನಿರ್ವಹಿಸುವಷ್ಟು ಸಮರ್ಥವಾಗಿದೆ. ನಮ್ಮ ಸಾಮಾಜಿಕ ಕ್ರಾಂತಿಯಲ್ಲಿ ದೊರೆತ ಈ ಶೋಧವನ್ನು ಮುಗಳಿಯವರು ಅತ್ಯಂತ ಯಶಸ್ವಿಯಾಗಿ ನಿರ್ವಹಿಸಿದ್ದಾರೆ. ಅವನ ಅಭ್ಯಾಸವೇ ಸಮಾಜದ ಅಭ್ಯಾಸವಾಗುವಷ್ಟು ಅವನ ವಿಕ್ಷಿಪ್ತತೆಯನ್ನು ತೋರಿಸಿದ್ದಾರೆ. ಈ ದೃಷ್ಟಿಯಿಂದ ನೋಡಿದಾಗ ಈ ನಾಟಕ 'ಬೆನ್‌ಜಾನ್‌ಸನ್', 'ಮೊಲಿಯರ'ರ ನಾಟಕಗಳಷ್ಟೇ ಪ್ರಭಾವಶಾಲಿಯಾಗಿದೆ. ಬೇಂದ್ರೆ ಲಕ್ಷ್ಮಣರಾಯರ 'ಭಾಗ್ಯಶ್ರೀ' ಹಾಗೂ 'ಪರಿವರ್ತನೆ'ಗಳು ಪ್ರದರ್ಶನೀಯವಾಗಿದ್ದರೂ ಸಾಹಿತ್ಯದ ದೃಷ್ಟಿಯಿಂದ ಲಘುವಾಗಿವೆ. ಆದರೆ ಈ ನಾಟಕಗಳು ಒಂದು ದಿಸೆಯಲ್ಲಿ ಯಶಸ್ಸನ್ನು ಪಡೆದಿವೆ. ನಮ್ಮ ರಂಗಭೂಮಿ ಹಾಗೂ ನಾಟಕಗಳ ನಡುವಿರುವ ಮಹದಂತರವನ್ನು ಆದಷ್ಟು ಕಡಿಮೆ ಮಾಡಲು ಈ ನಾಟಕಗಳು ಸಹಾಯಕಾರಿಯಾಗುತ್ತವೆ. ಎನ್ಕೆಯವರ 'ವಿದ್ಯಾ' ಅವರ ಸುಂದರ ಕಾದಂಬರಿಯಾದ 'ಎರಡನೆಯ ಸಂಬಂಧ'ದ ನಾಟ್ಯರೂಪ. ಕಾದಂಬರಿಯಾಗಿಯೇ ಉಳಿದಿದ್ದರೆ ಚನ್ನಾಗುತ್ತಿತ್ತೆಂದು ಅನಿಸುತ್ತದೆ. ಕಾದಂಬರಿಯ ಕಥನ ಇಲ್ಲಿ ಇಲ್ಲದ ಮೂಲಕ ಪಾತ್ರಗಳು ತಮ್ಮ ಹಿನ್ನೆಲೆಯನ್ನೆಲ್ಲ ಕಳೆದುಕೊಂಡು ಬಯಲಲ್ಲಿ ಓಡಾಡಿದಂತೆ ಭಾಸವಾಗುತ್ತದೆ.

ಪ. ಸೀತಾದೇವಿಯವರ 'ವೇಣುಮಾವ', ಮೂರ್ತಿರಾಯರ 'ಆಷಾಡಭೂತಿ' ಎಸ್. ಜಿ. ಶಾಸ್ತ್ರಿಯವರ 'ಸೂತ್ರದ ಬೊಂಬೆ' ಇವು ಸುಂದರವಾದ ಅನುವಾದಗಳಾಗಿವೆ. ಮೂಲ ನಾಟಕಗಳ ಸೌಂದರ್ಯವನ್ನು ತೆರೆಯುವದರ ಜೊತೆಗೆ, ನಾಟಕಗಳು ಕನ್ನಡದ ಜೀವನಕ್ಕೆ ಹೊಂದಿಕೊಂಡು ಹೋಗುವಂತೆ ಮಾಡಿದ್ದು ಅಭಿನಂದನೀಯವಾಗಿದೆ. ಈ ನಾಟಕಗಳು ಅದಕ್ಕಾಗಿಯೇ ಸ್ವತಂತ್ರ ನಾಟಕಗಳನ್ನುವಷ್ಟು ಚಲುವಾಗಿವೆ. ಆದರೆ ಉಳಿದ ಅನುವಾದಗಳಲ್ಲಿ ಈ ಬಗೆಯ ಕುಶಲತೆ ನಮಗೆ ಕಾಣುವದಿಲ್ಲ. ಪರ್ವತವಾಣಿಯವರ ಅನುವಾದಗಳು ಮೂಲ ನಾಟಕಗಳನ್ನು ಮರೆಸಿಬಿಡುವಷ್ಟು ಸ್ವತಂತ್ರವಾಗಿವೆ. ಹೀಗಾಗಿ ನಾಟಕದ ತಿರುಳು ಅಲ್ಲಿ ಸ್ಪಷ್ಟವಾಗಿ ಕಾಣುವದಿಲ್ಲ. ಅದೂ ಅಲ್ಲದೆ ಶೇಕ್ಸಪಿಯರ್, ಶೆರಿಡನ್, ಗೋಲ್ಡ್‌ಸ್ಮಿಥ ಮೊದಲಾದ ತೀರ ಸ್ವತಂತ್ರ ಶೈಲಿಯ ನಾಟಕಕಾರರನ್ನು ಒಂದೇ ಶೈಲಿಯ ಎರಕದಲ್ಲಿ ಹೊಯ್ಯುವದು ಅಷ್ಟು ಸಮಂಜಸವಾಗಿ ಕಾಣಲಾರದು. ಹೇಮಂತರ 'ತಪ್ಪಿದ ಹೆಜ್ಜೆ' 'ಆಸ್ಕರ ವೈಲ್ಡನ' ಒಂದು ನಾಟಕದ ಭಾಷಾಂತರ. ಆದರೆ ಮೂಲನಾಟಕದ ಓಜಸ್ಸು ಅದರ ಕುಶಲ ಹಾಗೂ ವಿದಗ್ಧ ಸಂಭಾಷಣೆಯ ಮೇಲೆ ಅವಲಂಬಿಸಿದೆಯೆಂಬುದನ್ನು ಅನುವಾದಕರು ಅರಿಯಬೇಕಾಗಿತ್ತು.

ಹೀಗೆ ವಾಸ್ತವಮಾರ್ಗದ ನಾಟಕಸಂಪ್ರದಾಯವನ್ನು ಕೆಲ ಮಹತ್ವದ ನಾಟಕಕಾರರು ರೂಪಿಸಿ ಅದಕ್ಕೆ ಮಹತ್ವದ ಸ್ಥಾನವನ್ನು ಕಲ್ಪಿಸಿಕೊಟ್ಟಿದ್ದಾರೆ. ಆದರೆ ಅದರ ಪ್ರಗತಿ ಸಾಗಿದೆಯೇ ಎಂದು ವಿಚಾರ ಮಾಡಿದಾಗ ಮಾತ್ರ ನಿರಾಶೆಯಾಗದಿರದು. ಹೊಸ ಪೀಳಿಗೆಯ ಯಾವ ನಾಟಕಕಾರನೂ ಶ್ರೀರಂಗ ಕೈಲಾಸಂರಂತೆ ಹತ್ತಾರು ನಾಟಕಗಳನ್ನು ಬರೆದು ಕಣ್ಣು ತುಂಬಲಿಲ್ಲ, ನಾಟಕಗಳ ಬರವಣಿಗೆಗೆ ಅವಕಾಶ ಬೇಕಾದಷ್ಟಿದೆ. ನಾಟಕಕ್ಕೆ ವಸ್ತು ದೊರೆಯದಷ್ಟು ನಮ್ಮ ಜೀವನ ಸೋತುಹೋಗಿಲ್ಲ. ಸಂಪ್ರದಾಯದ ಹಿನ್ನೆಲೆ ಸಾಕಷ್ಟು ಭದ್ರವಾಗಿದೆ. ಆದರೂ ಹೊಸ ನಾಟಕಕಾರರು ಕೇವಲ ಏಕಾಂಕಗಳನ್ನು ಬರೆಯುವದರಲ್ಲಿ ತೊಡಗಿದ್ದಾರೆ;

ಅದೂ ಶಾಲೆ ಕಾಲೇಜುಗಳ ವಿದ್ಯಾರ್ಥಿಗಳ ಸಲುವಾಗಿ. ನಾಡಿನಲ್ಲೀಗ ನಾಟ್ಯೋತ್ಸವ ಗಳು ವರ್ಷಕ್ಕೊಂದರಂತೆ ನಡೆಯುತ್ತಿವೆ; ಒಳ್ಳೆಯ ನಾಟಕಗಳಿಗೆ ಬಹುಮಾನ ಗಳಿವೆ. ಕನ್ನಡ ರಂಗಭೂಮಿ ತನ್ನ ಹೊಸ ನಾಟಕಕ್ಕಾಗಿ ಕಾದು ನಿಂತಿದೆ. ಆದರೂ ನಮ್ಮ ನಾಟಕಕಾರರು ಮುಂದೆ ಬರಲೊಲ್ಲರು. ಇದಕ್ಕೆ ಕಾರಣಗಳಿಲ್ಲದಿಲ್ಲ. ನಾಟ-ಕದ ರಚನೆಯೇ ಕಠಿಣವಾದದ್ದು. ನಾಟಕವನ್ನು ಬರೆದು ಮುಗಿಸಿದ ಮೇಲೂ ಅದನ್ನು ಆಡುವವರಿಲ್ಲದೆ ನಾಟಕ ಪುಸ್ತಕದಲ್ಲಿಯೇ ಉಳಿಯಬೇಕಾಗುತ್ತದೆ. ಆಡಿದ ಮೇಲೆ ಕೂಡ ಜನರು ಅದನ್ನು ಮೆಚ್ಚಬಹುದೆಂಬ ಭರವಸೆ ಇಲ್ಲ. ಇದರಿಂದಾಗಿ ಲೇಖಕರಲ್ಲಿ ನಾಟಕದ ಬಗ್ಗೆ ಉದಾಸೀನತೆ ಹುಟ್ಟಿರಬಹುದಾಗಿದೆ. ಆದರೆ ಇಂಥ ಸಣ್ಣ ಕಾರಣಕ್ಕಾಗಿಯೇ ನಮ್ಮ ನಾಟಕಕಾರರು ಬರೆಯುವದನ್ನು ಬಿಡಬಾರದಾಗಿತ್ತು. ಕೈಲಾಸಂ ಶ್ರೀರಂಗರ ಎಲ್ಲ ನಾಟಕಗಳೂ ಇನ್ನೂ ರಂಗಭೂಮಿಯನ್ನು ಕಂಡಿಲ್ಲ. ಕಂಡ ಕೆಲವು, ಒಂದೆರಡು ಪ್ರಯೋಗಗಳಲ್ಲಿ ಮುಗಿದುಹೋಗಿವೆ. ಬೇಂದ್ರೆಯವರ 'ನಗೆಯ ಹೊಗೆ' ಪ್ರದರ್ಶಿತವಾಗಲಿಲ್ಲ, ಇನ್ನುಮೇಲೆ ಆಗಬಹುದೆಂಬ ಭರವಸೆ ಕೂಡ ಇಲ್ಲ. ಹಾಗೆಂದು ಅವರು ನಾಟಕಗಳನ್ನು ಬರೆಯುವದನ್ನೇನೂ ನಿಲ್ಲಿಸಲಿಲ್ಲ. ಹೊಸ ಪೀಳಿಗೆಯಲ್ಲಿ ಕೆಲವು ನಾಟಕಕಾರರಾದರೂ ಹುಟ್ಟಲೇಬೇಕೆಂಬ ನಿರ್ಬಂಧ ವೇನೂ ಇಲ್ಲ. ಇಂಗ್ಲಿಶ್ ಸಾಹಿತ್ಯದಲ್ಲಿಯೇ ೧೯ನೆಯ ಶತಮಾನದಲ್ಲಿ ಹುಟ್ಟಿದ ನಾಟಕಗಳು ಎಷ್ಟೆಂಬುದನ್ನು ಇತಿಹಾಸತಜ್ಞರು ಲೆಕ್ಕಹಾಕಬೇಕು- ಆದರೆ ನಮ್ಮಲ್ಲಿ ಸಾಮಾಜಿಕ ನಾಟಕಪರಂಪರೆ ಹುಟ್ಟುತ್ತಲೇ ಇಷ್ಟು ಬೇಗ ಮುಗಿದುಹೋಗ ಬಾರದೆನ್ನುವದಕ್ಕೆ ಈ ಮಾತುಗಳನ್ನು ಹೇಳಲಾಗಿದೆ.

ಯಾಕೆಂದರೆ ಸಾಮಾಜಿಕ ನಾಟಕ ಇನ್ನೂ ತನ್ನ ಪರಿಪೂರ್ಣತೆಯನ್ನು ಮುಟ್ಟಿಲ್ಲ. ಇಲ್ಲಿಯ ವರೆಗೆ ಮಧ್ಯಮವರ್ಗದ ಜೀವನವನ್ನಷ್ಟೇ ಚಿತ್ರಿಸಿ ನಮ್ಮ ನಾಟಕ ತೃಪ್ತವಾಗಿದೆ. ಉಳಿದ ವರ್ಗಗಳ ಜೀವನವೂ ಕಾದಂಬರಿಯಲ್ಲಿಯಂತೆ ನಾಟಕದಲ್ಲಿ ಬರಬೇಕಾಗಿದೆ. ಕರ್ನಾಟಕದ ಬೇರೆ ಬೇರೆ ವಿಭಾಗಗಳಿಂದ ಅಲ್ಲಿಯ ಜೀವನವನ್ನು ರೂಪಿಸುವ ನಾಟಕಗಳು ಸಾಕಷ್ಟು ಬಂದಿಲ್ಲ. ಕೈಲಾಸಂ ಮೈಸೂರಿನಲ್ಲಿಯ ಒಂದು ವರ್ಗದ ಜೀವನವನ್ನು ಮಾತ್ರ ತಂದರು; ಶ್ರೀರಂಗ ಹಾಗೂ ಬೇಂದ್ರೆಯವರು ಉತ್ತರ ಕರ್ನಾಟಕದ ಮಧ್ಯಮವರ್ಗದ ಹಾಗೂ ಹಳ್ಳಿಗಾಡಿನ ಜೀವನವನ್ನು ನಿರೂಪಿ ಸುವ ನಾಟಕಗಳನ್ನು ಬರೆದರು. ಕಾರಂತರ ಕಾದಂಬರಿಗಳಲ್ಲಿ ಕಂಡುಬರುವ ಪ್ರಾದೇಶಿಕತೆ ಅವರ ನಾಟಕಗಳಲ್ಲಿ ಕಾಣುವದಿಲ್ಲ. ಕು.ವೆಂ.ಪು. ಮನಸ್ಸು ಮಾಡಿ ದ್ದರೆ ಮಲೆನಾಡಿನ ಬಣ್ಣ ಬಣ್ಣದ ಜೀವನವನ್ನು ನಾಟಕೀಯವಾಗಿ ಚಿತ್ರಿಸಬಹುದಿತ್ತು.

ನಾಟಕಗಳ ರಚನೆ ಹಾಗೂ ಶೈಲಿಯಲ್ಲಿ ಕೂಡ ಬೆಳವಣಿಗೆಯಾಗುವದು ಅಗತ್ಯವಾಗಿದೆ. ಕೈಲಾಸಂ, ಶ್ರೀರಂಗ, ಬೇಂದ್ರೆ ಹಾಗೂ ಕಾರಂತರು ತಮ್ಮ ದಾರಿ ಯಲ್ಲಿ ನಡೆದು ಕೃತಾರ್ಥರಾಗಿದ್ದಾರೆ. ಅವರ ಮಾರ್ಗವೇ ಕೊನೆಯದಾಗಬಾರದು. ನಾಟಕದಲ್ಲಿಯೇ ಆಗಲಿ, ಕಾದಂಬರಿಯಲ್ಲಿಯೇ ಆಗಲಿ ವಾಸ್ತವತೆಯ ಸಂಪ್ರದಾಯ ತನ್ನ ಭವಿತವ್ಯವನ್ನು ಅಮರವಾಗಿಸಿಕೊಂಡು ಬಂದಿದೆ. ಆದರೆ ಕೇವಲ ಸಮ-ಕಾಲೀನತೆಯನ್ನು ಯಥಾವತ್ತಾಗಿ ಪ್ರತಿಫಲಿಸುವದರಲ್ಲಿ ಈ ಸಂಪ್ರದಾಯ ಮುಗಿದು ಹೋಗಬಾರದು. ನಾಟಕದ ತಂತ್ರ ಇನ್ನೂ ಸಂಪೂರ್ಣವಾಗಿ ಹಸ್ತಗತವಾಗಿಲ್ಲ.

ಪಾತ್ರಗಳ ಪಾರ್ಶ್ವನೋಟವನ್ನಷ್ಟೇ ತೋರಿಸಿ ನಮ್ಮ ನಾಟಕಕಾರರು ತೃಪ್ತರಾಗು ತ್ತಿದ್ದಾರೆ. ಆ ನಾಟಕಕಲೆ ವಾಸ್ತುಶಿಲ್ಪದಂತೆಂಬುದನ್ನು ಮರೆಯಲಾಗದು. ನಾಟಕ ದಲ್ಲಿಯ ವ್ಯಕ್ತಿಗಳ ಸ್ವಭಾವನಿರೂಪಣೆಯಾಯಿತೆಂದರೆ ಪಾತ್ರರಚನೆ ಮುಗಿಯಲಿಲ್ಲ. ಪ್ರತಿಯೊಂದು ಪಾತ್ರಕ್ಕೆ ನಿರ್ದಿಷ್ಟವಾಗಿರುವ ಜೀವನಕ್ರಮವನ್ನು ಸೂಚಿಸಬೇಕಾಗು ತ್ತದೆ. ಈ ವಿಷಯದಲ್ಲಿ ಬೇಂದ್ರೆಯವರ 'ಹೊಸ ಸಂಸಾರ' ಮಾದರಿಯದಾಗಿದೆ ಎನ್ನಬಹುದು. ಅಲ್ಲಿ ಪಾತ್ರಗಳಾಡುವ ಮಾತಿಗೆ ಅವುಗಳ ಗತಜೀವನದ ಸಂಸ್ಕಾರ ವಿದೆ. ಇನ್ನೊಂದು ಮಾತೆಂದರೆ ಬಾಳಿನ ಸಂಕೀರ್ಣತೆಯ ಕಡೆಗೆ ನಮ್ಮ ನಾಟಕ-ಕಾರರು ಪೂರ್ಣವಾಗಿ ಲಕ್ಷ್ಯವಿತ್ತಿಲ್ಲ. ಈಗಿರುವ ನಾಟಕಗಳ ಭಾವಸಮುದಾಯ ದಲ್ಲಿ ಸರಳತೆ ಮಾತ್ರ ಕಾಣುತ್ತಿದೆ. ಅನುಭವದ ಗಹನತೆ ಹಾಗೂ ಸಂಕೀರ್ಣತೆಗಳು ಹೆಚ್ಚಾಗಬೇಕು.

ಇನ್ನು ವಾತಾವರಣವೊಂದು ನಮ್ಮ ನಾಟಕಗಳಲ್ಲಿ ಬರಬೇಕಾದಷ್ಟು ಬಂದಿಲ್ಲ. ಯಾವ ವಾಸ್ತವ ಕೃತಿಯೂ ತನ್ನ ಕಾಲ-ಸ್ಥಲಗಳ ಆವರಣದಲ್ಲಿ ಹುಟ್ಟಬೇಕಾದದ್ದು ಅಗತ್ಯವಾಗಿದೆ. ನಮ್ಮ ನಾಟಕಗಳೆಲ್ಲ (ಶ್ರೇಷ್ಠವಾದವುಗಳು ಕೂಡ) ವಾತಾವರಣ ಕ್ಕಾಗಿ ರಂಗಭೂಮಿಯನ್ನೆ ಅವಲಂಬಿಸುತ್ತವೆ. ಆದರೆ ನಾಟಕ ಸಾಹಿತ್ಯವೆಂಬುದನ್ನು ಮರೆಯಲಾಗದು. ಯಾವ ಪರಿಣಾಮವನ್ನೇ ಆಗಲಿ ಶಬ್ದಗಳ ಮೂಲಕವೇ ಉಂಟು ಮಾಡಬೇಕು. ರಂಗಭೂಮಿ ಶಬ್ದಗಳಲ್ಲಿ ಧ್ವನಿಸಿದ್ದನ್ನು ಕಣ್ಣಿಗೆ ಪ್ರತ್ಯಕ್ಷವಾಗಿಸುವ ಒಂದು ಸಾಧನ. ರಂಗದ ಮೇಲೆ ನೋಡದಿದ್ದರೂ ನಾಟಕ ವಾತಾವರಣದ ಪರಿಣಾ ಮವನ್ನು ಓದುಗರು ಅನುಭವಿಸುವಂತೆ ಮಾಡಬೇಕು. ಸಂಸ್ಕೃತ ನಾಟಕಗಳನ್ನೋ, ಶೇಕ್ಸಪಿಯರನ ನಾಟಕಗಳನ್ನೋ ಇಲ್ಲಿ ಮಾದರಿಯೆಂದು ನೋಡಬಹುದಾಗಿದೆ. ಕನ್ನಡ ನಾಟಕಗಳು ಆ ದಿಸೆಯಲ್ಲಿ ಪ್ರಯತ್ನ ಮಾಡಬೇಕಾಗಿದೆ. ಈಗಿನ ನಮ್ಮ ನಾಟಕಗಳನ್ನು ಅವುಗಳ ರಂಗನಿರ್ದೇಶನಗಳನ್ನು ಹೊರತುಪಡಿಸಿ ಓದಿದಾಗ ನಿರಾಶೆ ಯಾಗುತ್ತದೆ. ಆ ಸಂಭಾಷಣೆ ಎಲ್ಲಿ ಬೇಕಾದಾಗ, ಯಾವಾಗಾದರೂ ನಡೆಯಬಹು ದೆಂಬಂತೆ ತೋರುತ್ತದೆ. ನಿಜ ಜೀವನದಲ್ಲಿ ಕೂಡ ನಾವು ಆಡುವ ಮಾತಿಗೆ ಸುತ್ತಲಿನ ವಾತಾವರಣದ ಬಣ್ಣ ಬಂದುಬಿಡುತ್ತದೆ. ನಾಟಕವಂತೂ ಘಟನೆಗಳನ್ನೇ ಅರ್ಥ ಪೂರ್ಣತೆಗಾಗಿ ಅವಲಂಬಿಸಿರುತ್ತದೆ. ವಾತಾವರಣ ನಿರ್ಮಾಣವೆಂದರೆ ವರ್ಣನೆ ಯೆಂದು ಮಾತ್ರ ತಿಳಿಯಬಾರದು. ಸ್ಥಲ-ಕಾಲಗಳ ಪ್ರಜ್ಞೆ ಆಡುವ ಮಾತಿನಲ್ಲಿ ವ್ಯಕ್ತ ವಾಗುತ್ತಿರಬೇಕು. ಇಬ್ಸೆನ್ನನ 'Ghosts' ದಂಥ ನಾಟಕಗಳಲ್ಲಿ ಈ ಸತ್ಯವನ್ನು ಕಾಣ ಬಹುದಾಗಿದೆ. ಹೊರಗೆ ನಿರಂತರವಾಗಿ ಸುರಿಯುವ ಮಳೆ, ಮನೆಯ ಒಳಗಿನ ಆನು ವಂಶಿಕತೆಯ ಭೂತಲೀಲೆ ಇವುಗಳಿಂದ 'ಆಲ್‌ವಿಂಗ್' ಸೆರೆಯಲ್ಲಿ ಸಿಕ್ಕಂತೆ ನಾಟಕ ಮುಗಿಯುವ ವರೆಗೆ ಒದ್ದಾಡುತ್ತಾನೆ. ಹೀಗೆ ಕತೆಯ ಕ್ರಿಯೆಯೊಡನೆ ನಡೆದ ವಾತಾವರಣದಲ್ಲಿಯ ಬದಲಾವಣೆ ನಾಟಕಲೋಕವನ್ನು ಜೀವಂತವಾಗಿಸುತ್ತದೆ.

ಕನ್ನಡದಲ್ಲಿ ಇತ್ತೀಚೆಗೆ ಪ್ರಕಟವಾದ ಕೆಲವು ನಾಟಕಗಳು ಈ ಗುಣಗಳನ್ನು ಒಳಗೊಂಡಿವೆ. ಕೃಷ್ಣಕುಮಾರ ಕಲ್ಲೂರರ 'ಜಾಗೃತ ರಾಷ್ಟ್ರ', ಜಡಭರತರ 'ಮೂಕಬಲಿ', ಕೀರ್ತಿನಾಥರ 'ಆ ಮನಿ' ಇವು ಈ ಜಾತಿಗೆ ಸೇರಿದ ನಾಟಕಗ ಳಾಗಿವೆ. ಇವುಗಳಲ್ಲಿ ಪ್ರತಿಯೊಂದು ನಾಟಕದ ಕತೆ ಒಂದು ನಿರ್ದಿಷ್ಟವಾದ ಪ್ರದೇಶ

ದಲ್ಲಿ ಬೇರು ಬಿಟ್ಟಿದೆ. ಆ ಸ್ಥಳದಲ್ಲಿಯೇ ನಡೆಯಬಹುದಾದ ಸಂಗತಿಗಳು ಅಲ್ಲಿ ವರ್ಣಿತವಾಗುತ್ತವೆ, ಅದೂ ಒಂದು ನಿಯಮಿತ ಕಾಲಾವಧಿಯಲ್ಲಿ ನಡೆದವುಗಳು ಮಾತ್ರ. 'ಜಾಗೃತ ರಾಷ್ಟ್ರ' ಒಂದು ಐರಿಶ್ ನಾಟಕದಿಂದ ಸ್ಫೂರ್ತಿ ಪಡೆದ ರಾಜಕೀಯ ನಾಟಕವಾಗಿದೆ. ೧೯೪೨ ರ ಚಳವಳಿಯ ಹಿನ್ನೆಲೆಯಲ್ಲಿ, ಯರಗಟ್ಟಿ ಮೋಟರ ಸ್ಟ್ಯಾಂಡಿನಲ್ಲಿಯ ಒಂದು ಚಹದಂಗಡಿಯಲ್ಲಿ ಕ್ರಿಯೆ ನಡೆಯುತ್ತದೆ. ಮೂರುಸಂಜೆಯ ಮಬ್ಬು, ಮೋಟಾರು ಬಂದೊಡನೆ ಹೆಚ್ಚಾಗಿ ಆಮೇಲೆ ಕಡಿಮೆಯಾಗುವ ಗಿರಾಕಿಗಳು ಇವುಗಳ ಮೂಲಕ ರಂಗದ ಹೊರಗೆ ನಡೆಯಬಹುದಾದ ಕ್ರಿಯೆಯನ್ನು ಸೂಚಿಸಲಾಗಿದೆ. ಹೊರಗಿನಿಂದ ಪ್ರವೇಶಿಸುವ ಪ್ರತಿಯೊಬ್ಬ ವ್ಯಕ್ತಿಯೂ (ವಿಶೇಷವಾಗಿ ಡ್ರಾಯ್‌ವ್ಹರ ಮಗದುಮಸಾಬ) ಅಲ್ಲಿಯ ವಾತಾವರಣವನ್ನು ಬಟ್ಟೆಗೆ ಹತ್ತಿಕೊಂಡ ಧೂಳಿನಂತೆ ಒಳಗೆ ತಂದೇ ತರುತ್ತಾನೆ. ೧೯೪೨ ರ ರಾಷ್ಟ್ರೀಯ ಚಳವಳಿ ಹೊರಗಿನಿಂದ ಮುತ್ತುವ ವ್ಯಾಪಕಕ್ರಿಯೆಯಾಗಿದೆ. ಚಹದಂಗಡಿಯಲ್ಲಿ ನಡೆಯುವ ಮುಖ್ಯ ಕ್ರಿಯೆ ಈ ವ್ಯಾಪಕಕ್ರಿಯೆಯ ಹೊಟ್ಟೆಯೊಳಗಡಗಿದ ಗೂಢದಂತೆ ಮೌನವಾಗಿದೆ. ಹೊಸದಾಗಿ ಬೀಸಿದ ಚಳವಳಿಯ ಬಿರುಗಾಳಿಯಲ್ಲಿ ಪ್ರತಿಯೊಬ್ಬರೂ ಸಚೇತನರಾಗಿರುವರೆಂಬುದನ್ನು ತೋರಿಸುವದು ನಾಟಕದ ಉದ್ದೇಶವಾಗಿದೆ. ಈ ಉದ್ದೇಶ ನಾಟಕದ ಎಲ್ಲ ವಿವರಗಳಲ್ಲಿ ವ್ಯಕ್ತವಾಗುತ್ತದೆ. ಚಹದಂಗಡಿಯ ಒಡತಿಯಾದ ಮುದುಕಿಯ ಮಾತಿನಲ್ಲಿ ಈ ಆವೇಶವಿದೆ. ಕಾಯಿಪಲ್ಲೆಯ ಬುಟ್ಟಿಗಳಲ್ಲಿ, ಮೋಟರಿನಲ್ಲಿ, ರೊಟ್ಟಿಯ ಗಂಟಿನಲ್ಲಿ ಏನೇನೋ ಅಡಗಿವೆ. ಪಿಸು-ಮಾತು, ಸಂಜೆಗತ್ತಲೆ ಇವುಗಳ ಮೂಲಕ ಕಂಡುಬರುವ ಗೂಢದಲ್ಲಿ ಚಳವಳಿಯ ಗುಪ್ತಕಾರಸ್ಥಾನ ಕಣ್ಣು ಮಿಟುಕಿಸುತ್ತದೆ. ಅದೇ ರಾತ್ರಿ ಆ ಮುದುಕಿಯ ಮಗ ತನ್ನ ಹೆಂಡತಿಯನ್ನು ಕಂಡುಹೋಗುವ ಸನ್ನಿವೇಶ, ಕನ್ನಡ ನಾಟಕಗಳಲ್ಲಿಯೇ ಅಪೂರ್ವವಾದ ಸನ್ನಿವೇಶವಾಗಿದೆ. ಧಡಧಡ ಹಾರುತ್ತಿರುವ ಅವನೆದೆಯಲ್ಲಿ ಚಳವಳಿಯ ಭಯಪ್ರದ ಯೋಜನೆಗಳು, ಪ್ರಣಯದ ಕಾತರತೆಯೊಂದಿಗೆ ಮಿಡಿಯುತ್ತವೆ. ಅವನ ಕಣ್ಣು ಕಿವಿಗಳೆಲ್ಲ ಹೊರಗೇ ಚಾಚಿವೆ. ಅಲ್ಲಿ ದೂರದ ಕತ್ತಲಲ್ಲಿ, ಏನೇನೋ ನಡೆಯುತ್ತಿದೆ. ರಾತ್ರಿ ನಿರ್ಣಾಯಕವಾಗಿದೆ. ಎದುರಿಗಿದ್ದ ಅಸಹಾಯವಾದ ಹೆಣ್ಣು ಮೂಕವಾಗಿ ಪ್ರಾರ್ಥಿಸುತ್ತದೆ. ಈ ಸನ್ನಿವೇಶದ ಕಾವ್ಯ ಅದರ ತಾತ್ಕಾಲಿಕತೆಯನ್ನು ಬಿಚ್ಚಿ ಒಳಗಿನ ಸಾರ್ವಕಾಲಿಕ ಸತ್ಯವನ್ನು ಹೃದಯವೇಧಕವಾಗುವಂತೆ ತೆರೆಯುತ್ತದೆ. ಉಳಿದ ನಾಟಕಗಳಲ್ಲಿಯಂತೆ ಇಲ್ಲಿ ವ್ಯಕ್ತಿವ್ಯಕ್ತಿಗಳ ನಡುವೆ ಹೋರಾಟವಿಲ್ಲ. ಎಲ್ಲರಿಗೂ ಒಂದು ಆವೇಶ ಸಾಮಾನ್ಯವಾಗಿದೆ; ಒಂದು ಸಾರ್ವತ್ರಿಕವಾದ ಹೋರಾಟದ ಸುಳಿಯಲ್ಲಿ ಎಲ್ಲರೂ ಸಿಕ್ಕುಬಿದ್ದಿದ್ದಾರೆ. ಆ ಹೋರಾಟವನ್ನು ಸುತ್ತಲಿನ ವಾತಾವರಣ ಮಾರ್ಮಿಕವಾಗಿ ಪ್ರತಿಫಲಿಸುತ್ತದೆ.

ಜಡಭರತರ 'ಮೂಕಬಲಿ'ಯ ಸ್ವರೂಪ ಕೌಟುಂಬಿಕವಾಗಿದ್ದರೂ ಅದರ ಬೇರುಗಳು ಸ್ಥಳ ಹಾಗೂ ಕಾಲಗಳಲ್ಲಿ ಆಳವಾಗಿ ಚಾಚಿಕೊಂಡಿವೆ. ಹಾಲಳ್ಳಿಯ ಒಂದು ಮನೆಯೊಳಗಿನ ಒಂದು ರಾತ್ರಿಯ ಜೀವನಚಿತ್ರ ಇಲ್ಲಿದೆ. ಹಾಲಳ್ಳಿ ಹಾಗೂ ಆ ರಾತ್ರಿ ಇವು ಆ ಜೀವನದಷ್ಟೇ ಮಹತ್ವಪೂರ್ಣವಾಗಿವೆ. ಕಥಾನಕದಲ್ಲಿ ಬೆಳವಣಿಗೆಯೇನೂ ಇಲ್ಲ. ಐದಂಕಿನ ದೊಡ್ಡದಾದ ನಾಟಕದಲ್ಲಿ ಕೊನೆಯ ಅಂಕೊಂದನ್ನೇ

ಒರೆದಂತಿದೆ. ಆದರೆ ಸನ್ನಿವೇಶ ಹಾಗೂ ಕಾಲ ನಿರ್ಣಾಯಕವಾಗಿರುವದರಿಂದಲೋ ಏನೋ, ಆ ಒಂದು ಕ್ಷಣದ ಕಾವಿನಲ್ಲಿ ಹಳೆಯ ಇತಿಹಾಸವೆಲ್ಲ ಗೋಚರವಾಗುತ್ತದೆ. ತಡವಾಗಿ ಹುಟ್ಟಿದ ಕೂಸಿಗೆ ಜಡ್ಡಾಗಿ, ಜಡ್ಡು ಬಲಿಯುತ್ತ ಹೋಗಿ, ಕೂಸಿನ ಸಾವಿನಲ್ಲಿ ಕೊನೆಗೊಳ್ಳುವದೇ ಇಲ್ಲಿಯ ಕ್ರಿಯೆ. ಇದೊಂದರ ಒಡಲಿನಲ್ಲಿಯೇ ಗತ ಕಾಲದ ಅನೇಕ ಘಟನೆಗಳು, ವರ್ತಮಾನದ ಅನೇಕ ಸಂಗತಿಗಳು, ಹುಟ್ಟಿ, ಬೆಳೆದು, ಒಡೆದು ಹೋಗುತ್ತವೆ. ಇದಕ್ಕೆ ಕಾರಣವೆಂದರೆ ಆ ಕೂಸಿನ ಹುಟ್ಟು, ಬದುಕು, ಸಾವುಗಳ ಮೇಲೆ ಎರಡು ಮನೆಗಳ ಜೀವನ ಹೊಯ್ದಾಡುತ್ತ ನಿಂತಿದೆ. ದ್ವೇಷ, ಅಸೂಯೆ, ಒಗೆತನದ ಅನಿಶ್ಚಿತತೆ, ಅಂತಃಕರಣದ ಎಳೆತ, ಆಸ್ತಿಯ ಮೋಹ, ವೈಯಕ್ತಿಕ ಪ್ರತಿಷ್ಠೆ, ನೆಲದ ಅಭಿಮಾನ, ಸ್ವಾಮಿನಿಷ್ಠೆ— ಹೀಗೆ ಭಾವಗಳ ವಿಚಿತ್ರ ಮೆರವಣಿಗೆ ಶಾಲಿವಾಹನನ ಸೈನ್ಯದಂತೆ ಒಮ್ಮೆಲೇ ಹೊರಟುಬಿಡುತ್ತದೆ. ಇಲ್ಲಿಯ ವ್ಯಕ್ತಿಗಳು ಹೊಳೆ, ಗುಡ್ಡ, ತೋಟಗಳೊಂದಿಗೆ ಜೀವನವನ್ನು ಹದಗೊಳಿಸಿದವರು. ವಿಧಿ ಅವರನ್ನು ಅಲ್ಲಿಂದ ಬೇರ್ಪಡಿಸುವ ಸಾಹಸದಲ್ಲಿ ತೊಡಗಿದೆ. ನೆಲದ ಋಣ ಅದರ ಸತ್ವದಂತೆ ಒಮ್ಮೆಲೆ ಮುಗಿದುಹೋದಂತಾಗುತ್ತದೆ. ಈ ನಿರ್ಣಾಯಕ ಕ್ಷಣದಲ್ಲಿ, ಈ ವ್ಯಕ್ತಿಗಳಾಡುವ ಮಾತು, ಆರಲಿರುವ ದೀಪದ ಬೆಳಕಿನಂತೆ ಓಜಸ್ಸಿನಿಂದ ತುಂಬಿಕೊಂಡಿದೆ. ಅಂತರಂಗದ ಈ ತುಮುಲಕ್ರಿಯೆಯ ಸೂಚನೆ ವಾತಾವರಣದ ಮೂಲಕ ವ್ಯಕ್ತವಾಗುತ್ತಹೋಗುತ್ತದೆ. ಸಂಜೆಯಿಂದಲೇ ಮಳೆ ಪ್ರಾರಂಭವಾಗಿದೆ; ಮನೆಗೆ ತಿರುಗಲಿರುವ ದನಗಳ ಮೇಲೆ ಅಡವಿಯ ಚಿರ್ಚಿಯೊಂದು ಕಣ್ಣಿಟ್ಟಿದೆ; ಇರುಳ ಕತ್ತಲೆ ಗುಡುಗು ಮಿಂಚುಗಳಿಂದ ಭಯಾನಕವಾಗಿ ಸಜೀವವಾಗಿದೆ. ಆಚಾರ್ಯರ ರಾತ್ರಿಸೂಕ್ತ, ಕಂದೀಲುಗಳ ಓಡಾಟ, ಗಸ್ತಿಯವನ ಕೂಗು ಇವುಗಳಿಂದ ಕೂಡಿದ ರಾತ್ರಿ ಕ್ರಿಯೆಗೆ ಮಹತ್ವದ ಹಿನ್ನೆಲೆಯಾಗಿದೆ. ಈ ವಾತಾವರಣ ಜೀವನದ ಮೂರ್ತ ಸ್ವರೂಪವಾಗಿ ಎದುರು ನಿಂತಾಗ ಈ ವ್ಯಕ್ತಿಗಳು ಅದರರ್ಥವನ್ನು ಹುಡುಕಲು ಹಾತೊರೆಯುವಂತಿದೆ. ಊರೊಳಗಿನ ಸಾಮಾನ್ಯ ಘಟನೆಗಳೂ ಮನೆಯ ಜೀವನವನ್ನು ಮುತ್ತಬೇಕೆಂಬ ಅವಸರದಲ್ಲೋ ಏನೋ, ವೇಗದಿಂದ ಸಾಗಿವೆ. ಅವೆಲ್ಲವುಗಳ ಒಟ್ಟು ಪರಿಣಾಮ ಪ್ರೇಕ್ಷಕರ ಹೃದಯದಲ್ಲಿ ಜೀವನದ ದುರಂತವನ್ನು ಅಚ್ಚೊತ್ತಿಸುತ್ತದೆ. ಬೆಳಗುಹರಿಯುವದರೊಳಗಾಗಿ ಜೀವನದ ಅರ್ಥಶೂನ್ಯತೆ ಕಣ್ಣಿಗೆ ಕಟ್ಟಿದಂತಾಗುತ್ತದೆ. ದುರಂತ-ನಾಟಕಗಳ ದೃಷ್ಟಿಯಿಂದ ನೋಡಿದಾಗ ಕೂಡ, ಈ ಕೃತಿ ಶೇಕ್ಸಪಿಯರನ ರುದ್ರ-ನಾಟಕಗಳ ಕೊನೆಯಂಕದ ಪ್ರಭಾವವನ್ನು ಬೀರುತ್ತದೆ. ವಾತಾವರಣ ಕ್ರಿಯೆಯ ಮೇಲೆ ಪಡೆದ ವಿಜಯವನ್ನು ಇಲ್ಲಿ ಕಾಣಬಹುದಾಗಿದೆ.

ಕೀರ್ತಿನಾಥರ 'ಆ ಮನಿ' ಸಂಪೂರ್ಣವಾಗಿ ಸಾಂಕೇತಿಕವಾದ ನಾಟಕ. ಕೃತಿಯ ದ್ರವ್ಯವೇ ಅದು. 'ಆ ಮನಿ'ಯ ಸುತ್ತು ಹಬ್ಬಿ, ರೂಢವಾಗಿರುವ ಸಾವು. ನೋವಿನ ಕತೆಯನ್ನು ಮುಪ್ಪಿನ ಮುದುಕನೊಬ್ಬ ಹೇಳುತ್ತ ಆ ಪ್ರದೇಶದ ಇತಿಹಾಸವನ್ನು ಜೀವಂತವಾಗಿ ಮಾಡುತ್ತಾನೆ. ಅವನು ಕತೆ ಹೇಳುತ್ತಿರುವಾಗಲೇ, ಶಾಲೆಯ ಹುಡುಗರು ಆ ಮನೆಯಲ್ಲಿ ಬಂದು, ಮದುವೆಯ ಆಟವನ್ನು ಹೂಡಿ ಸಾವನ್ನು ಇಲ್ಲದಾಗಿಸುತ್ತಾರೆ. ಆಟ ಮುಗಿದ ಮೇಲೆ ಮತ್ತೆ 'ಆ ಮನಿ' ನಿಶ್ಚಳವಾಗಿ ಕಣ್ಣೆದುರು

ನಿಲ್ಲುತ್ತದೆ. ಮನೆಯ ಬಾಗಿಲು ತೆರೆದು ಹೊರಬಂದ ತಾಯಿಯು ದೆವ್ವ ಮಲಗಿದ ಮಕ್ಕಳನ್ನು ಹರಸುತ್ತದೆ. ಜೀವನವೇ ಜೀವನದ ಸಂಕೇತವಾಗಿರುವದು ಈ ನಾಟಕದ ವೈಶಿಷ್ಟ್ಯಗಳಲ್ಲೊಂದಾಗಿದೆ. ಈ ನಾಟಕದ ಘಟನೆಗಳೆಲ್ಲ ವಾಸ್ತವಿಕವಾಗಿವೆ. ಭಾಷೆ ಹಾಗೂ ಉಳಿದ ವಿವರಗಳೂ ವಾಸ್ತವಿಕವಾಗಿವೆ. ಅದ್ಭುತರಮ್ಯತೆ ಈ ವಾಸ್ತ-ವಿಕತೆಯನ್ನೊಡೆದೇ ಹೊರಬರುತ್ತದೆ. ವಾಸ್ತವತೆ ಅದ್ಭುತರಮ್ಯತೆಯ ಪ್ರತೀಕದಂತೆ ಭಾಸವಾಗುತ್ತದೆ. ಮಕ್ಕಳು ಬಾಳಿನ ಪ್ರತಿಮೆಗಳಾಗುತ್ತಾರೆ. ಮುದುಕನ ಕತೆ ಯಿಂದ ನಿರ್ಜೀವವಾದ ಮನೆ ಸಜೀವವಾಗುತ್ತದೆ. ನಾಟಕ ಸಹಜವಾಗಿ ಸಾಂಕೇತಿ-ಕತೆಯನ್ನು ಆಶ್ರಯಿಸಿಬಿಡುತ್ತದೆ. ಈ ರೂಪಾಂತರಕ್ಕೆ ವಾತಾವರಣ ಬಹಳ ಸಹಾಯ ಕಾರಿಯಾಗಿದೆ. ಮುದುಕ ಕತೆ ಹೇಳುವದು ಮಟಮಟ ಮಧ್ಯಾಹ್ನದಲ್ಲಿ. ಹುಡು-ಗರು ಸಂಜೆಯ ಬೆಳಕಿನಲ್ಲಿ ಬಾಳುವೆಯ ಕಣ್ಣುಮುಚ್ಚಣಿಕೆಯಾಟವನ್ನಾಡುತ್ತಾರೆ. ಆಟ ಮುಗಿದ ಕೂಡಲೆ ಸುತ್ತಲೂ ಹಬ್ಬಿದ ಬೆಳುದಿಂಗಳ ಅರಿವಾಗುತ್ತದೆ. ಈ ವಾತಾವರಣದ ಮಾಯೆ ನಾಟಕದ ವಸ್ತುವನ್ನು ಸಾಂಕೇತಿಕತೆಯಿಂದ ತುಂಬಿ ಬಿಡುತ್ತದೆ.

ನಾಟಕದಲ್ಲಿ ಸಾಂಕೇತಿಕತೆ ಇನ್ನೂ ನಮ್ಮಲ್ಲಿ ಹೆಚ್ಚಾಗಿ ಬಂದಿಲ್ಲ. ಶ್ರೀರಂಗ ಹಾಗೂ ಬೇಂದ್ರೆಯವರ ಕೆಲ ಶ್ರೇಷ್ಠ ನಾಟಕಗಳಲ್ಲಿ ಅಲ್ಲಲ್ಲಿ ಸಾಂಕೇತಿಕತೆ ಹೊಳೆ-ಯುತ್ತದೆ. ಇಂಥಲ್ಲಿ ನಾಟಕ ಕಾವ್ಯದೊಂದಿಗೆ ಇದ್ದ ತನ್ನ ಮೊದಲಿನ ಸಂಬಂಧ ವನ್ನೇ ಪಡೆಯುತ್ತದೆ. ಸಾಂಕೇತಿಕತೆ ಕಲೆಯ ಬೆಳವಣಿಗೆಗೆ ಸೂಚನೆಯಾಗಿ ಬಂದರೆ ಮಾತ್ರ ಅದು ಸ್ವೀಕಾರಕ್ಕೆ ಯೋಗ್ಯವಾಗುತ್ತದೆ. ಇಲ್ಲದಿದ್ದರೆ ಸಾಂಕೇತಿಕತೆಯ ಹೊರೆಯಲ್ಲಿ ವಸ್ತುವಿನ ತಿರುಳು ಮರೆಯಾಗುವ ಭಯವಿದೆ. ಕನ್ನಡದಲ್ಲಿ ಇಲ್ಲಿಯ ವರೆಗೆ ಅಂಥದೇನೂ ಆಗಿಲ್ಲವೆಂಬುದು ಸಂತೋಷದ ಸಂಗತಿಯಾಗಿದೆ.

## ಐತಿಹಾಸಿಕ ನಾಟಕ

ಒಂದು ಕಾಲಕ್ಕೆ ಇತಿಹಾಸ ನಮ್ಮ ರಂಗಭೂಮಿಯನ್ನು ಬಹುಮಟ್ಟಿಗೆ ವ್ಯಾಪಿ ಸಿತು. ಕನ್ನಡದ ಪುನರ್ನಿರ್ಮಾಣದ ಉತ್ಸಾಹದಲ್ಲಿದ್ದ ಲೇಖಕರು ನಾಡಿನ ಇತಿಹಾಸ ವನ್ನು ನಾಟಕ ಕಾದಂಬರಿಗಳ ಮೂಲಕ ಚಿತ್ರಿಸಿದರು. ಇಂಥ ಲೇಖಕರಲ್ಲಿ 'ಸಂಸ'ರು ಮೊದಲಿಗರಾಗಿದ್ದಾರೆ. ಇವರು ಬರೆದ ಇಪ್ಪತ್ತುಮೂರು ನಾಟಕಗಳಲ್ಲಿ ಈಗ ಆರು ಮಾತ್ರ ಉಳಿದುಕೊಂಡಿವೆ. 'ಸಂಸ'ರ 'ನಾಟಕಚಕ್ರ' ಮೈಸೂರಿನ ರಾಜ ಒಡೆಯರ ಇತಿಹಾಸವನ್ನು ನಿರೂಪಿಸುತ್ತದೆ. ಅರಮನೆಯಲ್ಲಿಯ ತಂತ್ರಕೋಲಾಹಲಕ್ಕೆ ಸ್ವಾಭಾವಿಕವಾಗಿಯೇ ನಾಟಕೀಯತೆ ಇರುತ್ತದೆ. 'ಸಂಸ'ರು ಅದರ ಸದುಪಯೋಗ ಮಾಡಿಕೊಂಡರು. ಅವರ ಎಲ್ಲ ನಾಟಕಗಳಲ್ಲಿ ದೊರೆಯ ವಿರುದ್ಧವಾಗಿಯೋ, ಸ್ವಂತ ಪ್ರತಿಷ್ಠೆಗಾಗಿಯೋ ನಡೆಸಿದ ತಂತ್ರ ಪ್ರತಿತಂತ್ರಗಳನ್ನು ಕಾಣಬಹುದಾಗಿದೆ. ಇದ ರಿಂದಾಗಿ ಸಹಜವಾಗಿಯೇ ಇವರ ನಾಟಕ ಕ್ರಿಯಾತ್ಮಕವಾಗಿದೆ. ಕ್ರಿಯೆ ವೇಗದಿಂದ ಚಲಿಸುತ್ತ ಪಾತ್ರವರ್ಗವನ್ನೇ ಕಬಳಿಸಿಬಿಡುವಂತೆ ತೋರುತ್ತದೆ. 'ಬೆಟ್ಟದರಸು' ನಾಟಕವನ್ನು ಇದಕ್ಕೆ ಉದಾಹರಣೆಯಾಗಿ ನೋಡಬಹುದಾಗಿದೆ. ಅರಮನೆಯಲ್ಲಿ ಗುಪ್ತವಾಗಿ ನಡೆದ ಒಳಸಂಚುಗಳು, ಅವುಗಳಿಗೆ ಪ್ರತಿನಿಧಿಯಾಗಿರುವ ರಂಗನಾಥ

ದೀಕ್ಷಿತರಂಥ ಪಾತ್ರಗಳು, ನಿಷ್ಕ್ರಿಯನಾದ ದೊರೆ, ಇವೆಲ್ಲವುಗಳ ವಿರುದ್ಧವಾಗಿ ಕುಮಾರ ರಣಧೀರನ ಸತ್ವಪೂರ್ಣವಾದ ಪ್ರತಿಕ್ರಿಯೆ, ನಾಟಕದ ಜೀವಂತತನ ವನ್ನು ಕಡಿಮೆಯಾಗಗೊಡುವದಿಲ್ಲ. ಪ್ರತಿಯೊಂದು ದೃಶ್ಯದಲ್ಲಿ ಹೊಸದೇನಾದರೂ ನಡೆದಿರಲೇಬೇಕೆಂಬ ಕುತೂಹಲದಿಂದ ನೋಡಿದಾಗ ನಿರಾಶೆಯಾಗುವದಿಲ್ಲ. ಆದರೆ ಐತಿಹಾಸಿಕ ವಸ್ತುವಿನ ಒಂದು ದೋಷ 'ಸಂಸ'ರ ನಾಟಕಗಳಲ್ಲಿಯೂ ಕಾಣದೆ ಹೋಗುವದಿಲ್ಲ. ಇತಿಹಾಸ ಗತಕಾಲಕ್ಕೆ ಸೇರಿರುವದರಿಂದಲೋ ಏನೋ ಅದರಲ್ಲಿ ವೈವಿಧ್ಯ ಕಾಣುವದಿಲ್ಲ. ಆದ್ದರಿಂದ ಸಾಮಾನ್ಯವಾಗಿ ಒಂದು ನಾಟಕದಂತೆ ಇನ್ನೊಂದು ನಾಟಕ ಕಾಣುವ ಸಂಭವ ಹೆಚ್ಚು. ಐತಿಹಾಸಿಕತೆಯ ಅಪಾಯವೇ ಅದಾಗಿದೆ. 'ಅಲೆಕ್ಸಾಂಡರ ಡೂಮಾ'ನ ಕಾದಂಬರಿಗಳನ್ನು ಇದಕ್ಕೆ ಉದಾಹರಣೆ ಯಾಗಿ ಕೊಡಬಹುದು. ಕತೆ ಒಂದು ಕೃತಿಯಿಂದ ಇನ್ನೊಂದಕ್ಕೆ ಬೇರೆಯಾದರೂ, ಜೀವನದ ಹಿನ್ನೆಲೆ ಹಾಗೂ ವಿವರಗಳು ಪರಿಮಿತವಾಗಿರುವದರಿಂದ ಈ ದೋಷ ಅನಿವಾರ್ಯವಾಗಿದೆ.

'ಸಂಸ'ರು ಉಪಯೋಗಿಸಿದ ಭಾಷೆಯ ಬಗ್ಗೆಯೂ ಒಂದು ಮಾತನ್ನು ಹೇಳ ಬೇಕು. 'ಸಂಸ'ರು ಸಂಪೂರ್ಣವಾಗಿ ಹಳೆಗನ್ನಡವನ್ನೇ ಉಪಯೋಗಿಸಿದ್ದಾರೆ. ಮುದ್ದ ಣನ ಭಾಷೆಯ ಸತ್ವ ಇಲ್ಲಿ ಕಾಣದಿದ್ದರೂ, 'ಸಂಸ'ರು ಸಂಭಾಷಣೆಗೆ ಹಳೆಗನ್ನಡ ವನ್ನು ಹದಗೊಳಿಸಿದ್ದು ಆಶ್ಚರ್ಯಕರವಾಗಿದೆ. ನಾಂದಿ ಹಾಗೂ ಭರತವಾಕ್ಯಗಳು ವೃತ್ತಗಳಲ್ಲಿವೆ. ಅಲ್ಲಲ್ಲಿ ಕಂದಪದ್ಯಗಳನ್ನೂ ಉಪಯೋಗಿಸಲಾಗಿದೆ. ಈ ನಾಟಕಗಳ ನ್ನೋದುವಾಗ 'ಮಿತ್ರವಿಂದಾ ಗೋವಿಂದ'ದ ನೆನಪು ಪ್ರತಿಕ್ಷಣದಲ್ಲೂ ಆಗುತ್ತದೆ. ಹಳೆಗನ್ನಡದ ರಾಜಗಾಂಭೀರ್ಯ ಐತಿಹಾಸಿಕ ವಸ್ತುವನ್ನು ಯಾವುದೋ ಕಾಲದ ಕಾಂತಿಯಿಂದ ಬೆಳಗುತ್ತದೆ; ಕೆಲವು ಪದಪುಂಜಗಳಂತೂ ಕಿವಿಗೆ ಮಧುರವಾಗಿವೆ. ಆದರೂ ನಾಟಕಗಳಲ್ಲಿ ಈ ರೀತಿಯ ಭಾಷಾಪ್ರಯೋಗ ಎಷ್ಟರಮಟ್ಟಿಗೆ ಉಚಿತ ವಾದೀತೆಂಬುದರ ಬಗ್ಗೆ ವಿಚಾರಿಸಬೇಕಾಗಿದೆ. 'ಸಂಸ'ರು ಸಮರ್ಥರಾದ ವಿದ್ವಾಂಸ ರಾದ್ದರಿಂದ ಹಳೆಗನ್ನಡವನ್ನು ಹದವರಿತು ನುಡಿಸಿದ್ದಾರೆ. ಇನ್ನು ಮುಂದೆ ಇಂಥ ಭಾಷಾಪ್ರಭುತ್ವ ಸಾಧ್ಯವಾಗಲಿಕ್ಕಿಲ್ಲ. ಮೇಲಾಗಿ ಕ್ಲಿಷ್ಟವಾದ ಭಾಷೆ ನಾಟಕದ ಸದ್ಯಃಪ್ರಭಾವಕ್ಕೆ ಎಲ್ಲಿ ಅಡ್ಡಿತರುತ್ತದೋ ಎಂಬ ಹೆದರಿಕೆಯೂ ಇದೆ. 'ಸಂಸ'ರ ಈ ಶೈಲಿ ಐತಿಹಾಸಿಕವಾಗಿ ಉಳಿದೇ ಉಳಿಯುತ್ತದೆ. ಯಾಕಂದರೆ ನಾಟ್ಯಮಯತೆಗೆ ಇದೊಂದೆ ಉದಾಹರಣೆ ನಮಗೀಗ ಸಿಗುವದು. ಇಂಗ್ಲೀಷದಲ್ಲಿಯ ೧೮ನೇ ಶತ- ಮಾನದ 'heroic-plays'ದ ರೀತಿಯ ನೆನಪು ಈ ನಾಟಕಗಳಿಂದ ನಮಗುಂಟಾಗು ತ್ತದೆ.

'ಸಂಸ'ರ ತರುವಾಯ ಇಷ್ಟು ಸಂಖ್ಯೆಯಲ್ಲಿ ಐತಿಹಾಸಿಕ ನಾಟಕಗಳನ್ನು ಯಾರೂ ಬರೆಯಲಿಲ್ಲ. ಪುಟ್ಟಪ್ಪನವರ 'ರಕ್ತಾಕ್ಷಿ' ಐತಿಹಾಸಿಕ ನಾಟಕವಾದರೂ ಶೇಕ್ಸಪಿಯರನ 'ಹ್ಯಾಮ್ಲೆಟ್' ನಾಟಕದ ಕಲ್ಪನೆ, ಶೈಲಿಗಳೇ ಅಲ್ಲಿ ಪ್ರಮುಖವಾಗಿವೆ. ಎಂ. ಆರ್. ಶ್ರೀಯವರ 'ಧರ್ಮದುರಂತ'ದಲ್ಲಿ ವಸ್ತು ಶೈಲಿಗಳ ಅಂತರ ಬಹಳ ಹೆಚ್ಚಾಗಿ ನಾಟಕ ಸರಿಯಾದ ಪ್ರಭಾವವನ್ನು ಬೀರಲು ಅಸಮರ್ಥವಾಗಿದೆ. ರಂ. ಶ್ರೀ. ಮುಗಳಿಯವರ 'ಸೇವಾಪ್ರದೀಪ' ವಿಜಯನಗರ ಕಾಲದ ಒಂದು ಜೀವನಚಿತ್ರ

ವನ್ನು ನಿರೂಪಿಸುತ್ತದೆ. ಆದರೆ ಅಲ್ಲಿ ಕಥಾನಕದ ಕಲ್ಪಕತೆ ಕೃತಕವೆಂದೆನಿಸುತ್ತದೆ. ಇತಿಹಾಸವನ್ನು ನೋಡುವ ವಸ್ತುನಿಷ್ಠವಾದ ದೃಷ್ಟಿಯು ಅಲ್ಲಿಲ್ಲ. ಅವರದೇ 'ಅಕ್ಕಮಹಾದೇವಿ' ಎಲ್ಲ ದೃಷ್ಟಿಯಿಂದಲೂ ಸುಂದರವಾದ ನಾಟಕ. ಅಕ್ಕನ ಅಂತಃಸತ್ವವನ್ನು ಅವಳ ವಚನಗಳ ಮುಖಾಂತರವಾಗಿ ಮನೋಜ್ಞವಾಗಿ ನಿರೂಪಿಸಲಾಗಿದೆ. ಉಳಿದ ವಾತಾವರಣ ಕೂಡ ಯಥಾರ್ಥವಾಗಿ ಚಿತ್ರಿತವಾಗಿದೆ. ಮಾಸ್ತಿಯವರ 'ತಾಳೀಕೋಟೆ' ವಿಜಯನಗರದ ದಾರುಣವಾದ ಕೊನೆಯನ್ನು ಮಾನವೀಯವಾಗಿ ಚಿತ್ರಿಸುವ ಶ್ರೇಷ್ಠ ಕಲಾಕೃತಿಯಾಗಿದೆ. ನಾಡಿನ ದೈವ ಹಾಗೂ ವ್ಯಕ್ತಿಗಳ ಬಲಾಬಲಗಳನ್ನು ಮಾಸ್ತಿಯವರು ಅಂತಃಕರಣದ ಆತ್ಮೀಯತೆಯಿಂದ ಕಂಡಿದ್ದಾರೆ. ನಾಟಕವನ್ನೋದಿ ಮುಗಿಸಿದ ಮೇಲೆ ಅವರು ಅದೇ ದಾರಿಯಲ್ಲಿ ಏಕೆ ಮುಂದರಿಯಲಿಲ್ಲವೋ ಎಂದೆನಿಸದಿರದು.

ಆದರೆ ಐತಿಹಾಸಿಕ ವಿಷಯವನ್ನುಪಯೋಗಿಸಿಕೊಂಡು ಅದರ ಮುಖಾಂತರವಾಗಿ ಸತ್ಯದ ಹೊಸ ಪದರುಗಳನ್ನು ಹುಡುಕಿ ತೆಗೆಯುವ ಪ್ರಯತ್ನವನ್ನು ಯಾರೂ ಮಾಡಿಲ್ಲ. ಇತಿಹಾಸಕಾಲದ ಜೀವನವನ್ನು ಪುನಃ ಸೃಷ್ಟಿಸುವದು, ಇಲ್ಲದಿದ್ದರೆ ಇತಿಹಾಸಕ್ಕೆ ಹೊಸ ಬಣ್ಣವನ್ನು ಸವರಿ ನೋಡುವದು ಇಷ್ಟು ಕೆಲಸವನ್ನು ಮಾತ್ರ ನಮ್ಮ ನಾಟಕಗಳು ಮಾಡಿವೆ. ಹಳೆಯದನ್ನು ಪುನರುಜ್ಜೀವಿಸುವದರ ಜೊತೆಗೆ, ಹಳೆಯುದನ್ನು ಹೊಸತಾಗಿ ನೋಡುವ ದೃಷ್ಟಿಯೊಂದು ನಮ್ಮಲ್ಲಿ ಬರಬೇಕು. ಇತಿಹಾಸದ ಕಚ್ಚಾಮಾಲನ್ನುಪಯೋಗಿಸಿಕೊಂಡ ಹೊಸ ಕಲಾಕೃತಿಗಳು ಹುಟ್ಟಬೇಕಾಗಿದೆ. ಉಳಿದ ಕ್ಷೇತ್ರಗಳಲ್ಲಿ 'ಶಾ:', 'ಇಬ್ಸೆನ್ನ'ರು ಮಾದರಿಗಳಾದಂತೆ ಇಲ್ಲಿಯೂ ಆಗಬೇಕಾಗಿತು. 'Caeser and Cleopatra'ದಂಥ, 'St. Joan'ದಂಥ ಒಂದಾದರೂ ಕೃತಿ ಕನ್ನಡದಲ್ಲಿ ಬರದಿರುವದು ಶೋಚನೀಯವಾಗಿದೆ. ಬೇಂದ್ರೆಯವರ 'ತಲೆ-ದಂಡ' ಅನೇಕ ವರ್ಷಗಳಿಂದ ರಸಿಕರ ಆಸೆಗಳನ್ನು ಕೆರಳಿಸುತ್ತ ಬಂದು ಇನ್ನೂ ಅಲಿಖಿತವಾಗಿ ಉಳಿದಿದೆ.

## ನಾಟಕದಲ್ಲಿ ಪೌರಾಣಿಕತೆ

ಸಾಹಿತ್ಯಿಕವಾಗಿ ಬರೆದ ಕೆಲವು ಪೌರಾಣಿಕ ನಾಟಕಗಳ ಬಗ್ಗೆ ಇಲ್ಲಿ ವಿಚಾರ ಮಾಡುವದು ಅಗತ್ಯವಾಗಿದೆ. ಕಂಪನಿ ನಾಟಕಗಳಲ್ಲಿ ಪೌರಾಣಿಕತೆ ಕೇವಲ ಪ್ರೇಕ್ಷಕರ ಭಕ್ತಿಭಾವಗಳಿಗೆ ಆಹಾರವನ್ನೊದಗಿಸಲು ಮಾತ್ರ ಬರುತ್ತದೆ. ಆದ್ದರಿಂದ ಅಲ್ಲಿ ಸಂವಿಧಾನಕ್ಕಿಂತ ಅದ್ಭುತಚಮತ್ಕಾರಗಳಿಗೆ ಮಹತ್ವ ಹೆಚ್ಚಾಗುತ್ತದೆ. ಆದರೆ ಪುರಾಣಗಳನ್ನು ಸಾಹಿತ್ಯಿಕವಾಗಿ ನೋಡುವದೂ ಸಾಧ್ಯವಿದೆ. 'ಶ್ರೀ'ಯವರ 'ಅಶ್ವತ್ಥಾಮನ್', ವೀ.-ಸೀ. ಯವರ 'ಆಗ್ರಹ', ಸಿ. ಕೆ.ಯವರ 'ಮಂಡೋದರಿ', 'ನಚಿಕೇತ'ಗಳು, ಕೈಲಾಸಂರ 'ಕೀಚಕ' (ಜಿ. ಪಿ. ರಾಜರತ್ನಂರು ಮಾಡಿದ ಕನ್ನಡ ಅನುವಾದ) ಇಂಥ ನಾಟಕಗಳಾಗಿವೆ. 'ಶ್ರೀ'ಯವರು ಗ್ರೀಕ ನಾಟಕ ಕಲೆಯ ಒಪ್ಪವನ್ನು ಈ ಕತೆಗಳಿಗೆ ಹಾಕಹೋಗಿ, ಸಹಜವಾಗಿ ಅಲ್ಲಿಯ ಜೀವನದೃಷ್ಟಿಯನ್ನೂ ಇಲ್ಲಿ ತಂದು ಬಿಟ್ಟರು. ಪೌರಾಣಿಕದೃಷ್ಟಿಯಿಂದ ಅಲ್ಲಲ್ಲಿ ಕೊರತೆಗಳು ಕಂಡುಬಂದರೂ 'ಶ್ರೀ'ಯವರ 'ಅಶ್ವತ್ಥಾಮನ್' ಉಜ್ವಲವಾದ ನಾಟಕವಾಗಿದೆ.

ಅಶ್ವತ್ಥಾಮನ ವೀರ ದುರಂತ ಕ್ರಿಯೆಗಳಲ್ಲಿ ಏನೋ ಒಂದು ಓಜಸ್ಸು ಕಾಣುತ್ತಿದೆ. ಇದರಲ್ಲಿಯ ಮೇಳಗೀತಗಳ ಕಾವ್ಯದ ಉತ್ಕಟತೆ, ನಾಟಕದ ತಿರುಳನ್ನು ಅಲೌಕಿಕ ವಾಗಿಸುತ್ತವೆ. 'ಶ್ರೀ'ಯವರ ಕವಿತೆಗಳಲ್ಲಿರುವ ಮಿಂಚಿನ ಸಂಚಾರವನ್ನು ಈ ನಾಟಕ ದಲ್ಲಿಯೂ ಕಾಣಬಹುದಾಗಿದೆ. ಆದರೆ ಕಾವ್ಯದ ಹೊಳಪು ಪೌರಾಣಿಕ ನೀತಿಗೆ ಕುಂದನ್ನು ತರುತ್ತದೆ. ಅಶ್ವತ್ಥಾಮನ ಉದಾತ್ತತೆ, ಅವನ ವೀರಮರಣ ನೈತಿಕ ಅವಶ್ಯಕತೆಗಳಾಗಿವೆಯೆ ? ಪುರಾಣದಲ್ಲಿಯ ಅಶ್ವತ್ಥಾಮನ ಅನುದಾತ್ತತೆಯಲ್ಲಿಯೂ ಅಲೌಕಿಕವಾದ ಕಾವ್ಯವೇ ಇಲ್ಲವೆ ? ದುರ್ಯೋಧನ, ಇಯಾಗೊ ಮೊದಲಾದ ಖಳರ ಓಜಸ್ಸು ಕೂಡ ಕಾವ್ಯವಸ್ತುವಾಗಿಲ್ಲವೆ? ಕೈಲಾಸಂರ ಕೀಚಕನ ಪಾತ್ರವೂ ಇದೇ ಸಮಸ್ಯೆಗಳನ್ನು ತಂದೊಡ್ಡುತ್ತದೆ.

ರನ್ನನ ದುರ್ಯೋಧನ ನಮ್ಮ ವಿಮರ್ಶಕರಿಂದ ಪ್ರತ್ಯಭಿಜ್ಞಾನವನ್ನು ಪಡೆದ ನಂತರ ಇತ್ತೀಚೆಗೆ ಪುರಾಣದ ಖಳರೆಲ್ಲ ಉದಾತ್ತವ್ಯಕ್ತಿಗಳಾಗುತ್ತಿದ್ದಾರೆ. ಈ ಮಾರ್ಪಾಟುಗಳ ಜವಾಬ್ದಾರಿ ಬಹಳ ದೊಡ್ಡದಾಗಿದೆ. ಈ ಉದಾತ್ತೀಕರಣಕ್ಕೆ ಭಾವ ನಾವಶತೆಯೇ ಮೂಲ ಕಾರಣವಾಗಿದ್ದಾಗಲಂತೂ ಅದು ತಂದಿಡುವ ತೊಡಕುಗಳು ಅನೇಕವಾಗಿವೆ. ಉದಾಹರಣೆಗೆ ಕೈಲಾಸಂರ 'ಕೀಚಕ' ಅವರ ನಾಟಕದಲ್ಲಿ ಶೌರ್ಯ, ಔದಾರ್ಯ ಮೊದಲಾದ ಗುಣಗಳಿಂದ ವಿಜೃಂಭಿಸುತ್ತಾನೆ. ಅವನು ರಸಿಕ ಕಲಾವಿದನೂ ಹೌದು. ದ್ರೌಪದಿಯ ಬಗ್ಗೆ ಅವನಿಗೆ ಆದರ್ಶಪ್ರಾಯವಾದ ಪ್ರೇಮವಿದೆ. ಪಣದಲ್ಲಿ ಸೋತಂದಿನಿಂದ, ಮದುವೆಯ ಆಸೆಯನ್ನು ತೊರೆದು ಅವನು ವೈರಾಗ್ಯಶೀಲನಾಗಿ ದ್ದಾನೆ. ಸೈರಂಧ್ರಿಯ ರೂಪ ದ್ರೌಪದಿಯ ನೆನಪನ್ನು ಕೆರಳಿಸಿದ್ದರಿಂದ ಮಾತ್ರ ಅವನು ಅವಳನ್ನು ಮೋಹಿಸುತ್ತಾನೆ. ಭೀಮನೊಡನೆ ಮಲ್ಲಯುದ್ಧಕ್ಕೊಪ್ಪುವದು ವೀರನ ಆಹ್ವಾನವೆಂದು ಮಾತ್ರ. ಅವನು ಭೀಮನೆಂದು ತಿಳಿದ ಮೇಲೆ ಅವನಿಗೆ ಎಲ್ಲಿಲ್ಲದ ಪಶ್ಚಾತ್ತಾಪ ಉಂಟಾಗುತ್ತದೆ. ಇವೆಲ್ಲವುಗಳಿಂದ ಕೀಚಕನ ಬಗ್ಗೆ ನಮ್ಮಲ್ಲಿ ಸಹಾನುಭೂತಿ ಹುಟ್ಟುತ್ತದೆ. ಎಲ್ಲ ನಿಜ. ಆದರೆ ಇದರಿಂದ ಸಾಧಿಸುವದೇನನ್ನು ? ಆಧುನಿಕ ವಿಚಾರವುಳ್ಳ ಆದರ್ಶಪ್ರೇಮಕ್ಕೂ, ಪರಸ್ತ್ರೀಮೋಹಕ್ಕೂ ಮಹದಂತರ ವಿದೆಯೆಂಬುದನ್ನು ನಾವು ಮರೆಯಬಾರದು. ಈ ನಾಟಕದಲ್ಲಿ ಪಾಂಡವರ ದುಃಖ ವಾಗಲಿ, ದ್ರೌಪದಿಯ ಪರಿಭವವಾಗಲಿ ತಪ್ಪುವದಿಲ್ಲ. ಕೀಚಕನಿಗೆ ಅಂಥದೇ ಮರಣ ಸಂಭವಿಸುತ್ತದೆ. ದ್ರೌಪದಿ ಹಾಗೂ ಭೀಮರ ಪಾತ್ರರಚನೆ ಸದೋಷವಾಗಿ ಪರಿಣ- ಮಿಸುತ್ತದೆ. ಮೂಲ ಕಥೆಯ ಅಂತಃಸತ್ವ ಎಲ್ಲಿಯೋ ಮರೆಯಾಗಿಬಿಡುತ್ತದೆ. ಕೊನೆಗೆ ಉಳಿಯುವದೆಂದರೆ ಕೀಚಕನ ಬಗ್ಗೆ ಕನಿಕರ ಮಾತ್ರ. ಇದೊಂದು ಕಾರಣಕ್ಕಾಗಿಯೇ ಅವನನ್ನು ದುರಂತ-ನಾಯಕನೆಂದು ಕರೆಯೋಣವೇ? ಮೇಲಾಗಿ ಮತ್ಸ್ಯದೇಶದ ಆ ವಾತಾವರಣದಲ್ಲಿ ಇನ್ನೊಂದು ರೀತಿಯ ಕೀಚಕನಿದ್ದನೆಂದು ನಂಬುವದಾದರೂ ಹೇಗೆ ? ವಿಮರ್ಶೆಯ ವಿವೇಕ ಅದನ್ನೊಪ್ಪುವದಿಲ್ಲ. ಭಾಸನ 'ಊರುಭಂಗ'ದಲ್ಲಿ ದುರ್ಯೋಧನನ ಪಾತ್ರವೂ ಹೀಗೆಯೇ ಬಂದಿದೆಯಲ್ಲ ಎಂದು ವಾದ ಹೂಡ ಬಹುದು. ಆದರೆ ಭಾಸ ದುರ್ಯೋಧನನ್ನು ಪಶ್ಚಾತ್ತಾಪದ ಒಂದು ಭಾವಲಹರಿ ಯಲ್ಲಿ ಹಿಡಿದಿದ್ದಾನೆಯೇ ಹೊರತು ಅವನ ದುಷ್ಟತನವನ್ನು ನಿರಾಕರಿಸುವದಿಲ್ಲವೆಂಬ ಮಾತನ್ನು ಮರೆಯಲಾಗದು. ಈ ದೃಷ್ಟಿಯಿಂದ ನೋಡಿದಾಗ ವೀ. ಸೀ. ಯವರ

'ಆಗ್ರಹ' ಯಶಸ್ವಿಯಾಗಿದೆ. 'ಶ್ರೀ'ಯವರ 'ಅಶ್ವತ್ಥಾಮನ್'ದ ಕಾವ್ಯದ ಉಜ್ವಲತೆ ಇದಕ್ಕಿಲ್ಲ. ಆದರೆ ಮೂಲ ಕತೆಯ ಬಣ್ಣ ಕೆಡದೆ ಅದಕ್ಕೆ ಹೊಸ ಒಪ್ಪ ಬಂದಿದೆ. ಅಶ್ವತ್ಥಾಮನ ಅವಿವೇಕ ಅವನ ದುರಂತಕ್ಕೆ ಕಾರಣವಾಗುವದು, ದುಃಖವನ್ನು ಹುಟ್ಟಿಸಿಯೂ ಮನುಷ್ಯನೀತಿಗೆ ಅವಿರೋಧವಾಗಿದೆ. ಅದು ನಿಜವಾದ ಕಲೆಯ ದಾರಿಯಾಗಿದೆ. ಸಿ. ಕೆ. ಯವರ 'ಮಂಡೋದರಿ' ಹಾಗೂ 'ನಚಿಕೇತ'ಗಳು ಸರಳವಾಗಿದ್ದರೂ ಕೂಡ, ಅವು ಪಂಡಿತ ಕವಿಗಳ ಪಾಂಡಿತ್ಯದ ಪ್ರಯೋಗಗಳಾಗಿವೆ. ರಚನೆ, ಶೈಲಿ, ಭಾಷೆ ಇವೆಲ್ಲ ಪ್ರಮಾಣಬದ್ಧವಾಗಿ ನಿರೀಕ್ಷಿಸಿದಷ್ಟೇ ಫಲವನ್ನು ಕೊಡುತ್ತವೆ.

ಇದೇ ಸಂದರ್ಭದಲ್ಲಿ ಪದ್ಯ-ನಾಟಕಗಳ ಬಗ್ಗೆಯೂ ಪರಿಶೀಲಿಸುವದು ಒಳ್ಳೆಯದು. ಇದಕ್ಕೆ ಕಾರಣವೆಂದರೆ ಪದ್ಯ-ನಾಟಕಗಳು ಸಾಮಾನ್ಯವಾಗಿ ಪೌರಾಣಿಕವಸ್ತುಗಳನ್ನಾರಿಸಿಕೊಂಡು ಬರೆದಂಥವುಗಳು. ಸಾಮಾಜಿಕ ವಿಷಯಗಳನ್ನುಪಯೋಗಿಸಿ-ಕೊಂಡು ಪದ್ಯ-ನಾಟಕಗಳನ್ನು ರಚಿಸಿದ ಟಿ. ಎಸ್. ಇಲಿಯಟ್ ಕೂಡ ಈ ಮಾತು ಅಪರಿಹಾರ್ಯವೆಂದು ಒಪ್ಪಿಕೊಂಡಿದ್ದಾನೆ. ಈ ನಾಟಕಗಳ ಮಾಧ್ಯಮ ಪದ್ಯವಾಗಿರುವದೇ ಒಂದು ತೊಡಕಾಗಿದೆ. ಅದಕ್ಕಾಗಿ ವಸ್ತುವನ್ನು ಸಮಕಾಲೀನತೆಯ ಬಂಧನದಿಂದ ಮುಕ್ತಗೊಳಿಸಿದಾಗ ಸಂಭಾಷಣೆ ಸಹಜವಾಗಿಬಿಡುತ್ತದೆ. ಪೌರಾಣಿಕ ವ್ಯಕ್ತಿಗಳು ಕಾವ್ಯದಲ್ಲಿ ಮಾತಾಡುವದು ಅವಾಸ್ತವವಾದರೂ, ಆ ಜೀವನದ ರಮ್ಯತೆಗೆ ಕುಂದು ಬರಲಾರದು. ಈ ತೊಡಕಿನ ಸಲುವಾಗಿಯೇ ಏನೋ ನಮ್ಮಲ್ಲಿಯ ಪದ್ಯ-ನಾಟಕಗಳು ಕೂಡ, ಪೌರಾಣಿಕ ಇಲ್ಲವೆ ಐತಿಹಾಸಿಕವಾಗಿವೆ. ಕು.ವೆಂ.ಪುರವರ 'ರಕ್ತಾಕ್ಷಿ' ಕನ್ನಡ ಇತಿಹಾಸದಿಂದ ಕಥಾವಸ್ತುವನ್ನಾಯ್ದುಕೊಂಡು ಶೇಕ್ಸಪಿಯರನ 'ಹ್ಯಾಮ್ಲೆಟ್' ನಾಟಕದ ವಿವರಗಳಲ್ಲಿ ಬರೆಯಲಾಗಿದೆ. ಲೇಖಕರ ಕಣ್ಣೆದುರಿಗೆ ಶೇಕ್ಸಪಿಯರನ ಮಾದರಿಯಿರುವದರಿಂದ ಪುರುಷಪ್ರಮಾಣದ ಪಾತ್ರರಚನೆ ಇಲ್ಲಿ ಸಾಧ್ಯವಾಗಿದೆ. ರುದ್ರಾಂಬೆ, ಬಸವಯ್ಯ, ನಿಂಬಯ್ಯ, ಶಿವಯ್ಯ, ಸೋಮಯ್ಯ ಈ ಪಾತ್ರಗಳು ಸಹಜವಾದ ಅಭಿವ್ಯಕ್ತಿಯನ್ನು ಪಡೆದು ಸ್ವತಂತ್ರವಾಗಿ ಓಡಾಡುತ್ತವೆ. ಆದರೆ ಪ್ರಕೃತಿವರ್ಣನೆಗಿಂತ ವಾತಾವರಣ-ಸೃಷ್ಟಿ ಹಾಗೂ ಅಂತರಂಗದ ಚಿತ್ರಣಕ್ಕೆ ಹೆಚ್ಚು ಮಹತ್ವ ಕೊಟ್ಟಿದ್ದರೆ ನಾಟಕ ಹೆಚ್ಚು ಕಲಾತ್ಮಕವಾಗುತ್ತಿತ್ತೆಂಬುದರಲ್ಲಿ ಸಂಶಯವೇ ಇಲ್ಲ. ಕು.ವೆಂ.ಪುರವರ ಉಳಿದ ಪದ್ಯನಾಟಕಗಳಿಗೆ ಮಾತ್ರ ಈ ಘನತೆ ಗೌರವಗಳಿಲ್ಲ. 'ವಾಲ್ಮೀಕಿಯ ಭಾಗ್ಯ', 'ಸ್ಮಶಾನ ಕುರುಕ್ಷೇತ್ರಂ', 'ಮಹಾ-ರಾತ್ರಿ' ಈ ನಾಟಕಗಳು ತೀರ ಚಿಕ್ಕವಾಗಿವೆ. ಪುರಾಣೇತಿಹಾಸಗಳ ಗೊಮ್ಮಟರನ್ನು ಕಡ್ಡಿಪೆಟ್ಟಿಗೆಯಲ್ಲಿ ಸೆರೆಹಿಡಿದಂತಾಗಿದೆ. ಸನ್ನಿವೇಶದ ರಚನೆಗಾಗಲಿ, ರಸಪೋಷಣೆಗಾಗಲಿ ಅವಕಾಶ ಸಿಗದೆ, ಎಲ್ಲವನ್ನೂ ಅವಸರದಲ್ಲಿ ಮುಗಿಸಿದಂತಾಗಿದೆ.

ಮಾಸ್ತಿಯವರ 'ತಿರುಪಾಣಿ' ಹಾಗೂ 'ಯಶೋಧರಾ'ಗಳು ಕಲೆಯ ದೃಷ್ಟಿ-ಯಿಂದ ಶ್ರೇಷ್ಠ ಪ್ರಯೋಗಗಳಾಗಿವೆ. 'ತಿರುಪಾಣಿ' 'ಯಶೋಧರಾ'ದಂತೆ ನಾಟ-ಕೀಯವಾಗಿರದೆ ಭಾವಗೀತದಂತೆ ಮೂಡಿ ಬಂದಿದೆ. ಅದರ ವಸ್ತುವಿಗೆ ಅದು ಯೋಗ್ಯವೂ ಆಗಿದೆ. 'ಯಶೋಧರಾ'ದಲ್ಲಿಯ ಸರಳರಗಳೆ ಆಡುವ ಮಾತಿನ ಲಯಕ್ಕೆ ತೀರ ಸಮೀಪವಾಗಿರುವದಲ್ಲದೆ, ಅದಕ್ಕೆ ವಾತಾವರಣವನ್ನು ನಿರ್ಮಿಸುವ

ಶಕ್ತಿಯೂ ಇದೆ. ಓದುತ್ತ ಹೋದಂತೆ ಬುದ್ಧಕಾಲೀನ ಜಗತ್ತಿನಲ್ಲಿ ಓದುಗ ಪ್ರವೇಶಿಸುತ್ತಾನೆ. ಮಾತಿನ ತಿರುಳಿನಲ್ಲಿ ವಾತಾವರಣ ಸುಗಂಧದಂತೆ ಬೆರೆತುಕೊಂಡಿದೆ. ಇಲ್ಲಿಯ ಪಾತ್ರಗಳು ತಮ್ಮ ಗೌರವ ಗಾಂಭೀರ್ಯಗಳನ್ನು ಕಾಯ್ದುಕೊಂಡಿರುವದರಿಂದ ಸಂಭಾಷಣೆಯ ಮೆಲ್ನಡೆ ದೋಷವೆನಿಸುವದಿಲ್ಲ. ಅಜಂತೆಯ ಚಿತ್ರಗಳು ಮೆಲುದನಿಯಲ್ಲಿ ಮಾತಾಡಿದ ಅನುಭವವುಂಟಾಗುತ್ತದೆ. ಬುದ್ಧ, ಯಶೋಧರೆಯ ಮನೆಗೆ ಬಂದು ಭಿಕ್ಷೆಯನ್ನು ಸ್ವೀಕರಿಸುವ ಸನ್ನಿವೇಶ ನಾಟಕ ಹಾಗೂ ಕಾವ್ಯದ ಸುಂದರ ಸಮನ್ವಯವನ್ನು ಸಾಧಿಸುತ್ತದೆ.

ಗೀತನಾಟಕವನ್ನು ರಂಗದ ಮೇಲೆ ಲೋಕಪ್ರಿಯವಾಗಿಸಿದವರು ಕಾರಂತರು. ಅವರ 'ಕಿಸಾ-ಗೌತಮಿ' ಹಾಗೂ 'ಮುಕ್ತದ್ವಾರ'ಗಳು ಹೆಚ್ಚು ಹೆಚ್ಚು ಲೋಕಪ್ರಿಯವಾಗುತ್ತಿವೆ. ಇಲ್ಲಿ ನೃತ್ಯಕ್ಕೂ ಅವಕಾಶವಿರುವದರಿಂದ ಈ ನಾಟಕಗಳು ಇಂಗ್ಲಿಷಿನ 'opera' ರೂಪಕ್ಕೆ ಹೆಚ್ಚು ಸಮೀಪದವಾಗಿವೆ. ಆದರೆ ಕಾರಂತರ ಬರವಣಿಗೆ ಸಂಗೀತಕ್ಕೆ ಅಡಿಯಾಳಾಗಿರುವದರಿಂದ, ಸಾಹಿತ್ಯ ತನ್ನ ಸತ್ವವನ್ನು ಕಳೆದುಕೊಂಡಂತಿದೆ. ಅವರ ನೆರಳು-ನಾಟಕವಾದ 'ರಕ್ತಕಾಣಿಕೆ'ಯೊಂದೇ ಸಾಹಿತ್ಯಗುಣವನ್ನೂ ಬೆಳೆಸಿಕೊಂಡಿದೆ. ಕಾರಂತರಲ್ಲಿ ಕಂಡುಬರುವ ಈ ಕೊರತೆಯನ್ನು ಪು. ತಿ. ನ. ತಮ್ಮ ಕೃತಿಗಳಲ್ಲಿ ತುಂಬಿಕೊಂಡರು. ಅವರ 'ಗೋಕುಲ ನಿರ್ಗಮನ' ಭಾವಗೀತದಂತೆ ಚಲುವಾಗಿದೆ. ಆದರೆ ಅದರಲ್ಲಿ ನಾಟಕೀಯತೆ ಅಷ್ಟೊಂದು ಕಂಡುಬರುವದಿಲ್ಲ. ಅವರ 'ಅಹಲ್ಯೆ' ಮಾತ್ರ ಎಲ್ಲ ಅರ್ಥದಲ್ಲಿಯೂ ಗೀತನಾಟಕವಾಗಿದೆ. ಶಾಪಗ್ರಸ್ತಳಾದ ಅಹಲ್ಯೆ ಜೀವಂತಪಾತ್ರವಾಗುವದಲ್ಲದೆ ಚಿರಂತನ ಸಂಕೇತವೂ ಆಗುತ್ತಾಳೆ. ಅವಳ ಸುತ್ತು ಬರುವ ಗೌತಮ, ಇಂದ್ರ, ರಾಮಚಂದ್ರ ಈ ಪಾತ್ರಗಳು ಸಂವಿಧಾನವನ್ನು ಶಿಲ್ಪಬಂಧದಲ್ಲಿ ರಚಿಸುತ್ತ ಹೋಗುತ್ತವೆ. ಇತ್ತೀಚೆಗೆ ಅಮ್ಮೆಂಬಳ ಶಂಕರನಾರಾಯಣ, ಕೆ. ವ್ಹಿ. ಸುಬ್ಬಣ್ಣ ಹಾಗೂ ಕೀರ್ತಿನಾಥರ ಗೀತನಾಟಕಗಳ ಸಂಗ್ರಹಗಳು ಪ್ರಕಟವಾಗಿವೆ.

ಈ ಕ್ಷೇತ್ರದಲ್ಲೂ ಆಗಬೇಕಾದಷ್ಟು ಪ್ರಗತಿಯಾಗಿಲ್ಲ. ಬಹುಶಃ ಈ ರೂಪದ ಮಾಧ್ಯಮವೇ ಅದಕ್ಕೊಂದು ಬಂಧನವಾಗಿರಬೇಕು. ಎಂದು ನಾಟಕ ಕಾವ್ಯದೊಡನೆ ತನ್ನ ಸಂಬಂಧವನ್ನು ಕಳೆದುಕೊಂಡಿತೋ, ಅಂದಿನಿಂದ ಗೀತನಾಟಕ ತನ್ನ ಸಹಜತೆಯನ್ನು ಇಲ್ಲದಾಗಿಸಿಕೊಂಡಿದೆ. ಪ್ರಾಚೀನ ಭಾರತದ, ಪುರಾತನ ಗ್ರೀಸದ, ಮತ್ತು ಎಲಿಝಬೆಥ್ ಯುಗದ ಪ್ರೇಕ್ಷಕರು ಕಾವ್ಯದಲ್ಲಿಯ ಸಂಭಾಷಣೆಗಳನ್ನು ನಂಬುತ್ತಿದ್ದರು, ಅರ್ಥಮಾಡಿಕೊಳ್ಳುತ್ತಿದ್ದರು. ಗದ್ಯನಾಟಕಗಳ ಯುಗ ಪ್ರಾರಂಭವಾದಂದಿನಿಂದ ಈ ರೀತಿಯ ಬರವಣಿಗೆ ಕವಿಗಳ ಪ್ರಯೋಗವಾಗಿಬಿಟ್ಟಿತು. ಅಲ್ಲದೆ ಸಾಮಾನ್ಯ ಜನತೆಯೊಡನೆ ತನ್ನ ಸಂಪರ್ಕವನ್ನು ಕಳೆದುಕೊಂಡುಬಿಟ್ಟಿತು. ಇನ್ನು ಮೇಲೆ ಅದು ಸ್ವತಂತ್ರರೂಪವಾಗಿ ಬೆಳೆದು ತನ್ನ ಪ್ರೇಕ್ಷಕರನ್ನೋ, ಶ್ರೋತೃಗಳನ್ನೊ ತಿರುಗಿ ಪಡೆಯಬೇಕಾಗಿದೆ. ಅದಕ್ಕಾಗಿ ಸಮಕಾಲೀನ ವಿಷಯಗಳನ್ನೇ ತೆಗೆದುಕೊಂಡರೂ ಅಡ್ಡಿಯಿಲ್ಲ. ಕಾವ್ಯದ ತಿರುಳಿಗೆ ಬಾಧೆ ಬರದಂತೆ ಭಾಷೆಯನ್ನು ಹದಗೊಳಿಸಿಕೊಂಡು ಮಾತ್ರ ಹೋಗಬೇಕು. ನಮ್ಮ ಕವಿಗಳು ಈ ದಿಸೆಯಲ್ಲಿ ಲಕ್ಷ್ಯ ಹಾಕದಿದ್ದರೆ ಈರೂಪದ ಅಸ್ತಿತ್ವ ಇಲ್ಲದಾಗುವ ಹೆದರಿಕೆಯಿದೆ.

## ಏಕಾಂಕಗಳು

ಇನ್ನು ಕನ್ನಡದ ಏಕಾಂಕಗಳ ವಿಷಯವಾಗಿ ಪ್ರತ್ಯೇಕವಾಗಿಯೇ ವಿಚಾರ ಮಾಡಬೇಕಾಗಿದೆ. ಕನ್ನಡದಲ್ಲಿ ಈ ರೂಪ ಪ್ರಮುಖವಾದ ಬೆಳವಣಿಗೆಯನ್ನು ಪಡೆದು ಜನಪ್ರಿಯವಾಗಿದೆ. ನಮ್ಮ ಮಹತ್ವದ ನಾಟಕಕಾರರೆಲ್ಲ ಏಕಾಂಕ-ಗಳನ್ನು ಬರೆದಿದ್ದಾರೆ. ಸ್ವತಃ ಶ್ರೀರಂಗರೇ ಐವತ್ತಕ್ಕೂ ಮೇಲ್ಪಟ್ಟು ಏಕಾಂಕ-ಗಳನ್ನು ಹೊರಡಿಸಿದ್ದಾರೆ. ಕೈಲಾಸಂರ ನಾಟಕಗಳಲ್ಲಿ ಏಕಾಂಕಗಳೇ ಹೆಚ್ಚಾಗಿವೆ. ಇದಲ್ಲದೆ,ಬೇಂದ್ರೆ, ಮುಗಳಿ, ಕಾರಂತ, ಎನ್ಕೆ, ಕ್ಷೀರಸಾಗರ, ಕೈವಾರ ರಾಜಾರಾವ್ ಇವರೆಲ್ಲ ಈ ರೂಪಕ್ಕೆ ವೈವಿಧ್ಯವನ್ನೂ ಕಾವ್ಯಮಯತೆಯನ್ನೂ ತಂದುಕೊಟ್ಟಿದ್ದಾರೆ.

ಸಣ್ಣ ಕತೆ ಹಾಗೂ ಭಾವಗೀತಗಳಂತೆ ಏಕಾಂಕದ ರೂಪ, ಬೀಜಕ್ಕೆ ಬಿಡುವ ಹಣ್ಣನ್ನು ಹೀಚಿನಲ್ಲಿ ಕಾಣಿಸುವ ಹೊಸ ಪ್ರಯತ್ನವಾಗಿದೆ. ಕೃತಿ ಸಣ್ಣದೆಂದು ಅಪೂರ್ಣವಾಗಿರುವದಿಲ್ಲ. ದೊಡ್ಡ ನಾಟಕಕ್ಕಿರುವ ಸಮಗ್ರತೆ ಇದಕ್ಕೂ ಇದೆ. ಗೋಕಾಕರು 'ಕೋಲ್ಮಿಂಚಿ'ನ ಮುನ್ನುಡಿಯಲ್ಲಿ ಈ ರೂಪವನ್ನು ಕುರಿತು ಪ್ರಭುತ್ವದಿಂದ ಪ್ರತಿಪಾದಿಸಿದ್ದಾರೆ. ಲಕ್ಷಣ, ಲಕ್ಷ್ಯ ಇವೆರಡರಲ್ಲಿಯೂ ಸಮೃದ ವಾಗಿ ಈ ರೂಪ ಬೆಳೆದುಬಂದಿದೆ. ಶ್ರೀರಂಗರ 'ಯಮನಸೋಲು', 'ಅಶ್ವಮೇಧ', ಬೇಂದ್ರೆಯರ 'ಜಾತ್ರೆ', ಎನ್ಕೆಯವರ 'ಬಾರ್‌ರೂಮು', ಕೈಲಾಸಂರ 'ಬಹಿಷ್ಕಾರ', ಕಾರಂತರ 'ಕಟ್ಟೆಪುರಾಣ' ಇವು ಇಂಥ ಕೃತಿ-ಗಳಾಗಿವೆ. ಧ್ವನಿಸಾಮರ್ಥ್ಯದ ಬೆನ್ನೆಲುಬು ಗಟ್ಟಿಯಾಗಿರುವದರಿಂದ ಅವು ತಮ್ಮ ಕಾಲಮೇಲೆ ನಿಲ್ಲಬಲ್ಲವುಗಳಾಗಿವೆ. ಶ್ರೀರಂಗರ 'ಯಮನಸೋಲು' ಅವರ ಎಲ್ಲ ನಾಟಕಗಳ ಎಲ್ಲ ಒಳ್ಳೆಯ ಗುಣಗಳನ್ನೂ ಒಳಗೊಂಡ ಕೃತಿಯಾಗಿದೆ. ಪೌರಾಣಿಕ ವ್ಯಂಗ್ಯ, ರುದ್ರತೆಯನ್ನು ಪ್ರಕಟಿಸುವ ಹಾಸ್ಯ, ಕ್ರಿಯೆಯ ವೇಗವಾದ ಬೆಳವಣಿಗೆ ಈ ಕೃತಿಯಲ್ಲಿ ಸಮೃದ್ಧವಾಗಿವೆ. ಜೀವನ-ಮರಣಗಳ ಹೋರಾಟದಂಥ ರುದ್ರ-ವಸ್ತುವನ್ನು ಲಘುವಾಗಿ ನಿರೂಪಿಸಲಾಗಿದೆ. 'ನಿಂದ್ರೋ ಮಹಾರಾಯಾ, ಎಲ್ಲಾದರಾಗೂ ನಿಂದೊಂದು ಗಡಿಬಿಡಿ' ಎಂದು ಹೇಳಿ ಯಮನನ್ನೇ ನಿಲ್ಲಿಸುವ ಧೈರ್ಯ ಸ್ಥೈರ್ಯವುಳ್ಳ ನಾಯಕನ ಚಿತ್ರ ಮಾನವರ ಜೀವನಶಕ್ತಿಯನ್ನು ಸತ್ವ-ಯುತವಾಗಿ ಚಿತ್ರಿಸುತ್ತದೆ. ಮಾನವಲೋಕದಲ್ಲಿಯ ಯಮನ ಅಸಹಾಯತೆ ವಿಡಂಬನೆಯಂತೆ ಕಂಡರೂ ಅದರ ಗಾಂಭೀರ್ಯ ಇನ್ನೂ ಆಳಕ್ಕೆ ಇಳಿದಿದೆ. ನಾಯಕನ ಹೆಂಡತಿಯ ಪಾತ್ರ ವಾಸ್ತವಲೋಕದ ಪ್ರತಿನಿಧಿಯಾಗಿದೆ. ಇದಕ್ಕೆ ಹಿನ್ನೆಲೆಯಾಗಿ ಬರುವ ಸಾವಿತ್ರಿಯ ಕತೆ ಸತ್ಯದ ಇನ್ನೊಂದು ಮಗ್ಗುಲನ್ನು ತೆರೆ-ಯುತ್ತದೆ. 'ಅಶ್ವಮೇಧ' ಇದೇ ಜಾತಿಯ, ಇಷ್ಟೇ ಘನತೆಯುಳ್ಳ ಇನ್ನೊಂದು ಕೃತಿಯಾಗಿದೆ. ಬೇಂದ್ರೆಯವರ 'ಜಾತ್ರೆ'ಯಲ್ಲಿ ಇಷ್ಟು ಸ್ವಲ್ಪದರಲ್ಲಿಯೇ ಒಂದು ವಿಪರೀತವಾದ ಜಗತ್ತಿನ ಚಿತ್ರವಿದೆ. ದೊರೆಯಿಂದ ಹಿಡಿದು ಪ್ರಜೆಗಳ ವರೆಗೆ ಎಲ್ಲರ ತಲೆಗಳೂ ತಾಳದಲ್ಲಿಲ್ಲ. ಕಾಲದ ತೂಕ ತಪ್ಪಿದಂತಾಗಿದೆ. ಈ ಹುಚ್ಚು-ತನಕ್ಕೆ ಕಳಸವಿಡುವಂತೆ ಪ್ಲೇಗು ಊರಿನ ಮೇಲೆ ನುಗ್ಗಿಬಂದಿದೆ. ದೊರೆ ಹುಚ್ಚ-ನಾದರೂ ತನ್ನ ಮಾತು ಅಪೌರುಷೇಯವೆಂಬಂತೆ ತಿಳಿದುಕೊಂಡು, ಅವನು ಊರ

ಜಾತ್ರೆ ಪ್ಲೇಗಿನಲ್ಲೂ ನಡೆಯಬೇಕೆಂದು ಆಜ್ಞೆ ವಿಧಿಸುತ್ತಾನೆ. ತನ್ನಮೇಲೆ ಪ್ಲೇಗು ಬರವ ಹೊರತು ಅವನು ಪ್ಲೇಗಿದೆಯೆಂದು ನಂಬುವದೇ ಇಲ್ಲ. ಈ ಅಣಕದ ಹಿಂದಿರುವ ಗಾಂಭೀರ್ಯ ದಿಗಿಲುಗೊಳಿಸುವಂಥದಿದೆ. ನಾಟಕದ ಮೊದಲು, ನಡುವೆ, ಕೊನೆಗೆ ಬರುವ ಡಂಗುರದವ ಗ್ರೀಕ್ ನಾಟಕಗಳ ಮೇಳಗಳನ್ನು ನೆನಪು ಮಾಡಿಕೊಡುತ್ತಾನೆ.

ಕನ್ನಡದ ಏಕಾಂಕ ಈ ಘನತೆಯನ್ನಲ್ಲದೆ ಸಾಕಷ್ಟು ವೈವಿಧ್ಯವನ್ನೂ ಒಳಗೊಂಡಿದೆ. ಮೇಲೆ ಚರ್ಚಿಸಲಾದ ನಾಟಕಗಳು ವಾಸ್ತವತೆಯೊಂದಿಗೆ ಕಲ್ಪಕತೆಯನ್ನು ಸಮರ್ಥವಾಗಿ ಬಳಸಿಕೊಂಡಿವೆ. ಶ್ರೀರಂಗರ "ಸಂಪದ್ಧರ್ಮ" ಹಾಗೂ "ನಿರುತ್ತರ-ಕುಮಾರ"ಗಳು ಪೌರಾಣಿಕ ವ್ಯಕ್ತಿಗಳನ್ನು ಆಧುನಿಕತೆಯ ವೇಷದಲ್ಲಿ ತಂದಿರಿಸಿದ ಮಹತ್ವದ ಕೃತಿಗಳಾಗಿವೆ. ಈ ಕೃತಿಗಳು ಸತ್ಯದ ಸೀಮೋಲ್ಲಂಘನಕ್ಕೆ ಹೊರಟವುಗಳು. ಭೂತ-ವರ್ತಮಾನಗಳನ್ನು ಒಂದೇ ಹಿಡಿತದಲ್ಲಿ ಹಿಡಿದು ಜೀವನದ ಸತ್ಯವನ್ನು ನೋಡಲೆಳಸುವ ಸಾಹಸ ಅಲ್ಲಿ ಕಾಣುತ್ತದೆ. ಈ ನಾಟಕಗಳು ಸಾರ್ತ್ರೆ, ಯುಜೀನ್-ಓ-ನೀಲ ಮೊದಲಾದವರ ನಾಟಕಗಳ ನೆನಪನ್ನು ಆಗಾಗ ತಂದುಕೊಡುತ್ತವೆ. ವಿನಾಯಕರ "ವಿಮರ್ಶಕ ವೈದ್ಯ" ಒಂದೇ ಒಂದಾದ ಸಾಹಿತ್ಯಿಕ ವಿಡಂಬನೆಯಾಗಿದೆ.

ಆದರೆ ಏಕಾಂಕಗಳ ಕ್ಷೇತ್ರದಲ್ಲಿ ಕಲೆಯ ಬಗ್ಗೆ ಅಲಕ್ಷ್ಯವೂ ಸಾಕಷ್ಟಿದೆ. ಕೃತಿ ಚಿಕ್ಕದಾಗಿರುವದರಿಂದಲೋ, ಅಥವಾ ವಿನೋದಕ್ಕೆ ಹೆಚ್ಚು ಪಾಶಸ್ತ್ಯ ಸಿಕ್ಕಿರುವದರಿಂದಲೋ ಏನೋ, ನಾಟಕಕಾರರು ಈ ರೂಪವನ್ನು ಲಘುವಾಗಿ ಕಂಡಿದ್ದಾರೆ. ಅವಸರದಲ್ಲಿ ಮುಗಿಸಿರುವದರಿಂದ ಈ ಕೃತಿಗಳ ಬಂಧ ಸಡಿಲಾಗುತ್ತದೆ. ಶ್ರೀರಂಗರ "ಬೀದಿಯ ಭೂತ", "ಶ್ರಾದ್ಧ ಟೋಶಿಯಾಲಿಜಮ್", ಎನ್ಕೆಯವರ "ಬುಶ್-ಕೋಟ", "ಕಾವ್ಯದ ಕಾರಖಾನೆ"ಗಳು, ಕೃಷ್ಣಕುಮಾರರ "ಮಿಂಚಿನಹುಡಿ" ಯಲ್ಲಿಯ ನಾಟಕಗಳು, ಕೈವಾರರ "ಝೋಲ್ಸಮೇಷ್ಟ್ರು" ಇವೆಲ್ಲ ಈ ದೋಷಕ್ಕೆ ತುತ್ತಾಗಿವೆ. ನಾಟಕದ ಅವಯವಗಳು ಪೂರ್ಣವಾಗಿ ಬೆಳೆದು ಬಂದಿಲ್ಲವಾದ್ದರಿಂದ ಕೆಲವು ಕಡೆಗೆ ಕೊರತೆ ಕಂಡುಬರುತ್ತದೆ. ಬೇಂದ್ರೆಯವರ "ಗೋಲ್"ದಲ್ಲಿ ನಾಟಕೀಯವಾಗಿ ಪಚನವಾಗದ ಹೂರಣ ತುಂಬಿಕೊಂಡಿದೆ. ಪಾತ್ರಗಳು ಸಜೀವತೆಯನ್ನು ಪಡೆಯುವದಕ್ಕಿಂತ ಮೊದಲೇ ಆಳವಾದ ಚರ್ಚೆಯಲ್ಲಿ ತೊಡಗಿರುವದರಿಂದ ನಾಟಕ ಬುದ್ಧಿಯ ಬಯಲಾಟವಾಗಿದೆ. ಇತ್ತೀಚಿನ ತರುಣ ಬರಹಗಾರರಲ್ಲಂತೂ ಈ ಅಸಮಗ್ರತೆ ತಾನೇ ತಾನಾಗಿದೆ. ವಿನೋದವೊಂದೇ ನಾಟಕದಲ್ಲಿಯ ಪ್ರಧಾನರಸವೆಂದು ಅವರು ತಿಳಿದಂತಾಗಿದೆ. ಅದಕ್ಕಾಗಿ ಎಂಥ ಸಪ್ಪಗಿನ ವಿನೋದಗಳೂ ನಾಟಕದಲ್ಲಿ ಕಾಣಹತ್ತಿವೆ.

ಏಕಾಂಕಗಳ ಬಗ್ಗೆ ಇನ್ನೂ ಒಂದು ಅಪಾಯ ಕಾದು ಕುಳಿತಿದೆ. ಇಂಗ್ಲಿಶ್ ಏಕಾಂಕಗಳ ಪ್ರಭಾವ ಸಾಕಷ್ಟು ನಾಟಕಗಳ ಮೇಲೆ ಬಿದ್ದುಬಿಟ್ಟಿದೆ. ಒಮ್ಮೊಮ್ಮೆ ಸ್ವತಂತ್ರ ನಾಟಕಗಳ ಬಗ್ಗೆ ಕೂಡ ಶಂಕೆ ಹುಟ್ಟುವಷ್ಟು ಕೃತಿಚೌರ್ಯದ ಅನ್ಯಾಯ ನಡೆದಿದೆ. ಕೆಲವಂತೂ ಶುದ್ಧ ಅನುವಾದಗಳಾಗಿವೆ. ಕೆಲವರು ಅದನ್ನು ಒಪ್ಪಿಕೊಳ್ಳುವ ಔದಾರ್ಯವನ್ನು ತೋರಿದರೆ, ಇನ್ನು ಕೆಲವರಲ್ಲಿ ಅದೂ ಇಲ್ಲ. ನಮ್ಮ

ಎಷ್ಟೋ ಲೋಕಪ್ರಿಯ ನಾಟಕಗಳೂ ಈ ಅಪವಾದವನ್ನು ತಪ್ಪಿಸಿಕೊಳ್ಳಲಾರವು. ಕಸ್ತೂರಿಯವರ 'ಗಗ್ಗಯ್ಯನ ಗಡಿಬಿಡಿ'ಯಲ್ಲಿಯ ಮೂರು ನಾಟಕಗಳೂ ಇಂಗ್ಲಿಶ್ ದಿಂದ ಸನ್ನಿವೇಶಗಳನ್ನು ಎತಿ ಕೊಂಡಿವೆಯಾದರೂ ಆಕರ್ಷಕವಾಗಿವೆ.

## ಇನ್ನು ಮುಂದೆ

ಕನ್ನಡ ನಾಟಕ ಇನ್ನು ಮುಂದೆ ಯಾವ ದಿಕ್ಕಿಗೆ ಹೋಗಬಹುದೆಂಬುದನ್ನು ಸ್ಪಷ್ಟವಾಗಿ ಹೇಳುವದು ಸಾಧ್ಯವಿಲ್ಲವಾಗಿದೆ. ಅದಕ್ಕೆ ಕಾರಣವೆಂದರೆ ನಮ್ಮಲ್ಲಿ –ಶ್ರೀರಂಗರೊಬ್ಬರನ್ನು ಹೊರತುಪಡಿಸಿ – ಸಂಪ್ರದಾಯನಿರ್ಮಾಣವಾಗದೆ ಶ್ರೇಷ್ಠ ನಾಟಕಗಳು ಹುಟ್ಟಿಬಿಟ್ಟಿವೆ. 'ಬಹಿಷ್ಕಾರ', 'ತಾಳೀಕಟ್ಟೋಕ್ಕೂಲೀನೆ', 'ಹರಿಜನ್ವಾರ', 'ಪ್ರಪಂಚ ಪಾಣಿಪತ್ತು', 'ಉದ್ಧಾರ', 'ಹೊಸ ಸಂಸಾರ', 'ಗರ್ಭಗುಡಿ' 'ಆಗ್ರಹ', 'ಅಶ್ವತ್ಥಾಮನ್', 'ಯಶೋಧರಾ', 'ಜಾಗ್ರತರಾಷ್ಟ್ರ' 'ಮೂಕಬಲಿ' ಮೊದಲಾದ ನಾಟಕಗಳು ಯಾವ ಭಾಷೆಯಲ್ಲಿದ್ದರೂ ಹೆಮ್ಮೆಯನ್ನು ಹುಟ್ಟಿಸುವಂಥವುಗಳಾಗಿವೆ. ಇವೆಲ್ಲ ಬೇರೆ ಜಾತಿಯ, ಭಿನ್ನ ಸಂಪ್ರದಾಯಗಳಿಗೆ ಸೇರಿದವುಗಳಾಗಿವೆ. ಆದರೆ ಈ ನಾಟಕಗಳ ಹಿಂದೆ ಆ ಸಂಪ್ರದಾಯ ನಮಗೆ ಕಾಣುವದಿಲ್ಲ. ಇನ್ನು ಕೈಲಾಸಂ ಮಾದರಿಯ ನಾಟಕಗಳನ್ನು ನೋಡಿದರೆ ಆ ಸಂಪ್ರದಾಯ ಮುಂದುವರಿಯುವದು ಸಾಧ್ಯವೇ ಎಂಬುದನ್ನು ವಿಚಾರಿಸಬೇಕಾಗಿದೆ. ಕೈಲಾಸಂರಲ್ಲಿ ಜೀವನದ ವಾಸ್ತವನಿರೂಪಣೆಗಿಂತ ಅವರ ವೈಯಕ್ತಿಕವಾದ ವಿಕ್ಷಿಪ್ತತೆ ಹೆಚ್ಚು ಮಹತ್ವದ್ದಾಗಿದೆ. ಆ ವೈಯಕ್ತಿಕ ಪ್ರತಿಭೆಯಿಲ್ಲದೆ ಅಂಥ ನಾಟಕಗಳನ್ನು ಬರೆಯುವದು ಅಸಾಧ್ಯವಾಗಿದೆ. ಉಳಿದ ನಾಟಕಗಳಿಗೆ ಪ್ರತಿಭೆ ಬೇಡವೆಂದಲ್ಲ. ಆದರೆ ಕೈಲಾಸಂ ಕೇವಲ ಅದೊಂದರ ಮೇಲೇ ನಾಟಕದ ಕಟ್ಟಡವನ್ನು ನಿಲ್ಲಿಸಿದರು. ಒಂದು ವಿಶಿಷ್ಟವಾದ ಭಾಷೆ, ವಿಶಿಷ್ಟವಾದ ಪಾತ್ರವರ್ಗ, ವಿಶಿಷ್ಟವಾದ ವಿನೋದ. ಇವುಗಳಲ್ಲಿ ಕೈಲಾಸಂ ತಮ್ಮ ಪ್ರತಿಭೆಯನ್ನು ಬೆಳಗಿಸಿದರು. ಮುಂದಿನ ತಲೆಮಾರಿಗೆ ಅವರ ಊಡುಗೆಯೆಂಬುದು ಏನೂ ಇಲ್ಲವಾಗಿದೆ. ಬೇಂದ್ರೆಯವರದೂ ಇದೇ ರೀತಿಯ ಇನ್ನೊಂದು ವಿಶಿಷ್ಟವಾದ ಮಾರ್ಗವಾಗಿದೆ. ಆದರೆ ಭಾಷೆ ಹಾಗೂ ತಂತ್ರಗಳ ದೃಷ್ಟಿಯಿಂದ ನಿಶ್ಚಯವಾಗಿ ಅವರ ಕೊಡುಗೆ ಬೆಲೆಯುಳ್ಳದ್ದಾಗಿದೆ. 'ಉದ್ಧಾರ' ಹಾಗೂ 'ಹೊಸಸಂಸಾರ'ಗಳಲ್ಲಿ ಅವರ ಭಾಷೆಯ ಉಪಯೋಗ ಆದರ್ಶಪ್ರಾಯವಾಗಿದೆ. ನಾಟಕದ ಭಾಷೆ ಹಲವಾರು ವಾದ್ಯಗಳನ್ನು ಒಂದು ಶ್ರುತಿಯಲ್ಲಿ ನುಡಿಸುವಂತಿರಬೇಕೆಂಬುದನ್ನು ಬೇಂದ್ರೆಯವರು ಪ್ರತ್ಯಕ್ಷವಾಗಿ ತೋರಿಸಿಕೊಟ್ಟರು. "ಹಳೆಯ ಗೆಣೆಯರು", "ತಿರುಕರ ಪಿಡುಗು" ಇಂಥ ಏಕಾಂಕಗಳ ತಂತ್ರ ಕೂಡ ಮೇಲ್ಪಂಕ್ತಿಯದಾಗಿದೆ. ನಾಟಕದಲ್ಲಿ ವೈವಿಧ್ಯಕ್ಕೆ ಬೇಕಾದಷ್ಟು ಅವಕಾಶವಿದೆಯೆಂಬ ಮಾತನ್ನು ಇವುಗಳಿಂದ ಕಲಿಯಬಹುದಾಗಿದೆ. ಆದರೆ ಬೇಂದ್ರೆಯವರು ಹಲವಾರು ನಾಟಕಗಳನ್ನು ಬರೆದು ಸಂಪ್ರದಾಯವನ್ನು ಹಾಕಲಿಲ್ಲ. ಅವರು ಇನ್ನುಮುಂದೆ ಕೂಡ ಅನೇಕ ನಾಟಕಗಳನ್ನು ಬರೆಯಬಹುದಾದರೂ ಅವೆಲ್ಲ ಶ್ರೇಷ್ಠ ಪ್ರಯೋಗಗಳಾಗಿ ಮಾತ್ರ ಬರುತ್ತವೆ. ಇದಕ್ಕೆ ಕಾರಣವೆಂದರೆ ನಾಟಕವೊಂದೇ ಅವರ ಅಭಿವ್ಯಕ್ತಿಯ ಮಾಧ್ಯಮವಾಗಿಲ್ಲ. ಈ ಕಾಲದ ಒಬ್ಬರೇ

ಒಬ್ಬ ನಾಟ್ಯಕವಿ (dramatic poet) ಎಂದು ಅವರುಳಿಯುತ್ತಾರಲ್ಲದೆ ಪ್ರಾತಿನಿಧಿಕ ನಾಟಕಕಾರರೆಂದಲ್ಲ.

ಶ್ರೀರಂಗರನ್ನು ಆ ಹೆಸರಿನಿಂದ ಕರೆಯಬಹುದಾಗಿದೆ. ಸಮಕಾಲೀನ ಜೀವನದ ಸಮಸ್ಯೆಗಳನ್ನೆಲ್ಲ ಅವರು ಚರ್ಚಿಸಿದ್ದಾರೆಂದಷ್ಟೇ ಅಲ್ಲ, ಅವರ ನಾಟಕದ ಸ್ವರೂಪ ಕೂಡ ಪ್ರಾತಿನಿಧಿಕವಾಗಿದೆ. ಅವರ ಮೊದಲ ನಾಟಕಗಳಾದ "ವೈದ್ಯರಾಜ", "ಉದರವೈರಾಗ್ಯ"ಗಳು ಕಂಪನಿ-ನಾಟಕಗಳನ್ನು ಬಹುಮಟ್ಟಿಗೆ ಹೋಲುತ್ತವಲ್ಲದೆ, "ಹರಿಜನ್ವಾರ"ದಂಥ ಶ್ರೀರಂಗರ ಮಾದರಿಯ ನಾಟಕಗಳನ್ನೂ ಅವು ಸೂಚಿಸುತ್ತವೆ. "ಹರಿಜನ್ವಾರ" ಆ ಕಾಲದ ಜೀವನಕ್ಕೆ ತೀರ ಯೋಗ್ಯವಾದ ಮಾದರಿಯದಾಗಿದೆ. "ಜರಾಸಂಧಿ"ಯ ವರೆಗೆ ಅದೇ ಮಾದರಿಯಲ್ಲಿ ಬರೆದ ಶ್ರೀರಂಗರು ಮುಂದೆ ತಮ್ಮ ನಾಟಕದ ಸ್ವರೂಪವನ್ನು ಬದಲಿಸಿದರು. ಮೊದಲಿನ ನಾಟಕಗಳ ಪ್ರತಿಭೆ ಇಲ್ಲಿ ಕಾಣುವದಿಲ್ಲವಾದರೂ ಇದು ಇನ್ನೊಂದು ಪರಿಣತ ಅವಸ್ಥೆಗೆ ಮುನ್ಸೂಚನೆಯಾಗಿ ಬಂದಿದೆಯೆನ್ನಬಹುದು. ಈ ಕಾಲದಲ್ಲಿ ಕೂಡ ಅವರು ಪ್ರಯೋಗನಿರತರಾಗಿರುವದು ಸಂತೋಷದ ಸಂಗತಿಯಾಗಿದೆ. ಶ್ರೀರಂಗರ ಮುಂದಿನ ನಾಟಕಗಳ ಸ್ವರೂಪವೆಂಥದೆಂಬುದನ್ನು ನಿಶ್ಚಿತವಾಗಿ ಹೇಳಲಾಗುವದಿಲ್ಲವಾದರೂ ಒಂದು ಮಾತನ್ನು ಹೇಳಬಹುದಾಗಿದೆ. ಶ್ರೀರಂಗರ ಮುಂದೆ ಮೊದಲಿದ್ದ ಸಮಸ್ಯೆಯೆಂದರೆ ಸಾಮಾನ್ಯ ಜನತೆಯ ಅಜ್ಞಾನ. ಆದ್ದರಿಂದ ಅವುಗಳಲ್ಲಿಯ ವಿಡಂಬನ ಹೊಟ್ಟೆಯ ಸಂಕಟದಿಂದ ಹುಟ್ಟಿದ ಚೀರುವಿಕೆಯಾಗಿದೆ. ವಿಡಂಬನ ಮುಂದೆ ಕೂಡ ಉಳಿಯಬಹುದು. ಆದರೆ ಅದು ಹೆಚ್ಚು ಸೂಚ್ಯವಾಗಿ ಧ್ವನಿಪೂರ್ಣವಾಗಿ ಬರಬಹುದು. ಇದಕ್ಕೆ ಕಾರಣವೆಂದರೆ ಆಗ ಕಣ್ಣಿಗೆ ಕಾಣುವಂತಿದ್ದ ಅಜ್ಞಾನ ಈಗ ಇಲ್ಲವೆಂದಲ್ಲ, ಆದರೆ ಮರೆಯಲ್ಲಿ ಅಡಗಿದೆ. ಆದ್ದರಿಂದ ವಿಡಂಬನ ಸೂಕ್ಷ್ಮವಾದ ವ್ಯಂಗ್ಯವನ್ನು ವಿರೋಧಾಭಾಸಗಳನ್ನು ಅವಲಂಬಿಸಬೇಕಾಗುತ್ತದೆ. "ಶೋಕಚಕ್ರ"ದಲ್ಲಿ ಇದರ ನಮೂನೆಯೊಂದನ್ನು ಶ್ರೀರಂಗರೇ ಕೊಟ್ಟಿದ್ದಾರೆ.

ಶ್ರೀರಂಗರ ನಾಟ್ಯಕಲೆ ಹೀಗೆ ಜೀವಂತವಾಗಿ ಉಳಿಯಲು ಕಾರಣವೆಂದರೆ ನಾಟಕದಲ್ಲಿಯ ಅವರ ಶ್ರದ್ಧೆಯೆಂದೇ ಹೇಳಬಹುದು. ತಮ್ಮ ನಾಟಕಗಳನ್ನು ಸ್ವತಃ ತಾವೇ ರಂಗಭೂಮಿಯ ಮೇಲೆ ಆಡಿ ಅವುಗಳನ್ನು ಸಾಮಾನ್ಯ ಜನರೆದುರು ತಂದರು. ಶ್ರೀರಂಗರ ನಾಟಕಗಳು ತಿಳಿಯುವದಿಲ್ಲವೆಂಬ ತಕರಾರು ಇನ್ನೂ ತಪ್ಪಿಲ್ಲ. ಮತ್ತು ನಾಟಕದ ಪ್ರಯೋಗಗಳೆಲ್ಲ ಯಶಸ್ವಿಯಾದವೆಂದೂ ಹೇಳುವದು ಸಾಧ್ಯವಿಲ್ಲ. ಆದರೆ ಅದಕ್ಕಾಗಿ ಶ್ರೀರಂಗರ ಶ್ರದ್ಧೆಯೇನೂ ಕಡಿಮೆಯಾಗಿಲ್ಲ, ಮತ್ತು ಪ್ರೇಕ್ಷಕರ ಬಗ್ಗೆ ಅವರ ಗೌರವವೂ ಕಡಿಮೆಯಾಗಿಲ್ಲ. ನಾಟಕವನ್ನು ರಂಗದ ಮೇಲೆ ಬದುಕಿಸಿಯೇ ತೀರಬೇಕೆಂಬ ಹಟ ಅವರಿಗಿದೆ.

ಇದೇ ಸಂದರ್ಭದಲ್ಲಿ ನಾಟಕಪ್ರದರ್ಶನದ ಬಗ್ಗೆಯೂ ಕೆಲ ಮಾತುಗಳನ್ನು ಹೇಳುವದು ಅವಶ್ಯವಾಗಿದೆ. ನಮ್ಮಲ್ಲಿ ನಾಟಕಪ್ರದರ್ಶನಕ್ಕೆ ಏನೂ ಅನುಕೂಲತೆಗಳಿಲ್ಲದಿರುವದರ ಬಗ್ಗೆ ಟೀಕೆ-ಟಿಪ್ಪಣಿಗಳನ್ನು ನಾವು ಕೇಳುತ್ತಲೇ ಇದ್ದೇವೆ. ನಾಟಕಗಳನ್ನು ನೋಡಿ ಆನಂದಿಸುವ ಅಭಿರುಚಿಯೇ ನಮ್ಮಲ್ಲಿಲ್ಲವೆಂಬ ಮಾತನ್ನೂ ಕೇಳು

ತ್ತಿದ್ದೇವೆ. ಆದರೆ ಈ ಅಭಿಪ್ರಾಯವೇ ಮೂಲತಃ ತಪ್ಪಾಗಿದೆ. ಕಂಪನಿ-ನಾಟಕ ಗಳಿಗೆ ಜನರು ಗುಂಪುಗುಂಪಾಗಿ ಹೋಗುವದರ ರಹಸ್ಯವಾದರೂ ಏನು? ಜನರಲ್ಲಿ ಅಭಿರುಚಿಯಿದೆ; ಒಳ್ಳೆಯ ನಾಟಕಗಳೂ ನಮ್ಮಲ್ಲಿವೆ. ಆದರೆ ಪ್ರದರ್ಶನವನ್ನು ಅವ್ಯಾಹತವಾಗಿ ನಡೆಸಬಲ್ಲ ಸಂಸ್ಥೆಗಳಿಲ್ಲ. ನಾಟಕ-ಕಂಪನಿಗಳು ಆರ್ಥಿಕ ತಾಪತ್ರಯದಲ್ಲೇ ಸಣ್ಣಾಗಿ ಹೋಗಿವೆ. ಹೊಸ ನಾಟಕ ಹೊಸ ರಂಗಭೂಮಿಯನ್ನು ಇನ್ನೂ ನಿರ್ಮಿಸಿಕೊಂಡಿಲ್ಲ. ನಾಟಕ ಹುಟ್ಟುವದಕ್ಕಿಂತ ಮೊದಲೇ ನಮ್ಮ ಲೇಖಕರು ರಂಗಭೂಮಿಯನ್ನು ಬೇಡುತ್ತಲಿದ್ದಾರೆ. ದೊರೆತ ರಂಗಭೂಮಿಯ ಮೇಲೆ, ದೊರೆತ ಪ್ರೇಕ್ಷಕರೆದುರು ನಾಟಕವಾಡುವ ಧೈರ್ಯ ನಮ್ಮ ನಾಟಕಕಾರರಿಗಿರಬೇಕು. ಪ್ರದರ್ಶನಕ್ಕೆ ಯೋಗ್ಯವಿದ್ದರೆ ಮಾತ್ರ ಅದು ನಾಟಕ, ಇಲ್ಲದಿದ್ದರೆ ಅದು ಓದು-ನಾಟಕ ಎಂಬ ಭ್ರಮೆ ಹೋಗಬೇಕು. ತೀರ ಹೊಸ ಮಾದರಿಯ ನಾಟಕವನ್ನು ಮೊದಲ ರಾತ್ರಿಯೇ ಯಶಸ್ವಿಯಾಗಿ ಅಭಿನಯಿಸಿ ತೋರಿಸಲು ಸಾಧ್ಯವೇ ಇಲ್ಲ. ಇದಕ್ಕೆ ಕಾರಣವೇನಂದರೆ ರಂಗಭೂಮಿ ಆಂತರಿಕವಾಗಿ ಆ ನಾಟಕದ ಮಟ್ಟಕ್ಕೆ ಬೆಳೆದಿರುವದಿಲ್ಲ. ಶ್ರೀರಂಗ ಹಾಗೂ ಕೈಲಾಸಂರು ತಮಗೆ ದೊರೆತ ರಂಗಭೂಮಿಯ ಮೇಲೆಯೇ ನಾಟಕಗಳನ್ನು ಪ್ರದರ್ಶಿಸಿದರು. ರಂಗಭೂಮಿ ಇಂಥ ನಾಟಕಗಳ ಸರಿಯಾದ ಪ್ರದರ್ಶನಕ್ಕೆ ಹೊಂದಿಕೊಳ್ಳಬೇಕಾದರೆ ಕಾಲಾವಧಿ ಬೇಕಾಗುತ್ತದೆ. ಕೈಲಾಸಂ ಹಾಗೂ ಶ್ರೀರಂಗರು ಹೊಸ ರಂಗಭೂಮಿಯ ಪರಿಚಯ ಜನರಿಗಾಗಬೇಕೆಂಬ ಉದ್ದೇಶದಿಂದಲೇ ಬಾಳನ್ನು ಸವೆಸಿದವರು. ಈಗ ಜನರಿಗೆ ಆ ರಂಗಭೂಮಿಯ ಪರಿಚಯವಾಗಿದೆ. ಇನ್ನು ಮುಂದೆ ಈ ನಾಟಕಗಳ ರಸಾಸ್ವಾದಕ್ಕೆ ತಡೆಯುಂಟಾಗಲಾರದು. ಮೇಲಿಂದ ಮೇಲೆ ನೋಡಿ ನೋಡಿ ಒಂದು ನಾಟಕದ ರಸಾನುಭವವನ್ನು ಪಡೆಯಬೇಕಾಗುತ್ತದೆ. ಒಂದು ರಾತ್ರಿಯ ಪ್ರಯೋಗದಲ್ಲೇ ನಾಟಕ ಹಳೆಯದಾಗುವದಿಲ್ಲ, ಆಗಬಾರದು. ಯಾಕಂದರೆ ನಾಟಕಪ್ರದರ್ಶನವೂ ಒಂದು ಕರ್ಮಕಾಂಡ (ritual) ವಾಗಿದೆ. ಮತ್ತು ಎಲ್ಲ ಕರ್ಮಕಾಂಡಗಳಂತೆ ಅದು ಈಗ ತನ್ನ ಸತ್ವವನ್ನು ಕಳೆದುಕೊಂಡಿರಬಹುದು. ಅದಕ್ಕಾಗಿ ಆ ರಂಗಭೂಮಿಯನ್ನು ತ್ಯಜಿಸಲಾಗದು. ಸತ್ವ ತಿರುಗಿ ಬಂದಾಗ ತನ್ನ ಬಾಹ್ಯಸ್ವರೂಪವನ್ನು ಅದು ಕಳೆದುಕೊಂಡಿರಬಾರದು. ನಮ್ಮಲ್ಲಿ ಕೈಲಾಸಂ ಹಾಗೂ ಶ್ರೀರಂಗರು ಈ ವಿಷಯದಲ್ಲಿ ಸ್ಮರಣೀಯರಾಗಿದ್ದಾರೆ. ಶ್ರದ್ಧೆ ವಿಶ್ವಾಸಗಳಿಂದ ಈ ಕರ್ಮಕಾಂಡವನ್ನು ಕಾಯ್ದುಕೊಂಡರಲ್ಲದೆ ಹೊಸ ನಾಟಕದ ಸತ್ವವನ್ನು ಅದರಲ್ಲಿ ತುಂಬಿದರು. ಜಗತ್ತಿನ ಎಲ್ಲ ಗೌರವಯುಕ್ತವಾದ ನಾಟ್ಯಯುಗಗಳನ್ನು ನೋಡಿದರೆ ಈ ಮಾತು ಹೆಚ್ಚು ಮಹತ್ವದ್ದೆನಿಸಬಹುದು. ಆಗೆಲ್ಲ ನಾಟಕಪ್ರದರ್ಶನ ಒಂದು ಕರ್ಮಕಾಂಡವಾಗಿ ಮೆರೆಯುತ್ತದೆ. ಗ್ರೀಕರ ಕಾಲಕ್ಕೆ ನಾಟಕಪ್ರದರ್ಶನ ಉತ್ಸವಗಳ ಮಹತ್ವದ ಅಂಗಗಳಲ್ಲಿ ಒಂದಾಗಿತ್ತು. ಪುರಾತನಕಾಲದ ಭಾರತೀಯರಿಗೆ ರಂಗಭೂಮಿ ದೇವಸ್ಥಾನದಷ್ಟು ಪವಿತ್ರವಾಗಿತ್ತು; ಮತ್ತು ನಾಟಕವನ್ನು ಅವರು 'ಚಾಕ್ಷುಷ ಯಜ್ಞ'ವೆಂದು ಕರೆದರು. ಎಲಿಝಬೆಥನ್ ಯುಗದಲ್ಲಿ ನಾಟಕಕ್ಕಿರುವ ಮರ್ಯಾದೆ ಮತ್ತಾವ ಸಾಹಿತ್ಯ ರೂಪಕ್ಕೂ ಇರಲಿಲ್ಲ. ಪಾಶ್ಚಾತ್ಯದೇಶಗಳಲ್ಲಿ ಈಗ ಕೂಡ ಪಾರ್ಲಿಮೆಂಟಿಗಿರುವ ಗೌರವ ರಂಗಭೂಮಿಗಿದೆ. ಯಕ್ಷಗಾನ ಬಯಲಾಟಗಳು ನಡೆಯುವಂಥ ಜಾನಪದ

ರಂಗಭೂಮಿಗೆ ಕೂಡ ಅದರದೇ ಆದ ವಿಶಿಷ್ಟವಾದ ನಿಯಮಗಳಿವೆ, ಪದ್ಧತಿಗಳಿವೆ. ಅಲ್ಲಿ ಕಠಿಗಾರನಾದವನು ತಲೆಗೆ ಪಾವುಡ ಸುತ್ತಿಕೊಳ್ಳದೆ ತಾಳವನ್ನು ಹಿಡಿಯಲಾರ. ಪೂಜೆ ಪ್ರಸಾದ ನಡೆಯದೆ ನಾಟಕ ಪ್ರಾರಂಭವಾಗುವದಿಲ್ಲ.

ಇದೆಲ್ಲದರ ಅರ್ಥ ಇಷ್ಟೇ ಆಗಿದೆ. ರಂಗಭೂಮಿ ಕನ್ನಡದಲ್ಲಿ ಮತ್ತೊಮ್ಮೆ ಆ ಸತ್ವವನ್ನು ಪಡೆಯಬೇಕಾಗಿದೆ. ಅದಕ್ಕಾಗಿ ಜನರಷ್ಟೇ ಎಚ್ಚತ್ತರೆ ಸಾಲದು. ನಾಟಕಕಾರರು ಎಚ್ಚರಾಗಬೇಕು. ರಂಗಭೂಮಿಯ ಮೇಲೆ ಯಶಸ್ವಿಯಾದರೆ ಮಾತ್ರ ನಾಟಕದ ಜನ್ಮ ಸಾರ್ಥಕವಾದಂತೆ ಎಂದು ತಿಳಿದು ನಾಟಕವನ್ನೇ ಬರೆಯುವದನ್ನು ಬಿಡಬಾರದು. ನಾಟಕಪ್ರದರ್ಶನ ಇನ್ನೊಬ್ಬರಿಂದ ಆಗಬೇಕಾದ ವ್ಯವಸಾಯ. ಕಾಲ-ಕ್ರಮದಲ್ಲಿ ಅದು ರೂಪುಗೊಳ್ಳಬಹುದು. ನಾಟಕಗಳಿಗೆ ಉಚಿತವಾದ ಪ್ರದರ್ಶನ ನಡೆಯದಿರಲಾರದು. ಹಿಂದಿನ ಕಾಲಕ್ಕೆ ಮಹಾಕಾವ್ಯಗಳನ್ನು ಸೂತರು ಹಾಡಿ ತೋರಿಸುತ್ತಿದ್ದಂತೆ, ನಟರು ರಂಗಭೂಮಿಯ ಮೇಲೆ ನಾಟಕವನ್ನು ಆಡಿ ತೋರಿಸುತ್ತಿದ್ದಾರೆ. ಬೆಳಕು ಬಣ್ಣಗಳ ಬೆಡಗಿಗಿಂತ ನಾಟ್ಯಕಲೆಯ ಪ್ರತಿಷ್ಠಾಪನೆ ರಂಗಭೂಮಿಯ ಮೇಲೆ ಅವಶ್ಯವಾಗಿದೆ. ಅದಕ್ಕಿಂತ ಶೂನ್ಯವಾಗಿರುವ ನಾಟ್ಯಗೃಹ ಹತ್ತು ಪಾಲಿಗೆ ಮೇಲು. ಶೇಕ್ಸಪಿಯರ್, ಯುರಿಪಿಡಿಸ್, ಭಾಸ, ಕಾಲಿದಾಸರಂಥವರು ಅಂಥ ರಂಗಭೂಮಿಯನ್ನಾಶ್ರಯಿಸಿದವರಾಗಿದ್ದರು. ಒಂದು ನಾಟಕಪ್ರದರ್ಶನವೆಂದರೆ ಅನೇಕ ಕಲೆಗಳ ಸಮನ್ವಯವಾಗಬೇಕು. ಅಭಿನಯ, ಸಂಗೀತ, ಕಾವ್ಯ, ರಸಿಕತೆ, ವಿಮರ್ಶೆ, ಸಭ್ಯತೆ ಇವೆಲ್ಲ ಬೆಳಗುವದು ಆ ಪ್ರದರ್ಶನದಲ್ಲಿಯೇ. ಇದು ಒಂದು ದಿನದಲ್ಲಾಗುವ ಕಾರ್ಯವಲ್ಲ. ಇಂಥ ರಂಗಭೂಮಿ ಕನ್ನಡದಲ್ಲಿ ಬರಬಹುದೆಂಬ ಭರವಸೆ ಈಗೀಗ ಕಾಣುತ್ತದೆ. ಇದಕ್ಕೆ ಕಾರಣವೆಂದರೆ, ಅಂಥ ರಂಗಭೂಮಿಗೆ ಮೊಟ್ಟಮೊದಲನೆಯ ಅವಶ್ಯಕತೆಯಾದ ನಾಟಕ ನಮ್ಮಲ್ಲಿ ಇದೆಯೆಂಬುದೇ.





# ನಾಟಕ

ಕೃತಾನುಕರಣಮೆ ನಾಟ್ಯಂ

—ಪಂಪ

# ಪರಿವಿಡಿ

## ನಾಟಕಗಳು



## ಗೀತ-ನಾಟಕಗಳು



## ಏಕಾಂಕ-ನಾಟಕಗಳು



## ರೇಡಿಯೋ-ನಾಟಕಗಳು

## ಪಾತ್ರಗಳು

**ಗೌಡರು**— ಊರ ಗೌಡ; ನಡುಹರೆಯದವ.

**ಹನಳೆಪ್ಪ**— ಅರವತ್ತು ವರ್ಷದ ಮುದುಕ; ಹಳಬ.

**ಬಸವೆಯ್ಯ**— ನಡುವಯಸ್ಸಿನವ; ವಿಲಾಸಿ.

**ತಮ್ಮಣ್ಣಿ**— ಗೌಡರ ಹಸ್ತಕ.

**ಗೌರಿ**— ಗೌಡರನ್ನು ನೆಚ್ಚಿಬಂದ ಪ್ರಾಯದ ಹೆಣ್ಣು.

**ಶಂಕರ**— ಸಾವಕಾರ ಮಲ್ಲೇಶಿಯ ಮಗ;

**ಮಲ್ಲೇಶಿ**— ಶಂಕರನ ತಂದೆ, ಎಪ್ಪತ್ತು ವರ್ಷದ ಮುದುಕ.

**ಸ್ಥಳ :**

ಕರ್ನಾಟಕ-ಮಹಾರಾಷ್ಟ್ರ ಗಡಿಪ್ರದೇಶದ ಒಂದು ಹಳ್ಳಿ.

**ಕಾಲ :**

ಆಧುನಿಕ.

## ಅಂಕ ೧

[ ಗೌಡರ ಮನೆಯ ಪಡಸಾಲೆ. ಎರಡಂಕಣದ ಸದರು ಕಟ್ಟೆಯ ಮೇಲೆ ದೊಡ್ಡ ಗುಡಾರವೊಂದನ್ನು ಹಾಸಿ ಅದರ ಮೇಲೆ ಒಂದೆರಡು ಹಳೆಯ ದಿಂಬುಗಳನ್ನಿಡಲಾಗಿದೆ. ಒಂದು ಹೊಸಮಾದರಿಯ ಬರೆಯುವ ಡೆಸ್ಕು ಒಂದು ಬದಿಗಿದೆ. ಕಟ್ಟೆಯ ಕೆಳಗೆ ಬರ-ಹೋಗುವ ದಾರಿಯನ್ನು ಬಿಟ್ಟು, ಒಂದು ಮೂಲೆಯಲ್ಲಿ ಒಕ್ಕಲುತನದ ಸಾಮಾನುಗಳನ್ನು ಇಡಲಾಗಿದೆ. ಗೌಡರು ದಿಂಬಿಗಾತುಕೊಂಡು ವಿಚಾರಮಗ್ನರಾಗಿ ಕುಳಿತಿದ್ದಾರೆ. ಇನ್ನೂ ನಡುಹರೆಯದ ತರುಣ; ಹುರಿಮೀಸೆ; ಸ್ಥೂಲವಾದರೂ ಗಟ್ಟಿಮುಟ್ಟಾದ ಶರೀರ. ಮೈಯಲ್ಲಿ ಬಿಳಿಯ ಮಲಮಲಿಯ ಅಂಗಿಯೊಂದನ್ನು ಹಾಕಿಕೊಂಡಿದ್ದಾರೆ. ಸುತ್ತಿಟ್ಟ ಜರದ ಕೆಂಪು ರುಮಾಲಿನ ಮೇಲೆ ಒಂದು ಕೈಯನ್ನೂರಿ ಇನ್ನೊಂದು ಕೈಯನ್ನು ತಲೆಯಮೇಲೆ ಆಡಿಸುತ್ತಿದ್ದಾರೆ. ಕಟ್ಟೆಯ ಕೆಳಗೆ ಒಂದು ಮಗ್ಗುಲಿಗೆ ಇದಾವುದರ ಲಕ್ಷ್ಯವೂ ಇಲ್ಲದವನಂತೆ ಅರವತ್ತು ವರ್ಷದ ಮುದುಕ ಹಳಬರ ಹವಳೆಪ್ಪ ಚಿಲುಮೆ ಹೊತ್ತಿಸುವ ಸಿದ್ಧತೆಯಲ್ಲಿದ್ದಾನೆ. ಖಾದಿಯ ಹಳೆಯ ಹರುಕಾದ ಅಂಗಿ, ತಲೆಯ ಮೇಲೆ ಚಿಂದಿಯಾದ ಒಂದು ರುಮಾಲು ಇವೆ. ತೆರೆಯೆದ್ದಾಗ ಗೌಡರು ಒಂದೆರಡು ಸಾರೆ ತಲೆ ಕೆರೆದುಕೊಂಡು, ಅಕಸ್ಮಾತ್ತಾಗಿ ಹವಳೆಪ್ಪ ಕೆಲಸವಿಲ್ಲದವರಂತೆ ಕುಳಿತದ್ದನ್ನು ನೋಡಿ ಸಿಟ್ಟಿಗೆದ್ದು — ]

**ಗೌಡ :** ಏ ಹವಳ್ಯಾ ! ಹರ್‍ಯಾಕೆದ್ದಮ್ಯಾಗ ದಗದನsಇಲ್ಲೇನಲೆ ? ನೋಡ ! ಆತ್ಯಾಗಡಿ ಓಣಿ ತಮ್ಮಣ್ಣಿ ಮನ್ಯಾಗ ಹಾನೇನು ನೋಡಿ ಬಾ! ಇದ್ದರ ನಾ ಕರದೀನಂತ ಹೇಳು ಅವಗ. ಭಾಳ ಜರೂರಿ ಕೆಲಸ ಐತಿ ಅಂತ ಹೇಳು. ಇದ್ದಾಂಗ ಹೊಂಟು ಬಾ ಅನ್ನು. ಮುಂದ ಹಕ್ಕೊಂಡs ಬಾ, ನನಗೂ ಒಂದ ಕೈ ನೋಡೇ ಬಿಡೂದೈತಿ.

**ಹವಳೆಪ್ಪ :** ಈಗ ಸದ್ದೆ ಹೋಗಬೇಕ್ಯಾನರಿ ? ಯಾನ ತಂಬಾಕ ಸೇದಿ ಹ್ವಾದರ ನಡೀತೈತ್ರಿ ? ಹಂತಾದ ಯಾವ ಭಾಳ ತರಾತುರಿ ದಗದರಿ ?

**ಗೌಡ :** ಏ, ಹೇಳಿದ್ದsಟ ಕೇಳಾಕ ಏನ ಬೇಡತೀ ನೀ ? ಸುಮ್ಮಗ ಹೊಂಡಬಾರದ ?

**ಹವಳೆಪ್ಪ :** ಅವಾಗೋಳ ನೀರಿಗೆ ಹೋಗಾವರದಾರ‍್ರಿ, ಅದಕ ... ...

**ಗೌಡ :** (ಒಮ್ಮೆಲೆ ಕನಲಿ) ಆಕಿ ನೀರಿಗೆ ಹೋದರ ನಿಂದೇನ ದಗದ ಐತಿ ?

**ಹವಳೆಪ್ಪ :** (ಮಾತನ್ನು ಎಳೆಯುತ್ತ) ಒಂದ ಜರಾ ಕುಂಡ್ರ ಅಂದಿದ್ದರರೇ !

**ಗೌಡ :** ನಿನ್ನ ಬಿಟ್ಟರ ಈ ಮನ್ಯಾಗ ಉಳಿದವರೆಲ್ಲಾ ಸತ್ತಾರೇನ ?

**ಹವಳೆಪ್ಪ :** (ತಿಳಿಸಿ ಹೇಳುವವನಂತೆ) ಅವರ ಸಂಗಾಟ ಹೊಳೀಗೆ ಹೋಗಿ ಬರೂ-ದಿತ್ತರಿ.... ಅದಕ್ಕಂದ್ನಿ.

**ಗೌಡ:** (ಇನ್ನಷ್ಟು ಕೋಪಗೊಂಡು, ದೊಡ್ಡದನಿಯಲ್ಲಿ) ಈ ಮನೀಗೆ ನಾ ಮಾಲಕೋ ಏನ ಆಕಿ ಮಾಲಕತ್ಯೊ ? ನನ್ನ ಮಾತ ಕೇಳತೀಯೋ, ಏನ್, ಆಕೀ ಮಾತ ಕೇಳತೀಯೋ ? ಒಳ್ಳೊಳ್ಳೆ ಸಂಸ್ಥಾನಿಕರ ಹೆಂಡಂದಿರು ಮುಂದ ಶಿಪಾಯಿರಿಲ್ಲದ ಹಾಗs ತಿರಗ್ಯಾಡತಾರ ! ನೀರ ಹೊರೂ ಕೆಲಸಕ್ಕ ಆಳು ಬೇಕಂತ ಆಳು ! ಎಲ್ಲಿಲ್ಲದ ಬಂದೈತೇನು ಮಾನಾ ಮರ್ಯಾದಿ ?

ಹವಳೆಪ್ಪ : ಹಾಗಲ್ರಿ ! ಹೊಳೀ ಹಾದೀಲೆ ಆಗದವರು ಯಾರಾರೆ ಅಣಕಾ ಮಾಡ ತಿರತಾರು. ಗರತಿ ಹೆಣಮಗಳು, ಊರ ಗೌಡಶಾನಿ ಅಂದಮ್ಯಾಗ ಮಾನಕ್ಕ ಮಿಂಚುತ್ತಾರ್ರಿ?

ಗೌಡ : (ಅಲಕ್ಷ್ಯದಿಂದ) ಅಣಕಾ ಆಡಿದರ ಆಕೀ ಮೈಗೇನು ತೂತು ಬೀಳತಾವೇನು ? ನಗಚಾಟಕೀಲೆ ಯಾರ್ಯಾರೆ, ಏನಾರೆ ಅಂದಿದ್ದಾರು. ಅದರಾಗೇನ ? ಯಾತ ಕಾದರೂ ಒಬ್ಬ ಹಳಬನ್ನ ಬೇಕಂತಂದರ ? ಗೌಡರ ಗೌಡಕೀನ್ನ ಹೋಗಾಕ ಕುಂತಾಗ ಈಕೀದೊಂದು. ಇರ್ಲಿ ಹೋಗು. ಇಲ್ಲದ್ದ ಪಂಚಿ ಉಚ್ಚಬ್ಯಾಡ. ಹೇಳಿದಷ್ಟು ಮಾಡೂದು ಬಿಟ್ಟು, ಅಗಲಾಗಿಂದ ತಗೀ ಅಂದರ ಬಗಲಾಗಿಂದ ತಗದರಂತ—ಹಾಗ ಮಾಡತೀಯಲ್ಲ ? ಹೋಗು ಮದಲ........ ಯಾವನ್ನ ಕೇಳಿದರೂ ಒಲ್ಲೇ ಅಂತಾನು.

ಹವಳೆಪ್ಪ : ಯಾವರಿ ಅಂವಾ, ನೀವು ಕರದರ ಒಲ್ಲೆಂದಾವಾ ? ಜೀವ ಬ್ಯಾಡಾಗೇ ತೇನರಿ ಅವಗ ? ಹೌಂದ್ರಿ ಮತ್ತ, ನಮ್ಮಂತಾ ಹಳಬರು ಇರಬೇಕ್ಯಾಕ್ರಿ ಮತ್ತ ? ಯಾವ ಒಲ್ಲೆಂದಾನ ಅವನ ಹೆಸರರಿ ಹೇಳ್ರಿ. ಮುಂಚಾಕ ಅವನ್ನ ಕರಕೊಂಡ ಬಂದ್ನ ಆಮ್ಯಾಗ ತಮ್ಮಣ್ಣಿ ರೀ !

ಗೌಡ : (ಸಿಟ್ಟಿಗೆದ್ದು) ಅವರ್ನ, ಇವರ್ನ ಅಂತ ಏನ ಹಚ್ಚೀದಿ, ಹೇಳಿದಷ್ಟು ಮಾಡೂದು ಬಿಟಗೊಟ್ಟು ? ಮತ್ತ ಆ ತಮ್ಮಣ್ಣಿ ಎಲ್ಲೆರೆ ಹೋಗಾವಾ. ಇಂದ ಸಂಜೀ ಅಷ್ಟೊತ್ತಿಗೆ ನಿಕಾಲೆ ಆಗಾಕ್ನಬೇಕು !

ಹವಳೆಪ್ಪ : ಅವಾ ಎಲ್ಲಿ ಹೋದಾನು ತಗೀರಿ. ಅವಾ ಹೋಗೂ ಜಾಗಾ ಎಲ್ಲಾ ಗೊತ್ತದಾವಲ್ರಿ ! (ಸ್ವಲ್ಪ ತಡೆದು, ಕುಳಿತಲ್ಲಿಂದಲೇ ಮುಂದೆ ಮುಖ ಚಾಚಿ ಮೆಲ್ಲಗಿನ ದನಿಯಲ್ಲಿ) ಮತ್ತ ಯಾನರೆ ಮಾಡ್ಯಾನೇನರಿ ಆ ತಮ್ಮಣ್ಣಿ ? ನಿಮ್ಮದೂ ಬಾಳ ಇಶ್ವಾಸಾ ಅವನ ಮ್ಯಾಗ! ಅಂತಾವಾ ನಿಮಗ ಇದರ ನಿಂದರತಾನ ಅಂದರ, ಏನ ಬಂತ್ರಿ ಕಾಲಾ ? ನಮ್ಮ ಗೌಡರಿಗೆ ಹೀಗ ಮಾಡಿದರ ಮುಂದ ಯಾನ ಆದೀತು ತೀಳೀಬಾರದೇನರಿ ?

ಗೌಡ : ಅವಾ ಏನ ಮಾಡ್ಯಾನೋ ? ಹೀಗ್ಯಾಕ ಮಳ್ಳನ್ಹಾಗ ಮಾಡತೀದಿ ?

ಹವಳೆಪ್ಪ : ಮತ್ತ ನೀವ್ನ ಅಂದ್ರಿ, ಚೆಂಜಿ ಒಳಗ ನಿಕಾಲೆ ಆಗಾಕಬೇಕಂತ ? ಅದಕ ಅವಾ ಏನರೆ ಮಾಡಿರಬೇಕು ಅಂತ ಕಾಯಾಸ ಕಟ್ಟಿದಿನರಿ. ಅಂವಾ ಅಲ್ಲ, ಮತ್ತ್ಯಾರರೆ ಮಾಡ್ಯಾರೇನರಿ ?

ಗೌಡ : ನನಗ ಏನ ಮಾಡತಾನ ಅವಾ? ನಮ್ಮನ್ನ ಹಿಂದ ಹಾಕಬೇಕೂ ಅಂತ ಸರಕಾರ ಹಿಕಮತಿ ಮಾಡಿದರೂ ನಡೀಲಿಲ್ಲ. ಎಲ್ಲಾ ಊರ ಗ್ರಾಮಪಂಚಾಯತಿ ನಮ್ಮ ಕೈಯಾಗ ಅದಾವ.

ಹವಳೆಪ್ಪ : (ಕುಳಿತಲ್ಲಿಂದಲೇ) ಪಂಚಾತಿ ಅನ್ನಾಣಾ ನೆಪ್ಪಾತು ನೋಡ್ರಿ. ನಮ್ಮೂರಾಗೂ ಸರಪಂಚಕಿ ಇಲೆಕ್ಶನ್ ಐತಿ ಅಂತ ಮಂದಿ ಮಾತಾಡ್ತಿತ್ತಲ್ರಿ ?

ಯಾನಾತರಿ ಅದರದು ?

ಗೌಡ : ಹೇಳಿದಷ್ಟು ಮಾಡು ಹೋಗೋ ! ಏನ ಇಲ್ಲದ್ದ ಪಂಚೇತಿ ಹಚ್ಚೀದಿ ? ಮೂರು ತಾಸಾತು ಒದರಿಕೊಣ್ಣಾಕ ಹತ್ತಿ, ಹಾಗ ಕುಂತ ಜಾಗಾ ಬಿಟ್ಟು ಸರದಿಲ್ಲ. ಏಳು, ಅವನ್ನ ಕರಕೊಂಡಬಂದು ಮಾತಾಡು. ಅವನ್ನೊಂದು ಮಾತು ಕೇಳೂದು. ಅವನೂ ಇಲ್ಲಾ ಅಂದ್ರ ... ...

ಹವಳೆಪ್ಪ : ( ನಡುವೇ ತಡೆದು ) ಇಲ್ಲಾ ಅಂದ್ರ ಈ ಹವಳ್ಯಾ ಅದಾನಲ್ರಿ. ಅವನ್ನ ಒದ್ದ ತರತೀನರಿ. ನೀವೇನೂ ಕಾಳಜೀ ಮಾಡಬ್ಯಾಡ್ರಿ. .

[ಎನ್ನುತ್ತ ಅನಾಥ್ಯ ಚಟುವಟಿಕೆಯಿಂದ ಎದ್ದು ನಿಂತು ಬಡಿಗೆಯನ್ನು ಎತ್ತಿಕೊಂಡು ನಡೆಯುವನು. ಗೌಡರು ಅವನು ಹೋಗುವದನ್ನು ಯಾಂತ್ರಿಕವಾಗಿ ನೋಡುತ್ತಾರೆ. ತಮ್ಮಷ್ಟಕ್ಕೆ ತಾವೇ, “ಇವನಾಪನ, ಒಳೇ ಪೇಚು ಬಂತಲೇ ಇದು !” “ಆತು ಆ ಮಲ್ಲೇಶಿನ್ನ ಒಂದು ಕೈ ನೋಡದಿದ್ದರ”, “ಚಾವಡೀ ಕಟ್ಟಿ ಇಳದು ಮನ್ಯಾಗ ಕುಂದ್ರಬೇಕಾದೀತು” ಎಂದು ಅಸಂಬದ್ಧವಾಗಿ ಮಾತಾಡುತ್ತ, ಅವಡುಗಚ್ಚುತ್ತಿದ್ದಾರೆ. ಕಡೆಗೆ ಅದೂ ಬೇಸರಾಗಿ ತೊಡೆಯ ಬುಡಕ್ಕೆ ಸಿಕ್ಕ ಚಂಚಿಯನ್ನು ಹೊರಗೆಳೆದು,ಅಡಕೊತ್ತಿನಿಂದ ಅಡಿಕೆ-ಬೆಟ್ಟವನ್ನು ಒಂದೇ ಸವನೆ ಕತ್ತರಿಸತೊಡಗುತ್ತಾರೆ. ಇದೇ ಸುಮಾರಿಗೆ ಮಲಮಲಿಯ ನೆಹರು-ಶರ್ಟು, ಬಿಳಿಯ ಪೇಟಾ, ತೆಳುವಾದ ಧೋತರಗಳಿಂದ ಅಲಂಕೃತನಾದ ಬಸವಯ್ಯ ಬರುತ್ತಾನೆ. ಎತ್ತರವಾದರೂ ಬಡಕ ಆಸಾಮಿ; ಮುಖ ಕಪ್ಪಾದರೂ ಕ್ಷೌರದಿಂದ ಮಿಂಚುತ್ತಿದೆ. ನಡಿಗೆ, ನೋಟ, ಮಾತು-ಎಲ್ಲ ವಕ್ರವಾಗಿವೆ. ಅವನ ಕೆರವಿನ ಸಪ್ಪಳವಾಗುತ್ತಲೇ ಗೌಡರು ಮುಖವೆತ್ತಿ ನೋಡುತ್ತಾರೆ. ]

ಗೌಡ : ಎಲೆ ಇವನ ! ನೆನಸೂದರಾಗ ತೊನಶ್ಯಾಳ ಗೌಡ ಅಂತಾರಲ್ಲ, ಹಾಗ, ಕರಸಿದವರ ಹಾಗ ಬಂದೆಲ್ಲಾ ! ಬಾ, ಬಾ ಮ್ಯಾಗ ಕುಂದ್ರು. ಹಿಡಿ ಎಲಡಕಿ.

ಬಸವಯ್ಯ : ( ಅವುಗಳ ಕಡೆಗೆ ಲಕ್ಷ್ಯವೀಯದೆ) ನಂದs ಹಾದೀ ನೋಡತಿದ್ರಿ ಏನರಿ ? ಥಂತಾದೇನ ಒಳೇ ಜರೂರಿ ದಗದ ಇತ್ತರಿ ? ನಿನ್ನೆ ಬಂದಾಗ ಏನ ಹೇಳ್ಲಿಲ್ಲ !

ಗೌಡ : ಸುದ್ದೀ ಮ್ಯಾಗ ಅದೀಯೋ, ಏನ ಕುಡದಗಿಡದ ಬಂದೀಯೋ ? ನಾಳೆ ಸರಪಂಚನ ಇಲೆಕ್ಶನ್ ಐತಿ, ಗೊತ್ತಿಲ್ಲೇನ ? ಏನ ನಂದs ಗುಟ್ಟು ತಿಳಕೋಬೇಕಂತೀಯೊ ?

ಬಸವಯ್ಯ : ಗೊಂತ ಐತಿ ಬಿಡ್ರಿ ! ಆದರ ಗೊಂತಾಗಿ ಮಾಡೂದ್ಯಾನರಿ ? ಅಲ್ಲ, ಕಂಡದ್ದs ಮಾತು ಬಿಡ್ರಿ. ಆ ಮೂಲಿಮನಿ ಮಲ್ಲೇಶಿ ಇರುದ್ದ ಅದ ಯಾವ ಗಂಡಸು ನಿಂದರತಾನರಿ ಈ ಊರಾಗ ? ಎಲ್ಲಿ ಹೋದಲ್ಲಿ ಅವನ ಹೆಸರs ಗಜಗುಡಲಾಕ ಹತ್ತೇತಿ.

ಗೌಡ : ( ಸಿಟ್ಟಿನಿಂದ ) ಏ ಬಶ್ಯಾ, ಕೈಯಾಗ ಬಳಿ-ಗಿಳಿ ಇಟ್ಟೀರೇನಲೆ ? ನಾ ಗೌಡ ಇರೂತನಾ ಅಂವಾ ಸರಪಂಚ ಹ್ಯಾಂಗರೆ ಆಗತಾನ ನೋಡೇಬಿಡತೀನ.

ಬಸವಯ್ಯ : ಸುಮಾಕ ಯಾನರೆ ಮಾತಾಡಿದರ ಆತೇನರಿ ? ಭೂಮಿತೂಕದ ಮನಶ್ಯಾ, ಅವನ ವಜನ ಊರಾಗ ಯಾರಿಗೈತರಿ ? ಅವನ ಇರುದ್ದ ನಿಂದರ-ಬೇಕರೆ ಯಾರರಿ ?

ಗೌಡ : ಅದಽ ಬಾಳ ಬಿರಿ ಬಂದೈತಿ ನೋಡು. ನಾಲಿಮನಿ ಸಿದ್ದಪ್ಪನ್ನ ಕೇಳಿದರ ಅವಾ ಮಲ್ಲೇಶಿ ಕಡಿಂದ ಸಾಲಾ ತೊಗೊಂಡಾನಂತ; ಹಾದೀಮನಿ ಹಣಮ ಅವನ ಹೊಲಾ ಮಾಡ್ಯಾನಂತ. ಇವರನ ಬಿಟ್ಟರ ಮ್ಯಾಲಗಡಿ ಓಣ್ಯಾಗಂತಿ ಕಾಲ ಹಾಕಾಂಗಿಲ್ಲ. ಅದಕಂತ ಕೆಳಗಡಿ ಓಣೀ ತಮ್ಯಾನ್ನ ಕರಸೀನ, ಒಂದ ಮಾತ

ಬಸವಯ್ಯ : (ಉಪಹಾಸದಿಂದ) ಏನರಿ, ಕೆಳಗಡಿ ಓಣಿ ತಮ್ಯಾರೇ ! ಅದೇನ ನಿಂತೀತ ಬಿಡ್ರಿ ! ಇಂದ ವಿಲೆಕ್ಶನ್ ಅಂದರ ಕೈಯಾಗ ರೋಖ ಪಾಛಸೆ ರುಪಾಯಿ ಬೇಕರಿ. ಅವನ ತೆಲಿಮ್ಯಾಗಿನ ಕೂದಲಾ ಕಿತ್ತಿದರ ಅಽಟಿ ಹೊಂಡಾಕಿಲ್ಲ. ಅದ್ಯಾನ ನಿಂದರತತಿ, ನೀವೂ ಗನಾ ತಮಾಶಿ ಮಾಡಾವರು !

ಗೌಡ : ನಿಂದರದ ಏನ ಮಾಡತಾನ ಮಗಾ. ನಾ ಹೇಳಿದರ ನಿಂದರಾಕಿಲ್ಲ ? ಇಷ್ಟೂ ಮಿಾರಿ ಒಲ್ಲೆ ಅಂದರ, ಕಡೀಕ ನಮ್ಮ ಆಸಾಮಿ ಐತೆಲ್ಲಾ !

ಬಸವಯ್ಯ : ಮತ್ಯಾವ ಆಸಾಮಿ ತಗದೀರಿ ಅದನೀಟು ಹೇಳೇಬಿಡ್ರಿ ?

ಗೌಡ : ಅದೇನ ನಿನಗ ಗೊತ್ತಿಲ್ಲದ ಆಸಾಮಿ ಅಲ್ಲ. ಆ ಮುದೋಡ್ಯಾನ್ನ ಹೆಂಗಸಿನ ಕಡಿಂದ ಒಗಸಲಿಲ್ಲಾ ಅಂದ್ರ.

ಬಸವಯ್ಯ : ಹೆಂಗಸೂರು ಯಾಕ ನಿಂದರಾಕ ಹೋದಾರ್ರಿ ! ನೀರಾಗ ಉರಿ ಎಬ್ಬಸವರು ನೀವೂ. ಮನ್ಯಾಗ ರೊಟ್ಟಿ ಬಡೂದು ಬಿಟ್ಟು ವಿಲೆಕ್ಶನಕ ಯಾಕ ನಿಂದರತಾರ್ರಿ ?

ಗೌಡ : ನಿನಗೇನು ಗೊತ್ತೈತೊ ಬಸ್ಯಾ ? ಖರೇ ಹಳ್ಳಿ ಹುಂಬ ನೋಡಲೇ. ಕಾಲ ಏಟ ಮುಂದ ಹೋಗೇತಿ ಅನ್ನೂ ಖಬರು ಐತೇನಲೆ ನಿನಗ ? ಮಳ್ಳಗ ಏನಾಗಬೇಕ ನೀ ? ಕಾಯದೆ ಕೌನ್ಸಿಲ್ ಇಲೆಕ್ಶನ್ನಕ ಎಷ್ಟ ಮಂದಿ ಹೆಂಗಸೂರ ಇರೂದುಲ್ಲ ?

ಬಸವಯ್ಯ : ನಮಗೇನ್ ಮಣ್ಣ ಗೊತ್ತಾದೀತ ಬಿಡ್ರಿ ಇವೆಲ್ಲಾ. ಹುಟ್ಟಾ ಸತ್ತಿಲ್ಲ ಸುಡಗಾಡ ಕಂಡಿಲ್ಲಾ ! ಆದರ ಹಂತಾಕಿ ಯಾವಾಕಿ ಅದಾಳ್ರಿ, ಮ್ಯಾಲಗಡಿ ಓಣಿ ಮಲ್ಲೇಶಿ ಇರುದ್ದ ನಿಂದರಾಕಿ ? ನಿಂತರ ಅರಿ ಕೇಳಾವರ ಯಾರ್ರಿ ಆಕಿನ್ನ ?

ಗೌಡ : ಮತ್ತ ಅದಽ ಮಾತಽ ಅಂತೀಯಲ್ಲೊ ? ಏನ ಬಿರದ ಛಟಿಗೊಂಡಾನೇನ ನಿಮ್ಮ ಆ ಮಲ್ಲೇಶಿ ? ಅದಿರಲಿ ಬಿಡು. ನಮ್ಮ ಹವಳ್ಯಾ ಕೆಳಗಡಿ ಓಣಿ ತಮ್ಯಾನ ಕಾಣಲಾಕ ಹೋಗ್ಯಾನ. ಅಂವಾ ಅಲ್ಲೆ ತಂಬಾಕ ಶೇದಿಕೊಂತ ಕುಂಡರಾವ. ನೀನಽ ಹೋಗಿ ಆ ತಮ್ಮಣ್ಣಿಗೆ ನಾ ಕರದೀನಂತ ಹೇಳ ಮತ್ತ-

ಇಗಾ... (ಮೆಲ್ಲಗಿನ ದನಿಯಲ್ಲಿ) ಆಕೀ ಕಡೆ ಹೋಗಿ, ನಾ ಕರದೀನು, ಭಾಳ ಜರೂರಿ ಕೆಲಸ ಐತ್ಯಂತ ಹೇಳು. ಹಾಗೇ ಬರೂಮುಂದ ಆ ಸಿದರಾಮುಗ ನಾಕ ಚಾ, ನಾಕ ಕಾರಾ ಹೇಳಿ ಹೋಗ.

ಬಸವಯ್ಯ: (ಅನುಮಾನಿಸುತ್ತ) ನಾ ಎಲ್ಲಾ ಹೇಳತೀನ ಖರೆ ... ಆದರ ಗೌರಾನ್ನ ಗೌಡತಿಯವಾಗೋಳ ಬರಗೊಟ್ಟಾರೇನರಿ ಮನ್ಯಾಗ ? ನಂದ್ಯಾನರಿ ಹೇಳಾಂಗ ಹೇಳತೀನ.

ಗೌಡ: ಆಕಿ ಈಗ ಒಗೀಲಾಕ ಹೋಗ್ಯಾಳ. ಇನಾ ಬರಬೇಕಾರ ತಾಸ್ಯಾಡತಾಸ ಬೇಕಾದೀತು. ಮತ್ತ ಇಷ್ಟು ಮೀರಿ ಗೊತ್ತಾದರ ಆಗಲೇಳ. ಒಮ್ಮಿಲ್ಲಾ ಒಮ್ಮೆ ಗೊತ್ತ ಆಗೂದೇ ಅಲಾ. ಹೋಗ ನೀ, ಲಗ್ಗ ಬಾ. ನೀ ಬರೊಟಿಗೇ ನಾನೂ ಒಳಗ ಹೋಗಿ ಒಂದು ರೊಟ್ಟೀ ತಿಂದ ಬರತೀನ.

[ ಬಸವಯ್ಯ ಹೊರಗೆ ಹೋಗುತ್ತಾನೆ. ಅವನನ್ನು ಕಳಿಸಿ ಗೌಡರು ಒಳಗೆ ಹೋಗು ತ್ತಾರೆ. ಒಂದೆರಡು ನಿಮಿಷ ಕಾಲ ರಂಗದ ಮೇಲೆ ಯಾರೂ ಇಲ್ಲ. ಆಮೇಲೆ ತಲೆಬಾಗಿಲಿನಿಂದ ಹವಳೆಪ್ಪ ತಮ್ಮಣ್ಣಿಯನ್ನು ಕರೆದುಕೊಂಡು ಬರುತ್ತಾನೆ. ]

ತಮ್ಮಣ್ಣಿ: ಹವಳೆಪ್ಪಾ, ನೀ ಏನ ಹೇಳಿದರೂ ನನ್ನ ಮನಸ್ಸಿಗೆ ಸುಚಾಸಲಿಲ್ಲ ತಗೀ...

ಹವಳೆಪ್ಪ: (ಅವನನ್ನು ತಡೆದು) ಎಲಾ ಇವನ ! ಎಲ್ಲಿ ಹ್ವಾದರ ಈಟರಾಗ ? ನಾ ಒಂದ ಹಾದೀಲೆ ಬಂದರ ತಾವೊಂದ ಹಾದೀಲೆ ಹೋದರೋ ಏನೋ ! ಕಾಲಮರಿ ಇಲ್ಲೇ ಕಾಣತಾವು ; ರುಂಬಾಲನೂ ಇಲ್ಲೇ ಐತಿ. ಅಂದಮ್ಯಾಗ ಇಲ್ಲೇ ಎಲ್ಯಾರ ಹೋಗಿದ್ದಾರ. ಕುಂಡ್ರಿ ತಮ್ಮಣ್ಣೆಪ್ಪಾ ಒಂದ ಜರಾ.

ತಮ್ಮಣ್ಣಿ: ಅಂದಹಾಗೇ ನೆಪ್ಪಾತು ನೋಡು ಹವಳೆಪ್ಪಾ. ಮತ್ತ ಯಾರಾರ ಅಮಲದಾರ ಬರಾವ ಅದಾನ್ಯಾನ ? ಮತ್ತ ಅವಂದೇನರ ಸರಬರಾಯಿ ಇದ್ದೀತ. ಈಗೇನ ಅಮ್ಮಲದಾರರ ಹಗೇನ ತಗದಾಂಗ ಆಗೇತಿ !

ಹವಳೆಪ್ಪ: ಎಲ್ಲೀದರೀ ! ನಾ ಸಣ್ಣಾಗಿಂದ ಚಾವಡ್ಯಾಗ ಅದೀನಲ್ರಿ ! ( ಮತ್ತೆ ತನ ಸ್ಥಳದಲ್ಲಿ ಕುಳಿತು ಚಿಲುಮೆಯನ್ನು ಸಜ್ಜುಗೊಳಿಸುತ್ತಾನೆ) ಯಾಡ್ಯಾಡ ವರ್ಸ ಆದರೂ ಒಬ್ಬ ಅಮಲದಾರೇನು ಊರ ಕಡೆ ಬರತಿದ್ದಿಲ್ಲ. ಖಾಕೀ ಅಂಗ್ಯಾವರನ್ನ ನೋಡಿದರ ಊರ ಮಂದೆಲ್ಲಾ ಫರಾರೀನ ! ಆ ಮ್ಯಾಗಡೀ ಓಣ್ಯಾಗ ಅದೊಂದು ಹುಚ್ಚಮಕಾಶಿ, ಗೊಳ್ಯಾ ಅಂತಿತ್ತಲ್ಲರಿ – ಒಮ್ಮೆ ಒಬ್ಬ ಶಿಪಾಯಿ, ಅವನ್ನ ಏನೋ ಕೇಳಿದ್ದಕ್ಕ ಊರ ಬಿಟ್ಟ ಓಡಿಹ್ವಾದಾವ, ಇಂದಿಗೂ ಪತ್ತೇ ಇಲ್ಲ. ಒಬ್ಬ ಸರ್ಕಾಲ ಬಂದರ ರಾಜಾ ಬಂದ್ಹಾಗ ಆಗೂದರಿ ನಮಗ. ಈಗೇನ್ವತಿರಿ.

ತಮ್ಮಣ್ಣಿ: ಈಗ ಅವರು ಹಾಗ ಬಂದರೂ ಅವರ ಕೈಯಾಗೇನಿಲ್ಲೇಳ. ಈಗ ಎಲ್ಲಾ ಕಾರಭಾರ ನಮ್ಮ ಕೈಯಾಗ ಬಂದೈತಿ. ಅಂತೇ ಸರಕಾರದವರು ಹಳ್ಳಿಹಳ್ಳಿಗೆ

ಗ್ರಾಮಪಂಚಾಯತಿ ಮಾಡ್ಯಾರು.

ಹವಳೆಪ್ಪ : ಮತ್ತ ಅದೂ ಒಂದು ಜಗಳಕ್ಕ ಮೂಲ ಆಗೇತೆಲ್ರಿ. ಇಲೆಕ್ಶನ್ನದಾಗ ಶಾರದೂರವರ ಆಟ ಕಡದಾಡತಾರ ಅಂತ ಅಂತಿದ್ದೆವಲ್ರಿ, ನಮ್ಮ ಹಳ್ಳಿಗೂ ಅದು ಬಂತಲ್ರಿ.

ತಮ್ಮಣ್ಣಿ : ಹುಚ್ಚ ಅದೀ ನೀ. ಯಾಕ ಕಡದಾಡತಿದ್ದಾರು, ಅದರದ್ಯಾನರೆ ನಿನಗ ಗೊಂತ ಇದ್ದರ ಚಿಂತಿಲ್ಲ. ಆರಿಸಿ ಬಂದವರ ಕೈಯಾಗ ಸರಕಾರ ಬರತೈತಿ ; ಅವರು ಅಂದದ್ದು ಕಾಯದೆ, ನಡಸಿದ್ದು ಕಾರಭಾರ ಆಗತೇತಿ. ಹ್ಯಾಂತ ಹ್ಯಾಂತ ಅಮಲದಾರರು ಅವರನ ನೋಡಿದರ ಗಡಗುಟ್ಟಿ ನಡಗತಾರು ! ಕಲ-ತವರು ಕಾಯದೇ ಮಾಡಬೇಕಂಬೂದು ಇಂಗ್ರಜರ ಯಾಳ್ಯಾಕ ಇತ್ತ. ಈಗ ಅದೆಲ್ಲಾ ಬದಲಾಗೇತಿ.

ಹವಳೆಪ್ಪ : ಇದ್ಯಾನ ಅಣಕಾ ಆಡತೀರೇನ್ರಿ ? ಕಲೀದ ಮಾಡದ ಕಾಯದೆ ಮಾಡತಾ-ರಂದ್ರ, ನಾವು ಹೋಗಿ ಕಾಯದೆ ಮಾಡಿದ್ಹಾಂಗ ಆತಲ್ರಿ. ಸೊರಾಜ್ಯ ಅಂದರ ಇದಕ್ಕ ಅಂತಾರೇನ್ರಿ ?

ತಮ್ಮಣ್ಣಿ : ಇರ್ಲಿ ಬಿಡ, ಅದನ್ನೇನ ಮಾಡತಿ ? ಏನ ಮಾಡತಾರ ನಿಮ್ಮ ಗೌಡರು ? ಈಗ ಬರತೀನ ನಡೆಯೋ ಅಂದರ ಮುಂದ ಹಕ್ಕೊಂಡು ಬಂದಿ. ಅವರು ಕಾಣೂದುಲ್ಲಲಾ !

[ ಗೌಡರು ಧೋತರದ ಶೆರಗಿನಿಂದ ತುಟಿ ಬಾಯಿ ಒರೆಸಿಕೊಳ್ಳುತ್ತ ಲಿಸುಗುಡುತ್ತ ಬರುತ್ತಾರೆ ].

ಗೌಡ : (ಸಲಿಗೆಯಿಂದ) ಯಾಕಪಾ ತಮ್ಮಣ್ಣಿ ? ಒಳ್ಳೇ ಅಮಲದಾರ ಆದಿ ಬಿಡು. ಆಳ ಕಳಸಬೇಕೆನಪಾ ನಿನ್ನ ಕರ್‍ಯಾಕ ?

ತಮ್ಮಣ್ಣಿ : (ಎದ್ದು ನಿಂತು, ಕುಳಿತುಕೊಳ್ಳುತ್ತಾನೆ) ಛೆ ಛೆ, ಎಲ್ಲೀದ ತಗೀರಿ. ನೀವ ಹೇಳಿದ್ದ ಕೇಳಕೊಂಡು ಬೀಳಾವ ನಾ. ಅಲ್ಲ ಅಂತಾದೇನರಿ ತರಾತುರಿ ದಗದ ?

ಗೌಡ : ಹೇಳತೀನಿ ಕುಂದ್ರ. ಮತ್ತ ಆಗಾಳೆಂದದ್ದ ಗಟ್ಟಿ ಹಿಡೀ. ಒಂದ ಮಾತ ನಿನಗ ಕೇಳಬೇಕಾಗಿತ್ತ. ನಡಸೂದು ಬಿಡೂದು ನಿನ್ನ ಕೂಡಿತು. ಗ್ರಾಮಪಂಚಾ-ಯತಿ ಇಲೆಕ್ಶನ್ನದ ಬಗ್ಗೆ ನಿನ್ನ ಕೇಳಬೇಕಾಗಿತ್ತ.

ತಮ್ಮಣ್ಣಿ : ಯಾಕರಿ, ಇಲೆಕ್ಶನ್ನದ ಯವಸ್ತಾ ನಿಮ್ಮ ಕಡೆ ಕೊಟ್ಟಾರೇನರಿ ಸರಕಾರ ದವರು ? ಹಾಗಾರ ಅದರ ಕಾಳಜಿ ಬಿಡ್ರಿ. ನಾನೂ ಬಸವಣ್ಣಿ ಕೂಡಿದರ ಒಂದ ರಾತ್ರ್ಯಾಗ ಹೊಡದ ಹಾಕತೀವಿ ತಗೀರಿ. ಯಾವ ಬೇಕಾದಾವ ಬಂದ ನೋಡಲಿ, ಹೌದಂದರ ಆತಲ್ರಿ ! ಏ ಹವಳೆಪ್ಪ ಆ ಬಿಟ್ಟಿ ಬಸವಯ್ಯ ಎಲ್ಲೆ ಅದಾನ ನೋಡ. ಗೌಡರು ಕರದಾರ, ಗಡಾ ಬಾ ಅಂತ ಹೇಳ. ಚಾ ಪಾಣಿ ಯವಸ್ತಾನೂ ಆಗಬೇಕೇನರಿ ಮತ್ತ.... ?

ಗೌಡ: ನನಗ ಮಾತಾಡಾಕ ಕೊಡತೀಯೋ, ನೀ ಒಬ್ಬಾವನ ಮಾತಾಡತೀಯೋ? ಇಲೆಕ್ಶನ್ನದ ಯುವಸ್ತಾ ಹಿಂದಾಗ ಮಾಡಾಕೆಂತ. ಈಗ ಇಲೆಕ್ಶನ್ನಕ ನಿಂದರೂ ಮಾತೈತಿ. ಮ್ಯಾಲಗಡಿ ಓಣಿ ಮಲ್ಲೇಶಿ ಸರಪಂಚನ ಇಲೆಕ್ಶನ್ನಕ ನಿಂತಾನಂತ. ಈಗ ಹೇಳು ಏನ ಮಾಡೂದು?

ತಮ್ಮಣ್ಣಿ: (ದಿಗ್ಭ್ರಮೆಗೊಂಡಂತಾಗಿ) ಅವಾ ನಿಂತಮ್ಯಾಗ ಮುಂದ ಮಾಡೂದೇನೈತರಿ. ಇಲೆಕ್ಶನ್ ಅವನಂತss ಆದ್ಹಾಂಗಾತಲ್ರಿ. ಅಂವಾ ರೊಕ್ಕ ಇದ್ದಾವಾ, ಊರ ಮಂದೀನ ಅವನ ಬೆನ್ನಿಗೈತಿ. ಅವಾ ನಿಂದರೂದss ಪಾಡ. ಮತ್ತ ಅವಾ ನಿಂತರ ಇಲೆಕ್ಶನ್ನರ ಯಾಕರಿ?

ಗೌಡ: (ಸಿಟ್ಟಿನಿಂದ) ಏ ತಮ್ಯಾ ಖಬರ ಐತೇನ ಯಾರ ಮನ್ಯಾಗ ಮಾತಾಡತೀ ಅನ್ನೂದ? ಏನ ಹೆಂಗಸಿನ್ಹಾಂಗ ಮಾತಾಡತೀರಲೆ? ಅವಾ ಏನು ಮುಗಲ ಮ್ಯಾಗಿಂದ ಇಳದ ಬಂದಾನೇನ? ಗೌಡನಿಗಿಂತಾ ಅವಂದss ದಿಮಾಕ ಹೆಚ್ಚಾತಲಾ! ಇಲ್ನೋಡ, ನಿನ್ನ ಕರಿಸಿದ್ದೂ ಅದಕ್ಕ. (ಎಚ್ಚತ್ತು) ಏ ಹವಳ್ಯಾ ಹೋಗಿ ಹೊರಗ ಥೆಳೀಜದಾಗ ಕೂಡ. ಯಾರಾರೆ ಬಂದರ ಕೇಳಿ ಒಳಗ ಬಿಡು. (ಹವಳೆಪ್ಪ ಹೊರಗೆ ಹೋಗುತ್ತಾನೆ) ಇಲ್ನೋಡ ತಮ್ಮಣ್ಣಿ, ಮಲ್ಲೇಶಿ ವಿರುದ್ಧ ನಿಂತರ ನೀನss ಒಬ್ಬಾವಾ ಅಂತ ಕರಸಿದ್ದು ನಿನ್ನ.

ತಮ್ಮಣ್ಣಿ: (ದೇಶಾವರಿ ನಗುತ್ತ) ಬಲೇ ಅಣಕಾ ಮಾಡಾವರು ನೋಡ್ರಿ ನೀವೂ. ಅಲ್ಲರಿ ಅವಾ ಎಲ್ಲೆ ನಾ ಎಲ್ಲೆ? ಸರಿಜೋಡಿ ಇಸಮು ಬ್ಯಾಡಾ ಕುಸ್ತಿ ಆಡಾಕ? ಯಾನರೆ ಹೇಳಬ್ಯಾಡ್ರಿ. ನಾಕ ಮಂದೀ ಕಡಿಂದ ನಗಿಸಿಕೊಳ್ಳೊ ಪರಸಂಗ ಬಂದೀತ.

ಗೌಡ: (ಸಂಕಟದಿಂದ) ಏ, ನೀ ಹೂಂ ಅನ್ನೋ ಸಾಕು. ಮುಂದಿಂದ ನಾಯೆಲ್ಲಾ ನೋಡಿಕೊಂತೀನಿ.

ತಮ್ಮಣ್ಣಿ: (ಅದೇ ಅಲಕ್ಷ್ಯದಿಂದ) ಯಾನ ನೋಡಿಕೊಳ್ಳಾವರಾ? ಅದss ಸಾಲ ಹೌಂದಲ್ಲ? ಈಗ ಯಾರು ಕೊಡಬೇಕ್ರಿ ಈ ದಿನದಾಗ? ಟೆನನ್ಸಿ ಕಾಯದೇ ಬಂದು, ಹೊಲದ ಮ್ಯಾಗ ಸಾಲಾ ಕೊಡೂದುಲ್ಲ. ಇನ್ನ ಕಾಗದಾ ಬರ ಕೊಡತ್ತ್ವಂಪರ ತುದಿಗಟ್ಟಿ ಏರಗೊಡೂದುಲ್ಲ ಯಾರೂ!

ಗೌಡ: ಅದರ ಕಾಳಜೀ ನೀ ಬಿಡ. ಬಸವಯ್ಯನ ಕಳಸೀನಿ ಆಕೀ ಕಡೆ. ಆಕೀದೊಂದು ಗುಂಡಿನ ಟಿಕ್ಕಿ ಐತಿ. ನಂದೊಂದು ಉಂಗರ ಐತಿ, ಪರಸಂಗ ಬಿದ್ದರ. ಮತ್ತ ಆ ತೆಗ್ಗಿನಮನಿ ತಿಪ್ಪಶೆಟ್ಟಿ, ಹತ್ತಿದಾಟೆ ಕುಡತೀನ ಅಂದಾನ.

ತಮ್ಮಣ್ಣಿ: (ಇನ್ನೂ ಅಪನಂಬಿಕೆಯಲ್ಲಿಯೆ) ಅವಂದ್ಯಾನ ನನಗ ಭರೋಸ ಇಲ್ಲ ತಗೀರಿ. ಅಂದಾಕಾರ ಜೀನ. ರೊಟ್ಟೀ ನೆಳ್ಳ ನೋಡಿ ಹೊಟ್ಟಿ ತುಂಬಿಕೊಳ್ಳವಾ. ಮತ್ತ ಅದಲ್ಲದ, ನನಗ ಯಾತರ ಮ್ಯಾಗ ಕುಡಬೇಕ್ರಿ ಸಾಲಾ?

ಗೌಡ: (ಬೇಸರದಿಂದ) ರೊಕ್ಕದ ಕಾಳಜಿ ನಿನಗ ಬ್ಯಾಡಂತ ಹೇಳೀನಲಾ. ಏನ

ಬಂದದ್ದಕ್ಕ ನಾ ಅದೀನು. ಕೈಯಾಗಿಂದ ಬಾಯಾಗಿಂದ ತೂರಿ ಇದ್ದೊಂದ ಕೆಲಸಾ ಪಾರಮಾಡಬೇಕ.

ತಮ್ಮಣ್ಣಿ : ಈಟೆಲ್ಲಾ ಮನೀ ತೊಳದು ನಾ ಸರಪಂಚ ಆದರ ಕೈಲಾಸ ಕಂಡಾಂಗಾ ತೇನರಿ ? ಮತ್ತ ಮ್ಯಾಗ ಗೌರಾನ ಮಾತೂ ಹೇಳತೀರಿ. ಆಯತ ಯಾಳ್ಯಾಕ ಭರೋಸದ ಎಮ್ಮಿ... ಆದೀತ ನೋಡಿರಿ. ಆಕಿ ನಿಮ್ಮ ಜೋಡಿ ಘಳಸಲಾಕ ಬಂದಾಳ, ಅಳಸಲಾಕ ಅಲ್ಲ. ಗಂಡಗಂಡಸರ ಕಾದಾಟದಾಗ ಹೆಣ್ಣಿನ ಪಣಾ ಒಡ್ಡಬ್ಯಾಡ್ರಿ.

ಗೌಡ : ಈರ್ಷ್ಯೆದ ಮಾತು ತಿಳೂದಿಲ್ಲ ನಿನಗ. ಎದ್ಯಾಗ ಉರೀತೇತಿ ಗೊತ್ತೈತೇನ ನಿನಗ ? ಮಲ್ಲೇಶಿ ಸರಪಂಚ ಆಗಿ ಕುಂತರ ಗೌಡನ್ನ ಕೇಳವರ್‍ಯಾರಾ ? ಆ ಮ್ಯಾಗ ನೀನೂ ಅವನ ಸದರಿನ್ಯಾಗ ಹೋಗಿ ಬೀಳತೀ. ಇರಲಿ ನಡಿ, ಆಕಿ ಬರೂತನ ಕುಂತ ಮಾಡೂದೇನೈತಿ ? ಆ ಶೆಟ್ಟೀ ಕಡೆ ಹೋಗಿ ಬರೂನು. ಹವಳ್ಯಾ...... (ಹವಳ್ಯಾ ಒಳಗೆ ಬರುತ್ತಾನೆ)

ಹವಳೆಪ್ಪ : ಮತ್ಯಾರನರೆ ಕರೂದೈತೇನರಿ ?

ಗೌಡ : ಇಲ್ಲ. ನಾವೂ ಹೊರಗ ಹೋಗಿ ಬರೂದೈತಿ. ಬಸವಯ್ಯ, ಮತ್ತ ಅವನ ಸಂಗಾಟ ಯಾರಾರೆ ಬಂದರ ಈಗ ಬರತಾರ ಅಂತ ಹೇಳಿ ಕುಂದರಸು.

[ ಲಗುಬಗೆಯಿಂದ ರುಮಾಲು ಸುತ್ತಿಕೊಳ್ಳುತ್ತಲೇ ಈ ಮಾತು ಹೇಳಿ, ಗೌಡರು, ತಮ್ಮಣ್ಣಿ ಹೊರಗೆ ಹೋಗುತ್ತಾರೆ. ]

ಹವಳೆಪ್ಪ : ಮೊನ್ನಿನ ತೊಟ್ಟು ನೋಡತೀನ, ನಮ್ಮ ಗೌಡರ ತೆಲಿ ಥಾರೇದ ಮ್ಯಾಗ ಕಾಣಸಾಣೆಲ್ಲ. ಯಾವ ಹಿಕಮತ್ತಿನ್ಯಾಗ ಅದಾರೋ ತಿಳಿಯಾಣೆಲ್ಲ. ಹಿರ್‍ಯಾರು ಗಳಿಸಿದ ವತನಾ-ವಾಡೆ ಎಲ್ಲಾ ಐತಿ. ಸುಮಾಕ ತಿಂದುಕೊಂಡು ಖುಂಡ್ರೂದು ಬಿಟ್ಟು ಯಾರ ಹೇಳಿದ್ದಾರ ಇದನ್ನೆಲ್ಲಾ ! ಗಂಗೀ ಹಂತಾ ಗೌಡತಿ ಖುಂಡ್ರೂ ಜಾಗಾದಾಗ ಆಕಿ ಬರಾಕಿ ಇನ್ನ ! ಹೆಂಗಸರರೆ ಹೆಂತೆಂತಾವರ ಇರತಾರ ಅಂತೀನ ! ಒಳ್ಳೊಳ್ಳೇ ಗಂಡಸರ್ನ ಹಾಂಹಾಂ ಅನೂದರಾಗ ಮುಬ್ಬ ಮಾಡ ತಾರ ! ದಾರ್‍ಯಾಗಿನ ಹುಲಿ ಎದ್ದು ಹಾದೀ ಬಿಡಬೇಕ, ಹಂತಾ ದರ್ಪ ನಮ್ಮ ಗೌಡರದು, ಅದನ್ನೆಲ್ಲಾ ತೊಳದುಬಿಟ್ಟಾಳು ನಮ್ಮವ್ವ .... ಕಾಲಮರಿ ಸಪ್ಪಳಂತೂ ಆತು, ಬಂದರೂ ಯಾನೋ.......

[ ಬಸವಯ್ಯ ಮತ್ತು ಗೌರಿ ಬರುತ್ತಾರೆ. ಗೌರಿ ನೋಡಲಿಕ್ಕೆ ಅಂಥ ರೂಪವತಿಯಲ್ಲ ದಿದ್ದರೂ ಪ್ರಾಯದ ಹೆಣ್ಣು. ತುಂಬಿ ತುಳುಕುವ ಬಯ್ಯಾರ ಯಾವ ಅಂಗವನ್ನೂ ಸುಮ್ಮನೆ ಕೊಡಿಸುವದಿಲ್ಲ. ತೆನೆ ತಿರುವಿದ ಕಪ್ಪುಬಣ್ಣದ ಇಳಕಲ್ಲ ಸೀರೆಯನ್ನು, ನೆಲ ಉಡುಗು ವಂತೆ ಸೆರಗು ಬಿಟ್ಟು ಉಟ್ಟಿದ್ದಾಳೆ. ಕಾಲಲ್ಲಿ ಆರಾರು ಸೇರಿನ ಬೆಳ್ಳಿಯ ಸರಪಳಿಗಳು. ಮುಡಿ ಕಟ್ಟಿದ್ದರೂ ಗಾಳಿಗೆ ಕುರುಳು ಕೆದರಿಕೊಂಡಿವೆ.]

ಬಸವಯ್ಯ : ಪಡಸಾಲಿ ಖಾಲೀನ ಕಾಣತೈತಿ! ಎಲ್ಯಾರ ಹೋಗ್ಯಾರೋ ಯಾನೋ?

ಗೌರಿ : ಪಡಸಾಲಿ ಏನ ನೋಡತಿ. (ಕೊರಳು ಕೊಂಕಿಸಿ) ಒಳಗ ಅದಾಳ ಏನ ನೋಡ.

ಬಸವಯ್ಯ : ಇಲ್ಲೇಲ್ರಿ. ಗೌಡತಿಅವ್ವಾ ಅವರು ಒಗೀಲಾಕ ಹೋಗ್ಯಾರಂತ ಆಗ ಹೇಳಲಿಲ್ಲೇನ ? ಇಷ್ಟಾಗಿ ಗೌಡರು ಕರಿಸ್ಯಾರಂದ ಮ್ಯಾಗ ನಮಗ್ಯಾಕ ಹೆದರಿಕಿ ?

ಗೌರಿ : (ಸಾಭಿನಯವಾಗಿ) ಏನ ಹೇಳತೀ ತಗೀ ನಿಮ್ಮ ಗೌಡರದು ? ಮುದುಕರ ವಿೂಸೀ ಹಂಗ ಹೊರಗಟ್ಟಿ ಜಬರ್ ನೋಡಬೇಕು. ಇನ್ನೂತನ ನನಗ ಈ ಮನೀ ತೋರಿಸಿದ್ದಿಲ್ಲ. ಇದು ಮೊದಲ ಸರತಿ ಕಾಲಿಟ್ಟದ್ದ ಈ ಮನ್ಯಾಗ. ಆಕೀನ್ನ ನೋಡಿದರ ಆತು ಇವರದು.

ಹವಳೆಪ್ಪ : (ತಡೆಯದೆ) ಏ ಗೌರವ್ವಾ, ಜರಾ ನಾಲಿಗಿ ಬಿಗಿ ಹಿಡಕೊಂಡು ಮಾತಾಡಬೇ. ಗೌಡತಿಅವ್ವಾವರ ಸರಿಗಟ್ಟಲಾಕ ಅವರೇನ ನಿನ್ನ ಹೆಸರು ತಗದಿಲ್ಲ. ಹಾಗೆಲ್ಲ ಮಾತಾಡಬಾರದು ತಂಗೀ.

ಗೌರಿ : (ತಿರಸ್ಕಾರದ ನೋಟ ಬೀರಿ) ಅಯ್ಯ ! ಇದ್ಯಾವದ ಇದೂ, ಆಕಿನ್ನ ಮೇಲಗಟ್ಟಿ ಕೊಂಡು ಮಾತಾಡೂದು ! ಇಡೀ ಊರಾಗ ಅದ್ಯಾವ ಗಣಸ ನನ್ನ ಹೆಸರ ತಗ್ಯಾವ ? ಅಂದ ಬಳಿಕ ಆಕೀದ್ಯಾನ ಬಿಡ !

ಹವಳೆಪ್ಪ : ಇಲ್ನೋಡ ಯವ್ವಾ, ಇಲ್ಲೆ ಯಾನ ಗೌಡರು ಕರಿಸ್ಯಾರಂತ ಬಂದೀಯೋ ಯಾನ ಝಗಳಾ ತಗೀಲಾಕ ಬಂದಿಯೋ ? ಹೆಂತಾ ಖೊಟ್ಟಿ ಅದಾನ ಅಂತ ಅಂದ್ರೂ ತಪ್ಪಿಲ್ಲ. ಮುಕಾಟಿಲೆ ಹಲ್ಲಾಗ ನಾಲಿಗಿ ಹಾಕ್ಕೊಂಡು ಕುಂಡ್ರೂದು ಇತ್ತೂ, ನೀ ಕುಂಡ್ರು. ಈಗ ಗೌಡ್ರು ಬರತಾರು ; ನಿಂದ್ಯಾನ ಮಾತಾಡೂದ ಮಾತಾಡ. ನಿನ್ನ ಜೋಡೀ ಮಾತಾಡಾಕ ನನಗೆ ಯಾಳೇ ಇಲ್ಲ.

ಗೌರಿ : ಯಾನೋ ಬಶ್ಯಾ ? ನಿಮ್ಮ ಗೌಡ್ರು ಇದಕ ಕರಿಸಿದಾರೇನ, ಚಾವಡಿ ಕಟ್ಟೀ ತೆಳಗ ಬಿದ್ದಿರೋ ನಾಯೀ ಕಡಿಂದ ಬಗಳಸಲಾಕ.

ಹವಳೆಪ್ಪ : ಅಂದದ್ದೆಲ್ಲಾ ಒಳ್ಳೇದ ಬಿಡು ಯವ್ವಾ. ನಾಯಿಗಿ ತನ್ನ ಮಾಲಕನ ಮ್ಯಾಗ ಪ್ರೀತಿ ಇರತೈತಿ. ಯಾರ ಅನ್ನಾ ಉಣತೈತಿ ಅವರ ಚಾಕರಿ ಮಾಡತೈತಿ. ಆದರ ಬೆಕ್ಕಿನಾಂಗ ಅದ್ಯಾನ ಮನಿ ಮನಿ ತಿರಗುದುಲ್ಲ ತಿಳೀತ್ಯಾನ ?

ಗೌರಿ : (ಬಸವಯ್ಯನಿಗೆ) ಏ ನಡೀ ಮೊದಲ ಇಲ್ಲೆ ನಾ ನಿಂದ್ರೂದಿಲ್ಲ. ಜರೂರಿ ಕೆಲಸ ಇದ್ರ ತಾವು ಬರತಾರ ಮನೀಗಿ. ಈ ಮನೀ ಕಟ್ಟೀ ಕಲ್ಲ ಏರಾಕಿಲ್ಲ ಅಂತ ನಾ ಯಾಕ ಅಂತಿದ್ನಿ ? ನಾ ಅನಕಾ ಇಲ್ಲಿಂದ ಹೊಂಟೆ ನೋಡ. (ಹೊರಡುವಳು)

ಬಸವಯ್ಯ : ನಿಂದ್ರ ಗೌರಾ ! ನೀ ಯಾನ ಅವನ ಮನಿಗಿ ಬಂದೀ ಯಾನ ? ಗೌಡ್ರು ಏನಾರೆ ಅಂದಾರೇನ ? ಅವರ ಬಂದಿಂದ ಇದರ ನಿಕಾಲೀ ಆಗಲಿ. ಹಾಗೆಲ್ಲ

ಮುರಕೊಂಡ ಹ್ವಾದರ ಯಾನ ಬಂತ ?

ಪವಳೆಪ್ಪ : ಇಗಾ, ಅವರ್‍ಙ ಬಂದರ ಕಾಣತ್ತೈತಿ. ನಿಮದ್ಯಾನ ನಿಕಾಲಿ ಮಾಡಿ ಕೊಂತೀರೋ ಮಾಡಿಕೋರಿ. ನಾ ಹೋಗತೀನ. ( ಪವಳೆಪ್ಪ ಹೋಗುವನು )

[ ಗೌಡ ತಮ್ಮಣ್ಣಿಯೊಂದಿಗೆ ಬರುತ್ತಾನೆ ]

ಗೌಡ : ( ಒಳಗೆ ಬರುತ್ತ ಬಸವಯ್ಯನನ್ನು ನೋಡಿ ) ಏನೋ ಬಸಯ್ಯಾ ! ಹೋದಾವ ಅತ್ತಙ ಹೋಗಬೇಕೇನ ? ಏಟೊತ್ತ ನಿನ್ನ ಹಾದೀ ನೋಡೂದಪಾ !

ಬಸವಯ್ಯ : ನೀರಿಗೆ ಹೋಗಿದ್ದರರೀ, ಅದಕ ಒಂದ ಜರಾ ತಡಾ ಆತ. ಅಂತೂ ಬಂದಾರಲಾ.

ಗೌರಿ : ( ಗೌಡನ ಕಡೆಗೆ ಮುಖ ತಿರುಗಿಸದೆ, ಬಸವಯ್ಯನಿಗೆ ) ಯಾತಕ ಕರದ ತಂದಿ ? ಅದಕ್ಙ ಹೌಂದಲ್ಲ ? ನಾ ಒಲ್ಲಿ ಅಂದರ.... (ಸೆರಗನ್ನು ಕಣ್ಣಿಗೊತ್ತಿಕೊಂಡು ಬಾಗಿಲ ಕಡೆಗೆ ನೋಡುವಳು)

ಗೌಡ : ( ಹೆದರಿ ) ಏನಾತೋ ಬಸಯ್ಯ ? ಆಕಿನರೆ ಮನ್ಯಾಗ ಇಲ್ಲ. ಯಾರ ಏನರೆ ಅಂದ್ರೇನ ?

ಬಸವಯ್ಯ : ಯಾನಿಲ್ಲ ತಗೀರಿ.....

ಗೌರಿ : ಇಲ್ಲೇನ ಅಂತೀಯೋ ಕಸಮಾಲ ? ( ಬಿಕ್ಕುತ್ತ ) ಆ ಹೇಸಿ ಮಾರಿ ಹಳಬ ಏನಂದಾ ಹೇಳಲಾ. ತಂದ್ಙ ಗೌಡಿಕಿ ಅನಾವರ್‍ತಂಗ ಮೈಮ್ಯಾಗ್ಙ ಬಂದಾ. ಹುಟ್ಟಿದ ಮ್ಯಾಗ ಒಬ್ಬರ ಕಡಿಂದ ಅನಿಸಿಗೊಂಡಾಕಿ ಅಲ್ಲ ನಾ (ಒಮ್ಮೆಲೆ ಕೆಳಗೆ ಕುಳಿತು) ಏನ ಬಂತ್ಙ ಯವ್ವಾ ... ... ( ಮುಖಕ್ಕೆ ಸೆರಗು ಹಾಕಿಕೊಂಡು ದುಃಖಿಸುವಳು )

ತಮ್ಮಣ್ಣಿ : ನೀವು ಛಲೂ ಇದ್ದದ್ದ ನೋಡಲಾಕ ಆಗದವರ ಯಾನರೆ ಅಂತಿರತಾರ ಬಿಡ್ರಿ. ನಮ್ಮ ಗೌಡರದ ನಿಮ್ಮ ಮ್ಯಾಗ ಜೀವ ಅಙತೆಲಾ. ಉಳಿದವರನ ತಗೊಂಡ ಏನ ಮಾಡೂದೈತಿ ? ಸಮಾಧಾನ ಮಾಡಿಕೊಳ್ರಿ. ಈಗ ಗೌಡರ ಮ್ಯಾಗ ಒಂದ ಪರಸಂಗ ಬಂದೈತಿ ಅಂತ ಕರಿಸ್ಯಾರ ನಿಮ್ಮನ್ನ.

ಗೌರಿ : ( ಮೂಗು ಕಣ್ಣುಗಳನ್ನು ಒರೆಸಿಕೊಳ್ಳುತ್ತ ) ನನಗ್ಙ ಜೀವ ಬ್ಯಾಡಾಗೇತಿ. ಅವರ ಮ್ಯಾಗ ಪರಸಂಗ ಬಂದರ ನಾ ಏನ ಮಾಡುವಾಕಿ ಅದೀನ ? ಹ್ಯಾಂತಿಂತಾ ಯಾಳೇದಾಗ ಅಂಜಿಲ್ಲ ಅವರು. ಅದ್ಯಾವ ಗಣಸ ನನ ಮುಂದ ನಿಂದ್ರಾವಾ ಅಂತ ಮೀಸೀ ತಿರವತಿದ್ದರಲ್ಲ ! ಮತ್ತ ಇಂದ್ಯಾವ ಹಂತಾ ಪರಸಂಗ ಬಂದೈತಿ ?

ತಮ್ಮಣ್ಣಿ : ( ಹಿಳಿಸಿ ಹೇಳುತ್ತ ) ಅವರ ಅಬರು ಹೋಗೂ ಆಟ ಬಂದೈತಿ. ಉಳಿಸಿದರ ನೀವ್ಙ ಉಳಿಸಬೇಕ.

ಗೌರಿ : ಹಾಗ ಒಡಪಾ ಹಾಕಿಧಾಂಗ ಮಾತಾಡಿದರ ನನಗೇನ ತಿಳೀಬೇಕ ?

ಬಸವಯ್ಯ : ಯಾರದೇನು ತಿಂದದ್ದೊ, ಉಂಡದ್ದೋ... ಅಬರು ಯಾಕ ಹೋಗ ಬೇಕ ?

ಗೌಡ : ಅಬರು ಅಂದರ ಏನ ಬ್ಯಾರಿ ಇರತೈತೇನ ? ಚಾವಡಿ ಕಟ್ಟಿ ಬಿಟ್ಟು ಕೆಳಗ ಇಳಿಯೊ ಪರಸಂಗ ಬಂದೈತಿ ?

ಗೌರಿ : ನೀವs ಚಾವಡಿ ಬಿಟ್ಟ ಇಳಿದ ಮ್ಯಾಗ ನಂದೇನ ಈ ಊರಾಗ ? ಅವ ಯಾವ ನಿಮ್ಮನ ಇಳಸಾಂವ ? ಜೀವ ಬ್ಯಾಡಾಗೇತೇನ ಅವಗ ?

ತಮ್ಮಣ್ಣಿ : ಅದಕ್ಕs ನಿಮ್ಮನ್ನ ಕರಿಸ್ಯಾರ.

ಗೌರಿ : ಅಂದರ ನನ್ನ ಕೂಡಸಬೇಕಂತಾರ್‍ಯಾನ ತಮ್ಮ ಜಾಗಾದಾಗ ?

ಗೌಡ : ಪರಸಂಗ ಹಾಗ ಬಂದಿದ್ದರ ಅದನ್ನೂ ಮಾಡತಿದ್ದೆ ಅನ್ನು. ನಮ್ಮ ತಮ್ಮಣ್ಣಿ ತಯಾರ ಆದಾ ಅಂತ ನೆಟ್ಟಗಾತು.

ಗೌರಿ : ಯೋನ ಮಾತಾಡತೀರ್‍ಯೊ ಏನು ನನಗಂತೂ ತಿಳೀವಲ್ತು. ಮೂರೂ ಮಂದಿ ಕೂಡಿ ಯಾನ ಮಸಲತ್ತ ಮಾಡೀರೇನೊ ? ಏನನ್ನೂದ ಗಡಾನs ಹೇಳಿಬಿಡ್ರಿ.

ಗೌಡ : ಹೇಳಲೇ ತಮ್ಮಣ್ಣಿ.

ತಮ್ಮಣ್ಣಿ : ನೀವs ಹೇಳರಿ. ನಾ ಹೇಳಿದರ ಹ್ಯಾಂಗ ಪಟಾಸಬೇಕ ?

ಬಸವಯ್ಯ : ನಾ ಹೇಳೂ, ನೀ ಹೇಳೂ ಅನ್ನಾಕ ಯಾವ ದೊಡ್ಡ ಮಾತಾ ? ಸರಪಂಚಕಿ ಇಲೆಕ್ಶನ್ ಬಂದೈತಿ. ಅದಕ್ಕ ಕರಸ್ಯಾರ ನಿನ್ನ.

ಗೌರಿ : (ಬಾಯ ಮೇಲೆ ಕೈಯಿಟ್ಟು) ಊರ ಪಂಚಕಿ ಒಳಗ ನಂದೇನ ದಗದ ಇದ್ದೀತ ಯವ್ವಾ ! ಮತ್ತ ಯಾವ ದ್ಯಾಮವ್ವಗ ಆರತಿ ಹಿಡಬೂದೈತೋ, ಮತ್ತ ಯಾವ ಅಮಲದಾರರ ಸರಬರಾಯಿ ಮಾಡೂದೈತೋ ಅಂತ ತಿಳಕೊಂಡಿದ್ದೆ. ಹೆಂಗಸ ಬಾಲಿ ನಾ... ...

ಬಸವಯ್ಯ : ಹೆಂಗಸರಾ, ಗಂಡಸರಾ ಅನ್ನೂದ ಹಿಂದಕ ಇತ್ತ. ಈಗೆಲ್ಲಿ ಅsತಿ ಅದೆಲ್ಲಾ. ಮನ್ನಿ ನಮ್ಮ ಸಾಲಿ ಸಾಹೇಬರ ಯಾರ ಬಂದಿದ್ರ ನೋಡೀರಿ ಇಲ್ಲೋ ? ಹೆಂಗಸರೇನ ಮನಶ್ಯಾರ ಅಲ್ಲೇನ ?

ಗೌರಿ : (ಆಶ್ಚರ್ಯದಿಂದ) ನನ್ನs ಸರಪಂಚ ಮಾಡಬೇಕಂತ ಮಾಡ್ಯಾರೇನ ನಿಮ್ಮ ಗೌಡರು ? ನನಗೇನ ಕಾಯಿದೆ ಗೊತ್ತs ಕಾನೂನು ಗೊತ್ತs ? ಸರಪಂಚ ಆಗಿ ಏನ ಮಾಡಾಕಿ ?

ತಮ್ಮಣ್ಣಿ : ನೀವು ನಿಂದರದಿದ್ದರ ಬಿಡ್ರಿ. ನಿಂದರಾವರಿಗರೆ ನೀವು ಮದ್ದತ ಮಾಡಬೇಕಲಾ. ಅದಕ ನಿಮ್ಮನ್ನು ಕರಿಸ್ಯಾರ ಗೌಡರು.

ಗೌಡ : ಇಲ್ನೋಡು ಗೌರಾ. ಎಲ್ಲಾ ಬಿಡಿಸಿ ಹೇಳಬೇಕಂದರ ಹೀಗೈತಿ. ಇರುದ್ದ ಯಾರು ನಿಂತಾರು ಗೊತ್ತೈತೇನು ? ಆ ಮ್ಯಾಲಗಡಿ ಓಣಿ ಮಲ್ಯಾ ನಿಂತಾನು.

ಗೌರಿ : (ಕುತೂಹಲ ತಡೆಯದೆ) ಯಾರ ? ಆ ಶಂಕರನ ಅಪ್ಪ ? ಅಲ್ಲಿಂದ್ಯಾನ ಮುಗೀತಲಾ ! ಅವಾ ಮನ್ಯಾಗ ದೊಕ್ಕದ ಹಗೇ ಹಾಕ್ಯಾನ. ಎದಿಯುಪ್ಪರ ಬೆಳದ

ಹುಡುಗ ಮನೀ ಹೊಲಾ ನೋಡಿಕೋತೈತಿ. ಅಪ್ಪ ಸರಪಂಚ ಆಗಿ ಖುಂಡ್ರ ತಾನು. ಅವನ್ನ ಒಗೂ ಗಣಸ ಯಾವ ಅದಾನ ಊರಾಗ ?

ಗೌಡ : ( ತಮ್ಮಣ್ಣಿಯ ಬೆನ್ನು ಚಪ್ಪರಿಸಿ ) ಇಲ್ಲಿ ನೋಡ, ಆ ಮುದಕನ್ನ ಒಗೂದಕ್ಕ ನಿಂತಾನ ಈ ಹರೇದ ಗಂಡಸ !

ಗೌರಿ : ( ತಮ್ಮಣ್ಣಿಯನ್ನು ಆಪಾದಮಸ್ತಕ ನೋಡಿ ) ಇದs ಏನು ಅವನ ಒಗೂ ಮಾರಿ! ಅವಾ ಖರ್ಚು ಮಾಡೂ ರುಪಾಯಷ್ಟು ಕೂದಲರೆ ಅದಾವೇನ ನಿನ್ನ ತಲೀ. ಮ್ಯಾಗ ?

ಬಸವಯ್ಯ : ಗೌರಾ ಹೇಳೂದು ಖರೇ ಐತಿರಿ. ರೋಖ ಕುಡದ ಯಾರೂ ಹೋಟು ಹಾಕಾಣಿಲ್ಲ.

ತಮ್ಮಣ್ಣಿ : (ಅಂಗಲಾಚಿ) ಅದಕ್ಕs ನಾ ಹೇಳೂದು, ನಿಮ್ಮ ಮದ್ದತ ಬೇಕಾಗೇತಿ ಅಂತ. ನೀವು ಮನಸ ಮಾಡಿದರ ಹಾಂ ಹಾಂ ಅನೂದರಾಗ ಆದೀತ.

ಗೌಡ : ಅದಕ್ಕs ನಿನ್ನ ಕರಸಿದ್ದ. ತಿಳೀತಿಲ್ಲ ಈಗರೆ?

ಗೌರಿ : (ಯೋಚಿಸಿ) ಆದರ ನನ್ನ ಹತೀಲೆ ರೋಖ ಎಲ್ಲಿ ಅದಾವ ನಿಮಗ ತಂದ ಕುಡಲಾಕ ?

ಗೌಡ : ರುಪಾಯಿನ ಖರೇ ಏನ ? ಅದರ ಬದಲಾಗಿ ದಾಗೀನೆ ನಡೀತಾವು. ಆ ಶೆಟ್ಟೀ ಕಡೆ ಇಟ್ಟ ರೂಪಾಯಿ ತರತೀವು. ನಿನ್ನ ಫೆಜ್ಜಿ ಟಿಕ್ಕಿ, ಸಿಂಗಾರಸರ ಕುಡ. ಇಲೆಕ್ಶನ್ ಆದ ತಿಂಗಳದಾಗ ಬಿಡಿಸಿ ಕುಡತೀನ. ಇಷ್ಟs ಅಲ್ಲ ನಿನಗ ಬೇಕಾದ ದಾಗೀನೇನೂ ಮಾಡಿಸಿ ಕುಡತೀನ.

ಗೌರಿ : ಅಂದರ ಅವನ್ನ ಅಡವ ಇಟ್ಟ ರೂಪಾಯಿ ತರವರ್‍ಯಾನಾ ? ಇಲೆಕ್ಶನ್ ಆಧುರಪ್ಲೆ ಬಿಡಿಸಿ ಕುಡಲಾಕ ಸರಕಾರ ಅಂದ್ರ ನಿಮ್ಮದ ಆತ್ಯಾನ ? ರೊಕ್ಕ ಯಾನ ಮ್ಯಾಲಿಂದ ಬೀಳತಾವು ?

ಗೌಡ : ಅದನ್ನ ತೊಗೊಂಡ ನೀ ಏನ ಮಾಡತಿ ? ನಿನ್ನ ದಾಗೀನಿ ಬಿಡಿಸಿಕೊಟ್ಟರ ಆತಲಾ. ನಡೀ ಕುಡ ನಡೀ.

ಗೌರಿ : ಈಗs ಕುಡಲಾಕ ಅವೇನ ಓಡಿ ಹೋಗತಾವೇನ ? ಸಂಜೀಸಾರೇಕ ಬರ-ತೀರಿ ಆಗ ಕುಡತೀನಲಾ! ಯಾನ ನಡಿಸೀರ್‍ಯೊ ... ನನ್ನ ದಾಗೀನೆ ಹೋದದ್ದು ಅಟs ಖರೆ ಆಗಬಾರದು.ಅದಕ್ಕ ಮದಲ ಮಲ್ಲೇಶಿನ್ನ ಕರಿಸಿ ಒಂದ ಮಾತ ಕೇಳಿದರ ?

ಬಸವಯ್ಯ : ಕೇಳಬೇಕ. ಅಗಸುದ್ದಿ ಇಲ್ಲದ ಖೆಮ್ಮು ಹೋಗತಿದ್ದರ ಯಾಕ ಕೇಳ ಬಾರದು ? ಏ ಹವಳೆಪ್ಪಾ (ಹವಳೆಪ್ಪಾ ಬರುತ್ತಾನೆ) ಹೋಗ ಲಗ್ಗ. ಆ ಮಲ್ಲೇ-ಶೆಪ್ಪನ್ನ ಕರಕೊಂಡು ಬಾ. ಗೌಡರು ಹಾದಿ ನೋಡತಾರ ಬಾ ಅಂತ ಅನ್ನು.

ತಮ್ಮಣ್ಣಿ : ಮತ್ತ್ಯಾರರೆ ಅದಾರ ಯಾನಂದ್ರ ಯಾರೂ ಇಲ್ಲಂತ ಹೇಳು (ಹವಳೆಪ್ಪ ಗೋಣು ಹಾಕಿ ಹೋಗುವನು)

ಗೌಡ : ಬಸಯ್ಯ, ಅವಾ ಬರುತನಾ ಏನ ಮಾಡೂದು? ಆ ಸಿದರಾಮ ಚಾ ತರಲಿಲ್ಲ ನೋಡ. ನೀ ಹೋಗಿಬಾ ಮತ್ತೊಮ್ಮೆ (ಬಸಯ್ಯ ಸಾವರಿಸಿಕೊಂಡು ಹೋಗುವನು) ಇಲ್ನೋಡ ಗೌರೀ, ಆ ಮಲ್ಲೇಶಿ ಕಾಲ ಹಿಡೀಲಾಕ ಹಚ್ಚಬ್ಯಾಡ ನನಗ. ಅವರದು ನಮ್ಮದು ಮುತ್ಯಾ ಮೂರು ತಲಿ ಅಜ್ಜ ಆರು ತಲಿ ಆದಾವತಿ.

ಗೌರಿ : ಅದು ನನಗೂ ಗೊತ್ತ ಐತಿ, ಆದರ ಯಾನ ಮಾಡೂದು ? ರೊಕ್ಕದ ಖರ್ಚ ಇಲ್ಲದ ತಮ್ಮಣ್ಣಿ ಸರಪಂಚ ಆಗತಿದ್ರ........

ಗೌಡ : ಖರ್ಚ, ಖರ್ಚ ಅನ್ನಾಕ ಏಟರೆ ಖರ್ಚ ಆದಾವು? ಇಲ್ನೋಡ ಗೌರಿ, ನಮ್ಮ ತಮ್ಮಣ್ಣಿ ಸರಪಂಚ ಒಂದsa ಆಗಲಿ, ನಿನ್ನ ಭಂಗಾರಲೇ ಮುಚ್ಚತೇನಿ ಆತಿಲ್ಲೋ. ನಿನ್ನ ಬೆಲಿ ಗೊತ್ತಿಲ್ಲೇನ ನಮಗ? ಅದೇನರ ಇರಲಿ. ಆ ಮಲ್ಲೇಶಿನ್ನ ಕರಸಂತ ನೀ ಹೇಳಿದಿ, ಆ ಬಸ್ಯಾ ಕರಸೇಬಿಟ್ಟ. ನನಗೇನ ಅವನ ಜೋಡಿ ಮಾತಾಡೂದು ಸರಿಬೀಳಾಣಿಲ್ಲ. ನಾ ಒಳಗ ಹೋಗಿರತೇನ. ನೀವs ಅವರs ಏನ ಮಾತಾಡೂದು ಮಾತಾಡ್ರಿ.

ತಮ್ಮಣ್ಣಿ : ನೀವಿಲ್ಲದ ನಾವು ಯಾನರಿ ಮಾತಾಡೂದು ? ನಿಮ್ಮ ಮರ್ಯಾದಿಗೆ ಕಡಿಮಿ ಆಗೂ ಹಂತಾ ಪರಸಂಗ ಬರೂದುಲ್ಲ ತಗೀರಿ. ಅದಿರಲಿ, ಆ ಶೆಟ್ಟೇ ಕಡೆ ಹೋಗೋಣ ನಡೀರಿ. ಅದರದ ಅಷ್ಟ ಮುಗಸಬೇಕಲಾ !

ಗೌಡ : ಮತ್ಯಾವದೋ ?

ತಮ್ಮಣ್ಣಿ : ಆ ಜೀನಸದ್ದರಿ.

ಗೌರಿ : ಯಾಕೋ ತಮ್ಮಣ್ಣಿ? ಹ್ಯಾಣತಿ ಕೊಳ್ಳಾಗಿನ ಗುಳದಾಳಿ ಹೊರತ ಮನ್ಯಾಗ ಗುಂಜಿ ಬಂಗಾರ ಇಲ್ಲ ಅಂತಿದ್ದಿ. ಆ ಶೆಟ್ಟಿಗೆ ಹಲ್ಲ ಕಿತ್ತಿ ಕೊಟ್ಯಾನ ? ಸುಳ್ಳ ಏಸದಿನಾ ನಡೂದ ?

ತಮ್ಮಣ್ಣಿ : ಆ ಭಂಗಾರ ಎಲ್ಲೀದ, ಯಾನ ತುಗೊಂಡ ಯಾನ ಮಾಡೂದು? ಅದನ್ನೆಲ್ಲಾ ಗೌಡರ ಹೇಳ್ಯಾರಂತ ಹಿಂದಿಂದ. ಗೌಡರ ಕೈಯಾಗನಕಾ ಸಿಕ್ಕೇವು, ಕೆಡಗಾಲ ಬರೂದೈತೋ, ಉಳಿಗಾಲ ಬರೂದೈತೋ ಶಿವಗs ಗೊತ್ತ.

ಗೌಡ : ಕೆಡಗಾಲ ಯಾಕ ಬಂದೀತಲೆ, ದುಮ್ಮಜಲಿ ಮನಿ ಕಟ್ಟಿಸಿದರ ಹೌದನ್ನ. ಆ ಮಲ್ಯಾನ ಸರಿಜೋಡಿ ಆಗಿ ಉರೀಲಾಕ ಬ್ಯಾಡಾ !

ಗೌರಿ : ಹಂತಾ ಕಾಲ ಬಂದಾಗ ಬಡವರನ್ನ ಮರಿಬ್ಯಾಡಪಾ ತಮ್ಮಣ್ಣಿ. (ವಿಲಕ್ಷಣ ವಾದ ವ್ಯಂಗ್ಯ ಬೆರೆತ ನೋಟದಿಂದ ಅವನೆಡೆಗೆ ನೋಡುವಳು) ನಮ್ಮ ನಶೀಬ ನಮ ಗಿದ್ದದ್ದs ನಿಮ್ಮಂತವರ ನೆಳ್ಳು ... ಅದನ್ನ ನೋಡೇ ಬದಕಬೇಕಲ್ಲ !

ತಮ್ಮಣ್ಣಿ : (ಏನು ಹೇಳಬೇಕೆಂಬುದು ತಿಳಿಯದೆ) ಹೇ ಅದೆಲ್ಲ ಯಾನ ಮಾತ ಬಿಡಿರಿ. ಗೌಡರು ಅಣಕಾ ಮಾಡೇ ಮಾಡತಾರು. ನೀವೂ ಮಾಡಬೇಕ ಯಾನರಿ ? ನಡೀರಿ ಗೌಡರ ಹೊಂಡೂಣು. ಅಷ್ಟರಾಗ ಅವರೂ ಬರತಾರು.

[ಇಬ್ಬರೂ ಹೋಗುತ್ತಾರೆ. ಈಗ ಗೌರಿ ಒಬ್ಬಳೇ ಉಳಿದಿದ್ದಾಳೆ, ಅವಳ ಮುಖ ಹಲ ವಾರು ಭಾವಗಳಿಗೆ ರಂಗಭೂಮಿಯಾಗಿದೆ. ಏನನ್ನೋ ನೆನೆಸುತ್ತಾಳೆ ಧೇನಿಸುತ್ತಾಳೆ. ದಾರಿಕಾಯುವವರಂತೆ ಬಾಗಿಲೆಡೆಗೆ ನೋಡುತ್ತಾಳೆ,ಸೆರಗನ್ನು ತಲೆಯ ಮೇಲೆ ಹೊದ್ದು ಕೊಳ್ಳುತ್ತಾಳೆ. ಕೊನೆಗೊಮ್ಮೆ ನಿಟ್ಟುಸಿರುಗರೆಯುತ್ತಾಳೆ.]

ಗೌರಿ : ಏನ ಮಸಲತ್ತ ನಡೆಸ್ಯಾರೋ ಒಂದೂ ತಿಳೀವಲ್ತು. ನನಗೇನ ಸಂಬಂಧ ಇವರ ಕಾರಭಾರದಾಗ ? ಹುಚ್ಚನ್ಹಾಂಗ ಮೈಮ್ಯಾಲಿನ ಭಂಗಾರ್ ಕೊಡಾಕ ಹೂಂ ಅಂದುಬಿಟ್ಟೆ .... ಮ್ಯಾಲಗಡಿ ಒಣಿ ಮಲ್ಲೇಶಪ್ಪ ನಿಂತಾನ ಅನ್ನಾಣಾ ಅವನ ಮಗನs ಕಣ್ಣಮುಂದ ನಿಂತಾ .... ಏಸರ ಆಗಲಿ ಅಪ್ಪನ ಜೋಡಿ ಮಗನೂ ಬರತಾನೇನ ನೋಡಬೇಕ .... ಹರ್‍ಯಾಗ ಹೋಳೀದಂಡಿಲೆ ಆ ಬಾಳೀಸುಳಿಹಂತಾ ಹುಡುಗನ್ನ ನೋಡಿದಾಗಿಂದ ಮತ್ತ ಮತ್ತ ನೋಡ. ಬೇಕಂತ ಅನಸತೈತಿ .... ರೂಪಿಗೆ ತಕ್ಕಂತಾ ಶಿರಿಮಂತ .... ಅಪ್ಪಗ ಒಬ್ಬನs ಮಗಾ ಬ್ಯಾರೆ. ... ಜೊಗಸಿಗ್ಯೆಲೆ ಬೇಡಿ ಬಂದಿರಬೇಕು ಹಂತಾ ಚಲವಿಕಿ .... (ನಿಟ್ಟುಸಿರುಗರೆದು) ಹೂಂ ಏನ್ ಮಾಡೂದ್ನೈತಿ ?

[ಹವಳೆಪ್ಪ ಬರುವನು. ಗೌರಿ ಇನ್ನೂ ವಿಚಾರಮಗ್ನಳಾಗಿಯೇ ಇದ್ದಾಳೆ]

ಹವಳೆಪ್ಪ : ಗೌರವ್ವಾ, ಏನ ನೀ .ಒಬ್ಬಾಕೀನ ಕಾಣತಿ ? ಗೌಡ್ರ ಎಲ್ಲಿ ಒಳಗ ಹೋಗ್ಯಾರೇನ ?

ಗೌರಿ : (ಬೆಚ್ಚಿ ಬಿದ್ದು) ಯಾಕ ? ಬಂದರೇನ ಅವರ ?

ಹವಳೆಪ್ಪ : ಅವರಂದರ ಯಾರ ಮತ್ತ ? ಮಲ್ಲೇಶಪ್ಪಣ್ಣ ತ್ವಾಟಕ್ಕ ಹೋಗಿದರ. ಜರೂರ ದಗದ ಐತಿ ಅಂತ ಅನ್ನಾಣಾ,ಕೇಳಿಕೊಂಡರೆ ಹೋಗಬೇಕಂತ ಅವರ ಮಗಾ ಬಂದಾರ.

ಗೌರಿ : ಮುದಕ ಮನ್ಶ್ಯಾರಾ, ಘಾತಕ್ಕ ಎಡತಾಗಸೂದು ಬಿಡ. ಏನ ಮಾತಾ ಡೂದು ಇವರ ಮುಂದs ಮಾತಾಡಿದರಾತ (ಅತ್ತಿತ್ತ ನೋಡಿ) ಎಲ್ಲಿಅದಾರ?

ಹವಳೆಪ್ಪ : ಹೊರಗ ನಿಂತಾರ. ಗೌಡರು ಒಳಗ ಅದಾರ್‍ಯಾನ ನೋಡಿ ಬಾ ಅಂದರು ನನಗ.

ಗೌರಿ : ಗೌಡ್ರ ಈಗ ಬರತಾರು. ಅವರಿಗೆ ಒಳಗ ಬಾ ಅಂತ ಹೇಳ. ಒಂದ ಜರಾ ಖುಂಡ್ರ ಅನ್ನ.

[ ಹವಳೆಪ್ಪ ಹಾಗೇ ಆಗಲೆಂದು ಗೋಣಲ್ಲಾಡಿಸಿ ಹೋಗುವನು. ಗೌರಿ ನಡು ಮನೆಯ ಬಾಗಿಲೊಳಗೆ ಮರೆಯಲ್ಲಿ ನಿಲ್ಲುವಳು. ಶಂಕರ ಒಬ್ಬನೇ ಒಳಗೆ ಬರುತ್ತಾನೆ.]

ಶಂಕರ : ಯಾರೂ ಕಾಣಸವಲ್ರಲಾ! ಎಲ್ಲಿ ಕುಂದರಬೇಕ, ಯಾರಗೂಡಾ ಮಾತಾಡ ಬೇಕ ?

ಗೌರಿ : (ಒಳಗಿಂದಲೇ) ಜರಾ ಅಲ್ಲೇ ಗುಡಾರದ ಮ್ಯಾಗ ಕುಂದರ್ರಿ. ಗೌಡರು ಈಗ ಬರತಾರ.

ಶಂಕರ : (ಬೆಚ್ಚಿ) ಎಲಾ ಒಳಗ ಯಾರೋ ಹೆಣಮಕ್ಕಳ ಕಾಣತಾರಲಾ! ಅವಗೋಳ ಧನಿ ಅಂತೂ ಅಲ್ಲ. ಮತ್ಯಾರರೆ ಬಂದಿರಬೇಕ ಅವರ ಮನೀಗೆ! (ಬಾಗಿಲ ಕಡೆಗೆ ನೋಡುತ್ತಲೇ ಗುಡಾರದ ಮೇಲೆ ಕುಳಿತುಕೊಳ್ಳುತ್ತಾನೆ.)

ಗೌರಿ : (ಒಳಗಿನಿಂದ ಒನಪು ಒಯ್ಯಾರದಿಂದ ಬಂದು) ಯಾರಿಲ್ಲ. ನಾನs ಇದ್ದೀನು.

ಶಂಕರ : (ದಿಗ್ಭ್ರಮೆಗೊಂಡು) ಯಾಕರಿ, ನೀವ್ಯಾರರಿ.. ... ಅಲ್ಲ... ... ಅವಗೋಳ ಕಡೆ ದಗದ ಇತ್ತೇನರಿ... ... ಅವರ ಎಲ್ಲಿ ಹೋಗ್ಯಾರ ಕಾಣೂದುಲ್ಲ... ...

ಗೌರಿ : (ನಾಚಿಕೆಯಿಂದ ಮುರಿದುಹೋದವರಂತೆ) ಇದ್ಯಾನರಿ ? ನಾವು ನೀವು ಬರಾಬರಿ ಯಾನರಿ ? ಯಾನಂದರೂ ನೀವು ಊರ ಸಾವಕಾರ. ನನಗ್ಯಾಕರಿ ನೀವು ಹೋಗರಿ ಬರ್ರಿ ಅನೂದು ?

ಶಂಕರ : (ಕೆಳಗೆ ಮುಖ ಮಾಡಿ) ಮಂದೀ ಹೆಣಮಕ್ಕಳನ್ನ ಒಂಟಿಹೆಸರ್ಲೆ ಹ್ಯಾಂಗ ಕರೀಬೇಕ್ರಿ ?

ಗೌರಿ : ಮಂದೀ ಹೆಣಮಕ್ಕಳನ್ನ ಕರೀಬಾರದು. ನಾ ಯಾನ ನಿಮುಗ ಮಂದಿ ಯಾನರಿ ? (ಕುಳಿತಂತೆಯೇ ಅವನ ಸಮೀಪ ಬಂದು) ನಿಮ್ಮಂಥವರ ಕಾಲ ಕೆಳಗ ಬಿದ್ದ ಇರಾಕಿ ನಾ.

ಶಂಕರ : ಅದ್ಯಾಕ ನಿಮುಗ ಯಾರಿಲ್ಲೇನ ?

ಗೌರಿ : ನಂದ ಯಾನ ಐತಿ ? ನಿಮ್ಮಂಥವರ ಮುಂದ ಕರದರs ಅಲ್ಲ್ಯಾನ... ಮನ್ನಿ ಹರ್ಯಾಗ ಹೊಳಿದಂಡೀ ಮ್ಯಾಗ ನಿಮ್ಮನ್ನ ನೋಡಿದಾಗಿಂದ ಮಾತಾಡಸ-ಬೇಕಂತ ಜೀವಾ ಹಾತೊರೀತಿತ್ತ . . . ಆದರ ಯಾನ ಮಾಡೂದು ನಾಚಿಕಿ ಒಂದ ಅsತೆಲಾ... ಈಗ ಬಂದರಿ ಭಾಳ ಛಲೂ ಆತ. ಅಂಥಾಂಗ ಛೆಂಜಿ ಕಡೆಗೆ ನಮ್ಮ ಮನೀಕಡೆ ಬರ್ರೆಲಾ. ನಿಮ್ಮಂಥವರ ಬಂದ್ರ ನಮುಗ ಅಬ್ರು, ಇಲ್ಲದಿದ್ದರ ಯಾನ ಅsತಿ.

ಶಂಕರ : (ಎದ್ದು) ಬರತೇನರಿ ನಾ. ಗೌಡರಿಗೆ ಹೇಳ್ರಿ ಮಲ್ಲೇಶೀ. ಮಗಾ ಬಂದಿದಾ ಅಂತ. ಅವರ ಬಂದ್ರ ಅಂದರ ಕರಸಂತ ಹೇಳ್ರಿ.

ಗೌರಿ : ಈಗ ಬರತಾರ ಖುಂದ್ರಿ. ನಾ ಅದೀನ ಅಲ್ಯಾನ ? ನನ್ನಗೂಡಾ ಮಾತಾಡ-ಲಾಕ ನಾಚತೀರ್ಯಾನ ? ಖರೇ ಐತಿ, ಹರೇದವರಾಗೀರಿ. ಅಲ್ರಿ ಅಂಥಾಂಗ, ನಿಮ್ಮಪ್ಪಾವರ ನಿಮ್ಮ ಮದಿವಿ ಮಾಡ್ಯಾರಿಲ್ಲ ?

ಶಂಕರ : ಹಂಗ್ಯಾನ ಇಲ್ಲ. ನಾಳಿಲ್ಲ ನಾಡದ ಇಲೆಕ್ಶನ ಐತಿ. ಆಕಡೆ ಈಕಡೆ ಹೋಗೂ ದಿತ್ತ ಅಂತ ಅಂದ್ನಿ. ಮದಿವೀದ ಅಂದ್ರ್ಯ, ಇನಾ ಇಲ್ಲರಿ.

ಗೌರಿ : ನೀವs ನಿತ್ತೀರಿ ಏನ ಇಲೆಕ್ಶನಕ ? ಕಸಮಾಲ ಮಂದೀ ಮಾಡೂ ಕೆಲಸಾ ನೀವ್ಯಾಕ ಮಾಡಲಾಕ ಹೊಂಟೇರಿ ? ಹಿಂದ ಮುಂದ ಇಲ್ಲದವರ ಅದನ್ನ

ಮಾಡತಾರ.

ಶಂಕರ: ನಾ ಅಲ್ಲ, ನಮ್ಮಪ್ಪ ನಿಂತಾನ. ಹೊಲಮನಿ ಕೆಲಸಾ ನಾ ಮಾಡತೀನು, ಸುಮ್ಮನ ಖಾಲಿ ಕುಂಡ್ರೂದು ಏನ? ಮಂದಿಗಿ ಅಷ್ಟು ಉಪೇಗ ಆಗಬೇಕಂತ ನಿಂತಾನು. ಮಂದೀನೂ ಭಾಳ ಜುಲುಮಿ ಮಾಡಿದರು. (ಹವಳೆಪ್ಪ ಬರುವನು)

ಹವಳೆಪ್ಪ: ಇಬ್ಬರೂ ಬಂದರ್ರಿ.

ಶಂಕರ: ಏ ಹವಳೆಪ್ಪಾ! ಗೌಡರು ಒಬ್ಬರs ಅದಾರ ಅಂದಿ. ಇಲ್ಲೆ ನೋಡಿದರ ಏನೋ ಬ್ಯಾರೇನ ಕಾಣತೈತೆಲ್ಲಾ?

ಹವಳೆಪ್ಪ: ಕಾಣಲಾಕ ಬ್ಯಾರೆರಿ, ಆದರ ಎಲ್ಲಾ ಒಂದsರಿ. ಇವರು ಗೌರವ್ವನಾವರ. ಮನ್ನಿ ಮನ್ನಿ ನಮ್ಮೂರಿಗೆ ಬಂದಾರ. ತಮ್ಮಣ್ಣಿ ಅಂತಿ ನಿಮಗ ಗೊತ್ತs ಐತಿ.

ಶಂಕರ: ಇವರs ಯಾನ ಅವರ? ಯಾಡ್ಡ ತಿಂಗಳಾತ, ಇಡೀ ಊರ ಬಾಯಾಗ ಅದಾರ. ಅದಕs ಹೀಂಗ ಮಾತಾಡತಿದ್ದರ ಹಾಂಗಾರ.

[ ಗೌಡ, ತಮ್ಮಣ್ಣಿ ಬರುವರು ]

ಗೌಡ: (ಒಂದು ಗುಡಾರದ ಮೇಲೆ ತನ್ನ ಸ್ಥಳದಲ್ಲಿ ಕೂತುಕೊಂಡು) ಯಾಕೋ ಶಂಕರ್‍ಯಾ! ಶಿರಿಮಂತಿಕಿ ಭಾಳ ಬಂದೈತಿ ಕಾಣತೈತಿ ನಿಮ್ಮಪ್ಪಗ? ಕರಿಸಿದರ ಸುದ್ದಾ ಬರೂದುಲ್ಲ ಏನ?

ಗೌರಿ: ಹೀಂಗ್ಯಾಕರಿ? ಈಗ ಬಂದಾರ. ಅವರ ಗೂಡ ಈ ಹೀಗ ಮಾತಾಡೂದ್ಯಾನ? ಇಲೆಕ್ಶನದ ದಗದ, ಬರಲಾಕ ಆಗಿರಾಕಿಲ್ಲ. ಇವರ ಬಂದಿದ್ದ ಅಲ್ಲ್ಯಾನ?

ಶಂಕರ: ನನಗ ಯಾನ ಗೊತ್ತರಿ? ನಿಮ್ಮ ಹಳಬ ಬಂದಾಗ ನಮ್ಮಪ್ಪ ತ್ವಾಟಕ ಹೋಗಿದ್ದ. ಕರೀತಾರ ಅಂತ ಅನ್ನಾಣಾ ನಾ ಬಂದೆ. ತಪ್ಪಾತೇನರಿ? ನಿಮ್ಮ ಹಳಬ ಗೌಡರ ಹೊರತು ಮತ್ತ್ಯಾರೂ ಇಲ್ಲ ಅಂದಿದ್ದ. ಇಲ್ಲೆ ನೋಡಿದರ ಏನೋ ಬ್ಯಾರೆ ಬ್ಯಾರೇ ಕಾಣತೈತಿ!

ತಮ್ಮಣ್ಣಿ: ಬ್ಯಾರೆ ಬ್ಯಾರೆ ಯಾನ ಕಾಣೂದು? ನಾನs ಹೇಳಿದ್ದೆ ಹಾಗ ಹೇಳಂತ. ಅವರಾ ಇವರಾ ಇದ್ದಾರಂದ್ರ ಮಲ್ಲೇಶಪ್ಪಣ್ಣ! ಮತ್ತ್ಯಾನರೆ ತಿಳಕೊಳ್ಳಾವರು. ಇದರಾಗ ಗೌಡರದ್ಯಾನ ತಪ್ಪಿಲ್ಲ.

ಗೌಡ: ಯಾಕ ಅಷ್ಟ ಹೇಳೂದು? ಇಲ್ಕೊಡ ಶಂಕರ್‍ಯಾ. ನಿಮ್ಮಪ್ಪಗ ಹೇಳ. ಛಲೂ ಮಾತಲೆ ಸುಮ್ನ ಬಿಡತಾನೋ ಏನಂತಾನೋ ಕೇಳ?

ಶಂಕರ: ಯಾನ ಬಿಡೂದರಿ ಅದು? ತುಡುಗ-ದನಾ ಕೊಂಡವಾಡೇದಾಗ ಬಿದ್ದಂಗ ಕೇಳತೀರಿ? ಸುಮ್ಮ ಕುತ್ತಾಂಗ ಕುದರಿ ಮ್ಯಾಲ ಏರಲಾಕ ಹತ್ತಿತಲಾ! ಸಮ್ಮಂಥ ಇದ್ದವರು ಇರದವರು ಹಾಗs ಮೈಮ್ಯಾಗ ಬರೂದ್ಯಾನ?

ಗೌರಿ: ಯಾನ ಕೇಳೂದು ಸಮಜೂತಿಲೇ ಕೇಳಿದರ ಅವರೂ ಹೇಳ್ಯಾರು. ತಿಳಿಸಿ ಹೇಳಿಬಾರದ?

ಶಂಕರ : ಯಾಕರೆವಾ ? ನಿಮ್ಮದೂ ಇದರಾಗ ಮಸಲತ್ತ ಇದ್ದಾಂಗ ಕಾಣತೈತಿ ?

ಗೌಡ : ಏ ಶಂಕರ್ಯಾ, ಆಕಿ ಹೇಳಿದಾಳ ಅಂತ ನಿನ್ನ ಇಲ್ಲೀತನಾ ಬರಗೊಟ್ಟಿ. ಇಲದಿರಕ ನನ್ನ ಮನೀ ತುದಿಗಟ್ಟಿ ಏರಗೊಡತಿದ್ದಿಲ್ಲ ತಿಳೀತಽ ?

ಶಂಕರ : ತಿಳೀತು ಬಿಡ್ರಿ. ನಮ್ಮಂತಾ ಅಬ್ರೂದಾರರು ಬರೂ ಮನಿ ಇದಲ್ಲಾ ಅಂತ ತಿಳೀತು.

ತಮ್ಮಣ್ಣಿ : ಏ ತಮ್ಮಾ ಹಾಗೆಲ್ಲಾ ಬಾಯಿಬಿಟ್ಟು ಹಿರ್ಯಾರಿಗೆ ಅನಬಾರದು. ಅವರ್ಯಾನ ಅಂತಾರು ಕೇಳಿಕೋ.

ಶಂಕರ : ಕೇಳಿಕೊಳ್ಳಾಕ ಅಲ್ಲ್ಯಾನ ಬಂದಿದ್ದು ? ಏನ ಹೇಳೂದು ಹೇಳಲಿ.

ಗೌಡ : ಇಲ್ನೋಡ. ನಮ್ಮ ಈ ತಮ್ಮಣ್ಣಿ ಸರಪಂಚಕಿ ಇಲೆಕ್ಶನಕ ನಿಂದರಾವ ಅದಾನ. ಅದಕ ನಿಮ್ಮಪ್ಪಗ ಹೇಳ, ಮುಕಾಟಲೆ ಹೆಸರ ತಕ್ಕೋ ಅಂತ. ಇಲ್ಲಾತು ಅಂದ್ರ.... ( ಮೀಸೆಯ ಮೇಲೆ ಕೈಹಾಕುತ್ತ ) ನೋಡತೀನೆಂತ ಹೇಳ.

ಶಂಕರ : ( ಸಿಟ್ಟನ್ನು ನುಂಗಿಕೊಳ್ಳುತ್ತ ) ಆಗಲ್ರಿ. ಹೇಳತೀನು. ಆದರ ನಮ್ಮಪ್ಪನೂ ಕೇಳ್ಯಾನೂ ಅಂತ ತಿಳೀಬ್ಯಾಡ್ರಿ. ಛಲೂನಽ ಆತಲ್ರಿ. ಏನನ್ನೂದು ಒಮ್ಮೆ ನಿಕಾಲೆ ಆಗತೈತಿ. ನಾ ಯಾಕ ಮಾತಾಡೂದಾ, ನಮ್ಮಪ್ಪನಽ ಹೇಳತಾನು.

ಗೌರಿ : ಇಲ್ನೋಡ್ರಿ. ಸಿಟ್ಟಿನ ಕೈಯಾಗ ಬುದ್ಧಿ ಕೊಡಬ್ಯಾಡ್ರಿ. ಗೌಡ್ರ ಅಂದರ ಹ್ಯಾಗವಾರ ನಿಮಗ ಗೊತ್ತಽ ಅವತಿ. ಜೀವದಕಿಂತಾ ಸರಪಂಚಕಿ ಯಾನ ಹೆಚ್ಚಿಂದಲ್ಲಾ.

ಶಂಕರ : ( ತಡೆಯದೆ ) ಹಂತಾ ಹಿಂತಾ ಹೆಂಗಸೂರ ಮಾತ ಕೇಳಿ ಬಾಳೇವು ನಡೆಸಿಲ್ಲ ತಿಳೀತ್ಯಾನರಿ ? ಜೀವದ ಅಂಜಿಕಿ ಹಾಕಿ ಹಿಂದಕ ಸರಸಬೇಕಂತಾರ ಯಾನ ಗೌಡರು ? ನಮ್ಮ ರಟ್ಯಾಗ ಕಸುವಿದ್ದರ ನೋಡೇವಂತ ! ನಿಮ್ಮದ್ಯಾನ ನಡ ಬರಕ ? ನೀವಿದರಾಗ ಬರಬಾರದು.

ಗೌಡ : ಲೇ ಶಂಕರ್ಯಾ ! ಯಾರಿಗೆ ಏನಂತೀ ಖಬರ ಐತೇನ ನಿನಗ ? ಆಕಿ ಹೆಸರ ತಗದಿ ಅಂದ್ರ ನೀರ ಬೇಡಾಕಿಲ್ಲ ತಿಳೀತ್ಽ ? ಈಟೊತ್ತನಾ ಸುಮ್ಮನಿದ್ನೀ ಅಂತ ಭಾಳಽ ಆತಲಾ ? ಲೇ ಯಾರದೀರಲೇ ? ( ಎದ್ದು ಶಂಕರನನ್ನು ಹೊಡೆಯಲೆಂಬಂತೆ ಹತ್ತಿರ ಬರುವರು. ಹೊರಗಿನಿಂದ ಹವಳೆಪ್ಪ, ಅವನ ಹಿಂದಿಂದ ಬಸವಯ್ಯ ಬರುವರು. )

ಹವಳೆಪ್ಪ : ಯಾನ ಮತ್ತ ಯಾರನರೆ ಕರೂದೈತಿ ಯಾನರಿ ?

ಶಂಕರ : ಯಾರನೂ ಕರೂದಿಲ್ಲ. ನನ್ನಽ ಹೊರಗ ಹಾಕಾಕ ಕರದಿದ್ರು. ಇಗಾ ನಾನಽ ಹೊಂಟಿ. ಗೌಡ್ರ, ಯಾರ ಕೈ ಮೇಲಾದೀತೂ ನೋಡಕೊಂತ ಇರ್ರಿ. ( ಹೋಗುವನು. )

ಬಸವಯ್ಯ : ( ಹುಚ್ಚನಂತೆ ಎಲ್ಲರನ್ನೂ ನೋಡುತ್ತ ) ಇಲೆಕ್ಶನದ ಗದ್ದಲದಾಗ ಹಾಲಽ ತೀರ್ಯಾವಂತರಿ. ಅದಕ ಚಾ ಇಲ್ಲಂತ ಹೇಳಂದನರಿ ಸಿದರಾಮ !

— ತೆರೆ —

## ಅಂಕ ೨

[ ಗೌರಿಯ ಮನೆಯ ಪಡಸಾಲೆ. . ಎಡಬದಿಗೆ ಇರುವ ಕಟ್ಟೆಯ ಮೇಲೆ ಕಂಬಳಿಯೊಂದನ್ನು ಹಾಸಲಾಗಿದೆ. ಅದರ ಮೇಲೆ ಒಂದೆರಡು ಮಾಸಿದ ಲೋಡು ದಿಂಬುಗಳಿವೆ. ಒಂದೆಡೆಗೆ ಎಲೆ-ಅಡಿಕೆಯ ಹಿತ್ತಾಳೆಯ ತಟ್ಟೆಯಿದೆ. ಗೋಡೆಯ ತುಂಬ ಬಣ್ಣಬಣ್ಣದ ಫೋಟೋಗಳು ಅಸ್ತವ್ಯಸ್ತವಾಗಿ ಹರಡಿಕೊಂಡಿವೆ. ಅವುಗಳ ಆಕಾರದಲ್ಲಾಗಲಿ, ಆಯ್ಕೆಯಲ್ಲಾಗಲಿ, ಯಾವ ಕ್ರಮವೂ ಇಲ್ಲ. ಒಂದು ಕಡೆಗೆ ಕಂಬಕ್ಕೆ ಮೊಳೆ ಹೊಡೆದು ಕಾಜಿನ ದೀಪವೊಂದನ್ನು ತೂಗುಹಾಕಲಾಗಿದೆ. ನಡುಮನೆಯ ಬಾಗಿಲು ಹಳೆಯ ಕಾಲದ್ದಾದರೂ ಅದನ್ನು ದೊಡ್ಡದಾದ ಮಣಿ-ತೋರಣವೊಂದು ಮರೆಮಾಡಿದೆ. ಪಡಸಾಲೆಯಲ್ಲಿ ವಿಶೇಷವೆಂದರೆ ಹಳ್ಳಿಗಾಡಿನ ದೊಡ್ಡ ಪಂಜರವೊಂದರಲ್ಲಿ ಗಿಳಿಯೊಂದು ಆಗಾಗ ನುಡಿಯುತ್ತಿದೆ. ಈಗ ಮಧ್ಯಾಹ್ನ ನಾಲ್ಕು ಗಂಟೆಯಾಗಿದೆ. ತೆರೆಯೆದ್ದಾಗ ರಂಗದ ಮೇಲೆ ಯಾರೂ ಇರುವದಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಗೌರಿ ನಡುಮನೆಯ ಬಾಗಿಲಿನಿಂದ ಪ್ರವೇಶಿಸುತ್ತಾಳೆ. ಮೊದಲಿನ ಸಿಂಗಾರ ಈಗ ಇಲ್ಲ; ಮುಖ ಬಾಡಿದಂತಾಗಿದೆ. ನಡಿಗೆ ಭಾರವಾಗಿದೆ. ]

ಗೌರಿ : (ಬಾಗಿಲೆಡೆಗೆ ದಿಟ್ಟಿಸಿ ನೋಡಿ, ನಿರಾಶಳಾಗಿ ಒಂದೆಡೆಗೆ ಕೂತು, ನಿಟ್ಟುಸಿರುಗರೆಯುತ್ತ) ಇವರೂ ಬರಲಿಲ್ಲ, ಇವರನ್ನ ಕರಿಯಾಕ ಹ್ವಾದ ಬಸಯ್ಯನೂ ಬರಲಿಲ್ಲಲ್ಲ! ಯಾಕೋ ಬ್ಯಾಸರ ಒಟ್ಟಿಸಿ ಬಂದೈತಿ. ಧಿನಾ ಈಟೊತ್ತಿಗೆ ಎಲ್ಲಾ ಮಂದಿ ಕೂಡೂದು ; ಇಂದ ಯಾರೂ ಬರಲೇ ಇಲ್ಲ ... ... ಹುಲಿ ಗವ್ಯಾಗ ಸಿಕ್ಕ ಆಡಿನಾಂಗ ಆಗೇತಿ ನನ್ನ ಜಲಮ ... ... ಮನಸಿನ್ಯಾಗಿನ ಮಾತಾ ಯಾರಿಗಿ ಹೇಳೂದೈತಿ ? ಗೌಡರ ಮನ್ಯಾಗ ಅವನ್ನ ನೋಡಿದಾಗಿನತುಟ್ಟೊ ಮನಸ್ಸು ಹಾತೊರೀಲಾಕ ಹತ್ತೇತಿ. ಅವನ್ನ ಈ ಮನೀಗಿ ಬರೂಹಾಂಗ ಮಾಡಿದರನs ನನ್ನ ಹೆಸರು ಗೌರಿ ... ಏನಿಲ್ಲದ ರಂಗು ಬಂದೈತೆಲ್ಲ ಇವೊತ್ತಿನ ಬಿಸಿಲಿಗೆ ... (ಸೆರಗಿನಿಂದ ಗಾಳಿ ಹಾಕಿಕೊಳ್ಳುತ್ತ) ಖುಂತ ಕಡೆ ಖುಂದರಗೊಡೂದುಲ್ಲ, ನಿಂತಕಡೆ ನಿಂದರಗೊಡೂದುಲ್ಲ. (ಹೊರಗೆ ಕಾಳಿಯ ಸಪ್ಪಳವಾಗುವದು) ಪಿಶ್, ಇದs ಇವರ ಇಲೆಕ್ಶನ್ನದ ಗೊಂದಲಿರಬೇಕು ... ... ಅದೊಂದು ಮೂಳ ತಮ್ಮಣ್ಣಿ ಯಾರ ಬಲದಿಂದೋ ಗೆದ್ದು ಬಂದೈತಿ ... ... ಇವರೊಬ್ಬರು ತಮಗs ಸರಪಂಚಕಿ ಸಿಕ್ಕಿತೆಂತ ಕುಣದಾಡತಾರು ... ... ನಾ ಯಾಕ ಇದರಾಗ ಹೊಕ್ಕಿದ್ದೇನೋ ಅಂತ ಆಗೇತಿ ... ... ಯಾರರೆ ಬಂದರ ಈ ಬ್ಯಾಸರಾದರೂ ಹೋದೀತು ... ...

[ ಗೌಡರು ಬಸವಯ್ಯನೊಂದಿಗೆ ಮಾತಾಡುತ್ತಲೇ ಪ್ರವೇಶಿಸುತ್ತಾರೆ ]

ಗೌಡ : ಏ ಬಸಯ್ಯಾ, ಏನ ಒಳೇ ತರಾತುರಿಲೇ ಕರಿಲಾಕ ಬಂದಿದ್ದೆಲ್ಲಾ ! ಅಲ್ಲಿ ಇನಾ ಕೈತುಂಬ ಕೆಲಸ ಇತ್ತ. ಬರೇ ಒಂದು ಹೋಟು ಆದರ ಆದ್ಹಾಂಗ ಆತೇನ ? ಅದರಾಗ ಫೌಜದ್ದಾರ ಬ್ಯಾರೆ ಬಂದಾನ ಬಂದೋಬಸ್ತಿಗೆ. ಅವಂದು

ಸರಬರಾಯಿ ಆಗಾಕಬೇಕ. ನಮ್ಮನೀಗೆ ಬಾರೋ ಅಂದರ ಮೊದಲಿಂದನೂ ವಹಿವಾಟೀ ಅಂತ ಆ ಮಲ್ಲೇಶಿ ಮನಿಗೇ ಹ್ವಾದ. ಹ್ವಾದರೇನಾತೂ ಮ್ಯಾಲಿ ನಾವಾ ಅಂದಮ್ಯಾಗ, ಅವಗ ಅಲ್ಲೇ ಸೀದಾ ಕಳಸಾಕ ಬ್ಯಾಡಾ ? ಇದನ್ನೆಲ್ಲಾ ಮಾಡೂದು ಬಿಟಗೊಟ್ಟು, ಬರೇ ತನ್ನ ಮುಂದ ಕೂಡಂತಾಳೇನ ?

[ ಇಬ್ಬರೂ ಒಳಗೆ ಬಂದು ಕಂಬಳಿಯ ಮೇಲೆ ಕುಳಿತುಕೊಳ್ಳುತ್ತಾರೆ. ಗೌರಿ ಇವರ ಕಡೆಗೆ ಲಕ್ಷ್ಯವಿಲ್ಲದವರಂತೆ ನಟಿಸುತ್ತಿದ್ದರೂ ಎಲ್ಲ ಮಾತುಗಳನ್ನೂ ಕೇಳುತ್ತಿದ್ದಾಳೆ. ತನ್ನನ್ನು ಮಾತಾಡಿಸದೆ ಮಾತಾಡಬಾರದೆಂಬ ಹಟದಿಂದ ಸುಮ್ಮನೆ ಕುಳಿತಿದ್ದಾಳೆ. ]

ಬಸವಯ್ಯ : ( ಗೌಡರಿಗೆ ) ಹಂಗ ಯಾನಿಲ್ಲರಿ ! ಒಬ್ಬಾಕೀನೂ ಮನ್ಯಾಗ ಎಷ್ಟಂತನೂ ಖುಂಡ್ರೂದು ಅಂತ ಬ್ಯಾಸತ್ತು ಹಾಗ ಅಂದಿದ್ದಳರಿ ! ಆಕಿ ಇದ್ದಳಂತ ವಿಲೆಕ್ಶನ್‌ದಾಗ ತಮ್ಮಣ್ಣಿ ಆರಿಸಿ ಬಂದ ನೋಡರಿ. ಆತಲ್ರಿ, ಆ ಮಲ್ಲೇಶೀದು ತಿಳಿಧಾಂಗಾತು. ಹಣಾನೂ ಹೋತು, ಗುಣಾನೂ ಹೋತು !

ಗೌಡ : ಇನಾ ಇದ ಚುಂಗಾಣಿ ಅಂತ ತಿಳಿ ನೀ. ಏನ ಇರೂದು ಇನ್ನಮುಂದ. ಪಂಚ-ಗಟ್ಟಿ ಕೈಯಾಗ ಬರೂ ಹಾದೀನೂ ನೋಡತಿದ್ದೆ. ಇನ್ನೇನ, ಹನ್ನೆರಡ ಖೂನ ಮಾಫ ಆದವು ನೋಡ ! ( ಧೋತರದಿಂದ ಗಾಳಿ ಹಾಕಿಕೊಳ್ಳುತ್ತ ) ಚೇ... ಚೇ.. ಏನ ಬಿಸಲೂ ಶಕಿ ಇದು ! ಮೈಮ್ಯಾಗಿನ ಅರಿಬೆಲ್ಲಾ ತೋದು ಹೋದವು ನೋಡ ! ಗೌರಾ ಎಲ್ಯದಾಳ ? ನೀರರ ತಂದಿದ್ರ ಆಗತಿತ್ತು. ನನ್ನ ಕರೀಲಾಕ ಹೇಳಿ ತಾ ಎಲ್ಲಿ ಹ್ವಾದಳೋ !

ಗೌರಿ : ( ಸಿಡುಕಿನಿಂದ ಎಲ್ಲ್ಯೂ ಇಲ್ಲ. ಇಲ್ಲೇ ಅದೀನಲ್ಲ. ಗಂಡಸರ ಹಾಂಗ ಹೆಂಗಸರಿಗೆ ಎಲ್ಲಿರತಾವ ಹೋಗಲಾಕ ಜಾಗ ! ಕರೀಬ್ಯಾಡ, ಅವರಿಗೆ ದಗದ ಬಾಳ ಇರತೈತಿ, ನಮ್ಮಂಥವರ ಮನೀಗೆ ಬರಲಾಕ ಸವಡ ಸಿಗಾಣಿಲ್ಲ ಅಂತ ಹೇಳಿದರ ಇದೆಲ್ಲಿ ಕೇಳತೈತಿ ಮೂಳ ! ( ಅಳುತ್ತ ) ಯಾರ ಹೊಟ್ಟಿ ಕಡದರ ಯಾರ ಅಜಿವ್ಯಾನ ತಿಂತಾರ ಹೇಳ ಬಸಣ್ಣ !

ಬಸವಯ್ಯ : ಮತ್ತ್ಯಾಕ ಅಳತೀ ಬಿಡ. ಇನ್ಯಾಕನೂ ಬಂದರಲಾ ಗೌಡ್ರ....

ಗೌಡ : ( ರಮಿಸುತ್ತ ) ಇಲೆಕ್ಶನದ ಕೆಲಸಾ ಮುಗಸಿ ಬರೂದರಾಗ ತಡಾ ಆತ. ಇಂದ ಈ ಗೌಡನ ಕೈ ಮ್ಯಾಲಾಗೇತಿ, ಅಳತೀ ಏನು ? ಯಾಕೋ ಬಸಯ್ಯ, ಫೇಡೆ ಕುಡಲಿಲ್ಲೇನ ಆಕಿಗಿ ?

ಬಸವಯ್ಯ : ಎಲ್ಲೀ ಫೇಡೇರಿ, ಬಂದಾಗಿಂದ ನೋಡತೀನು ಹೀಂಗನೂ ನಡದದನ್ರಿ. ನೀವು ಬಂದ ಮ್ಯಾಗರೆ ಬದಲಾದೀತೂ ಅಂದ್ರ... ... ಗೌರಾ, ಯಾಕ ಹೀಗ ಮಾಡತೀ ? ಗೌಡ್ರ ಮಾಡೂದೆಲ್ಲಾ ನಿನ್ನ ಕಾಲಾಗನೂ ಅಲ್ಲೇನ ? ( ಗೌಡಗೆ ) ನೀವನೂ ಮನೀಕಡೆ ಬಂದಿಲ್ಲಾ ಅಂತ ಗೌರಾ ಸಿಟ್ಟ್ಯಾಧಾಂಗ ಕಾಣತೇತ್ರಿ.

ಗೌಡ : ನಿನಗ ಗೊತ್ತನೂ ಅಂತೆಲಾ ಬಸಯ್ಯಾ ! ಅಮಲದಾರ ಬಂದರಂದ್ರ ನಮಗೆಷ್ಟು

ಕೆಲಸ ಇರತೇತಿ ! ಅವರು ಊರು ಬಿಟ್ಟು ಹೋಗೂ ತನಾ ನಮಗ ಪುರಸತ್ ಎಲ್ಲಿರತೈತಿ ? ಇದನ್ನೆಲ್ಲ ಸಮಜೂತು ಮಾಡಿಕೊಳ್ಳಾಕ ಬ್ಯಾಡಾ ?

ಗೌರಿ : ಬಸಯ್ಯಾ, ಧಿನಾ ಅಮಲದಾರು ಬಂದಾರ ಅಂತ ಹೇಳತಾರು. ಕಚೇರ್‍ಯಾಗ ಕೆಲಸಾ ಮಾಡೂದು ಬಿಟ್ಟು ಆ ಅಮಲದಾರ್‍ರು ಬರೇ ಹಳ್ಳೀನs ತಿರಗ್ಯಾಡ. ತಾರ್‍ಯಾನ ?

ಗೌಡ : ಏ ಬಸಯ್ಯಾ, ಎಲ್ಲಾ ಗೊತ್ತಾಧಾಂಗಾತು. ನೀ ಚಾವಡೀಗೆ ಹೋಗ. ಆ ಕಾಗದಾ ಎಲ್ಲಾ ತಗದ ಕಪಾಟಿನಾಗ ಇಡಂತ ಹೇಳ ತಲಾಠೀಗೆ. ಇನ್ನೇನು ನಾ ಚಾವಡೀಗೆ ಬರೂದಿಲ್ಲಂತನೂ ಹೇಳ. ( ಬಸವಯ್ಯನು ಹೋಗುವನು ) ಇಲ್ನೋಡ ಮತ್ತ ಹಂಗs ಆ ಹವಳ್ಯಾಗ ನಾ ಕರದೀನಂತ ಹೇಳಿ ಹೋಗ.

[ ಬಸವಯ್ಯನು ಹೋದ ಮೇಲೆ ಕೆಲಹೊತ್ತು ಇಬ್ಬರೂ ಸುಮ್ಮನಿರುತ್ತಾರೆ. ]

ಗೌರಿ : ( ಮತ್ತೆ ಅಳುವೊಗದಿಂದ ) ನನ್ನ ಯಾತಕ್ಕ ಈ ಊರಿಗೆ ಕರಕೊಂಡ ಬಂದಿರಿ? ಅಲ್ಲೇ ಇರತಿದ್ದೆ ಯೋನ ಆಗೂದು ಆಗತಿತ್ತು. ಕರಿಗಾಲ ಮುಂದ ಮಾಡ ಕೊಂಡs ಹುಟ್ಟಿಧಾಂಗ ಆಗೇತಿ ನನ್ನ ಜಲಮು ! ಸುಕಾ ಅಂತ ಹಿಡಿದದ್ದೆಲ್ಲ ಹಾಳs !

ಗೌಡ : ( ಸಲಿಗೆಯಿಂದ ) ಯಾಕ ? ನಾ ಬಂದಾಗಿಂದ ನೋಡತೀನು ನಿನ್ನ ಮಾರೀನ ಸಪ್ಪಗ ಹಿಡದೈತಿ. ಇಲೆಕ್ಶನ್ನದಾಗ ನನ್ನ ಮನಶ್ಯಾ ಗೆದ್ದ ಬಂದ ; ಅದೂ ನಿನ್ನಿಂದ ಅಂದಮ್ಯಾಗ ಖುಶಿಯೊಳಗ ಇರಬೇಕೋ... ಏನ ಹೀಗ ಸಣ್ಣ ಮಾರೀ ಮಾಡಬೇಕೋ? ಏನ ತೆಲಿ-ಗಿಲಿ ನೂಸತsತಿ ಏನs? ಮುದಲs ಹೇಳಿದ್ದರ ಅಟಿಟು ಮೆಂಥೇಲರ ತರತಿದ್ದೆನಲಾ !

ಗೌರಿ : ( ತನ್ನೊಳಗೇ ಎಂಬಂತೆ ) ಹಿಂದಕ ಇಲ್ಲದಿದ್ದರ ಇಲ್ಲ, ಎಲ್ಲೆರ ಸುಕಾ ಸಿಕ್ಕೀತ ಅಂದ ಬಂದರ ಯಾನsತಿ ? ಎಲ್ಲಿ ಹ್ವಾದಲ್ಲಿ ಒಲೀಗೆ ಮೂರ ಗುಂಡs.

ಗೌಡ : ಏ ಗೌರಿ, ಯಾಕೋ ನನ್ನದಶಿಂದ ನಿನ್ನ ಮನಸಿನ್ಯಾಗ ಸಂಶೇ ಬಂಧಾಂಗ ಕಾಣತsತಿ ? ಹೆಂಗಸರ ಮನಸಂದ್ರ ಹ್ಯಾಂಗ ಹ್ಯಾಂಗ ಇರತsತಿ ನೆಲೀನs ತಿಳಿಯಾಣಿಲ್ಲ. ಏನ ಆ ಭಂಗಾರದ್ದ ಅಂತೀ ಏನ ? ಅದೇನ ಹಾಂಹಾಂ ಅನೂದರಾಗs ಬಿಡಿಸಿ ಕುಡತೇನ.

ಗೌರಿ : ಯಾನ ಬಿಡಿಸಿ ಕುಡಾವರಾ ? ಆ ಸರಪಂಚ ಒಂದ ಬೇಕಲಾ ನಿಮ್ಮ ಕೈಯಾಗ ?

ಗೌಡ : ಆ ತೆಳಗಡೀ ಓಣಿ ತಮ್ಯಾಂದು ಏನ ಹೇಳತೀ ? ಸರಪಂಚಕಿ ನಂದs ಅಂತ ತಿಳೀ ನೀ. ಅದರದೇನ ಅನಮಾನ ಬ್ಯಾಡ.

ಗೌರಿ : ಆಗಲಿ ಹಗಾರ, ಅದು ಕರೇವ ಆಗಿದ್ದರ ಆ ಮಲ್ಲೇಶಿ ಮಗನ್ನ ತಂದ ನನ್ನೆದಿರಿಗಿ ನಿಂದರಸರಿ ನೋಡೂನು ? ಬರೇ ಬಾಯಿಲೆ ಹೇಳಿದರ ಆಧಾಂಗಾತ್ಯಾ ನ. ಕೈಲೆ ಮಾಡಿದರ ಕರೆ.

ಗೌಡ : ಆ ಮಲ್ಲೇಶಿ ಮಗಾ ಯಾಕ ಬೇಕ ನಿನಗ ? ಏನ ಅವನ ಮಾರೀವ್ಯಾಗ ಕೈ ಎಳದು ರಮಸಂತೀಯೋ, ಮಾಡಿದ್ದೆಲ್ಲಾ ತೆಪ್ಪ ಆತಂತ ಕಾಲ ಹಿಡೀ-ಬೇಕಂತಿಯೋ ? ಏನ ತಿಳೀವಲ್ದಲಾ ! ಮದಲಃ ಹೇಳ್ಳಿಲ್ಲೇನ, ನಮ್ಮದೂ ಅವರದೂ ಅದಾವತಿ ಐತಿ ಅಂತ. ನನ್ನ ಕೆಣಕಿ ಹಿಡಿ ಶಗಣಾ ತಿಂದ, ಇನ್ನೇನ ಕರಸೂದ ಅವನ್ನ ?

ಗೌರಿ : ಆತು, ಬರೇ ಮಂದಿನ್ನ ಬೈಕೊಂತ ಖುಂಡರಾವರ ಕಾಣತೀರಿ ನೀವು. ನಿಮ-ದೊಂದು ಬ್ಯಾಳಿ ಬೆಂದರಾಧಾಂಗಾತ್ಯಾನ ? ಇತ್ತಲಾಗಿನವರದು ನೀವು ಯಾನ ನೋಡಿಧಾಂಗಾತು ? ಆಗಳೇನತುಟ್ಟಿ ಹಾಡಲಾಕ ಹತ್ತೇನು, ಇನಾ ತಿಳೀ-ವಲ್ದಂದ್ರ ! ... ... ನಿಮ್ಮನ್ನ ಕೂಡಿದೇ ಅಂತ ನಮಗ ಅಬರೂನಃ ಇಲ್ಯಾನಃ ? ( ಬಿಕ್ಕಿಸುತ್ತ ) ತನ್ನಾವರು ಅಂತ ಕೇಳಾವರಿಲ್ಲದಿದ್ದರ, ಆಗೂದಃ ಹೀಂಗ ! ಹಾದಿಲೇ ಹೋಗಾವರು ಮಾತಾಡತಾರು, ಬೀದಿಲೆ ಹೋಗಾವರೂ ಮಾತಾಡತಾರು.

ಗೌಡ : ( ಏನೂ ತಿಳಿಯದಂತಾಗಿ ) ಏನ ಹಾಗಂದರ ? ನಾ ನಿನ್ನ ಜತೀಗೆ ಇದ್ದಾಗ ನಿನಗ ಅನ್ನಾವರ್ಯಾರಾ ?

ಗೌರಿ : ಯಾರು ಬೇಕಾದವರು ಅಂತಾರು. ಅದಃ ನಿಮ್ಮಾಕಿಗೆ ಅಂತಾರ್ಯಾನ ? ಅದಕಃ ಹಿರ್‍ಯಾರು ಅಂತಾರು ಸುಳ್ಳಲ್ಲ. ಹೊನ್ನಿದ್ದಾಕೀದು ತೊನ್ನು ಮುಚ್ಚಿತಂತ, ಬಳಗ ಇದ್ದಾಕೀದು ಹಾದರ ಮುಚ್ಚಿತಂತ. ನಮ್ಮದ್ಯಾನಾ ? ಹಾಗಿದ್ದರೂ ಅಂತಾರು, ಹೀಗಿದ್ದರೂ ಅಂತಾರು.

ಗೌಡ : ಏನ ಮಾತಾಡಕ ಹತ್ತೀ, ನಿನ್ನದು ನಿನಗರ ಖಬರು ಐತೇನ ? ನಾ ಅಂದನ್ಯೋ ಏನ ತಮ್ಮಣ್ಣಿ ಅಂದನೋ ?

ಗೌರಿ : ಅನ್ನದ ಇದ್ದಾವರಿಗೆ ಯಾಕ ಅನ್ನಾಕ ಹೋಗಲಿ ? ಕಿವಿಗೆ ತುತ್ತು ಒಯ್ಯ್ತ್ಯಾನ್ಯಾನ ? ಎಂದಿಲ್ಲದ ನಿಮ್ಮ ಮನೀ ಬಾಕಲಿಗೆ ಬಂದರ ನಿಮ್ಮ ಹೇಸಿ ಮಾರಿ ಹಳಬಾ ಹತ್ತ ಮಾತಾಡಿದಾ. ಅವಂಧ್ಯಾನ, ಮಚ್ಚೀ ತೆಳಗ ಬಿದ್ದಿರೂ ನಾಯಿ. ಆಕೀ ಫುಸಲತಿ ಐತೀ ಅಂತ ಅಂದಿದ್ದಾನು. ಅಂವಾ ಅಂದದ್ದು ಹಚಗೊಂಡೇ ಇಲ್ಲ ನಾ. ಆದರ ಊರಾಗಿನ ಮಂದೀನೂ ಅನಬೇಕ ?.

ಗೌಡ : ( ಕನಲಿ ) ಯಾರ ಅಂದಾವರಾ ಲಗ್ಗ ಲಗ್ಗ ಹೇಳ ? ನೋಡೇ ಬಿಡೂದಃತಿ ನನಗೂ ಒಂದ ಕೈ. ನೀ ಅಂದರ್‍ನ ಏನಂತ ತಿಳಕೊಂಡಾರೋ ! ಹೇಳ ಯಾರ ಅಂದಾರು ?

ಗೌರಿ : ಯಾರು ಅನೂದ ಒಡದ ಹೇಳಬೇಕ್ಯಾನ ? ಆ ಚೋಟುದ್ದ ಹುಡುಗ ಯಾವ ಟಬರಿಲೆ ಮಾತಾಡಿದಾ ಗೊಂತೈತಿಲ್ಲೋ ? ನೀವು ಇದ್ದಿರಿ ಅಂತ ಸುಮಾಕ ಇದ್ದೆ. ಹಾದೀಲೆ ಹೋಗೂ ಹುಡುಗನ ಕಡಿಂದ ಅನಿಸಿಗೊಳುದಾತು ನನ್ನ ಜನಮ. ಇಂದ ಹೀಗಂದಾವಾ ನಾಳೆ ಯಾನ ಅಂದಾನು ಯಾರಿಗೆ ಗೊತ್ತ ?

ನಿಮ್ಮ ಕೈಯಾಗ ಯಾನ ಇಲ್ಲಾ ಅನೂದು ಅವಗೂ ಗೊತ್ತಾಧಾಂಗ ಕಾಣತೈತಿ.

ಗೌಡ: ಸಾಕಮಾಡ ನಿನ ಅಣಕಿನ ಮಾತಾ. ಈ ಗೌಡನ ವಜನ ಏಟ ಅsತಿ ಅನೂದ ತೋರಸತೀನ. ಅಲ್ಲಿಂದರೆ ಅಂದೀ ಅಂತ. ಶಿರಮಂತ ಮಗಾ ಅಂತ ಈಟ ಸೊಕ್ಕ ಬಂದೈತೇನ ಅವಗ ?

[ ಹವಳೆಪ್ಪ ಬರುತ್ತಾನೆ ]

ಹವಳೆಪ್ಪ: ( ನೆಲಮುಟ್ಟಿ ನಮಸ್ಕಾರ ಮಾಡಿ ) ರಾಮರಾಮರಿ. ಕರಸಿದ್ದೆರಲ್ಲರಿ, ದಗದ ಇತ್ಯಾನರಿ ?

ಗೌಡ: ( ಸಿಟ್ಟಿಗೆದ್ದು ) ಏ ಹೇಸಿ ಸೋಳೇಮಗನ ! ಸೊಕ್ಕಿಗೆ ಬಂದೀ ಏನ ? ಏನ ಮುಪ್ಪಿನತನಕ್ಕ ಅರವ ಹಾರಾಕ ಹತ್ತೇತೊ ?

ಹವಳೆಪ್ಪ ( ಇನ್ನೂ ನಮ್ರತೆಯಿಂದ ) ಬಸಯ್ಯಾ ಹೇಳಿದನರಿ, ನೀವs ಕರಿದೀರಿ ಅಂತ. ಮತ್ಯಾವದರದರೆ ನಿಕಾಲೆ ಆಗೂದ ಇರಬೇಕಂತ ತಿಳದಿದ್ದನಿ. ಆದರ ನಂದs ಪಾಳಿ ಕಾಣತsತಿ.

ಗೌಡ: ಇಲ್ಲದ್ದ ಪಂಟಿ ಹಚ್ಚಬ್ಯಾಡ. ಇಗಾ ಇನ್ನೊಮ್ಮೆ ಆಕಿ ಮಾತ ಕೇಳಿ ಇಕಿ ಹೆಸರ ತಗದೆಂದರ ನೋಡ. ನಿನ್ನ ಆಕೀನ್ನ ಕೂಡೆ ಕಾಣಸತೀನ..

ಹವಳೆಪ್ಪ: ನನಗ ಯಾನರ ಅನ್ನರಿ. ಆದರ ಅವಾಗೋಳ ಸುತ್ತ ಯಾಕರಿ? ತಂಪೊತ್ತಿನ್ಯಾಗ ನೆನಸಬೇಕರಿ ನಮ್ಮವ್ವನ್ನ. ಅವರು ಇಕೀ ಹೆಸರ ಸುದ್ದೆ ತಗದಿಲ್ಲ.

ಗೌಡ: ಇರಲಿ ಹೋಗ ಮೊದಲ. ಆ ಮುದೋಡ್ಯಾನ್ನ ಮತ್ತ ಅವನ ಮಗನ್ನ ಮುಂದ ಹಾಕ್ಕೊಂಡ ಬಾ. ಬರೂದುಲ್ಲಾ ಅಂದ್ರ ಚಂಡಮ್ಯಾಗ ಕೈಕೊಟ್ಟಿ ತೊಗೊಂಡ ಬಾ- ಈಗ ಸದ್ಯ ನಿಕಾಲೆ ಆಗಾಕಬೇಕ. ಈಕಿ ಅಂದರ ಏನಂತ ತಿಳದಾರ ಅವರ ? ಹೋಗ, ಆಕಿ ಮಾರಿ ಏನ ನೋಡಕೊಂತ ನಿಂದರತಿ ? ( ಹವಳೆಪ್ಪನು ಹೋಗುವನು ) ಗೌರಿ, ಆತಿಲ್ಲ ನಿನ್ನ ಮನಸ್ಸಿನ ಹಾಂಗ. ಈಗ ಕರಿಸಿ ನಿನ್ನ ಇದರಿಗೆ ನಿಕಾಲೆ ಮಾಡಿದರ ಆತಲಾ?

ಗೌರಿ: ನೀವ ಬಂದಿರಿ, ಜೀವ ತೆಳಗ ಬತ್ತು. ನೀವs ಇಲ್ಲಿ ಇರಲಿಲ್ಲಾ ಅಂದ್ರ ನಂದ ಯೋನತಿ ಈ ಊರಾಗ ? ನೀವು ಬಿಟ್ಟರ ನನ್ನ ಕೇಳಾವರ್ಯಾರಾ ?

[ಬಸವಯ್ಯನು ಬರುವನು. ]

ಬಸವಯ್ಯ: ಹೇಳಿ ಬಂದೀನರಿ ಚಾವಡ್ಯಾಗ.

ಗೌಡ: ಆತು ಇನ್ನಮ್ಯಾಗ ಹೋಗಿ ಆ ಸರಪಂಚನ್ನ ಕರಕೊಂಡು ಬಾ. ಬಿಟ್ಟಿ ಕೆಲಸಾ ಬಿಟ್ಟ ಬಾ ಅನ್ನ. ಆಗಿ ಹೋಗಲಿ ಇಲ್ಲೇ ಪಂಚಗಟ್ಟಿ. ನಾ ಎಲ್ಲಿ ಕುಂತರತೀನ ಅಲ್ಲೆ ಪಂಚಗಟ್ಟಿ ಆಗಾಕಬೇಕ ಇನ್ನ. ನನ್ನ ಯಾರಂತ ತಿಳದಾರ

ಎಲ್ಲಾರೂ ? ಇಂದ ರಾತರ್ಯಾಗ ಎಲ್ಲಾ ನಿಕಾಲೆ ಆಗಿ ಹೋಗಲಿ. ಇಲ್ಲಾಂದರ ನನ್ನ ಕಿಮ್ಮತ್ತೇನು ಉಳದ್ಹಾಂಗಾತು ?

ಬಸವಯ್ಯ : ತಮ್ಮಣ್ಣಿ ಹಂತಾವ ಅಲ್ಲರಿ, ನೀವು ಹೇಳಿದ್ಹಾಂಗ ಕೇಳಾವಾ. ಮದಲಿನಿಂದನೂ ನಿಮ್ಮ ಮ್ಯಾಗ ಇಶ್ವಾಸ ಭಾಳರಿ ಅವಂದು. ಇನ್ನೇನು, ಸರಪಂಚ ಆಧುರಪ್ಲೆ, ಕಣ್ಣು ಯಾನ ನೆತ್ತಿಮ್ಯಾಗ ಹೋದವ್ರೋ ಯಾನರಿ ? ಮಾಡಿದ ಉಪಕಾರಾ ಇಷ್ಟು ಲಗ್ಗ ಮರೀಬಾರದರಿ.

ಗೌಡ : ಅವಾ ಏನ ಅಂತಾದ ಮಾಡ್ಯಾನೋ ? ಇಕೀನ್ನ ಸದಾಕಾಲ ನೆನಸತಾನ; ಇಕಿ ಪುಣ್ಯೇದಿಂದ ತನಗ ಸರಪಂಚಕಿ ಸಿಕ್ಕಿತೆಂತ ಹಾಡಿ ಹರಸತಾನ.

ಬಸವಯ್ಯ : ಮತ್ತ ನಿಕಾಲೆ ಅಂದಿರೆಲ್ಲರಿ, ಅದಕ ಅನ್ನಿ.

ಗೌರಿ : ನಿಕಾಲೆ ಆಗೂದು ಅವಂದಲ್ಲ ಬಸಣ್ಣಾ, ನಮ್ಮೆಲಾರ ಅಬರೂದ್ದು. ಆ ಚೋಟುದ್ದ ಪೋರಂದು. ಮಂದೀ ಹೆಂಗಸೂರ ಅಂದರ ಕಾಲಕಸಾ ಅಂತ ಮಾತಾಡತ್ತಾನು.

ಬಸವಯ್ಯ : ಯಾನ ಮಾತಾಡತೀರ್‍ಯೊ ಒಂದೂ ತಿಳೀವಲ್ತು. ಆಗಾಳಿಂದ ನೋಡತೀನು ... ಹೊಗೀಯಂತೂ ಆಡತಽತಿ ಅಂದವ್ಯಾಗ, ಬೆಂಕಿ ಇರಾಕಬೇಕು ಅಂತ ಕಾಯಾಸ ಕಟ್ಟಿದೆನ್ರಿ. ಯಾನ ಯಾನ ನಿಕಾಲೆ ಮಾಡೂದ್ಯೆತೋ ಮಾಡ್ರಿ. ಆದರ ಮಂದೀ ಹೆಂಗಸೂರ ಅಬರೂದ ಮಕ್ತಾ ತಗೊಂಡೀ ಏನ ನೀ ? ಅವರ ಗಣಸೂರ ಇರತಾರಲಾ !

ಗೌರಿ : ( ಅಳುವ ದನಿಯಲ್ಲಿ ) ಬಸಣ್ಣಾ, ಇದು ಗಣಸೂರ ಇದ್ದವರ ಮಾತು ಆತಪಾ ! ನಮ್ಮಹಂತಾವರನ ಯಾರು ಕೇಳಬೇಕಪಾ ? ಇದ್ದ ಆಸರಾನಽ ತಪ್ಪಿದ ಮ್ಯಾಗ ಯಾರನ ಅಂದು ಯಾನ ಮಾಡೂದಽತಿ ? ಸುಕಾನ ಇರಲಿ, ಗೋಳಽ ಇರಲಿ, ಇದ್ದೂರಾಗ ಇದ್ದರ ಆ ಮಾತಽ ಬ್ಯಾರೆ ಆಗತಿತ್ತು. ಆನಿಮ್ಯಾಗ ಕೂಡಸತೀನ, ಕುದರಿಮ್ಯಾಗ ಮೆರಸತೀನ ಅಂತ ನಿಮ್ಮ ಗೌಡರು ಇಲ್ಲಿಗಿ ಕರಕೊಂಡ ಬಂದರು. ಇಲ್ಲೆ ಬಂದರ ಯಾನ್ಯೆತಿ ?

ಬಸವಯ್ಯ : ಅಂಥಾಗಽ ಇದ್ದೂರು ಯಾಕ ಬಿಟ್ಟಿ ಗೌರವ್ವಾ ?

ಗೌರಿ : ಯಾನ ಹೇಳೂದಽತಿ ? ಕೆಟ್ಟ ನಶೀಬಾ ... ಒಂದಽಕಡೆ ಇರಗೊಟ್ಟೇತ್ಯಾನ ? ಇದ್ದ ಗಂಡ ಕೈಬಿಟ್ಟ ಹ್ವಾದ. ನೆಲೀಯಿಲ್ಲದ ತಿರಗಾಡೂ ಮುಂದ ನಿಮ್ಮ ಗೌಡರ ಕಣ್ಣು ನನ್ನ ಮ್ಯಾಗ ಬಿತ್ತು. ಇವರನ್ನ ನಂಬಿದರ ಗತಿ ಕಾಣತೀನು ಅನೂ ಆಶಾದಿಂದ ಬಂದ್ನಿ ...

ಗೌಡ : ಸಾಕು ಬಿಡ. ಗ್ವಾಡೀ ತೊಳಧಾಂಗ ರಾಡಿ ಹೊಂಡೂದ ! ಅವಾ ಬಂದಾರ ಬರಲಿ, ಅವನ ಕಣ್ಣು ಕಿತ್ತಿ ನಿನ್ನ ಕೈಯಾಗ ಕೊಡತೀನ. ಬಸಯ್ಯಾ, ಹೋಗ ಮದಲ. ಆ ತಮ್ಮಣ್ಣಿನ್ನ ಕರಕೊಂಡು ಬಾ. ಇವರು ಬರೂದರಾಗ ಅವನೂ ಬಂದಿರಬೇಕ ನೋಡ. ಹಂಗಽ ಬರೂ ಮುಂದ ಆ ಬಶೆಟ್ಟಿ ಅಂಗಡ್ಯಾಗಿದ್ದ

ಚಾ-ಪುಡಿ ಸಕ್ರಿ ತಾ.

ಗೌರಿ : ಚಾ-ಪುಡಿ ಸಕ್ರಿ ಎಲ್ಲಾ ತರಸೀರಿ. ಆದರ ಹಾಲ ಎಲ್ಲ್ಯದಾವ ಮನ್ಯಾಗ ? ಹರ‍್ಯಾಗ ಬೆಕ್ಕ ಎಲ್ಲಾ ಕುಡದ ಬಿಟ್ಟೈತಿ.

ಗೌಡ : ಹಾಗಾರ ಹಂಗಽ ಮನೀತನಕ ಹೋಗಿ ಆಕಿ ಕಡಿಂದ ಒಂದ ಬಟ್ಲಾಗ ಹಾಲ ಇಸಗೊಂಡ ಬಾ.

ಗೌರಿ : ( ಕೈ ತಿರುವುತ್ತ ) ಇಲ್ಲದ್ದ ಹೇಳಬ್ಯಾಡ್ರಿ. ಉಗರಕಣ್ಣಾಗಿನ ಮಣ್ಣ ಕುಡೂ. ದುಲ್ಲಾ ಇನ್ನ ಹಾಲ ಕುಡತಾಳಽ ? ನಾನಽ ಹೋಗಿ ಗಂಗೀ ಮನ್ಯಾಗಿನ ಹಾಲ ತರತೇನಿ.

[ ಗೌರಿ ಹೋಗಬೇಕೆನ್ನುವಷ್ಟರಲ್ಲಿ ಹೊರಗಿನಿಂದ ತಮ್ಮಣ್ಣಿ ಬರುತ್ತಾನೆ. ಜರದ ರುಮಾಲ ಅವನ ಹೊಸ ಗೆಲುವನ್ನು ಸೂಚಿಸುವಂತಿದೆ. ಆದರೆ ಉಳಿದ ವೇಷವೆಲ್ಲ ಮೊದಲಿನಷ್ಟೇ ಹೊಲಸಾಗಿದೆ. ಮುಖದ ಮೇಲೆ ಹುಚ್ಚು ಕಳೆ ಸುರಿಯುತ್ತದೆ. ]

ತಮ್ಮಣ್ಣಿ : ಏನ ಗೌರವ್ವಾ, ನಾವು ನಿಮ್ಮನೀಗೆ ಬರೂವಾಗ ನೀವು ಹೊರಗ ಹೊಂಡ ಬೇಕು ? ಇದ್ಯಾನ ಬರಾಬರಿ ಯಾನ ?

ಬಸವಯ್ಯ : ಅಂತೂ ನನ್ನ ಕೆಲಸ ಮುಗದ್ಹಾಂಗಾತಲ್ರಿ ( ಎದ್ದವನು ಮತ್ತೆ ಕುಳಿತು-ಕೊಳ್ಳುವನು )

ಗೌರಿ : ಅಯ್ ! ಬೆಕ್ಕ ಎಲ್ಲಾ ಹಾಲ ಕುಡದದಽತಿ. ನೆರಿಮನಿ ಗಂಗಿ ಕಡಿಂದ ಚಾಽಕ ಹಾಲ ತರಲಾಕ ಹೊಂಟೇನ. ( ಗೌರಿ ಹೋಗುವಳು )

ಗೌಡ : ಖುಂಡ್ರ್ರಿ, ತಮ್ಮಣ್ಣಿ ಖುಂಡ್ರ್ರಿ. ಈಗ ಆ ಮುದೋಡ್ಯಾನ್ನ ಮತ್ತ ಅವನ ಮಗನ್ನ ಕರೀಲಾಕ ಕಳಿಸೀನ. ಈಗ ಬರತಾರ ಅವರ.

ತಮ್ಮಣ್ಣಿ : ಎಲ್ಲಾ ಮುಗದ್ಹೂತಿ ಅಲಾ ! ಮತ್ತ ಯಾಕ ಅವರ ಹೆಸರ ?

ಗೌಡ : ಮುಗದಿಲ್ಲ, ಇನ್ನ ಸುರುವಾತ ಅನ್ನ. ಇನ್ನ ಅವರ ಹೆಸರ ತಗದಽ ನಮ್ಮ ದಗದಾ ಮಾಡಿಕೊಳ್ಳೂದ. ಇಲ್ಲದಿರಕ ನಮ್ಮ ಇಲೆಕ್ಶನದ ಸಾಲಾ ಹ್ಯಾಗ ತೀರಸಾವ ?

ತಮ್ಮಣ್ಣಿ : ಅಂದರ ಕೊಟ್ಟೆ ಸಾಲಾ ತೀರಸಲಾಕ ಮಲ್ಲೇಶೀ ಮುಂದ ನೀವೇ ಕೈಯೊಡ್ಡಾವರ‍್ಯಾನರಿ ?

ಗೌಡ : ( ಮೀಸೆಯ ಮೇಲೆ ಕೈ ಹಾಕಿ ) ಏ ತಮ್ಮಾ , ಊರಿಗಿ ಏನ ಕೇಳತಿ ಖಬರ ಐತೇನ ? ಇನ್ನ ಕಾಳಗ ಸುರುವಾತೂ ಅಂದ್ನಿ. ಕಾಲ ಕೆದರದ ಎದರಿನ ಗೂಳಿ ಬಂದೀತೇನ ? ಅವಾ ಏನೋ ಗೌರೀ ಹೆಸರ ತಗದಾನಂತ ಹೊಳೀ ದಂಡಿಮ್ಯಾಗ. ಸುರುಮಾಡಾಕ ಒಂದ ಪ್ರಕರಣ ಆತಿಲ್ಲೊ ? ನೋಡ ಇನ್ನ ಮ್ಯಾಗ, ಆ ಮಲ್ಲೇಶಿ ಗಮಜು ಇಳಿಸಿದರ ಹೌದನ್ನ.

ತಮ್ಮಣ್ಣಿ : ಅಂದರ ನಿಮ್ಮ ಕಾಯಕಾ ತಗ್ಯಾವರದೀರಿ ಏನರಿ ? ಆದರ ಮಲ್ಲೇಶಿ

ವಜನ ಸರಕಾರದಾಗ ಭಾಳ ಐತ್ಯಂತಿರಿ. ಮಲಗಿದ ನಾಯಿ ತುಳದ ಬರಾವರ ಕಾಣತೀರಿ ನೀವೂ.

ಗೌಡ : ಹುಚಗೊಟ್ಟಿ ಅದೀದಿ ನೀ. ನಾಳೆ ಬೆಳಗಾದರ ಗೌರೀ ಭಂಗಾರ ಬಿಡಿಸಿ ಕುಡಬೇಕ. ರೊಕ್ಕಾ ಎಲ್ಲಿಂದ ತರಾವಾ ? ನಾ ಹೇಳಿದ್ದಷ್ಟು ಕೇಳ. ಅಲ್ಲಿಂದ ನೋಡ ಮಜಾ.

ತಮ್ಮಣ್ಣ : ಅದೆಲ್ಲಾ ಕರೇ ಆತರಿ. ಆದರ ಗೌರಾನ ಹೆಸರು ಅದ್ಯಾನ ತಗೀತಿ ತಿರಿ ? ಬರದಾಗಿನ ಹೆಣಾ ! ಕೈಯಾಗ ಕಾಸಿಲ್ಲಾ, ಮೈಯಾಗ ಮಾಸಿಲ್ಲಾ. ( ಗೌರಿಯು ಬರುತ್ತಾಳೆ ) ಇಷ್ಟಾಗೀ ಮುದುಕ ಮನಸ್ಯಾ.

ಗೌರಿ : ಮೈಯಾಗ ಮಾಸಿಲ್ಲದಿದ್ದರೇನಾತ, ಕೈಯಾಗ ಕಾಸಿಲ್ಲೇನ ? ಅವಾ ಮುದ-ಕಾದ್ರ ಅವನ ಮಗಾ ಹರೇದಾವ ಅಲ್ಯಾನ ? ರೊಕ್ಕದ ಧುಂದೀ, ಮ್ಯಾಗ ಮುಸಗೊಡೋ ಹರೆ. ಅಂದಮ್ಯಾಗ ನಮ್ಮ ಹಂತಾವರ ಅಬರೂ ಯಾವ ಗಿಡ್ಡ ತಪ್ಪಲಾ ? ದಿಕ್ಕಿ ! ಹೆಣ್ಣಂದರ ನಿನ್ನಂತಾವಾ ಹೊಳ್ಳಿ ಹೊಳ್ಳಿ ನೋಡತೀ ಅಂದಮ್ಯಾಗ ಆ ಹುಡುಗಂದೇನೂ ? ಇರ್ಲಿ ಬಿಡ, ಯಾರ ಹೊಟ್ಟಿ ಕಡದರ ಯಾರ ಅಜಿವ್ಯಾನ ತಿಂದಾರು? ಇಲ್ನೋಡು ಬಸಯ್ಯಾ, ಇಲ್ಲೇ ಇರ. ಅವರು ಈಟರಾಗ ಬ ಯಾಳೀ ಆತು. ಗೌಡರ ಅಂದಾಕಾರ ಸಿಟ್ಟಿನ್ಯಾವರ. ನಿನ್ನ ಹಂತಾವಾ ನ ವ ಇದ್ದರ ಛಲೂ. ನಾ ಒಳಗ ಹೋಕ್ಕೇನು ಛಾಕ್ಕ ಇಡ-ಲಾಕ. ಈಟರಾಗ ಬರಬೇಕ. ( ಒಳಗೆ ಹೋಗುವಳು )

ಗೌಡ : ಏ ಬಸಯ್ಯಾ, ಈಗ ಅವರ ಬಂದರ ಅವರ ಮುಂದ ಏನ ಹೇಳೂದಪಾ ?

ಬಸವಯ್ಯ : ಯಾನ ಹೇಳೂದರಿ ? ಅವರಂತೂ ಗೌರಾನ ಹೆಸರ ತಗದಾರ. ಆಕೀ ಅಬರೂ ಉಳದಿರಬೇಕು. ಮ್ಯಾಗ ನಮಗ ಫಾಯದೇನೂ ಆಗಿರಬೇಕು. ಹಾಗ ಒಂದ ಹಂಚಿಕಿ ತಗೀರಿ ತೀರ್ಮ. ಯಾಕರಿ ತಮ್ಮಣ್ಣೆಪ್ಪಾ ರಾಸ್ತ ಐತಿಲ್ಲೋ ಮಾತು ?

ಗೌಡ : ಅಂದರ ಅವರ ಮ್ಯಾಗ ಖಟ್ಲಿ ಹಾಕಂತೀ ಏನು ?

ತಮ್ಮಣ್ಣ : ಖಟ್ಲಿ-ಗಿಟ್ಲಿ ಯಾನ ಮಾಡತೀರಿ ? ಮತ್ತ ಅದಕ್ಕ ಪುರಾವೆ ಹುಟ್ಟಿಸ ಬೇಕ. ಸಾಕ್ಷಿದಾರರನ ಹೊಂಡಸಬೇಕ. ಮತ್ತ ಕೈತುಂಬ ರೊಕ್ಕ ಸೂರಿ ಮಾಡಲಾಕ ಬೇಕ. ಅಷ್ಟು ಮಾಡಿದರೂ ಗೆದ್ದೇವಂತ ಖಾತ್ರಿ ಯಾನರಿ ? ಅದಲ್ಲದ ಇಕೀದ ಯಾನ ನೇಮರಿ, ಇಂದ ಹೀಗ, ನಾಳೆ ಹಾಗ.

ಗೌಡ : ಏ ತಮ್ಮಣ್ಣ, ಗೌರಾನ ಬಗ್ಗೆ ಹಾಗ ಮಾತಾಡಬ್ಯಾಡ. ಆಕೀದು ಒಂದ ನಾಲಿಗಿ. ಸಾಕ್ಷಿ ಪುರಾವೆ ಬೇಕಾಗಿದ್ದರ ಪಂಚಗಟ್ಟಿ ಯಾಕ ಮಾಡತಿದ್ದರು ಸರಕಾರದವರಾ ? ಇದ್ದುವಲಾ ಮತ್ತ ಶಾರದಾಗ ಕಚೇರಿಗೋಳ ? ಬಡವರ ರೊಕ್ಕ ಉಳೀಬೇಕಂತ ಸರಕಾರದವರು ಪಂಚಾಯತಿ ಮಾಡಿದಾರು. ನೀ ಸರಪಂಚ ಆಗೀದಿ. ಗೌರಿ ಏನಂತಾಳ ಅದನ್ನ ಕೇಳಿಕೋ. ಪ್ರಕರಣ ಕೈಯಾಗ

ತಕ್ಕೊಂಡು, ಆ ಮುದೋಡ್ಯಾ ಬಂದ ಮ್ಯಾಗ ಹೇಳ. ಶಿಕ್ಷಾ, ದಂಡ ಅಂದರ ಅಂಜಿ ಸಾಯತಾನು ಆ ಮುದಕಾ. ಏನನ್ನೂದು ಇವೊತ್ತಿಂದ ಇವೊತ್ತ ನಿಕಾಲಿ ಮಾಡಿಬಿಡ. (ಹೊರಗೆ ನೋಡಿ) ಇಗಾ ಬಂದರ ಕಾಣತsತಿ. ಬಸಯ್ಯಾ ನಾವಿಬ್ಬರೂ ಒಳ್ಯಾಕ ಹೋಗಿ ಚಾ ಕುಡದು ಬರತೀವ. ನೀ ಇಲ್ಲೇ ಇರು.

[ಗೌಡ ಹಾಗೂ ತಮ್ಮಣ್ಣಿ ಒಳಗೆ ಹೋಗುವರು. ಹೊರಗಿನಿಂದ ಶಂಕರನನ್ನು ಕರೆದು ಕೊಂಡು ಹವಳೆಪ್ಪ ಬರುತ್ತಾನೆ. ಶಂಕರನ ಮುಖ ಉದ್ವಿಗ್ನತೆಯಿಂದ ತುಂಬಿದೆ ]

ಶಂಕರ : (ಬಸವಯ್ಯನನ್ನು ನೋಡಿ) ಶರಣ್ರಿ ಬಸಯ್ಯನಾರ! ಯಾರೂ ಕಾಣೂದುಲ್ಲಲಾ? ಯಾವಾಗ ಬಂದಾಗೆಲ್ಲಾ ನೋಡತೀನು, ತುರಾತುರಿ ದಗದಂತ ಹೇಳಿದವರ್‍ಽ ಇರೂದುಲ್ಲಲಾ.

ಬಸವಯ್ಯ : ಈಗ ಬರತಾರ ಖುಂಡ್ರ್ರ. ನಿಂದಽ ಹಾದೀ ನೋಡತಿದ್ದರು ಈಟೋತನ. ಈಗ ಒಳ್ಯಾಕ ಹೋಗ್ಯಾರು. ತಡಾ ಯಾಕ ಆತೂ ಅಂತ ಗೌಡರು ಸಿಟ್ಟಿಗೆ ಬಂದಿದ್ದರ.

ಶಂಕರ : (ಬೇಕೆಂದೇ ಎಡವಟ್ಟತನದಿಂದ) ನಿಮ್ಮ ಗೌಡರ ಸಿಟ್ಟ ಅಂದರ ಯಾನ ಅರ ಸರ ಸಿಟ್ಯಾನ? ಹವಳೆಪ್ಪ ಕರೀಲಾಕ ಬಂದ ಅಂತ ಬಂದೆ. ಬಂದೇನಿ ಇದು ಹೆಚ್ಚಿಂದ ಅಂತ ತಿಳಿ.

ಗೌಡ : (ಒಳಗಿನಿಂದ ಬರುತ್ತ) ಬಂದರೇನ ಬಸಯ್ಯಾ? ಹಾಗಾರ ನೀ ಒಳಗ ನಡಿ, ಚಾ ಕುಡೀಕೆಂತ.

[ಬಸವಯ್ಯ ಒಳಗೆ ಹೋಗುತ್ತಾನೆ. ಗೌಡರು ಅವನ ಜೊತೆಗೇ ಹಿಂದಿರುಗುತ್ತಾರೆ. ಗೌರಿ ಒಬ್ಬಳೇ ಹೊರಗೆ ಬರುತ್ತಾಳೆ.]

ಗೌರಿ : ಏ ಹಳಬಾ, ಸಾವಕಾರಿಗಿ ಖುಂಡ್ರ ಅಂತ ಹೇಳಬಾರದ್ಯಾನ?

ಹವಳೆಪ್ಪ : ಹೇಳಬೇಕಂತ ಮಾಡಿದ್ನಿ, ಆದರ ... ... (ಶಂಕರನ ಮುಖ ನೋಡುತ್ತಾನೆ)

ಗೌರಿ: ಆದರ ಯಾನಾ? ನಾಲಿಗಿಗಿ ಮುಳ್ಳ ಮುರದಿತ್ತಾನ? ಇದ್ಯಾನ ಆಕಿ ಮನಿ ಅಂತ ತಿಳಕೊಂಡ್ಯಾನ? ನಿನ್ನ ದಗದ ಆತಲಾ, ನಡೀ ಇನ್ನ, ಹೊರಗ ಖುಂಡ್ರ ಹೋಗ. (ಹವಳೆಪ್ಪ ಹೋಗುತ್ತಾನೆ)

ಶಂಕರ: (ಹವಳೆಪ್ಪನಿಗೆ) ಅವರ್‍ಯಾನ ಹೊರಗ ಬರೂಹಂಗ ಕಾಣೂದುಲ್ಲ. ನಾನೂ ಹೊರಡತೀನಿ ನಡಿ.

ಗೌರಿ: (ದೈನ್ಯ ನಾಚಿಕೆಗಳಿಂದ ಕೂಡಿ) ಅವರು ಈಗ ಬರತಾರ್ರಿ. ಈಟಾಗಿ ನಾ ಅದೀನಲ್ಲ. ಖುಂಡರ್ರಿ ಈ ಜಮಖಾನೇದ ಮ್ಯಾಗ. ಅಂತೂ ಹೇಳಿದ್ದಕ್ಕ ಮನೀಗೆ ಬಂದ್ರಿ.... ಯಾನ ಹೇಳಲಿ? .... ಯಾನೂ ತಿಳಿವಲ್ತ, .... ಖುಂಡರ್ರಿ.

ಶಂಕರ: ಇಲ್ಲೇ ನಿಂತಿರತೀನರಿ. ಅವರನ ಲಗ್ಗ ಕರೀರಿ:

ಗೌರಿ: ನೀವು ನಿಂತ ಮಾತಾಡಿದರ ನಮಗ ಸಮಾಧಾನ ಆಗಾಣಿಲ್ಲರಿ. ನಿಮ್ಮಹಂತಾವರು ನಮ್ಮ ಮನೀಗಿ ಬರೂದಽ ಅಪರೂಪ. ಹೋಗಂದ್ರೂ ಬಾಯಿ ತಕ್ಕೊಂಡು ಖುಂಡ್ರೋ ಮೂಳಗೋಳಽ ಬರತಾವ್ರಿ. ಇಂದ ನೀವು ಬಂದಿರಿ, ಭಾಗ್ಯೇವು ಬಂಧಾಂಗಾತ .... ಅಂದ ಹೊಳ್ಯಾಗ ನಿಮ್ಮನ್ನ ಮಾತಾಡಸ ಬೇಕಂದ್ರ ...

ಶಂಕರ: ನಿಮ್ಮಂತಾವರ ಜೋಡಿ ನಾವು ಹ್ಯಾಂಗ ಮಾತಾಡೂದ? ಮಾತಾಡಾಕೂ ಒಂದು ದಗದ ಬ್ಯಾಡಾ? ಅದು ಹೋಗಲಿ. ನಿಮ್ಮ ಗೌಡರು ಮತ್ಯಾಕ ಕರಸಿದರ? ಇಲೆಕ್ಶನದಾಗ ಮಾಡಿದ್ದು ಸಾಕಾಗಿಲ್ಲ್ಯಾನ?

ಗೌರಿ: ಇಲೆಕ್ಶನ್ನದದಶಿಂದ ಸಿಟ್ಟಿಗೆ ಬಂದೀರ್ಯಾನ? ಅದ್ಯಾನ ಬಿಡರಿ, ಇಂದ ಅವರಾ ನಾಳಿ ಇನ್ನೊಬ್ಬರಾ. ಇನ್ಯಾನನಿಮ್ಮಪ್ಪಾ ಅವರು ಅದಕ್ಕ ನೀರಿನ್ಹಾಂಗ ರೊಕ್ಕಾ ಖರ್ಚು ಮಾಡಿದ್ದರು ಅದೂ ಖರೆ. ಅದರ ಫಾಯದೆ ಮುಂದಿನ ವರ್ಸ ಸಿಕ್ಕೀತಲಾ?

ಶಂಕರ: ರೊಕ್ಕದಿಂದ ಏನ ಮಾಡೂದ್ಯೆತಿ ಈಗ? ಈಗಿನ ಪಂಚಾಯತಿ ಇಲೆಕ್ಶನ್ನಕ ರೊಕ್ಕಾ, ಗುಣಾ ಇವೆಲ್ಲ ನಡೂದುಲ್ಲ. ಕುಡಗೋಲ, ಖುರಿಪಿ, ಗಂಗಿ, ಗೌರಿ ಎಲ್ಲಾ ಬೇಕಾಗತಾರ.

ಗೌರಿ: (ಅವನ ಹತ್ತರ ನಡೆದು ಹೋಗಿ) ಸಾವಕಾರ! ನೀವ ಎಷ್ಟು ಸಿಟ್ಟಾಗಿ ಬಂದರೂ ನನಗೇನು ಸಿಟ್ಟಿಲ್ಲ. ಅಂದ ಗೌಡರ ಮನ್ಯಾಗ, ನಾ ಏಟು ಮಾತಾಡಿಸಿದರೂ ನೀವು ಖುಶೀಲೆ ಮಾತಾಡಲಿಲ್ಲ ಖರೆ. ಆದರೂ ನಿಮ್ಮ ನೆದರ ಎಲ್ಲಾ ನನ್ನ ನೆದರಾಗಽ ಇತ್ತು ಅನೂದ ನನಗಽ ಗೊತ್ತಿತ್ತ. ನಮ್ಮ ಮನೀಗೆ ನೀವು ಬರ-ತೀರಿ ಅಂತ ಅಂದಽ ತಿಳಿದಿತ್ತ. ನಿಮ್ಮ ಕಾಲಬೀಳತೇನು ಬೇಕಾರ,ಒಂದ ಜರಾ ಖುಂಡರ್ರಿ.

[ಶಂಕರ ಒಲ್ಲೆನ್ನಲಾರದೆ ಕೆಳಗೆ ಕುಳಿತುಕೊಳ್ಳುತ್ತಾನೆ]

ಗೌರಿ: ಅಂದ ಗೌಡರ ಮನ್ಯಾಗ ನಿಮ್ಮನ್ನ ನೋಡಿದಾಗಿಂದ ಮನಸಿಗೆ ತುಸಾ ಸುದ್ದೆ ಸಮಾಧಾನ ಇಲ್ಲ. ಉಣ್ಣಾಕ, ತಿನ್ನಾಕ, ಉಡಾಕ, ಒಂದರಾಗೂ ಮನಸಿಲ್ಲ. ಹೌಂದ ಮತ್ತ, ನಿಮ್ಮಹಂತಾವರು ಕಣ್ಣು ತಗದ ನೋಡಿದರ ನಮ್ಮದು ಬಾಳೇವು. ಇರಬೇಕಂದರ ಮರ್ಯಾದಿ ಬೇಕಽ ಅಲಾ! ಹೋಗಲಿ, ಅವರು ಬರೂತನಾ ಕುತ್ತ ಯಾನ ಮಾಡತೀರಿ? ಎಲೀನರ ಹಾಕ್ಕೋರಿ. ಪಾನಪಟ್ಟಿ ಕಟ್ಟಿಕುಡಲೇನು? (ಎಲೆಯಡಿಕೆಯ ತಾಟನ್ನು ಮುಂದೆ ಸರಿಸುವಳು)

ಶಂಕರ: ಎಲಿ ಅಡಿಕಿ ಹಂತಾದೇನೂ ಚಟಾ ಇಲ್ಲರಿ ನನಗ. ನೀವು ಅದಕ್ಕ ತರಾಸ ಮಾಡಿಕೋಬ್ಯಾಡ್ರಿ. ಅವರನ ಲಗ್ಗ ಕರೀರಿ. ಒಂದ ಮಾತ ಕೇಳೇ ಹೋಗ-ತೀನ, ಹಳಬನ್ನ ಕೊಟ್ಟು ಯಾಕ ಕರಸಿದರೂ ಅಂತ. (ಅಸ್ವಸ್ಥವಾಗಿ ಮೇಲೆ

ಕೆಳಗೆ ನೋಡುತ್ತ, ಕೊಡುತ್ತಾನೆ)

ಗೌರಿ : ನಿಮ್ಮನ್ನ ನೋಡಿದರ ನಾ ಮದಲ ಕೂಡಿದವಂದs ನೆಪ್ಪಾಗತೇತಿ. ಅದs ಎತ್ತರಾ, ಅದs ನಡಿಗೀ, ಅದ ಚೆಹರೇ, ಅದs ಧೊಡ್ಡ ಮನಸಾ ! ಕಳ ಕೊಂಡ ಕುತ್ತ ಮ್ಯಾಲ ಯಾನ ಮಾಡೂದ ? ಹೊಟ್ಟಿ ಹೊರಕೊಣ್ಣಾಕ ಯಾರನರ ನೆಂಬೂದs ಅಲ್ಲ ?

ಶಂಕರ : ಅಂದರ ಗೌಡರದು ನಿಮ್ಮದು ಮನಸಿಗೊಲ್ಲದ ಒಗತನಾ ಯಾನ ?

ಗೌರಿ : ( ಕಾಲುಂಗುರಗಳನ್ನು ಸರಿಮಾಡಿಕೊಳ್ಳುತ್ತ ) ಯಾನ ಹೇಳೂದ ಸಾವಕಾರ ? ಯೋನ ಕೆಟ್ಟ ಬುದ್ಧಿ ಬಂದಿತ್ತೋ, ಗುಳದಾಳಿ ಹರಕೊಂಡ ಅವ ನನ್ನ ನಡ ನೀರಾಗ ಬಿಟ್ಟಿದ್ದ. ಹೆಣ್ಣ ಯಾನಾರ ಆಸರ ಇಲ್ಲದ ಬದಕೂದು ಹ್ಯಾಂಗಾ ? ( ಸ್ವಲ್ಪ ತಡೆದು ) ಗೌಡರು ಯಾನೋ ಭುಲತಾಪಿ ತುಂಬಿ ಈ ಊರಿಗೆ ತಂದು ಬಿಟ್ಟರ. ಅವನ ಕಡಿಂದ ಹಿಸೆ ಕುಡಸತೀನಂತ ಪೇಪರದಾಗ ನೋಟೀಸ ಕುಡಸಿದರು. ಹೊಳೀದಂಡಿಮ್ಯಾಗ ತಂದು ಬಿಟ್ಟರೂ ನನ್ನ ನೀರಡಿಕಿ ಹರೀಲಿಲ್ಲ ತೀರ್ರು. ಯಾರ್ಯಾರೋ ತುಂಬಿಕೊಂಡರು, ಕಳಕೊಂಡರು, ಬಡದಾಡಿದರು. ನಾ ಹ್ಯಾಗಿದ್ದೆ ಹಾಗs ಉಳದೆ. (ಬಿಕ್ಕುವಳು)

ಶಂಕರ : ಮರಗಿದರ ಯಾನ ಬಂದಹಾಗಾತ್ರಿ ? ಬಂದದ್ದಕ್ಕೆಲ್ಲಾ ತಲೀ ಕೊಟ್ಟ ಇರಾಕ ಬ್ಯಾಡಾ ? ಅದು ಹೋಗಲಿ. ಇವರ್ಯಾನ ಬರಾವರೋ ಯಾನಿಲ್ಲೋ? ಹೊತ್ತ ಮುಣಗಾಕ ಬಂತು. ದನಾ ಬಂದರ ನೀರ ತೋರಿಸಬೇಕ. ಹೇಳಿ ಕಳಿಸಿದಾಗ ಬಂದರ, ಬಂದವರದ್ಯಾನ ಕಿಮ್ಮತ್ತಿಲ್ಲ ಯಾನ ? ಆಗಾಳೇನs ಹೊಂಟಿದ್ದರ ಪಾಡಾಗತಿತ್ತ. ಮನ್ಯಾಗ ಅಪ್ಪ ಹಾದೀ ನೋಡತಿರತಾನು. ಊಟೋತ್ತು ಕುಂತಿದ್ದs ಅಲ್ಲ.

ಗೌರಿ : ನೋಡತಿದ್ದಾರಾದೀತರಿ, ಮುದಕ ಮನಶ್ಯಾರಾ. ಈಗ ಬಂದಾರು ತಡೀರಿ. ನೀರ ತೋರಸಾವರ ಯಾರಿಲ್ಲಂದ್ರಿ, ಮದಿವಿ ಯಾಕ ಮಾಡಿಕೋಬಾರದು ? ನಿಮ್ಮ ಹಿರ್ಯಾರು ಇನಾ ಆ ವಿಚಾರದಾಗ ಇಲ್ಲ್ಯಾನ ? ... ಅವರು ಬರೂದ-ರಾಗ ನಿಮ್ಮನ್ನ ಇನಾ ಮಾತ ಕೇಳೂದಿತ್ತ. ಕೇಳಲೇನ ?

ಶಂಕರ : (ಹುಬ್ಬುಗಂಟು ಹಾಕಿ ನೋಡುತ್ತ) ಕೇಳರೆಲಾ: ಯಾನ ಕೇಳೂದ್ದತಿ ಎಲ್ಲಾ ಲಗ್ಗ ಮುಗಸರಿ.

ಗೌರಿ : ಹೌದ, ಲಗ್ಗ ಮುಗಸಾಕಬೇಕ. ಮತ್ತ ಯಾನಿಲ್ಲಾ, ಇನ್ನ ಮತ್ತೊಮ್ಮೆ ಎಂದ ಬರತೀರಿ, ಈ ಮನೀಗ? ಒಮ್ಮೆ ನೋಡಿದ್ದs ಸಾಕ, ಜಲಮ ಎಲ್ಲಾ ದಾರಿ ಕಾಯೂ ಹಂಗ ಮಾಡಿದಿರಿ. (ಇನ್ನೂ ಹತ್ತರ ಸರಿದು) ಸಾವಕಾರ, ಮತ್ತ ಎಂದ ಬರತೀರಿ ?

ಶಂಕರ : (ಮೈಯಂತ ಮೈಯೆಲ್ಲ ನಡುಗಿ) ದೂರ ಸರೀರಿ. ಹೊತ್ತು, ಯಾಳೆ ಯಾನ ಖಬರ ಇಲ್ಲ್ಯಾನ? ಇನ್ಯಾಕ ಬರಾಕ ಹೋಗೂನು ಈ ಮನೀಗಿ? ಸಾಕಲಾ,

ಒಮ್ಮೆ ಬಂದದ್ದs ರಗಡಾತ.

ಗೌಡ : (ಒಳಗಿನಿಂದ ಬರುತ್ತ) ಏನೋ ಅದು ಶಂಕರ್ಯಾ ರಗಡಾದದ್ದ? ಏನೋ ಒಳೇ ರಂಗಿಗೆದ್ದು ಮಾತಾಡತಿದ್ದೆಲಾ? ಮುಂದ ಏನ ಕಾದೈತಿ ಅನ್ನೋ ಖಬರ ಇಲ್ಲೇನ? (ಗೌರಿಯನ್ನು ನೋಡಿ) ಏನ ಗೌರಾ? ಏನಾತ? ಏನರೆ ಅಂದನೇನ ಮತ್ತ? ಹೀಂಗ್ಯಾಕ ಕುತ್ತುಸುರು ಬಿಡತೀ?

ಗೌರಿ : (ಸೆರಗಿನಿಂದ ಮುಖವನ್ನೊರಿಸಿಕೊಳ್ಳುತ್ತ) ಯಾನಿಲ್ಲ, ಚಿಕಣಿ ಅಡಿಕಿ-ಎದೀಗೆ ಹತ್ತೀತ್ತ್ರೇಳರಿ. ಬಸಯ್ಯಾ, ಲಗ್ಗ ಕುಡ್ಯಾಕ ನೀರ ತಾ. (ಬಸಯ್ಯ ತಂದ ನೀರನ್ನು ಗಟಗಟ ಕುಡಿಯುತ್ತಾಳೆ)

ಗೌಡ : (ಸಂಶಯದ ಕಣ್ಣಿನಿಂದ ನೋಡುತ್ತ) ಏ ಶಂಕರ್ಯಾ, ನಿನಗ ಹರೇದ ಮಸ್ತಿ ಭಾಳ ಬಂದೈತೇನ ಮಗನ? ಸಿರಿಮಂತರ ಮಗಾ ಅನೂ ಸೊಕ್ಕ ಇನ್ನ ಮುಂದ ಇಲ್ಲಿ ನಡ್ಯಾಣಿಲ್ಲ ತಿಳೀತs? ಹಳಬನ್ನ ಕಳಿಸಿದ್ದೆ ಉಳಿದೀ ಅಂತ ತಿಳಿ. ಇಲ್ಲಾತು ಅಂದ್ರ ಬೇಡಿಸ್ಯೆತ ಸಿಪಾಯನ್ನ ಕಳಸತಿದ್ದೆ.

ಶಂಕರ: (ತೀರ ಸಿಟ್ಟಿನಿಂದ) ಯಾರದೇನ ತಿಂದದ್ದ ಅಲ್ಲಾ, ಉಂಡದ್ದಲ್ಲಾ. ಅವs ಬೇಡಿ ತಿರಗಿ ಬಂದಾವಲಾ!

ಗೌಡ: ತಿಂದದ್ದು ಉಂಡದ್ದು ಯಾರರೆ ಖಪಸಗೊಂಡಾರ. ಆದರ ಮಂದೀ ಹೆಣ-ಮಕ್ಕಳನ ಕೆಟ್ಟಕಣ್ಣೀಲೆ ನೋಡಿದರ ಕಣ್ಣ ಕಿತ್ತಿ ಕುಡಬೇಕಾದೀತು ತಿಳೀತೇನ?

ಗೌರಿ: ಕರಿಸೀರಿ ಅಂತ ಬಂದಾರು. ಜರಾ ಸಮಾಧಾನದಿಂದ ಮಾತಾಡಬಾರದು? ಯಾವಾಗ ಹೋದರೂ ಬರೇ ಟಬರs ಆತಲ್ಲ!

ಗೌಡ: ಯಾಕೋ ಒಳೇ ಮೇಲಗಟಕೊಂಡ ಮಾತಾಡತೀ? ಮತ್ತೇನರ ಮಸಲತ್ತ-ಗಿಸಲತ್ತ ಮಾಡೀರೇನ? ನಾ ಅದನೆಲ್ಲಾ ಕೇಳಾವಲ್ಲ. ನಿಕಾಲೆ ಮಾಡಬೇಕಂತ ಕುಂತಾಗ ಯಾರಪ್ಪಗೂ ಹಿಂದ ಸರಿಯೂದುಲ್ಲ.

ಶಂಕರ: ಯಾರ ಹೆಸರಿಲ್ಲದ, ದಶಿಯಿಲ್ಲದ ಬಾಳೇವ ಮಾಡೋ ನಮಗೇನ ಇದನ್ನ ತಂದ ಹಚ್ಚಿದಿರಿ? ಹೆಣಮಕ್ಕಳ ಮರ್ಯಾದಿ ಬಗ್ಗೆ ನಿಮ್ಮಂತಾವರು ಮಾತಾಡಿದರ ಚಂದ ಕಾಣೂದಿಲ್ಲರಿ. ನಾವೇನದೀವಿ ಅನೂದು ನಮಗೆಲ್ಲಾ ಗೊತ್ತೈತಿರಿ. ಸುಮಾಕ ಬಾಯಿ ಮಾಡಬ್ಯಾಡ್ರಿ.

ಗೌಡ: ಯಾಕಲೇ ನಾಲಿಗಿ ಬಾಳ ಹರಿಬಿಡಾಕ ಹತ್ತಿದಿ? ಅಂದ ನಮ್ಮ ಮನ್ಯಾಗೂ ಹೀಗs ಇದರ ಹಚ್ಚಿದಿ. ಮೊದಲನೇ ಸರೆ ಬ್ಯಾಡಾ ಅಂತ ಸುಮಾಕ ಬಿಟ್ಟರ ಹೆಚ್ಚs ಆತೇನು?

ಶಂಕರ : ಮನ್ನೆ ಇದ್ದಾಕೀನs ಇಂದೂ ಅದಾಳ. ಇಂದೇನ ಆಕಿ ಗಂಡುಳ್ಳ ಗರತಿ ಆಗ್ಯಾಳೇನ್ರಿ? ಮನೀ ಹೆಂಡಂದರ್ನ ಮರಗಲಾಕ ಹಚ್ಚಿ...

ಗೌರಿ : (ನಡುವೆ ಬಾಯಿ ಹಾಕಿ) ನನಗ ಮದಲs ಅನಿಸಿತ್ತ. ಆಕೀನs ಇವಗೂ ಹೇಳಿ

ಕಳಿಸಿದ್ದಾ ಛಾದೀತು. ಇವನೂ ಆಕೀ ಹೆಸರ್ನ ತೊಗೋಬೇಕಂದ್ರ ?

ಶಂಕರ : ಆ ಮಾತಾಯಿಬಿ ಹೆಸರು ನಾ ಒಬ್ಬನ್ನ ಯಾಕ, ಇಡೀ ಊರ ಮಂದೀನ್ ಹಾಡಿ ಹರಸತೈತಿ. ಆಕಿ ತಾಳಿ ಪುಣ್ಯೇದಿಂದನ್ನ ನಿಮ್ಮ ಗೌಡರು ಇನ್ನೂ ನಾಕೊಪ್ಪತ್ತು ಉರಿತಾರು.

ಗೌಡ : ಆಕಿ ಆದರ ಮಾತಾಯಿ. ಈಕೆಂದ್ರ ಏನ ಗಂಡಿಲ್ಲದ ಗಯ್ಯಾಳಿ ಅಂತ ತಿಳಿದೀ ಏನಲೆ, ಸಿಕ್ಕಸಿಕ್ಕಾಂಗ ಕೆಣಕಿ ಮಾತಾಡಾಕ ?

ಶಂಕರ : ಅದ್ಯಾಕರಿ ? ಆಕಿಗೆ ಎಲ್ಲಾ ದಿಕ್ಕ ನೋಕಳೀಕ ಅದಾವಲ್ರಿ. ಅದನ್ನ ನಾ ಯಾಕ ಹೇಳಿ ಕೆಟ್ಟಸ್ತನ ಕಟಿಗೋಬೇಕ್ರಿ ? ಊರ ಮಂದಿನ್ನ ಕೇಳ್ರಿ, ಹೇಳ ತಾರು.

ಗೌರಿ : (ಅಳುತ್ತ) ಇಂತಾ ಘಾರಗೋಳ ಕಡಿಂದ ಕಂಡದ್ದ ಅನಸಲಾಕ ಅಂತ ಊರು ಬಿಟ್ಟು ಕರಕೊಂಡ ಬಂದರ‍್ಯಾನ ? ದೇವರ್ನ ಯಾನಾತು ನನ್ನ ಜಲಮ ! ದಾರೀನೂ ತಪ್ಪಿತು, ಗೌಡನೂ ಕೈ ಬಿಟ್ಟ ಅಂಧಾಂಗ ಆತು ನನ್ನ ಅವಸ್ತಿ.

ಗೌಡ : ಲೇ ಶಂಕರ‍್ಯಾ, ನಾಲಗಿ ತಾಬೇದಾಗ ಇಟಗೋ. ಇಲ್ಲಾಂದ್ರ ಗತಿ ನೆಟ್ಟಗಾ ಗಾಕಿಲ್ಲ. ಗೌಡನ ಕೈ ಗೊತ್ತಿಲ್ಲಂತ ಕಾಣತೈತಿ ನಿನಗ. ಹ್ಯಾಂತ್ಯಾಂತಾವರ್ನ ಹಳ್ಳಾಕೂಡಿ ಹೋಗ್ಯಾರು. ನಿಂದೇನಲೆ ಹುಚಪ್ಯಾಲಿ ? (ಅವನ ಮೈಮೇಲೆ ಏರಿ ಹೋಗುವನು)

ಶಂಕರ : ಗೌಡ್ರ ಕೈಮುಟ್ಟ ಮೈಮುಟ್ಟ ಬಂದರ ಗತಿ ನೆಟ್ಟಗಾಗಾಕಿಲ್ಲರಿ. (ತೋಳೇರಿಸುವನು)

ಗೌರಿ : (ಹೌಹಾರಿ) ಬಿಡ್ರಿ ಅವರ್ನೇನ ಮಾಡಿತೀರಿ ? ಸಣ್ಣಹುಡುಗ. ನೀವು ದೊಡ್ಡಾವರ. ಏರಿ ಹೋಗಲಾಕ ತಿಳೀಬಾರದು ?

[ಗೌರಿ ನಡುವೆ ಬಂದು ಬಿಡಿಸಲು ಹೋದಾಗ ಗೌಡರು ಅವಳನ್ನು ಹಿಂದೆ ಸರಿಸುತ್ತಾರೆ. ಹವಳೆಪ್ಪ ನಡುವೆ ಬಂದು ಇಬ್ಬರನ್ನೂ ಬಿಡಿಸುವನು. ಉಳಿದವರೆಲ್ಲ ದಿಗ್ಭ್ರಮೆಗೊಂಡಂತೆ ನೋಡುತ್ತಿದ್ದಾರೆ. ತಮ್ಮಣ್ಣ ಇನ್ನೂ ನಡಗುತ್ತಿದ್ದಾನೆ]

ಹವಳೆಪ್ಪ : ಸಣ್ಣ ಸಾವಕಾರ, ನೀವು ನಡೀರಿ ಮನೀಗಿ. ನಿಮ್ಮ ಅಪ್ಪಾಅವರ ಬಂದರ ಅವರ ಜೋಡೀಗೆ ಬರಾಕಿರೆಂತ. ಇಲ್ಲೆ ಬಂದರ ಯಾರದೋ ಪಾಪ ಯಾರ ಸುತ್ತೋ ಬಡೀತೇತಿರಿ. ಸುಮಾಕ ನಡೀರಿ ನೀವು. (ಶಂಕರನನ್ನು ಜಗ್ಗಿಕೊಂಡೇ ಹೊರಗೆ ಹೋಗುತ್ತಾನೆ.)

ತಮ್ಮಣ್ಣ : ಇದ್ಯಾನ ಗೌಡರ್ನ ಒಮಾಕಲೆ ಅವನ ಮೈಮ್ಯಾಗ್ನ ಹ್ವಾದರಿ ? ಅಷ್ಟು ಮುಂಧರೀಬಾರದಾಗಿತ್ತು.

ಗೌಡ : (ಇನ್ನೂ ಸಿಟ್ಟಿನಲ್ಲಿಯೇ) ಇನಾ ಎಲ್ಲೆ ನನ್ನ ಕೈಯಾಗಿಂದ ತಪ್ಪಿಸಿಕೊಂಡು ಹೋಗತಾನು? ನಿವೇಲ್ಲಾ ಬಂದರಿ ಅಂತ ಉಳದ. ಇಲ್ಲಾಂದರ ತೋರಸತಿದ್ದೆ ಕೈನ.

ಬಸವಯ್ಯ : ಮುಂದಿಂದ ಏನಾರೆ ಆದೀತ. ಆದರ ಇಂದಿಂದ ಹಾಗsಉಳೀತಲಾ!

ಗೌರಿ : ಇಂದಿಂದ ಯಾನ ಮತ್ತ? ಹೀಂಗ ಹರಮಿ-ಗುರಮಿ ಮಾಡಿದರ ಕೆಲಸ ಆಡಾವ್ಯಾನ? ನಾ ಬಡಕೊಂಡೆ ಒಮ್ಮಾಕಲೆ ಸಿಟ್ಟಿಗೆ ಬರಬ್ಯಾಡ್ರಿ ಅಂತ. ನನ್ನ ಮಾತ ಕೇಳವರ‍್ಯಾರಾ? ಒಳೇ ಹಣ್ಣಿಗೆ ಬಂದು ಬಲ್ಯಾಗ ಬಿದ್ದ ಬ್ಯಾಟಿ ಕಳಕೊಂಡರ ಫಾಯದೆ ಆದೀತ್ಯಾನ? ಸಮಜೂತೀಲೆ ಮಾಡಿದರ ಕೆಲಸ ಆದೀತ.

ತಮ್ಮಣ್ಣ: ಹೌಂದ ನೋಡರಿ, ಗೌರಾ ಅನೂದು ಅಗದಿ ಬರಾಬರಿ ಐತಿ.

ಗೌಡ: ಏನ ಬರಾಬರಿ ಅsತಿ? ರೊಕ್ಕಕ್ಕಾಗಿ ಅವನ ಕಡಿಂದ ಹೀಂಗ ಅನಸಗೋ ಅಂತಿರೇನ? ಹಂಗ ಆದರ ಮಾರೀ ಮ್ಯಾಗ ಮೀಸಿ ಯಾಕಿರಬೇಕ? ಅವನ ಚಂಡಮ್ಯಾಗ ಕೈಕೊಟ್ಟ ಇಕಿ ಕಾಲ ಹಿಡಿಸಿದರ ನಾ ಗೌಡ ಖರೆ ಅನ್ನು. ಸುಮಾಕ ಏನರೆ ಮಾತಾಡಿದರ ಆತೇನ?

ಬಸವಯ್ಯ: ಅದ್ಯಾನ ನಿಮಗ ಅಸಾಧ್ಯ ಯಾನರಿ? ಈಗ ಪಾರಾದರ ಮುಂದ ಎಲ್ಲಿ ಹೋಗತಾನು? ಆದರೂ ಯಾನಾತರಿ. ಕುತ್ತ ಮಲಕೋಬೇಕ ಅಂತ ಅಂತೀನರಿ.

ಗೌರಿ: ಬಸಣ್ಣನ ಮಾತೂ ರಾಸ್ತs ಅsತಿ. ದಿನಮಾನ ಮುಂಚಿನುವು ಇಲ್ಲ ಈಗ. ಅದಕ ಒಂತುಸಾ ಸಮಜೂತಿ ಮಾಡಿ ಹೆಜ್ಜಿ ಇಡಬೇಕ. ಮಾಡಿದ ಮ್ಯಾಗ ಮರಗಿದರ ಬಂಧಾಂಗಾತ್ಯಾನ?

ಗೌಡ: ಮುಂದಿಟ್ಟ ಹೆಜ್ಜಿ ಹಿಂದ ತುಗೊಂಡ ಈ ಗೌಡಗ ಎಂದೂ ಗೊತ್ತಿಲ್ಲ. ಕಡದಾನ ಬಸ್ತಾನ ಆಗಬೇಕ. ಆದರೂ ನೀವೆಲ್ಲಾ ಹೇಳತೀರಿ ನೋಡೂಣು. ಏನ ಮಾಡೂದೆಲ್ಲಾ, ಇಂದ ರಾತರ‍್ಯಾಗs ಮುಗಿಸಿಬಿಡಿರಿ. ನಿಮ್ಮದಾಗಲಿಲ್ಲಾ, ಅಂದರ ಹೇಳಿರಿ. ಆಮ್ಯಾಗ ನಾ ಏನ ಮಾಡೂದು ಮಾಡತೀನ. ಏ ಬಸಯ್ಯಾ, ನೋಡ ಆ ಮುದೋಡ್ಯಾ ಇನಾ ಬರಲಿಲ್ಲ! ಮುಕಾಟಲೆ ಬರತಾನೋ ಇಲ್ಲೋ ಕೇಳಿ ಬಾ.

[ಇಷ್ಟರಲ್ಲಿ ಮಲ್ಲೇಶಿ ಹೊರಗಿನಿಂದ ಬರುತ್ತಾನೆ. ಅರವತ್ತು ವರ್ಷಕ್ಕೆ ಮೇಲ್ಪಟ್ಟು ವಯಸ್ಸಿರಬೇಕು. ತಲೆಯ ಮೇಲೆ ಹಡಿಗೆರುಮಾಲು, ಕೈಯಲ್ಲಿ ಊರೆಗೋಲು, ಮುದುಕನಾದರೂ ನಡುಬಾಗಿಲ್ಲ, ಮುಟ್ಟಿನ ಸುಳಿವು ಬಿಳಿಯ ಜೊಂಡುಮೀಸೆಯಲ್ಲಿ ಕಂಡರೆ ಕಾಣಬೇಕು. ಶಂಕರನದೆ ನಿಲುವು, ನಡಿಗೆಯ ರೀತಿ ಎಲ್ಲಾ. ಮಾಸಿದ ಬಟ್ಟೆಗಳಿವೆ]

ಬಸವಯ್ಯ : (ಹಾಸಿದ್ದ ಕಂಬಳಿಯನ್ನು ಸರಿಮಾಡುತ್ತ) ಬರ‍್ರಿ ಮಲ್ಲೇಶಪ್ಪಣ್ಣಾ, ಮ್ಯಾಗೆ ಬರ‍್ರಿ. ಒಳೇ ಹೊತ್ತಮಾಡಿ ಬಂದಿರೆಲ್ಲ! ಥೆಂಜೀಮಾಡಿ ನೀವು ಹೊರಗೆ ಬೀಳವರಲ್ಲಾ, ಅದಕ ಕೇಳಿದ್ನಿ. ಆತು ಬಂದ್ರಿ, ಛಲೂ ಆತ. ಗೌಡರು ಈಟೊತ್ತನಾ ನಿಮ್ಮ ಹಾದೀನ ನೋಡತಿದ್ದರ.

**ಮಲ್ಲೇಶಿ :** (ಮುಖವನ್ನು ತೀರ ದಿಟ್ಟಿಸಿ ನೋಡುತ್ತ) ನೀ ಇಲ್ಲೆ ಯಾಕಲೆ ಹುಡುಗಾ? ನಮ್ಮ ಕಲ್ಲಗಸಿ ಬಸನಿಂಗನ ಮಗ ಅಲ್ಲೇನ ನೀ. ಪಾಡಾತು ಬಿಡು. ಅಲ್ಲಲೇ, ಗೌಡ ಯಾಕ ಹಾದೀ ನೋಡತಾನು ನಂದು? ತ್ವಾಟದಿಂದ ಮನೀಗೆ ಬರೂದ ರಾಗ ನಮ್ಮ ಶಂಕರ್‍ಯಾ ಇಕಡೆ ಹೋಗ್ಯಾನ ಅಂದ್ರು ಅಂತ ನಾ ಬಂದೆ. ಎಲ್ಲ್ಯದಾನ ಶಂಕರ್‍ಯಾ?

**ಗೌರಿ :** (ಮುಂದೆ ಬಂದು) ಬರ್‍ರಿ ಸಾವಕಾರ್‍ರ ಖುಂಡರ್‍ರಿ. ನಾನೇ ನಿಮ್ಮ ಮನೀತಕ್ಕಾ ಬರಬೇಕೂ ಅಂತ ಮಾಡಿದ್ನಿ. ನೀವೇ ಇಲ್ಲೀಮಟಾ ಬಂದದ್ದು ಭಾಳ ಛಲೂ ಮಾಡಿದ್ರಿ. ಗೌಡರು ಮತ್ತ ಸರಪಂಚರು ನಿಮ್ಮ ಸಣ್ಣ ಸಾವಕಾರ ಮ್ಯಾಗ ಭಾಳ ಸಿಟ್ಟಿಗೆ ಬಂದಾರು. ನೀವು ಹಿರ್‍ಯಾರು, ನಿಮ್ಮ ಕಿವೀಗೇ ಮುಟ್ಟೋದು ಪಾಡ. ಅವರ್‍ಯಾನರಿ ಹರೇದವರಾ. ಭರ್‍ರನ ಬಂದರ, ಭರ್‍ರನ ಹ್ವಾದರ.

**ಮಲ್ಲೇಶಿ :** ಅಂದರ, ನಮ್ಮ ಶಂಕರ್‍ಯಾ ಇಲ್ಲಿ ಬಂದು ಹ್ವಾದನೇನ? ಮನಿಗೇ ಹೋಗಿರ ಬೇಕು. ನಾ ಹೋಗತೀನ ಹಾಗಾರ.

**ಗೌಡ :** ಏ ಮುದಕಾ ಎಲ್ಲಿ ಹೋಗತೀ? ಹಳಬನ್ನ ಕೊಟ್ಟ ಕರಿಸಿದರ ತ್ವಾಟಕ್ಕ ಓಡಿ ಹೋಗಿ ಕುಂತೇನ? ಖುಂಡ್ರ ಇಲ್ಲಿ. ನಿಂದು ಉಂಡದ್ದು ತಿಂದದ್ದು ಇಲ್ಲೆ ಕಾರಿಸಿಬಿಡತೇನ.

**ಮಲ್ಲೇಶಿ :** (ಸಿಟ್ಟನ್ನೆಲ್ಲ ನುಂಗಿಕೊಂಡು) ನಾಲಿಗೀ ಬಿಗಿಹಿಡಿದು ಮಾತಾಡೋ ಗೌಡಪ್ಪಾ! ನಾ ಯಾನ ನಿನ್ನ ಗೌಡಿಕಿ ಹೊಲದಾಗ ಪಾಲಾ ಬೇಡಿಲ್ಲ, ಹೀಂಗ ಏರಿ ಬರಾಕ. ನೀ ಸಣ್ಣಾವಿದ್ದಾಗಿಂದ ನೋಡತೇನು, ಇದೇ ತುಂಟತನಾ. ದೊಡ್ಡಾವಾದ ಮ್ಯಾಗ ಬುದ್ಧಿ ಬಂದೀತು ಅಂದರ ಮತ್ತ ಅದನೇ ನಡಿಸೀಯಲಾ. ಮೂಗ ಹ್ವಾದರೂ ಮೂಗಿನ ಹೊಳ್ಳಿ ಅದಾವ ಅಂತ ಅನಾವ ನೀ. ನಾ ಏನ ನಿನ್ನ ಹಾಗ ಮಂದಿ ಮನೀಮ್ಯಾಗ ಬೆಂಕಿ ಇಟ್ಟು ಘೆಳಸಿಲ್ಲ ತಿಳೀತೇ? ರಟ್ಟೀಮುರದು ಘೆಳಿಸಿದ್ದನತಿ.

**ತಮ್ಮಣ್ಣಿ :** ಸಾವಕಾರ್‍ರ, ಬಾಯಿ ತೊಳಕೊಂಡು ಮಾತಾಡ್ರಿ. ಯಾರಿಗೆ ಯಾನಂತೀರಿ ಖಬರು ಅದತ್ಯಾನ ನಿಮಗ? ರೊಕ್ಕದ ಧಿಮಾಕಿನ್ಯಾಗ ನಿಮ್ಮ ಮಗಾ ಇನ್ನೊಮ್ಮೆ ಹಿಂಗ ಮಾಡಿದರ ಬಿಕ್ಕಿ ನೀರ ಬೇಡಲಾಕಿಲ್ಲ ತಿಳೀತೇ?

**ಗೌರಿ :** ತಮ್ಮಣ್ಣಿ ಹೇಳೂದು ಖರೆ ಅದತರಿ. ಇಂದಿಂದ ಇಷ್ಟಕ್ಕೇ ಮುಗಸರಿ. ಇನ್ನೊಮ್ಮೆ ಮಂದೀ ಹೆಂಗಸರಿಗೆ ಹಂಗ ಮಾಡಬಾರದಂತ ಬುದ್ಧಿ ಹೇಳರಿ ನಿಮ್ಮ ಸಣಸಾವಕಾರ್‍ರಿಗೆ. ಹೌಂದರಿ, ಮುಂದ ಆಗಾವರಾ, ಹೋಗಾವರಾ. ಒಮ್ಮೆ ಹೆಸರ ಕೆಟ್ಟಮ್ಯಾಗ ಮುಂದ ಯಾನ ಕೊಟ್ಟರ ಬಂದೀತ ಹೇಳರಿ? ನಿಮ್ಮಂತಾವರ ಮನೆತನಕ್ಕ ಆ ನಡತಿ ಛಲೂ ಅಲ್ಲರಿ.

**ಗೌಡ :** ಅವ ಯಾಕ ಹೇಳತಾನು? ಇವಾ ರೊಕ್ಕದ ಘಮೆಂಡ್ಯಾಗ ಅದಾನು.

ಅವಗ ಇವಂದ್ಽ ಘುಸಲತ್ತ ಇರಬೇಕೂ ಅಂತ ನಿನ್ನ ಕೈಮುಟ್ಟಿ ಮೈಮುಟ್ಟಿ ಬಂದ.

ತಮ್ಮಣ್ಣಿ: ಅದಕ ಮದಲ ಈಗ ಅಬರೂ ತುಂಬಿಕೊಡ್ರಿ. ಆಮ್ಯಾಗ ಮುಂದಿಂದ ನೋಡೂನಂತ.

ಮಲ್ಲೇಶಿ: ಲೇ ತಮ್ಮ್ಯಾ! ಯಾಕಲೆ, ಯಾರಿಗಿ ಯಾನ ಅನಬೇಕು ತಿಳಿಯಾಣಿಲ್ಲೇನಲೆ? ನನಗ್ಽ ಬುದ್ಧಿ ಹೇಳೋಹಂಗ ಆದ್ಯಾನಲೆ? ನೀ ಸರಪಂಚ ಆದರ ನಾಳೆ ನೋಡತೀನ.

ಗಾಡ: ಏ ಯಾರಿಗಿ ತಮ್ಮ್ಯಾ ಅಂತ ಅಂತೀ? ಅವಾ ಸರಪಂಚ ಅದಾನು. ಅಟ್ಽ ಅಲ್ಲ, ನಿನ್ನ ಎದಿಮ್ಯಾಗ ಕುತ್ತ ಆರಿಸಿ ಬಂದಾನು. ಸುಮಾಕ ಅಲ್ಲ, ತಿಳಿತೇನ?

ಮಲ್ಲೇಶಿ: ಹೆಂಗಸಿನ ಮುಂದ ಮಾಡಿ ಆರಿಸಿ ಬಂದ ಗಂಡಸಿಂದು ಗೊತ್ತೈತಿ ಬಿಡ. ಸರಪಂಚ ಆದರ ಯಾನ ಖೋಡ ಮಾಡಿದವ್ಯಾನ? ಯಾರ ಬೇಕಾದವರು ಎಲ್ಲಿ ಬೇಕಾದಲ್ಲಿ ಸರಪಂಚಕಿ ನಡಿಸಿದರ ಕೇಳಬೇಕ್ಯಾನ? ಬಂದ ನ್ಯಾಯಾ ನಿಕಾಲೆ ಮಾಡಬೇಕೋ, ಯಾನ ಇಲ್ಲದ ನ್ಯಾಯಾ ಹುಡುಕಿ ತಗೀಬೇಕೊ ಹುಟ್ಟಿ ಅರವತ್ತು ವರಸ ಆದವೂ, ಹಿಂತಾ ಪರಸಂಗ ಕಂಡಿದ್ದಿಲ್ಲ.

ಗೌರಿ: ಸಾವುಕಾರ್ರ, ನಾ ಹೇಳೂದರ ಽಟು ಕೇಳಿತೀರಿಲ್ಲೊ? ನಿಮ್ಮ ಮಗಾ ಸಾವು-ಕಾರ ಇದ್ದಿದ್ದಾರ. ಆದರ ಹೆಂಗಸೂರ ಮೈಕೈತನ ಬರೂದಂದ್ರ? ಽಟರಾಗ ನೀರಿಗಂತ ಮಂದಿ ಬಂತು, ಛಲೂ ಆತ. ಇಲದಿರಕ ಏನಾದೀತು ಹೇಳರಿ? ಮನ್ನಿ ಗೌಡರ ಮನ್ಯಾಗೂ ಹಾಗ್ಽ ಮಾಡಿದರ. ಯಾನೋ ದೊಡ್ಡ ಮನೆ-ತನದ ಹುಡುಗಾ, ವಯಸ್ಸಿನ್ಯಾಗ ಅದಾರ ಬಿಡ, ಅಂತ ಸುಮ್ಮಗ್ಽ ಇದ್ದೆ. ಆದರ ಅದು ಹೆಚ್ಚಾಗಬಾರದು ನೋಡರಿ. ಅದಕಂತ ಗೌಡರು ಆಗಳೇನ ಕರಸಿದ್ದರು. ಏನೋ ಹುಡುಗಾ ಅಂತ ಸಿಟ್ಟಿ ಮಾಡಿದರ ಅವರಿಗೇ ಇದರ ಹಚ್ಚೂದ್ಯಾನ?

ಮಲ್ಲೇಶಿ: ಏ ಗೌರವ್ವಾ, ನೀನೂ ಈ ಮುಸಲತ್ತಿನ್ಯಾಗ ಅದೀ ಯಾನ? ನಮ್ಮ ಹುಡುಗನ ಗುಣಾ ನನಗ ಗೊತ್ತಿಲ್ಲ್ಯಾನ? ಬೇಕಂದರ ಕಾಡಮಿಕಾ ಅಟ್ಟಿಸಿ ಕೊಂಡು ಹೋದಾನು, ಆದರ ಇಂತಾ ಮಾತಿನ್ಯಾಗ ತನ್ನ ನೆಳ್ಳಿಗೇ ತಾ ಹೆದರಿ ನಡ್ಯಾವಾ!

ಬಸವಯ್ಯ: ಮತ್ತ ನಮ್ಮ ಗೌರವ್ವ ಹಂತಾವರ ಅಂತ ತಿಳದೀರಿ ಯಾನರಿ? ಓಣ್ಯಾಗ ಹೊಂಟರ ಅತ್ತ ಇತ್ತ ನೆದರ ಹಾಯಾಣಿಲ್ಲ ಅವರದು.

ಗೌಡ: ಏ ಮುದಕಾ, ಅದೆಲ್ಲ ಪಂಟಿ ಬಿಚ್ಚಿ ಏನ ಮಾಡೂದ್ಯಾ? ಬಸಯ್ಯ, ಅವಗ ಏನ ಹೇಳೂದ ಹೇಳಲಾ!

ಮಲ್ಲೇಶಿ: ಎಲ್ಲಾರೂ ಕೂಡಿ ಯಾನ ಮುಸಲತ್ತ ಮಾಡೀರೋ, ಯಾನ ಕರೇವಂದ್ರ ನನ್ನ ಮಗಾ ಹಾಗ ಮಾಡ್ಯಾನೋ ತಿಳೀವಲ್ತು ... ಏ ಬಶ್ಯಾ, ನೀವೆಲ್ಲ ಇಷ್ಟ

ಮಂದಿ ಇಲ್ಲಿ ಅದೀರಿ, ಆಕೀಗೆ ಯಾನ ಆಗಬೇಕ? ಆಕಿ ಹತ್ತೂರ ಮುಗಿಸಿ ಹನ್ನೊಂದನೆ ಊರಿಗಿ ಬಂದಾಳ ... ಈಟ ಇದ್ದಾಗಿನಿಂದ ನನ್ನ ಮಗನ್ನ ನಾ ನೋಡಿಕೊಂತ ಬಂದೇನು ... ಮಗಾ ಅಂತ ಹೇಳಿಕೋಬಾರದ, ಆದರ ಬಂಗಾರ ಬ್ಯಾರೇ ಅಲ್ಲಾ ನನ್ನ ಮಗನ ಗುಣಾ ಬ್ಯಾರೆ ಅಲ್ಲಾ. ಅದಕ ಈಟ ಹೇಳತೇನು. ನನ್ನ ಮಗಾ ಮಾಡಿದ್ದs ಇದ್ದರ ಅದು ಕರೆ ಖೊಟ್ಟಿ ಸಿದ್ಧ ಆಗಲಿ. ಅದು ಆತಂದರ ನೀವ್ಯಾಕ, ನಾನs ಕೊಡಲಿ ತೊಗೊಂಡು ಕಡದ ಹಾಕ್ಕೇನ ಅವನ್ನ.

ಗೌಡ : (ರಭಸದಿಂದ ಎದ್ದು ಬಂದು ಅವನ ಕುತ್ತಿಗೆಗೆ ಕೈಹಾಕಿ) ಇನ್ನ ಬಿಡೂದುಲ್ಲ ಬಿಡ. ನಾಳೆ ಆಗೂದ ಇಂದs ದಳಗಲಿ. ಗೌರಾ ಅಂದರ ಏನಂತ ತಿಳದಾನ ? ಆಕಿ ಹೇಳಿದ್ದು ಸಾಲದೇನ ? ಮತ್ತೆ ಕರೆ ಖೊಟ್ಟಿ ಆಗಬೇಕ ?

ತಮ್ಮಣ್ಣ : ಗೌಡ್ರ ....ಗೌಡ್ರ ....ಅಲ್ಲ ತಗೀರಿ. ಸಮಾಧಾನ ಮಾಡಿಕೋರಿ.

ಬಸವಯ್ಯ : (ನಡುವೆ ಬಂದು ಬಿಡಿಸುತ್ತ) ಗೌಡ್ರ, ಗೌರವ್ವಾ, ನೀವಿಬ್ಬರೂ ಒಳ್ಯಾಕ ನಡೀರಿ. ನಾವೆಲ್ಲಾ ಅವರನ್ನ ನೋಡಿಕೋತೇವ. ನಾಕೂ ಯಾಳೇ ಸಮಾ ಇರೂದುಲ್ಲ. ಹೋಗರಿ.

[ಗೌಡರು ದುಮುಗುಟ್ಟುತ್ತಲೇ ಒಳಗೆ ಹೋಗುತ್ತಾರೆ. ಗೌರಿ ಹಿಂಬಾಲಿಸುತ್ತಾಳೆ]

ಬಸವಯ್ಯ : ಖುಂಡರ್ರಿ ಸಾವಕಾರ. ಅವರ್ನ ತೊಗೊಂಡ ಯಾನ ಮಾಡತೀರಿ ? ಗೌಡರು ಸಿಟ್ಟಿನ್ಯಾವರದಾರಾ ಅನೂದು ಗೊತ್ತs ಅsತಿ. ಸ್ವಲ್ಪ ಸಮಾಧಾನ ಮಾಡಿಕೋರಿ. ಇನ್ನ ನಿಮ್ಮ ಮಗಾ ಅರೆ ಯಾನ, ಹುಡಗ-ಬುದ್ಧಿ, ಯಾನಾರ ಮಾಡಿದ್ದಾನಾದೀತ. ಸುಮ್ಮಾಕ ಸನಮಂತ ಮಾಡಿ ಮುಗಿಸಿಬಿಡೂದು ಪಾಡ. ಮತ್ತ ಫಿರ್ಯಾದಿ, ಅದು ಇದು ಅಂತ ಎದ್ದ ಲಗಾಟ ಹತ್ತೀತ. ಮುಪ್ಪಿನ್ಯಾಗ ಅದನ್ಯಾರ ಹೇಳಿದ್ದಾರ್ರಿ ? ಯಾಕರಿ ಸರಪಂಚರ ?

ತಮ್ಮಣ್ಣ : ಹೌಂದ ! ಮತ್ತ ನಿಮ್ಮಂತಾ ಅಬರೂದಾರರು ಪಂಚಗಟ್ಟಿ ಏರಬಾರದರಿ. ಈಟ ದಿನಾ ಮಾನದಿಂದ ಬದಕ ಮಾಡಿ ಕೆಟ್ಟ ವಾಯನಿ ಹೊರೂದಂದ್ರ ನಿಮಗ ಆಗಾಣಿಲ್ಲರಿ. ಈಗs, ಇನಾ ಯಾರಿಗೂ ಗೊತ್ತಿಲ್ಲದಾಗ ಮುಗಿಸಿ-ಕೊಂಡು ಬಿಡ್ರಿ. ನಾಳೆ ನಾಕ ಮಂದಿ ಬಾಯಾಗ ಈ ಸುದ್ದಿ ಬಿತ್ತು ಅಂದರ ಯಾನ ಉಳೀತರಿ ? ಅದಕ ಬಸಯ್ಯ ಹ್ಯಾಂಗ ಹೇಳತಾನ ಹಂಗ ಮುಗಿಸಿ-ಬಿಡ್ರಿ.

ಮಲ್ಲೇಶಿ : ಅಂದ್ರ ಅಂತೀರ್ರ್ಯಾನ ನನಗ ಒಂದೂ ತಿಳೀವಲ್ತು. ನಾ ಯಾಕ ಕಚೇರಿಕಟ್ಟಿ ಏರಬೇಕ ?

ತಮ್ಮಣ್ಣ : ಹಾಗಾದರ ನಾಳೆ ಗೌರವ್ವ ಅಬರೂಲುಕಸಾನಿ ಫಿರ್ಯಾದಿ ಕೊಟ್ಟಳಂದರ ಆವ್ಯಾಗ ಯಾನ ಮಾಡವರಾ ? ಒಮ್ಮೆ ಈ ಪ್ರಕರಣ ಕಚೇರಿಕಟ್ಟಿ ಕಂಡರ

ತೀರ್ಥಲ್ಲ. ಇದ್ದ ಕೆಲಸಾ ಅಲ್ಲೇ ಬಿಟ್ಟು ಅದರ ಬೆನ್ನ ಹತ್ತೂದ. ಅದಕ ರಾಜೀಲೆ ಅಪಸಾತಿನ್ಯಾಗ ಮುಗಿಸಿಕೊಳ್ಳೂದು ಪಾಡ.

ಮಲ್ಲೇಶಿ : ಅಂದರ ಅದಕ್ಕ ಪುರಾವೆ-ಅರಾವೆ ಯಾನ ಬ್ಯಾಡ್ಯಾನ? ಹಂಗs ಶಿಕ್ಷಾ ಕುಡಾವರ್ಯಾನ?

ಬಸವಯ್ಯ: ಸಾಕ್ಷಿ ಪುರಾವೇದ್ದ ತರಾಸ ಬ್ಯಾಡಂತ ಸರಕಾರ ಪಂಚಗಟ್ಟಿ ಮಾಡ್ಯಾರಿಲ್ಯಾನ? ಮತ್ತ ನೀವೂ ಇಲೆಕ್ಯನಕ ನಿಂತಿದ್ದರೆಲ್ಲ? ಗೊತ್ತಿಲ್ಲಾನ?

ತಮ್ಮಣ್ಣ : ಅದನ್ನೆಲ್ಲ ಯಾಕ ಹೇಳತೀಯೋ ಬಸಯ್ಯಾ ಅವರಿಗಿ? ಇಲ್ನೋಡ್ರಿ ಮಲ್ಲೇಶಪ್ಪಣ್ಣ, ಅದೆಲ್ಲ ಹೊಟ್ಟಿ ಕುಟ್ಟಿದರ ಯಾನ ಭಂಧಾಗಾತಾ? ನಮ್ಮ ಗೌರವ್ವ ಸುಳ್ಳ ಹೇಳತಾಳ್ಯಾನ? ಒಂದ ಯಾಳೇ ಸುಳ್ಳ ಅಂತ ಕಬೂಲ ಮಾಡೂನು. ಮುಂದ ಆಕಿ ನಾಕ ಮಂದ್ಯಾಗ ನಿಮ್ಮ ಅಬರೂ ತಗದರ ಆಗ ಯಾನ ಮಾಡವರಾ? ಆವ್ಯಾಗ ಊರಾಗ ತಲಿಯೆತ್ತಿ ಬಾಳೇವ ಮಾಡೂದs ಬಿರಿಯಾದೀತು. ಮನೀಗೆ ಹೋಗರಿ, ಮತ್ತ ಮುಕಾಟಲೆ ತಂದ ಹಚ್ಚಿಬಿಡಿರಿ. ಬಸಯ್ಯಾ ಹೋಗ ಅವರ ಜೋಡೀಗಿ.

[ವಿವರ್ಣವಾದ ಮುಖದಿಂದ ಮಲ್ಲೇಶಿ ವಿಚಾರಮಗ್ನನಾಗುತ್ತಾನೆ. ತಮ್ಮಣ್ಣಿ, ಬಸವಯ್ಯ ಇಬ್ಬರೂ ಒಬ್ಬರನ್ನೊಬ್ಬರು ನೋಡಿ ಅರ್ಥಪೂರ್ಣವಾಗಿ ನಗುತ್ತಾರೆ.]

ಬಸವಯ್ಯ : ಯಾಕಾ, ವಿಚಾರ ಯಾನ ಮಾಡಿತೀರಿ? ಇನಾ ಭರೋಸ ಆಗಿಲ್ಲ ಯಾನ? ನಿಮ್ಮ ಮಗಾ ಗೌಡರ ಮನೀಗಿ ಒಮ್ಮೆ, ಗೌರಾನ ಮನೀಗಿ ಒಮ್ಮೆ ಬಂದಿದ್ದ. ಇಷ್ಟs ಸಾಕಾಗಿಲ್ಲ್ಯಾನ? ಯಾನ ಕೇಳಿದ್ದಕ್ಕೂ ಹರಮಿ ಗುರಮಿ ಉತ್ತರಾ ಕೊಟ್ಟ. ಬೇಕಾರ ಕೇಳ ಹೋಗರಿ. ರೊಕ್ಕ ಹೆಚ್ಚಿಂದೋ, ಯಾನ ಅಬರೂ ಹೆಚ್ಚಿಂದೋ? ಪಾಚಸೇ ಅಂದರ ನೀಮಗ ಭಾಳ ಯಾನ? ಊರ ಮುಂದ ಹೋಲಾ ಐತ್ಯಲ್ಲ, ಅದರ ಒಂದ ಮೂಲ್ಯಾಗs ಅಟಿ ಬೆಳದೀರಂತ!

ಮಲ್ಲೇಶಿ : ಪಾಚಸೇ? ಬಸಯ್ಯಾ ಅವೇನ ಹುಣಸೀಕಪ್ಪ ಅಂತ ತಿಳದೀ ಯಾನ? ನನಗ ರೊಕ್ಕದ್ದ ಯಾನ ದದಾತಿ ಇಲ್ಲ ತಗಿ. ಆದರ ನನ್ನ ಮಗಾ ಯಾನ ಮಾಡಿ ಕುತ್ತಾ ಅಂತ ಹೊಟ್ಟೆಬ್ಯಾನಿ ಹತ್ತಿತ. ಎಂತಾ ಮರ್ಯಾದಸ್ಥ ಮನೆತನ! (ಅವಡುಗಚ್ಚಿ) ನಿಮ್ಮಂತಾವರ ಇದರಿಗೆ ಸೂರಿ ಆಗಿ ಹೋತ. ನಿಮ್ಮ ಗೌಡಾ ಕಡೀಕೂ ಮಣ್ಣ ತಿನಿಸಿದ .... .... ಒಂದಕ್ಕೊಂದ ಹತ್ತಿ ಹೊಲಾ ಇದ್ದದ್ದs ತೆಪ್ಪಾತ .... .... ಯಾವ ದ್ವಾಪಾರದ ನ್ಯಾಯೋ, ಇಂದ ಮನೀ ಹೊಕ್ಕಿತ .... ಯಾನ ಹಂತಾದ ಪಾಲ ಬೇಡಿದ್ದೆ ನಾ? .... (ನೆನೆಯುತ್ತ) ಅರವತ್ತರ ಅರವುಮರವಿನ್ಯಾಗ ಒಂದೂ ನೆಪ್ಪ ಆಗಾಣಿಲ್ಲ .... ಯಾನ ಮಾಡೂದಾ! (ಒಮ್ಮೆಲೇ ಎಚ್ಚತ್ತವನಂತೆ) ಬಸಯ್ಯಾ ರೊಕ್ಕ ಅಂದರ

ಫುಕಟ ಬಂದಾವಂತ ತಿಳದೀ ಯಾನ? ಪಾಚಶೇ ?

ತಮ್ಮಣ್ಣಿ : ಮತ್ತ ಗೌರಾನ ಅಬರೂ ಅಂದರ ಹಾದೀಮ್ಯಾಗ ಬಿದ್ದೈತಿ ಅಂತ ತಿಳ-ದೀರ್ಯಾನ? ಒಂದ ಸಾವಿರ ಹೇಳೂದ್ಕ, ಅದನ ಬಿಟ್ಟ ಪಾಚಸೇ ಕೇಳ್ಯಾನ. ಯಾನ ಕುಡಾವ್ರೋ, ಇಲ್ಲಾ ನಮ್ಮ ಕಾಯಕಾ ನಡಸಂತೀರ್ರ್ಯೊ? ಲಗ್ಗ ಹೇಳರಿ. ಇಂದ ರಾತರ್ಯಾಗ ಎಲ್ಲಾ ನಿಕಾಲೆ ಆಗಾಕ್ಕ ಬೇಕ. ಲಗ್ಗ ಒಡ-ನುಡೀರಿ. ಹತ್ತ ಮಾತಾಡಾಕ ನಮುಗೂ ಪುರಸೊತ್ತಿಲ್ಲ.

ಮಲ್ಲೇಶಿ : [ನಿಟ್ಟುಸಿರುಗರೆದು] ಹುಂ ! ಶಿವ ....ಶಿವ.... ಆತು ಮನೀಕಡೆ ಹೋಗಿ ಬರತೀನು. [ಮೆಲ್ಲಗೆ ಏಳುವನು]

ತಮ್ಮಣ್ಣಿ : ಭೆಂಜಿ ಯಾಳೇ, ಹೊತ್ತು ಮುಣಗಾಕ ಬಂದೈತಿ. ಮುದಕ ಮನಶ್ಯಾರಾ, ಕಣ್ಣ ಕಾಣಸತಿರಾಕಿಲ್ಲಾ. ಬಸಯ್ಯನೂ ಬರತಾನ ನಿಮ್ಮ ಸಂಗಾಟ್ಲೆ. ಮತ್ತ ಹಗರಕ ನಡೀರಿ.ಬಸಯ್ಯಾ ಸ್ವಲ್ಪ ಕೈಹಿಡಿ ಯಾನ ಮಾಡೂದಾ?... ಹೊತ್ತ ಬಂಧಾಂಗ ಹೋಗೂದ್ಕ ಅಲ್ಲಾ ?

## ಅಂಕ ೩

[ ಗೌರಿಯ ಮನೆಯ ಪಡಸಾಲೆ. ಗೋಡೆಗಿರುವ ಲ್ಯಾಂಪಿನಲ್ಲಿ ಈಗ ದೀಪಹಚ್ಚಿದೆ. ರಾತ್ರಿ ೯ ಗಂಟೆಯ ಹೊತ್ತಾಗಿದೆ. ತೆರೆಯೆದ್ದಾಗ ರಂಗದ ಮೇಲೆ ಯಾರೂ ಇರುವದಿಲ್ಲ. ಸ್ವಲ್ಪ ಹೊತ್ತಾದ ಮೇಲೆ ಒಳಬಾಗಿಲಿನಿಂದ ಗೌರಿ ಹೊರಗೆ ಬರುತ್ತಾಳೆ. ತಲೆಬಾಗಿಲಿನಿಂದ ಹೊರಗೆ ಹಣಿಕಿಹಾಕಿ ನೋಡುತ್ತಾಳೆ. ಯಾರೋ ಬಂದ ಸುಳಿವು ಹತ್ತಿ ಕೂಡಲೆ ಒಳಗೆ ನುಸುಳುತ್ತಾಳೆ. ಬಸವಯ್ಯ ಕಾಲಮುರಿ ಸದ್ದು ಮಾಡುತ್ತ ಪ್ರವೇಶಿಸುತ್ತಾನೆ.]

ಬಸವಯ್ಯ: ನನಗ ಅವರಗುಡಾ ಹೋಗಿ ಬಾ ಅಂದವ್ರ ತಾವಿಲ್ಲಿ ಯಾರೂ ಇಲ್ಲಲಾ! ಒಳ್ಯಾಕಡೆ ಅದಾರೋ ಯಾನ ಕಡದಾಡಿ ಎಲ್ಲಿಗರೆ ಹ್ವಾದರೋ! ಗೌರಾ, ಏ ಗೌರಾ... ಅದಾರೇನ ಒಳ್ಯಾಕ?

ಗೌರಿ: (ಒಳಗಿನಿಂದ) ಬರೇ ಹೊರಗsು ಕುತ್ತರ ಹ್ಯಾಂಗ ನಡದೀತ? ಊಟಾ ಉಡಿಗಿ ಬ್ಯಾಡ್ಯಾನ? ನೀ ಒಬ್ಬಾವಾ ಚಾ-ಕಾರಾ ತಿಂದು ಹೊಟ್ಟಿ ತುಂಬಿಕೊಂತೀ ಅಂತ, ಉಳದವರು ಹಂಗsು ಯಾನsು? ನೀ ಒಬ್ಬನsು ಬಂದಿದ್ಯೋ ಯಾನ ಅವರೂ ಬಂದರೋ?

ಬಸವಯ್ಯ: ಈ ಬಸವಣ್ಣಿ ಎಂದಾರ ಹಿಡದ ಕೆಲಸಾ ಬಿಡಾವ ಯಾನ? ಅವರನ ಮುಂದ ಹಕ್ಕೊಂಡsು ಬಂದೀನ. ಒಳ್ಯಾಕ ನೋಡಿ ಬರತೀನಿ, ನಿಂದರ್ರಿ ಅಂತ ಹೇಳಿ ಬಂದೆ.

ಗೌರಿ: (ಒಳಗಿಂದ) ಕೈತೊಳಕೊಂಡ ಬರತೀನ, ಒಂದ ಜರಾ ಕುಂದ್ರ್ರ ಅಂತ ಹೇಳ ಅವರಿಗಿ. ಆಗಾಳೆ ಕಂಡಾಪಟ್ಟಿ ಸಿಟ್ಟು ಮಾಡಿಕೊಂಡ ಹೋಗಿದ್ದರ, ಬರ, ತಾರೋ ಇಲ್ಲೋ ಅಂತ ತಿಳದಿದ್ದೆ. ಬರದsು ಎಲ್ಲಿ ಹೊಕ್ಕಾರು ಬಿಡ!

ಬಸವಯ್ಯ: ಸಂಗಾಟೆ ಯಾರ ಹೋಗಿದ್ದರು, ಬರದsು ಯಾನ ಮಾಡತಾರ?

[ತಲೆಬಾಗಿಲ ಹೊರಗೆ ಹೋಗಿ ಮಲ್ಲೇಶಿಯನ್ನು ಕರೆತರುತ್ತಾನೆ.]

ಗೌರಿ: (ಒಳಗಿನಿಂದ ಬಂದು) ಅಂದರ ಇವರ ಬಂದರಂದ್ಯಾ? ನಾ ಅವರ ಬಂದ ರ್‍ಯಾನೋ ಅಂದೆ. ಬಸಣ್ಣಾ ಅವರನೂ ಕರಕೊಂಡ ಬರಬಾರದಿತ್ತsು?

ಮಲ್ಲೇಶಿ: ಅವಂದ್ಯಾನ ದಗದ ಅತಿsು? ನಾ ಒಬ್ಬ ಬಂದೀನ ಅಲ್ಲಾನ?

ಗೌರಿ: ಕತ್ತಲಿ ಹೊತ್ತಾ. ಮುದುಕ ಮನಶ್ಯಾರು. ಬರೂ ಮುಂದ ಬಸಯ್ಯ ಸಂಗಾಟೆ ಇದ್ದಾ. ಹೋಗೂ ಮುಂದ ಸಂಗಾಟೆ ಯಾರಾರೆ ಬೇಕಂತ ಅಂದ್ನಿ, ಉಂಡ ಬಂದಿರೋ, ಯಾನ ಹಂಗsು ಕರಕೊಂಡು ಬಂದ್ನೋ ಬಸಯ್ಯಾ? ಹೊತ್ತ ಭಾಳ ಆತ, ಮತ್ತ ತಿರುಗಿ ಯಾವಾಗ ಹೋಗೂದಾಕ್ಕೈತೋ ಏನೋ?

ಮಲ್ಲೇಶಿ: ಅವ ಯಾನ ಒಳೇ ಗಡಿಬಿಡಿ ಮಾಡತಿದ್ದ. ನಾ ಮನೀಗೆ ಹೋಗೂದರಾಗ

ಹುಡುಗನೂ ಉಣ್ಣಾಕ ಕೂತಿದ್ದ. ಊಟಾ ಮಾಡೇ ಹೋದರಾತ ಅಂತ ಇಬ್ಬರೂ ಕೂಡೆ ಉಂಡವರ ಇಕಡೆ ಬಂದೀವು. ಅವ ಅಕಡೆ ತ್ವಾಟಕ್ಕ ಹ್ವಾದಾ, ನಾ ಇಕಡೆ ಬಂದ್ನಿ. ಈಗ್ಯಾನ ಅಂತಾ ಸರಿರಾತ್ರಿ ಅಲ್ಲ ಯಾನಲ್ಲ ! ಸುಮ್ಮಗ ಸೂಟಿಮ್ಯಾಗ ದಾರಿ ನೋಡಕೊಂತ ಹ್ವಾದರಾತು ! ಯಾಕೋ ಅವನ ಮ್ಯಾಗ ನಿನ್ನ ಕಣ್ಣ ಭಾಳ ಕಾಣತತಿ.

ಗೌರಿ : ಹಂತಾದೇನಿಲ್ಲ ! ಇಲ್ಲೆ ಕರಕೊಂಡ ಬಂದಿದ್ರ ದೊಡ್ಡಾವ್ರ ಸಮಕ್ಷಮ ಮಕ್ಕಳ ಹಿಂಗ ಮಾಡಬಾರದಂತ ಯಾಡ್ಡ ಭುದ್ದಿ ಮಾತಾ ಹೇಳಬೇಕಂತಿದ್ದೆ. ಅದಕ ಯಾಕ ಕರಕೊಂಡ ಬರಲಿಲ್ಲಾ ಅಂತ ಅಂದ್ನಿ.

ಮಲ್ಲೇಶಿ : (ನಿಟ್ಟುಸಿರುಗರೆಯುತ್ತ) ಹುಂ ! ನಿನ್ನ ಕಡಿಂದ ಬುದ್ದಿ ಕಲಿಸಿಗೊಳ್ಳೋದು ಒಂದು ಉಳದ್ಯೆತಿ. ಇನಾ ಮುಂದ ಕಾಲ ಹ್ಯಾಂತ್ಯಾಂತಾವು ಬರತಾವೋ ಯಾರಿಗೆ ಗೊತ್ತ ? ಈಟರಾಗs ಕಣ್ಣು ಮುಚ್ಚಿದ್ರ ಪಾರಾಗತಿದ್ದೆ ನಾ. ಹುಟ್ಟಿ-ದ್ಯಾಗಿಂದ ಈಟ ದಿನಾ, ಶೀಲಕ್ಕ ಕಪ್ಪುಕಲಿ ಹತ್ತಧಾಂಗ ಬಾಳೇವು ಮಾಡಿದ್ದು ಯಾತಕ್ಕ ಬಂಧಾಂಗಾತು ? ತೆಲಿ ಬೆಳ್ಳಗಾದ ಮ್ಯಾಗ ಹಿಂತಾ ಜಾಗಾದಾಗ ಕೂಡು ಪರಸಂಗ ಬಂತ. ಜೀವಕ್ಕ ಅದೊಂದು ಹೊಟ್ಟೆಬ್ಯಾನೀನ ಆತ. ಊರಾಗ ಇದ್ದು ಗೌಡನ್ನ ಕೆಡಿಸಿಗೋಬಾರದಂತಾರೂ ಅದೇನೋ ಸುಳ್ಳಲ್ಲ!.. ಅದು ಹೋಗಲಿ ನೋಡ, ಅವರಿನ್ನೂ ಬರಲಿಲ್ಲ. ಹೋಗಿ ಕರದ ಬರತೀ ಯಾನ ?

ಗೌರಿ : ನಾ ಯಾಕ ಹೋಗಲಿರಿ ಅವರ ಮನೀಗಿ ? ಬಸಣ್ಣ, ಹೋಗ ! ಅವರನ ಲಗ್ಗ ಕರದ ಬಾ. ಇವರು ಬಾಳೊತ್ತಾತು ಬಂದ ಖುಂತಾರಂತ ಹೇಳ.

ಮಲ್ಲೇಶಿ : (ತನ್ನಲ್ಲಿಯೇ) ಇಲೆಕ್ಶನ್ ಸುರು ಆಗೇತಿ ಆಗೇತಿ, ಬರೇ ಇದs ನಡದsತಿ, ಕರದ ಬಾ, ಕರಕೊಂಡ ಬಾ ಅಂತ. ಹತ್ತಲಿಲ್ಲ ಹರೀಲಿಲ್ಲ. ಸುಕದ ಜೀವಕ್ಕ ಒಣಾ ತರಲಿ. ಮುಂಜಾನಿಂದ ನೋಡತsನ ಹೊಟ್ಟಿಗಿ ಹಸುವಿಲ್ಲ, ಕಣ್ಣಿಗೆ ನಿದ್ದಿಲ್ಲ. ಎಲ್ಲಿ ಹ್ವಾದರೂ ಸುಕಾ ಇಲ್ಲ ! ಯಾರನ ಮುಗಸಕೊಂಡ ಹೋಗ-ಬೇಕಂತ್ಯೆತೋ !.... ಇಂದ ರಾತರ್ಯಾಗ ನಿಕಾಲೆ ಆಗಬೇಕಂತಿದ್ದ ಗೌಡ !.... ಯಾವ ನಿಕಾಲೆ ಆಗೂದಾ ? ನಂದೇನಾರ ಆದೀತ, ಶಂಕರ್ಯಾನ ಬಾಳೇವು ಮೆಟ್ಟಿಗಿ ಬಂದರಾತ (ಹಲ್ಲಿ ಲೊಚಗುಡುವದು) ಶಿವಶಿವಾ! (ಆಕಳಿಸಿ ಚಿಟಿಕೆ ಹೊಡೆಯುವನು.)

[ಶಂಕರ ಮತ್ತು ಹವಳೆಪ್ಪ ಬರುವರು]

ಗೌರಿ : ಅಯ್ಯ, ಇವರ್ಸ ಬಂದರಲಾ ! ನನಗ ಗೊತ್ತ. ಬರ್ರಿ ಖುಂದರ್ರಿ, ಅಲ್ಲೆ ಕಂಬಳಿ ಮ್ಯಾಗ. ನಿಮ್ಮ ಅಪ್ಪಾವರು ನೀವ್ಯಾನ ಬರಾಕಿಲ್ಲಾ ಅಂತಿದ್ದರ.

ಮಲ್ಲೇಶಿ : ನೀ ಯಾಕ ಮತ್ತ ಬಂದ್ಯೋ ಶಂಕರಾ. ನಾ ಬರತಿದ್ದೆನಲ್ಲ ಎಲ್ಲಾ

ಕೆಲಸ ಮುಗಸಕೊಂಡ.

ಶಂಕರ : ನೀ ಮುದುಕ ಮನಶ್ಯಾ. ಒಬ್ಬಾವನ ತಿರುಗಿ ಬಂದೀ ಹ್ಯಾಂಗs ಅಂತ ಬಂದ್ನಿ.

ಗೌರಿ : ಹೌಂದ. ಮತ್ತ ಮಗಾ ಅಂತ ಇರೂದ್ಯಾತಕ ? ಮುಪ್ಪಿನ್ಯಾಗ ಕಾಯಾ ಕಂತ್ಲ ಅಲ್ಲಾ ?

ಮಲ್ಲೇಶಿ : ಯಾನಾದರೂ ಬರಬಾರದಿತ್ತ ತಗಿ. ಮನ್ಯಾಗ ಆಕಿ ಬಬ್ಬಾಕೀನs ಬ್ಯಾರಿ. ನಾ ಯಾನ ತಪ್ಪಿಸಿಕೊಂಡು ಹೋಗತಿದ್ದನೇನ? ನನಗೊಂದು ನಿರ್ವಾಕಿದ್ದಿಲ್ಲ ಇಲ್ಲಿ ಬರೂದ. ನೀ ಇಂತಲ್ಲೆ ಬರೂ ಹೊತ್ತರೆ ಯಾನ ? ಹವಳೆಪ್ಪಾ ನಿನಗೂ ತಿಳೀಬಾರದ್ಯಾನ ? ಎಲ್ಲಾ ಕೆಲಸ ಕೆಡಿಸಿಟ್ಟೆರಿ.

[ಶಂಕರ ಅಪರಾಧಿಯಂತೆ ತಲೆ ತಗ್ಗಿಸುವನು]

ಹವಳೆಪ್ಪ : ಅದರಾಗೆಲ್ಲ ಯಾನೈತ್ರಿ ? ನೀವೂ ಬಲೆ ಹೆದರಾವರಾ ! ಮನಸೊಂದು ಸುದ್ದಿದ್ದರ ಆತ ನೋಡಿರಿ, ಇಂತಾ ಗೌರವ್ವಗೋಳು ಏಟ ಮುಂದಿದ್ದು ಯಾನ ಆಗಬೇಕರಿ ?

ಗೌರಿ : ಇದ್ಯಾನ ಆಕಿ ಮನೀ ಅಂತ ತಿಳದೀ ಯಾನ ? ನನ್ನ ಮನೀಗಿ ಬಂದೀದಿ, ಧಾಂದಾಗ ಇರಲಿ ! ಈಗ ಅವರ ಬಂದರಂದ್ರ ನೋಡತೀನ ನಿನ್ನ.

ಹವಳೆಪ್ಪ : ಅವರು ಬರೂತನಾ ನಿನ್ನ ಕಣ್ಣ ಹೋಗಿರತಾವೇನಬೇ ? ನಿನ್ನ ಮುಂದs ನಿಂತೀನು, ನೋಡಲಾ. ನಿನ್ನಂತಾ ನೋಡಾವರ ಈ ಊರಿಗಿ ಭಾಳ ಮಂದಿ ಬಂದಾರೇಳ !

ಮಲ್ಲೇಶಿ : ಇರಲಿ ಬಿಡ ಹವಳೆಪ್ಪಾ, ಹೆಂಗಸರ ಬಾಯಿಗಿ ಯಾಕ ಹತ್ತೀದಿ !

ಗೌರಿ : ನೋಡ್ರಿ ಸಾವಕಾರ, ನಾ ಯಾರಾ, ತಾ ಯಾರಾ ಖಬರ ಇರಬಾರದ್ಯಾನ ? ಗೌಡ್ರ ಬಾಕಲದಾಗ ಬಿದ್ದಿರೋ ಸೊಣಗ ತಾ....

ಮಲ್ಲೇಶಿ : ಹೋಗಲಿ ಬಿಡ, ನೋಡ ಇವಾ ಬರಲಿಲ್ಲಲ್ಲಾ. ನೀನs ಒಂದ ಜರಾ ಮುಂದ ಹೋಗಿ ನೋಡತೀ ಯಾನ ? ನಮ್ಮ ದಗದಾ ನಾವು ಮುಗಿಸಿಗೊಂಡ ಹೋಗತೇವು. ಊರಾಗಿನ ನಾಯೆಲ್ಲಾ ಬೊಗಳಾಕ ಹತ್ಯಾವು. ಕತ್ತಲ್ಯಾಗ ಹೋಗೂದ ಬ್ಯಾರಿ.

ಶಂಕರ : ಮುದಕ ಮನಶ್ಯಾರ ! ಅವರ ಸೋಬತಿಗಿ ಅಂತ ನಾ ಬಂದೀನ. ಅವರ ಒಬ್ಬರ ಹೋದರ ನಂದ್ಯಾನ ದಗದ ಇಲ್ಲೆ. ಏ ಹವಳೆಪ್ಪಾ ಹೊತ್ತಾಗತೇತಿ ಹೋಗ. ಲಗ್ಗ ಕರಕೊಂಡ ಬಾ ಅವರ್ನ. [ಏಳುವನು]

ಹವಳೆಪ್ಪ : ನಾ ಎಲ್ಲಾ ಹೋಗತೀನರಿ, ಮತ್ತ ಜ್ವಾಕಿರಿ. [ಹೋಗುವನು]

ಗೌರಿ : ನೀವ್ಯಾಕ ಎದ್ದ ನಿಂತೀರಿ. ಖುಂದರ್ರಿ ಸಾವಕಾರ. ಅವಾ ಈಗ ಹೋಗಿ ಬರತಾನು.

ಮಲ್ಲೇಶಿ : ಶಂಕರ್‍ಯಾ ಖರೇ ಹೇಳ. ಗೌರವ್ವ ಈಗ ನಿನ್ನ ಮ್ಯಾಗ್ಯ ಏನ ತುಫಾನಿ ಹೊರಸ್ಯಾಳು, ಅದೇನು ಕರೇ ಐತ್ಯೋ, ಯಾನ ಸುಳ್ಳು ಐತ್ಯೋ ? ನನಗ ಯಾರನೂ ನಂಬಾಕ ಬರಧಾಂಗ ಆಗೇತಿ. ಪಂಚರ ಸಮಕ್ಷಮ ದಂಡಾ ತುಂಬೂ ಹೊತ್ತ ಬಂತಲ್ಲಲೇ !

[ಶಂಕರ ಸುಮ್ಮನಿರುವನು]

ಮಲ್ಲೇಶಿ : ಯಾಕಲೇ ಸುಮ್ಮನಾದ್ಯಲ್ಲ ! ಯಾನ ಮಾಡಿದ್ದs ಕರೇನೋ ?

ಗೌರಿ : ಅದರಾಗ್ಯಾನ ಬಿಡಿರಿ. ಹುಡಗಾಟಿಗಿ ಅವರ ಮಾಡಿದಾರ ಅಂತ ನೀವ ಮಾಡಕ ಬರತೇತ್ಯಾನ? ಇಷ್ಟಾಗೀ ದಂಡಾ ನೀವ್ಯಾನs ಪಂಚಗಟ್ಯಾಗ ಹೋಗಿ ಹಗಲಾ-ಹಾಡೇ ಕೊಟ್ಟಿಲ್ಲಾ, ಯಾನಿಲ್ಲಾ.

ಮಲ್ಲೇಶಿ : ಗೌರವಾ ಇದು ನಿನಗ ಗೊತ್ತಾಗಾಣಿಲ್ಲ. ತಮ್ಮ್ಯಾನ ಮುಂದ ಅಬರೂ ಹ್ವಾದರ ಹ್ವಾದಂಗಾಲ್ಲ ಯಾನ? ಮಾನ ಮರ್ಯಾದಿ ಮಾತು ಭಾಳ ಸೂಕ್ಷ್ಮ ಅದಾವ. ಮನಸ್ಸಿನ ಮುಂದಾದರೂ ಜಬಾನಿ ಕೊಡಬೇಕಾಕ್ಕೈತಿ ! ಗರತಿಗಿ. ಶೀಲ, ಗಂಡಸಿಗಿ ಮಾನ ಎಲ್ಲಾ ಒಂದs. ಅದು ನಾಕ ಮಂದ್ಯಾಗ ಹ್ವಾದರೂ ಅsಟs, ಕತ್ತಲಿ ಕ್ವಾಣ್ಯಾಗ ಹೋದರೂ ಅsಟs. ಅದಕ ಬಡಕೊಂತೀನೋ ಶಂಕರಾ ... ...

ಗೌರಿ : ಸಾವಕಾರs ಬಂದರೇನs ನೋಡಿರಿ, ಯಾರೋ ಬಂಧಾಂಗಾತ ?

[ಗೌಡರು, ತಮ್ಮಣ್ಣಿ. ಬಸವಯ್ಯ ಒಳಗೆ ಬರುವರು]

ಗೌಡ : ಬಂದ ಕೆಂಂತಾರು ನೋಡ. ಹ್ಯಾಂಗೈತಿ ಈ ಗೌಡನ ಕೈ. ಈಗರೆ ಗೊತ್ತಾತಿಲ್ಲೊ ?

ಬಸವಯ್ಯ : ಅಜ್ಜ ಆರ ತೆಲಿ, ಮುತ್ತ್ಯಾ ಮೂರ ತೇಲಿ ಅದನ್ನs ಮಾಡಿದವರಾ.. ನಿಮಗ ಹೇಳಬೇಕ್ಯಾನರಿ ? ಮೊನಿನ ಮರಿಗಿ ಈಸ ಕಲಿಸಿಧಾಂಗಾದೀತ.

ಮಲ್ಲೇಶಿ : ಏ ಬಸವಣ್ಣಿ, ಮುತ್ತ್ಯಾ ಮೂರತಲಿ ಅದನ್ನ ಮಾಡಿದರಂತs, ಮನ್ಯಾಗ ಮುರಕ ಒಲೀ ಒಡಕ ಗಡಿಗಿ ತಪ್ಪಲಿಲ್ಲ. ತಿಳೀತ್ಯಾನ ? ಇಂದಿನ ತಕ್ಕಾ ಬಾಯಿ ಬಿಚ್ಚಿ ಆಡೂ ಪರಸಂಗ ಬಂದಿರಲಿಲ್ಲಾ ಅಂತ ಸುಮ್ಮಗಿದ್ದೆ.. ಮಾನಾನs ತಗ್ಯಾಕ ನಿಂತೀರಿ ಅಂದಮ್ಯಾಗ ಯಾರದೂ ಹಂಗಿಲ್ಲದ ಹೇಳತೇನ ನೋಡ. ಊರಾಗ ಒಂದ ದುಡ್ಡ ಉಳೀಲಿಲ್ಲ, ಒಂದ ಹೆಣ್ಣ ಉಳೀ-ಲಿಲ್ಲಾ. ಎಲ್ಲಾದರಮ್ಯಾಗೂ ಇವಂದs ನೆದರು. ಆದರ ಅನ್ನೇವದ ಘಳಕಿ, ಓಡಿಸಿಗೊಂಡು ಬಂದ ಹೆಣ್ಣಾ, ಏಟ ಧಿನಾ ನಿಂತಾವು ?

ತಮ್ಮಣ್ಣಿ : ಇಲ್ನೋಡ್ರಿ ಸಾವಕಾರ, ಇಲ್ಲದ ಪಂಚಿ ಉಚ್ಚಬ್ಯಾಡ್ರಿ. ಇದ್ಯಾನ ಬಸವ-ಣ್ಣನ ಗುಡಿ ಅಂತ ತಿಳದೀರ್‍ಯಾನ, ಧರ್ಮ-ಕರ್ಮ ಹೇಳಾಕ? ತೆಪ್ಪ ಮಾಡಿ-

ಜವಡು ಹಲ್ಲಾಗ ನಾಲಿಗಿ ಇಟಗೊಂಡು ಸುಮಾಕ ಇರಬೇಕ. ಮುದಕಾದ್ರಿ, ನಮ್ಮಂತಾವರ ಕಡಿಂದ ಹೇಳಸಿಗೋಬಾರದ !

ಶಂಕರ : (ಸಿಟ್ಟಿನಿಂದ) ಲೇ ತಮ್ಮ್ಯಾ ಯಾರಿಗಿ ಯಾನಂತೀ ನೋಡಿ ಮಾತಾಡು. ಸರ-ಪಂಚಾಗಾಣಾ ಯಾರಿಗಿ ಯಾನ ಬೇಕಾದ್ದ ಅನ್ನೂದ್ಯಾನ ಗs ಅಂದೀದಿ ಇನ್ನೊಮ್ಮೆ ಅಂದಿ ಅಂದ್ರ ಬಂತ ನೋಡ...

ಗೌಡ : ಲೇ ಹುಡುಗಾ, ಒಂದ ಜರಾ ಬಾಯಿ ಬಿಗಿ ಹಿಡಿ. ಇಲ್ಲಾತು ಅಂದ್ರ ನಾಲಿಗಿ ಕಿತ್ತಿ ಕೈಯಾಗ ಕೊಟ್ಟೇನ ತಿಳೀತೇನ ?

ಶಂಕರ : ತಿಳದೈತಿ, ಎಲ್ಲಾ ತಿಳದೈತಿ. ನಮ್ಮಪ್ಪನ ಹೆಸರ ತಗದರ ಯಾರನೂ ಉಳ-ಸಾವಲ್ಲ, ಇದನ ನೀವೂ ತಿಳಕೋರಿ.

ತಮ್ಮಣ್ಣಿ : ನೋಡ್ರಿ ಸಾವಕಾರ, ನಿಮ್ಮ ಮಗಾ ಹ್ಯಾಂಗ ಎಡವಟ್ಟತನಾ ಹಚ್ಚ್ಯತಾನು. ಈಗ ದಂಡಾ ತುಂಬಿದ್ದು ಸಾಕಾಗಿಲ್ಲ್ಯಾನ ? ಮುಕಾಟಲೆ ಮುಗಸಗೊಂಡು ಹೋಗೂದು ಬಿಟ್ಟ ಮತ್ತ ನ್ಯಾಯ್ಯಾತಗೂದಂದ್ರ ?

ಶಂಕರ : ಯಪ್ಪಾ, ಇಂದ ಒಂದ ದಿನಾ ನೀ ನಡಕ ಬರಬ್ಯಾಡಾ. ನೋಡೇಬಿಡ ತೀನು ಯಾರ್‍ಯಾರ ಯಾನಂತಾರು ಅನ್ನೂದ. ಕೆಲಸ ಇಲ್ಲದ ಲುಚ್ಚೇರೆಲ್ಲ ಕೂಡಿ ಮಾನ-ಳ್ಳನರ್ನ ಹಾದ್ಯಾಗ ಎಳೀಬೇಕೂ ಅಂತ ಹೊಂಚ ಹಾಕಿ ದಾರು. ಸುಮಾಕ ಕುಂತರ ಮೈಮ್ಯಾಗ ಆಟ ತಿರಗೂ ಹಾಂಗ ಕಾಣತೈತಿ.

ತಮ್ಮಣ್ಣಿ : ಸಾವಕಾರ, ಏನ ಹೇಳೂದ ಹೇಳಿ ಸುಮಾಕ ಕುಂದ್ರಂತ ಹೇಳ್ರಿ. ಗೌಡರು ಅಂದಾಕರ ಸಿಟ್ಟಿನ್ಯಾವರಾ ! ಒಂದ ಹೋಗಿ ಒಂದ ಆದೀತ. ಅವಾ ಬಾಯಿ ಭಾಳ ಹರಿಬಿಡಾಕ ಹತ್ಯಾನು.

ಗೌಡ : (ಸಿಟ್ಟು ತಡೆಯದೆ ಎದ್ದು ಬಂದು ಶಂಕರನ ಕುತ್ತಿಗೆಗೆ ಕೈಹಾಕಿ) ಆ ನಾಲಿಗೀನ ಕಿತ್ತಿ ಹಾಕತೇನು ತಡಿ. ಸರಿ ತಮ್ಮಣ್ಣಿ. ಏಟಂತರ ಹಾದೀ ನೋಡೂದು ಅದು!

ಗೌರಿ : (ಗಾಬರಿಯಾಗಿ) ಬಸಯ್ಯಾ, ಬಿಡಿಸೋ ಅವರನ....ಯಾನರೆ ಜೀವಕ ಭಾವಕ ಮಾಡ್ಯಾರು.

[ಹೊರಗಿನಿಂದ ಓಡುತ್ತ ಬಂದ ಹವಳೆಪ್ಪ, ಗೌಡರನ್ನು ಗಟ್ಟಿಯಾಗಿ ಹಿಡಿಯುವನು]

ಹವಳೆಪ್ಪ : ಇದ್ಯಾನಿದ ಮತ್ತ ಸುರೂ ಆತಲಾ ? ಅಲ್ಲಿ ಮನ್ಯಾಗ ಮಾಡಿದ್ದ ಸಾಕಾ ಗಿಲ್ಲ ಯಾನ ? ನಮ್ಮ ಹಡದವ್ವ ನೆಳ್ಳಿಕೊಂತs ಮಲಗ್ಯಾಳು. ಯಾರ ಮ್ಯಾಗಿಂದೋ ಸಿಟ್ಟು ತಗದು ಅವಾಗೋಳನ ಜೀವ ಹೋಗು ಹಾಗ ಹೊಡದ್ಯು,ಉಣ್ಣಾಕ ನೀಡಿದ ಎಡೀ ಚೆಲ್ಲಿ ಬಂದಿರಿ. ನಿಮ್ಮ ಕಾಲ ಬೀಳತೇನು ಇನ್ನಮ್ಯಾಗರ ಹಿಂತಾ ಕೆಲಸಕ್ಕ ಕೈಹಾಕಬ್ಯಾಡ್ರಿ ... ನೀವು ದೊಡ್ಡಾವರ ಅವರು ಸಣ್ಣಾವರ ಇದನ್ಯಾನ ಮಾಡತೀರಿ ಬಿಡಿರಿ.

ಗೌಡ (ಕೈ ಕೊಸರಿಕೊಂಡು) ನಿನಗೇನ ತಿಳೀತ್ಯೆತಿ ಬಿಡಲೇ, ಊರ ಹಳಬನ್ನ ತಂದು. ಏಟುದ್ದಾ ನಾಲಿಗಿ ಹರವು ಬಿಡತೀದಿ, ಖಬರ ಐತೇನ? ಮನೀಗೆ ಹೋಗೂ ಮಟಾ ತಡಿ ಮುಂದ್ಯೆತಿ ವಾಲಗಾ ನಿಂದು.

ಹವಳೆಪ್ಪ : ಯಾನ ಬೇಕಾದ್ದ ಮಾಡಿಕೋರಿ. ಆ ಆಕಳದಂತಾ ಹುಡುಗನ ಮೈಗೆ ಧಕ್ಕಿ ಮಾಡಬ್ಯಾಡ್ರಿ ತೀರ್ತು.

ಗೌಡ : ನೀ ಯಾರಲೇ ನನಗ ಬುದ್ದಿ ಹೇಳಾವಾ? ಹಳಬಾಗಿ ಇರಬೇಕಂತಿಯೋ, ಏನ ಹೆಗಲ ಮ್ಯಾಗ ಗುದ್ದಲಿ ಹಾಕಬೇಕಂತೀಯೋ?

ಮಲ್ಲೇಶಿ : ಏ ಹವಳೆಪ್ಪಾ, ಬಿಡ ತಮ್ಮಾ! ನಮ್ಮ ಶಿರಗ ನಿನಗ ಬಡದೀತ ಬಿಡ. ಬಡವನ ಸಿಟ್ಟಾ ದವಡಿಗಿ ಮೂಲ ಆದೀತ. ಏ ಬಸಯ್ಯಾ, ಜಗಳಕ್ಕಂತ್ಸ ಕರಕೊಂಡ ಬಂದೀ ಯಾನ? ಯಾನ ಮುಗಸೂದು ಲಗ್ಗ ಮುಗಸರಿ. ನಮಗ ಹೊತ್ತಾಗತೇತಿ ಮನೀಗೆ ಹೋಗಲಾಕ.

ಬಸವಯ್ಯ : ಗೌಡ್ರ, ನೀವು ಒಳ್ಯಾಕ ನಡೀರಿ. ಜರಾ ಮಲಕೊಂಡು ಸಮಾಧಾನ ಮಾಡಿಕೋರಿ. ನಾವು ಕೂಡಿ ಎಲ್ಲಾ ಮುಗಿಸತೇವ.

ಗೌಡ : ಯಾನ ಮಾಡೂದು ಕುಂತ ಬೈಟಕ್ಕಿನ್ಯಾಗ ಮುಗಿಸಿಬಿಡ್ರಿ. ಲೇ ಹಳಬಾ, ನಡಕ ಬಾಯಿ ಹಾಕಿದೆಂದ್ರ ಹಲ್ಲು ಮುರಿಸಿಕೊಂಡೀ ಹಲ್ಲು. ಹೋಗ ಅಲ್ಲೆ ಹೊರಗ ಥೆಳೀಜದಾಗ ಖುಂದ್ರ. ಇಗಾ ಮಲ್ಲೇಶಿ, ಮುಗಸುದೇನ ತಂದಿದ್ರ ಮುಗಿಸಿಕೊಟ್ಟ ಹೋಗ. ಆದರ ನಿನ್ನ ಮಗನದು ಜ್ವಾಕಿ. ಇವರೆಲ್ಲಾ ಇದ್ದ-ರಂತ ಉಳದಾನು. ಇಲ್ಲಾತು ಅಂದ್ರ....

ಬಸವಯ್ಯ : ಅದನೆಲ್ಲಾ ತೊಗೊಂಡು ಯಾನ ಮಾಡತೀರಿ ನಡೀರಿ. (ಅವನನ್ನು ಒಳಗೆ ಕಳಿಸಿ ಬರುವನು)

ತಮ್ಮಣ್ಣ : (ಗೌಡರು ಕುಳಿತ ಸ್ಥಳದಲ್ಲಿಯೇ ಕುಳಿತುಕೊಂಡು) ಹಂ ಸಾವಕಾರ, ಲಗ್ಗ ಲಗ್ಗ ರುಪಾಯಿ ತಗೀರಿ. ಏಟ ತಂದೀರಿ?

ಮಲ್ಲೇಶಿ : ಹಾಂ ಕುಡತೀನ. ಗೌರವ್ವಾ, ಮ್ಯಾಗಿನ ದೀಪಾ ಒಂದೀಟು ತೆಳಗ ತರ-ಬಾರದ?

[ ಗೌರಿ ಗೋಡೆಗಿರುವ ಲ್ಯಾಂಪನ್ನು ಕೆಳಗೆ ತಂದಿಡುವಳು. ಮಲ್ಲೇಶಿ ಬಗಲಬಂಡಿಯ ಕಿಸೆಯೊಳಗಿಂದ ನೋಟುಗಳನ್ನು ಹೊರಗೆ ತಂದು ಒಂದೊಂದಾಗಿ ಎಣಿಸುವನು. ಯಾಕೋ ಗಾಬರಿಯಾದಂತಾಗಿ ಮತ್ತೊಮ್ಮೆ ಎಣಿಸುವನು. ಉಳಿದವರೆಲ್ಲ ಆತುರದಿಂದ ಅವನ ಕಡೆಗೇ ನೋಡುತ್ತಿದ್ದಾರೆ ]

ಮಲ್ಲೇಶಿ : ಎಲಾ ಇವನ! ಇದೇನಾಗೇತಿ? ನೂರು ರೂಪಾಯಿ ಕಮ್ಮ ಅದಾವಲಾ! ಇರಲಿ ತಗೋರಿ. ಇದ್ಯಾನ ಕೊಟ್ಟ ಸಾಲ ಅಲ್ಲಾ ಯಾನಲ್ಲಾ.

ತಮ್ಮಣ್ಣ : (ಗೌರಿಯ ಕಡೆಗೆ ನೋಡುತ್ತ) ಅದೇನ ಆಗಾಣಿಲ್ಲ ಸಾವಕಾರ. ನಿಮ್ಮ

ಮಾತಕ ನಿಮಗ ಹೇಳೂದಾದ್ರ, ಬಿಟ್ಟ ತೀರಿಸಿಗೊಣ್ಣಾಕ ಇದ್ಯಾನ ಸಾಲ ಅಲ್ಲ ತಿಳೀತ್ಯಾನ? ಪೈ ಪಾಪ ಅಣೆ ಎಲ್ಲಾ ಚುಕ್ತಾ ಆಗಾಕಬೇಕ. ತಗೀರಿ ತಗೀರಿ ಎಲ್ಲೆರ ಮುಚ್ಚಿಟ್ಟಿರಬೇಕ. ಆ ಹೆಣ್ಣ ಬಾಲಿ ಅಬ್ರೂ ತೊಗೊಳ್ಳುಮುಂದ ನಿಮ್ಮ ಮಗ್ಗ ಯಾನ ಅನಿಸಿರಲಿಲ್ಲೇನ? ಆಗ ಹೀಗss ಹೈಗೈ ಮಾಡಿದನೇನ ಕೇಳರಿ? ಈಗ ರೊಕ್ಕಾ ಕೊಡಬೇಕಾದರ ನೆಳ್ಳತೀರಿ.

ಶಂಕರ: ಆಗೂದುಲ್ಲಂತ ಹೇಳ ಯಪ್ಪಾ. ತೆಪ್ಪ ಮಾಡದ ಸುಮಾಕ ಹರ್ಲಿ ಹೊರೂ ದಂಡ್ರ? ನಮಗೂ ಯಾನ ಕಿಮ್ಮತ್ತ ಐತ್ಯೋ ಇಲ್ಲೋ?

ಮಲ್ಲೇಶಿ: ಶಂಕರ್ಯಾ ಸುಮ್ಮನಿರು. ಇಲ್ಲೆ ಬರೂದss-ಮೊದಲ ತೆಪ್ಪ. ಬಂದಮ್ಯಾಗ ಅನುಭೋಗಸೂದ ಬ್ಯಾಡಾ ಅಂದರ? ನಡಿ, ತುಗೊಂಡ ಬಂದ ಇವರ ಮಾರೀಮ್ಯಾಗ ಒಗದ ಬಿಡೋಣು.

ತಮ್ಮಣ್ಣಿ: ಗೌಡ್ರ, ಇವರ ಮನೀಗಿ ಹೋಗಿ ತಂದ ಕುಡಾವರಂತ್ರಿ.

ಗೌಡ: (ಒಳಗಿಂದಲೇ) ಕೈಯಾಗಿನ ಬ್ಯಾಟಿ ಖಾಲಿ ಬಿಡಾವ ಗೌಡ ಅಲ್ಲಾ ಅಂತ ಹೇಳು. ಇಬ್ಬರೂ ಕೂಡಿ ಓಡಿಹೋಗಲಾಕ ಮಸಲತ್ತ ಮಾಡ್ಯಾರೇನ ಕೇಳ?

ಮಲ್ಲೇಶಿ: ಓಡಿ ಹೋಗಲಾಕ ನಾವು ಯಾನ ದರೋಡೆ ಹಾಕಿಲ್ಲ, ಖೂನ ಮಾಡಿಲ್ಲಾ. ಕೊಟ್ಟ ಮಾತಿಗೆ ತೆಪ್ಪಿ ನಡದ ನನಗ್ಯಾನ ಗೊತ್ತಿಲ್ಲಾ. ಬೇಕಾರ ಒಬ್ಬರ ಇದು ಒಬ್ಬರ ಹೋಗಿ ಬರತೇವಿ.

ಗೌರಿ: (ಆಶೆ ಕೆಂಳಿ) ಹಾಗss ಮಾಡರಿ. ಬೇಕಾರ ನೀವೊಬ್ಬರು, ಹವಳ್ಯಾನ ಸಂಗಾಟ ಕರಕೊಂಡು ಹೋಗ್ರಿ. ನೀವು ಬರೂತನಾ ಸಣ್ಣ ಸಾವಕಾರರು ಇಲ್ಲೇ ಕುಂದರತಾರು.

ತಮ್ಮಣ್ಣಿ: ಗೌರಾ ಅನ್ನೂದು ಖರಾಬರಿ ಐತಿ. ಮಗನ ಜೀವಕ್ಕಂಜಿ ನೀವss ಬರತೀರಿ. ಏ ಹವಳೆಪ್ಪ, (ಹವಳೆಪ್ಪ ಬರುವನು) ಮಲ್ಲೇಶಪ್ಪಣ್ಣ ಅವರ ಜೋಡಿ ಅವರ ಮನೀತನಾ ಹೋಗಿ ಬಾ.

[ಹವಳೆಪ್ಪ ಮಲ್ಲೇಶಿ ಹೋಗುವರು. ಶಂಕರನ ತಂದೆ ಹೋಗುವಾಗ ಒಮ್ಮೆ ಮಾತ್ರ ಅವನನ್ನು ತಲೆಯೆತ್ತಿ ನೋಡಿ ಮತ್ತೆ ಮುಖ ಕೆಳಗೆ ಹಾಗಿ ವಿಚಾರಮಗ್ನನಾಗುತ್ತಾನೆ. ತಮ್ಮಣ್ಣಿ ಕಿಸೆಯಿಂದ ಒಂದು ಬೀಡಿಯನ್ನು ತೆಗೆದು ಸಮಾಧಾನದಿಂದ ಅದನು ಹೊತ್ತಿಸುತ್ತಾನೆ. ಬಸವಯ್ಯ ಕಡ್ಡಿ ಪೆಟ್ಟಿಗೆಯ ಜೊತೆಗೆ ಆಟವಾಡುತ್ತ ಕುಳಿತುಕೊಳ್ಳುತ್ತಾನೆ. ಗೌರಿ ಶಂಕರನನ್ನು ಹದ್ದಿನ ಕಣ್ಣಿನಿಂದ ನೋಡುತ್ತಿದ್ದಾಳೆ]

ಗೌರಿ: (ಮೈಮುರಿದು ಆಕಳಿಸುತ್ತ) ರಾತ್ರಿ ಏಟಾಗಿರಬೇಕ ಬಸಣ್ಣಾ? ಗಸ್ತಿಯವರು ಬರೂ ಹೊತ್ತಾತೇನ? ಯಾನ ನಿದ್ದಿ ಬಂದೈತೋ, ಬ್ಯಾಸರ ಆಗೇತೋ ತಿಳೀವಲ್ತ. ಮಬ್ಬ ಹಾಕಿದ್ಹಂಗ ಆಗೇತಿ. ತಲಿ ಒಂದssಸವನ ಚಿಟಿಚಿಟಿ ಅನ್ನಾಕ ಹತ್ತೇತಿ.

ಬಸವಯ್ಯ : ಈಟೋತ್ತನಾ ಆದ ಗದ್ದಲ ಯಾನ ಥ್ವಾಡೇ ಯಾನ ? ಅದಕ್ಕs ಆಗಿದ್ದೀತೇಳ. ಕುಂತಲ್ಲೇ ಹಾಗs ಅಡ್ಡಾಗು. ಕುಂತ ಯಾನ ಮಾಡೂದ ತಮ್ಮಣ್ಣೆಪ್ಪಾ ? ಆ ಮುದುಕ ಕುಂಟಿಗೋತ ಬರೂದು ಏಟೊತ್ತು ಆಕ್ಕೈತೋ ಏನೋ ! ( ಕಿಸೆಯೊಳಗಿಂದ ಇಸ್ಪೇಟಿನ ಪ್ಯಾಕು ತೆಗೆದು ) ಒಂದ ಯಾಡ್ಡ ಆಟಾ ಹಾಕೂನಲಾ !

ತಮ್ಮಣ್ಣಿ : ಇಬ್ಬರೇ ಯಾನ ಆಟ ಆಡೂದೊ ? ಮೂರೆಲಿ ಹಾಕಬೇಕಂದರ ರೊಕ್ಕ ಇಲ್ಲ.

ಬಸವಯ್ಯ : ಹೊಡದ ಕೊಡೂದು ಆಡೂನು ತೊಗೋರಿ. ( ಎಲೆಗಳನ್ನು ಹಂಚತೊಡಗುವನು )

ಗೌರಿ : (ಅಡ್ಡಾಗಿ ಮಲಗಿಕೊಂಡು ನೆಟ್ಟದೃಷ್ಟಿಯಿಂದ ಶಂಕರನನ್ನು ನೋಡುತ್ತ) ಏ ಬಸಯ್ಯ ಆ ಆಟಾ ಯಾನ ತಗದಿ ಹೊತ್ತಿಲ್ಲದ ಹೊತ್ತಿನ್ಯಾಗ ? ಒಳಗ ಚಾ ಇರಬೇಕ ನೋಡ. ಅದನ್ನsಟು ಬಿಸಿ ಮಾಡಿ, ಗೌಡರಿಗಿ ಸರಪಂಚರಿಗಿ ಕೊಡ ಹೋಗ. ನನಗ ತೆಲೀ ಎತ್ತಗೊಡವೊಲ್ಲದು, ನೀನs ಹೋಗ.

ಬಸವಯ್ಯ : ಈಗ ಯಾರಿಗಿ ಚಾ ಬೇಕಾಗೇತಿ ? ನಿಂದೂ ಇಲ್ಲದ್ದೊಂದ.

ಗೌಡ : ಗೌಡರು ಆಗಾಳೇನ ಕೇಳಿದ್ದರ. ಮತ್ತ ನೋಡ ಸರಪಂಚರೂ ತೂಕಡಸಾಕ ಹತ್ಯಾರು. ಹೋಗರಿ ಒಳಗ, ಚಾ ಕುಡದ ಅಲ್ಲೇ ಬೇಕಾರ ಆಡಿಕೊಂತ ಖುಂಡರ್ರಿ. ಗೌಡರು ಮನ್ಯಾಗೂ ಊಟಾ ಮಾಡಿಲ್ಲಂತ.

ಬಸವಯ್ಯ : ಏಳರಿ ತಮ್ಮಣ್ಣೆಪ್ಪಾ, ಒಳಗs ಹೋಗೂನು. ಗೌಡರು ಯಾನ ಮಾಡತಾರ ನೋಡಾಕ ಬ್ಯಾಡಾ ? ನಡೀರಿ. ಲೇ ಶಂಕರ್ಯಾ, ನಾವು ಬರೂತನಾ ಇಲ್ಲೇ ಇರೂ ಮತ್ತ.

[ಬಸವಯ್ಯ ತಮ್ಮಣ್ಣಿ ಇಬ್ಬರೂ ಒಳಗೆ ಹೋಗುವರು. ಬತ್ತಿ ಹೊತ್ತಿಕೊಂಡದ್ದರಿಂದಲೋ ಏನೋ ಲ್ಯಾಂಪಿನ ಬೆಳಕು ಮಬ್ಬಾಗಿದೆ. ಗೌರಿ ಅದನ್ನು ಸರಿಮಾಡುವ ನೆವದಿಂದ ಎದ್ದು ಕೂಡುತ್ತಾಳೆ. ಬೆಳಕನ್ನು ಸರಿಮಾಡಿ, ಸೆರಗನ್ನು ಸಾವರಿಸಿಕೊಳ್ಳುತ್ತಾಳೆ]

ಗೌರಿ : ಸಾವಕಾರ, ಸಾವಕಾರ ! (ಶಂಕರ ಸಿಟ್ಟಿನಿಂದ ಮುಖ ತಿರುವುವನು) ನನ್ನ ಮ್ಯಾಗ ಸಿಟ್ಟಾದರ್ಯಾನ ? ನಿಮ್ಮನ್ನ ಯಾಕ ಚಾಕ್ಕ ಕರೀಲಿಲ್ಲ ಅಂತ ಸಿಟ್ಟ ಬಂತ್ಯಾನ ? ಆದರ ಇಂತಾವರ ಸಂಗಾಟ ನೀವು ಕುಡಿತೀರಿಲ್ಲೋ ಅಂತ ಕರೀಲಿಲ್ಲ. ನಿಮ್ಮಂತಾವರಿಗಿ ಆ ಚಾ ಕೊಡಾಕ ನನಗs ಹೇಸಿಗಿ ಬರತೈತಿ.

ಶಂಕರ : ನಾ ಚಾ ಕುಡೂದs ಇಲ್ಲೇಳರಿ. ನೀವು ಕರದಿದ್ದರೂ ನಾ ಯಾನ ಬರತಿದ್ದಿಲ್ಲಾ.

ಗೌರಿ : ಪುಣ್ಯಾವಂತರ ಮಕ್ಕಳು ನೀವ್ಯಾಕ ಕುಡದೀರಿ ? ಆದರ ಸಾವಕಾರ, ನನ್ನ ಮ್ಯಾಗ ಸಿಟ್ಟ ಯಾಕಾ ? ನಾ ಯಾನ ಹಂತಾದ ಮಾಡಿದ್ದ ? ಪ್ಯಾಂತಿಕತಾನ್ರ

ನನ್ನ ಗುಡಾ ಮಾತಾಡಬೇಕಂದ್ರ ನನ್ನ ಉಗರ ಕಣ್ಣ ಅವರಿಗಿ ಕಾಣಸಾಣಿಲ್ಲ. ಹಂತಾದು ನಾನs ನಿಮ್ಮನ್ನ ಮಾತಾಡಸಾಕ ಬಂದ್ರ ಹೀಗ ಮಾರೀ ತಿರವೂದ ?

ಶಂಕರ : ನನಗ ಯಾನಗೊತ್ತಿಲ್ಲರಿ ಅದು. ಅವರ ಯಾನ ತಿಳದಾರೋ ಯಾನೋ ? ಆದರ ಇಂತಾ ಕೆಲಸದಾಗ ಕೈ ಹಾಕಬಾರದು ಅಟs ಗೊತ್ತೈತಿ ನನಗ. ಯಾನೂ ಮಾಡದ ಹರ್ಲಿ ಬಂತ ಮೈಮ್ಯಾಗ ; ಇನ್ನ ಮಾಡಿದ್ದರನಕಾ ಯಾನಾಗತಿತ್ತೊ ? ನಿಮ್ಮ ಹಂತಾವರ ನೆಳ್ಳಿಗೆ ಸುದ್ದೆ ಹಾಯಬಾರದ ! ನಿಮ್ಮೆಲ್ಲಾರ ಮಸಲತ್ತು ತಿಳೀಲಿಲ್ಲ ನಮಗ. ಯಾನ ಮಾಡೂದಾ, ಕಲ್ಲ ಬುಡಕ ಕೈ ಕೊಟ್ಟೀನು ಅಂತ ಸುಮ್ಮನದೀನು. ಇಲದಿರಕ ಒಂದ ಕೈ ನೋಡೇ ಬಿಡತಿದ್ದೆ.

ಗೌರಿ : ಸಾವಕಾರ, ನೀವು ಎಷ್ಟ ಸಿಟ್ಟಿಗಿ ಬಂದರೂ ನನಗ ಸಿಟ್ಟ ಬರಾಣಿಲ್ಲ. ನನಗ ಮಾತಾಡದ ಮತ್ತ್ಯಾರಿಗಿ ಮಾತಾಡಬೇಕ ನೀವರ ? ಆ ಸಥಿ ಎಂದೋ ಕೊಟ್ಟಬಿಟ್ಟೀನ. ಆದರ ಒಂದ ಮಾತ ನಿಮಗ ಹೇಳಿಕೋಬೇಕಾಗಿತ್ತ. ಆ ಗೌಡನ ಗುಣಾ ನೋಡಿ ನಾ ಹಾಂಗ ಮಾತಾಡಬೇಕಾತರಿ. ನಿಮಗ ಪೇಚು ತರಬೇಕಂತ ಯಾನ ಮಾಡಿಲ್ಲ. ಅದೆಲ್ಲಾ ಹ್ಯಾಂಗ ಬಿಡಿಸಿ ಹೇಳೂದsತಿರಿ ? ಗಂಡನ್ನ ಬಿಟ್ಟ ಬಂದರೂ ಯಾನಾತು, ಊರೂರು ತಿರಗಿದರೂ ಯಾನಾತು, ಹೆಣ್ಣ ಬಾಲಿ ಅಲ್ಲ ಯಾನರಿ ನಾ ? ಮಣ್ಣ ಹೆಂಟಿರಿ ನಾ, ಒದ್ದರ ಒದಿಸಿಗೋಬೇಕ, ಬಿತ್ತಿದರ ಫಲಾ ಕೊಡಬೇಕ. ಉಡ್ಯಾಗ ತೊಗೊಂಡಾವರಂಗ ಇರಾಕಿ ನಾ. ನನಗ ಯಾನ ತಿಳಿಬೇಕರಿ ? ಅದರ ಹೊಣೇನೂ ಗೌಡರs ಹೊತ್ತಾರ್ರಿ. ಅದಕs ಮನಸಿನ್ಯಾಗ ಒಂದs ಸವನ ಕಟೀತೈತಿ. ಬಾಳೇವು ಮಾಡಿದರ ನಿಮ್ಮ ಹಂತಾವರ ಜೋಡಿ ಮಾಡಬೇಕ. ಇಲ್ಲಿದ್ದರ ಯಾನರಿ, ಸುಡಬೇಕ ನಮ್ಮ ಜಲಮ.

ಶಂಕರ : ನನಗ ಗೊತ್ತಿದ್ದ ಹೆಣ್ಣಂದರ ನಮ್ಮ ತಾಯಿ ಒಂದsರಿ. ಮಾಡಿಕೊಂಡ ಗಂಡನ ಬಿಟ್ಟಾಳು ತನ್ನ ಖರೆ ಗುಣಾ ಬಿಡಾಣಿಲ್ಲ. ನಿಮ್ಮಂತಾವರು ಮೊದಲ ಮೆತ್ತಗ ಮಾತಾಡಿ ಗಂಡಸಿನ್ನ ಮಳ್ಳ ಮಾಡತೀರಿ. ಒಮ್ಮೆ ಅವಾ ಕೈಯಾಗ ಬಂದಾ ಅಂದರ ಮುಗೀತ. ಈಗ ನನ್ನ ಮನೀ ತೊಳದಿರಿ, ಇನ್ನ ಜೀವಾ ತೊಗೋಬೇಕಂತ ಮಾಡೀರ್ಯಾನ ?

ಗೌರಿ : ಸಣ್ಣಾವರದೀರಿ ಇನಾ, ನಿಮಗ್ಯಾನ ತಿಳೀಬೇಕರಿ ? ಅಪ್ಪಾ ಅವ್ವಾ ಪಿರೂತಿ ಯಿಂದ ಬೆಳಿಸ್ಯಾರು. ಹೀಗಾಗಿ ಖರ್‍ರಗ ಬೆಳ್ಳಗ ಎರಡs ಗೊತ್ತ ನಿಮಗ. ಆದರ ಹೊರಗಿನ ಬಾಳೇವು ಗನಾ ತೊಡಕ ಐತಿರಿ. ಹುಟ್ಟಿದಂದಿನಿಂದ ಅದನs ಅನುಭೋಗಸಗೋತ ಬಂದೇನು.

ಶಂಕರ : ಅಂದರ ಯಾನಾತರಿ ? ಯಾನ ನಿಮ್ಮ ಹಾದಿಗೇ ಬಾ ಅಂದರ್ಯಾನ ?

ಗೌರಿ : ಅದು ಹ್ಯಾಂಗಾದೀತ ? ನಾವs ನಿಮ್ಮ ಹಾದಿಗೆ ಬರಾವರು. ನಿಮ್ಮನ್ನ

ನೋಡಿದಾಗಿಂದ ಮನಸಿಗೆ ಬ್ಯಾರೇ ಧ್ಯಾಸನ ಇಲ್ಲಧಾಂಗ ಆಗೇತಿ. ಅಂದ ಹೋಳೀ ದಂಡಿಮ್ಯಾಗ ನೀವ ಝಳಕಾ ಮಾಡಿಕೊಂತ ನಿಂತಾಗ ನೋಡಿದ್ನಿ ; ಜೀವಾ ಹಿರಿದ ತಗದ ನಿಮ್ಮ ಪಾದಕ್ಕ ಹಾಕಬೇಕಂತ ಮನಸಾತ. ಅದಕ್ಕ ಹೊಲದ ಏರೀಮ್ಯಾಗಿಂದ ಕೈ ಮಾಡೇ ಮಾಡಿದ್ನಿ, ನೀವೇನ ಹೊಳ್ಳಿ ಸೈತ ನನ್ನ ಕಡೆ ನೋಡಲಿಲ್ಲ.

ಶಂಕರ : ಮತ್ತ ಮತ್ತ ಅದನ್ನ ಹೇಳೂದರಾಗ ಯಾನೈತಿ ? ಅದೆಲ್ಲಾ ಬಗೀಹರೀದ. ಮಾತ ತಗೀಬ್ಯಾಡ್ರಿ. ನಮಗದೆಲ್ಲಾ ಮನಸಿಗೇ ಹಿಡಿಸಾಣೆಲ್ಲರಿ.

ಗೌರಿ : ಮಳ್ಳ ಅದೀರಿ ಆತು ! ಒಲ್ಲಿ ಅನಬ್ಯಾಡ್ರಿ. ನಿಮಗ ಸಿಟ್ಟ ಬಂದರೂ ನನಗ್ಯಾನ ಸಿಟ್ಟಿಲ್ಲ. ಸುಮಾಕ ನಾ ಹೇಳೂ ಮಾತ ಕೇಳರಿ. ಆ ಸರಪಂಚ ನಿಮ್ಮ ಚಪ್ಪಲೀ ಎತ್ತಾಂಗ ಮಾಡತೀನ. ಆಯಿಂದ ಆ ಗೌಡನ್ನ ಒಂದ ಕೈ ನೋಡೀರಂತ.

ಶಂಕರ : ( ಜುಗುಪ್ಸೆಯಿಂದ) ಎಲ್ಲಾ ದಾರಿ ಮುಗದವೂ ಅಂತ ಈ ದಾರಿ ತಗದ ರ್ಯಾನರಿ ? ಯಾವಾಗ ಯಾನಾಗೂದ ಅದಾದೀತಲಾ ! ಹಣಿಯಾಗ ಬರದಿದ್ದ ಇದ್ದರ ಅನಭೋಗಸಾಕ ಬ್ಯಾಡಾ ? ಗಂಡಸತನಾ ಕಳಕೊಂಡ ಬಾಳೇ ಮಾಡೂದು ನನ್ನ ಕಡಿಂದ ಆಗಾಣೆಲ್ಲ. ಅದಾರಲಾ ನಿಮ್ಮ ಸುತ್ತಮುತ್ತ ಹಂತಾ ಮಂದಿ! ಹೆಣ್ಣಿನ ಮುಂದ ಮಾಡಿ ಇಲೆಕ್ಶನ್ ಗೆದ್ದರು ಅಂದ ಮ್ಯಾಗ ಗಂಡಸತನಾ ಯಾನ ಉಳಧಾಂಗಾತ ?

ಗೌರಿ : ಹಂತಾವರ್ನ ನೋಡಿ ನೋಡಿ ಹೇಸಿಗಿ ಬಂದೈತಂತ ನಿಮಗೆ ಹಾತೊರೀತೈತಿ ಜೀವ ! ಅವರ ಜೋಡಿ ಬಾಳೇ ಮಾಡೂದು, ಬೆದರ ಜೋಡೀ ಬಾಳೇ ಮಾಡೂದು ಒಂದ್ನರಿ. ಅದಕ್ಕ ಈಟ ನಾಚಿಕಿ ಬಿಟ್ಟು ನಿಮಗ ಕೇಳಾಕ ಹತ್ತೀನರಿ. ( ಹತ್ತಿರ ಸರಿಯುವಳು )

ಶಂಕರ : ಅದನ್ನೆಲ್ಲಾ ಯಾನ ಮಾತಾಡತೀರಿ ತಗೀರಿ. ಅವರಿನಾ ಬರಲಿಲ್ಲ ನೋಡರಿ. ಯಾನ ಮತ್ತ ಎಲ್ಲರೆ ಹ್ವಾದರೋ ? ಆತು ನಮ್ಮಪ್ಪ ಬರೂ ತನಾ ನಾ ಇಲ್ಲೆ ಧೆಲೀಜದಾಗ ಖುಂಡರತೇನ. ಅವರಿಗೆ ಹೇಳಿರ್ರಿ. (ಏಳುವನು)

ಗೌರಿ : ಇನೊಂದ ಜರಾ ಖುಂಡರ್ರಿ. ಕಾಲಿಗೆ ಬೀಳತೇನು. ಪಾನಪಟ್ಟಿ ಮಾಡಿ ಕುಡತೇನ. ನಿಮ್ಮ ಕಾಲಾಗ ಬಿದ್ದರೂ ಜೀವಕ್ಕ ತಂಪಾದೀತ. ಖುಂಡರ್ರಿ, ಮಾತಾಡ್ರಿ. ಬರೇ ನಿಮ್ಮ ಮಾತ್ನ ಕೇಳಬೇಕನಸತ್ಬತಿ. ಇನ್ನ ಹ್ವಾದರ ಮತ್ತ ಎಂದ ಬರತೀರಿ ಮಾತಕೊಟ್ಟ ಹೋಗರಿ. ನಾ ಬಿಡಾಕೆಲ್ಲ. ( ಅವನ ದಾರಿಗೆ ಅಡ್ಡವಾಗಿ ನಿಲ್ಲುವಳು )

ಶಂಕರ : ಸರೀರಿ, ಸುಮಾಕ ಹಾದೀ ಬಿಡರಿ. ಒಮ್ಮೆ ಬಂದದ್ದ ಸಾಕಾತಲ್ಲ, ಇನ ಇನ್ನೊಮ್ಮಿ ಈ ಮನೀ ಕಟ್ಟೀ ಕಲ್ಲ ಏರಾಕಿಲ್ಲ.

ಗೌರಿ : ಮನಸಿನ್ಯಾಗ ಆಸೇವು ಹುಟ್ಟಿಸಿ ಹಾಗ್ನ ಹೋಗಬ್ಯಾಡ್ರಿ. ಹೊಟ್ಟೀಕಿಚ್ಚು

ಹೆಚ್ಚ ಮಾಡಬ್ಯಾಡ್ರಿ. ನೀವು ಹೋಗೂದಽ ಆಗಿತ್ತಂದ್ರ ನನ್ನ ಕುಳದು ಜೀವಾ ತೊಗೊಂಡ ಹೊರಗ ಹೋಗ್ರಿ.

ಶಂಕರ : ಸರಿ ಸರಿ, ಎಲ್ಲೀ ಪೀಡಾ ಗಂಟಿ ಬಿತ್ತಲೇ ! ಎಲ್ಲೋ ಹೆಣ್ಣದೆವ್ವ ಹೀಗ ಕಾಡಿ, ಜೀವಾ ತೊಗೋತಾವು ಅಂತ ಕೇಳಿದ್ದೆ. ಇದೆಲ್ಲೋ ಜೀವಂತ ದೆವ್ವ ಕಾಣತ್ತಽತಿ. ಹತ್ತ ಗಂಡಸರನ ಮುರಕೊಂಡ ತಿಂದೀದಿ, ಇನ್ನೂ ಸಾಕಾಗಿಲ್ಲ್ಯಾನ ? ಸರೀ ದಾರಿ ಬಿಡ.

[ ಅಡ್ಡವಾಗಿದ್ದ ಗೌರಿಯನ್ನು ಬಲವಾಗಿ ನೂಕಿ ಹೊರಡುವನು. ಗೌರಿ ಚಿಟ್ಟನೆ ಚೀರಿದಾಗ ದಿಗ್ಭ್ರಮೆಗೊಂಡು ನಿಂತಲ್ಲಿಯೇ ನಿಲ್ಲುವನು ]

ಗೌರಿ : ಅಯ್ಯೋ, ಯಪ್ಪಾ ... ! ಯಾರರೆ ಉಳಸಬರ್ರಿ !

[ ಒಳಗಿನಿಂದ ತಮ್ಮಣ್ಣಿ, ಗೌಡರು, ಬಸವಯ್ಯ ಗಾಬರಿಗೊಂಡು ಬರುತ್ತಾರೆ ]

ಗೌಡ : ಏನಾತು, ಯಾಕ ಒದರಿದಿ ? ಇವ ಏನರೆ ಮಾಡಿದ ಏನ ?

ತಮ್ಮಣ್ಣಿ : ಏ ಬಸಯ್ಯಾ ಮದಲ ಹೋಗಿ ಆ ಬಾಕಲದಾಗ ನಿಂದ್ರು, ಮತ್ತೆಲ್ಲ್ಯರ ಓಡಿಗೀಡಿ ಹ್ವಾದಾನ.

ಶಂಕರ : ( ಧೈರ್ಯ ತಂದುಕೊಂಡು ) ನಾ ಯಾಕ ಓಡಿ ಹೋಗೂದುಲ್ಲಾ. ಮದಲ ಈಕಿನ್ನ ಸಂಬಾಳಸರಿ. ಹಿಂತಾ ಸೂಳ್ಯಾರಿದ್ದರ ನಿಮ್ಮ ಪಂಚಗಟ್ಟಿಗಿ ಇನಾರೊಕ್ಕ ಬಂದೀತ. ಎಲ್ಲಾ ಗಂಡಸತನಾ ಮುಗದಮ್ಯಾಗ ಹಿಂತಾವರ ಬೇಕಲಾ ನಿಮ್ಮ ಕಟ್ಟಿಗಿ.

ಗೌರಿ : ನಾ ಯಾರ ತಾ ಯಾರ, ಮತ್ತ ಹಿಂತಾ ಮಾತಾಡಾಕ ಬರತಾನ.

ಗೌಡ : ಅಂದರ ನಿನಗ ಒದರಲಿಕ್ಕೆ ಏನಾಗಿತ್ತ ?

ಶಂಕರ : ನನ್ನ ಹಂತಾವರ್ನ ನೋಡಿದೂಣ ಖಬರ ಹಾರಿರಬೇಕ್ರಿ. ಇಲ್ಲದ ಒನಪಾ ತಗೀಬ್ಯಾಡ. ಯಾನಾತ ಹೇಳ.

ಗೌರಿ : ( ಬಿಕ್ಕಿಸುತ್ತ ) ಇನ್ಯಾಕ ನಾ ಜೀವಾ ಇಡಾಣಿಲ್ಲ. ಅಬರೂ ಕಳಕೊಂಡ ಮ್ಯಾಗ ಯಾತಕ ಇರೂದ ? ಗೌಡರ, ನನ್ನ ಮುಗಸೇ ಬಿಡ್ರಿ. ಆಮ್ಯಾಗ ಯಾನ ಮಾಡೂದ ಮಾಡಿಕೋರಿ.

ಗೌಡ : ( ಕಿಡಿಕಿಡಿಯಾಗಿ ) ಅಂದ್ರ ನಾವು ಒಳಗ ಇದ್ದಾಗ ಏನರೆ ಮಾಡಿದನೇನ ? ಹೇಳಲಾ ಅಳತೀ ಏನ ? ಇಂದ ಯಾರದ ಹೋಗತಽತಿ ಹೋಗೇಬಿಡಲಿ.

ಶಂಕರ : ಆಕಿನ್ನ ಯಾನ ಕೇಳತೀರಿ ? ನಾ ಹೇಳತಽನ ಕೇಳರಿ. ನಿಮ್ಮನ್ನ ಬಿಟ್ಟ ನನ್ನ ಮನೀ ತೊಳೀಬೇಕಂತಾಳ್ರಿ. ಅದಕ ಬ್ಯಾಸರಾಗಿ ನಾ ಹೊರಗ ಹೊಂಟರ ಬಾಕಲದಾಗಽ ತರಬಿದಳ. ನಾ ಸರಿಸಿ ಮುಂದ ಹೊಂಟರ ಈ ಪರೀ ಚೀರತಾಳು.

ಗೌರಿ : (ಇನ್ನೂ ಬಿಕ್ಕಿಸುತ್ತ) ಗೌಡ್ರ, ಹ್ಯಾಂಗ ಹೇಳೂದಾ ? ಒಡದ ಹೇಳಿದರ ನನ್ನ ಜೀವಾನss ತೊಗೊಂತೀರಿ. ಅವಂದೇನ ನೀವ ಮಾಡಾವರ ?

ಗೌಡ : ಏss, ಯಾಕ ನನ್ನ ಸಿಟ್ಟಿಗಿ ತರಸತೀ ? ಹೇಳೆರ ಹೇಳಲಾ. ಇಂದ ಏನಾಗೂದ ಇಲ್ಲೇ ನಿಕಾಲೆ ಮಾಡತೀನ. ನಿನ್ನ ಕೈಮುಟ್ಟಿ ಮೈಮುಟ್ಟಿ ಬಂದನೇನ ?

ಗೌರಿ : (ಅದೇ ದನಿಯಲ್ಲಿ) ನೀವು ಒಳಗ ಇದ್ದಿರಿ. ಅದರದೂ ಅಂಜಿಕಿಲ್ಲರಿ ಅವಗ. ಎಲಿ ಹಾಕ್ಕೋರಿ ಅಂದರ ಪಾನಪಟ್ಟಿ ಮಾಡಿ ಕುಡಂದಾ ! ಹಂತ್ಯಾಕ ಬಂದು ಕೈ ಹಿಡದಾ ! ಬ್ಯಾಡ್ರಿ ... ... ಮುಂದೇನಾತು ನನ್ನ ಕಡಿಂದ ಹೇಳೂದ ಆಗಾಣಿಲ್ಲರಿ. ತಂದರೆ ಇನ್ನೂ ಲಗ್ನ ಆಗೂದ ಬಿಡೂದ, ಹೀಂಗ ಮಾಡಬೇಕ ಯಾನರಿ ?

ಗೌಡ : ಸಾಕ ಬಿಡ. ಮುಂದಿಂದ ಎಲ್ಲಾ ತಿಳದಾಂಗ ಆತ. ನೀ ಏನೂ ಹೇಳಬ್ಯಾಡ. ತಮ್ಮಾ್ಯ ಹೋಗ ಒಳಗ. ನೋಡತೀ ಏನ ? ತಿಳೂದುಲ್ಲ ಏನ ನಿನಗ. ಒಳಗ ಹೋಗಿ ಅದನ ತಾ. ಯಾವ ಉಳಸಗೋತಾನೋ ನೋಡತೀನ.

ಶಂಕರ : ಆದಿಬುನಾದಿಯಿಂದ ಅದನ ಮಾಡತss ಗೌಡಕಿ ಮಾಡತೀರಿ ! ಕಟಗರ ಗಿಣಿ ಬೆಳಧಾಂಗ ಬೆಳದಾವರಿಗೆ ಬ್ಯಾರೆ ಯಾನ ಗೊತ್ತಾ ? ಆದರ ಮದಲss ನೋಡಿಕೋರಿ. ಆ ಸರಪಂಚ ತಂದಾ, ಅದು ಯಾರ ಮ್ಯಾಲ ಬೀಳತೈತಿ ಅನೂದು ನೋಡರಿ.

ಗೌರಿ : ( ಪರಿಸ್ಥಿತಿಯ ಅರಿವಾಗಿ ) ಇದನ ಯಾನ ನಡಿಸಿದಿರಿ ನನ್ನ ಮನ್ಯಾಗ ? ತಲಿ ಕಾಯೂದಂದ್ರ ಈ ಪರಿ ಯಾನ ? ಗೌಡ್ರ, ಹಂತಾ ಸಣ್ಣ ಹುಡಗನ ಮ್ಯಾಗ ಕೈ ಮಾಡಿದರ ಯಾನ ಬಂತ ? ಇನ್ನೊಮ್ಮೆ ಹಿಂತಾ ಕೆಲಸಾ ಮಾಡಾಣಿಲ್ಲಾ ಅಂತ ನಿಮ್ಮ ಕಾಲ ಹಿಡೀತಾರಲಾ, ಅಲ್ಲಿಂದ್ಯಾನ ?

ಗೌಡ : ನನ್ನ ಕಾಲ ಹಿಡದರ ನಿನ್ನ ಅಬರೂ ಬರತೈತೇನ ? ನಿನ್ನ ಕಾಲ ಹಿಡದು ತೆಪ್ಪಾತು ಅನ್ನಲಿ ಬೇಕಾರ, ಬಿಡತೀನ.

ಶಂಕರ : ಹಿಂತಾ ಸೂಳ್ಯಾರ ಕಾಲ ಹಿಡದು ಬದಕೂ ಹಾಂಗ ಕಾಣತೀನೇನರಿ ನಾ? ಇದss ಅಂದೀರಿ ಇನ್ನೊಮ್ಮೆ ಅಂದ ನೋಡರಿ ಅಲ್ಲಿಂದ ! ಕಾಲಾಗಿನ ಮೆಟ್ಟು ಕೈಯಾಗ ಬಂದೂ ಅಂತss ತಿಳೀರಿ. ಏನ ಆಗೂದ ಆಗೇ ಹೋಗಲಿ. ಹುಟ್ಟಿದ ಹುಳಾ ಒಮ್ಮೆ ಸಾಯಾಕಬೇಕಲಾ !

ಗೌಡ : ಏ ತಮ್ಮಾ್ಯ ತಂದ್ಯೋ ಇಲ್ಲೋ ... ... ನಾನss ಬರತೀನ ನಿಂದರ ... ... ( ರಭಸದಿಂದ ಒಳಗೆ ಹೋಗುವರು ).

ಗೌರಿ : ಬಸಯ್ಯಾ, ಅವರ್ನ ಒಂದ ಜರಾ ಹಿಡಿ ಹೋಗ. ( ಬಸವಯ್ಯ ಗೌಡರನ್ನು ಹಿಂಬಾಲಿಸುವನು ) ಇನ್ನೆಲ್ಲಿ ಹೋಗತಿ ? ಜೀವಾ ಉಳಿಸಿಗೋಬೇಕಾರ, ನಾ ಅಂದದ್ದಕ್ಕ ಹೂಂ ಅನ್ನ. ಇನಾ ನಿನ್ನ ಉಳಸತೀನ. ಶಂಕರಾ, ಈಗss ಹೇಳತೀನು. ಹೆಂಗಸ ಕರದರ ಬಿಟ್ಟ ಹೋಗಬಾರದ.

ಶಂಕರ : ಥೂ ನಿನ, ಯಾರ ಇಟ್ಟೆರ ಈ ಹೆಸರ ನಿನಗ. ದೂರ ಸರಿ ಹೋಗ.

[ ಗೌರಿ ಉನ್ಮಾದದಿಂದ ಶಂಕರನನ್ನು ಅಪ್ಪಿಕೊಳ್ಳುವಳು. ಶಂಕರ ಅವಳನ್ನು ಮತ್ತೆ ಜೋರಿನಿಂದ ನೂಕುವನು. ಗೌರಿ ಒಮ್ಮೆಲೆ ಬಿಡುವದಿಲ್ಲ. ತಳಕು ಹಾಕಿದ ಹಾವುಗಳಂತೆ ಇಬ್ಬರೂ ಒದ್ದಾಡುವರು. ಕೊನೆಗೆ ಸೋತು ಗೌರಿ ಹೈರಾಣಾಗಿ ನೆಲದ ಮೇಲೆ ಬೀಳುತ್ತಾಳೆ. ಒಳಗಿನಿಂದ ಗೌಡರು ಕೈಯಲ್ಲಿ ಚಪಕೊಡಲಿಯನ್ನು ತೆಗೆದುಕೊಂಡು ಬರುತ್ತಾರೆ. ]

ಗೌರಿ : ( ನೆಲದ ಮೇಲೆ ಹೊರಳುತ್ತ ) ಗೌಡ್ರ, ಉಳಸರಿ ನನ್ನ ... ಇಲ್ಲಾತು ಅಂದ್ರ ನನ್ನೂರಿಗೆ ನನ್ನ ಕಳಿಸಿಬಿಡ್ರಿ ... ಅಯ್ಯೋ ಯಪ್ಪಾ ... !

ಗೌಡ : ನಿಂದ್ರ ನಿನ ... ಇಂದ ಇದರ ನಿಕಾಲೆ ಮಾಡೇಬಿಡತೀನು ... ಯಾರ ಬರ ತಾರ ಬರಲಿ ...

[ ಹೊರಗಿನಿಂದ ಇದೇ ಹೊತ್ತಿಗೆ ಮಲ್ಲೇಶಿ, ಹವಳೆಪ್ಪ ಬರುತ್ತಾರೆ. " ಶಂಕರಾ ನಡೀಲೆ ... ರುಪಾಯಿ ಕೊಟ್ಟು ಹೋಗೂನು ... ಮತ್ತೇನೋ ಗದ್ದಲ ನಡೆದೈತಲ್ಲಲೆ ! ಎನ್ನುತ್ತ ಒಳಗೆ ಬರುವದಕ್ಕೂ, ಗೌಡರು ಬೀಸಿದ ಚಪಕೊಡಲಿ ಅವನ ತಲೆಯ ಮೇಲೆ ಬೀಳುವದಕ್ಕೂ ಸರಿಹೋಗುತ್ತದೆ. ]

ಮಲ್ಲೇಶಿ : ಕೊಂದ್ಯಲ್ಲೋ ಶಂಕರಾ ... ಅವರು ಹೊರಗ ಬಂದಾರು. ನಿನ್ನ ಮಾನಾ ಉಳಸಬೇಕಂತ ಮಾಡಿದ್ದೆ ... ( ಶಂಕರ "ಯಪ್ಪಾ!" ಎಂದು ಚೀರುತ್ತ ಅವನ ಮೇಲೆ ಬೀಳುತ್ತಾನೆ. ಹವಳೆಪ್ಪ ಹೊರಗೆ ಹೋಗಿ ಫೌಜದಾರನನ್ನು ಕರೆತರುತ್ತಾನೆ" ಗೌಡರು, ತಮ್ಮಣ್ಣಿ, ಬಸವಯ್ಯ, ಗೌರಿ ಗಾಬರಿಯಾಗಿ ನಡುಗುತ್ತಿರುವಾಗ — ).

## ಎಚ್ಚರಿಕೆ !

೧. ಇದರ ಎಲ್ಲ ಒಡೆತನ ಶ್ರೀಮತಿ ಶಾರದಾದೇವಿ ಅದ್ಯ ಅವರದು.

೨. ಆಡುವ ಮುಂಚೆ ೧೦೦ ರೂಪಾಯಿಗಳ ಅಧಿಕಾರಧನವನ್ನು ಕೊಡತಕ್ಕದ್ದು.

೩. ಸನ್ನಿವೇಶಕ್ಕೆ ಸಮರ್ಪಕವಾದ ರಂಗಸ್ಥಲವಿಲ್ಲದಲ್ಲಿ ಪ್ರಯೋಗಕ್ಕೆ ಅಪ್ಪಣೆ ದೊರೆಯದು.

೪. ನಾಟಕದ ತಯ್ಯಾರಿ ಸಾಕಷ್ಟಿಲ್ಲ ಎಂದು ಕಂಡುಬಂದಲ್ಲಿ ಕೊಟ್ಟ ಅಪ್ಪಣೆಯನ್ನು ಹಿಂತೆಗೆದುಕೊಳ್ಳಲಾಗುವದು.

## ಅರ್ಪಣೆ

ಈ ನಾಟಕದ ಹೆಸರನ್ನೂ

ಮುನ್ನುಡಿಯ ಕೊನೆಯ ವಾಕ್ಯವನ್ನೂ

ಸೂಚಿಸಿದ

ನನ್ನ ಧರ್ಮಪತ್ನಿ

ಸೌ. ಶಾರದಾದೇವಿಗೆ

ವೈವಾಹಿಕಜೀವನದ ೨೫ ವರ್ಷಗಳ ಸವಿನೆನಪಿಗಾಗಿ

ಈ ನಾಟಕ ಅರ್ಪಿತ.

—ಶ್ರೀರಂಗ

# ಮುನ್ನುಡಿ*

ಇದೊಂದು ಹೊಸ ಪ್ರಯತ್ನ. ಇದರಲ್ಲಿ ಕಲೆ, ಜೀವನ, ವಿಮರ್ಶೆ ಎಲ್ಲವೂ ಸೇರಿದೆ. ತಂತ್ರ ಹೊಸತು. ನಮ್ಮ ರಂಗಭೂಮಿಯ ಶಕ್ಯಾಶಕ್ಯತೆಗಳನ್ನು ಮೀರಿ ನಾನು ನಾಟಕವನ್ನು ಬರೆಯುತ್ತಿದ್ದೇನೆ ಎಂಬುದು ನನ್ನ ದೋಷವಲ್ಲ. ನಾಟಕದಿಂದ ನಾಟಕಕ್ಕೆ ನಾನು ಸರಿತಂತೆ, ನನ್ನ ಶೈಲಿ-ತಂತ್ರಗಳು ಬೆಳೆದಂತೆ ನಮ್ಮ ರಂಗಭೂಮಿ ಮುಂದುವರಿಯದಿದ್ದರೆ ಅದರ ಹೊಣೆ ಹೆಚ್ಚಾಗಿ ನಮ್ಮ ಸಾಮಾಜಿಕ ಜೀವನದ ಮೇಲಿದೆ, ನನ್ನಂತಹ ನಾಟಕಕಾರರ ಮೇಲಲ್ಲ. ಇದು ವರೆಗೂ ಬರೆದ ನಾಟಕಗಳನ್ನು ಅರಿತುಕೊಂಡು ವಿಮರ್ಶಿಸುವಷ್ಟು ಶಕ್ತಿಯೂ ಕಾಣಬರುವದು ಕಡಮೆಯೆ. ಸದ್ಯಕ್ಕೆ ಅಲ್ಲಲ್ಲಿ ನಡೆಯುತ್ತಿರುವ ಪ್ರಯತ್ನಗಳಿಂದ, ಸಮರ್ಪಕ ಸಂಘಟನೆಯಿಂದ ನಿಸ್ವಾರ್ಥ-ನಿಷ್ಪಕ್ಷಪಾತ-ನಿಷ್ಣಾತ ಪ್ರೋತ್ಸಾಹದಿಂದ ಬೇಗ ರಂಗಭೂಮಿಯ ಉದ್ಧಾರವಾದಲ್ಲಿ ಅಷ್ಟೆ ಬೇಗ ನನ್ನಕಿಂತಲೂ ಒಳ್ಳೆಯ [illegible]ಕಕಾರರು ಕರ್ನಾಟಕದಲ್ಲಿ ಹುಟ್ಟಿಬರುವರೆಂಬ ಭರವಸೆ ನನಗಿದೆ. ಇಡಿಯ ರಾತ್ರಿ ಕಣ್ಣುಮುಚ್ಚಿದವರೆದುರು ಒಮ್ಮೆಲೆ ಪ್ರಕಾಶಮಾನನಾದ ಸೂರ್ಯನು ಬೆಳಗಿದರೆ ಕಾಣುವುದುಳಿದು ಅವರ ಕಣ್ಣಿಗೆ ಕತ್ತಲೆ ಕಟ್ಟಬಹುದು. ಅದಕ್ಕಾಗಿ ಅರುಣೋದಯಕ್ಕೆ ಹೆಮ್ಮೆ, ಕತ್ತಲೆಯಿಂದ ಬೆಳಕಿಗೆ ಸುಗಮವಾದ, ಸುಂದರವಾದ ದಾರಿ ತಾನು ಎಂದು.

— ಶ್ರೀರಂಗ

---

* ಕೊನೆಯ ಹಿನ್ನುಡಿಯನ್ನೂ ನೋಡಬೇಕು, ದಯವಿಟ್ಟು.

## ಅಂಕ ೧

[ ಸಾಯಂಕಾಲದ ಸಮಯ. ತೆರೆ ಮೇಲಕ್ಕೆದ್ದಾಗ ರಂಗಭೂಮಿಯಲ್ಲಿ ಯಾರೂ ಇಲ್ಲ. ಪ್ರೇಕ್ಷಕರ ಎಡಬದಿಗೆ ಮೂಲೆಯಲ್ಲಿ ಒಂದು ಮನೆಯ ತಲೆಬಾಗಿಲು, ಸದ್ಯಕ್ಕೆ ಮುಚ್ಚಿದೆ. ಬಾಗಿಲಿಗೆ ಹೋಗಲು ೨–೩ ಪಾವಟಿಗೆಗಳಿವೆ. ಬಾಗಿಲಿನಿಂದ ಹೊರಗೆ ಬರುವಾಗ ಎಡಕ್ಕೆ ಒಂದು ಕಿಟಕಿ, ಅದೂ ಈಗ ಮುಚ್ಚಿದೆ. ಬಾಗಿಲದ ಇನ್ನೊಂದು ಬದಿಯ ಗೋಡೆ ರಂಗಸ್ಥಲವನ್ನು ದಾಟಿ ಹಾಗೇ ಮರೆಯಾಗಿದೆ. ಕಿಟಕಿಯಿದ್ದ ಗೋಡೆ ರಂಗಸ್ಥಲದ ಹಿಂತುದಿಯ ಮಧ್ಯದ ವರೆಗೆ ಹೋಗಿದೆ; ಆದರೆ ಅದನ್ನು ಮುಟ್ಟಿಲ್ಲ; ಎಂದರೆ ಆ ಕಡೆಯಿಂದ ಯಾರಾದರೂ ಬರಬಹುದಾಗಿದೆ. ರಂಗಸ್ಥಲದ ಮಿಕ್ಕ ಭಾಗವೆಲ್ಲ ಬಯಲು. ಆದರೆ ಪ್ರೇಕ್ಷಕರ ಬಲಬದಿಗೆ – ರಂಗಸ್ಥಲದ ಹಿಂತುದಿಗೆ – ಗಿಡಗಳದೊಂದು ದಟ್ಟ ಗುಂಪು ಇದೆ. ಉಳಿದ ಕಡೆ ಕಂಟಿ, ಹುಲ್ಲು, ಹಸರು ನೈಸರ್ಗಿಕವಾಗಿ ಬೆಳೆದಿದೆ. ಅರ್ಧಕ್ಕಿಂತ ಹೆಚ್ಚಾಗಿ ಸೂರ್ಯನು ಮುಳುಗಿದ್ದರಿಂದ ಕ್ರಮೇಣ ಕತ್ತಲಾಗುತ್ತ ಹೋಗುವುದು; ಬೆಳುದಿಂಗಳಿನ ದಿನಗಳಾದುದರಿಂದ ಮನೆ–ಗಿಡಗಳ ನೆರಳನ್ನು ಬಿಟ್ಟರೆ ಮಿಕ್ಕದ್ದೆಲ್ಲ ಕಾಣುವಂತಿದೆ.

ತೆರೆ ಎದ್ದ ಒಂದು ನಿಮಿಷಕ್ಕೆ ದೂರದಿಂದ ಗೂಬೆಯ ಘೂತ್ಕಾರವೊಂದು ಕೇಳಬರುವುದು. ಅಷ್ಟರಲ್ಲಿ ರಂಗಸ್ಥಲದ ಹಿಂತುದಿ ಮತ್ತು ಮನೆಯ ಗೋಡೆಯ ಮಧ್ಯದಿಂದ ಮೆಲ್ಲನೆ ಒಂದು ಮುಖ ಹಣಿಕಿಕ್ಕುವುದು. ಮುಖದಲ್ಲಿ ಭಯ–ದ್ವೇಷ–ದುಃಖಗಳ ಮುದ್ರೆ. ಒಮ್ಮೆಲೆ ಮುಖ ಅತ್ತಿತ್ತ ನೋಡುವುದು. ಗೂಬೆಯ ಇನ್ನೊಂದು ಘೂತ್ಕಾರ; ತಟ್ಟನೆ ಮುಖ ಮನೆಯ ಹಿಂದೆ ಮರೆಯಾಗುವುದು.

ಒಂದು ನಿಮಿಷ ನಿಶ್ಶಬ್ದ. ಆ ಮೇಲೆ ಮೆಲ್ಲಗೆ ಮುಖ ಮತ್ತೊಮ್ಮೆ ಹಣಿಕಿಕ್ಕಿ ಸುತ್ತಲೂ ನೋಡುವುದು. ಎಲ್ಲೆಡೆಯೂ ಶಾಂತವಿದೆ — ಎಂದು ಕಂಡು ಆ ಮುಖ ಮೆಲ್ಲನೆ ಮುಂದೆ ಸರಿದಾಗ, ಹರಿದ ಬಟ್ಟೆಗಳನ್ನು ತೊಟ್ಟ ವ್ಯಕ್ತಿ ಎಂದು ಕಂಡುಬರುವುದು. ಆ ವ್ಯಕ್ತಿಯ ಬಗ್ಗೆ ಇದಕ್ಕಿಂತ ಹೆಚ್ಚು ತಿಳಿದುಕೊಳ್ಳಲು ಶಕ್ಯವಿಲ್ಲ; ಯಾಕೆಂದರೆ, ಅಷ್ಟರಲ್ಲಿ ಆ ವ್ಯಕ್ತಿ ಧಾವಿಸಿ ಮನೆಯ ಕಡೆ ಬಂದು, ಈ ಕಡೆ ಮುಂದೆ ದಾರಿ ಇಲ್ಲ ಎಂಬುದನ್ನು ಕಂಡು ಹೆಚ್ಚು ಗಾಬರಿಯಾಗಿ ರಂಗಸ್ಥಲವನ್ನು ಸುತ್ತಿ ಕೊನೆಗೆ ಗಿಡಗಳ ಗುಂಪಿನಲ್ಲಿ ಮರೆಯಾಗುವುದು.

ಒಂದೆರಡು ನಿಮಿಷ ನಿಶ್ಶಬ್ದ.

ಕ್ರಮೇಣ ಪ್ರೇಕ್ಷಕರ ಬಲಬದಿಯಿಂದ ಮಾತುಗಳು ಕೇಳಬರುವವು, ಹಿಂದಿನಿಂದ ಮಾತನಾಡುತ್ತ ಮೂರು ವ್ಯಕ್ತಿಗಳು* ಬರುವವು. ಒಂದು ವ್ಯಕ್ತಿ ಮುಂದೆ, ಉಳಿದೆರಡು ಒಂದೆರಡು ಹೆಜ್ಜೆ ಹಿಂದೆ. ಮುಂದಿನ ವ್ಯಕ್ತಿ ಮಾತಾಡುವಾಗ ಹಿಂದಿನ ವ್ಯಕ್ತಿಗಳು ಸೂಚ್ಯ ದೃಷ್ಟಿಯಿಂದ ಪರಸ್ಪರ ನೋಡುವವು. ಮಾತಿನ ಶೈಲಿಗೆ ಸರಿಯಾಗಿ ನಡಿಗೆಯ ವೇಗವೂ ಮೆಲ್ಲಗಿದೆ. ]

೧ನೆ ವ್ಯಕ್ತಿ : ನಾನು ಹೇಳಿದೆನಲ್ಲ, ಹೋದಷ್ಟು ಬುದ್ಧಿ ಹೋಯ್ತು ಅಂದ, ಆದಷ್ಟು ಅನುಭವ ಸಾಕು ಅಂದ.

೩ನೆ ವ್ಯಕ್ತಿ : ನೀವೇ ಹೀಂಗಂದ್ರ ನಮ್ಮಂಥೋರ ಗತಿ ಏನು ?

* ಪ್ರತ್ಯೇಕವಾಗಿ ಹೇಳದಿದ್ದಲ್ಲಿ ಈ ನಾಟಕದೊಳಗಿನ ಪಾತ್ರಗಳ ವೇಷ ದಿನನಿತ್ಯದ ವ್ಯವಹಾರದಲ್ಲಿ ಅಂತಹರಲ್ಲಿ ಕಂಡುಬರುವ ಸಾದಾ ಉಡಪು ಎಂದು ತಿಳಿಯಬೇಕು.

೧ನೆ ವ್ಯಕ್ತಿ : ನಾನು ಏನ್ಹೇಳ್ಲಿ ? ಬುದ್ಧಿ ಹೋಯ್ತು ಅಂತ ತಿಳಕೋಬೇಕಾದ್ರೂ ಬುದ್ಧಿ ಬೇಕು.

೩ನೆ ವ್ಯಕ್ತಿ : ( ಇದೊಂದು ಹಾಸ್ಯಚಟಾಕಿ ಎಂಬಂತೆ ನಕ್ಕು ) ನಮ್ಗ ಅಷ್ಟೂ ಬುದ್ಧಿ ಉಳಿದಿಲ್ಲ ಅಂತೀರಾ ! ಹಹ ! ಇದ್ದಷ್ಟು ಹೋತು ಅಂತೀರಾ ?

೧ನೆ ವ್ಯಕ್ತಿ : ಅದನ್ನಾದರೂ ಅನ್ಲಿಕ್ಕೆ ನಾನ್ಯಾರು ? ನನ್ಮಾತ್ಹೇಳಿದೆ. ನಾಟಕಾ ಬರೆದು ಕೊಡು ಅಂದಿರಿ ; ಇಷ್ಟು ವರ್ಷ ಬರೆದ್ಬರೆದ್ಬುದ್ಧಿ ಕಳ್ಕೊಂಡೆ ; ಆಡಿ ತೋರಿಸಿದ್ವರ ಅನುಭವದಿಂದ ಹಣ್ಣಾಡೆ ; ಸಾಕಿನ್ನು, ಅಂತೀನಿ. ( ರಂಗದ ಮಧ್ಯಕ್ಕೆ ಬಂದು ಎರಡೂ ವ್ಯಕ್ತಿಗಳನ್ನು ಎದುರಿಸಿ ನಿಲ್ಲುವನು. )

೨ನೆ ವ್ಯಕ್ತಿ : ಅದು ನಿಮ್ಮ ಮಾತಾಯ್ತು. ಈಗ ನಮ್ಮ ಮಾತ ಒಂದೀಟು ಕೇಳ್ರಿ ಅಂತೀವಿ.

೧ನೆ ವ್ಯಕ್ತಿ : ( ತಿಳಿಯದೆ ) ನಮ್ಮಾತು – ನಿಮ್ಮಾತು ಅಂದ್ರ ? ಬರೆದ ನಾಟಕದ ರಿಹರ್ಸಲ್ ನಡೆದಿದೆ ಅನ್ನೋಹಾಂಗ ಮಾತಾಡ್ತೀರಲ್ಲ ?

೩ನೆ ವ್ಯಕ್ತಿ : ಅಂದ್ರ ಹೀಂಗ ಐತಿ ನೋಡ್ರಿ ಇದರ ಕತೆ. ನೀವು ನಾಟಕಾ ಬರೆದಿರಿ, ಬರೀತಾ ಇದ್ದೀರಿ, ನಾಲ್ಕ ಜನಾ ಕಲ್ತವರು ನಿಂ ಹೆಸರು ಹೇಳಿದರು, ಅಂತ ನಿಂ ಕಡೆ ಬಂದೀವಿ.

೧ನೆ ವ್ಯಕ್ತಿ : ಕಲ್ತವರು ಹೇಳಿದರೆ ? ನಾನು ನಾಟಕಾ ಬರೀತೀನಿ ಅಂತ ಹೇಳಿದರ ? ಆಶ್ಚರ್ಯ ! ಅತ್ಯಾಶ್ಚರ್ಯ ಅಂದೆ !

೨ನೆ ವ್ಯಕ್ತಿ : ( ತಿಳಿಯದೆ ಬೆರಗಾಗಿ ) ಅಂದ್ರ ?

೧ನೆ ವ್ಯಕ್ತಿ : ಅಂದ್ರೇನು ? ನನ್ಹೆಸರು ಯಾರಿಗೂ ಗೊತ್ತಿಲ್ಲ ; ಗೊತ್ತಾಗ್ಬಾರ್ದು ಅಂತ ಬ್ಯಾರೆ ಹೆಸರಿನಿಂದ ನಾಟಕಾ ಬರೆದೀನಿ —

೩ನೆ ವ್ಯಕ್ತಿ : ( ಇದೊಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು ) ಹಹ ! ನಿಮ್ದು ಭಲೆ ಏಟು ಮಾತಿನ್ದು ! ಅದಕ್ಕೇ ಮತ್ತ ನಾವೂ ನಿಮ್ಮ ಮುಂದ ಕೈಕಟ್ಟಿ ನಿಂತೀವಿ. ನೀವು ಹೇಳಿಧಾಂಗ ಮಾಡ್ತೀವಿ, ನಮ್ಗೊಂದು ನಾಟಕಾ ಬರೆದು ಕೊಟ್ಬಿಡಿರಿ.

೧ನೆ ವ್ಯಕ್ತಿ : ನಾನು ಹೇಳಿಧಾಂಗ ಮಾಡ್ತೀರಾ ?

೨-೩ನೆ ವ್ಯಕ್ತಿಗಳು : ನೀವ್ಹೇಳಿಧಾಂಗ —

೧ನೆ ವ್ಯಕ್ತಿ : ಹಾಂಗಿದ್ದರ ಈ ನಾಟಕದ ಮಾತ ಬಿಟ್ಬಿಡಿರಿ. ನಾನ್ಹೇ ನಾಟಕಾ ಬರೆಯೋದನ್ನ ಬಿಟ್ಟೇನಿ ಅಂದಮ್ಯಾಲೆ —

೨ನೆ ವ್ಯಕ್ತಿ : ಅದನ್ನ ಕೇಳಿಯೆ ನಿಮ್ಕಡೆ ಬಂದಿವಿ —

೧ನೆ ವ್ಯಕ್ತಿ : ( ಚಕಿತನಾಗಿ ) ಬರೆಯೋದನ್ನ ಬಿಟ್ಟೆ ಅಂತ ಕೇಳಿ ಮತ್ತೆ ನಾಟಕಾ ಬೇಡ್ತೀರಿ ನನ್ನಿಂದ — ಅಲ್ಲ, ಅಂದ್ರ ನಿಂ ವಿಚಾರಾದ್ರೂ ಏನು ?

೩ನೆ ವ್ಯಕ್ತಿ : ಇದ್ಮಾತಂದ್ರ, ಇದು ನೋಡಿರಿ, ಸಾಹೇಬರ. ನೀವು ಈಟದಿನಾ

ನಾಟಕಾ ಬರೆದಿರಿ, ಈಗ ಬಿಟ್ಟಿರಿ —

೧ನೆ ವ್ಯಕ್ತಿ : ಹೌದು, ಬಿಟ್ಟೆ ; ಇನ್ನೊವ್ಮೆ ಎಂದಿಗೂ ಕೈ ಕೂಡ ಹಚ್ಚೋದಿಲ್ಲ ಅಂತ ಪ್ರತಿಜ್ಞಾ ಮಾಡಿ ಬಿಟ್ಟೇನಿ.

೨ನೆ ವ್ಯಕ್ತಿ : ನೀವು ನಮ್ಮಂಥೋರ ಮಾತ ಕೇಳಿದ್ರ ಈ ಮುಂಚೆ ಎಂದೋ ಬಿಟ್ಟಿದ್ದಿರಿ.

೩ನೆ ವ್ಯಕ್ತಿ : ಆಯ್ತು, ಈಗಾದ್ರೂ ಏನಾಯ್ತು ? ನಾವೇ ಹೇಳತೀವಲ್ಲ "ಬರೀರಿ" ಅಂತ.

೧ನೆ ವ್ಯಕ್ತಿ : ( ಇನ್ನಿಷ್ಟು ಚಕಿತನಾಗಿ ) ಅಲ್ಲ, ಬಿಟ್ಟಿದ್ದು ಒಪ್ತೀರಿ, ಮತ್ತೆ ಬರೆಯೋದು ಅಂತೀರಿ, ಅಲ್ಲ —

೨ನೆ ವ್ಯಕ್ತಿ : ಅಂದ್ರ ನೀವು ಬರೀತಿದ್ರಲ್ಲಾ ಅಂಥಾ ನಾಟಕ ಬರೆಯೋದನ್ನ ಬಿಟ್ಟಿರಿ.

೩ನೆ ವ್ಯಕ್ತಿ : ಅದು ಪಾಡಾತು ಅಂತ.

೧ನೆ ವ್ಯಕ್ತಿ : (ವಿಚಾರದ ಗೊಂದಲದಲ್ಲಿ ಸಿಲುಕಿ) ಅಂದ್ರ ? ಎಂಥಾವ್ನ ಬರೀಬೇಕಂತೀರಿ ?

೨ನೆ ವ್ಯಕ್ತಿ : ನೋಡಿರಿ, ನೀವು ನಾಟಕಕಾರರು ಅಂತ ಹೆಸರಾದಿರಿ. ಬರೆದಿರಿ, ಬರೆದಿರಿ, ನಾಟಕಾ ಬರೆದೇ ಬರೆದಿರಿ —

೧ನೆ ವ್ಯಕ್ತಿ : ಅದನ್ನೆ ಹೇಳ್ತೀನಿ, ಬರೆದೇ ಬರೆದಿವಿ, ಬರಿದೊ ಬರಿದಾದಿವಿ.

೩ನೆ ವ್ಯಕ್ತಿ : ( ಮೊದಲಿನಂತೆಯೆ ನಗುತ್ತ ) ಹಹ !

೨ನೆ ವ್ಯಕ್ತಿ : ನೋಡಿರಿ, ನಾಟಕಾ ಅಂದ್ರ ನಾಲ್ಕ ಜನಕ್ಕ ಬಂದು ಕೂತು ನೋಡಬೇಕು ಅಂತ ಅನ್ನಿಸಬೇಕು.

೩ನೆ ವ್ಯಕ್ತಿ : ಆದರೆ ನೀವು ಬರೀತಿದ್ದಿರಿ, ಛಾಪಿಸ್ತಿದ್ದಿರಿ —

೨ನೆ ವ್ಯಕ್ತಿ : ಅದೇ ಅಂತೀನಿ. ಬರೀ ಓದ್ಬೇಕು ಅಂತ ಅನ್ನಿಸಿದರ ಸಾಲದು.

೧ನೆ ವ್ಯಕ್ತಿ : ಓದಬೇಕು ಅಂತ ಅನ್ನಿಸೋದು ? ಯಾರಿಗೆ ?

೨ನೆ ವ್ಯಕ್ತಿ : ನಾ ಒಪ್ಪಿಕೋತೀನರಿ, ನಿಂ ನಾಟಕಾ ಜನಾ ಓದತಿತ್ತು, ಓದಿ ಮೆಚ್ಚ —

೧ನೆ ವ್ಯಕ್ತಿ ಆದರೆ ನಾನೇ ಒಪ್ಪಿಕೊಳ್ಳೋದಿಲ್ಲವಲ್ಲ ?

೩ನೆ ವ್ಯಕ್ತಿ ಏನಂದಿರಿ ? ( ಮತ್ತೆ ಮೊದಲಿನಂತೆ ನಗುವನು )

೧ನೆ ವ್ಯಕ್ತಿ ಇಲ್ಲಿ ಕೇಳಿರಿ, ನನ್ನ ನಾಟಕಾ ಯಾರೂ ಓದಿಲ್ಲ —

೨ನೆ ವ್ಯಕ್ತಿ ಓದದಿದ್ದರ ಛಲೋನೇ ಆಯ್ತಲ್ಲರಿ. ನಾಟಕಾ ಅಂದ್ರ ನೋಡೋದು.

೧ನೆ ವ್ಯಕ್ತಿ ಯಾರು ನೋಡಿಯೂ ಇಲ್ಲ.

೩ನೆ ವ್ಯಕ್ತಿ ಆದ್ರೂ ಹೆಸರನ್ನ ಗಳಿಸಿದಿರಲ್ಲ " ನಾಟಕಕಾರ " ಅಂತ ? ಹೋಗ್ಲಿ ಬಿಡ್ರಿ. ಈಗ ನಾವು ಹೇಳೋವಂಥಾ ನಾಟಕಾ ಬರೆದುಕೊಡಿರಿ —

೨ನೆ ವ್ಯಕ್ತಿ : — ಜನ ಹ್ಯಾಗೆ ನೋಡೋದಿಲ್ಲ ನೋಡ್ತೀವಿ —

೩ನೆ ವ್ಯಕ್ತಿ : — ಟಿಕೆಟ್ ಇಟ್ಟರೂ ಸಹಿತ —

೧ನೆ ವ್ಯಕ್ತಿ : ಅಂದ್ರೇನು ಕಾಯಿದೆ ಪಾಸ್ ಮಾಡಿಸುವವರಿದ್ದೀರೇನು ?

೨ನೆ ವ್ಯಕ್ತಿ : ಕಾಯಿದೆ ಯಾಕ, ರಾಯರ? ಅದನ್ನೆ ಹೇಳ್ತೀವಿ ನಿಮಗ. ಜನಕ್ಕ ಎಂಥಾ ನಾಟಕ ಬೇಕನ್ನೋದು ನಮಗ್ಗೊತ್ತು, ನಾವು ಹೇಳ್ತೀವಿ —

೩ನೆ ವ್ಯಕ್ತಿ : .... ನೀವು ಬರೀರಿ —

೧ನೆ ವ್ಯಕ್ತಿ : .... ಜನ ನೋಡ್ತಾರ — ಅಂತೀರಾ ?

[ ದೊಡ್ಡ ನಿರ್ಣಯಕ್ಕೆ ಬಂದು ದಣಿದವರಂತೆ ಮುವ್ವರೂ ಒಂದು ನಿಮಿಷ ಸ್ತಬ್ಧರಾಗುವರು. ]

೧ನೆ ವ್ಯಕ್ತಿ : ( ಉಸಿರೆಳೆದು, ಮನೆಯ ಬಾಗಿಲ ಕಡೆ ನೋಡಿ) ಹಂ ... (ಅವರನ್ನು ನೋಡಿ) ಕ್ಷಮಿಸ್ಬೇಕು. ಮನೆತನಕ ಬಂದ್ರೂ ಹುಚ್ಚನ್ಹಾಂಗ ನಿಮ್ಮನ್ನ ಬೀದಿಯಲ್ಲಿಯೆ ನಿಲ್ಲಿಸೀನಿ ಮತಾಡ್ತಾ. ಒಳಗ ಹೋಗೋಣ, ನಡೀರಿ.

೨ನೆ ವ್ಯಕ್ತಿ : ನಮ್ಮದಿದ್ದೊಂದು ಕೆಲಸ ನೀವ್ಮಾಡಿದರೆ ಎಷ್ಟು ಸಲ ಬಂದ್ಹೋಗ್ತೀವೊ ನಿಮ್ಮನೀಗೆ !

೩ನೆ ವ್ಯಕ್ತಿ : ನಾಟಕಾ ಮಾಡಿಸೋ ಧಂದೇನೇ ನಮ್ದು. ನಿಮ್ಮನೀಗೆ ನಾವು ಬರ್ದೆ ಹೋಗ್ತೀವೆ ?

೧ನೆ ವ್ಯಕ್ತಿ : ಅಂದ್ರೆ ಈಗ ಬರೋದಿಲ್ಲ ಅಂತೀರಾ ?

೨ನೆ ವ್ಯಕ್ತಿ : ಛೆ ! ಛೆ !

೩ನೆ ವ್ಯಕ್ತಿ : ನಾವ್ಕೇಳಿದ ನಾಟಕಾ ನೀವು ಬರೆದು ಕೊಡ್ತೀರಿ, ನೀವು ಕೇಳಿದಾಗ ನಾವು ಬರ್ತೀವಿ, ಇದು ನಡೆಯೋದೇ ಇನ್ಮುಂದೆ ಅಂತ —

೧ನೆ ವ್ಯಕ್ತಿ : ಆದ್ರೆ ನಾನು ನಾಟಕಾ ಬರೀತೀನಿ ಅಂತ —

೨ನೆ ವ್ಯಕ್ತಿ : ನೀವಾಗಿಯೆ ಬರೀತೀನಿ ಅಂದಿಲ್ಲ. ನಾವು ಕೇಳ್ತೀವಿ ಅಂತ ನೀವು ಬರೀತೀರಿ.

೩ನೆ ವ್ಯಕ್ತಿ : ನೀವು ಬರೀತೀರಿ ಅಂತಲೇ ಜನಾ ನೋಡ್ತಾರ —

೨ನೆ ವ್ಯಕ್ತಿ : ನೋಡದೆ ಏನ್ಮಾಡ್ತಾರ ? ನಮಗ್ಗೊತ್ತಿಲ್ಲೇನು ಜನಕ್ಕ ಎಂಥಾ ನಾಟಕ ಬೇಕು ಅಂತ ?

೧ನೆ ವ್ಯಕ್ತಿ : ಎಂಥಾವು ಬೇಕಂತೀರಿ ? ಒಮ್ಮೆ ಹೇಳಿಯೆ ಬಿಡಿರಿ, ನೋಡೋಣ.

[ ದೂರದಲ್ಲಿ ಜನರ ಕೂಗು —" ಹಂ ... ಅಲ್ಲಿ ಹೋದ ! ಹಿಡಿರಿ ..." ಮುಂತಾಗಿ ]

೧ನೆ ವ್ಯಕ್ತಿ : ಏನಿದು ಗದ್ದಲ ? ( ಇಷ್ಟರಲ್ಲಿ ಕೂಗಿನ ಸದ್ದು ತಡದಿದೆ )

೨ನೆ ವ್ಯಕ್ತಿ : ಆದರೂ ಊರ ಹೊರಗೆ ಇದ್ದೀರಿ ಅಂತ ಇಷ್ಟಾದರೂ ಶಾಂತ ಅದ.

೩ನೆ ವ್ಯಕ್ತಿ : ಬರೆಯುವವರು ಅಂದ್ಮ್ಯಾಲೆ ಶಾಂತ ಬೇಕೇ ಬೇಕಲ್ಲ ಸುತ್ಮುತ್ತು ?

೨ನೆ ವ್ಯಕ್ತಿ : ಹಂ....ನೀವು ಕೇಳಿದಿರಲ್ಲ —

೧ನೆ ವ್ಯಕ್ತಿ : ಏನ ಕೇಳಿದೆ ?

೨ನೆ ವ್ಯಕ್ತಿ : ಜನರಿಗೆ ಸೇರೋ ನಾಟಕ ಎಂಥಾವು ಅಂತ —

೧ನೆ ವ್ಯಕ್ತಿ : ಓ ! ಅದು! ಹೋಗಲಿ ಬಿಡಿರಿ. ನಾಟಕಾನೇ ಬರೀಬಾರ್ದು ಅನ್ನೊವಾಗ ಜನರಿಗೆ ಸೇರೋದರ ವಿಚಾರ ಯಾಕ ? ಅಲ್ಲ, ಒಳಗೆ ನಡೀರಲ್ಲ ? ಇಲ್ಲೀ ವರೆಗೆ ಬಂದೀರಿ, ಕೂತು ಚಹ ತಗೊಂಡು—

೩ನೆ ವ್ಯಕ್ತಿ : ( ಇದೂ ಒಂದು ಹಾಸ್ಯಚಟಾಕಿ ಎಂಬಂತೆ ನಕ್ಕು ) ಹಹ ! ಭಲೆ ಮಾತು ನಿಮ್ದು ! ನಾಟಕಾ ಬೇಡಿದರ ಚಹ ಕೊಟ್ಟು ಕಳಿಸ್ತೀರಿ.

೧ನೆ ವ್ಯಕ್ತಿ : ಅಂದ್ರೇನು ? ಚಹ ಕೊಟ್ಟು ನಾಟಕಾ ನೋಡಿಸೋದಕಿಂತ ಒಳ್ಳೇ-ದಲ್ಲ ? ( ಇಷ್ಟರಲ್ಲಿ ಮನೆಯ ಹಿಂಬದಿಯಿಂದ ಪೋಲೀಸ ಕಾನ್‌ಸ್ಟೇಬಲ್‌ನೊಬ್ಬ ಧಾವಿಸಿ ಬರುವ. ಆ ಸದ್ದನ್ನುಕೇಳಿ —) ಯಾರವರು ?

ಪೋ.ಕಾ.: ಇಲ್ಲಿಂದ ಯಾರಾದ್ರೂ ಓಡಿಹೋದ್ರೇನು ?

೧ನೆ ವ್ಯಕ್ತಿ : ( ಮುಗುಳ್ನಗೆಯಿಂದ ) ಅದೊಂದು ಬಾಕಿ ನಮ್ಮ ನಾಟಕಕ್ಕ !

ಪೋ.ಕಾ.: ಆ ಏನಂದಿರಿ ?

೧ನೆ ವ್ಯಕ್ತಿ : ಏನಿಲ್ಲ, ಸಿಪಾಯಿಸಾಹೇಬರ. ನಿಮಗೇನ್ಬೇಕಾಗಿತ್ತು ?

ಪೋ.ಕಾ : ಈ ಕಡೆಯಿಂದ ಯಾರಾದರೂ ಓಡಿ ಹೋದರೇನು ಅಂತ—

೩ನೆ ವ್ಯಕ್ತಿ : ನಾವೇ ಇಲ್ಲಿಯೆ ಮಾತಾಡ್ತಾ ನಿಂತೀವಿ —

ಪೋ. ಕಾ. : (ದೂರದಲ್ಲಿ "ಹಂ - ಅಲ್ಲಿ" ಎಂಬ ಕೂಗನ್ನು ಕೇಳಿ ತಟ್ಟನೆ ರಂಗಸ್ಥಲವನ್ನು ದಾಟಿ ಪ್ರೇಕ್ಷಕರ ಬಲಬದಿಯ ಮುಂತುದಿಯಿಂದ ಹೋಗುವನು.)

೩ನೆ ವ್ಯಕ್ತಿ : (೨ನೆ ವ್ಯಕ್ತಿಗೆ) ಬೇಕಾದ್ರ ಒಂದ್ನಿಮಿಟು ಒಳಗೇ ಹೋಗೋಣೇನು, ಮಾತಾಡ್ಲಿಕ್ಕೆ ನೆಟ್ಟಗಾದೀತು —

೨ನೆ ವ್ಯಕ್ತಿ : ( ಹಿರಿತನದ ದನಿಯಲ್ಲಿ ) ಬರೆಯೋ ಜನ ಅವರು. ಅವರಿಗ್ಯಾಕ ತ್ರಾಸ ಕೊಡೋದು ? ಮಾತಾಡೋದಾದ್ರೂ ಏನಿದೆ ಅಂಥಾದ್ದು ? ಅವರು ವಿಚಾರ ಮಾಡಲಿ.

೧ನೆ ವ್ಯಕ್ತಿ ಯಾವ ವಿಚಾರ ?

೩ನೆ ವ್ಯಕ್ತಿ ನಾವು ಕೇಳಿದ ನಾಟಕ —

೧ನೆ ವ್ಯಕ್ತಿ ಎಂಥಾ ನಾಟಕ ?

೨ನೆ ವ್ಯಕ್ತಿ ಪೌರಾಣಿಕ ನಾಟಕ.

೧ನೆ ವ್ಯಕ್ತಿ ಏನಂದಿರಿ ?

೨ನೆ ವ್ಯಕ್ತಿ ಇಲ್ಲಿ ಕೇಳಿರಿ, ರಾಯರ. ಜನಕ್ಕ ಬೇಕಾಗೋದು ಪೌರಾಣಿಕ ನಾಟಕ. ದೇವರು, ರಾಕ್ಷಸರು, ಇಂದ್ರಸಭಾ, ರಂಭಾ-ಊರ್ವಶಿಯರ ನೃತ್ಯ —

[ ೧ನೆ ವ್ಯಕ್ತಿ ಗಟ್ಟಿಯಾಗಿ ನಗಲು ತಡೆಯುವನು ]

೩ನೆ ವ್ಯಕ್ತಿ : (೧ನೆ ವ್ಯಕ್ತಿ ಇನ್ನೂ ಗಹಗಹಿಸಿ ನಗುತ್ತಿರುವುದನ್ನು ಕಂಡು) ಯಾಕ, ರಾಯರ ?

೧ನೆ ವ್ಯಕ್ತಿ : ಅಲ್ಲ — (ನಗೆ ತಡೆಯುತ್ತ) ನಾನೇನು ಹುಡುಗ ಅಂತ ತಿಳಿದೀರಾ ? ದೇವರು, ರಾಕ್ಷಸರು, ಆ ಅದ್ಭುತ — ಇದೆಲ್ಲಾ ಹುಡುಗಬುದ್ಧಿಗೆ ಒಪ್ಪೋ ವಿಷಯ. ಅದನ್ನ ನನಗ ಈಗ — ಇಷ್ಟು ವರ್ಷದ ಮ್ಯಾಲೆ — ಬರೆ ಅಂತೀರಾ ? ಅಲ್ಲರಿ, ನಾನೇನು ೨೦ನೆಯ ಶತಮಾನದ ಸಮಾಜದೊಳಗೆ ಹುಟ್ಟಿ ಬೆಳೆದೆನೊ — ಏನು ಕಾಡುಯುಗದಲ್ಲಿಯೊ ? ಅಂಥಾ ಕತೆಯನ್ನು ಬರೆದರೆ ಬುದ್ಧಿವಂತರು ಏನಂದಾರು ನನಗ ?

೩ನೆ ವ್ಯಕ್ತಿ : ಅಂಥಾ ಕತೆ ಅಂದ್ರ ?

೧ನೆ ವ್ಯಕ್ತಿ : ಇಂಥಾ ಕತೆ : ಒಬ್ಬ ರಾಜ, ಇಲ್ಲ ಒಬ್ಬ ಋಷಿ ; ಅಲ್ಲಿ ಒಬ್ಬ ರಾಕ್ಷಸ ಬರುವ ; ಯಾವದಾದರೂ ಒಂದು ಹೆಣ್ಣನ್ನು ಓಡಿಸಿಕೊಂಡು ಹೋಗುವ ; ಆಮ್ಯಾಲೆ ಯುದ್ಧ, ಶಾಪ, ಮಾಯಾಬಜಾರ... ಅಲ್ಲ, ನಮ್ಮ ಜೀವನಕ್ಕೂ ಅದಕ್ಕೂ ಏನು ಸಂಬಂಧ? ಎಂದಾದರೂ ಎಲ್ಲಿಯಾದರೂ ಮನುಷ್ಯ-ಸಮಾಜ ದೊಳಗ ನಡೆದೀತೆ ಅಂಥಾದ್ದು ?

೨ನೆ ವ್ಯಕ್ತಿ : ಅದಕ್ಕೇ ಜನಾ ನೋಡ್ಲಿಕ್ಕೆ ಬರೋದು, ರಾಯರ.

೧ನೆ ವ್ಯಕ್ತಿ : ಛಿ ! ಅಲ್ಲರಿ, ಒಬ್ಬ ಇನ್ನೊಬ್ಬನ ಹೆಂಡತೀನ್ನ ಅಪಹರಣ ಮಾಡಿದ ಅನ್ನೋ ಕಾಡ ಯುಗ ಎಂದಿನದು —

ಪೋ.ಕಾ. : (ತಟ್ಟನೆ ಹೋದ ಬದಿಯಿಂದ ಬಂದು) ಹೌದು, ಅವನೆ. ನೋಡಿದಿರೇನು ?

೧ನೆ ವ್ಯಕ್ತಿ : (ಸಿಡುಕಿನ ದನಿಯಲ್ಲಿ) ಯಾರ್‍ನ ?

ಪೋ. ಕಾ. : ಏನೊ ಹೇಳಿದಿರಲ್ಲ, ಯಾರದೋ ಹೆಂಡತೀನ್ನ ಓಡಿಸಿಕೊಂಡು ಹೋದ ಅಂತ.

೨ನೆ ವ್ಯಕ್ತಿ : ಸಿಪಾಯಿಸಾಹೇಬರ, ನಾಟಕದ ಕತೆಯನ್ನ ಹೇಳ್ತಿದ್ದರು.

ಪೋ. ಕಾ. : (ಸಿಡುಕಿನಿಂದ) ಕತೆ ಹೇಳೋದಿದ್ದರ ಮನೀವಳಗ ಹೋಗಿ ಕೂಡಿರಿ, ಇಲ್ಲಿ ಯಾಕ ಮಂದಿಯ ಕೆಲಸಕ್ಕ ಅಡ್ಡಿ ಮಾಡ್ತಾ ...

೩ನೆ ವ್ಯಕ್ತಿ : ಅಡ್ಡಿ ಮಾಡೋದಿಲ್ಲ, ಸಿಪಾಯಿಸಾಹೇಬ್ರ. ನಿಮ್ಗ ಏನ್ಬೇಕಾಗೇತಿ ಹೇಳಿರಿ ಅಂದೆನಲ್ಲ ?

ಪೋ. ಕಾ.: (ಅಧಿಕಾರವಾಣಿಯಿಂದ) ಯಾರನಾದರೂ ನೋಡಿದ್ರೇನು ಅಂತ ಎಷ್ಟು ಸಲ ಕೇಳ್ತೀನಲ್ಲ ನಾನೂ ?

೨ನೆ ವ್ಯಕ್ತಿ : ನಾವು ಯಾರನೂ ನೋಡಿಲ್ಲರಿ.

ಪೋ. ಕಾ.: ಆದರೂ ಇದೇ ಈಗ ಮಾತಾಡ್ತಿದ್ದಿರಲ್ಲ, ಹೆಂಡ್ತೀನ್ನ ಓಡಿಸಿಕೊಂಡು ಹೋದ ಅಂತ.

೨ನೆ ವ್ಯಕ್ತಿ : ನಾಟಕದ ಕತೆ ಅದು.

ಪೋ. ಕಾ.: ಕತೆ ಹೇಳೋದಿದ್ದರ ಮನೀವಳಗ ಹೋಗಿ ಕೂಡಿರಿ, ಇಲ್ಲಿ —

( ಇದನ್ನ ಒಮ್ಮೆ ಹೇಳಿದ್ದು ಲಕ್ಷ್ಯಕ್ಕೆ ಬಂದು, ಅಪಮಾನಿತನಾಗಿ, ಸಿಟ್ಟಿನಿಂದ ) ಹೇಳಿ ಇಟ್ಟಿರ್ತೀನಿ ನಿಮಗ, ಒಂದೇ ನೋಡಿದರೂ ಮುಚ್ಚಿಟ್ಟಿರಿ ಅಂದ್ರ— ( ಎನ್ನುತ್ತ ಮನೆಯ ಹಿಂದಿನಿಂದ ಹೋಗುವನು )

೧ನೆ ವ್ಯಕ್ತಿ : ( ತಿರಸ್ಕಾರದಿಂದ ಉಸಿರೆಳೆದು ) ಒಳಗೇ ಹೋಗೋಣ ನಡೀರಿ.

೨ನೆ ವ್ಯಕ್ತಿ : ಇವನ ಕೂಡ ಯಾಕೆ ಗುದ್ದಾಟ ?

೩ನೆ ವ್ಯಕ್ತಿ : ಏನಾದ್ರೂ ಗೊತ್ಮಾಡಿಕೊಂಡೇ ಹೋಗೋಣ.

೧ನೆ ವ್ಯಕ್ತಿ : ( ಮೆಟ್ಟಿಲುಗಳನ್ನೇರಿ, ಬಾಗಿಲಿಗೆ ಬಂದು, ಬಾಗಿಲನ್ನು ತೆರೆಯುತ್ತ ) ನಾನು ದೀಪ ಹಚ್ತೀನಿ, ನೀವು ಬರ್ರಿ ( ಎಂದು ಒಳಗೆ ಹೋಗುವನು. )

೨-೩ನೆ ವ್ಯಕ್ತಿಗಳು : ದೀಪ ಹಚ್ಚೋತನಕ ಇಲ್ಲಿಯೆ ನಿಲ್ಲೋಣ.

[ ಇವರಿಬ್ಬರೂ ಬಾಗಿಲ ಕಡೆ ಬೆನ್ನುಮಾಡಿ ನಿಂತಿರುವರು. ಒಂದು ನಿಮಿಷ ಇಬ್ಬರೂ ಯಾವುದೊ ಯೋಚನೆಯಲ್ಲಿ ತೊಡಗಿದವರಂತೆ ಸ್ತಬ್ಧರಾಗಿ ನಿಂತಿದ್ದಾರೆ. ಅಷ್ಟರಲ್ಲಿ ಗಿಡದ ಗುಂಪಿನಿಂದ ಮುಂಚೆ ಓಡಿ ಹೋದ ವ್ಯಕ್ತಿ ಸದ್ದಿಲ್ಲದೆ ಬಂದು, ಮೆಲ್ಲಗೆ ಇವರ ಹಿಂದಿನಿಂದ ನಡೆಯುತ್ತ, ಸರ್ರನೆ ತೆರೆದ ಬಾಗಿಲಿನೊಳಗೆ ಜಾರುವನು. ಆಗ ಬಾಗಿಲ ಸಪ್ಪಳದೊಡನೆ ಇಬ್ಬರೂ ವ್ಯಕ್ತಿಗಳು ತಿರುಗಿ ನಿಂತು ಬಾಗಿಲನ್ನು ನೋಡಿ — ]

೨ನೆ ವ್ಯಕ್ತಿ : ಬಾಗಿಲ ಮುಚ್ಚತೇನೊ ಅಂತ ಗಾಬರಿಯಾದೆ.

೩ನೆ ವ್ಯಕ್ತಿ : ಒಬ್ಬನೇ ಇದ್ದಿರಬೇಕು ಮನೀವಳಗ — ( ಒಳಗೆ ಕಡ್ಡಿ ಕೊರೆದುದನ್ನು ಕಂಡು ) ದೀಪ ಹಚ್ಚಿತು, ನಡೆ ( ಇಬ್ಬರೂ ಒಳಗೆ ಹೋಗುವರು. )

೧ನೆ ವ್ಯಕ್ತಿ : ( ಒಂದು ನಿಮಿಷದ ತರುವಾಯ ಬಾಗಿಲಿಗೆ ಬಂದು ಒಳಗಿನವರೊಡನೆ ಮಾತಾಡುತ್ತ ) ಬಂದೆ, ಬಾಗಿಲಾ ಮುಂದೆ ಮಾಡಿಕೊಂಡು. ಇಲ್ಲ ಅಂದ್ರ, ಯಾರನ್ನಾದರೂ ನೋಡಿದ್ರೇನು ಅಂತ ಒಳಗ ಬಂದ್ರೂ ಬಂದ್ನೆ ಪೋಲೀಸ. (ಒಳಗಿನಿಂದ ಎಲ್ಲರೂ ನಗುವ ಸದ್ದು ಕೇಳುವಾಗ ಬಾಗಿಲನ್ನು ಮುಚ್ಚಿಕೊಂಡು ಹೋಗುವನು.)

[ ರಂಗಸ್ಥಲದಲ್ಲಿ ಕೆಲಹೊತ್ತು ನಿಶ್ಶಬ್ದತೆ. ಆ ಮೇಲೆ ಮೆಲ್ಲ ಮೆಲ್ಲನೆ ಬಾಗಿಲದ ಒಂದು ಹಲಗೆ ಹಿಂದೆ ಸರಿಯುವುದು. ಅಂಕದ ಪ್ರಾರಂಭಕ್ಕೆ ಕಂಡ ಮುಖ ಮತ್ತೊಮ್ಮೆ ಅತ್ತಿತ್ತ ಸದ್ದನ್ನು ಕೇಳುವ ಮುದ್ರೆಯಿಂದ ಹಣಕಿಕ್ಕುವಾಗ ದೂರದಿಂದ ಮಾತು ಕೇಳಬರಲು ಮುಖ ತಟ್ಟನೆ ಮರೆಯಾಗುವುದು. ಬಾಗಿಲು ಸದ್ದಿಲ್ಲದೆ ಮುಚ್ಚುವುದು. ಅಷ್ಟರಲ್ಲಿ ರಂಗಸ್ಥಲದ — ಪ್ರೇಕ್ಷಕರ ಬಲಬದಿಯ — ಮುಂತುದಿಯಿಂದ ಎರಡು ಹಳ್ಳಿಯ ಮಾದರಿ ವ್ಯಕ್ತಿಗಳು ಮಾತನಾಡುತ್ತ ಬರುವುವು. ಒಂದು ಹಿರಿಯ ವ್ಯಕ್ತಿ — "ಮಾವ", ಇನ್ನೊಂದು ಕಿರಿಯನಾದರೂ ಮಧ್ಯವಯಸ್ಕದ ವ್ಯಕ್ತಿ — "ಮಳ್ಳ". "ಇದೇ ಜಾಗ ನೋಡು, ಮಾವಾ" ಎನ್ನುತ್ತ ಮಳ್ಳನು ಮುಂದೆ ಬರುವನು. ]

ಮಾವ : ( ಹಿಂದಿನಿಂದ ಬಂದು, ಸುತ್ತಲೂ ನೋಡಿ ) ಇದೇ ಜಾಗ ? ಏನೈತಿ ಇಲ್ಲಿ. ಅಲ್ಲಿ ಇದಿರಿಗೆ ಯಾರ್ದೊ ಮನೆ ಐತಿ ; ಈ ಕಡೆ ಬಟ-ಬಟ ಬಯಲೈತಿ.

ಮಳ್ಳ : ಅಲ್ಲ, ಮಾವಾ, ಆ ಪೋಲೀಸ್ ಸಿಪಾಯಿ ಈ ಕಡೆ ಬಂದಿದ್ನಂತೆ.

ಮಾವ : ಬಂದಿದ್ದಾನಾತು. ರಾತ್ರಿ ಪಾಳಿ ಇದ್ದಿರಬೇಕು, ರಾತ್ರಿ ಆದ ಮ್ಯಾಗ ಈಟಿ ದೂರ ಬರಾಕ ಹೆದರ್ತಿರಬೇಕು, ಅದಕ್ಕ ಈಟರಾಗೇ ಬಂಥೋದ್ನೇನೊ !

ಮಳ್ಳ : ಅಲ್ಲ, ಮಾವಾ, ಆ ಹುಡುಗನ್ನ ಹುಡುಕೊಂತ ಬಂದಿದ್ನಂತ ಈ ತಾವ !

ಮಾವ : ಏ, ಮಳ್ಳ್ಯಾ, ತುಸಾ ದಮ್ಮ ತಿನ್ನು. ಯಾವ ಹುಡುಗನ್ನ ?

ಮಳ್ಳ : ನಮ್ಮ ಹುಡುಗನ್ನ.

ಮಾವ : ಹಾಂಗ ಹೇಳಲಾ ಮತ್ತ. ಮದ್ಲ ಹೇಳಿದಿ ನಿನ್ನ ಹುಡುಗ ಯಾರದೊ ಹೆಂಡತೀನ್ನ —

ಮಳ್ಳ : ( ನಡುವೆಯೆ ) ಇಲ್ಲ, ಮಾವಾ, ನೀನೇ ಅವಸರದಾಗ ತೆಪ್ಪ ಕೇಳೀದಿ.

ಮಾವ : ಕೇಳೋದಕ ಎಲ್ಲಿಂದ ಅವಸರಾ ತಂದೆಪಾ, ಮಳ್ಳಪ್ಪಾ ? ( ಸುತ್ತುಮುತ್ತಲು ನೋಡಿ ) ಹಂ — ನಡೀ ! ಇಲ್ಲಿ ನಿಂತೇನ್ಮಾಡಾವ ?

ಮಳ್ಳ : ಅಲ್ಲ — ಹುಡುಗನ್ನ ಹುಡುಕಾಣಾ ಅಂತ —

ಮಾವ : ಎಲೆ ನಿನ ! ಮತ್ತೆ ಅದ್ನೆ ಹೇಳ್ತಾನಲ್ಲೊ ? ನಿನ್ನ ಹುಡುಗ ಹೋಗ್ಯಾನ ತನ್ನ ಹೆಂಡತೀನ್ನ ಹುಡುಕಾಕ — ಅಂತೀ ! ಇನ್ನು ನೀ ಎಲ್ಲಿ ಹುಡುಕಾಂವಾ ನಿನ್ನ ಹುಡುಗನ್ನ ? ಆ ಹೊಯ್ಮಾಲಿ ಹೋಗಿರಬೇಕು ತನ್ನ —

ಮಳ್ಳ : ಇಲ್ಲ, ಮಾವಾ, ಆಕೆ ಹೋಗಿಲ್ಲ, ನನಗ ಖಾತ್ರಿ ಐತಿ. ಆ ಬದ್ಮಾಷನೆ ಆಕೇನ್ನ ಓಡಿಸಿಕೊಂಡು ಹೋಗ್ಯಾನ.

ಮಾವ : ಇಲ್ಲಿ ನೋಡು, ಮಳ್ಳ್ಯಾ; ಒಂದ್ಮಾತ್ಕೇಳ್ತೀನಿ, ಬೂದೇವಿನ್ನ ನೆನೆಸಿಕೊಂಡು ಕರೇನ್ನ ಹೇಳು. ನಿನ್ನ ಸೊಸೀನ್ನ ಓಡಿಸಿಕೊಂಡು ಹೋಗ್ಯಾನೊ ನೀ ಹೇಳೋ ಆ ಬದ್ಮಾಷ ? ಇಲ್ಲ, ನಿನ್ನ ಸೊಸೆ ತಾನಾಗೇ ಓಡಿಹೋಗ್ಯಾಳೊ ಅವನ ಬೆನ್ನಗಂಟ ?

ಮಳ್ಳ : ನನಗ ಖಾತ್ರಿ ಐತಿ, ಮಾವಾ, ಆಕೇನ್ನ ಓಡಿಸಿಕೊಂಡು ಹೋಗ್ಯಾನ ಆ ಬದ್ಮಾಷ ಅಂತ. ಅದಕ್ಕೇ ಹುಡುಗನ್ನ ಹುಡುಕಬೇಕಾಗೇತಿ.

ಮಾವ : ಎಂಥಾ ಗಂಡಸು ಅಂತೀನಿ ನಿನ್ನ ಹುಡುಗ ! ಹೋದರ್ಹೋದಳು ಆ ಹೊಯ್ಮಾಲಿ. ಮೀಸೆ ಹೊತ್ತ ಗಂಡಸಿಗ ಇನ್ನೊಂದು ಹೆಣ್ಣ ಸಿಗಾಕಿಲ್ಲ ?

ಮಳ್ಳ : ನಿನಗ್ಗೊತ್ತಿಲ್ಲ, ಮಾವಾ, ನನ್ನ ಮಗ, ಸೊಸೆ ಒಂದಕ್ಕೊಂದು ಏಟೊಂದು ಜಿಂವಾ ಹಚ್ಚಿಕೊಂಡಿದ್ದವು ಅಂತ.

ಮಾವ : ಎಲೆಲೆ ! ನನ್ಗೇನು ಹೆಣ್ಣಿನ ಪರಸಂಗ ಗೊತ್ತೇ ಇಲ್ಲ ಅನ್ನೋವರ ಹಾಂಗ ಹೇಳ್ತಾನಲ್ಲೊ ? ಜಿಂವಾ ಹಚ್ಚಿಕೊಂಡಿದ್ದವು — ಅಂತ ! ಒಂದು ಜೀಂವ ಹೋತು, ಇನ್ನೊಂದು ಜೀಂವ ಬಂತು ಮುಗ್ಗುಲಿಗೆ, ಅದನ್ನೆ ಹಚ್ಚಿಕೊಂಡು ಇದ್ದ. ಜಿಂವಾ ಹಚ್ಚಿಕೊಂಡಂತ ! ನಡಿ, ನಡೀ —

ಮಳ್ಳ : ( ಅಧೈರ್ಯದ ದನಿಯಲ್ಲಿ ) ಮಾವಾ —

ಮಾವ : ಏನಪ ?

ಮಳ : ನನ್ನ ಚಿಂತೆಗೆ ಬ್ಯಾರೀ ಕಾರಣ ಐತಿ, ಮಾವಾ —
ಮಾವ : ಯಾವ "ಭಾರೀ ಕಾರಣ" ಪ ಅದು ?
ಮಳ್ಳ : ನನ್ನ ಚಿಂತೀ ಅಂದ್ರ, ನಮ್ಮ ಹುಡುಗ ರೊಚ್ಚಿಗೆದ್ದು ಎಲ್ಲಿ ಆ ಬದ್ಮಾಷನ ಖೂನಿ ಮಾಡ್ತಾನೊ ಅಂತ — ತುಸಾ ತಡೀ, ಮಾವಾ — ಆ ಗಿಡದ ಗುಂಪಿನ ತನಕ ಹೋಗಿಬರ್ತೀನಿ —
ಮಾವ : ಯಾಕ ? ಅಲ್ಲಿ ಯಾರ ಹೆಣ ಬಿದ್ದೈತಿ ಅಂತ ಹೆದರಿಕೇನೊ ?
ಮಳ್ಳ : (ಆ ಕಡೆ ಹೊರಡುತ್ತ) ಅದು ನಮ್ಹುಡುಗ ಕುಂತುಕೊಳ್ಳೋ ಜಾಗ. ಗಂಡ ಹೆಂಡತಿ ಯಾವಾಗ್ಯಾವಾಗ ಬಂದು ಕೂಡತಿದ್ದರಲ್ಲಿ.
ಮಾವ : (ಅವನ ಹಿಂದಿನಿಂದ ನಡೆದು) ಈಗ ಕುಂತಿರಬೇಕು. ನೋಡ್ತೀಯೇನು ? ಬಾ.
ಮಳ್ಳ : (ಗಿಡದ ಗುಂಪಿನ ಹತ್ತಿರ ಬಂದು ಕೂಗಿ ಹೇಳುವನು) ಇಲ್ಲಿಯೂ ಇಲ್ಲ, ಮಾವಾ.

[ಪ್ರೇಕ್ಷಕರ ಬಲಬದಿಯಿಂದ — "ಇಲ್ಲಿ ಇದ್ದಾರ ನೋಡೋ, ಶುಂಭಾ" ಎನ್ನುತ್ತ ಇಬ್ಬರು ಹರೆಯದ ಹುಡುಗರು ಬರುವರು. "ಏ – ಇವರೇ ಕಾಣ್ತಾರೊ, ಹುಂಬಾ" ಎನ್ನುತ್ತ ಎರಡನೆಯವ ತುಸು ಮುಂದೆ ಬರುವನು.]

ಮಾವ : ಯಾರಪ ಇವರು ?
ಹುಂಬ : ಯಾರೊ ಹೇಳ್ತಿದ್ದರು ಇಲ್ಲಿ ಏನೊ ಖೂನಿಯಾಗಿದೆ ಅಂತ —
ಮಳ್ಳ : (ಗಾಬರಿಯಾಗಿ) ಖೂನಿ ? ಇಲ್ಲಿ ? ಯಾರದು ?
ಶುಂಭ : ಯಾರದೊ ಏನೊ ? ಅಲ್ಲಿ ಪೋಲೀಸ್ ಹೇಳ್ತಿದ್ದ.
ಮಾವ : ನೋಡಾಕ ಅಂತ ನೀವು ಟಿಕೀಟ್ ತಕ್ಕೊಂಡು ಬಂದೀರೇನು ?
ಹುಂಬ : ಹಹ ! ಇದೊಳ್ಳೆ ಮೋಜಿನ ವಿಚಾರ ! ಹಹ !
ಮಾವ : ಅಲ್ಲ – ಮತ್ತ ! ಯಾರು ಯಾರದಾದ್ರೂ ಖೂನಿ ಮಾಡಿದರ ನೋಡಾಕ ಭಲೆ ಮೋಜು ! ನಡಿ – ನಡೀರ್‍ಯೊ, ಹುಚ್ಚಗೊಟ್ಟಿಗಳಿರಾ !
ಮಳ್ಳ : (ಗಾಬರಿಯಾಗಿ) ಅಲ್ಲ, ಮಾವಾ, ಇದೇನ್ ಸುದ್ದಿ ಬಂತು ಅಂತೀನಿ—
ಮಾವ : ಹುಚ್ಚಾ ಮಳ್ಳ ನೋಡು ನೀನು ! ಹಾದಿಗೆ ಹೋಗೋ ಹುಡುಗರು, ಹಾರಿಕೆ-ಸುದ್ದಿ ತಂದಾರ —
ಶುಂಭ : (ಹುಂಬನಿಗೆ) ಹಾರಿಕೇ ಸುದ್ದಿ ಅಂತ ! ಕೇಳಿದೆಯಾ ?
ಹುಂಬ : ಹಾರಿಕೇದಲ್ಲ, ಮಾವಾ —
ಮಾವ : (ನಡುವೆಯೆ) ಯಾರಿಗೆಲೆ ನೀನು "ಮಾವ" ಅನ್ನೋದು ?
ಹುಂಬ : (ಹೆದರಿಲ್ಲ ಎಂದು ತೋರಿಸುವ ಹಟದಿಂದ) ಹಾರಿಕೇದಲ್ಲ ಸುದ್ದಿ. ಖುದ್ದ ಪೋಲೀಸನೆ ಹೇಳಿದ ನಮಗ—
ಮಳ್ಳ : (ಆತುರತೆಯಿಂದ) ಏನಂತ ?
ಶುಂಭ : (ಹುಂಬನಿಗೆ) ಹೇಳೋಣೇನು ?

ಹುಂಬ: ನಾವ್ಯಾಕ ಹೇಳ್ಬೇಕು ಬಿಡು. ಪೋಲೀಸರು ಇನ್ನೂ ಗುಪ್ತ ಅಂತ ಇಟ್ಟಿದ್ದರ —

ಮಳ್ಳ : ( ಆಶ್ಚರ್ಯದಿಂದ ) ನಾವು ಯಾರಿಗೂ ಹೇಳೋದಿಲ್ಲ.

ಶುಂಭ : ( ಹುಂಬನಿಗೆ ) ಹೇಳೋಣೇನು ?

ಹುಂಬ : ನಾವ್ಯಾಕ ಹೇಳ್ಬೇಕು ಬಿಡು. ಒಟ್ಟು • ಈ ಜನರ ಹಣೆಬರೆಹನೆ ಇದು. ಖೂನಿ ಮಾಡೋದು —

ಮಾವ : ಇಕ ! ಗೊತ್ತಿಲ್ದೆ ಮಾತಾಡಿದ್ರ ನಿನ್ನನ್ನೆ ಹಿಡಕೊಂಡು ಹೋದಾರು —

ಶುಂಭ : ಅವನನ್ನ ಯಾಕ ಹಿಡೀತಾರ ? ಖೂನಿ ಮಾಡಿದವ ಗಂಡ —

ಮಳ್ಳ : ( ಇನ್ನಿಷ್ಟು ಹೆದರಿ ) ಯಾರ ಗಂಡ ?

ಶುಂಭ-ಹುಂಬ : ( ಇಬ್ಬರೂ ನಗುತ್ತ ) ಯಾರ ಗಂಡಂತ ? ಹಹಹ ! ಯಾರ ಗಂಡ ? ಹೆಂಡತಿಯ ಗಂಡ ! ಹಹಹ ! ( ನಗುತ್ತ ಹೋಗುವರು )

ಮಳ್ಳ : ( ಮುಖದ ಬೆವರನ್ನೊರೆಸಿಕೊಳ್ಳುತ್ತ ) ಮಾವಾ—

ಮಾವ : ( ಸಿಟ್ಟಿನಿಂದ ) ಸುಮ್ಮಾಕಿರೊ ನೀನು ! ನೋಡಿದಿಯಿಲ್ಲೊ ? ಜನ ಕತೆ ಕಟ್ಟೋದು ಅಂದ್ರ ಹೀಂಗೇ !

ಮಳ್ಳ : ( ಉಸಿರು ಸಾಲದವನಂತೆ ) ಅಲ್ಲ, ಮಾವಾ, ಒಂದ್ಯಾಳಿ ನಮ್ಹುಡುಗ ರೊಚ್ಚಿ-ಗೆದ್ದು ಆ ಬದ್ಮಾಷನ್ನ ಕೊಂದುಬಿಟ್ಟಿದ್ದರ —

ಮಾವ : ಅದೇ ಏಟಿಗೆ ಆ ಹೊಯ್ಮಾಲೀನ್ನೂ ಕಡಿದು ಹಾಕಿದ್ರ ನೆಟ್ಟಗಾಗ್ತೇತಿ.

ಮಳ್ಳ : ಮಾವಾ —

ಮಾವ : ಯಾಕೊ — ಮಾವಾ-ಮಾವಾ ಅಂತ ಮ್ಯಾಂವ್‌ಗುಡತೀ ? ನೀನು, ನಿನ್ನ ಪಡಿಯಚ್ಚು, ನಿನ್ನ ಮಗ ! ಓಡಿಹೋದಾಕಿ ಹೋದಳು, ಆಕೇನ್ನ ತಿರುಗಿ ತರಲಾಕ ಗಂಡಸುತನದ ಹ್ಯಾಂವ ಏನಾದ್ರೂ ಐತ್ಯೊ ಇಲ್ಲೊ ನಿನ್ನ ಹುಡುಗ್ಗ ? ಜಿಂವಕ್ಕ ಜಿಂವಾ ಹಚ್ಚಿಕೊಂಡಿದ್ದುವಂತ ಮ್ಯಾಗ !

ಮಳ್ಳ : ಇಲ್ಲ, ಮಾವಾ, ನಿನಗ ತಿಳಿಯಾಕಿಲ್ಲ. ಆಕೆ ಎಂದಿಗೂ ಓಡಿಹೋಗಾಕೆ ಅಲ್ಲ. ಗಂಡ-ಹೆಂಡತಿ ಅಂದ್ರ ಅಷ್ಟು ಒಂದು ಜೀಂವ. ನಿನಗ್ಗೊತ್ತಿಲ್ಲ ಮಾವಾ, ಮದಿವಿ ಆಗದಿದ್ರ ಇಬ್ಬರೂ ಕೂಡಿ ಬೆಂಕೀವಳಗ ಹಾರಿಕೊಳ್ಳೋಣ ಅಂತ ಹೊಂಟಿದ್ದುವು ಅವೆರಡೂ. ಅಷ್ಟು ಒಂದೇ ಹುರಿ ಜೀವನ. ಮಾವಾ —

ಮಾವ : ( ನಡುವೆಯೆ ) ನೀಯೇನು ಹೀಂಗೇ ಕತೆ ಹೇಳ್ತಾ ಇಲ್ಲೇ ನಿಂದಿರು ಅಂತೀಯೊ —

ಮಳ್ಳ : ಇಲ್ಲ, ಮಾವಾ, ಹೊರಡೋಣ. ಎಲ್ಲಾ ಕಡೆ ಹುಡುಕಿ ನೋಡೋಣ. ಆಕೇನ್ನ ಎಲ್ಲ್ಯೋ ಬಿಗಿದು ಕಟ್ಟಿ ಮುಚ್ಚಿಟ್ಟಿರಬೇಕು ಆ ಬದ್ಮಾಷ, ಅವನನ್ನ ಹುಡುಕತಾ ಹೋಗ್ಯಾನ ನಮ್ಮ ಹುಡುಗ —

ಮಾವ : ನಿನ್ನ ಹುಡುಗನ್ನ ಹುಡುಕ್ತಾ ಹೊಂಟಾನ ಪೋಲೀಸ !

ಮಳ್ಳ ; ಇಲ್ಲ, ಇಲ್ಲ, ಮಾವಾ, ನನ್ನ ಹುಡುಗ ಏನೂ ಮಾಡಿಲ್ಲ. ನಾಕ್ ದಿನಾ ಆತು ಹೊಟ್ಟೆಗೊಂತುತ್ತಿಲ್ಲ, ಕಣ್ಣಿಗೆ ಕಣ್ಣು ಹಚ್ಚಿಲ್ಲ —

ಮಾವ : ಪೋಲೀಸನ ಮಾತು ನಾ ಹೇಳಿದರೆ ಡಾಗ್ದರನ ಮುಂದೆ ಹೇಳೋಹಾಂಗ ನೀ ಹೇಳ್ತೀಯಲ್ಲೊ? ಅಕ! ಬಂದರು ಯಾರೊ — (ಎಂದು ಮನೆಯ ಹಿಂಭಾಗ ಪತ್ತ ನೋಡುವನು. ಪೋಲೀಸ್ ಕಾನ್‌ಸ್ಟೇಬಲ್, ಜೊತೆಗೆ ಒಬ್ಬ ನಾಗರಕ ಬರುವರು.)

ನಾಗರಕ : (ಪೋ. ಕಾ.ನಿಗೆ) ಇಲ್ಲಿಯೆ ನೋಡಿರಿ ನಾ ಹೇಳಿದ್ದು.

ಪೋ.ಕಾ. : (ಚಕಿತನಾಗಿ) ಹೇಳಿದ್ದು ? ಈಟೊತ್ತಿನ ತನಕ 'ಕೇಳಿದ್ದು' ಅಂದಿರಿ, ಈಗ 'ಹೇಳಿದ್ದು' ಅಂತೀರಲ್ಲ ?

ನಾಗರಕ : 'ಕೇಳಿದ್ದು' ಅಂತ ಹೇಳಿದ್ದು — ಅಂದೆ. ನಾ ಇಲ್ಲಿ ನಿಂತಿದ್ದೆ, ಆ ಮ್ಯಾಲೆ ಆಕಡೆಯಿಂದ ಒಮ್ಮೆಲೆ — ಕುತ್ತಿಗೆ ಹಿಚುಕಿ ಉಸಿರ ತಡೆದರೆ ಆಗ್ತದೆ ನೋಡಿರಿ — ಹಾಂಗ 'ಗೂಕ್' ಅಂತ ಸದ್ದಾದದ್ದು ಕೇಳಿಸಿತು.

ಪೋ.ಕಾ. : ಯಾವ ಕಡಿಂದ ಅಂದಿರಿ ?

ನಾಗರಕ : ಇಲ್ಲಿ — ಈ ಗಿಡಗಳ ಗುಂಪು ಇದೆಯಲ್ಲ —

ಪೋ.ಕಾ. : (ಅವನ ಮಾತಿಗನುಸಾರವಾಗಿ ಆ ಕಡೆ ನೋಡುವಾಗ ಮಾವ, ಮಳ್ಳ ಇಬ್ಬರನ್ನೂ ಕಂಡು ಚಕಿತನಾಗಿ) ಎಲ ! ಇದೇನು ? ಯಾರು ?

ಮಾವ : (ಮುಂದೆ ಬಂದು) ನಿಮ್ಮನ್ನೆ ಹುಡುಕ್ಕೊಂಡು ಬಂದೀವಿರಿ, ಯಪ !

ಪೋ. ಕಾ. : ನನ್ನ ಹುಡುಕ್ಕೊಂಡು ?

ಮಾವ : ನಿಮ್ಮನ್ನ ಅಂದ್ರ ಅದು ಹೀಂಗ ಆಗೇತಿ. ಈ ನಮ್ಮ ಮಳ್ಳ ಅದಾನಲ್ಲ, ಅವನ ಹುಡುಗ ತಪ್ಪಿಸಿಕೊಂಡೇತಿ.

ಪೋ.ಕಾ. : (ಸಿಡುಕಿನಿಂದ) ಅರೇ — ಹೋಗೋ ಹೋಗು ಠಾಣೇಕ್ಕ ! ನಿನ್ನ ಫಿರ್ಯಾದಿ ಅಲ್ಲೇ ಕೊಡು. (ನಾಗರಕನಿಗೆ) ಹಂ — ಮುಂದೇನಾಯ್ತಂದಿರಿ ?

ನಾಗರಕ : 'ಗೂಕ್' ಅಂತ ಸದ್ದಾಯ್ತು ಅಂದೆನಲ್ಲ — (ಆ ಸಮಯಕ್ಕೆ ಸರಿಯಾಗಿ ಗೂಬೆಯ ಘೂತ್ಕಾರ. ನಾಲ್ವರೂ ಬೆಚ್ಚಿದವರಂತೆ ಸ್ತಬ್ಧರಾಗಿ ನಿಲ್ಲುವರು)

ಮಳ್ಳ : (ಹೆದರಿಕೆಯ ಕಳ್ಳದನಿಯಲ್ಲಿ) ಮಾವಾ, ಗೂಗೆ ಕೂಗಿತಲ್ಲೊ ?

ಮಾವ : ಅಂದ್ರೇನು – ರಾತ್ರಿ ಹೊತ್ತಿನಾಗ ಕೋಕಿಲ ಕೂಗಬೇಕಂತೀಯೇನು ?

ಪೋ.ಕಾ. : (ನಾಗರಕನಿಗೆ) ಇದೇ ಗೂಗೇನೇ ಕೂಗಿದ್ದನ್ನ ಕೇಳಿರಬೇಕು ನೀವು !

ನಾಗರಕ : ಛೆ ! ಛೆ ! ಗೂಗೆ ಏನು 'ಅಯ್ಯೊ' ಅಂತ ಕೂಗತದೇನು ?

ಪೋ.ಕಾ. : ಏನಂದಿರಿ ?

ನಾಗರಕ : (ತನ್ನ ಮಾತಿನ ಮಹತ್ವಕ್ಕಾಗಿ ಸಮಾಧಾನಗೊಂಡು) ಅದಕ್ಕೇ ಹೇಳ್ತೀನಿ ನಿಮಗ ! 'ಅಯ್ಯೊ' ಅಂತ ಸ್ಪಷ್ಟ ಕೇಳಿಸಿತು ; ಅಷ್ಟರಲ್ಲಿ 'ಬ್ಯಾಡ, ಬ್ಯಾಡ' ಅಂತ ಹೆಂಗಸೊಬ್ಬಾಕೆ ಚೀರಿಕೊಂಡಳು.

ಪೋ.ಕಾ. : ಇದೆಲ್ಲಾ ನಿಮಗೆ ಕೇಳಿಸೋ ಹಾಗೇ ನಡೀತಂತೀರಾ ?

ನಾಗರಕ : ಕೇಳಿಸೋ ಹಾಂಗಂದ್ರೇನು ? ನಾ ಇಲ್ಲಿ ನಿಂತೀನಿ, ಗದ್ದಲ ಅಲ್ಲಿಂಪ ಕೇಳಬರ್ತ್ತಪ (ಎಂದು ಕೈಮಾಡಿ ತೋರಿಸುವನು)

ಮಳ್ಳ : (ಕೈಕಾಲುಡಿಗಿದವನಂತೆ) ಎಲ್ಲಿಂವಂದ್ರಿ ?

ನಾಗರಕ : ಅಲ್ಲಿಂದ — ಆ ಗಿಡಗಳ ಗುಂಪು ಅದ ಅಲ್ಲ — ಅಲ್ಲಿಂದ. ನನಗ ಖಾತ್ರಿ ಅದ ಪೋಲೀಸರ — ಅಲ್ಲಿ ಹೆಣ ಬಿದ್ದಿರಲೇಬೇಕು.

ಮಳ್ಳ : (ಗಾಬರಿಯಾಗಿ) ಯಾರದು ಹೆಣ ?

ನಾಗರಕ : ಒಂದಲ್ಲ, ಎರಡಂತ ಹೆಣ.

ಮಾವ : ಏ, ಮಳ್ಳ, ನಡಿ-ನಡೀ ! ನಿನ್ನ ಮಗ, ನಿನ್ನ ಸೊಸೆ ಹೋಗಿರ್ಬೇಕು ಮಜಾ ಮಾಡ್ಲಾಕ —

ಪೋ.ಕಾ.: (ಮಾವ-ಮಳ್ಳರಿಗೆ) ನೀವು ಯಾರು ? ಈ ಹೊತ್ತಿನಾಗ ಇಲ್ಲಿ ಯಾಕ ನಿಂತಿರಿ ?

ನಾಗರಕ : ಇಲ್ಲಿ ಸುಮ್ಮನೆ ಯಾರೂ ನಿಂದರಬಾರದು. ಸುಮ್ಮಸುಮ್ಮನೆ ಬಂದು, ಮೈಮ್ಯಾಲೆ ಎಚ್ಚರಿಲ್ದ, ನಮ್ಮನ್ನ ಹೊಡೆದರ —

ಪೋ. ಕಾ.: ಯಾರ್ರೀ ? ಯಾರ್ನ ಹೊಡೆಯೋದು ?

ನಾಗರಕ : ಪೋಲೀಸರ, ನಿಮಗ ಸುಳ್ಳನ್ನಿಸೀತು. ಆದರೆ ಇಂಥಾ ವ್ಯಾಳ್ಯಾದಾಗ ಮನುಷ್ಯಗ ಮೈಮ್ಯಾಲೆ ಎಚ್ಚರಿರೋದಿಲ್ಲ. ಯಾಕಂದ್ರೆ, ತನ್ನ ಹೆಂಡ್ತೀನ್ನ ಓಡಿಸಿಕೊಂಡು ಹೋಗ್ಯಾನ ಅನ್ನೋದಕ ಆ ಹುಡುಗನಿಗೆ ಮೈಮ್ಯಾಲೆ ಎಚ್ಚರೇ ಇಲ್ಲ್ಹಾಂಗ ಆಗೇದ. ಅವನ್ನ, ಆಕೇನ್ನ — ಇಬ್ಬರ್ನೂ ಖೂನಿ ಮಾಡಿಯೆ ಕೈತೊಳಕೊಂತೀನಿ ಅಂದಾನಂತ ಆ ಹುಡುಗ —

ಮಳ್ಳ : (ಬೆದರಿ) ಹಾಂಗಂದಿಲ್ಲರಿ ನಮ್ಮ ಹುಡುಗ ! ಅವ ಯಾರ್ನೂ —

ಪೋ. ಕಾ.: (ಒಮ್ಮೆಲೆ) ನಿಮ್ಹುಡುಗ !

ನಾಗರಕ : (ಚಕಿತನಾಗಿ) ಅವನ ಪೈಕಿಯೆ ನೀವು ? ಪೋಲೀಸರ, ಇವರ್ನ ಬಿಡ. ಬ್ಯಾಡಿರಿ, ಗಿಡದ ಗುಂಪಿನೊಳಗ ಹೆಣ ಇರಲೇಬೇಕು, ನೋಡಿರಿ —

ಮಳ್ಳ : (ಜೀವ ಹೋಗುವವನಂತೆ) ಮಾವಾ —

ಮಾವ : (ನಾಗರಕನಿಗೆ) ಯಾಕಪ, ಹೆಣದ ಮ್ಯಾಗ ಮರ್ಜಿ ಭಾಳ ಕಾಣ್ತೇತಿ.

ನಾಗರಕ : ಅಂದ್ರೆ ?

ಮಾವ : ಅಂದ್ರೇನು ? ಇಲ್ದಲ್ಲಿ ಹೆಣ ಹುಡುಕ್ತಾ ಹೊಂಟೀರಿ, ಅದಕ್ಕಂತೀನಿ.

ನಾಗರಕ : (ಬುದ್ಧಿವಂತಿಕೆಯ ನಗೆಯಿಂದ) ಅಲ್ಲಪ — ನಿನಗೇನು ತಿಳಿದೀತು, ಗಂಡಸು-ಹೆಂಗಸಿನ ಸಂಬಂಧದ ವಿಷಯ, ಅದು ಮನುಷ್ಯನನ್ನ ಎಷ್ಟು ಕೆರಳಿಸ್ತದೆ ಅನ್ನೋದು — ಕೇಳೀದಿ ಇಲ್ಲೊ ? ಲಂಕಾಕ್ಕೆ ಲಂಕಾ ಇಡೀ ಪಟ್ಟಣ ಸುಟ್ಟರಂತ, ಅಷ್ಟು ಕಠೋರ ಇರ್ತದ ಹೆಂಗಸಿನ ಬಗ್ಗೆ ಹುಮ್ಮಸ್ಸು.

ಪೋ. ಕಾ.: (ನಾಗರಕನಿಗ) ನಿಮ್ಮ ಕತೆ ಬೇಕಾಗಿಲ್ಲ, ಏನ್ನೋಡಿದಿರಿ ಅದನ್ನ ಹೇಳಿರಿ.

ನಾಗರಕ : ಹೇಳಿದೆನಲ್ಲ ನನಗೇ ಕೇಳಿಸಿತು ಅಂತ. ಹೆಂಗಸು ಚೀರಿದ್ದು ಕೇಳಿಸಿತು. ಮುಂದೆ ಆ ಗಂಡಸಿನ ದನೀನೂ ಕೇಳಿಸಲಿಲ್ಲ, ಆ ಹೆಂಗಸಿನ ದನೀನೂ ಕೇಳಿಸಲಿಲ್ಲ. ಅದಕ್ಕ ಹೇಳ್ತೀನಿ — ಅವೆರಡೂ ಹೆಣ —

ಪೋ. ಕಾ. : ಎಲೆ ! ಮತ್ತೆ ಅದ್ನೆ ಹೇಳ್ತೀರಲ್ಲ ? ತಾವಾಗಿಯೆ ಎದ್ದು ಹೋಗ್ತಾವೇನು ಹೆಣ ? ( ಬಾಗಿಲ ಸದ್ದು ) ಏನದು ?

ನಾಗರಕ : ನಿಮಗೂ ಕೇಳಿಸ್ತೊ ಇಲ್ಲೊ ?

ಪಿಳ್ಳೆ : ಏನೊ, ಮಾವಾ, ಅದು.

[ ಕೆಮ್ಮಿದ ಸದ್ದು ].

ಪೋ.ಕಾ. : ಯಾರವರು ? ( ಗದ್ದರಿಸುವನು )

[ ' ಯಾಕೆ ? ನೀವ್ಯಾರು ? ' ಎನ್ನುತ್ತ ಬಾಗಿಲನ್ನು ತೆರೆದ ಮುಂಚಿನ ಮೂರು ವ್ಯಕ್ತಿಗಳು ಹೊರಗೆ ಬರುವವು. ೧ನೆ ವ್ಯಕ್ತಿ ಪೋಲೀಸ ಕಾನ್‌ಸ್ಟೇಬಲ್‌ನನ್ನು ನೋಡಿ ]

೧ನೆ ವ್ಯಕ್ತಿ : ಯಾಕರಿ ? ಈವೊತ್ತು ನಮ್ಮನೇ ಸುತ್ತಲೇ ಅಡ್ಡಾಡ್ತೀರಿ ? ನಮಗೇನು ರಾತ್ರಿ ಮಲಗು ಅಂತೀರೊ ?

ನಾಗರಕ : ಇದು ನಿಮ್ಮ ಮನೆ ಏನು ? ರಾತ್ರಿ ಮಲಗುವವರೇನು ನೀವು ? ಆಗಿ ಹೋಯ್ತು. ಅಲ್ಲ ರಾಯರ, ನಿಮ್ಮ ಮನೇ ಮಗ್ಗಲಿನಾಗೇ ಎರಡು ಹೆಣ ಬಿದ್ದಾವ —

೨ನೆ ವ್ಯಕ್ತಿ : } ಹೆಣ ?
೩ನೆ ವ್ಯಕ್ತಿ : } ಇಲ್ಲಿ ಏನು ಮಾಡ್ತಾವ ?

ಪೋ. ಕಾ. : (ನಾ. ನಿಗೆ) ತಡೀರಯ್ಯ ! (೧ನೆ ವ್ಯಕ್ತಿಗೆ) ರಾಯರ, ಯಾವಾಗಿನಿಂದ ನಾ ನಿಮಗ ಕೇಳ್ತಾ ಇದ್ದೀನಿ, ಯಾರನಾದರೂ ನೋಡಿದಿರೇನು ಅಂತ —

೧ನೆ ವ್ಯಕ್ತಿ : ಯಾರನ್ನ ನೋಡ್ಬೇಕಾಗಿತ್ತು ಹೇಳಿರಿ.

೩ನೆ ವ್ಯಕ್ತಿ : (ಇದೊಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು) ಯಾರ್ನ ನೋಡ್ಬೇಕಾಗಿತ್ತು ಅಂತ? ಹಹ!

ನಾಗರಕ : ನಗ್ತೀರೇನು ? ನೋಡಿದ್ದರ ತಿಳೀತಿತ್ತು. ಇಲ್ಲಿ ಖೂನಿ ಆಗೇದ, ಖೂನಿ !

೩ನೆ ವ್ಯಕ್ತಿ : ( ಬೆಪ್ಪಾಗಿ ) ಏನಂದಿರಿ ?

ನಾಗರಕ : ಮೈ ನವಿರೇಳುವಂಥಾ ದುರ್ಘಟನೆ ! ಲೈಂಗಿಕ ದುರ್ಘಟನೆ !

ಪೋ. ಕಾ. : ( ನಾ ನಿಗೆ ) ಸುಮ್ನಿರಯ್ಯ ನೀನು ! (ವ್ಯಕ್ತಿಗಳಿಗೆ) ಅದಕ್ಕೇಳ್ತೀನಿ–ಅಂದ್ರ ಕೇಳ್ತೀನಿ — ಯಾರ್ನಾದರೂ ನೋಡೀರೇನು ಅಂತ; ಯಾಕಂದ್ರ, ನಿಮ್ಮ ಮನೇ ಮಗ್ಗುಲಲ್ಲೇ —

೨ನೆ ವ್ಯಕ್ತಿ : ಇಲ್ಲಿ ನೋಡಿರಿ, ಸಿಪಾಯಿಸಾಹೇಬ್ರ, ಅವರು ಬರೆಯುವವರು.

ತಾವಾಯ್ತು, ತಂ ಕುರ್ಚಿ ಆಯ್ತು, ತಂ ಮೇಜಾಯ್ತು, ಕಾಗದಾಯ್ತು, ಪೆನ್ ಆಯ್ತು; ಇನ್ನೊಂದರ ಕಡೆ ಅವರ ಲಕ್ಷ್ಯ ಹ್ಯಾಂಗ ಹೋದೀತು ಹೇಳಿರಿ.

ಪೋ.ಕಾ.: (ಸಿಡುಕಿನಿಂದ) ಯಾರ್ನೂ ನೋಡಿಲ್ಲ ಅಂತ ಹೇಳಿದ್ರಾಯ್ತು, ಇಷ್ಟೆಲ್ಲಾ ಕತೆ ಯಾರಿಗೆ ಬೇಕಾಗೇದ? ನೋಡಿಲ್ಲ, ಹೌದಲ್ಲೊ? "ದೇವರಾಣೆ ಮಾಡಿಲ್ಲ, ಅದಕ್ಕ ಸುಳ್ಳು ಹೇಳಿದರೆ ನಡೀತೇತಿ" ಅಂತ ನೀವೇನೋ ತಿಳಿದಿರಬೇಕು. ಆದರೆ ಅಧಿಕಾರಿಯಿಂದ ಗುಟ್ಟ ಮುಚ್ಚಿಡೋದು ಸತ್ಯ — ಅಲ್ಲ, ಸತ್ಯ ಮುಚ್ಚಿಡೋದು ಗುನ್ಹೆ — (ಮಾತು ತಪ್ಪಿದ್ದಕ್ಕೆ ಹೋಗುವ ಅವಸರ, ದರ್ಪ) ಲಕ್ಷ್ಯದಾಗಿಟ್ಟಿರ್ರಿ, ಅಂಡೆ — (ಮನೆಯ ಹಿಂದಿನಿಂದ ಹೋಗುವನು)

ನಾಗರಕ: ಎಲ! ಹೋಗಿಯೆ ಬಿಟ್ಟನಲ್ಲ! ಪೋಲೀಸರ, ಪೋಲೀಸರ, ಹೆಣದ್ದು ಏನ್ಮಾಡ್ತೀರಿ, ಪೋಲೀಸರ — (ಎನ್ನುತ್ತ ಅವನ ಹಿಂದಿನಿಂದ ಹೋಗುವನು)

ಮಳ್ಳ: (ಗಾಬರಿಗೊಂಡು) ಮಾವಾ, ಇನ್ನೂ 'ಹೆಣ' ಅಂತಾನಲ್ಲ, ಕರೇವ್ವನ್ನೆ ನನ್ನುಡುಗ —

ಮಾವ: ನಡೀಯೊ, ಮಳ್ಳ! ಹೆಣದ ಕಾಳಜಿ ಸತ್ತೋರಿಗೆ! ಊಟೊಂದು ಜಿಂವಕ್ಕ ಜಿಂವಾ ಹಚ್ಚಿಕೊಂಡಿದ್ದೇ ಕರೇವ್ವಿದ್ರ ನಿನ್ನುಡುಗ ತಾನೂ ಸತ್ತಿಲ್ಲ, ಯಾರ್ನೂ ಕೊಂದಿಲ್ಲ. ಏಟೊತ್ತಾತು ಚಿಲುಮೆ ಹೊತ್ತಿಸಿ, ನಡೆ, ಮನೆಗೆ. (ಎಂದು ಅವನನ್ನು ಮುಂದೆ ಮಾಡಿಕೊಂಡು ಮೊದಲು ಬಂದ ದಾರಿಯಿಂದ ಹೋಗುವನು.)

[ಮುವ್ವರೂ ವ್ಯಕ್ತಿಗಳು ಒಂದು ನಿಮಿಷ ಒಬ್ಬರನ್ನೊಬ್ಬರು ನೋಡುವರು. ಕೊನೆಗೆ ಇದುವರೆಗೆ ನಡೆದು ಹೋದುದರ ಯಾವ ಸಂಬಂಧವೂ ಇಲ್ಲ ಎಂಬಂತೆ ಉಸುರ್ ರೆದು—]

೧ನೆ ವ್ಯಕ್ತಿ: ನೋಡಿದಿರಾ? ನೀವ್ಹೇಳೋ ಜನ ಇದು! ಚಿಲುಮೇ ಚಿಂತೇವಳಗ ಕಾಲ ಕಳೆಯೋ ಜನಕ್ಕೆ ಪೌರಾಣಿಕ ನಾಟಕ ಸೇರ್ತದ ಅಂತೀರಿ.

[ಮುವ್ವರೂ ಮಾತನಾಡುತ್ತ ರಂಗಸ್ಥಲದ-ಪ್ರೇಕ್ಷಕರ ಬಲಬದಿಯ-ಮುಂತುದಿಯತ್ತ ನಡದಿದ್ದಾರೆ.]

೨ನೆ ವ್ಯಕ್ತಿ: ನಮ್ಮ ಮಾತು ನೀವು ಒಪ್ಪೋದಿಲ್ಲ, ನಾವೇನ್ಮಾಡಬೇಕು?

೩ನೆ ವ್ಯಕ್ತಿ: ನೀವು ಹೆಚ್ಚು ತಿಳಿದವರು, ಅದಕ್ಕ ನಾವೇನೂ ಮಾಡೋ ಹಾಗಿಲ್ಲ.

[ಇವರು ಈ ಕಡೆ ನಡೆದಾಗ ಹಿಂದಿನಿಂದ ಬಾಗಿಲು ಮೆಲ್ಲನೆ ತೆರೆದು ಕ್ರಮೇಣ ಪ್ರಾರಂಭದ ಮುಖ ಹಣಿಕಿಕ್ಕುವುದು.]

೨ನೆ ವ್ಯಕ್ತಿ: ಕತೆ ಪೌರಾಣಿಕ ಇರಲಿ, ಸಾಕು; ಮುಂದೆ ನೀವು ಬರೆಯೋ ಹಾಂಗ ಬರೀರಿ.

೧ನೆ ವ್ಯಕ್ತಿ : ಅಂದ್ರೇನು ? ರಾವಣ ಸಿಗರೇಟ್ ಸೇದ್ತಾ, ಹ್ಯಾಟ್ ಕೆಳಗೆ ಎಳೆದು-ಕೊಂಡು ಬರಲಿ ಅಂತೀರೇನು ?

೩ನೆ ವ್ಯಕ್ತಿ : ಹಹಹ !

೨ನೆ ವ್ಯಕ್ತಿ : ( ಒಮ್ಮೆಲೆ ನಿಂತು, ೧ನೆ ವ್ಯಕ್ತಿಯನ್ನು ದಿಟ್ಟಿಸಿ) ಏನಂದಿರಿ ? ( ಒಮ್ಮೆಲೆ ಹೊಳೆದಂತೆ) ಹಂ — ಹೌದು ನೋಡಿರಿ! ಈಗ ಹೊಳೀತು! ರಾಯರ, ನಮ್ಮ ಮಾತ ಕೇಳಿರಿ ನೀವು ಇದೊಂದು ಸಲ. ನಾವ್ಹೇಳಿಧಾಂಗ — ಅಲ್ಲಲ್ಲ — ಪೌರಾಣಿಕ ಕತೆಯನ್ನು ನಿಮಗೆ ಅನ್ನಿಸಿಧಾಂಗ ಬರೀರಿ — ಒಂದು ತಿಂಗ-ಳೊಳಗೆ ನಿಮ್ಮ ಈ ಮನೆಗೆ ಒಂದು ಎತ್ತರ compound ಗೋಡೆ ಕಟ್ಟಿ-ಸೋವಷ್ಟು ದುಡ್ಡು ಬರದಿದ್ದರ —

೩ನೆ ವ್ಯಕ್ತಿ : ನಾವು ಧಂದೇನೇ ಬಿಟ್ತೀವಿ – ಅಂದೆ.

೨ನೆ ವ್ಯಕ್ತಿ : ಧಂದೆ ? ( ತಟ್ಟನೆ ಸ್ಮರಣೆಗೆ ಬಂದಂತಾಗಿ ) ಎಲೆ ! ಕೈಯೊಳಗಿನ ಬ್ಯಾಗ್ ಒಳಗೇ ಬಿಟ್ಟು ಬಂದೆನಲ್ಲ ?

೩ನೆ ವ್ಯಕ್ತಿ : ನನ್ದೂ ಬ್ಯಾಗ್ ಒಳಗೇ ಉಳಿದದೆ — ( ಎನ್ನುತ್ತ ಇಬ್ಬರೂ ಬಾಗಿಲದ ಕಡೆ ತಿರುಗಲು ಬಾಗಿಲು ತಟ್ಟನೆ ಮುಚ್ಚಿ, ಮುಖ ಮರೆಯಾಗುವುದು. )

೧ನೆ ವ್ಯಕ್ತಿ : ( ನಗೆಯಿಂದ ) ಬರ್ರಿ, ಹಾಗಾದ್ರೆ. ನಿಂ ಬ್ಯಾಗ್ ನನ್ನಲ್ಲಿ ಉಳಿದರೆ ಮತ್ತೆ ಪೋಲೀಸ್ ಬಂದು ಕೇಳ್ಯಾನು — ಯಾರನಾದರೂ ನೋಡಿದಿವೇನು ಅಂತ. . ಇಲ್ಲ, ನಿಂ ಬ್ಯಾಗ್ ನೋಡಿ ನನ್ನನ್ನೆ —

೩ನೆ ವ್ಯಕ್ತಿ : ಹಹಹ !

[ ಕೊನೆಗೆ ಮುವ್ವರೂ ನಗುತ್ತ ಬಾಗಿಲ ಕಡೆ ನಡೆದಾಗ—]

— ತೆರೆ —

ಮೊದಲ ಅಂಕ ಮುಗಿದುದು

## ಅಂಕ ೨

[ ದೃಶ್ಯ ಮೊದಲ ಅಂಕದಲ್ಲಿಯಂತೆಯೆ. ಅದೇ ದಿನ, ರಾತ್ರಿ ಎಸ್ಟಿ. ಕಳೆದ ಅಂಕದಲ್ಲಿ ನಡೆದ ಘಟನೆಯ ಎರಡು ಗಂಟೆಗಳ ತರುವಾಯ. ಈಗ ಬೆಳದಿಂಗಳು ಇಷ್ಟಿಷ್ಟು ನಿರ್ಮಲ ವಾಗಿದೆ. ಅದಕ್ಕೆ ವಿರುದ್ಧವಾಗಿ ಕಿಟಕಿಯಿಂದ ಮನೆಯೊಳಗೆ ಕಾಣುವ ಕತ್ತಲೆ, ಬಲ-ಬದಿಯ ಹಿಂತುದಿಯಲ್ಲಿ ಗಿಡಗಳ ದಟ್ಟಣೆಯ ಕತ್ತಲೆ .. ತೆರೆ ಎದ್ದಾಗ ರಂಗಸ್ಥಲದಲ್ಲಿ ನಿಶ್ಶಬ್ದತೆ, ಯಾವ ವ್ಯಕ್ತಿಯೂ ಇಲ್ಲ... ಹಿಂದಿನ ಅಂಕದಲ್ಲಿಯಂತೆ ಗೂಬೆಯ ಘೂತ್ಕಾರ ... ಮತ್ತೆ ನಿಶ್ಶಬ್ದತೆ . . ಕೆಲ ನಿಮಿಷಗಳ ತರುವಾಯ ಮುಂಚಿನ ಪೋಲೀಸ ಕಾನ್‌ಸ್ಟೇಬಲ್‌ನೆ ಮೆಲ್ಲನೆ ನಡೆದು ಬರುವನು. ಅತ್ತಿತ್ತ ನೋಡುವನು. ರಂಗದ ಮಧ್ಯಕ್ಕೆ ಬಂದು ಕಿಸೆಯೊಳಗಿನ ಎರಡು ಪತ್ರಗಳನ್ನು ತೆಗೆದು, ಒಂದೊಂದನ್ನಾಗಿ ಅವುಗಳಲ್ಲಿ ಏನನ್ನೊ ಹುಡುಕಿ, ಮುಖ ತಿರುಗಿಸಿ ಮನೆಯ ಬಾಗಿಲನ್ನು ದಿಟ್ಟಿಸಿ ನೋಡುವನು; ಕ್ರಮೇಣ ಪ್ರೇಕ್ಷಕರ ಕಡೆ ಬೆನ್ನು ತಿರುಗಿಸಿ, ಒಮ್ಮೆ ಬಾಗಿಲ ಕಡೆ, ಒಮ್ಮೆ ಗಿಡಗಳ ದಟ್ಟಣೆಯ ಕಡೆ ನೋಡುತ್ತ ನಿಲ್ಲುವನು. ಪತ್ರಗಳನು ಕಿಸೆಯಲ್ಲಿ ಹಾಕಿ, ಗಿಡಗಳ ಗುಂಪಿನ ಕಡೆ ನಾಲ್ಕು ಹೆಜ್ಜೆ ನಡೆದು, ಒಮ್ಮೆಲೆ ತಡೆದು, ಕೈ ಜಾಡಿಸಿ ಬಂದ ಬದಿಯಿಂದ ಹೋಗುವನು . . ಮತ್ತೆ ಒಂದು ನಿಮಿಷ ನಿಶಬ್ದತೆ ... ಆ ಮೇಲೆ ಎಡಬದಿಯಿಂದ ಮೋಟಾರ ಹಾರ್ನ್‌ದ ಸದ್ದು ಕೇಳಬರುವುದು. ತಟ್ಟನೆ ಬಲಬದಿಯ ಮುಂತುದಿಯಿಂದ 'uniform'ದಲ್ಲಿದ್ದ ಒಬ್ಬ driver ಬರುವನು, ಮೈದೂಳನ್ನು ಜಾಡಿಸುತ್ತ; ಅವನ ಹಿಂದಿನಿಂದಲೆ ಒಳ್ಳೇ 'fashionable' ಬಣ್ಣ-ವೇಷ-ಭೂಷಣಗಳಿಂದ ಸಿಂಗಾರಾದ ಯುವತಿ, ತಲೆಗೂದಲನ್ನು ಸಾವರಿಸಿಗೊಳ್ಳುತ್ತ ಬರುವಳು. ಇಬ್ಬರೂ ಒಬ್ಬರನ್ನೊಬ್ಬರು ಸಾಶಂಕದೃಷ್ಟಿಯಿಂದ ನೋಡುವಾಗ ಮತ್ತೊಮ್ಮೆ ಮೋಟರ ಹಾರ್ನ್‌ದ ಸದ್ದು; ಅದನ್ನು ಕೇಳಿದೊಡನೆಯೆ ಇಬ್ಬರೂ ಅಸಂತುಷ್ಟಿಯ, ನಿರಾಶೆಯ ದೃಷ್ಟಿಯಿಂದ ಒಬ್ಬರ-ನ್ನೊಬ್ಬರು ನೋಡಿ, ಗಿಡಗಳ ದಟ್ಟಣೆಯ ಕಡೆ ನಡೆಯುವರು. ಅವರು ರಂಗಸ್ಥಲದಿಂದ ಹೋದ ಮೇಲೆ ರಂಗಭೂಮಿ ಮತ್ತೆ ನಿಶ್ಶಬ್ದ; ಒಂದೆರಡು ನಿಮಿಷಗಳಲ್ಲಿ ಕಿಟಕಿಯಲ್ಲಿ ಬೆಳಕು ಕಾಣುವುದು; ಆ ಮೇಲೆ ಬಾಗಿಲನ್ನು ತೆರೆದು ೨ನೆ ಮತ್ತು ೩ನೆಯ ವ್ಯಕ್ತಿಗಳು ಬರುವರು. ಕಿಟಕಿಯಲ್ಲಿ ಬೆಳಕು ಮತ್ತೆ ಕಾಣದಾಗುವದು; ನಿಮಿಷಾರ್ಧದಲ್ಲಿ ೧ನೆಯ ವ್ಯಕ್ತಿಯೂ ಬಾಗಿಲಿನಿಂದ ಹೊರಗೆ ಬರುವುದು. ಇಷ್ಟರಲ್ಲಿ ಕೈಯಲ್ಲಿ ಬ್ಯಾಗ್‌ನ್ನು ಹಿಡಿದು ೩ನೆಯ ವ್ಯಕ್ತಿ ಕೆಳಮೆಟ್ಟಲಿಗೆ, ಕೈಯಲ್ಲಿ ಬಡಿಗೆಯನ್ನು ಹಿಡಿದ ಎರಡನೆಯ ವ್ಯಕ್ತಿ ಮೇಲಿನ ಮೆಟ್ಟಿಲಿಗೆ ಬಂದು ನಿಂತಿದ್ದಾರೆ. ೧ನೆ ವ್ಯಕ್ತಿ ಹೊಸ್ತಿಲನ್ನು ದಾಟಿ ಬಂದು, ಮೇಲೆ, ಸುತ್ತಮುತ್ತಲು ನೋಡಿ —]

**೧ನೆ ವ್ಯಕ್ತಿ :** ಅಬ್ಬ ! ಇಂಥಾ ಬೆಳದಿಂಗಳನ್ನ ಎಂದೂ ಕಂಡಿಲ್ಲ.

**೨ನೆ ವ್ಯಕ್ತಿ :** ಮನೇಲಿ ಮಾತ್ರ ತಪ್ಪಿ ಕೂಡಾ ನೀವುಬೆಳಕನ್ನ ಇಡೋದಿಲ್ಲ, ಅಲ್ಲ? ಹಹ !

**೩ನೆ ವ್ಯಕ್ತಿ :** ಬರೆಯೋವವ್ರಿಗೆ ಬೆರಳ ತುದಿಗೆ ಬೆಳಕು ಸಾಕು. ಯಾಕರೀ, ರಾಯರೆ? ಹಹ !

**೧ನೆ ವ್ಯಕ್ತಿ :** ಅದೂ ನಿಜ ಅನ್ನಿರಿ. ಬರೆಯೋ ಮಟ್ಟಿಗೆ ಬೆಳಕಿದ್ದರೆ ಸಾಕಲ್ಲ.

೩ನೆ ವ್ಯಕ್ತಿ : (ಕೆಳಗಿಳಿಯುತ್ತ) ಬೇಕಾದಷ್ಟು ಬೆಳಕನ್ನ ಕೊಡ್ತೀವಿ, ರಾಯರ, ನಮಗೆ ಬರೆದು ಕೊಟ್ಟರೆ.

೨ನೆ ವ್ಯಕ್ತಿ : (ಒಂದು ಹೆಜ್ಜೆ ಮುಂದೆ ನಡೆಯುತ್ತ) ನನಗ ಇನ್ನೊಂದು ವಿಚಾರ ಬಂವದ –

೩ನೆ ವ್ಯಕ್ತಿ : ... ನನಗೂ —

೧ನೆ ವ್ಯಕ್ತಿ : ಹಾಂಗಿದ್ದರ ಅಡ್ಡಾಡಿಸಿಕೊಂಡು ಬರೋಣ.

೨ನೆ ವ್ಯಕ್ತಿ : (ಇದೊಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು) ಅಡ್ಡಾಡಿಸಿಕೊಂಡು? ಹಹಹ!

೧ನೆ ವ್ಯಕ್ತಿ : ವಿಚಾರ ಅಂದ್ರ ಸಾಕಿದ ನಾಯಿ ಇದ್ಧಾಂಗ, ಸ್ವಂತಕ್ಕ ತ್ರಾಸ ಕೊಟ್ಟಿರ ಬಾರದು, ಮಂದಿಗೆ "ವಾವ್" ಅನ್ನದೇ ಬಿಟ್ಟಿರಬಾರದು. ಏನಂತೀರಿ ? (ಮೇಲಿನ ಮೆಟ್ಟಲಿಗೆ ಬಂದು ನಿಲ್ಲುವನು)

೩ನೆ ವ್ಯಕ್ತಿ : ರಾಯರ, ಇನ್ನು ಹೊತ್ತಾಯ್ತು ಹೋಗ್ತೀವಿ. ಕೊನೇ ಪಕ್ಷಕ್ಕೆ ನಮ್ಮ-ದಿನ್ನೊಂದು ವಿನಂತಿ ಅದ, ಅದನ್ನ ಕೇಳಿಆದ್ರೂ ಕೇಳ್ಕೊಳ್ಳಿ.

೨ನೆ ವ್ಯಕ್ತಿ : ನನ್ದೂ ಅದೇ ವಿನಂತಿ.

೧ನೆ ವ್ಯಕ್ತಿ : ನಾಟಕಾ ಬರೆಯೋದೊಂದು ಬಿಟ್ಟು ಬೇಕಾದ್ದೇಳಿರಿ.

೩ನೆ ವ್ಯಕ್ತಿ : ಅಲ್ಲ, ರಾಯರ, ನಾಟಕಾ ಬರೆದು ಹೆಸರ ಗಳಿಸಿದವರು ನೀವು. ನಾಟಕಾ ಆಡಿ, ಆಡಿಸಿ ಅನುಭವ ಗಳಿಸಿದವರು ನಾವು—

೧ನೆ ವ್ಯಕ್ತಿ : (ನಡುವೆಯೆ) ಅದಕ್ಕೇ ಹೇಳ್ತೀನಿ.

೩ನೆ ವ್ಯಕ್ತಿ : (ಚಕಿತನಾಗಿ) ಅದಕ್ಕೇ ಅಂದ್ರೆ ?

೧ನೆ ವ್ಯಕ್ತಿ : ನಾನು ಗಳಿಸಿದ್ದು ಹೆಸರು, ನೀವು ಗಳಿಸಿದ್ದು ಅನುಭವ; ದುಡ್ಡಿನ್ದ ಸಂಪರ್ಕ ಇಬ್ಬರಿಗೂ ಇಲ್ಲ—

೨ನೆ ವ್ಯಕ್ತಿ : ಇಲ್ಲಾ ಅನಬ್ಯಾಡಿರಿ; ಅದ. ಅದನ್ನೆ ಹೇಳಲಿಕ್ಕೆ ಬಂದೀವಿ.

೧ನೆ ವ್ಯಕ್ತಿ : ಪೌರಾಣಿಕ ನಾಟಕಾ ಬರೆಯೋದಿಲ್ಲ ಅಂತ ಹೇಳಿದೆನಲ್ಲ ?

೩ನೆ ವ್ಯಕ್ತಿ : ಹಾಂಗಿದ್ದರ ಐತಿಹಾಸಿಕ ನಾಟಕಾ ಬರೀರಿ.

೧ನೆ ವ್ಯಕ್ತಿ : (ಚಕಿತನಾಗಿ) ಏನಂದಿರಿ ?

೨ನೆ ವ್ಯಕ್ತಿ : (ಮುಂದೆ ಹೆಜ್ಜೆ ಇಡುತ್ತಿರುವಾಗ ತಡೆದು ಗಕ್ಕನೆ ತಿರುಗಿ ನಿಂತು) ಹಾಂ! ಹ್ಯಾಂಗ ಸಿಕ್ಕಿರಿ ? ಬರೀರಿ ಐತಿಹಾಸಿಕ, ಅದೇನು ಪೌರಾಣಿಕ ಅಲ್ಲಲ್ಲ ?

೧ನೆ ವ್ಯಕ್ತಿ : (ಚಕಿತ ದೃಷ್ಟಿಯಿಂದಲೆ ೨ನೆ ವ್ಯಕ್ತಿಯನ್ನೇ ನೋಡಲು ಅವನು ಮುಗುಳ್ನಗೆಯಿಂದ ತಲೆದೂಗುವನು. ಈಗ ಮೂವ್ವರೂ ರಂಗದ ಮಧ್ಯ ಮುಂತುದಿಗೆ ಬಂದು ನಿಂತಿದ್ದಾರೆ) ಐತಿಹಾಸಿಕ ಅಂದ್ರ ಪೌರಾಣಿಕ ಅಲ್ಲ ಅಂತೀರಾ ? (ಇದನ್ನು ತನ್ನಷ್ಟಕ್ಕೆ ಎನ್ನುವ ದನಿಯಲ್ಲಿ)

೨ನೆ ವ್ಯಕ್ತಿ : (ಇದೂ ಒಂದು ಹಾಸ್ಯದ ಚಟಾಕಿ ಎಂಬಂತೆ ನಗುತ್ತ) ಅಂದ್ರ ?... ಹಹ! ... ಎರಡೂ ಒಂದೇ ಅಂತೀರೇನು ಮತ್ತೆ ?

೧ನೆ ವ್ಯಕ್ತಿ : (ಇದೂ ತನ್ನಷ್ಟಕ್ಕೆ ಎನ್ನುವಂತೆ) ಎರಡೂ ಒಂದೇ ಅಂತೀರಾ ?

೨ನೆ ವ್ಯಕ್ತಿ : ರಾಯರೆ, ನಂನಮ್ಮೊಳಗೆ ಮಾತಾಡೋವಾಗ ಸ್ಪಷ್ಟ, ಪ್ರಾಮಾಣಿಕ ಮಾತಾಡ್ಲಿಕ್ಕೆ ಏನಡ್ಡಿ? ನನಕ್ಕೇಳಿದ್ರ, ಒಂದು ದೃಷ್ಟಿಯಿಂದ ಎರಡೂ ಒಂದೇ. ಅದಕ್ಕೇ ಜನ ನೋಡ್ಲಿಕ್ಕೆ ಬಂದೇ ಬರ್ತಾರ ಅನ್ನೋ ಧೈರ್ಯ.

೩ನೆ ವ್ಯಕ್ತಿ : (೧ನೆ ವ್ಯಕ್ತಿಗೆ) ಅನುಭವದಿಂದ ಹೇಳೋ ಮಾತನ್ನ ಕೇಳಿರಿ.

೧ನೆ ವ್ಯಕ್ತಿ : (ನಕ್ಕು) ಇದಕ್ಕ ಅನುಭವ ಯಾಕ ಬೇಕು ? ಪೌರಾಣಿಕ ಕತೇನೂ ಸುಳ್ಳು, ಐತಿಹಾಸಿಕ ಕತೇನೂ ಸುಳ್ಳು; ಆದ್ದರಿಂದ ಎರಡೂ ಒಂದೇ. (೩ನೆ ವ್ಯಕ್ತಿ ನಗುವ ಸಿದ್ಧತೆಯಲ್ಲಿರುವಾಗ ೨ನೆ ವ್ಯಕ್ತಿ ಅಸಮ್ಮತಿಸೂಚಕವಾಗಿ ತಲೆಯನ್ನು ಜಾಡಿಸಲು ತಡೆಯುವನು. ೨ನೆ ವ್ಯಕ್ತಿಗೆ) ಯಾಕೆ ಅಲ್ಲ ಅಂತೀರಿ ?

೨ನೆ ವ್ಯಕ್ತಿ : ಅಲ್ಲ ಅನ್ನೋದಿಲ್ಲ, ಇಲ್ಲ ಅನ್ನೋದಿಲ್ಲ; ಸುಳ್ಳು—ನಿಜ ಇದರ ಗೊಡವೆ ನಮ್ಗೂ ನಿಮ್ಗೂ ಯಾಕ? ನೀವು ಐತಿಹಾಸಿಕ ನಾಟಕಾ ಬರೀರಿ, ಜನ ನೋಡ್ಲಿಕ್ಕೆ ಬರ್ತಾರ; ಇದಕ್ಕ ನನ್ನ guarantee.

೩ನೆ ವ್ಯಕ್ತಿ : ಕಣ್ಣು ಕುಕ್ಕಿಸೋ ಹಾಂಗ ಡ್ರೆಸ್ ಮಾಡಿಸಿಕೊಡ್ತೀನಿ, ಇದಕ್ಕ ನನ್ನ guarantee.

೨ನೆ ವ್ಯಕ್ತಿ : ಒಂದು deep sceneಉ, ಒಂದು front sceneಉ ಹೀಂಗ ಇಟ್ಕೊಂಡು. ಬರೀರಿ, ಬೆರಳ ಕಚ್ಚೋಹಾಂಗ settings ಕೊಡ್ತೀನಿ.

೩ನೆ ವ್ಯಕ್ತಿ : ಕೊಡ್ತೀವಿ ಅಂದ್ರೆ, ಇದಕ್ಕೆ ಇಬ್ಬರದೂ guarantee.

೨ನೆ ವ್ಯಕ್ತಿ : ಬೇಕಾದರೆ ಯುದ್ಧದ scene ಸೇರಿಸರಿ, ಬೇಕಾದರೆ ದರ್ಬಾರ್‌ದ ಸೀನ್ ಸೇರಿಸರಿ —

೩ನೆ ವ್ಯಕ್ತಿ : ದರ್ಬಾರ್‌ದಿದ್ದರೆ ಅನುಕೂಲ; ಒಂದು dance ಹೊಡಿಸಲಿಕ್ಕೆಬಂದೀತು.

೨ನೆ ವ್ಯಕ್ತಿ : ಬೇಕಾದರೆ ಅಂತಃಪುರದ ಮಾಳಿಗೆಯ ಮ್ಯಾಲೆ ಒಂದು ದೇಶದ ರಾಜಕುಮಾರಿ ಇರಲಿ, ಕೆಳಗೆ ಇನ್ನೊಂದು ದೇಶದ ರಾಜಕುಮಾರ ಇರಲಿ —

೩ನೆ ವ್ಯಕ್ತಿ : (ಮೈಮರೆತವನಂತೆ) ಭಲೆ ! ಮ್ಯಾಲಿನಿಂದ ಕೆಳಗೆ ಆಕೆ ಹಾಡುವಾಕೆ, ಕೆಳಗಿನಿಂದ ಮ್ಯಾಲೆ ಇವನು ಹಾಡುವಾತ; ಸಂಗೀತದ ದ್ವಂದ್ವಯುದ್ಧ !

೨ನೆ ವ್ಯಕ್ತಿ : (೧ನೆ ವ್ಯಕ್ತಿಗೆ) ಏನಂತೀರಿ ?

೩ನೆ ವ್ಯಕ್ತಿ : (ಪ್ರೋತ್ಸಾಹಿಸುವವನಂತೆ) ಇಷ್ಟು ಹೇಳಿದ ಮ್ಯಾಲೆ—

೧ನೆ ವ್ಯಕ್ತಿ : ಕತೇನೂ ಏನಿರ್ಬೇಕು — ಒಂದಿಷ್ಟು ಹೇಳಿಬಿಡಿರಲ್ಲ ?

೨ನೆ ವ್ಯಕ್ತಿ : ಕತೆ ! ಕತೆಯನ್ನ ನೀವು ಬೇಕಾಧಾಂಗ ಜೋಡಿಸಿಕೊಳ್ಳಿರಿ, ರಾಯರ .. ಆದರೆ ಒಂದು scene ಮಾತ್ರ ಇರಲೇಬೇಕು.

೩ನೆ ವ್ಯಕ್ತಿ : (ಬಾಯಿ ಚಪ್ಪರಿಸುವವನಂತೆ) ಹೌದು, ಅದು ಮಾತ್ರ ಇರಲೇಬೇಕು.

೧ನೆ ವ್ಯಕ್ತಿ : (ಇಲ್ಲದ ಕುತೂಹಲವನ್ನು ತೋರಿಸುತ್ತ) ಯಾವುದು ?

೨ನೆ ವ್ಯಕ್ತಿ : (೩ನೆ ವ್ಯಕ್ತಿಗೆ) ಯಾವ್ದಂತೀಯಾ... ?

೩ನೆ ವ್ಯಕ್ತಿ : (ಉತ್ಸಾಹದಿಂದ ತಲೆದೂಗುತ್ತ) ನನಗ್ಗೊತ್ತಾಯ್ತು, ನನಗ್ಗೊತ್ತಾಯ್ತು

ಬಿಡು, ಆ ಸೀನ್ ಇರಲೇಬೇಕು.

೧ನೆ ವ್ಯಕ್ತಿ : ಅದೇ ಯಾವ್ದು ಅನ್ನೋದನ್ನ ನನಗ ಹೇಳಿರಿ, ಅಂದೆ.

೨ನೆ ವ್ಯಕ್ತಿ : (ಈಗ ಎಲ್ಲವನ್ನೂ ದೃಷ್ಟಾಂತದಂತೆ ವಿವರಿಸಿ ಹೇಳುತ್ತಾನೆ. ಆದ್ದರಿಂದ ಆಯಾ ಮಾತಿಗೆ ಅನುಗುಣವಾಗಿ ಅವನ ಚಲನವಲನಗಳು) ಹೇಳ್ತೀನಿ ಕೇಳಿರಿ. (೩ನೆ ವ್ಯಕ್ತಿಗೆ) ಇಲ್ಲಿ ಬಾ – (ಅವನನ್ನೊಯ್ದು ರಂಗದ ಹಿಂತುದಿಯ ಮಧ್ಯಕ್ಕೆ ನಿಲ್ಲಿಸಿ ಬಂದು) ಅಲ್ಲಿಯವರೆಗೆ deep scene. ಅವ ರಾಜ; ಮುದುಕ ಇದ್ದಾನೆ; ಅವನ ಮಗ ಸುಂದರ ಯುವಕ; ರಾಣಿ, ಅಂದ್ರೆ ಅವನ ಮಲತಾಯಿ – ಯುವಕನ ಮಲತಾಯಿ — ಮಲಮಗನನ್ನ ಪ್ರೀತಿಸತಾಳೆ. ಆಕೆಗೆ ರಾಜ್ಯವೂ ಬೇಕು, ಪ್ರೇಮವೂ ಬೇಕು; (೩ನೆ ವ್ಯಕ್ತಿಗ) ನೀನು ಕಣ್ಮುಚ್ಚು (ಅವನು ಹಾಗೆ ಮಾಡುವನು) ರಾಜ – ಮುದುಕ – ಮಲಗಿದ್ದಾನೆ; ರಾಣಿ ಮೆಲ್ಲನೆ ಬರತಾಳೆ; ಗಂಡನನ್ನು ಕೊಲ್ಲಬೇಕು ಅನ್ನೋ ನಿರ್ಧಾರ; (ತಾನೂ ಹೆಜ್ಜೆಗಳನ್ನಿಡುತ್ತ "ರಾಜ"ನ ಕಡೆ ನಡೆಯುತ್ತ) – ಆದರೂ ಹೆಜ್ಜೆ ಮುಂದಿಟ್ಟ ಕೂಡಲೆ ಹೆದರಿಕೆ; ಆಗ ಯುವಕ ರಾಜಕುಮಾರನ ಸುಂದರ ಮುಖ ಕಣ್ಮುಂದೆ ನಿಲ್ಲೋದು; ಮತ್ತೆ ಧೈರ್ಯದಿಂದ ಮುಂಧೋಗ್ತಾಳೆ; ಗಂಡನನ್ನ ಕೊಂದರೆ ಪಾಪ, ಕೊಲ್ಲದಿದ್ರೆ ಪ್ರೇಮಕ್ಕೆ ಶಾಪ; ಉಭಯಸಂಕಟ; ಅಲ್ಲ, ಅಂತಾಳೆ, ಮತ್ತೊಂದ್ಹೆಜ್ಜೆ ಮುಂಧೋಗ್ತಾಳೆ; ಉಭಯಸಂಕಟ ಅಲ್ಲ, ಉಭಯಸುಖ ಅಂತಾಳೆ. ರಾಜ ಸತ್ತರೂ ತಾನೇ ರಾಜ್ಯಾಧಿಕಾರಕ್ಕೆ ಹಿರಿಯಳು, ರಾಜ ಸತ್ತ ಅನ್ನೋದಕೆ ಕುಮಾರನ ಕೂಡ ಪ್ರಣಯ ಸುಲಭ. ಉಭಯಸುಖ – ಅಂದವಳೇ – ಮುದುಕ ಗಂಡನನ್ನು ಕೊಂದೇಬಿಡ್ತೀನಿ ಅಂತ —

ಪೋ. ಕಾ. : ( ಒಮ್ಮೆಲೆ ಮನೆಯ ಹಿಂದಿನಿಂದ ಬಂದು ) ಎಲ್ಲಿ ? ಎಲ್ಲಿ ? ಸಿಕ್ಕಳು !

[ ಮಿಕ್ಕ ಮೂವ್ವರೂ ಚಕಿತರಾಗಿ ನಿಲ್ಲುವರು ]

ಪೋ. ಕಾ. : ( ಕಿಸೆಯೊಳಗಿನ ಪತ್ರಗಳನ್ನು ತೆಗೆದು, ಮಿಕ್ಕವರಿಗೆ ) ನಿಮ್ಗೂ ಬಂದಿದೆ ಏನು ಪತ್ರ ?

೨ನೆ ವ್ಯಕ್ತಿ : ಯಾವ ಪತ್ರ ?

ಪೋ. ಕಾ. : ಮುದುಕ-ಗಂಡನ್ನ ಕೊಂದಳು ಅಂದಿರಲ್ಲ...?

೨ನೆ ವ್ಯಕ್ತಿ : ( ನಕ್ಕು ) ಸಿಪಾಯ್‌ಸಾಹೇಬರ, ನಾಟಕದ ಕತೆ ಹೇಳ್ತಿದ್ದೆ. ನಾನು ನಾಟಕದ ಕಂಪನೀ ನಡೆಸ್ತಾ ಇದ್ದೀನಿ. ( ೩ನೆಯ ವ್ಯಕ್ತಿಯನ್ನು ತೋರಿಸಿ ) ಇವ ನಮ್ಮ manager. (೧ನೆ ವ್ಯಕ್ತಿಯನ್ನು ತೋರಿಸಿ) ಇವರು ನಾಟಕಾ ಬರೆಯುವವರು.

ಪೋ. ಕಾ. : (ಏನೊ ಹೊಳೆದಂತಾಗಿ ೧ನೆ ವ್ಯಕ್ತಿಯ ಹತ್ತಿರ ಬಂದು) ನೀವು ನಾಟಕಾ ಬರೀತೀರೇನು ?

೧ನೆ ವ್ಯಕ್ತಿ : ( ಸಿಡುಕಿನ ದನಿಯಲ್ಲಿ ) ಯಾಕ? ಇಷ್ಟು ದಿವಸ ಆಡಿತೋರಿಸ್ತೋದ-ಕಾಯ್ತು, ಈಗ ನಾಟಕಾ ಬರೆಯೋದಕ್ಕೇ ನಿಂ ಪರವಾನಿಗೆ ತಕ್ಕೋಬೇಕೇನು?

ಪೋ.ಕಾ. : (ಅವನ ಮಾತನ್ನು ಲಕ್ಷ್ಯಕ್ಕೆ ತಾರದೆ) ಈ ಮನೆ ನಿಮ್ದೇ ಏನು?

೩ನೆ ವ್ಯಕ್ತಿ : ( ಈಗ ಮುಂದೆ ಬಂದು ) ಅವರ್ದು. ನಾವು ಒಂದು ಹೊಸ ನಾಟಕದ ಬಗ್ಗೆ ಚರ್ಚಾ ಮಾಡ್ಲಿಕ್ಕೆ ಬಂದೀವಿ. ಈ ಮನೆ ಅವರ್ದು, ಸ್ವಂತದ್ದು.

೧ನೆ ವ್ಯಕ್ತಿ : (ಅಸಹ್ಯಸೂಚಕವಾಗಿ) ನಾಟಕಾ ಬರೆದು ಮನೆ ಹ್ಯಾಂಗ ಕಟ್ಟಿಸಿದರು ಅಂತ ತನಾಸಣಿ ನಡೆದಿದೆಯೋ ಏನೊ? ಮನೆ ಕಟ್ಟಿಸಿದ್ದು ನಮ್ಮಪ್ಪನ ಕಾಲ್ದೊಳಗ ಅಂತ — ಹೇಳಿರಿ.

ಪೋ.ಕಾ. : (ಅವರ ಮಾತನ್ನು ಲಕ್ಷ್ಯಕ್ಕೆ ತಾರದೆ) ಅಂದ್ರ ಇದೇ ಜಾಗ (ಎಂದು ಕೈಯಿಂದ ಪತ್ರವನ್ನು ಬಡೆಯುವನು)

೩ನೆ ವ್ಯಕ್ತಿ : (ಸಂದರ್ಭ ತಿಳಿಯದೆ) ಇದೇ ಜಾಗ? ಅಂದ್ರ...?

ಪೋ. ಕಾ. : (೩ನೆ ವ್ಯಕ್ತಿಯನ್ನು ದಿಟ್ಟಿಸುತ್ತ) ನಿಮಗೂ ಗೊತ್ತದ ಅಂಥಾಂಗ ಆಯ್ತು.

೩ನೆ ವ್ಯಕ್ತಿ : ಏನು ಗೊತ್ತಿರೋದು?

ಪೋ. ಕಾ.: (೧ನೆ ವ್ಯಕ್ತಿಗೆ) ಈ ಮನೀ ನಿಮ್ದು ಆಗಿದ್ದರೆ ಇಲ್ಲಿ ಯಾರಾದರೂ ಹೆಣ್ಮಕ್ಕಳು ಅಡ್ಡಾಡೋದು ನಿಮ್ಮ ಕಣ್ಣಿಗೆ ಬಿದ್ದಿದೆ ಏನು?

೧ನೆ ವ್ಯಕ್ತಿ: (ಸಿಟ್ಟನ್ನು ತಡೆಯುತ್ತ) ಮನೀ ಮುಂದೆ ಅಡ್ಡಾಡೋ ಹೆಣ್ಮಕ್ಕಳನ್ನ ನೋಡ್ತಾ ಕೂಡೋ ಸ್ವಭಾವ ನನ್ದಲ್ಲ.

ಪೋ. ಕಾ. : ಸಿಟ್ಟಿಗ್ಯಾಕ ಬರ್ತೀರಿ, ರಾಯರ? ನೀವು ನೋಡ್ತಾ ಕೂತಿರಿ ಅನ್ನೋದಿಲ್ಲ, ನೀವು ಕೂತಾಗ ನೋಡಿದಿರೇನು ಅಂತ —

೩ನೆ ವ್ಯಕ್ತಿ : ( ಸೌಮ್ಯವಾಗಿ ) ಸಿಪಾಯ್‌ಸಾಹೇಬರ, ಅವರು ನಾಟಕಕಾರ ಅಂತ ಹೇಳಿದೆನಲ್ಲ?

ಪೋ.ಕಾ.: ಅಂದ್ರ ಅವರಿಗೆ ಗಂಡ ಯಾವ್ದು, ಹೆಣ್ಣು ಯಾವ್ದು ತಿಳಿಯೋದಿಲ್ಲ ಅಂತೀರೇನು ?

೧ನೆ ವ್ಯಕ್ತಿ : (ಸಿಟ್ಟಿನಿಂದ) ಸಾಕ್ನಿಮ್ಮ ಮಾತು ! ಈವತ್ತು ಸಂಜೆಯಿಂದ ನೋಡ್ತೀನಿ, ನೀವಿಲ್ಲೇ ಅಡ್ಡಾಡ್ತಾ ಇದ್ದೀರಿ !

ಪೋ. ಕಾ. : ಎಲ್ಲಿ duty ಅಲ್ಲಿ ಇರೋವ್ರು ನಾವು.

೧ನೆ ವ್ಯಕ್ತಿ : (ಮೇಲಿನಂತೆಯೆ) ಈಗ ಸುಮ್ಮಸುಮ್ನೆ ಬಂದು ನಮ್ಮ ಮಾತುಕತೆಗೆ ಅಡ್ಡಿ ಮಾಡೋದು ನಿಮ್ಮ duty ಏನು ?

ಪೋ. ಕಾ.:(೨ನೆ, ೩ನೆ ವ್ಯಕ್ತಿಗಳನ್ನುದ್ದೇಶಿಸಿ) ಇಲ್ಲಿ ನೋಡಿರಿ, ನಾನು ಹೇಳಿಕೇಳಿ dutyಯ ಮ್ಯಾಲಿದ್ದ police constable. ನನ್ನ dutyಗೆ ಅಡ್ಡಿ ಮಾಡಿದರೆ —

೨ನೆ,೩ನೆ ವ್ಯಕ್ತಿ : (ಕೂಡಿಯೆ) ಛೇ ! ಛೇ ! ಅಂಥಾ ವಿಚಾರ ನಮಗಿಲ್ಲ.

ಪೋ. ಕಾ. : (ಅಧಿಕಾರದ ದನಿಯಲ್ಲಿ) ಇಲ್ಲ ಅಂತ, ಅಂತೀರಿ; ಇದೊಂದ್ಸಲ ನಿಮ್ಮ

ಪ್ಪಾಲೆ ವಿಶ್ವಾಸ ಇಟ್ಟೀನಿ. ಆದರೂ ನನ್ನಿಂದ ಏನೊ ಮುಚ್ಚಿಡೋ ಯತ್ನ ನಡೆದ್ಹಾಂಗ ಕಾಣ್ತದ; ಆದರೆ ಹೇಳಿಟ್ಟಿರ್ತೀನಿ, ಯಾಕಂದ್ರ ನನಗೂ ಪತ್ರ ಬಂದದ —(ಪತ್ರ ಹಿಡಿದು ತೋರಿಸಿ ಮತ್ತೆ ಕಿಸೆಯಲ್ಲಿ ಸೇರಿಸಿ) ಬಂದದ, ಮುಚ್ಚಿಟ್ಟರ ಒಳ್ಳೇದಾಗಲಿಕ್ಕಿಲ್ಲ ಅಂತೀನಿ. (ಬಂದು ದರ್ಪದ ಹೆಜ್ಜೆಗಳಿಂದ ಹೋಗುವನು)

[೨ನೆ, ೩ನೆ ವ್ಯಕ್ತಿ ಒಬ್ಬರನ್ನೊಬ್ಬರು ನೋಡುವರು]

೨ನೆ ವ್ಯಕ್ತಿ: (೧ನೆ ವ್ಯಕ್ತಿಗೆ) ಬಯಲಿನೊಳಗ ಇದನ್ನ ನಡೆಸಿದ್ದು ನಮ್ದೇ ತಪ್ಪಾಯ್ತು; ನಿಮಗ ತೊಂದರೆ ಕೊಟ್ಹಾಂಗ ಆಯ್ತು.

೧ನೆ ವ್ಯಕ್ತಿ: ತೊಂದರೆ ಅಲ್ಲ. ನಮಗ ಯಾವ್ದೂ ತೊಂದರೆ ಆಗ್ಬಾರ್ದು ಅಂತ ನೋಡಿಕೊಳ್ಳೋದೇ ಈ ಪೋಲೀಸರ ಕೆಲಸ ಅನ್ನೋವಾಗ ಇವರಿಂದಲೆ ನಮಗ ತೊಂದರೆ ಆಗಬೇಕೆಂದರೆ...? ಅದಕ್ಕ ನನಗ ಸಿಟ್ಟು ಬಂತು.

೨ನೆ ವ್ಯಕ್ತಿ: ಹೋಗ್ಲಿ ಬಿಡ್ರಿ. ನಾಳೆ ಭೆಟ್ಟಿಯಾದಾಗ ನನ್ನ ವಿಚಾರ ಹೇಳ್ತೀನಿ.

೩ನೆ ವ್ಯಕ್ತಿ: ಅಲ್ಲ, ಬಂದೀವಿ; ಅನಾಯಾಸ ಇಲ್ಲಿಯೆ ಇದ್ದೀವಿ; ನೀವೂ form ಇನಾಗ ಇದ್ದೀರಿ, ಈ ಸೀನ್ ಒಂದನ್ನ ಈಗ ಹೇಳಿ ಮುಗಿಸಿದರೆ—

೨ನೆ ವ್ಯಕ್ತಿ: ಮತ್ತೆ ಇಲ್ಲಿಯೇ ಹೇಳೋದೆ ?

೩ನೆ ವ್ಯಕ್ತಿ: ಇಲ್ಲಿ ಯಾಕ ? ಒಳಗ ಹೋಗೋಣ.

೨ನೆ ವ್ಯಕ್ತಿ: ಛೆ ! ಛೆ ! ಮತ್ತೆ ಅವರಿಗೆ ತ್ರಾಸ ಕೊಡೋದೆ?

೧ನೆ ವ್ಯಕ್ತಿ; ಹಾಂಗ ಕೇಳಿದರ ನನ್ಗ ಯಾವ ತ್ರಾಸ ....

೨ನೆ ವ್ಯಕ್ತಿ: ಅಲ್ಲ, ಮತ್ತ ನಮ್ಮನ್ನ ಕರಕೊಂಡ್ಹೋಗಿ, ದೀಪ ಹಚ್ಚಿ...

೧ನೆ ವ್ಯಕ್ತಿ; ಒಳಗಿನ ಕೋಣೇವಳಗ ದೀಪ ಇದ್ದೇ ಇದೆ. ಈ ಹೊರಗಿನ ಎರಡು ಕೋಣೆಗಳೊಳಗೆ ನಾನು ದೀಪ ಎಂದೂ ಹಚ್ಚೋದೇ ಇಲ್ಲ...

೨ನೆ ವ್ಯಕ್ತಿ: ಹಾಂಗಂದ್ರ ನಿಮ್ಗೇನೂ ತ್ರಾಸ ಆಗೋದಿಲ್ಲ ಅಂತೀರಾ ?

೩ನೆ ವ್ಯಕ್ತಿ; (ಈಗಾಗಲೆ ಬಾಗಿಲ ಕಡೆ ಹೆಜ್ಜೆಗಳನ್ನಿಡುತ್ತ) ನಾವೂ ಸ್ವಲ್ಪದ್ರಾಗ ಮುಗಿಸಿಬಿಡೋಣ. ಯಾರಿಗ್ಗೊತ್ತು ? ಅವರ ಮನಸ್ಸಿಗೆ ಬಂದ್ರೆ ಕೂತು ಮೆಟ್ಟಿಗೆ ಬರೆದು ಕೊಟ್ಟರೂ ಕೊಟ್ಟರೆ ! ಹ ಹ !

೨ನೆ ವ್ಯಕ್ತಿ: ಅವರಿಗೆ ಅವಸರ ಮಾಡೋ ಮನಸ್ಸಿಲ್ಲ ನನಗ.

೩ನೆ ವ್ಯಕ್ತಿ: ನಾವ್ಯಾಕ ಮಾಡ್ಬೇಕು ? ಮನಸ್ಸಿಗೆ ಬಂದ್ರೆ ಅವರ ಮನಸ್ಸೇ ಅವಸರ ಮಾಡ್ತದೆ. ಹೌದಲ್ಲ, ರಾಯರ ? ಆಂ ? ಹ ಹ ಹ !

೧ನೆ ವ್ಯಕ್ತಿ; ಏನೇ ಆಗಲಿ, ಇನ್ನೊಮ್ಮೆ ಆ ಹಾಳು ಪೋಲೀಸನ ಮುಖ ನೋಡೋದಾದ್ರೂ ತಪ್ಪೀತು, ನಡೀರಿ.

[ಮೂವ್ವರೂ ಬಾಗಿಲನ್ನು ತೆರೆದು ಒಳಗೆ ಹೋಗುವರು. ೩ನೆ ವ್ಯಕ್ತಿ ಕೊನೆಗೆ ಒಳಗೆ ಹೋಗಿ ಬಾಗಿಲನ್ನು ಮುಂದೆ ಮಾಡಿಕೊಂಡು ಹೋಗುವನು.]

[ ಕೆಲಹೊತ್ತು ನಿಶ್ಶಬ್ದತೆ ಒಂದೆರಡು ನಿಮಿಷಗಳ ತರುವಾಯ ಬಲಬದಿಯ ಹಿಂತುದಿಯಿಂದ ಡ್ರೈವರ್ ಮತ್ತು ಯುವತಿ ಬರುವರು. ಯುವತಿಯ ಮುಖದಲ್ಲಿ ಭಾರೀ ಅಸಮಾಧಾನದ ಕಳೆ ಇದೆ, ತುಸು ಸಿಟ್ಟೂ ಇದೆ. ಇವರಿಬ್ಬರೂ ಹೆಚ್ಚಾಗಿ ಪಿಸುಮಾತಿನಲ್ಲಿಯೇ ಸಂಭಾಷಣೆಯನ್ನು ನಡೆಸುತ್ತಾರೆ ]

ಯುವತಿ : (ಕೆಣಕುವವಳಂತೆ) ಅಂತೂ ನಿನಗ ಧೈರ್ಯಾ ಇಲ್ಲ ಅನ್ನು.

ಡ್ರೈವರ್ ; ಧೈರ್ಯ ? ಯಾವುದಕ್ಕ ?

ಯುವತಿ : ಯಾವುದಕ್ಕಂದ್ರ ?

ಡ್ರೈವರ್ : ಅದೇ ಕೇಳ್ತೀನಿ, ಯಾವುದಕ್ಕೆ — ಅಂತ.

ಯುವತಿ : ಅದನ್ನ ನನ್ನ ಬಾಯಿಯಿಂದ್ಲೇ ಆಡಿಸ್ಬೇಕು ಅಂತ ಹಟ ಏನೊ! ಯಾವುದಕ್ಕೆ ಅಂತ ! ಎಷ್ಟು ಸಲ ಹೇಳಿಲ್ಲ ನಾನು ! ನನ್ಗಂತೂ ಈ ಕಳ್ಳಜೀವನ ಸಾಕಾಗಿ ಹೋಗೇದ.

ಡ್ರೈವರ್ : ಕಳ್ಳತನ ಎಲ್ಲಿಂದ ಬಂತು ?

ಯುವತಿ : ಕಳ್ಳತನ ಅಲ್ಲೇನೊ ಅದು ? ಎಲ್ಲಿ ಆ ಮುದುಕ ನೋಡ್ತಾನೊ, ಎಲ್ಲಿ ಯಾರಿಗೆ ನಮ್ಮಾತು ಕೇಳಿಸ್ತದೊ ಅಂತ —

ಡ್ರೈವರ್ : (ನಡುವೆಯೆ) ಅಂದ್ರೇನು ? ಅವ ನಿನ್ನ ಮದುವೇ ಗಂಡ ಅಂತ ಅನ್ನಿಸಿ ಕೊಳ್ಳುವಾಗ —

ಯುವತಿ : (ಸಿಟ್ಟಿನಿಂದ ಕಾಲು ಬಡೆದು) ಗಂಡ ! ಗಂಡ ! ಯಾರಿಗೆ ಬೇಕಾಗೇದ ?

ಡ್ರೈವರ್ : ಅವ ಬೇಕಾಗ್ಯಾನ ಅಂತ ನಾ ಆದ್ರೂ ಎಲ್ಲಿ ಹೇಳ್ತೀನಿ ? ಇಲ್ಲಿ ನೋಡು: ಅವ ನಿನ್ನ ಗಂಡ, ಅಂದಮ್ಯಾಲೆ ನೀ ಅವನ ಹೆಂಡತಿ —

ಯುವತಿ : ( ಅಳುವುದು ಹತ್ತಿರದಲ್ಲಿದೆ ) ಚುಚ್ಚು, ಚುಚ್ಚು ನಿನ್ನ ಮಾತಿನ ವಿಷಬಾಣ ವನ್ನ —

ಡ್ರೈವರ್ : (ಸಂತಯಿಸುವವನಂತೆ ಭುಜವನ್ನು ತಟ್ಟಿ) ಎಂಥಾ ಹುಚ್ಚಿ ಇದ್ದೀ ನೀನು ! ನಾ ಯಾಕ ಚುಚ್ಚಿ ಮಾತಾಡಲಿ ನಿನಗೆ ? ನಿನಗ್ಗೊತ್ತದಲ್ಲ, ನಿನ್ನ ಮುದುಕ ಗಂಡ ಎಂಥಾ ಜಿಪುಣ ಅಂತ ? ಈಗ ನನಗ ೩-೪ ಜನ ದೊಡ್ಡ ಹುದ್ದೇ ದೊಳಗಿದ್ದವರು ಕರೆದರು, " ಹೆಚ್ಚು ಪಗಾರ ಕೊಡ್ತೀವಿ, ನಮ್ಮ ಕಡೆ ಡ್ರೈವರ್ ಅಂತ ಬಾ " ಅಂತ. ನಾನು ಹೋಗೀನೇನು ? ಹೋಗ್ತೀನೇನು ? ಯಾಕ ಹೋಗೋದಿಲ್ಲ ಅನ್ನೋದು ಗೊತ್ತಿಲ್ಲ ನಿನಗೆ ?

ಯುವತಿ : ಅದನ್ನೆ ಹೇಳ್ತೀನಿ ನಾನು. ನಮ್ಮಿಬ್ಬರ್ದ್ದೂ ಪರಸ್ಪರ ಇಷ್ಟು ಪ್ರೇಮ ಇರೋವಾಗ —

ಡ್ರೈವರ್ : ( ನಡುವೆಯೆ ) ಈಗೇನು ಅಡ್ಡಿ ಬಂದಿದೆ ಅದಕ್ಕೆ ?

ಯುವತಿ : ಇನ್ನೂ ಏನ್ಬರ್ಬೇಕು ? ಇದೇ ಈಗ ನೋಡಿದಿಯಲ್ಲ ? ಒಂದೆರಡು ನಿಮಿಷ ನಾವಿಬ್ಬರೇ ಕೂತಿದ್ದೆವೊ ಇಲ್ಲವೊ, ಅಷ್ಟರೊಳಗ ಹಾರ್ನ್ ಬಾರಿಸಿದ.

ಯಾಕ ? ಕೇಳಿದೆಯಲ್ಲ ? ನಾವಿಬ್ರೂ ಕೈಹಿಡಿದು ತನ್ನ ನಾಲ್ಕು ಹೆಜ್ಜೆ ಆಡ್ಡಾಡಿಸಬೇಕಂತೆ! ತನಗರೆ ನಿಲ್ಲೋ ತ್ರಾಣ ಇಲ್ಲ! ಬಗಲೊಳಗೆ ಕೈಹಾಕಿ ಎಬ್ಬಿಸಿದರ ಎಲ್ಲಿ ಕೈಗೆ ಕೈನೇ ಕಿತ್ತಿ ಬರ್‍ತದೊ ಅನ್ನಿಸ್ತದ, ಆ ಪರಿ ತನ್ನ ಅವಯವ ಲಿಕಿಲಿಕಿ ಆಗ್ಯಾವ. ಇಂಥಾವ ಅಡ್ಡ್ಯಾಡ್ತಾನಂತ! ಅದೆಲ್ಲಾ ಸುಳ್ಳು! ನವ್ಮಿಬ್ಬರ ಮ್ಯಾಲೆ ಸಂಶಯ ಅವನ್ದು.

ಡ್ರೈವರ್ : (ನಡುವೆಯೆ) ಇಟ್ಟುಕೊಳ್ಳವಲ್ಲನ್ಯಾಕ ಸಂಶಯ. ಆ ಸಂಶಯ ದಕ್ಕಿಸಿಕೊಳ್ಳೋದಾಗದೆ ಸತ್ತರೂ ಸಾಯಬಹುದು.

ಯುವತಿ : ಅವನಷ್ಟಕ್ಕೆ ಅವನನ್ನ ಬಿಟ್ಟರೆ ಅವ ಸಾಯೋದೇ ಇಲ್ಲ.

ಡ್ರೈವರ್ : (ಮುಗುಳ್ನಗೆಯಿಂದ) ಸಾಯೋದೇ ಇಲ್ಲಾ ಅಂದ್ರ ? ಇರ್‍ತಾನ ಎಷ್ಟು ದಿವಸ ?

ಯುವತಿ : (ನಿರಾಶೆಯಿಂದ) ನಾವಿಬ್ರೂ ಮುದುಕರಾದ ಮ್ಯಾಲೆ ಅವ ಇದ್ದರೇನು ? ಸತ್ತರೇನು ?

ಡ್ರೈವರ್ : ಅವ ಜೀವದಿಂದಿದ್ದಷ್ಟು ದಿನ ನಮಗೇ ಅನುಕೂಲ.

ಯುವತಿ : (ಬೆರಗಾದಂತೆ) ಏನಂದಿ ? ಅವ ಜೀವದಿಂದಿದ್ದಷ್ಟು ದಿನ್ —

ಡ್ರೈವರ್ : (ತಲೆ ತೂಗುತ್ತ) ನಮಗೇ ಅನುಕೂಲ ಅಂದೆ.

ಯುವತಿ : (ಅವನನ್ನು ಒಂದು ನಿಮಿಷ ದಿಟ್ಟಿಸಿ, ತಿರಸ್ಕಾರದ ಉಸಿರೆಳೆದು) ನನಗೊತ್ತೇ ಇತ್ತು. ಆದರೂ ಇಂಥಾ ಪುಕ್ಕ ನೀನಲ್ಲ ಅನ್ನಿಸಿತ್ತು.

ಡ್ರೈವರ್ : ಅಂಥಾ ಮುದುಕನ್ನ ಹೊಡೆಯೋದಕ ಶೂರ ಆಗಿರಬೇಕು ಅಂತೀಯೇನು ?

ಯುವತಿ : ಅದೇ ನೋಡೋಣ ಅಂದೆ, ನೀ ಶೂರನೊ ? ಪುಕ್ಕನೊ ?

ಡ್ರೈವರ್: ಇದು ಬುದ್ಧಿವಂತಿಕೇ ವಿಷಯ ಅದ. ಶೂರನೂ ಬ್ಯಾಡ, ಪುಕ್ಕನೂ ಬ್ಯಾಡ.

ಯುವತಿ : (ತಡೆಯದೆ) ಸುಟ್ಟಿತು ನಿನ್ನ ಬುದ್ಧಿವಂತಿಕೆ ! ಸಾಯಲಿಕ್ಯಾದ ಮುದುಕನ ಕೂಡ ಸಂಸಾರ ಅಂದ್ರ ಏನ್ ಬುದ್ಧಿವಂತಿಕೇನೊ !

ಡ್ರೈವರ್ : (ಮುಗುಳ್ನಗೆಯಿಂದ) ನಿನ್ನ ಯಾರು ಕಟ್ಟಿ ಹಾಕ್ಯಾರ ಅಂಥಾ ಸಂಸಾರದೊಳಗ ?

ಯುವತಿ : ಅಂದ್ರ್ಯಾಕ ನೀ ಒಪ್ಪೋದಿಲ್ಲ ?

ಡ್ರೈವರ್ : ಯಾವುದಕ್ಕ ಒಪ್ಪೋದಿಲ್ಲ ?

ಯುವತಿ : (ಸಿಟ್ಟಿನಿಂದ) ಮತ್ತೆ ನೀನು ಹಾಂಗೇ ವಾದ ಪ್ರಾರಂಭ ಮಾಡಿದೆ !

ಡ್ರೈವರ್ : ಇಲ್ಲಿ ನೋಡು, ನನ್ನ ಮಾತು ಕೇಳು. ನನಗೂ ನಿನಗೂ ಏನ್ ಕಡಿಮೆ ಬಿದ್ದದ? ಯಾರು ಅಡ್ಡಿ ಮಾಡ್ತಾರ? ಗಂಡ ಮುದುಕಾದ್ರೂ ಶ್ರೀಮಂತ—

ಯುವತಿ ; ಮುಂದೆ ಕೂಡ ಆ ಶ್ರೀಮಂತಿಕೆ ನನ್ನ ಹಕ್ಕಿನ್ದೆ. ನಿನಗ ನಾನು ಬೇಕೊ? ಏನ್ ಶ್ರೀಮಂತಿಕೆ ಕಳೆದೀತು ಅಂತ ಹೆದರಿಕೆಯೊ ?

ಡ್ರೈವರ್ : ನೀನೂ ಬೇಕು, ನಿನ್ನ ಗಂಡನ ಶ್ರೀಮಂತಿಕೇನೂ ಬೇಕು. ಎರಡೂ ಇದ್ದರೆ ಹೆಚ್ಚು ಒಳ್ಳೆಯದೆ ಅಲ್ಲ ?

ಯುವತಿ : (ಹಟದ ದನಿಯಲ್ಲಿ) ಅಲ್ಲ ! ಅಲ್ಲ ! ಅಲ್ಲ ! ನನಗೆ ಸುಖದ ಜೀವನ ಬೇಕು, ಪ್ರೇಮದ ಸಂಸಾರ ಬೇಕು, ಬಡತನ ಇದ್ದರೂ ಅಡ್ಡಿ ಇಲ್ಲ —

ಡ್ರೈವರ್ ; (ಸಂತಯಿಸುವವನಂತೆ) ನನ್ನ ಮಾತು ಕೇಳು —

ಯುವತಿ : (ನಡುವೆಯೆ) ಕೇಳೋದಿಲ್ಲ ! ಇಲ್ಲ ! ಇಲ್ಲ ! ನನಗಿನ್ನು ಈ ಕಳ್ಳಜೀವನ ತಡೆಯೋದೆ ಇಲ್ಲ. ನಿನ್ನ ಕಡಿಂದ ಆಗದಿದ್ದರೆ ನಾನು — (ಎಂದು ಬಲಬದಿಗೆ ಹೊರಡುವಾಗ —)

ಡ್ರೈವರ್ : (ಅವಳನ್ನು ತಡೆದು) ನೀನೇನ್ಮಾಡ್ತೀ ?

ಯುವತಿ : (ಕೈಬಿಡಿಸಿಕೊಳ್ಳಲು ಯತ್ನಿಸುತ್ತ, ತಿರಸ್ಕಾರದಿಂದ) ನಿನ್ನಂತಹಾ ಗಂಡಸಿನ ಕೈಯಿಂದ ಆಗದ್ದನ್ನ ನಾನ್ಮಾಡಿ ತೋರಿಸ್ತೀನಿ. ಅದನ್ನ ತಡೆದುಕೊಳ್ಳೋ ಧೈರ್ಯ ಆದರೂ ನಿನಗೆ ಅದ ಏನೊ ಇಲ್ಲೊ ?

ಡ್ರೈವರ್ : ಶ್ ! ತಡೆ ! ಇಲ್ಲದ ಗದ್ದಲಾ ಮಾಡಬ್ಯಾಡ. ಮೊದಲೇ ಜನ ನಮ್ಮ ಮ್ಯಾಲೆ ಸಂಶಯ ಇಟ್ಟಾರ —

ಯುವತಿ : ಯಾರ ಮ್ಯಾಲೆ ?

ಡ್ರೈವರ್ : ನಮ್ಮಿಬ್ಬರ ಮ್ಯಾಲೂ.

ಯುವತಿ : ಅದಕ್ಕೇ ಹೇಳ್ತೀನಿ ನಾನು, ಈ ಕಳ್ಳಜೀವನ ಸಾಕು ಅಂತ.

ಡ್ರೈವರ್ : ಆ ವಿಷಯ ಹೇಳಲಿಲ್ಲ ನಾನು.

ಯುವತಿ : (ತಿಳಿಯದೆ) ಅಂದ್ರೆ ?

ಡ್ರೈವರ್ : ಮುದುಕನ ವಿಷಯ ಹೇಳಿದೆ. ನಾವಿಬ್ಬರೂ ಕೂಡಿ ಮುದುಕನ್ನ ಯಾವ ನೆವದಿಂದಾದ್ರೂ ಕೊಲ್ತೀವಿ ಅಂತ —

ಯುವತಿ : ನೋಡಿದಿ ಇಲ್ಲೊ ? ಹೊರಗಿನವರಿಗೆ ಕೂಡ ಹಾಂಗನ್ನಿಸ್ತದ, ನಿನಗ ಇನ್ನೂ —

ಡ್ರೈವರ್ : (ನಡುವೆಯೆ) ಎಲೆ ! ಹುಚ್ಚಿ ಇದ್ದೀ ಏನ್ನೀನು ? ಜನಕ್ಕೆ ಹಾಂಗ ನಮ್ಮ ಮ್ಯಾಲೆ ಸಂಶಯ ಅದ, ಆ ರೀತಿ ಪೋಲೀಸರಿಗೆ ಅನಾಮಧೇಯ ಪತ್ರ ಬರೆದಾರಂತ—

ಯುವತಿ : (ರಹಸ್ಯಸೂಚಕ ಮುಗುಳ್ನಗೆಯಿಂದ) ಜನರೇ ಅಂಥಾ ಪತ್ರ ಬರೆದಾರ ಅಂತ ನೀ ಹ್ಯಾಂಗ ಹೇಳ್ತೀ ?

ಡ್ರೈವರ್ : ಅಂದ್ರ ನಾನು ಬರೀತೀನೆ ?

ಯುವತಿ : ಯಾಕ ಬರೀಬಾರ್ದು ?

ಡ್ರೈವರ್ : ಇಲ್ಲದ್ದೊಂದು ಮಾತಾಡಬೇಡ. ನಾನೂ ನೀನೂ ಯಾಕ ಬರೀಲಿಕ್ಕೆ ಹೋಗ್ತೀವಿ ಅಂಥಾ ಪತ್ರ ?

ಯುವತಿ : ನಾನೇ ಬರೆದಿಲ್ಲ ಅಂತ ನೀ ಹ್ಯಾಂಗ ಹೇಳ್ತೀ ?

ಡ್ರೈವರ್ : (ಬೆಪ್ಪಾಗಿ) ಏನು ? ನೀನು ? ನಿನ್ನ ಮ್ಯಾಲೇ ಸಂಶಯ ತಕ್ಕೊಂಡು —

ಯುವತಿ : (ನಡುವೆಯೆ) ನನ್ನ ಮ್ಯಾಲೆ ಯಾಕ ಸಂಶಯ ತಕ್ಕೊಳ್ಳಲಿ ?

ಡ್ರೈವರ್ : ಅಂದ್ರೇನು ? ನನ್ನ ಮ್ಯಾಲೆಯೆ ?

ಯುವತಿ : (ಕೆಣಕುವವಳಂತೆ) ಯಾಕಾಗ್ಬಾರ್ದು ?

ಡ್ರೈವರ್ : ಓ ! ಹೀಗೊ ! (ಬಲಬದಿಗೆ ಹೊರಡುವನು)

ಯುವತಿ : (ಗಾಬರಿಯಿಂದ ಅವನನ್ನು ತಡೆದು) ಎಲ್ಲಿಗೆ ? ಎಲ್ಲಿಗ್ಹೊರಟೆ ?

ಡ್ರೈವರ್ : ನನಗ ಸಂಬಳ ಕೊಡೋ ಧಣೀ ಹತ್ತಿರ. (ಬಲಬದಿಗೆ ಹೋಗುವನು)

[ಯುವತಿಯು ಅವನನ್ನು ಹಿಂಬಾಲಿಸಹೊರಟು ತಟ್ಟನೆ ತಡೆಯುವಳು. ಒತ್ತಿ ಬರುವ ಕಣ್ಣೀರನ್ನು ತಡೆಯಲು ತುಟಿ ಕಚ್ಚಿಕೊಂಡು ನಿಲ್ಲುವಳು. ಅಷ್ಟರಲ್ಲಿ ಮನೆಯ ಹಿಂದಿನಿಂದ ಯಾರೋ ಬರುವ ಸದ್ದನ್ನು ಕೇಳಿದಂತೆ ಮಾಡಿ, ಕಕ್ಕಾವಿಕ್ಕಿಯಾಗಿ, ಕೊನೆಗೆ ಬಲ ಬದಿಯ ಮುಂತುದಿಯಿಂದ ಹೋಗಿ ಮರೆಯಾಗುವಳು ]

[ಒಂದು ನಿಮಿಷದಲ್ಲಿ ಮನೆಯ ಹಿಂದಿನಿಂದ ನಾಗರಕ, ಅವನ ಹಿಂದಿನಿಂದ ಪೋಲೀಸ್ ಕಾನ್‌ಸ್ಟೇಬಲ್ ಬರುವರು.]

ನಾಗರಕ : ನೋಡ್ರಿ, ಕಾನ್‌ಸ್ಟೇಬಲ್, ಇದೇ ಜಾಗ.

ಪೋ. ಕಾ. : ಜಾಗ ಯಾವ್ದೇ ಇರಲಿ, ನೀನು ಯಾರಪ ? ಈವೊತ್ತು ಸಂಜೆಗೆ ಬಂದಿ, ಏನೇನೋ ಹೇಳಿದಿ —

ನಾಗರಕ : (ನಡುವೆಯೆ) ನಾನು ಯಾರು ಅಂದ್ರ ? ನಾನೊಬ್ಬ ನಾಗರಕ, ಸ್ವತಂತ್ರ ಭಾರತದ ನಾಗರಕ; ಎಲ್ಲರೂ ಸರಿಸಮಾನರು ಅನ್ನೋವಾಗ ನಾನು ಯಾರು ಇದ್ದರೇನು ?

ಪೋ. ಕಾ. : ನಾನು ಕೇಳಿದ ಪ್ರಶ್ನೆಕ್ಕ ಉತ್ತರಾ ಕೊಡೋದ್ಬಿಟ್ಟು ನನಗೇ ಲೆಕ್ಚರ್ ಬಿಗೀತೆಲ್ಲಾ ! ಅಲ್ಲ, ನೀನು ಯಾರು ಅಂದ್ರ, ಇಂಥಾ ಕೆಲಸಾನೇ ಮಾಡೋ ಮನುಷ್ಯ ಕಾಣ್ತೀ, ಅದಕ್ಕೇ ಕೇಳಿದೆ.

ನಾಗರಕ : (ಅಪಮಾನಿತನಾದವನಂತೆ) ಇಂಥಾ ಕೆಲಸಾ ಅಂದ್ರ ?

ಪೋ. ಕಾ. : ಮತ್ತಿನ್ನೆಂಥಾ ಕೆಲಸ ? ಈವೊತ್ತು ಸಂಜೆಗೆ ನೀ ಮಾಡಿದ ಕೆಲಸ ಎಂಥಾದ್ದಂತ ತಿಳಿದೀದಿ ?

ನಾಗರಕ : ( ಮೇಲಿನಂತೆ ) ಎಂಥಾದ್ದು ?

ಪೋ. ಕಾ. : ಯಾರೋ ಯಾರ ಹೆಂಡತೀನ್ನೊ ಓಡಿಸಿಕೊಂಡ್ಹೋದರು ಅಂದಿ; ಗಂಡ ಸಿಟ್ಟಿಗೆ ಬಂದು ಹೆಂಡತೀನ್ನ ಮಿಂಡನ್ನ ಇಬ್ಬರ್ನೂ ಕೊಂದ ಅಂದಿ; ಹೆಣ ತೋರಿಸ್ತೀನಿ ಬರ್ರಿ ಅಂದಿ.

ನಾಗರಕ : ಹೌದು, ನನಗೇನ್ಗೊತ್ತು, ಖೂನಿ ಮಾಡಿದವ ಹೆಣ ಮುಚ್ಚಿಡ್ತಾನ ಅಂತ?

ಪೋ. ಕಾ. : ಖೂನಿ ಮಾಡಿದವನೇ ಸಿಗವಲ್ಲ.

ನಾಗರಕ : ಹೆಣ ಸಿಕ್ಕವು ಏನು ?

ಪೋ. ಕಾ. : ಒಂದು ಹೆಣ ಸಿಕ್ಕಿತು, ಅದು ಜೀವಂತ ಇತ್ತು —

ನಾಗರಕ : ಏನು ? ಏನಿದು ? ಖೂನೀ ವಿಷಯ ತಮಾಷೆ !

ಪೋ.ಕಾ.: ಹೋಗೋ! ಹುಚ್ಗೊಟ್ಟಿ ! ಖೂನಿ ಅಂತ ಖೂನಿ ! ಹೆಂಡತಿ ಹೋಗ್ಯಾಳ ತವರ್ಮನೀಗೆ ! ಆಕೇನ್ನ ಬಿಟ್ಟು ಇರಲಾರದ್ದಕ್ಕ ಗಂಡ ಹೊಂಟಾನ ಕರ್ಕೊಂಡು ಬರಲಿಕ್ಕೆ. ಅಷ್ಟರಾಗ ಖೂನಿ ಸುದ್ದಿ ಹಬ್ಬಿಸಿದರು, ಪಾಪ ! ಆ ಗಂಡ ಗಾಬರಿ ಆಗಿ ಪರಾರಿ, ಮಟಾಮಾಯ ! ಅದಕ್ಕೇಳ್ತಿನಿ, ಈ ಸುದ್ದೀನೂ ಅಂಥಾದ್ದೇನು ಅಂತ ?

ನಾಗರಕ : ಇದು ಸುದ್ದಿ ಅಲ್ಲ, constable. ಇಲ್ಲಿ ನೋಡಿರಿ, ಪತ್ರ ಬಂದದೆ.

ಪೋ.ಕಾ. : ನೋಡಿದೆ. ನನಗೂ ಬಂದದ. ಅದಕೂ ಸಹಿ ಇಲ್ಲ, ನಿನ್ನದಕೂ ಸಹಿ ಇಲ್ಲ. ಎರಡನ್ನೂ ಒಬ್ಬನೇ ಯಾಕೆ ಬರದಿರಬಾರದು ?

ನಾಗರಕ : ಓಹೊಹೊ ! point duty policeರೂ ಒಳ್ಳೇ detective ಆಗ್ಯಾರ !

ಪೋ.ಕಾ. : ಅದಿರಲಿ, ನನ್ನ ಪ್ರಶ್ನೆಕ್ಕ ಉತ್ತರ ಕೊಡು.

ನಾಗರಕ ; ಯಾವ ಪ್ರಶ್ನೆಕ್ಕ ?

ಪೋ.ಕಾ. : ಈ ಪತ್ರದಾಗ ಬರೆದಿದೆ ಅಲ್ಲ, ಈ ಮುದುಕನ್ನ ಅವನ ಹರೇದ ಹೆಂಡತಿ ಈ ಜಾಗಾದಾಗ ಕೊಲ್ತಾಳೆ ಅಂತ ನಿನಗ ಹ್ಯಾಂಗ ಗೊತ್ತಾಯ್ತು ?

ನಾಗರಕ : ಈ ಪತ್ರದಿಂದ.

ಪೋ.ಕಾ. : ಪತ್ರ ಬರೆದದ್ದು ಮುಂಚೆ, ಖೂನಿ ಆಗೋದು ಈಗ —

ನಾಗರಕ : ಯಾರಿಗ್ಗೊತ್ತು ? ಖೂನಿ ಮುಂಚೆಯೆ ಆಗಿರಬೇಕು, ಆ ಹೆಣಾನೂ ಪತ್ತೆ ಆಗದೆ ಕೊಳೀತಿರಬೇಕು.

ಪೋ.ಕಾ. : ಅಂದ್ರೇನು ಇದು ಹೆಣಗಳ ಊರು ಅಂತೀ ಏನು ?

ನಾಗರಕ : ಇಂಥಾ ಪೋಲೀಸರಿದ್ದರ ಎಷ್ಟು ಹೆಣ ಬೀಳ್ತಾವೊ ಯಾರಿಗ್ಗೊತ್ತು ?

ಪೋ. ಕಾ. : ಇಕ ! ನನಗ್ಗೊತ್ತದ, ನಾ ಹೇಳ್ತೀನಿ ನಡೆ. ಇಂಥಾ ಪತ್ರ ಬರೆಯೋ ಕೆಲಸ ಬಿಟ್ಬಿಡು, ಇಂದಿಲ್ಲ ನಾಳೆ ಪೇಚಿನೊಳಗ ಸಿಕ್ಕೀ !

ನಾಗರಕ : ಆಯ್ತು. ಶ್ರೀಮಂತ ಗಂಡನ್ನ ಕೊಂದ ಹೆಂಡತೀಗೆ ದುಡ್ಡು ಏನು ಕಡಿಮೆ ಪಾರಾಗೋದಕ! ಆದರೂ ನಾ ನಾಗರಕ; ನನ್ನ ಕರ್ತವ್ಯ ಅದ, ನಾ ಹೇಳ್ತೀನಿ; ಇಲ್ಲಿ ಆ ಶ್ರೀಮಂತ ಮುದುಕನ ಕೊಲೆ —

ಪೋ. ಕಾ. : (ಅವನನ್ನು ನೂಕುತ್ತ) ನಡೀಯಯ್ಯ ನಡೀ ! ಕೊಲೆ ಆಯ್ತು, ಹೆಣ ಸಿಕ್ಕಿತು; ಇವೆರಡೆ ಹೌದಲ್ಲೊ ನಿನ್ನ ಕರ್ತವ್ಯ ?

ನಾಗರಕ: ಕಾನಸ್ಟೇಬಲ್, ನಾ ನಿಮಗ ಹೇಳ್ತೀನಿ —

ಪೋ. ಕಾ. : ನನಗೇನ್ಹೇಳ್ತೀ ? ಮನೀಗ್ಹೋಗಿ ಹೆಂಗಸರು-ಹುಡುಗರ ಮುಂದೆ ಕತೆ

ಹೇಳ್ತೀಯಂತ, ಅವು ಕೇಳ್ಯಾವು ಬಾಯ್ಬಿಟ್ಟು !

ನಾಗರಕ : (ಈಗ ಮರೆಯಾದರೂ ದನಿ ಕೇಳುತ್ತಿದೆ) ಕತೆ ಅಲ್ಲ, ಕಾನ್‌ಸ್ಟೇಬಲ್; ಆ ಡ್ರೈವರ್‌ನ ಕೈಯಿಂದ ಕೊಲ್ಲಿಸ್ತಾಳಂತ —

ಪೋ. ಕಾ. : ಯಾಕ ? ನಿನ್ನ ಕೈಯಿಂದ ಕೊಲ್ಲಿಸ್ತಾಳಂತ ಆಶಾ ಇಟ್ಕೊಂಡಿದ್ದಿ ಏನು? ನಡೆ ! ನಡೆ !

[ಇಬ್ಬರೂ ರಂಗಭೂಮಿಯಿಂದ ಹೊರಹೋಗುವರು.]

[ಮತ್ತೆ ಒಂದು ನಿಮಿಷ ನಿಶ್ಶಬ್ದತೆ. ಆಗ ಮೆಲ್ಲನೆ ಬಾಗಿಲು ತೆರೆಯುವುದರಲ್ಲಿದೆ. ಮೊದಲ ಅಂಕದಲ್ಲಿ ಕಂಡ ಮುಖ ಅರ್ಧ ಕಾಣುತ್ತಿದೆ, ಅಷ್ಟರಲ್ಲಿ ಗೂಬೆಯ ಘೂತ್ಕಾರ. "ಡ್ರೈವರ್, ಡ್ರೈವರ್", ಎನ್ನುತ್ತ ಯುವತಿ ಗಾಬರಿಯಾಗಿ ಧಾವಿಸುವಳು. ಆ ದನಿ ಕೇಳಿದಾಕ್ಷಣ ಮುಖ ಮರೆಯಾಗುವುದು. ಬಾಗಿಲು ಮುಚ್ಚುವುದು ]

ಯುವತಿ : (ರಂಗಸ್ಥಲಕ್ಕೆ ಬರುತ್ತ) ಡ್ರೈವರ್, ಡ್ರೈವರ್ — (ಇಷ್ಟರಲ್ಲಿ ಯಾವ ಮಾತೂ ಇಲ್ಲದೆ ಒಮ್ಮೆಲೆ ಡ್ರೈವರನು ಎದುರು ಬಂದು ನಿಂತುದಕ್ಕೆ ಬೆಚ್ಚಿ ಒಂದು ಹೆಜ್ಜೆ ಹಿಂದೆ ಸರಿಯುವಳು. ಅವನನ್ನು ನೋಡಿ) ಅಯ್ಯ ! ಎಷ್ಟು ಹೆದರಿದೆನಲ್ಲ ನಾನು ? (ಅವನಿಂದ ಉತ್ತರ ಬಾರದಿರಲು ಕುತೂಹಲದಿಂದ ಅವನ ಮುಖವನ್ನುದಿಟ್ಟಿಸಿ ನೋಡಿ, ಅಲ್ಲಿದ್ದ ಒಂದು ಕ್ರೂರ-ನಿಶ್ಚಯದ ಕಳೆಯನ್ನು ಕಂಡು, ಮತ್ತೆ ಗಾಬರಿಯಿಂದ) ಯಾಕ ? ಏನಾಯ್ತು ?

ಡ್ರೈವರ್ : (ಕರ್ಕಶಸ್ವರದಲ್ಲಿ) ಏನಾಯ್ತು ? ಏನಾಗೇದ ಅನ್ನೋದು ಗೊತ್ತಿಲ್ದವರ ಹಾಗೆ ಕೇಳ್ತೀಯಲ್ಲ ?

ಯುವತಿ : (ತಿಳಿಯದ್ದಕ್ಕೆ ಹೆದರಿ) ಏನ್ – ಏನಾಗೇದ ?

ಡ್ರೈವರ್ : (ಬಲವಾಗಿ ಅವಳ ಎರಡೂ ಭುಜಗಳನ್ನು ಅದುಮಿ) ಏನಾಗೇದ – ಏನಾಗೇದ? ಮಾಡೋದನ್ನ ಮಾಡಿ ನನ್ನೇ ಕೇಳ್ತೀಯಾ ?

ಯುವತಿ : (ಇನ್ನೂ ತಿಳಿದಿಲ್ಲ) ಏನ್ – ಏನ್ಮಾಡೀನಿ ನಾನು ?

ಡ್ರೈವರ್ : ನೀನು ಮಾಡಿ ನನ್ನನ್ನ ಪೇಚಿನಲ್ಲಿ ಸಿಕ್ಕಿಸಬೇಕಂತೀಯಾ ? (ಗದರಿಸುವ ದನಿಯಲ್ಲಿ) ಹೇಳು ! ಹೇಳು ! ಬ್ಯಾಡ ಅಂದ್ರೂ ಯಾಕೆ ಮಾಡಿದೆ ?

ಯುವತಿ : (ಈಗಲೂ ತಿಳಿದಿಲ್ಲ) ಯಾಕ್ – ಏನ್ – ಮಾಡ್ದೆ ನಾನು ? (ಕ್ರೂರದೃಷ್ಟಿಯಿಂದ ಅವನು ತನ್ನನ್ನು ನೋಡಲು) ಹೇಳು – ಯಾರಿಗೆ ಏನಾಗೇದ ?

ಡ್ರೈವರ್ : (ಅವಳ ಭುಜಗಳನ್ನು ಬಿಟ್ಟು, ಹತಾಶನಂತೆ) ನನ್ನ ಧಣೀ —

ಯುವತಿ : (ನಡುವೆಯೆ) ಏನಂದ್ರು ? ಗೊತ್ತಾಯ್ತೆ ಅವರಿಗೆ ? ನೋಕರಿಯಿಂದ ಬಿಡಿಸಿದರೆ ನಿನ್ನನ್ನ ?

ಡ್ರೈವರ್ : (ಆಕೆಯ ಮಾತುಗಳನ್ನು ಕೇಳದವನಂತೆ) ನನ್ನ ಧಣೀ, ನಿನ್ನ ಗಂಡ —

ಯುವತಿ : (ಸಿಟ್ಟಿನಿಂದ) ಮತ್ತೆ ಅದೇ ಚುಚ್ಚುಮಾತು !

ಡ್ರೈವರ್ : (ಒಮ್ಮೆಲೇ ಅವಳನ್ನು ನೋಡಿ) ನೀನು ಹೆಂಗಸಲ್ಲ; ರಾಕ್ಷಸಿ ! ರಾಕ್ಷಸಿ ! (ಆಕೆ ಏನೂ ತಿಳಿಯದಂತಾಗಿ ತನ್ನನ್ನು ನೋಡಲು) ಕಪಟಿ ರಾಕ್ಷಸಿ ! ಈಗ ತಿಳೀತು ನನಗೆ, ಇಷ್ಟೊತ್ತು ಯಾಕೆ ನೀನು ಹಾಗೆ ಮಾತಾಡಿದಿ ಅಂತ !

ಯುವತಿ : ಏನ್ ಮಾತಾಡಿದೆ ?

ಡ್ರೈವರ್ : (ಗದರಿಸುವ ದನಿಯಲ್ಲಿ) ಮುಚ್ಚು ಬಾಯಿಯನ್ನ ! ಧೈರ್ಯ ಇಲ್ಲ ಅಂತೆ! ನಾನು ಹೇಡಿ ಅಂತೆ ! ಗಂಡನನ್ನು ಕೊಂದು ನೀನು ಬಹಳ ಶೂರಳಾದೆ ಅಂತ ತಿಳಿದೆಯಾ ?

ಯುವತಿ : (ಬೇಗಾಗಿ) ಯಾರನ್ನ ಕೊಂದು ?

ಡ್ರೈವರ್ : ಯಾರನ್ನ ? ಯಾರನ್ನ ಅಂದ್ರ ನಿನ್ನ ಗಂಡನನ್ನ.

ಯುವತಿ : (ಒಮ್ಮೆಲೆ ಸ್ವಸ್ಥಳಾಗಿ) ಅವನು ಸತ್ತಿರುವನೆ ? ನಿಜವೆ ? ಹೇಳು, ಹೇಳು ! (ಅವನು ಚಕಿತನಾಗಿ ತನ್ನನ್ನು ನೋಡಲು ತಡೆದು ತಾನೂ ಅವನನ್ನು ದಿಟ್ಟಿಸಿ ನೋಡುತ್ತ ಕ್ರಮೇಣ ಮುಗುಳ್ನಗೆಯಿಂದ ಮುಖವರಳಿ, ಒಮ್ಮೆಲೆ ಸಂತೋಷದಿಂದ ಅವನ ಭುಜಕ್ಕೆ ಜೋತು ಬಿದ್ದು) ನನ್ನ ಶೂರಾ, ನನ್ನ ವೀರಾ, ನನ್ನ ....

ಡ್ರೈವರ್ : (ಆಕೆಯಿಂದ ಕೊಸರಿಕೊಂಡು ಸರಿದು) ಸರಿ ದೂರ !

ಯುವತಿ : (ಮತ್ತೆ ಅವನನ್ನು ದಿಟ್ಟಿಸಿ ನೋಡಿ ನಗಮೊಗದಿಂದ) ಸಾಕು, ಈ ನಾಟಕ ! ನಾನು ಯಾರಿಗಾದ್ರೂ ಹೇಳ್ತೀನಿ ಅಂತ ಹೆದರೀದಿಯೇನು? ನಾನ್ಯಾಕೆ ಹೇಳಲಿ? ನಮ್ಮಿಬ್ಬರ ಜೀವನ-ಸುಖದ ದಾರಿ ಸುಗಮ ಆಯ್ತು. ಸಾಕು, ಯಾರು ಸತ್ತರೇನು ? ಯಾರು ಕೆಟ್ಟರೇನು ? ನಾನು ಯಾರಿಗೂ ಹೇಳೋದಿಲ್ಲ.

ಡ್ರೈವರ್ : (ಈಗ ಇವನು ಬೆಪ್ಪಾಗುತ್ತಾನೆ) ಯಾರಿಗೂ ಹೇಳೋದಿಲ್ಲ ? ಏನ್ ಹೇಳೋದಿಲ್ಲ ?

ಯುವತಿ : ಯಾರಿಗೂ ಹೇಳೋದಿಲ್ಲ ? ಎಂಥಾ ಹುಚ್ಚಿ ನಾನು ! ನಿನಗೆ ಧೈರ್ಯ ಇಲ್ಲ ಅಂದೆನಲ್ಲ ?

ಡ್ರೈವರ್ : (ಇನ್ನಿಷ್ಟು ಬೆಪ್ಪಾಗಿ) ಅಂದ್ರ ? ನೀ ಅನ್ನೋದೇನು ?

ಯುವತಿ : ಅನ್ನೋದನ್ನೆಲ್ಲ ಮನಸಿನೊಳಗೇ ಅಂದುಕೋತೀನಿ, ಯಾರಿಗೂ ಹೇಳೋದಿಲ್ಲ, ಆದರೆ ನೀನು ಇಷ್ಟು ಕಠೋರ ಆಗಬಾರದಾಗಿತ್ತು.

ಡ್ರೈವರ್ : (ಮೇಲಿನಂತೆಯೆ) ಕಠೋರ ? ನಾನು ? ಅಂದ್ರ .... ?

ಯುವತಿ : (ದೂರನ್ನು ಹೇಳಿಕೊಳ್ಳುವ ದನಿಯಲ್ಲಿ) ಕಠೋರ ಅಲ್ಲದೆ ಮತ್ತೇನು? ನಾನು ಅಂಥಾ ಪರಿ ಬೇಡಿಕೊಂಡರೂ ಒಪ್ಪದವರ್ಹಾಂಗ ಮಾಡಿ, " ನನಗ ಸಂಬಳ ಕೋಡೋ ಧಣೀ ಹತ್ತಿರ " ಅಂತ ಹೋದಿ ! ನನಗ ಏನೊ ಅನ್ನಿಸಿ ನಾ ಹೆದರಿಬಿಟ್ಟೆ. ಸುಳುವು ಕೂಡ ಹತ್ತಗೊಡಲಿಲ್ಲ ಅಲ್ಲ ಧಣಿಯ ಹತ್ತಿರ ಯಾಕ ಹೋದಿ ಅಂತ ! ಅದಕ್ಕ ಕಠೋರ ಅಂತೀನಿ.

ಡ್ರೈವರ್ : (ಈಗ ಗಾಬರಿಯಾಗಿ) ಎಲೆ ! ಎಲೆಲೆ ! ಅಂದ್ರೇನು ? ನಾನು ಕೊಂದೆ ಅಂತ ....

ಯುವತಿ : (ನಡುವೆಯೆ) ಆ ಮಾತು ಬಾಯಿಯಿಂದ ಬ್ಯಾಡ, ನಾನೂ ಯಾರಿಗೂ ಹೇಳೋದಿಲ್ಲ.

ಡ್ರೈವರ್ : (ಕಕ್ಕಾವಿಕ್ಕಿಯಾಗಿ) ಎಲೆಲೆ ! ಇದೇನು ? ದುಡ್ಡು ಇದ್ದವರು ಅಂತ ನನ್ನಂಥಾ ಬಡವನ ಮ್ಯಾಲೆ ಅಪರಾಧ ಹೊರಿಸೋದೆ ? ನಾನು ಕೈಕೂಡ ಮುಟ್ಟಿಲ್ಲ, ದೇವರಾಣೆ. ಇಲ್ಲಿ ಕೇಳು ನನ್ಮಾತು. ನಾನು ಅಲ್ಲಿ ಹೋದಾಗ ಅವನು ಕಾರಿನೊಳಗ ಸತ್ತೇ ಬಿದ್ದಿದ್ದ.

ಯುವತಿ : ಹಾಂಗೇ ಹೆಳ್ತೀನಿ ನಾನು, ನೀ ಯಾಕೆ ಹೆದರ್ತೀ ?

ಡ್ರೈವರ್ : (ಬೇಡಿಕೊಳ್ಳುವವನಂತೆ) ಏನ್ ಹೇಳ್ತೀ ?

ಯುವತಿ : ಶ್‌ಶ್ ! ಯಾರೋ ಬರುವ ಸದ್ದು ! ಅದೋ....ಪೋಲೀಸ ! ಈ ಕಡೆ, ಈ ಕಡೆ! (ಬಲಬದಿಯ ಮುಂತುದಿಗೆ, ಆಮೇಲೆ ಹಿಂತುದಿಗೆ ಹೋಗಿ ಕೊನೆಗೆ ಮನೆಯ ಬಾಗಿಲ ಮುಂದೆ ಬಂದು) ಈ ಕಡೆ ಬಾ. (ಅವನನ್ನು ಕೈ ಹಿಡಿದು ಮೆಟ್ಟಿಲುಗಳ ಹತ್ತಿರ ನಿಂತಾಗ —)

ನಾಗರಕ : (ಮನೆಯ ಹಿಂದಿನಿಂದ ಬರುತ್ತ) ಕೇಳಿದಿರಿಲ್ಲೊ, ಕಾನ್‌ಸ್ಟೇಬಲ್, ಆ ಕಾರ್ ಈ ಕಡೇನೆ ಬಂದಿದೆ ಅಂತ ?

[ಈ ದನಿಯನ್ನು ಕೇಳಿದಾಕ್ಷಣ ಯುವತಿ ಡ್ರೈವರ್‌ನನ್ನು ಎಳೆದುಕೊಂಡು ಮನೆಯ ಬಾಗಿಲೊಳಕ್ಕೆ ಹೋಗುವಳು. ಮತ್ತೆ ಬಾಗಿಲನ್ನು ಮುಚ್ಚಲಾಗಿದೆ.]

ನಾಗರಕ : (ಮುಂದೆ ಬಂದು) ಈಗಾದ್ರೂ ವಿಶ್ವಾಸ ಇಡ್ತೀರೊ ಇಲ್ಲೊ ನನ್ಮಾತಿನೊಳಗ ?

ಪೋ. ಕಾ. : ಕಾರ್ ಈ ಕಡೆ ಬಂದ್ರೇನಾಯ್ತು ?

ನಾಗರಕ : ಆ ಕಾರಿನೊಳಗ ಡ್ರೈವರ್ ಇದ್ದಾನಂತ, ಹೆಂಡತಿಯೂ ಇದ್ದಾಳಂತ –

ಪೋ. ಕಾ. : ಅದಕ್ಕ ಖೂನಿ ಆಗೇದಂತ —, ಅಂತೀಯೇನ್ನೀನು ? ಗಂಡ ಹೆಂಡತಿ ಕೂಡಿ ಡ್ರೈವರ್ನ ಕರಕೊಂಡು ಕಾರ್ ಒಯ್ಯೋದಿಲ್ಲ ಅಂತಿಯೇನು ?

ನಾಗರಕ : ಅಷ್ಟೆ ಇದ್ರೆ ಯಾರು ಲಕ್ಷ್ಯ ಕೊಡತಿದ್ದರು?

ಪೋ. ಕಾ. : ಖೂನಿ ಆದರೆ ಟಿಕೆಟ್ ಕೊಂಡ್ಕೊಂಡು ನೋಡುತಿದ್ದರು ಅಂತಿಯೇನು?

ನಾಗರಕ : ಇಲ್ಲಿ ನೋಡಿರಿ, ಕಾನ್‌ಸ್ಟೇಬಲ್, ಅದನ್ನ ಅನ್ನಲಿಕ್ಕೆ ಇದನ್ನ ಅನ್ನಲಿಕ್ಕೆ ನಾನು ಯಾರು? ಜನರ ಸ್ವಭಾವ ಹೇಳಿದೆ. ನನಗ ಖಾತ್ರಿ ಅದ; ಜನ ಇಂಥಾ ಪರಿ ಸುದ್ದಿ ಎಬ್ಬಿಸ್ಯಾರ ಅಂದಮ್ಯಾಲೆ — ( ಒಮ್ಮೆಲೇ ತನ್ನ ಎಡಬದಿಗೆ ನೋಡಿ ) ಅಲ್ಲಿ ನೋಡಿರಿ, ಬೆಳದಿಂಗಳಿನೊಳಗ ಏನೋ ಮಿಂಚತಾ ಇದೆ ಅಲ್ಲ?

ಪೋ. ಕಾ. : ( ಮುಂದೆ ಹೋಗಿ ನೋಡುತ್ತ ) ಏನದು ?

ನಾಗರಕ : ( ಒಮ್ಮೆಲೆ ಗೆದ್ದವನಂತೆ ) ನೋಡಿರಿ, ಕಾನ್‌ಸ್ಟೇಬಲ್,ಕಾರ್ ಅದು ಕಾರು. ನಾಯೇನ್ಹೇಳಿದೆ ನಿಮಗೆ ? ( ಎನ್ನುತ್ತ ಗಿಡಗಳ ದಟ್ಟಣೆಯತ್ತ ಧಾವಿಸಿ ಮರೆಯಾಗುವನು.)

ಪೋ. ಕಾ. : ( ಗೊಣಗುವ ದನಿಯಲ್ಲಿ ) ನನ್ನನ್ನ ಹುಚ್ಚ ಮಾಡಲಿಕ್ಕೆ ಇವ ನಾಟಕಾ

ನಡೆಸ್ತ್ಯಾನೊ, ಏನು ಇವನ ನಾಲಗೇನ್ನೇ ಕಪ್ಪು ಅದ್ವನೊ !

ನಾಗರಿಕ : ( ಮರೆಯಲ್ಲಿಂದಲೆ ಕೂಗುತ್ತ ) ಕಾನ್‌ಸ್ಟೇಬಲ್, ಕಾನ್‌ಸ್ಟೇಬಲ್, ಇಲ್ಲಿದೆ ನೋಡಿರಿ ಮುದುಕನ ಹೆಣ ! ಬೇಕಾದ್ರ ಡಾಕ್ಟರನ ಕರೆಯಿಸಿರಿ.

ಪೋ. ಕಾ. : (ಜೆಪ್ಪಾಗಿ) ಏನು ? ನಿಜವಾಗಿಯೇ ಹೆಣ ಅದ್ವನೊ ಏನು? (ಆ ಕಡೆಗೆ ಹೊರಡುತ್ತ) ಅದು ಖೂನಿ ಹೆಣ ಆಗಿದ್ರ ಇವ ಸಕ್ಕರೇನ್ನೇ ಹಂಚತಾನೊ ಏನೊ ! (ಲಗಬಗೆಯಿಂದ ಹೋಗುವನು.)

[ ಒಂದು ಸಲ ಮೋಟಾರ ಹಾರ್ನದ ಸಪ್ಪು, ಗಿಡಗಳ ದಟ್ಟಣೆಯ ಕಡೆಯಿಂದ. ಆ ಮೇಲೆ ಎಲ್ಲವೂ ಒಮ್ಮೆಲೆ ನಿಶ್ಶಬ್ದ. ಒಂದೆರಡು ನಿಮಿಷಗಳ ತರುವಾಯ ಬಾಗಿಲು ತೆರೆಯುವುದು. ಮೂವ್ವರೂ ವ್ಯಕ್ತಿಗಳು ನಗುತ್ತ ಹೊರಬೀಳುವರು.]

೨ನೆ ವ್ಯಕ್ತಿ : ಅದಕೇ ನಿಮಗೆ ಹೇಳಿದೆನಲ್ಲ? ಹೆಂಡತಿ ಗಂಡನ್ನ ಕೊಲ್ಲೋ ಸೀನ್ ಅಂದ್ರ ಎಂದಿಗೂ 'fail' ಆಗೋದಿಲ್ಲ.

೧ನೆ ವ್ಯಕ್ತಿ : ಅವರೆ ಮುಂದೆ ಆ ನಾಟಿಕಾ ನೋಡ್ತಾ ಕೂತ ಗಂಡ ಹೆಂಡಂದಿರು ಸುಮ್ನಿರ್ತಾರೇನು — ಅಂತ —?

೨ನೆ ವ್ಯಕ್ತಿ : ನಾಟಕ ಐತಿಹಾಸಿಕ ಅಂತ ಮೊದಲೇ ಹೇಳಿಬಿಟ್ಟಿರ್ತೀವಲ್ಲ ?

೩ನೆ ವ್ಯಕ್ತಿ : ಇದಲ್ದೆ ಅದು ಸುಳ್ಳು ಅಂತ ಅವರಿಗೆ ಗೊತ್ತೂ ಇರ್ತದ.

೧ನೆ ವ್ಯಕ್ತಿ : ಸುಳ್ಳು? ಸುಳ್ಳು ಅಂತ ನಮಗ್ಗೊತ್ತು, ಸುಳ್ಳು ಅಂತ ಅವರಿಗ್ಗೊತ್ತು; ಅಂತೂ ಸುಳ್ಳಿದ್ದದ್ದನ್ನೆ ಬರೆಯಬೇಕು ಅಂತೀರಾ ?

೩ನೆ ವ್ಯಕ್ತಿ : ( ಸುಧಾರಿಸಿಕೊಳ್ಳುವವನಂತೆ ) ಛೆ ! ಛೆ ! ಸುಳ್ಳು ಅಂದರ ಹಾಂಗಲ್ಲ. ಆ ಪಾತ್ರ ವಹಿಸಿದವರು ಸಾಯೋದಿಲ್ಲ, ನಾಟಕದಾಗ ಸತ್ತದ್ದು ಸುಳ್ಳು ಅಂತ.

[ಪೋ. ಕಾ. ನು ಅದೇ ಸಮಯಕ್ಕೆ ಬಂದುದನ್ನು ನೋಡಿ ಒಮ್ಮೆಲೆ ತಡೆಯುವನು. ಪೋ.ಕಾ. ನು ನಿಂತು ಸಂಶಯದ ದೃಷ್ಟಿಯಿಂದ ಇವರನ್ನು ನೋಡಿ, ತರುವಾಯ ಹತ್ತಿರ ಬಂದು, ಮೂವ್ವರನ್ನೂ ಎದುರಿಸಿ — ]

ಪೋ. ಕಾ. : ಒಂದ್ಮಾತು ಕೇಳ್ತೀನಿ ನಿಮಗ —

೧ನೆ ವ್ಯಕ್ತಿ : ನಾವು ಯಾರನ್ನೂ ನೋಡಿಲ್ಲ.

೨ನೆ ವ್ಯಕ್ತಿ : ನಾವು ನಾಟಕದ ವಿಷಯ ಮಾತಾಡತಿದ್ದೆವು.

೩ನೆ ವ್ಯಕ್ತಿ : ಹಂ .... ಅದೇ .... ನೀವು ಕೇಳಿದಿರಲ್ಲ ಈಗ ?

ಪೋ. ಕಾ. : ಅದನ್ನ ಕೇಳಿದೆ ಅಂತಲೇ ಇದನ್ನ ಕೇಳ್ತೀನಿ.

೩ನೆ ವ್ಯಕ್ತಿ : ಯಾವ ಇದನ್ನ ?

ಪೋ. ಕಾ. : ಈಗ ನೀವು ನಾಟಕದ ಬಗ್ಗೆ ಬರೇ ಮಾತಾಡ್ತಾ ಇದ್ದೀರೋ, ಏನು ಒಂದು ನಾಟಕಾನೇ ಮಾಡ್ತಾ ಇದ್ದೀರೊ ?

೧ನೆ ವ್ಯಕ್ತಿ : ಅಂದ್ರ ? ಏನ್ನಿವನ್ಮಾತಿನರ್ಥ ?

೨ನೆ ವ್ಯಕ್ತಿ : (ನಗೆವೇಗದಿಂದ) ಎಂಥಾ ಪ್ರಶ್ನೆ, ಸಿಪಾಯಿಸಾಹೇಬರ, ಇಲ್ಲಿ ಹ್ಯಾಂಗ ನಾಟಕಾ ಮಾಡೋದು ಶಕ್ಯ ?

ಪೋ. ಕಾ. : (ವಿಚಾರಮಾಡಿ ಮಾತಾಡುವವನಂತೆ) ಹಂ....ನೀವು ಮಾಡೋದಿಲ್ಲ ಅಂದ್ರ ಅದು ತಾನಾಗಿಯೇ ನಡೆದ್ದದ.

೩ನೆ ವ್ಯಕ್ತಿ : ಏನು ತಾನಾಗಿಯೆ ನಡೆದದ್ದು ?

ಪೋ. ಕಾ. : ನಾಟಕ.

೧ನೆ ವ್ಯಕ್ತಿ : ಛೆ ! ಹುಚ್ಚತನ !

ಪೋ. ಕಾ. : ಇನ್ನೂ ತನಕ ಇಲ್ಲ. ಆದರೆ ಹೀಂಗೇ ನಡೆದರ ಹುಚ್ಚತನ ಬಿಟ್ಟದ್ದಲ್ಲ ಅನ್ನಿಸ್ತದ. ಅದಕ್ಕ ಇನ್ನೊಮ್ಮೆ ಕೇಳ್ತೀನಿ, ಕಡೆಯ ಸಲ ಕೇಳ್ತೀನಿ, ದೇವರಾಣೆ ಮಾಡೀರಿ ಅಂತ ತಿಳ್ಕೊಂಡು ಹೇಳಿರಿ. ಇಲ್ಲಿ ಯಾರಾದರೂ ಹೆಣ್ಮಗಳು ಅಡ್ಡಾಡೋದನ್ನ —

೧ನೆ ವ್ಯಕ್ತಿ : (ತಡೆಯುತ) ನೋಡಿಲ್ಲ ! ನೋಡಿಲ್ಲ ! ನೋಡಿಲ್ಲ ! (ಮಿಕ್ಕ ಇಬ್ಬರು ವ್ಯಕ್ತಿಗಳನ್ನುದ್ದೇಶಿಸಿ) ಥೂ ! ಇದೇನು ಕಾಟ ! ಈ ಪೋಲೀಸರ ಕಾಟ ತಪ್ಪೋತನಕ ಒಳಗೇ ಕೂಡೋಣ — ನಡೀರಿ (ಎಂದು ಇಬ್ಬರನ್ನೂ ಒಳಗೆ ಕರೆದೊಯ್ಯುತ್ತ ಬಾಗಿಲ ಮುಚ್ಚುವಾಗ) ಶುದ್ಧ ಹುಚ್ಚತನ !

[ಮೂವ್ವರೂ ಒಳಗಹೋಗಿ ಬಾಗಿಲ ಮುಚ್ಚಿಕೊಳ್ಳುವರು. ಪೋಲೀಸ ಕಾನ್‌ಸ್ಟೇಬಲ್ ಸು ದಂಗುಬಡೆದವನಂತೆ ಒಂದು ನಿಮಿಷ ನಿಂತಲ್ಲಿಯೆ ನಿಲ್ಲುವನು. ಆಮೇಲೆ ಶಿರಸ್ತ್ರಾಣ ವನ್ನು ತೆಗೆದು ತಲೆಯನ್ನು ತುರಿಸುತ್ತ —]

ಪೋ. ಕಾ. : ಹುಚ್ಚತನ ಇದ್ದರೂ ಇರ್‍ಬಹುದು. ಯಾರ್‍ಯಾರದೊ ಮಾತು ಕೇಳಿದೆ ಹಾದಿಗೆ ಹೋಗೋ ಡಾಕ್ಟರನ್ನ ಎಳೆದು ತಂದೆ, ಖೂನಿ ಕೇಸ್ ಅಂದೆ ಅವನೂ ನನ್ನನ್ನ ನೋಡಿ – "ಶುದ್ಧ ಹುಚ್ಚತನ ! ಹಾರ್ಟ್‌ಫೇಲ್ ಆದ ಕೇಸ್ ಇದು" ಅಂದ. ಹುಂ .... (ಎಂದು ಉಸುರ್ಗರೆದು – "ಇದ್ದರೂ ಇರಬಹುದು ಬೆಳದಿಂಗಳ ರಾತ್ರಿ" ಎಂದು ಗೊಣಗುತ್ತ ನಡೆಯಲು ತ್ರಾಣವಿಲ್ಲದಷ್ಟು ದಣಿದವನಂತೆ ಮೆಲ್ಲನೆ ಹೆಜ್ಜೆಗಳನ್ನೆಳೆಯುತ್ತ ಮನೆಯ ಹಿಂದಿನಿಂದ ಹೊರಹೋಗುವನು. ಮರೆಯಾದ ಮೇಲೂ "ಇದ್ರೂ, ಇರ್‍ಬಹುದು" ಎಂಬ ಅವನ ಗೊಣಗು ಕೇಳಿಬಂದ ಮೇಲೆ —]

— ತೆರೆ —

ಎರಡನೆಯ ಅಂಕ ಮುಗಿದುದು.

## ಅಂಕ ೩

[ ದೃಶ್ಯ ಮೊದಲಿನಸಡೆ. ಹಿಂದಿನ ಅಂಕದಲ್ಲಿಯ ಘಟನೆಗಳ ಎರಡು-ಎರಡುವರೆ ಗಂಟೆಗಳ ತರುವಾಯ. ಈಗ ಬೆಳದಿಂಗಳು ಹಗಲಿನಷ್ಟು ಬಿಳಿಯಾಗಿದೆ. ಆದರೆ ಮೊದಲಿನಂತೆಯೆ ಒಂದೆಡೆ ಮನೆಯೊಳಗಿನ ಕತ್ತಲೆ, ಇನ್ನೊಂದೆಡೆ ಗಿಡಗಳ ಗುಂಪಿನ ಕತ್ತಲೆ ( ಆಕಾಶದಲ್ಲಿ ಚಂದ್ರನು ಎತ್ತರದಲ್ಲಿರುವುದರಿಂದ ಈ ಕತ್ತಲೆಯ ಪಸಾರ ಚಿಕ್ಕ ದಾಗಿದೆ—ಕಪ್ಪು ಮಾತ್ರ ಅಷ್ಟೆ ಗಾಢವಾಗಿದೆ. ) ಇವು ಬೆಳದಿಂಗಳಿನಷ್ಟೆ ಪ್ರಭಾವಶಾಲಿ ಯಾಗಿವೆ. ತೆರೆ ಎದ್ದಾಗ ರಂಗಸ್ಥಲದಲ್ಲಿ ಯಾರೂ ಇಲ್ಲ. ಒಂದೆರಡು ನಿಮಿಷಗಳಲ್ಲಿ ರಂಗಸ್ಥಲದ ( ಪ್ರೇಕ್ಷಕರ ಬಲಬದಿಯ ) ಮುಂತುದಿಯಿಂದ, ಒಬ್ಬ ಯುವಕ, ಒಬ್ಬ ಯುವತಿ ಬರುವರು. ಮುಂತುದಿಯಿಂದ ಅದೇ ಬದಿಯ ಹಿಂತುದಿಗೆ ಹೋಗುವಾಗ ಇವರು ಬರೀ ತಮ್ಮೆದುರು ಶೂನ್ಯ ದೃಷ್ಟಿಯಿಂದ ನೋಡುತ್ತ ಹೋಗಬೇಕು. ಹಿಂತುದಿಗೆ ಇವರು ಮರೆಯಾಗುವ ಸಮಯಕ್ಕೆ ಮನೆಯ ಹಿಂದಿನಿಂದ ನಾಗರಕನ ಮುಖ ಹಣಿಕಿಕ್ಕುವುದು. ಅವನು ಬೇರೆ ಯಾವ ಕಡೆಯೂ ನೋಡದೆ ತನ್ನ ಎದುರು ಆ ಯುವ-ದಂಪತಿಗಳನ್ನು ನೋಡುತ್ತಿರಬೇಕು. ಹಾಗೇ ನೋಡುತ್ತಿದ್ದ ಆ ಮುಖ ಸಮಾಧಾನ-ಗೆಲವುಗಳಿಂದ ಅರಳಿದಂತೆ ಕಂಡುಬರುವುದು. ಒಂದೆರಡು ನಿಮಿಷಗಳಲ್ಲಿ ನಾಗರಕನು ಮೆಲ್ಲಗೆ ಮುಂದೆ ಬಂದು, ಕಿಸೆಯೊಳಗಿಂದ ಕಾಗದವೊಂದನ್ನು ತೆಗೆದು ಅದನ್ನು ರಂಗಸ್ಥಲದ ಹಿಂತುದಿ-ಯಲ್ಲಿ ಒಂದೆಡೆ ಇಟ್ಟು, ಮೇಲೆ ಒಂದು ಚಿಕ್ಕ ಕಲ್ಲನ್ನೂ ಇಟ್ಟು ಸಮಾಧಾನದಿಂದ ಕೈಗೆ ಕೈ ತಿಕ್ಕುತ್ತ ಮತ್ತೊಮ್ಮೆ ಗಿಡಗಳ ದಟ್ಟಣೆಯತ್ತ ನೋಡಿ ಸದ್ದಿಲ್ಲದೆ ಮನೆಯ ಹಿಂದಿ-ನಿಂದ ಜಾರುವನು.

ಒಂದು ನಿಮಿಷ ಬೇರೆ ಯಾವ ಸದ್ದೂ ಇಲ್ಲ. ಆ ಮೇಲೆ ಬಾಗಿಲು ತೆರೆಯುವುದು. ಮೂವ್ವರೂ ವ್ಯಕ್ತಿಗಳು ಮಾತನಾಡುತ್ತ ಬಾಗಿಲಿನಿಂದ ಹೊರಬೀಳುವರು. ಯಾವುದೊ ಕಾರಣಕ್ಕಾಗಿ ೧ನೆ ವ್ಯಕ್ತಿ ಹಣೆಗಂಟಿಕ್ಕಿದೆ, ಮಿಕ್ಕ ಎರಡು ವ್ಯಕ್ತಿಗಳು ನಗೆಮೊಗದಿಂದ ಇದ್ದಾರೆ. ಮೂವ್ವರೂ ರಂಗಸ್ಥಲದ ಮಧ್ಯಕ್ಕೆ ಬಂದು ನಿಂತಿದ್ದಾರೆ. ]

೨ನೆ ವ್ಯಕ್ತಿ : (೧ನೆ ವ್ಯಕ್ತಿಯನ್ನು ನೋಡುತ್ತ) ಯಾಕ ? ಯಾವ ವಿಚಾರದೊಳಗ ಇದ್ದೀರಿ ?

೩ನೆ ವ್ಯಕ್ತಿ : ನಾ ಹೇಳಿದ್ದಿಲ್ಲ ? ಅವರ್ಮನಸ್ಗೆ ಬಂದ್ರೆ ಅವರ್ಮನ್ಸೇ ಅವ್ಸರ ಮಾಡ್ತದ ಅಂತ ?

೨ನೆ ವ್ಯಕ್ತಿ : ( ೧ನೆ ವ್ಯಕ್ತಿಗೆ ) ಹೌದೆ ? ಒಳಗೆ ನಾಟಕಾನೇ ನಡೀತಾ ಇದೇಯೇನು?

೧ನೆ ವ್ಯಕ್ತಿ : ( ಉಸುರ್ಗರೆದು ) ಇಲ್ಲ. ನೀವು ಹೇಳಿದ್ದನ್ನ ಕೇಳಿ, ತೋರಿಸಿದ್ದನ್ನ ನೋಡಿ ನನಗೆ ನಾನು ಮಾಡಿದ್ದು ಯೋಗ್ಯ ನಿರ್ಣಯ ಅಂತ ಖಾತ್ರಿ ಆಯ್ತು.

೨ನೆ ವ್ಯಕ್ತಿ : ( ಸಂಶಯದಿಂದ ) ಅಂದ್ರೆ ?

೧ನೆ ವ್ಯಕ್ತಿ : ನಾನು ನಾಟಕಾ ಬರೀಬಾರ್ದು ಅಂತ ಮಾಡಿದ ನಿರ್ಣಯ.

೩ನೆ ವ್ಯಕ್ತಿ : ( ನೊಂದುಕೊಂಡವನಂತೆ ) ಛೆ ! ಛೆ ! ಇದೇನು, ರಾಯರ —

೧ನೆ ವ್ಯಕ್ತಿ : ( ಕೈಯನ್ನೆತ್ತಿ ತಡೆಯಲು ಸನ್ನೆ ಮಾಡುತ್ತ ) ತಡೀರಿ — ತಡೀರಿ. ನನ್ನಾ-ತಾದರೂ ಕೇಳಿರಿ. ( ಸುತ್ತು ಮುತ್ತಲೂ ನೋಡಿ ) ಆ ಹಾಳು ಪೋಲೀಸ ಇಲ್ಲ

ಅಹುದಲ್ಲೊ ?

೩ನೆ ವ್ಯಕ್ತಿ : (ಇದೂ ಒಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು) ಹಹ ! ನಾ ಅಂತೀನಿ, ಅವನನ್ನ ಒಂದು ನಾಟಕದೊಳಗೆ ಪಾತ್ರ ಮಾಡಿಬಿಡಿರಿ.

೧ನೆ ವ್ಯಕ್ತಿ : (ಮತ್ತೆ ಉಸುರ್ಗರೆದು) ಹಂ... ನಿಮ್ಮ ಮಾತು ಕೇಳಿಕೇಳಿದ್ಹಾಂಗ ನನ್ನ ನಿರ್ಣಯ ಇನ್ನಿಷ್ಟು ಯೋಗ್ಯ ಅನ್ನಿಸ್ತದ.

೩ನೆ ವ್ಯಕ್ತಿ : (೩ನೆ ವ್ಯಕ್ತಿಗೆ ಸುಮ್ಮನಿರಲು ಸನ್ನೆ ಮಾಡಿ) ರಾಯರ, ನಿಮಗ ಏನ್ಹೇ-ಳೋದದ ಹೇಳಿರಿ, ಆ ಮ್ಯಾಲೆ ನಿಮಗ ಖಾತ್ರಿ ಮಾಡಿಕೊಡೋದು ನನ್ನ ಕೂಡಿತು.

೧ನೆ ವ್ಯಕ್ತಿ : (ತಲೆಯನ್ನಲ್ಲಾಡಿಸುತ್ತ) ಉಹುಂ ... ... ಯಾರಿಗೂ ಶಕ್ಯ ಇಲ್ಲ ... ... ಮೂಲದಲ್ಲಿಯೆ ತಪ್ಪಿದೆ ... ನಮ್ಮ ಸಮಾಜದ ರಚನೆಯೆ ತಪ್ಪಿದೆ, ನಮ ಸಂಸ್ಕೃತಿಯ ತಳಪಾಯವೆ ತಪ್ಪಿದೆ, ನಮ್ಮ. ಸಾಹಿತ್ಯದ ದೃಷ್ಟಿಯೆ ತಪ್ಪಿದೆ, ನಮ್ಮ...

೩ನೆ ವ್ಯಕ್ತಿ : (ನಡುವೆಯೆ) ... ತಪ್ಪನ್ನೆಲ್ಲ ಒಪ್ಪಿಕೊಂಡಿವಿ, ನೀವು ಮುಂದ್ಹೇಳಿರಿ.

೧ನೆ ವ್ಯಕ್ತಿ : (ವಿಚಾರಸರಣಿಗೆ ಭಂಗ ಬಂದಂತಾಗಿ) ಆಂ ? ಏನಂದಿರಿ ?

೩ನೆ ವ್ಯಕ್ತಿ : (ಲಗಬಗೆಯಿಂದ) ನೀವು ಹೇಳೋದನ್ನ ಹೇಳಿಬಿಡಿರಿ ಮುಂಚೆ.

೧ನೆ ವ್ಯಕ್ತಿ : (ಬೆರಗಾದವನಂತೆ) ನಾನು ಹೇಳೋದನ್ನ ? ಏನ್ಹೇಳ್ತಿದ್ದೆ ನಾನು ?

೩ನೆ ವ್ಯಕ್ತಿ : (೨ನೆ ವ್ಯಕ್ತಿಗೆ, ನಾಟಕೀಯ ಕಳ್ಳದನಿಯಲ್ಲಿ) ಸ್ಫೂರ್ತಿ ಬರ್ತಾ ಇದೆ ! ಏರ್ತಾ ಇದೆ !

೧ನೆ ವ್ಯಕ್ತಿ : (ಆ ಮಾತು ಕೇಳಿಸಿಯೂ ಕೇಳಿಸದಂತೆ) ಹೌದು, ನನ್ನ ನಿರ್ಣಯ ಯೋಗ್ಯ ಅಂದೆ. (ಇಬ್ಬರೂ ಅತ್ಯಂತ ಚಕಿತರಾದವರಂತೆ ತನ್ನನ್ನು ನೋಡಲು) ಯಾಕ ? ಇದನ್ನ ಕೇಳಿ ನಿಮಗ ಆಶ್ಚರ್ಯ ಆಯ್ತೇನು ? ಇಲ್ಲಿ ನೋಡಿರಿ, ಇಷ್ಟೊತ್ತಿನ ವರೆಗೆ ನೀವು ನನ್ನನ್ನ ಮುಗ್ಧಗೊಳಿಸೋ ಹಾಂಗ ವಿವರಿಸಿದಿರಿ, ದೃಷ್ಟಾಂತ ವಾಗಿ ತೋರಿಸಿದಿರಿ, ಅದನ್ನ ನೋಡಿದೆ ನಾನು. ಆಗ ನನಗ ಏನನ್ನಿಸ್ತು ಅಂತ ತಿಳಿದೀರಿ ?

೩ನೆ ವ್ಯಕ್ತಿ : ಯೋಗ್ಯ ಮಾತು. ಏನಾದ್ರೂ ಅನ್ನಿಸಿರಲೇಬೇಕು.

೨ನೆ ವ್ಯಕ್ತಿ : ನಾನು ಹೇಳಿದ್ದರ ಪರಿಣಾಮ ನಿಮ್ಮ ಮ್ಯಾಲೆ ಆಗಿದ್ದರೆ ನಾನು ಕೃತಾರ್ಥ.

೧ನೇ ವ್ಯಕ್ತಿ : ಪರಿಣಾಮ ಆಯ್ತು. ಯಾವ ಪರಿಣಾಮ ? ನೋಡ್ತಾ ನೋಡ್ತಾ ನನ್ನನ್ನ ನಾನೇ ಕೇಳಿಕೊಂಡೆ; "ಎಲಾ, ನೀನು ಸ್ವಂತಕ್ಕ ನಾಟಕಕಾರ ಅಂದ್ಕೊ ಳ್ತಿದ್ದಿ, ನಾಟಕಾ ಬರೀತಿದ್ದಿ. ಆದರೆ ಈಗ ನೋಡಿದಿಯಾ ? ನಾಟಕಾ ಅಂದ್ರೇನು ? ಇಲ್ಲಿ ನಿನ್ನೆದುರು ನಾಟಕಾ ಮಾಡಿಸುವವರೆ ಇದ್ದಾರೆ, ಅನುಭವ ದಿಂದ ತೋರಿಸಿಕೊಡ್ತಾ ಇದ್ದಾರೆ. ನಾಟಕಾ ಅಂದ್ರೇನು ?" ಅಂತ ಕೇಳಿ

ಕೊಂಡಾಗ ತಟ್ಟನೆ ಉತ್ತರ ಹೊಳೀತು.

೩ನೆ ವ್ಯಕ್ತಿ : (ಸಮಾಧಾನವಾಯಿತೆಂಬಂತೆ) ನನಗನಿಸಿತ್ತು. ಅದಕ್ಕೇ ನಾನು ಹೇಳ ಲಿಲ್ಲೇನು, ತಡ ಆದ್ರೂ ಅಡ್ಡಿ ಇಲ್ಲ, ತೋರಿಸಿಬಿಡ್ ... (೧ನೇ ವ್ಯಕ್ತಿ ತಡೆಯು ವಂತೆ ಹಟದಿಂದ ಸನ್ನೆ ಮಾಡುತ್ತಿರುವುದನ್ನು ಕಂಡು ಚಕಿತನಾಗಿ ತಡೆಯುವನು.)

೧ನೆ ವ್ಯಕ್ತಿ : ತಡೀರಿ, ತಡೀರಿ ! ಉತ್ತರ ಹೊಳೀತು ಅಂದೆ. ಯಾವ ಉತ್ತರ ? ನಾಟಕಾ ಮಾಡಿಸೋವವರ ದೃಷ್ಟಿಯಿಂದ ನಾಟಕ ಅಂದ್ರೆ ಅನುಕೂಲ ಸೀನ್‌ಗಳ ಪಟ್ಟಿ — ಅನ್ನೋ ಉತ್ತರ.

೩ನೆ ವ್ಯಕ್ತಿ : (ಚಪ್ಪಾಳೆ ತಟ್ಟಿ) ಹಾಂ ... ಹಾಂ ... (ಒಮ್ಮೆಲೇ ಲಕ್ಷ್ಯಕ್ಕೆ ಬಂದು) ಎಲೆ ! ಮತ್ತೆ ಬ್ಯಾಗ್ ಮರೆತು ಬನ್ ... (೨ನೆ ವ್ಯಕ್ತಿ ಚಿವುಟಲು ತಡೆಯುವನು.)

೨ನೆ ವ್ಯಕ್ತಿ (೧ನೆ ವ್ಯಕ್ತಿಗೆ) — ಅನ್ನೋ ಉತ್ತರ ಹೊಳೀತು. ಮುಂದೆ ?

೧ನೆ ವ್ಯಕ್ತಿ : (ನಿರಾಶೆಯ ದನಿಯಲ್ಲಿ) ಮುಂದೇನಿದೆ ? ನಿಮ್ಮ ನಾಟಕ ಬ್ಯಾರೆ, ನಮ್ಮ ನಾಟಕ ಬ್ಯಾರೆ !

೨ನೆ ವ್ಯಕ್ತಿ : ಛೆ ! ಛೆ ! ಅಂಥಾ ವಿಚಾರ ಯಾಕ ? ನೀವು ಬರೆದದ್ದನ್ನ ನೀವು ಬರೆ ದ್ಹಾಂಗೇ ಆಡಿ ತೋರಿಸ್ತೇವಿ —

೧ನೆ ವ್ಯಕಿ : (ನಡುವೆಯೆ) — ಮುಂಚೆ ನೀವು ಹೇಳಿದ್ಹಾಂಗೇ ನಾವು ಬರೆದರೆ –

೩ನೆ ವ್ಯಕ್ತಿ : ಛೆ ! ಛೆ ! ಹಾಂಗಲ್ಲ. ನಿಮಗ ತೋಚಿದ್ಹಾಂಗ ನೀವು ಬರೀರಿ —

೨ನೆ ವ್ಯಕ್ತಿ : ನಾವು ಹೇಳಿದ್ದು ಸೀನ್ ಎಂಥಾದ್ದಿರಬೇಕು ಅನ್ನೋದಿಷ್ಟೆ. ಆ ಸೀನ್ ದೊಳಗೆ ಏನೇನು ಬರೀಬೇಕು ಅನ್ನೋದು ನಿಮ್ಮ ನಿರ್ಣಯ —

೩ನೆ ವ್ಯಕ್ತಿ : ಮತ್ತೆ ನೀವು ಬರೆದ್ಹಾಂಗೇ ಆಡಿ ತೋರಿಸ್ತೇವಿ.

೧ನೆ ವ್ಯಕ್ತಿ : (ಅವರಿಬ್ಬರನ್ನೂ ದಿಟ್ಟಿಸಿ, ಒಮ್ಮೆಲೆ ನಗೆಮೊಗದಿಂದ) ನಿಂ ವ್ಯವಹಾರದೊಳಗ ನೀವು ಇಷ್ಟು ಯಾಕೆ ಯಶಸ್ವಿಯಾಗಿದ್ದೀರಿ ಅನ್ನೋದು ಈಗ ನನಗೆ ತಿಳೀತಾ ಇದೆ ! ಆಂ ! ಎಂಥಾ ಚತುರರು ನೀವು !

೨ನೆ ವ್ಯಕ್ತಿ : ಅದು ನಮ್ಮ ಅನುಭವ, ರಾಯರ, ಚಾತುರ್ಯ ಅಲ್ಲ.

೩ನೆ ವ್ಯಕ್ತಿ : ಚಾತುರ್ಯ ಇರೋದು ನಾಟಕ ಬರೆಯೋವವರಿಗೆ.

೧ನೆ ವ್ಯಕ್ತಿ: ಅಂತೂ ಸ್ತುತಿಯಿಂದ ನನ್ನನ್ನು ಎಬ್ಬಿಸಿ ನಿಮ್ಮ ಅಂಗೈಯೊಳಗೆ ಕುಣಿಸ ಬೇಕು ಅಂತೀರಿ — ಅನ್ನಿರಿ. ಆಂ !

ಇಬ್ಬರು : (ಮೈಲಿಗೆಯಾದವರಂತೆ) ಛೆಛೆ ! ಛೆ ! ಛೆ ! ಛೆ !

೧ನೆ ವ್ಯಕ್ತಿ (ನಕ್ಕು) ಬೇಕಾದರೆ ಪೌರಾಣಿಕ ಬರೀರಿ, ಅಂದಿರಿ ; ಸೀನ್ ಯಾವುದು ? ರಾಕ್ಷಸ ಒಬ್ಬಾಕೆಯ ಪಾತಿವ್ರತ್ಯ ಭಂಗ ಮಾಡೋದಕ್ಕೆ ಯತ್ನಿಸೋದು ! ಐತಿಹಾಸಿಕ ಬರೀರಿ, ಅಂದಿರಿ. ಸೀನ್ ಯಾವುದು ? ಗಂಡನ್ನ ಕೊಂದು ಹೆಂಡತಿ ಅನ್ನ ಪಾತಿವ್ರತ್ಯವನ್ನ ತಾನೇ ಭಂಗ ಮಾಡಿಕೊಳ್ಳಲಿಕ್ಕೆ ಯತ್ನಿ- ಸೋದು ! ಆಂ ! ಹ್ಯಾಗಿದೆ ಮೋಜು ?

೩ನೆ ವ್ಯಕ್ತಿ : ಆದರೆ ಕೊನೆಗೆ ಪಾತಿವ್ರತ್ಯಕ್ಕೇ ಜಯ ಅನ್ನೋದನ್ನ —

೪ನೆ ವ್ಯಕ್ತಿ : ... ಮತ್ತು vi ಸಾಯಲೇಬೇಕು ಅನ್ನೋದನ್ನ —

೧ನೆ ವ್ಯಕ್ತಿ : ( ನಡುವೆಯೆ ) ಮರೀಬ್ಯಾಡ ಅಂತೀರಿ. ಹೌದಲ್ಲೊ ? ಅದಕ್ಕೇ ಹೇಳಿದ್ದೆ, ನಮ್ಮ ನಾಟಕ ಬ್ಯಾರೆ, ನಿಮ್ಮ ನಾಟಕ ಬ್ಯಾರೆ ಅಂತ.

೩ನೆ ವ್ಯಕ್ತಿ : ( ಸಂದರ್ಭ ಹೊಳೆಯದೆ ) ಅಂದ್ರೆ ?

೧ನೆ ವ್ಯಕ್ತಿ : ಅಂದ್ರೇನು ? ಕೊನೆಗೆ ಪಾತಿವ್ರತ್ಯಕ್ಕೇ ಯಾಕೆ ಜಯ ಆಗಬೇಕು ?

ಇಬ್ಬರೂ : ( ಸಿಡಿಲು ಬಡೆದವರಂತೆ ) ರಾಯರ, ಏನಿದು ? ಎಂಥಾ ಮಾತು ?

೧ನೆ ವ್ಯಕ್ತಿ : ( ಅವರನ್ನು ಲಕ್ಷ್ಯಕ್ಕೆ ತಾರದೆ ) ಯಾಕ ಜಯ ಆಗ್ಬೇಕು ಅಂತೀನಿ ? ತನ್ನ ಪಾತಿವ್ರತ್ಯಕ್ಕೆ ಜಯ ದೊರಕೋದು ಆ ಹೆಂಗಸಿಗೇ ಬ್ಯಾಡಾಗಿದೆ ಅಂತ ತಿಳೀರಿ, ಆಕೆಗೇ ಬ್ಯಾಡಾಗಿದ್ದರೆ —

೩ನೆ ವ್ಯಕ್ತಿ : ಛೆ ! ಛೆ ! ಅಲ್ಲ —

೧ನೆ ವ್ಯಕ್ತಿ : ( ತನ್ನ ಮಾತನ್ನ ಮುಂದರಿಸುತ್ತ ) ... ಆಕೆಗೇ ಬ್ಯಾಡಾಗಿದ್ದರೆ ನಂನಿಮ್ಮ ಹಟ ಯಾಕೆ, ಆ ಜಯ ಒದಗಿಸಿಕೊಟ್ಟು ಬ್ಯಾಡಾದ ಸಂಸಾರದಲ್ಲಿ ಆಕೇನ್ನ ಕೊಳೆಯಿಸಲಿಕ್ಕೆ ?

೩ನೆ ವ್ಯಕ್ತಿ : ಅಲ್ಲ – ರಾಯರ – ಅಂಥಾ ಮಾತು, ಅಂಥಾ ವಿಷಯ ನಮ್ಮ ಸಂಸ್ಕೃತಿ ಯೊಳಗ, ಭಾರತೀಯ ಮಹಿಳಾಮಣಿಯರಿಗೆ —

೧ನೆ ವ್ಯಕ್ತಿ : ( ನಡುವೆಯೆ ) ಮಣಿ ಆದ್ರೂ ಮಹಿಳಾ ಇದ್ದದ್ದು ನಿಜ ಅಹುದಲ್ಲೊ ? ಜಗತ್ತಿನೊಳಗ ಎಲ್ಲಿ ಹೋದರೂ ಹೆಂಗಸು ಹೆಂಗಸೇ ಹೌದೊ ಅಲ್ಲೊ ? ( ೩ನೆ ವ್ಯಕ್ತಿ ಒಮ್ಮೆಲೆ ಗಟ್ಟಿಯಾಗಿ ನಗಲು ತಡೆದು ಸಿಡುಕಿನ ದೃಷ್ಟಿಯಿಂದ ಅವನನ್ನು ನೋಡುವನು. )

೪ನೆ ವ್ಯಕ್ತಿ : ( ನಗೆ ತಡೆಯುತ್ತ ) ತಿಳೀತು ! ತಿಳಿತು ! ನಮ್ಮನ್ನ ಹೆದರಿಸ್ಬೇಕು ಅಂತ ರಾಯರು ಈ ರೀತಿ ಮಾತಾಡ್ತಾ ಇದ್ದಾರೆ ! ಹಹ !

೩ನೆ ವ್ಯಕ್ತಿ : ( ಗಂಡಾಂತರದಿಂದ ಪಾರಾದವನಂತೆ ನಕ್ಕು ) ಹಹ ! ನಾನೂ ಒಳೇ ಮೋಸ ಹೋದೆನಲ್ಲ ! ಹಹ ! ಹಹಹ !

೧ನೆ ವ್ಯಕ್ತಿ : ಅಂತೂ ಪಾತಿವ್ರತ್ಯಕ್ಕೆ ಜಯ ಸಿಗದೇ ಇರೋದು ಹಾಸ್ಯನಾಟಕ ಆಗ್ತದೆ ಅನ್ನಿರಿ.

೪ನೆ ವ್ಯಕ್ತಿ : ( ಇದೂ ಹಾಸ್ಯಚಟಾಕಿ ಎಂಬಂತೆ ನಗುತ್ತ ) ಹಹಹ್ — ( ಒಮ್ಮೆಲೆ ಏನೊ ಹೊಳೆದಂತಾಗಿ ತಡೆದು ) ಏನ್ — ಏನಂದಿರಿ ? ಹಾಸ್ಯ ನಾಟಕ? ಯಾವುದು ?

೩ನೆ ವ್ಯಕ್ತಿ : ( ವಾದವನ್ನು ಬಗೆಹರಿಸುವವನಂತೆ ) ರಾಯರ, ಹೋಗಲಿ ಬಿಡಿರಿ. ಯಾಕೊ ಪೌರಾಣಿಕ ಮತ್ತು ಐತಿಹಾಸಿಕ ನಾಟಕಗಳ ಬಗ್ಗೆ ನಿಮ್ಮ ಅಭಿಪ್ರಾಯ ಬಹಳೇ ವಿರುದ್ಧ ಇದ್ದಾಗೆ ಕಾಣ್ತದ. ಹೋಗಲಿ. ನಮಗಾದ್ರೂ ಇಂಥಾ ನಾಟಕಾನೇ ಬೇಕು ಅನ್ನೋ ಹಟ ಇಲ್ಲ. ನೀವು ಬರೆದ ನಾಟಕ ಆದ್ರೆ ಸಾಕು —

೩ನೆ ವ್ಯಕ್ತಿ : ಹಂ ... ನಾನೂ ಅದೇ ಅಂತೀನಿ ... ನಿಮಗೆ ಸಾಮಾಜಿಕ ನಾಟಕ ಬರಿಯೋದೇ ಮೆಚ್ಚಿನ ರೂಢಿ ಇದ್ದರೆ ಅದನ್ನೇ ಬರೆದುಕೊಡ್ರಿ— (೨ನೆ ವ್ಯಕ್ತಿಯನ್ನು ನೋಡುತ್ತ) ಅದನ್ನೆ ಮಾಡ್ತೇವಿ. ಹೌದಲ್ಲೊ—ಅಲ್ಲ— ಆಯ್ತಲ್ಲೊ ?

೧ನೆ ವ್ಯಕ್ತಿ : ( ಕೊಂಕ ನಗೆಯಿಂದ ) ಆಯ್ತು. ಆ ನಾಟಕದೊಳ್ಗ ಗಂಡ-ಹೆಂಡಂದಿರ ಸಂಬಂಧ ಹ್ಯಾಂಗ ಇರ್ಬೇಕಂತೀರಿ ?

೩ನೆ ವ್ಯಕ್ತಿ : ( ಚಕಿತನಾಗಿ ) ಅಂ ? ( ಎನ್ನುತ್ತ ೨ನೆ ವ್ಯಕ್ತಿಯನ್ನು ನೋಡುತ್ತಿರುವಾಗ ಅವನೂ ತನ್ನನ್ನೆ ನೋಡುತ್ತಿರಲು ಹುಬ್ಬುಗಳ ಸಂಕೇತದಿಂದ ಪ್ರಶ್ನಮಾಡಿ, ೧ನೆ ವ್ಯಕ್ತಿಗೆ) ಹಹ ! ಅಲ್ಲ, ನೀವಾಗಿಯೆ ಕೇಳ್ತೀರಿ ಅಂತ— (೨ನೆ ವ್ಯಕ್ತಿಯನ್ನು ನೋಡುತ್ತ) ಹೇಳ್ಬಬಹುದಲ್ಲ ?

೧ನೆ ವ್ಯಕ್ತಿ : ( ಸುತ್ತಲು ನೋಡುತ್ತ ) ಏನು ಒಳಗೇ ಹೋಗೋಣವೆ ?

೨ನೆ ವ್ಯಕ್ತಿ : ಛೆ ! ಛೆ ! ಎಷ್ಟಂತ ನಿಮಗ ತ್ರಾಸ ಕೊಡೋದು ? ನಿಮಗ ನಾವು ಹೇಳ್ಬೇಕೆ ? ಹೇಳೋಅಂಥಾದ್ದು, ಅದೂ ನಿಮಗ ಗೊತ್ತಿಲ್ಲದ್ದು, ಹಹ ! ಯಾವುದು ?

೧ನೆ ವ್ಯಕ್ತಿ : (ಯೋಚಿಸಿ ಮಾತನಾಡುವವನಂತೆ) ಆದರೂ — ಅಲ್ಲ, ಎಷ್ಟಾದರೂ ನಿಮ್ಮ ಅನುಭವ – ಅಂದ್ರ, ನನಗೂ ನಿಮ್ಮ ವಿಚಾರ ಸ್ಪಷ್ಟ ಆಗಲಿ ಅಂತ –

೩ನೆ ವ್ಯಕ್ತಿ : ನೀವೇ ಕೇಳ್ತೀರಿ ಅಂತ ಹೇಳ್ಬಹುದು —

೨ನೆ ವ್ಯಕ್ತಿ : ನೋಡಿರಿ, ರಾಯರ, ಗಂಡ-ಹೆಂಡತಿ ಸೀನ್‌ದ ಬಗ್ಗೆ ನೀವು ಕೇಳಿದ್ದು ಬಹಳ ಯೋಗ್ಯ ಅದ. ಯಾಕಂದ್ರ, ಹೇಳಿಕೇಳಿ ಸಾಮಾಜಿಕ ನಾಟಕ: ವೇಷ-ಭೂಷಣ-ಸೆಟಿಂಗ್ ಇದ್ಯಾವುದರ ಆಡಂಬರ ಇರೋದಿಲ್ಲ. ಅದಕ್ಕ ನನಗೇ ನನ್ನಸ್ತದ ಅಂದ್ರ – ಬಡತನ ಮತ್ತು ಪ್ರೇಮ – ಇವೆರಡನ್ನೂ ಸೇರಿಸ್ಬೇಕು.

೧ನೆ ವ್ಯಕ್ತಿ : (ನಿಜವಾಗಿಯೆ ಚಕಿತನಾಗಿ) ಬಡತನ ಮತ್ತು ಪ್ರೇಮ ! ಅವೆರಡರ ಸಂಬಂಧ —? ( ಒಮ್ಮೆಲೆ ಹೊಳೆದಂತಾಗಿ) ಓಹೊ ! ತಿಳೀತು ! ಗಂಡ ಬಡವ ಇರ್ಬೇಕು, ಹೆಂಡತಿಯಲ್ಲಿ ಪ್ರೇಮ ಇರ್ಬೇಕು —

೩ನೆ ವ್ಯಕ್ತಿ : (ಇದೂ ಒಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು)ಹಹಹ ! ಅಲ್ಲ, ರಾಯರ, ಹಾಂಗಲ್ಲ; ಸರಿಯಾಗಿ ಕೇಳಿಕೊಳ್ಳಿರಿ.

೧ನೆ ವ್ಯಕ್ತಿ : (೨ನೆ ವ್ಯಕ್ತಿಯನ್ನು ನೋಡುತ್ತ) ಹಾಂಗಲ್ಲ ?

೨ನೆ ವ್ಯಕ್ತಿ : (ಹಿರಿತನದ ನಗೆಯಿಂದ) ತಕ್ಕಮಟ್ಟಿಗೆ ನಿಮ್ಮ ಊಹೆ ಸರಿಯಾದದ್ದು ಅಂತ ಹೇಳ್ಬಹುದು. ಗಂಡ ಬಡವ ಇರ್ತಾನ, ನಿಜ; ಆದರೆ ಹುಟ್ಟಾ ಬಡವ ಅಲ್ಲ; ನಿಜವಾಗಿ ಹುಟ್ಟಾ ಶ್ರೀಮಂತ. ಆದರೆ ಹುಡುಗಿ ಹುಟ್ಟಾ ಬಡವಿ, ಮ್ಯಾಲೆ ಅನಾಥಳು. ಆಕೀಯ ಮ್ಯಾಲೆ ಪ್ರೇಮ ಆ ಹುಡುಗನದ್ದು. ಆಕೀನ್ನ ಮದುವೆ ಆದರೆ ಮನೆಯಿಂದ ಹೊರಗೆ ಹಾಕ್ತೀನಿ ಅಂತಾನ ಹುಡುಗನ ತಂದೆ; ಹುಡುಗ ಕೇಳೋದಿಲ್ಲ, ಹುಡುಗೀನ್ನ ಮದುವೆ ಆಗಿಯೆ ಬಿಡ್ತಾನ —

೩ನೆ ವ್ಯಕ್ತಿ : ಅಷ್ಟು ಬಿಡೋದಿಲ್ಲ, ಮುಗನ್ನ ಹೊರಗ ಹಾಕಿಯೆ ತೀರ್ತಾನ —

೨ನೇ ವ್ಯಕ್ತಿ : (ನಡುವೆ ಮಾತಾಡಿದ್ದಕ್ಕೆ ಸಿಟ್ಟಿನಿಂದ ೩ನೆ ವ್ಯಕ್ತಿಯನ್ನು ನೋಡುತ್ತ, ಆದರೂ ಮಾತನ್ನು ಮುಂದರಿಸುತ್ತ) ಆಗ ಬರ್ತ್ತದ ನೋಡಿರಿ, ನೀನು !

೩ನೆ ವ್ಯಕ್ತಿ : ಅಬ್ಬ ! ನೆನಪಾದರೆ ಕಣ್ಣೀರು ಬರ್ತದೆ !

೨ನೆ ವ್ಯಕ್ತಿ : (ಮೇಲಿನಂತೆ, ತಡೆದ ಸಿಟ್ಟಿನಿಂದ, ಹಟಕ್ಕಾಗಿ ಆವೇಶದಿಂದ)ಆಗ ಬರ್ತದೆ ಅಂದೆ ನೀನು ! (೩ನೆ ವ್ಯಕ್ತಿಗೆ ಸಿಟ್ಟಿನಿಂದಲೆ) ಅಲ್ಲಿ ಹೋಗಿ ಬಿದ್ದುಕೊ ನೀನು! (ಅವನು ರಂಗದ ಹಿಂತುದಿಗೆ ಹೋಗಿ ಮಲಗುವನು. ೧ನೆ ವ್ಯಕ್ತಿಗೆ) ಅವ ಹೆಂಡತಿ ಅಂತತಿಳೀರಿ. ಅಲ್ಲಿ ಯಾಕೆ ಮಲಗ್ಯಾಳೆ ಗೊತ್ತೆ ? ( ೧ನೆ ವ್ಯಕ್ತಿ ಇಲ್ಲೆಂದು ತಲೆ ಅಲ್ಲಾಡಿಸಲು ) ಎಂಟು ದಿವಸ, ಇಡಿಯ ಎಂಟು ದಿವಸ, ಎಂಟು ಹಗಲು – ಎಂಟು ರಾತ್ರಿ, ಎಂಟಿಪ್ಪತ್ನಾಲ್ಕಲೇ ೧೯೨ ತಾಸು, ಆಕೆಯ ಹೊಟ್ಟೆಯೊಳಗೆ ಒಂದು ತುತ್ತು ಅನ್ನ ಇಲ್ಲ. ಎಂಟೂ ದಿವಸ ಪ್ರಯತ್ನ ಮಾಡಿ ಈಗ ಎಂಟನೆಯ ದಿವಸ ಯುವಕ ಗಂಡ ಮನೆಗೆ ಬರ್ತಾನೆ. (ಮುಂದಿನದೆಲ್ಲವನ್ನು ನಟಿಸಿ ಹೇಳುವನು). ನೋಡ್ತಾನ. ತನ್ನ ಪ್ರೀತಿಯ ಹೆಂಡತಿಯದು ಏನವಸ್ಥೆ ? ತನ್ನ ಸಂಸಾರ ಸರೋವರದ ಕಮಲ ಬಾಡಿ ಒಣಗಿ ಹೋಗೇದ ! ಇನ್ನೆಷ್ಟು ಕಷ್ಟ ಸಹಿಸ-ಬೇಕು ತನ್ನ ಹೃದಯಬಂಗಾರದ ಅರಗಿನ – (ಸುಧಾರಿಸಿಕೊಂಡು) ಅರಗಿಣಿ ! ಆಕೆಯ ಕಷ್ಟವನ್ನು ತಪ್ಪಿಸಲು ಒಂದೇ ಉಪಾಯ ! ಕ್ರೂರ ಉಪಾಯ ! ಘೋರ ಉಪಾಯ ! ನಿರುಪಾಯ ! ಆಕೆ ಎಚ್ಚರದಪ್ಪಿ ಮಲಗಿದ್ದಾಳೆ, ಈಗಲೇ ಆಕೆಯ ಕುತ್ತಿಗೆಯನ್ನು ಹಿಚುಕಬೇಕು – ಆಮೇಲೆ ತಾನು?– ತಾನೂ ಸಾಯಬೇಕು ! ಸಮಾಜಕ್ಕೆ ತಿಳಿಯಲಿ, ಜಗತ್ತಿಗೆ ಬುದ್ಧಿ ಬರಲಿ, ಪ್ರೇಮದ ಡಂಗುರ ವಿಶ್ವದಲ್ಲಿ ಸಾರಲಿ, ತಾವಿಬ್ಬರೂ ಸಾಯುವದು ಯಾಕೆ ಎಂಬುದು ಜಗತ್ತಿಗೆ ತಿಳಿಯಲಿ – ಅಂಥೇಳಿ ಕಾಗದ ತಕ್ಕೊಂಡು, ಒಂದು ಚೀಟಿ ಬರೆ-ದಿಟ್ಟು, ಅದನ್ನ ಅಲ್ಲಿಯೆ ಮುಗ್ಗುಲಿಗಿಟ್ಟು — (ಎಂದು ಅಭಿನಯಿಸುವಾಗ ಪ್ರಾರಂಭ-ದಲ್ಲಿ ನಾಗರಕನು ಇಟ್ಟ ಚೀಟಿ ಕೈಗೆ ತಗಲುವುದು. ಆವೇಶಕ್ಕೆ ಭಂಗ ಬರುವುದು. ಚಕಿತನಾಗಿ ಅದನ್ನು ನೋಡುತ್ತ ನಿಲ್ಲುವನು).

ಪೋ. ಕಾ. : (ಒಮ್ಮೆಲೆ ಬಂದು) ಎಲ ಯಾರು ? ಏನಿದು? (ಮಲಗಿದ ೩ನೆ ವ್ಯಕ್ತಿಯನ್ನು ನೋಡಿ ) ಯಾರು ಸತ್ತರು — (ಎನ್ನುವಷ್ಟರಲ್ಲಿ ೩ನೆ ವ್ಯಕ್ತಿ ಏಳಲು ಬಾಯ್ದೆರೆದು ಎಲ್ಲರನ್ನೂ ನೋಡುತ್ತ ನಿಂತು, ಆಮೇಲೆ) ಏನ್ನಡೆದದ ಇದರಿ ಇಲ್ಲಿ ?

೨ನೆ ವ್ಯಕ್ತಿ : ( ನಗೆಮೊಗದಿಂದ ) ಸಿಪಾಯಿಸಾಹೇಬರ, ಘಾವಾಗಿನಿಂದ ಹೇಳತಾ ಇದ್ದೀವಿ, ನಾವು ನಾಟಕದ ಬಗ್ಗೆ ಚರ್ಚಾ ನಡೆಸೀವಿ ಅಂತ —

ಪೋ. ಕಾ. : ಹೀಂಗೇನು ? (೨ನೆ, ೩ನೆ ವ್ಯಕ್ತಿಗಳು ಹೊರಡಲುದ್ಯುಕ್ತರಾದಾಗ) ತಡೀರಿ ! ಈ ನಿಮ್ಮ ನಾಟಕ ನನಗ ಯಾಕೋ ಸಂಶಯದ ವಿಷಯ ಅನ್ನಿಸ್ತದ. ಅಲ್ಲ, ನಾ ಬಂದಾಗೊಮ್ಮೆ ನಿಮ್ಮ ನಾಟಕದ ಚರ್ಚಾನೇ ನಡೆದಿರ್ಬೇಕು ಅಂದ್ರ —

೪ನೆ ವ್ಯಕ್ತಿ : (ನಡುವೆಯೆ) ಅಲ್ಲಲ್ಲ — ನಾವು ಚರ್ಚಾ ನಡೆಸಿದಾಗೊಮ್ಮೆ ನೀವು ಬರ್ತೀರಿ ಅನ್ನಬಹುದು.

ಪೋ. ಕಾ. : (ಅಧಿಕಾರದ ದನಿಯಲ್ಲಿ) ಮುಚ್ಚರಿ ಬಾಯಿಯನ್ನ ! ನಾನ್ಯಾಕ ಬರ್ತೀನಿ ಇಲ್ಲಿ ಅಂತ ತಿಳಿದೀರಿ ? ಪ್ರತಿಸಲ ನಾನಿಲ್ಲಿ ಬರೋಹಾಂಗ ಮೋಸ ಮಾಡೋ ಸುದ್ದಿ ಕಳಿಸ್ತೀರಿ, ನಾನು ಬಂದ ಮ್ಯಾಲೆ ನಾಟಕ ಅಂತೀರಿ —

೨ನೆ ವ್ಯಕ್ತಿ : (ಚಕಿತನಾಗಿ) ಮೋಸದ ಸುದ್ದಿ ? ನಾವ ಕಳಿಸ್ತೀವೆ?

ಪೋ. ಕಾ : ಇಲ್ಲಿ ನೋಡಿರಿ ಇದನ್ನ ! (ಒಂದು ಕಿಸೆಯೊಳಗಿಂದ ಚೀಟಿಯನ್ನು ತೆಗೆದು ತೋರಿಸುವನು )

೩ನೆ ವ್ಯಕ್ತಿ : (ಓದಿ, ಅವನಿಗೆ ಕೊಟ್ಟು) ಇಲ್ಲಿ ನೋಡಿರಿ, ನನ್ನ ಕೈಯೊಳಗೂ ಅಂಥಾದ್ದೇ, ಅದ್ಯಾಕೆ ? ಅದೇ ಚೀಟಿ. (ಕೊಡುವನು)

೧ನೆ ವ್ಯಕ್ತಿ : (ಇದುವರೆಗೆ ಸುಮ್ಮನಿದ್ದು ಈಗ ಒಮ್ಮೆಲೆ ಬೊಳ್ಳೆಂದು ನಗುವನು. ಪೋ. ಕಾ. ನು ಎರಡೂ ಚೀಟಿಗಳನ್ನು ಹೋಲಿಸಿ ನೋಡುತ್ತಿರುವುದನ್ನು ತಡೆದು ತನ್ನನ್ನು ಸಿಟ್ಟಿನಿಂದ ನೋಡಲು) ಅಲ್ಲ, ಹೊಟ್ಟೆಗೆ ಗತಿ ಇಲ್ಲದ ಯುವಕನಿಗೆ ಬೀದಿಯ ಬಯಲಲ್ಲಿ ಒಂದು ಕಾಗದ ಹ್ಯಾಂಗ ಸಿಕ್ಕಿತು ಅಂತ ಕೇಳಬೇಕಂದ್ರೆ ಈಗ ಎರಡು ಕಾಗದ ಗಳು ಸಿಕ್ಕವಲ್ಲ ! ಇನ್ನಿಷ್ಟು ಆಶ್ಚರ್ಯ !

ಪೋ. ಕಾ. : ಯುವಕ? ಯಾವ ಯುವಕ ?

೧ನೆ ವ್ಯಕ್ತಿ : (ಲಗಬಗೆಯಿಂದ) ನಾಟಕದೊಳಗಿನ ಯುವಕ, ಸಿಪಾಯಿಸಾಹೇಬರೆ.

ಪೋ. ಕಾ. : ನಾಟಕದೊಳಗಿನವ? ಇಲ್ಲಿ ಯಾಕೆ ಬಂದ?

೪ನೆ ವ್ಯಕ್ತಿ : (ತಿಳಿಯದಾಗಿ) "ಇಲ್ಲಿ ಯಾಕೆ ಬಂದ?" ಯಾರು ಬಂದಾರಿಲ್ಲಿ ?

ಕಾ. : ಮತ್ತೆ ? ಆ ಚೀಟಿ ಹ್ಯಾಂಗ ಬಂತು ?

೧ನೆ ವ್ಯಕ್ತಿ (ತಿರಸ್ಕಾರಸೂಚಕ ದನಿಯಲ್ಲಿ) ಅದನ್ನ ಹುಡುಕಿ ತೆಗೆಯೋದು ಪೋಲೀಸರ ಕೆಲಸ. (ಉಳಿದಿಬ್ಬರಿಗೆ) ನಡೀರಿ, ನಾವು ಹೋಗೋಣ —

೪ನೆ ವ್ಯಕ್ತಿ ನಾನು ಮತ್ತೆ ಬ್ಯಾಗ್ ಒಳಗೇ ಮರೆತು ಬಂದೆ —

ಪೋ. ಕಾ. (ಸಂಶಯದಿಂದ) ಬರುವಾಗ ತಂಡಿದ್ದಿರೇನು ನಿಮ್ಮ ಕೈಯೊಳಗ ?

೩ನೆ ವ್ಯಕ್ತಿ "ಬರುವಾಗ" ಅಂದ್ರ ?

೪ನೆ ವ್ಯಕ್ತಿ (೩ನೆ ವ್ಯಕ್ತಿಗೆ) ಅಂಥಾಂಗ ಬರೋವಾಗ ತಂಥಾಂಗ ಇಲ್ಲ !

ಪೋ. ಕಾ. ಆದರೂ ಇದಕ್ಕೂ ಮುಂಚೆ ನಾ ಇಲ್ಲಿ ಬಂದಾಗ ನೀವು ಕೈಯೊಳಗ ಬ್ಯಾಗ್ ಹಿಡಿದುಕೊಂಡು ನಿಂತಿದ್ದಿರಲ್ಲ ?

೧ನೆ ವ್ಯಕ್ತಿ : ಯಾಕೆ ? ಕೈಯೊಳಗೆ ಬ್ಯಾಗ್ ಹಿಡಿದರೆ ಅಪರಾಧ ಏನು ? ನನ್ನ ಕಡೆ ಬಂದಿದ್ದರು, ನಾನು ಅವರಿಗೆ ನಾಟಕಾ ಬರೆದು ಕೊಟ್ಟೀನಿ, ಆ ಹಾಳೆಗಳು ಅಸ್ತವ್ಯಸ್ತ ಆಗ್ಯಾವು ಅಂತ ನನ್ನದೇ ಬ್ಯಾಗ್ ಅವರಿಗೆ ಕೊಟ್ಟೆ, ಹಿಡಿ ದಿದ್ದರು —

ಪೋ. ಕಾ. : ಅಂದ್ರ ? ಈಗ ಅದನ್ನ ಬಿಟ್ಟು ಯಾಕ ಬಂದರು ?

೩ನೆ ವ್ಯಕ್ತಿ : ಈಗ ಇಲ್ಲಿ ಒಂದು ದೃಶ್ಯ ಹ್ಯಾಂಗ ಆಗ್ತದ ಅನ್ನೋದನ್ನ ನೋಡಿ ತಿಳಿಯಕೊಳ್ಳಲಿಕ್ಕೆ ಬಂದಿದ್ದಿವಿ. (೧ನೆ, ೩ನೆ ವ್ಯಕ್ತಿಗಳಿಗೆ) ಅಂತೂ ಸ್ಟೇಜಿನ ಮ್ಯಾಲೆ ಹ್ಯಾಂಗ ಆಗ್ತದ ಅನ್ನೋ ಕಲ್ಪನಾ ಬಂತಲ್ಲ. ನಡೀರಿನ್ನು, ಮುಂದಿನ ದೃಶ್ಯ ಓದೋಣ. (ಮುಂದಾಗಿ ನಡೆಯುವನು. ೧ನೆ, ೨ನೆ ವ್ಯಕ್ತಿಗಳು ಪೋ. ಕಾ. ನನ್ನು ನಗೆಮೊಗದಿಂದ ನೋಡುತ್ತ ೩ನೆಯವನನ್ನು ಹಿಂಬಾಲಿಸಿ ಬಾಗಿಲೊಳಕ್ಕೆ ಹೋಗುವರು.)

[ ಅವರು ಅಷ್ಟೊಂದು ಲಗುಬಗೆಯಿಂದ ಹೋದುದಕ್ಕೆ ಪೋಲೀಸ್ ಕಾನ್‌ಸ್ಟೇಬಲ್‌ನು ಅವಾಕ್ಕಾಗಿ ನಿಲ್ಲುವನು. ಏನೂ ತಿಳಿಯದಂತಾಗಿ ಬಾಯ್ದೆರೆದು ಬಲಗೈಯ ಹೆಬ್ಬೆರಳಿನಿಂದ ಗಲ್ಲವನ್ನು ತುರಿಸಿಕೊಳ್ಳುತ್ತ ಒಂದೆರಡು ನಿಮಿಷ ನಿಂತು — ಯಾವದೊ ನಿರ್ಧಾರಕ್ಕೆ ಬಂದವನಂತೆ — ಕೈಜಾಡಿಸಿ, ಬಾಗಿಲನ್ನೊಮ್ಮೆ ದಿಟ್ಟಿಸಿ ನೋಡಿ ಮನೆಯ ಹಿಂಬದಿಯಿಂದ ಹೊರಟುಹೋಗುವನು. ]

[ ಒಂದೆರಡು ನಿಮಿಷ ರಂಗಸ್ಥಲದಲ್ಲಿ ಯಾರೂ ಇಲ್ಲ. ಆಮೇಲೆ ಮೆಲ್ಲನೆ ಹೆಜ್ಜೆಗಳನ್ನಿಡುತ್ತಾ, ಅತ್ತಿತ್ತ ನೋಡುತ್ತಾ ಪ್ರಾರಂಭದಲ್ಲಿ ಕಾಣಿಸಿಕೊಂಡ ಯುವಕ ಬಲಬದಿಯ ಹಿಂತುದಿಯಿಂದ ಬರುವನು. ಒಂದೆರಡು ಹೆಜ್ಜೆ ಮುಂದೆ ಬಂದು, ಮತ್ತೆ ಸುತ್ತಲೂ ನೋಡಿ ಹಿಂತಿರುಗಿ ಕೈಸನ್ನೆಯಿಂದ ಕರೆಯುವನು; ಮೊದಲು ಕಾಣಿಸಿಕೊಂಡ ಯುವತಿ ಬರುವಳು. ಆಕೆಯ ಕೈಹಿಡಿದು ರಂಗಸ್ಥಲದ ಮಧ್ಯಕ್ಕೆ ಬಂದು — ]

ಯುವಕ (ಗಂಡ) : (ಉಸುರ್ಗರೆದು) ಪಾರಾದಿವಿ !

ಯುವತಿ (ಹೆಂಡತಿ) : ( ತಿಳಿಯದೆ ) ಯಾವುದರಿಂದ ?

ಗಂಡ : ಯಾಕ ? ಇಷ್ಟರಲ್ಲಿಯೆ ಮರೆತೆಯೇನು ? ಈ ಹೊತ್ತು ಸಂಜೆಗೆ ಕೋಣೆಯಿಂದ ಹೊರಗ ಹಾಕುವಾಗ ಮಾಲೀಕ ಏನ್ಹೇಳಿದ್ದ ?

ಹೆಂಡತಿ : ( ವಿಷಾದದ ದನಿಯಲ್ಲಿ ) ಏನ್ಹೇಳಿದ್ದನೊ ಏನೊ ! ನನ್ಗಂತೂ ನಾಚಿಕೆಯಿಂದ ತಲೆ ಎತ್ತಧಾಂಗಾಗಿತ್ತು; ಕೆಳಗೆ ನೋಡುತಾ ನಿಂತಾಗ – ಹಾಗೇ ಭೂಮೀವಳಗ ಕುಸಿದು ಮುಚ್ಚಿ ಹೋಗಬಾರದೆ – ಅನ್ನಿಸಿತು.

ಗಂಡ : (ಆಕೆಯನ್ನು ಒಂದು ನಿಮಿಷ ದಿಟ್ಟಿಸಿ ನೋಡಿ) ಭಲೆ ! ನನ್ಹೆಂಡ್ತಿ ಈ ಪರಿ ಕವಿ ಆಗ್ಯಾಳ ಅಂತ ನನಗ್ಗೊತ್ತಿರಲಿಲ್ಲ.

ಹೆಂಡತಿ : ಸಾಕು ತಗೀರಿ ! ಮನೇ ಮಾಲೀಕ ಏನಂದಿದ್ದ ಈಗ ನೀವು ಪಾರಾದಿವಿ ಅನ್ನಲಿಕ್ಕೆ ?

ಗಂಡ : "ನನ್ನ ಮನೆ ಬಿಟ್ಟು ಹೊರಟು ಹೋಗಿರಿ; ದೂರ ಹೋಗಿರಿ; ಇಲ್ಲಾ ಅಂದ್ರ ಪೋಲೀಸನ್ನ ಬಿಡ್ತೇನಿ ನಿಮ್ಮ ಹಿಂದೆ" ಅಂದಿದ್ದ. ಈಗ ನೋಡಿದರೆ, ಪೋಲೀಸ ಮುಂದೆನಿಂತಿದ್ದ ! ನಾನು ಹೆದರಿದೆ, ಇದೇನೊ ಹಿಂದು–ಮುಂದಾಗೇದ ಅಂತ ಅಷ್ಟರಲ್ಲಿ ಹೊರಟು ಹೋದ. ಪಾರಾದೆವೊ ಇಲ್ಲೊ ?

ಹೆಂಡತಿ : ಅಲ್ಲ, ಹೀಂಗೇ ಮಾತಾಡ್ತಾ ಇನ್ನೆಲ್ಲಿ ಹೋಗ್ಬೇಕಂತೀರಿ ? ರಾತ್ರಿ ಎಲ್ಲಿ ಕಳೀಬೇಕಂತೀರಿ ?

ಗಂಡ : (ಹುಸಿ ಸಿಟ್ಟಿನಿಂದ) ನಿನ್ಹೀಂಗ ಮಾತಾಡಿದ್ರ ? ಹೆಂಡತಿ ಜೋಡಿ ಇರುವಾಗ ಮಕ್ಕ್ಲಿಯವ್ರು ರಾತ್ರಿ ಕಳೆಯೋ ಗಂಡನ್ಹಾಂಗ ಕಾಣ್ತೀನೆ ನಾ ?

ಹೆಂಡತಿ : (ಒಂದ ) ನಿಮಿಷ ಅವನನ್ನ ದಿಟ್ಟಿಸಿ ನೋಡಿ) ನಿಮಗ ಧೈರ್ಯ ಹೆಚ್ಚು, ನಾಚಿಕೀನ್ನ ಕಡಿಮೆಯೊ ! ತಿಳೀಲಾರದ್ಹಾಂಗಾಗೇದ.

ಗಂಡ : ಯಾಕ ? ಅಂಥಾ ಮಾತನ್ನ ಹೇಳಿದೆ ಅಂತ ?

ಹೆಂಡತಿ : ಅಲ್ಲ. ಇದ್ದ ಒಂದು ಕೋಣೆಯ ಬಾಡಿಗೆ ಕೊಡೋದಕ್ಕ ಗತಿ ಇರಲಿಲ್ಲ, ನಿಂತ ಕಾಲ ಮ್ಯಾಲೆ ಮಾಲೀಕ ಹೊರಗ ಹಾಕಿದ —

ಗಂಡ : (ನಡುವೆಯೆ) ಅದೂ ಒಂದು ಸುದೈವ ಅಂತೀನಿ.

ಹೆಂಡತಿ : (ಚಕಿತಳಾಗಿ) ಸುದೈವ ?

ಗಂಡ : ಸುದೈವ ಇರಲಿಕ್ಕಿಲ್ಲ, ಮಾಲೀಕನೆ ಬುದ್ಧಿಗೇಡಿ ಅನ್ನಬಹುದು. ಅಂತೂ ಒಳ್ಳೆಯದೇ ಆಯ್ತು.

ಹೆಂಡತಿ : (ನೊಂದ ದನಿಯಲ್ಲಿ) ಅದೆಂಥಾ ಒಳ್ಳೇದೊ ಹೊರಗ ಹಾಕಿಸಿಕೊಳ್ಳೋದಂವ್ರ ?

ಗಂಡ : ಎಂಥಾದ್ದಂದರ ? ಆ ಮೂರ್ಖ ಮಾಲೀಕ ಬಾಕಿ ಬಿದ್ದ ಬಾಡಿಗೇನ್ನ ಕೇಳಲೇ ಇಲ್ಲ. ಮತ್ತೆ ಯಾವಾಗಾದರೂ ಕೇಳ್ಬಹುದು ಅಂದ್ರ, ತಾನಾಗಿಯೆ ಹೇಳ್ತಾನ, "ನನ್ನ ಕಣ್ಣೆದುರು ಸುಳಿದಿರಿ ಅಂದ್ರ ಪೋಲೀಸನ ಬೆನ್ನಟ್ಟಿಸ್ತೀನಿ" ಅಂದ ! ಹಹ !

ಹೆಂಡತಿ : (ಸಿಡುಕಿನ ದನಿಯಲ್ಲಿ) ಆಗಲಿ; ಅವ ಮೂರ್ಖ, ನೀವು ಬುದ್ಧಿವಂತರು! ಈಗ ಏನ್ಮಾಡ್ಬೇಕಂತೀರಿ ಹೇಳಿರಿ. ಏನ್ ಮನೆ ಆಸರಾ ಇಲ್ದೆ ಹೀಂಗೇ ತಿರುಗಾಡೋದು, ನಾಳೆ ಮುಂಜಾನೆಯಿಂದ ಭಿಕ್ಷೆ ಬೇಡತಾ ?

ಗಂಡ : (ಅತ್ತಿತ್ತ, ಮೇಲೆ ನೋಡಿ) ಭಲೆ ! ಎಂತಹ ದಿವ್ಯ ಬೆಳದಿಂಗಳಿದು !

ಹೆಂಡತಿ : (ಸಿಟ್ಟು ತಡೆಯದೆ) ಅದನ್ನೇನು ತಿಂತೀರೇನು ? ನನ್ಮಾತಿಗೆ ಉತ್ತರ ಕೊಡಿರಿ.

ಗಂಡ : ನಿನ್ನ ಮಾತಿಗೆ ಉತ್ತರ ? ಏನ್ ಕೇಳಿದೆ ನೀನು ? ( ಲಕ್ಷ್ಯಕ್ಕೆ ಬಂದವನಂತೆ ) ಹಂ... ಏನ್ಮಾಡ್ತೀನಿ ಅಂತ ಕೇಳಿದಿಯಲ್ಲ ?

ಹೆಂಡತಿ : (ಸಿಟ್ಟಿನಿಂದಲೆ) ಹೌದು, ಹೌದು !

ಗಂಡ : (ಸಮಾಧಾನದ ದನಿಯಲ್ಲಿ) ಏನ್ಮಾಡ್ಬೇಕಂತೀ ? ನೀನೇ ಹೇಳ್ಬಿಡು.

ಹೆಂಡತಿ : (ಸ್ವಾಭಿಮಾನದ ದನಿಯಲ್ಲಿ) ನಾನೇನ್ಹೇಳಲಿ ಹೆಂಗಸು ? ಹೊಟ್ಟೆ ತುಂಬಿಕೊಳ್ಳೋ ಯೋಗ್ಯತಾ ಇಲ್ಲದವರು ಮದುವೆ ಮಾಡಿಕೊಳ್ಳಬಾರದಿತ್ತು –

ಗಂಡ : ಅದು ನಿಜ.

ಹೆಂಡತಿ : ನೋಕರಿ ಸಿಗದಿದ್ದರ ಕೂಲಿ ಕೆಲಸ ಮಾಡಬೇಕು –

ಗಂಡ : ಅದೂ ನಿಜ.

ಹೆಂಡತಿ : ಮನೆಯ ಬಾಡಿಗೆಗೆ ಗತಿ ಇಲ್ಲದವರು ಅನಾಥಾಶ್ರಮದೊಳಗಿರಬೇಕಿತ್ತು–

ಗಂಡ : ಅದ್ಹೂ ನಿಜ.

ಹೆಂಡತಿ : (ಕನಲಿ ಕಾಲು ಅಪ್ಪಳಿಸಿ) ನಿಜ–ನಿಜ–ನಿಜ! ನಾಯೇನು ನಿಮ್ಮ vote ಕೇಳ್ತಾ ಇದ್ದೀನೇನು ನನ್ನ ಅಭಿಪ್ರಾಯಕ್ಕ ?

ಗಂಡ : (ಒಮ್ಮೆಲೆ ಎಲ್ಲ ಹೊಳೆದವನಂತೆ) ಓಹೊಹೊ ! ಅಂದ್ರ ಇದನ್ನೆಲ್ಲ ನನ್ನ ಸಲುವಾಗಿ ಹೇಳುತ್ತಿದ್ದೆಯೇನು ?

ಹೆಂಡತಿ : ಅಂದ್ರೆ ?

ಗಂಡ : ಮದಿವೆ ಮಾಡಿಕೊಳ್ಳಬಾರದಿತ್ತು, ಕೂಲಿ ಕೆಲಸ ಮಾಡಬೇಕಿತ್ತು, ಅನಾಥಾಶ್ರಮ ಸೇರ್ಬೇಕಿತ್ತು – ಅಂತ ಇದನ್ನೆಲ್ಲ ನನಗೆ ನೀ ಹೇಳುತ್ತಿದ್ದೆ !

ಹೆಂಡತಿ : (ತಿಳಿಯದೆ) ಅಂದ್ರೆ – ಮತ್ತೆ ಯಾರಿಗೆ ಹೇಳಲಿ ?

ಗಂಡ : (ದೀರ್ಘವಾಗಿ ಉಸರೆಳೆದು) ಹಂ — ಅದಕ್ಕೇ ಹೇಳ್ತಾರೆ ಹಿರಿಯರು, ಬುದ್ಧಿ ಬಂದಾಗ ಅವಕಾಶ ಸಿಕ್ಕೋದಿಲ್ಲ, ಅವಕಾಶ ಸಿಕ್ಕಾಗ ಬುದ್ಧಿ ಇರೋದಿಲ್ಲ ಅಂತ.

ಹೆಂಡತಿ : (ತಿಳಿಯದ್ದಕ್ಕೆ ಕನಲಿ) ಏನು – ನೀವು ಅಂತೀರಾದ್ರೂ ಏನು ?

ಗಂಡ : ಅದೇ – ನೀ ಹೇಳಿದೆಯಲ್ಲ, ಅದರ ಬಗ್ಗೆ. ಮದುವೆ ಮಾಡಿಕೊಳ್ಳಬಾರದಿತ್ತು ಅನ್ನೋ ಬುದ್ಧಿ ಬರೋದು ಮದುವೆ ಮಾಡಿಕೊಂಡ ಮ್ಯಾಲೆ, ಕೂಲಿ ಕೆಲಸ ಸಿಕ್ಕುವಾಗ ನೋಕರಿ ಹಿಡಿಯಬೇಕು ಅನ್ನಿಸೋದು — (ಹೆಂಡತಿ ಒಮ್ಮೆಲೆ ಮುಖ ಮುಚ್ಚಿಕೊಂಡು ಬಿಕ್ಕುವಳು.) ಎಲೆಲೆ ! (ಅವಳ ಬೆನ್ನ ಮೇಲೆ ಕೈಯನಿಟ್ಟು) ಛಿ ! ಹುಚ್ಚೀ ! ಅಳ್ತಾರೇನು ? ಮೋಜಿಗೆ ಅಂತ ಏನೇನೊ ಹೇಳ್ತಿದ್ದೆ. ನಡೆ! ಏನ್ಮಾಡಬೇಕು ಅನ್ನೋದನ್ನ ಎಂದೋ ನಿರ್ಧಾರ ಮಾಡೀನಿ, ಅದರ ಚಿಂತೇನೇ ಬ್ಯಾಡ ನಿನಗೆ. (ಹೆಂಡತಿ ಕಣ್ಣಲ್ಲಿ ನೀರು, ಮುಖದಲ್ಲಿ ಆಸೆ, ಮೇಲೆ ನೋಡುತ್ತಾಳೆ; ಗದ್ದವನ್ನೆತ್ತಿ ಹಿಡಿದು). ಇನ್ನು ಯಾವ ಚಿಂತೇನೂ ಇಲ್ದೆ ಆರಾಮಾಗಿ ಇದ್ಬಿಡೋಣ, ಬಾ. (ಎಂದು ಆಕೆಯ ಕೈಯನ್ನು ಹಿಡಿದು ರಂಗದ ಹಿಂತುದಿಗೆ ನಡೆಯುತ್ತಾನೆ. ಕಲ್ಪನೆ ಇಲ್ಲದ್ದಕ್ಕೆ ಆಕೆ ತುಸು ಅಧೈರ್ಯದಿಂದಲೆ ನಡೆದಿದ್ದಾಳೆ. ಹಿಂತುದಿಯ ಮಧ್ಯಕ್ಕೆ ಆಕೆಯನ್ನು ನಿಲ್ಲಿಸಿ, ಎದುರು ತೋರಿಸುತ್ತ) ನೋಡಿದೆಯಾ ಅಲ್ಲಿ ? ಆ ಗಿಡಗಳ ದಟ್ಟಣೆಯನ್ನ. ಅದರ ನಟ್ಟ ನಡುವೆ ಒಂದು ಎತ್ತರ ಗಿಡ ಇದೆ. ನೆಲದಿಂದ ೧೨ ಅಡಿಯ ವರೆಗೆ ಒಂದು ಕೊಂಬೆ ಇಲ್ಲ ಅದಕ್ಕೆ. ಅಲ್ಲಿ ಹೋಗೋಣ, ಕೈಯಾಗ ಕೈ, ಮುಖಕ್ಕೆ ಮುಖ — ಯಾಕಂದ್ರ, ಇಬ್ಬರ ಕುತ್ತಿಗೆಗೂ ಒಂದೇ ಹಗ್ಗ ಕಟ್ಟಲಿಕ್ಕೆ ಅನುಕೂಲ —

ಹೆಂಡತಿ : (ಅದೊಂದು ಭಯಾನಕ ದೃಶ್ಯ ಎಂಬಂತೆ ಮುಖ ತಿರುಗಿಸಿ) ಅಯ್ಯೋ ! ಎಂಥಾ ಕೆಟ್ಟ ವಿಚಾರ ! ಅಶುಭ ವಿಚಾರ !

ಗಂಡ : ಆದರೂ ಯೋಗ್ಯ ವಿಚಾರ. ಹೌದಂತೀಯೊ ಇಲ್ಲಂತೀಯೊ ? ಬೇಕಾದರೆ

ಒಂದು ಪತ್ರ ಬರೆದಿಡೋಣ — ಇಲ್ಲ ಅಂದ್ರ ಬ್ಯಾಡ, ಬಿಡು, ಜೇಬ್‌ದೊಳಗ ಮತಿ ಕೂಡ ಇರಲಿಕ್ಕಿಲ್ಲ.

ಹೆಂಡತಿ : (ಮುಖ ತಿರುಗಿಸಿಯೇ) ಸಾಯೋದಂದ್ರೇನು ತಮಾಷೆ ಅಂತ ತಿಳಿದೀರಾ ?

ಗಂಡ : ಸ್ವಂತದ ಖುಷಿಯಿಂದ ಸಾಯೋವಾಗ — (ಹೆಂಡತಿ ತಲೆಯನ್ನಲ್ಲಾಡಿಸುವಳು) ಏನು ? ಖುಷಿ ಇಲ್ಲ ನಿನಗ? ಸಾಯ್ಬೇಕು ಅನ್ನಿಸೋದಿಲ್ಲ ನಿನಗ ? (ತಲೆ ಜಾಡಿಸುವಳು) ಇರ್ಬೇಕು ಅಂತ ಅನ್ನಿಸ್ತದ ? ( ತಲೆ ತೂಗುವಳು. ಆಕೆಯನ್ನು ಬರಬರ ಮುಂಚೆ ನಿಂತಲ್ಲಿಗೆ ಎಳೆದು ತಂದು) ಮೊದಲೇ ಹೇಳ್ಬಾರ್ದಾಗಿತ್ತ ? ಥೂ ! ಎಷ್ಟು ಹಂಚಿಕೆ ಹಾಕಿದ್ದೆ ! ಕಿಸೇದೊಳಗ ನಮ್ಮಿಬ್ಬರ ಫೋಟೊ ಇಟ್ಟಿದ್ದೆ, ಯಾಕಂದ್ರೆ ಗಿಡಕ್ಕ ಜೋತುಬಿದ್ದ poseಖು ಚನ್ನಾಗಿರೋದಿಲ್ಲ ಅಂತ. ಎಲ್ಲಾ ಪೇಪರ್‌ಗಳೊಳಗೆ ಹೆಸರು ಬರ್ತಿತ್ತು, "ದೇಶದ ಆಧಾರಸ್ತಂಭರಾದ ಯುವಕರು ಕೋಂಬೆಗೆ ನೇಣುಹಾಕಿಕೊಂಡರು" ಅಂತ ದೊಡ್ಡ ಅಕ್ಷರಗಳೊಳಗೆ — (ಉಸಿರೆಳೆದು) ಹೋಗಲಿ ಬಿಡು. ಅದೇ ಹೇಳಿದೆನಲ್ಲ, ಬುದ್ಧಿ ಬಂದಾಗ ಅವಕಾಶ ಸಿಕ್ಕೋದಿಲ್ಲ ಅಂತ — (ಹೆಂಡತಿ ತನ್ನನ್ನು ಒಂದೇ ಸವನೆ ದಿಟ್ಟಿಸುತ್ತಿದ್ದಾಳೆಂಬುದು ಲಕ್ಷ್ಯಕ್ಕೆ ಬಂದು ಒಮ್ಮೆಲೇ ತಡೆಯುವನು.)

ಹೆಂಡತಿ : ಮುಗೀತೇ ನಿಮ್ಮ ಮಾತು ?

ಗಂಡ : ಸಾಯೋದಕೆ ಮುಂಚೆ ಮನಸ್ಸಿನೊಳಗಿದ್ದದ್ದನ್ನೆಲ್ಲಾ ಮಾತಾಡಬೇಕು ಅಂತ ತಯ್ಯಾರಿ ಮಾಡಿಕೊಂಡಿದ್ದೆ. ಸಾಯೋದು ತಪ್ಪಿತು, ತಯ್ಯಾರಿ ವ್ಯರ್ಥ ಹೋಗಬಾರದು ಅಂತ –

ಹೆಂಡತಿ : ನೀವು ಇಷ್ಟು ಸೋತೀರಿ ಅಂತ ತಿಳಿದಿದ್ದರೆ ನಾ ನಿಮಗೆ ಈ ರೀತಿ ತ್ರಾಸ ಕೊಡತಿದ್ದಿಲ್ಲ.

ಗಂಡ : (ಅಪಮಾನಿತನಾದವನಂತೆ) ಸೋತೀನಿ ?

ಹೆಂಡತಿ : ಮತ್ತೆ ಸಾಯಲಿಕ್ಕೆ ತಯ್ಯಾರ ಆಗಿದ್ದಿರಲ್ಲ ?

ಗಂಡ : ಮತ್ತೇನ್ಮಾಡಬೇಕು ?

ಹೆಂಡತಿ : ಸಾಯೋದಿದ್ದರ ನಾನ್ಯಾಕೆ ನಿಮ್ಮನ್ನ ಮದುವೆ ಆಗ್ತಿದ್ದೆ ?

ಗಂಡ : ನನ್ನಟ್ಟಿಗಂತೂ ಸಾಯೋ ಮುಂಚೆ ನಿನ್ನನ್ನ ಮದುವೆ ಆಗಿಯೆ —

ಹೆಂಡತಿ : ಒಮ್ಮೆಲೆ ಅವನ ಬಾಯಿಗೆ ಕೈಯಿಟ್ಟು) ಬ್ಯಾಡ ಅಂಥಾ ಕೆಟ್ಟ ಮಾತು !

ಗಂಡ : (ಈಗ ಪಣಿದಿದ್ದಾನೆ) ಅಂದ್ರೆ – ಈಗೇನ್ಮಾಡೋಣ ಅಂತೀ ?

ಹೆಂಡತಿ : ಯಾವ ಬೇಕಾದ ಕೆಲಸವನ್ನ ಮಾಡೋಣ. ಇಬ್ಬರ ಹೊಟ್ಟೆ ತುಂಬಿ ಸೋವಷ್ಟು ಗಳಿಸೋದು ಅಂಥಾದ್ದೇನು ದೊಡ್ಡಾತು ! ನೀವಾದರೆ ಸಾಕು ನನಗೆ, ಹೆಚ್ಚಿಗೇನೂ ಬ್ಯಾಡ.

ಗಂಡ : ಅದಲ್ಲ ನಾನು ಕೇಳಿದ್ದು. ಈಗ ಸದ್ಯಕ್ಕೆ ಏನ್ಮಾಡೋಣ ಅಂತ.

ಹೆಂಡತಿ : ಅಂದ್ರೆ ?

ಗಂಡ : ಅಲ್ಲ — ಬೇಕಾದ ಕೆಲಸ ಮಾಡೋದು ನಾಳಿನಿಂದಾಯ್ತು. ನಡುರಾತ್ರೀ ವಳಗ ಬಾಗಿಲಾ ಬಡಿದೆಬ್ಬಿಸಿದರೆ ಯಾರು ಕೆಲಸ ಕೊಡ್ತಾರ? ಈ ರಾತ್ರಿಯನ್ನ ಎಲ್ಲಿ ಕಳೆಯೋಣ ಅಂತ.

ಹೆಂಡತಿ : ನೀವು ಎಲ್ಲಿ ಇರ್ತೀರಿ, ಅದೇ ನನ್ನ ಮನೆ. ನಿಮ್ಮ ನೆರಳೇ ನನಗೆ ಆಸರ.

ಗಂಡ : (ಒಮ್ಮೆಲೆ) ಅಯ್ಯೋ ದೇವರೆ! ಇದೇನು ಕಪ್ಪೆಯ ತೂಕದ ನ್ಯಾಯ ನಿನ್ದು?

ಹೆಂಡತಿ : ಯಾವ ನ್ಯಾಯ ಅಂದಿರಿ?

ಗಂಡ : ಯಾವುದೇನು? ಈಗ ನೋಡಲ್ಲ ಇಲ್ಲಿಯೆ? ನೀನು ಬುದ್ಧಿವಂತಳಾಗಿ ಮಾತಾಡುವಾಗ ನಾನು ಹುಚ್ಚನ ಹಾಗೆ ಮಾತಾಡೋದು, ನಾನು ಬುದಿ ವಂತನಾಗಿ ಮಾತಾಡೋವಾಗ ನೀನು ಹುಚ್ಚಿಯ ಹಾಗೆ ಮಾತಾಡೋದು! ಗಂಡ-ಹೆಂಡತಿ ಇಬ್ರೂ ಒಂದೇವ್ಯಾಳ್ಯಾಕ್ಕ ಬುದ್ಧಿವಂತರಾಗ್ಬಾರ್ದು ಅನ್ನೋದು ಯಾವ ನ್ಯಾಯ? ಈಗಿನ ರಾತ್ರಿಯನ್ನ ಎಲ್ಲಿ, ಹ್ಯಾಗೆ ಕಳೆಯೋಣ ಅಂತ ಬುದ್ಧಿವಂತಿಕೆಯ ಪ್ರಶ್ನೆ ನಾನು ಕೇಳ್ತಾ ಇದ್ದೀನಿ, ನೀನು —

ಹೆಂಡತಿ : (ನಡುವೆಯೆ) ನಾನೂ ಬುದ್ಧಿವಂತಳಾಗಿಯೆ, ಹೇಳ್ತೀನಿ....ಅಲ್ಲಿ ನೋಡಿರಿ, ಯಾರದೊ ಮನೆ. ಮೆಟ್ಟಿಲ ಮ್ಯಾಲೆ ಬೇಕಾದಷ್ಟು ಜಾಗ ಇದೆ —

ಗಂಡ : ಮನೀವಳಗ ಯಾರಾದರೂ ಇದ್ದರೆ?

ಹೆಂಡತಿ : ಇರವಲ್ಲರ್ಯಾಕೆ? ನಾವು ಹೊರಗೆ ಇರ್ತೀವಲ್ಲ?

ಗಂಡ : ಮನೆಯ ಹೊರಗಾದ್ರೂ ಜಗತ್ತಿನ ಒಳಗೇ ಇರ್ತೀವಲ್ಲ?

ಹೆಂಡತಿ : ಅದಕೂ ಅದಕೂ ಏನ್ಸಂಬಂಧ?

ಗಂಡ : ಜಗತ್ತಿನೊಳಗೆ ಬ್ಯಾರೆ ಜನರೂ ಇದ್ದಾರ, ಅವರು ನಮ್ಮನ್ನ ನೋಡಿದರ ಹ್ಯಾಂಗ ಅಂತ.

ಹೆಂಡತಿ : ನೋಡವಲ್ಲರ್ಯಾಕ. ನನಗಂತೂ ದಣಿಕೆ ಆಗಿ ನಿದ್ದೆ ಬಂದ್ಹಾದ, ಯಾರೂ ನೋಡೋದನ್ನ ನಾನು ನೋಡೋದಿಲ್ಲ, ಸಾಕು. (ಎನ್ನುತ್ತ ಮೆಟ್ಟಿಲಿಗ ಬರುತ್ತಾಳೆ.)

ಗಂಡ : (ಅವಳ ಹಿಂದಿನಿಂದ ಬರುತ್ತ) ಆದರೂ — ಪೋಲೀಸ ಬಂದಾಗ ಎಚ್ಚರಿ-ರೋದೇ ಒಳ್ಳೇದು. (ಅವನೂ ಬಂದು ಮೇಲಿನ ಮೆಟ್ಟಿಲಿಗೆ ಕುಳಿತುಕೊಳ್ಳುವನು ಹೆಂಡತಿ ಪಕ್ಕದಲ್ಲಿ ಕುಳಿತುಕೊಳ್ಳುವಳು.)

[ಕೆಲ ಹೊತ್ತು ಮೌನ]

[ಗಂಡ ಒಮ್ಮೆಲೇ ಗಟ್ಟಿಯಾಗಿ ಆಕಳಿಸುವನು. ತಟ್ಟನೆ 'ಎಲೆ' ಎಂದು ಹೆದರಿ ಅತ್ತಿತ್ತ ನೋಡುವನು. ಒಂದು ನಿಮಿಷದ ತರುವಾಯ, "ಈ ಮನೀವಳಗ ಯಾರು ಇದ್ದಾಂಗ ಕಾಣೋದಿಲ್ಲ" ಎನ್ನುವನು.]

[ಮತ್ತೆ ಕೆಲಹೊತ್ತು ಮೌನ]

[ಗಂಡ ಎದ್ದು ಮೆಲ್ಲನೆ ನಡೆಯುತ್ತ ಬಾಗಿಲ ಹತ್ತಿರ ಹೋಗುವನು ಹೆದ-ಹೆದರುತ್ತ ಕೈಯಿಂದ ತಟ್ಟಿ ನೋಡಿ, ಒಂದೇ ಹೆಜ್ಜೆಗೆ ಹಿಂತಿರುಗಿ ಮೆಟ್ಟಿಲಿಗೆ ಬಂದು]

ಗಂಡ : (ಕಳ್ಳ ದನಿಯಲ್ಲಿ) ಒಳಗ ಯಾರೂ ಇಲ್ಲ, ಆದರೂ ಬಾಗಿಲ ತೆಗೆದಿದೆಯಲ್ಲ ?

ಹೆಂಡತಿ : ಯಾಕ ತೆರೆದಿರಬಾರದು ?

ಗಂಡ : ಅಧ್ಯಾಂಗ ಶಕ್ಯ ? ತೆರೆದಿಡಲಿಕ್ಕೆ ಯಾರಾದ್ರೂ ಬೇಕಲ್ಲ ?

ಹೆಂಡತಿ : ಅಂದ್ರ ? ತೆರೆದಿಟ್ಟು ಹೊರಗ ಹೋಗಲಿಕ್ಕೆ ಬರೋದಿಲ್ಲ ?

ಗಂಡ : (ಹೊಳೆದು) ಹೌದಲ್ಲ ? ನನಗ ನಿದ್ದೆ ಬರತಾ ಇರ್ಬೇಕು-(ಮತ್ತೆ ಆಕಳಿಸುವನು. ಮೇಲೆ ನೋಡಿ) ಅಹಹ ! ಎಂಥಾ ರಮ್ಯ ಬೆಳದಿಂಗಳು! ಅದಕ್ಕೇ ಸಂಸ್ಕೃತ ಕವಿ ಹೇಳ್ತಾನ: "ಶಯ್ಯಾ ಭೂಮಿತಲಂ ದಿಶೋಽಪಿ ವಸನಂ –"ಅಂತ.

ಹೆಂಡತಿ : ಅಂದ್ರ ?

ಗಂಡ : ಶಯ್ಯಾ ಭೂಮಿತಲಂ — ಭೂಮೀನೇ ಹಾಸಿಗೆ. ದಿಶೋಽಪಿ ವಸನಂ.

ಹೆಂಡತಿ : ಹಾಂಗಂದ್ರ ?

ಗಂಡ : ಹಾಂಗಂದ್ರ — ಛೀ ! ಅದನ್ನ ಹೆಂಗಸರ್‍ಮುಂದ ಹೇಳೋಹಾಂಗಿಲ್ಲ. (ಮತ್ತೆ) ಅಲ್ಲ, ಬಾಗಿಲ ತೆರೆದರೂ ಯಾರೂ ಇಲ್ಲ ಹ್ಯಾಂಗ ಮನೀವಳಗ ? (ಒಮ್ಮೆಲೆ ಲಕ್ಷ್ಯಕೊಟ್ಟು) ಯಾರೋ ಇದ್ದಾರ ! ಅಕ ! ಸದ್ದಾಗ್ತದ ನೋಡು ! ಎಲ ! ಈ ಕಡೆಯಿಂದ ಕೇಳಬರ್‍ತದ ಸದ್ದು ! (ಎಂದು ಮೆಲ್ಲನೆ ಮನೆಯ ಹಿಂಬದಿಗೆ ನಡೆದು, ಹಣಿಕಿಕ್ಕಿ ನೋಡಿ, ಒಮ್ಮೆಲೆ ಧಾವಿಸಿ ಬಂದು) ಎಲೆಲೆ! ಘಾತ ಆಯ್ತು, ಪೋಲೀಸ ಬಂದ ! ಹುಂ — ಬೇಗ ! (ಎನ್ನುತ್ತ ಆಕೆಯನ್ನು ಕೈಹಿಡಿದೆಬ್ಬಿಸಿ — ಅವಸರದಿಂದ ಬಾಗಿಲನ್ನು ತೆರೆದು ಆಕೆಯೊಡನೆ ಒಳಗೆ ಹೋಗುವನು. ಮತ್ತೆ ಬಾಗಿಲು ಮುಚ್ಚುವುದು.)

[ಇಷ್ಟರಲ್ಲಿ ಮನೆಯ ಹಿಂಬದಿಯಿಂದ ಪೋಲೀಸ ಕಾನ್‌ಸ್ಟೇಬಲ್ ಬರುವನು. ಸಿಡುಕು ಸಂಶಯಗಳ ಮುಖಮುದ್ರೆ, ಹಣೆಗಂಟನ್ನು ತೋರಿಸುತ್ತಿದೆ. ಬಂದವನೆ ಆ ಕಡೆ, ಈ ಕಡೆ ನೋಡಿ ಮನೆಗೆ ಎದುರಾಗಿ ನಿಂತು — ]

ಪೋ. ಕಾ. : ಯಾರದೊ ಸದ್ದಾಯ್ತಲ್ಲ ಇಷ್ಟರೊಳಗೆ ? (ಒಂದ್ಹೆಜ್ಜೆ ಮುಂದೆ ಬಂದು) ಇವರ ನಾಟಕದೊಳಗೆ ದೆವ್ವ ಕುಣೀತಾವೊ ಏನೊ ಮತ್ತೆ ! ಏನ್ನನ್ನ ಮಟ್ಟಿಗೇ ಇದ್ದಿತೊ ಇವರ ನಾಟಕ ! ಏನೊ ನಡೆದಿದೆ ಇಲ್ಲಿ ! ಕತ್ತಲೆ – ಬೆಳಕು ಆಟ ಆಡಿದ್ಹಾಂಗೆ ನಡೆದಿದೆ. ಕತ್ತಲೇವಳಗ ಆಟ ಆಡ್ತಾರ, ಬೆಳಕಿನೊಳಗ ಕಣ್ಣಿಗೆ ಬೀಳ್ತಾರ ! ನೋಡಿಯೆ ಬಿಡೋಣ — ಒಮ್ಮೆ ! (ಎಂದು ಮೆಟ್ಟಲುಗಳನ್ನು ಹತ್ತುವಾಗ ಬಲಬದಿಗೆ ನಾಗರಿಕ ಬಂದು ಕುತೂಹಲದೃಷ್ಟಿಯಿಂದ ನಿಂತದ್ದು ಕಾಣುವುದು. ಸಿಟ್ಟಿನಿಂದ) ಯಾಕಪ ! ಇನ್ನೂ ನನ್ನ ಬೆನ್ನು ಬಿಟ್ಟಿಲ್ಲ ನೀನು ?

ನಾಗರಕ: (ಅವನ ಮಾತಿಗೆ ಉತ್ತರವನ್ನು ಕೊಡದೆ, ರಹಸ್ಯಸೂಚಕ ದನಿಯಲ್ಲಿ) ಹೆಣ ಒಳಗೆ ಇವೆ ಏನು, ಕಾನ್‌ಸ್ಟೇಬಲ್ ಸಾಹೇಬ?

ಪೋ.ಕಾ.: ಹೆಣ! (ಅವಾಕ್ಕಾಗಿ ಒಂದು ನಿಮಿಷ ನಿಂತು) ನಿನ್ನ ತಲೀವಳ್ಗಿನ ಹೆಣ ಇನ್ನೂ ಹೋಗಿಲ್ಲೇನು?

ನಾಗರಕ: ಯಾರೋ ತರುಣ-ದಂಪತಿ ಗಿಡಕ್ಕೆ ಜೋತು ಬಿದ್ದು ಆತ್ಮಹತ್ಯಾ ಮಾಡಿ-ಕೊಂಡಿದ್ದಾರಂತೆ —

ಪೋ.ಕಾ.: ನಿನಗ ಸುದ್ದಿ ಕೊಡದೆ ಯಾರೂ ಸಾಯೋ ಹಾಂಗ ಕಾಣೋದಿಲ್ಲ.

ನಾಗರಕ: (ತನ್ನ ಮಾತನ್ನೆ ಮುಂದರಿಸುತ್ತ) ಅಲ್ಲಿ ಗಿಡಕ್ಕೆ ನೋಡಿ ಬಂದೆ, ಒಂದೂ ಹೆಣ ಇಲ್ಲ, ಅದಕ್ಕ ಕೇಳಿದೆ, ಒಳಗೆ ಇವೆ ಏನೋ ಅಂತ.

ಪೋ.ಕಾ.: (ಮೆಟ್ಟಿಲಿನಿಂದಿಳಿದು, ಅವನ ಹತ್ತಿರ ಬಂದು, ಅವನನ್ನು ಎದುರಿಸಿ) ಇಲ್ಲಿ ನೋಡು; ನಡುರಾತ್ರಿ ಆಯ್ತು; ನಾನು ಪೋಲೀಸ್, ನನ್ನ ಡ್ಯೂಟಿ, ನಾನು ರಾತ್ರಿ ತಿರುಗಾಡ್ತೀನಿ. ನೀನು ಸುಮ್ಮನೆ ಹೋಗಿ ಮಲಗಿಕೊಳ್ಳಲಿಲ್ಲ ಅಂದ್ರ ಖರೇನೇ ಒಂದು ಹೆಣ ಬೀಳ್ತದ, ಅದು ನಿನ್ನದು .. ಏನಂತೀ?

ನಾಗರಕ: ಯಾಕರೀ? ಪೋಲೀಸ ಅಂತ ತಿಳಿದು ಹೆದರಿಸ್ತೀರೇನು ನನ್ನ?

ಪೋ.ಕಾ.: (ಎರಡೂ ಕೈಗಳನ್ನು ಚಪ್ ಎನ್ನುವಂತೆ ಮುಗಿದು) ಹೆದರಿಸೋದಿಲ್ಲ, ಮಹಾರಾಯಾ, ಕೈಮುಗೀತೀನಿ; ಇನ್ನಾದರೂ ಹೋಗ್ತಾಬ್ರಿ?

ನಾಗರಕ: ಯಾಕ? ನಾ ನಿಂತರೆ ನಿಮ್ಮದೇನು ಹೋಗ್ತದೆ?

ಪೋ.ಕಾ.: (ತಾಳ್ಮೆ ತಪ್ಪುತ್ತಲಿದೆ) ನಾ "ಹೋಗು" ಅಂತ ಹೇಳಿದಾಗ ಹೋದರೆ ನಿನ್ದೇನು ಹೋಗ್ತದೆ?

ನಾಗರಕ: (ಹೆಮ್ಮೆಯ ದನಿಯಲ್ಲಿ) ನನ್ನ ನಾಗರಕ ಹಕ್ಕಿಗೆ ಬಾಧಾ ಬರ್ತದೆ.

ಪೋ.ಕಾ.: (ತಿಳಿಯದೆ) ಯಾವುದಕ್ಕೆ ಏನು ಬರ್ತದೆ?

ನಾಗರಕ: (ತಿಳುಹಿಸಿ ಹೇಳುವವನಂತೆ) ನನ್ನ ನಾಗರಕ ಹಕ್ಕಿಗೆ —

ಪೋ.ಕಾ.: (ನಡುವೆಯೆ) ಅದನ್ನ ಯಾಕೆ ಕಟ್ಟಿಕೊಂಡು ಬಂದೆ ರಾತ್ರಿ ನಿನ್ಜೋಡಿ?

ನಾಗರಕ: (ಅವನ ಮಾತನ್ನು ಗಮನಿಸದೆ, ಮೊದಲಿನಂತೆ) ಬಾಧಾ ಬರ್ತದ, ಬಾಧಾ.

ಪೋ.ಕಾ.: ಅಂದ್ರೆ ಹೋದಲ್ಲಿ ಹೆಣ ಹುಡುಕಿ ತೆಗೆಯೋದು ನಿನ್ನ — ಅದು ಯಾವುದೊ? — ಹಕ್ಕು ಅನ್ನು.

ನಾಗರಕ: ಅದು ನನ್ನ ಸಾಹಿತ್ಯ.

ಪೋ.ಕಾ.: (ಬೆರಗಾದವನಂತೆ) ಇದೇನ್ ತಂದೆ ಹೊಸ ಸರಕು?

ನಾಗರಕ: ನನ್ನ ಸಾಹಿತ್ಯ ಅಂದೆ. ಅಂದ್ರೆ ಅದೊಂದು ಭಾವನಾಪ್ರಧಾನ ಸರಕು.

ಪೋ.ಕಾ.: (ಸಂತಯಿಸುವವನಂತೆ) ನನ್ನ ಮಾತು ಕೇಳು. ನಿನಗೆ ನಿದ್ದೆ ಜೋರಾಗಿ ಬರ್ತಾ ಇದೆ, ನಾಲಗೆ ಏನೇನೊ ಬಡಬಡಿಸ್ತದೆ.

ನಾಗರಕ: (ಕನಿಕರ ತೋರಿಸುವವನಂತೆ) ಅಯ್ಯೋ! ನಿಮ್ಗೇನು ತಿಳೀಬೇಕು ಆ ರಸ-

ಮಯ ಪ್ರಪಂಚ. ಹೆಂಡತಿಯನ್ನು ಪ್ರೀತಿಸುವ ಗಂಡ ಸಂಶಯದಿಂದ ಆಕೆಯ ಕೊಲೆ ಮಾಡಿದರೆ, ಗಂಡನನ್ನು ಅಸಹ್ಯವಾಗಿ ನೋಡುವ ಹೆಂಡತಿ ಅವನನ್ನು ಕೊಂದರೆ, ಪರಸ್ಪರ ಪ್ರೀತಿಸುವ ತರುಣ-ದಂಪತಿಗಳು ಪರಸ್ಪರ ತೋಳ್ಸೆರೆಯಲ್ಲಿ ಆತ್ಮಹತ್ಯೆ ಮಾಡಿದರೆ —

ಪೋ.ಕಾ. : ಎಲ್ಲಿ ಇದನ್ನೆಲಾ ಮಾಡ್ತಾರ ಅಲ್ಲಿಗೇ ಹೋಗು, ಮಹಾರಾಯಾ. ಇಲ್ಲಿ —

ನಾಗರಕ : ಹಾಗೆ ನಡೆಯುವುದು ಸಾಹಿತ್ಯದಲ್ಲಿ. ಅದಕ್ಕೇ ಸಾಹಿತ್ಯ ರಸಮಯವಾಗಿದೆ. ಜೀವನಾನೂ ರಸಮಯ ಆಗಬೇಕಾದರೆ ಜೀವನದಲ್ಲೂ ಹಾಗೇ ಮಾಡಬೇಕು.

ಪೋ.ಕಾ. : (ಅಣಕ-ದನಿಯಲ್ಲಿ) ಹ್ಯಾಗೆ ಮಾಡೀಯಪ್ಪ ? ನಾವು ಪೋಲೀಸರು ಇರೋದು ಯಾಕೆ ?

ನಾಗರಕ : (ಹೆಮ್ಮೆಯ ನಗೆಯಿಂದ) ಅದಕ್ಕೇ ನಿಮಗೆ ಪಾಠ ಕಲಿಸ್ತಾ ಇದ್ದೀನಿ.

ಪೋ.ಕಾ. : ಏನಂದಿ ? (ಬಾಗಿಲು ಒಮ್ಮೆಲೆ ತೆರೆದುದಕ್ಕೆ ತಡೆದು ಆ ಕಡೆ ನೋಡುವನು. ಅದೇ ಸಮಯವನ್ನು ಸಾಧಿಸಿ ನಾಗರಕನು ಜಾರುವನು.)

[ ಬಾಗಿಲಿನಿಂದ ಮೂವ್ವರೂ ವ್ಯಕ್ತಿಗಳು ಬರುವರು. ಪೋಲೀಸ್ ಕಾನ್‌ಸ್ಟೇಬಲ್‌ನನ್ನು ನೋಡಿ ಚಕಿತರಾಗುವರು.]

೩ನೆ ವ್ಯಕ್ತಿ : ಇದೇನು ? ಸಿಪಾಯಿಸಾಹೇಬರೂ ನಾಟಕಾ ನಡೆಸ್ಯಾರೇನು ತಮ್ಮಷ್ಟಕ್ಕ ತಾವೇ ಮಾತಾಡ್ತಾ ?

ಪೋ.ಕಾ. : ನನ್ನಷ್ಟಕ್ಕ ನಾನೇ ಯಾಕ ? ಕಾಣೋದಿಲ್ಲೇನು ಇವ — (ಎಂದು ಮುಖ ತಿರುಗಿಸಿ) ಎಲ ! ಎಲ್ಲಿ ಹೋದ ಇವ ?

೨ನೆ ವ್ಯಕ್ತಿ : ಯಾರು ?

ಪೋ.ಕಾ. : ಅವನೇ. ಅವನ್ದೇನೊ ಹಕ್ಕು ಅಂತ. ಅದನ್ನ ನಡಿಸಲಿಕ್ಕೆ ಬಂದಿದ್ನಂತ. ಜಗತ್ತಿನೊಳಗೆ ಒಬ್ಬರೊಬ್ಬರನ್ನ ಪ್ರೀತಿಸಿ ಕೊಂದರೇನೇ ಜೀವನ ರಸಮಯ ಅಂತ —

೩ನೆ ವ್ಯಕ್ತಿ : (ನಗೆಯಿಂದ) ಸಿಪಾಯಿಸಾಹೇಬ್ರ, ಹಾಂಗ ಯಾರಾದ್ರೂ ಮಾತಾಡ್ತಾರೇನ್ರಿ ? ಅದು ನಿಮ್ಮ ಮನಸ್ಸಿನೊಳಗಿನ ವಿಚಾರ.

೧ನೆ ವ್ಯಕ್ತಿ : ಬಲವಾಗಿ ಬಿಗಿದು ಹತ್ತಿಕ್ಕಿದ ಸುಪ್ತಭಾವನಾ.

ಪೋ.ಕಾ. : ತಡೀರಿ, ತಡೀರಿ, ತಡೀರಿ ! ನೀವು ನಾಟಕಾ ಬರೆಯುವವರು, ನೀವು ನಾಟಕಾ ಮಾಡಿಸುವವರು ಅಂತ ಹೇಳಿದಿರಿ. ಅದು ನಿಜ ಏನು ?

೩ನೆ ವ್ಯಕ್ತಿ : ಆ ಪ್ರಶ್ನೆ ಯಾಕ ಈಗ ?

ಪೋ.ಕಾ. : (೧ನೆ ವ್ಯಕ್ತಿಗೆ) ಈ ಮನೆ ನಿಮ್ಮದು ಅಂದಿರಲ್ಲ ?

೨ನೆ ವ್ಯಕ್ತಿ : ಅವರದೆ.

ಪೋ.ಕಾ. : ಮನೀವಳಗ ಎಷ್ಟು ಜನ ಇದ್ದಾರ ?

೩ನೆ ವ್ಯಕ್ತಿ : ಅವರೊಬ್ಬರೆ.

೧ನೆ ವ್ಯಕ್ತಿ : ನಿಮಗೇನಾದ್ರೂ ಪ್ರಶ್ನ ಕೇಳೋದಿದ್ದರೆ ಮೊದಲು warrant ತಕ್ಕೊಂಡು ಬಂದು, charge ಯಾವುದು ಅಂತ ಹೇಳಿ—

ಪೋ.ಕಾ. : (ನಡುವೆಯೆ) ಅದ್ಯಾರಿಗೆ ಬೇಕಾಗಿದೆ? ನೀವು ನಿಜವಾಗಿ ಮನುಷ್ಯರೊ, ಏನು ಊರ ಹೊರಗಿನ ಮನೀವಳಗಿನ ಭೂತಗಳೊ — ನೋಡ್ಬೇಕಾಗಿತ್ತು. ಊಶ್ (ಎಂದು ಶಿರಸ್ತ್ರಾಣವನ್ನೆತ್ತಿ ತಲೆಯ ಬೆವರನ್ನೊರೆಸಿಕೊಳ್ಳುತ್ತ ಹೋಗುವನು.)

[ ಅವನು ಹೋದುದನ್ನು ನೋಡಿ ಮೂವ್ವರೂ ನಗುತ್ತ ಮೆಟ್ಟಿಲುಗಳನ್ನು ಇಳಿಯುವರು.]

೨ನೆ ವ್ಯಕ್ತಿ : (೧ನೆ ವ್ಯಕ್ತಿಗೆ) ಅಂದ್ರೆ .... ಎಂಥಾದ್ದೆ ಆಗಲಿ ನೀವು ನಮಗೊಂದು ನಾಟಕಾ ಬರೆದುಕೊಡ್ತೀರಿ ಅಂತ ತಿಳಿದುಕೊಳ್ಳಲಿಕ್ಕೆ ಅಡ್ಡಿ ಇಲ್ಲ ಅನ್ನೋಣ?

೩ನೆ ವ್ಯಕ್ತಿ : ಮುಖ್ಯ, ನಮಗ ನಿಮ್ಹೆಸರಿನಿಂದ ಒಂದು ನಾಟಕ ಬೇಕು.

೧ನೆ ವ್ಯಕ್ತಿ : ನೀವೇ ಬರೆದು ನನ್ಹೆಸರನ್ನ ಹಾಕಿಬಿಡಿರಲ್ಲ ?

೩ನೆ ವ್ಯಕ್ತಿ : ( ಇದೂ ಒಂದು ಹಾಸ್ಯದ ಚಟಾಕಿ ಎಂಬಂತೆ ನಕ್ಕು ) ಹಹ ! ಹಹಹ ! ಜನ ಏನಂದಾರು ನಮಗ ? ಹಹ !

೧ನೆ ವ್ಯಕ್ತಿ : ನನ್ಗೂ ಅದೇ ವಿಚಾರ. (ಮಾತನಾಡುತ್ತ ಮೂವ್ವರೂ ಸಾವಕಾಶವಾಗಿ ರಂಗ-ಸ್ಥಲದ–ಪ್ರೇಕ್ಷಕರ–ಬಲಬದಿಯ ಮುಂತುದಿಯ ಕಡೆ ನಡೆದಿದ್ದಾರೆ.) ನನ್ಗೂ ಅದೇ ವಿಚಾರ. ಜನ ಏನಾದ್ರೂ ಅನ್ನಬೇಕು ಅಂತ. ಆದ್ರೆ ಯಾರು ಏನು ಅಂತಾರ? ಏನು ಅನ್ನಬಲ್ಲರು ? ಏನನ್ನೂ ಅನ್ನಬಾರದು ಅಂತ ಪೌರಾಣಿಕ ನಾಟಕ ನೋಡ್ತಾರ ; ಯಾರಿಗೂ ಅನ್ನಬಾರದು ಅಂತ ಐತಿಹಾಸಿಕ ನಾಟಕಾ ಬೇಡ್ತಾರ ; ಏನೂ ಅನ್ನೋಹಾಗಿಲ್ಲ ಅಂತ ಸಾಮಾಜಿಕ ನಾಟಕ ಬೇಕು ಅಂತಾರ. ನಿಮಗೊಂದ್ಮಾತನ್ನ ಗಟ್ಟಿಮುಟ್ಟಾಗಿ ಹೇಳ್ತೀನಿ — ( ಈಗ ಉಳಿದ ಇಬ್ಬರು ಪ್ರೇಕ್ಷಾಗೃಹಕ್ಕೆ ಕಾಣದಾಗಿದ್ದಾರೆ.) ನಮ್ಮ ಸಮಾಜದೊಳಗೆ — ( ಅವರಿಬ್ಬರೂ ಮರೆಯಾದ ಬದಿಯನ್ನೆ ದಿಟ್ಟಿಸುತ್ತಾ ) ನಮ್ಮ ಸಮಾಜದೊಳಗೆ – ( ಮುಂದಿನ ಮಾತು ನಡೆವಾಗ ಬಾಗಿಲನ್ನು ತೆರೆದು ಒಬ್ಬೊಬ್ಬರಾಗಿ ಮೊದಲ ಕಂಡ ಮುಖದ ವ್ಯಕ್ತಿ, ಡ್ರೈವರ್, ಯುವತಿ, ಗಂಡ, ಹೆಂಡತಿ ನಾಲ್ವರೂ ಹೊರಬಿದ್ದು ಸದ್ದಿಲ್ಲದೆ ರಂಗಸ್ಥಲದ — ಪ್ರೇಕ್ಷಕರ ಬಲಬದಿಯ — ಹಿಂತುದಿಯಿಂದ ಮಾಯವಾಗುವರು.) ನಮ್ಮ ಸಮಾಜ ದೊಳಗೆ ಎಲ್ಲಿಯ ವರೆಗೆ ಜೀವನದಲ್ಲಿ ಆಸಕ್ತಿ ಇದ್ದ ಸಂನಿವೇಶ ಇಲ್ಲವೆ ವ್ಯಕ್ತಿ ಹುಟ್ಟುವುದಿಲ್ಲವೊ ಅಲ್ಲಿಯ ವರೆಗೆ ನಾನು ನಾಟಕಗಳನ್ನು ಬರೆಯುವುದಿಲ್ಲ, ಯಾರೂ ನಾಟಕಗಳನ್ನು ಬರೆಯಲಾರರು. ಕತ್ತಲೆ, ಬೆಳಕು — ಜಗತ್ತಿನ ಮೂಲತತ್ತ್ವ. ಅವೆರಡರ ಘರ್ಷಣೆ ಜಗತ್ತಿನ ಜೀವಾಳ. ಅಂತಹ ವ್ಯಕ್ತಿಗಳಿಲ್ಲದಾಗ ನಾಟಕಕ್ಕೆ ಪಾತ್ರ ದೊರಕೋದು ಹೇಗೆ? ... ... ಎಲ ! ನೆನ-

ಪಾಯ್ತು— (ಎಂದು ಮನೆಯ ಕಡೆ ಮರಳುವನು.)

೩ನೆ ವ್ಯಕ್ತಿ :
೩ನೆ ವ್ಯಕ್ತಿ : } ದನಿ : ಯಾಕ ? ಮತ್ತೆ ಯಾಕ ಹೊರಟಿರಿ, ನಂ ಕೂಡ ಬರ್‍ತೀನಿ ಅಂದವರು ?

೧ನೆ ವ್ಯಕ್ತಿ : ಬಾಗಿಲಾ ಮುಚ್ಕೋದನ್ನ ಮರೆತೆ. ಬಂದೆ.

[ ಮರಳಿ ಬಂದು ಒಳಗೆ ಹೋಗಿ ಬೀಗವನ್ನು ತಂದು ಬಾಗಿಲನ್ನು ಮುಚ್ಚಿಕೊಂಡು ಬೀಗ ಹಾಕಿ, ಎಳೆದು ನೋಡಿ, ಮೆಟ್ಟಿಲುಗಳನ್ನಿಳಿದು, ಸುತ್ತಲೂ ನೋಡಿ, ಎಲ್ಲ ಭದ್ರವಾಗಿದೆ ಎಂಬ ಸಮಾಧಾನದಿಂದ ಅವರಿಬ್ಬರ ಹಿಂದೆ ಹೋಗುವನು. ]

— ತೆರೆ —

ಮೂರನೆಯ ಅಂಕ ಮುಗಿದುದು

**ನಾಟಕ ಮುಗಿದುದು**

# ಹಿನ್ನೆಲೆ

ಈ ನಾಟಕವನ್ನು ಓದಿದವರಿಗೆ ಒಂದು ಸಂಗತಿ ಲಕ್ಷ್ಯಕ್ಕೆ ಬಂದಿರಬಹುದು. ಇದರಲ್ಲಿ ಯಾವ ಪಾತ್ರಕ್ಕೂ ಅಂಕಿತನಾಮಧೇಯವಿಲ್ಲ; ಅದಕಾಗಿ ಪಾತ್ರಗಳ ಪಟ್ಟಿಯನ್ನೂ ಕೊಟ್ಟಿಲ್ಲ.

ನಮ್ಮ ಜೀವನದೆದುರು ಕನ್ನಡಿಯನ್ನು ಹಿಡಿದು ಅದರ ಗುಣ-ದೋಷಗಳನ್ನು ಸೂಕ್ಷ್ಮವಾಗಿ ನೋಡುವ ಧೈರ್ಯ, ಪ್ರಾಮಾಣಿಕತೆ ಇಲ್ಲದಿದ್ದಾಗ ಆ ಗುಣಗಳನ್ನುಳ್ಳ ಲೇಖಕನಿಗೆ ಇದೇ ಸರಿಯಾದ ದಾರಿ ಎಂದು ಹೇಳಬಹುದಲ್ಲ ?

ಪ್ರಜಾಪ್ರಭುತ್ವ, ಸರಿಸಮಾನತೆ, ಜಾತ್ಯತೀತತೆ ಮುಂತಾದ ಹೊಸ ಶಬ್ದಗಳನ್ನು ಬಾಯಿಯಿಂದ ಉಚ್ಚರಿಸುವಾಗ ಬುದ್ಧಿಗೆ ಅವುಗಳ ಅರ್ಥ ಹೊಳೆಯದಿದ್ದಲ್ಲಿ, ಹೃದಯದಲ್ಲಿ ಅವುಗಳ ಪ್ರತಿಧ್ವನಿ ಮೂಡದಿದ್ದಲ್ಲಿ ಆ ಸಂಸ್ಕೃತಿ ಮತ್ತು ಆ ಸಾಹಿತ್ಯ ಇವು ಆತ್ಮವಂಚಕ ಮತ್ತು ಪರವಂಚಕ ಘಾತಕ ಶಕ್ತಿಗಳಾಗಬಹುದಲ್ಲವೆ ?

ಕತ್ತಲೆ, ಬೆಳಕು. ಈ ಪರಸ್ಪರ ವಿರೋಧ ಜೀವನದಲ್ಲಿದೆ ; ಈ ನಾಟಕದಲ್ಲಿ ಚಿತ್ರಿಸಲಾಗಿದೆ; ಪ್ರಯೋಗಿಸುವ ರಂಗಭೂಮಿಯಲ್ಲಿ ಹಿನ್ನೆಲೆಯ ಸಂನಿವೇಶವಾಗಿದೆ.

ಈ ಪಾತ್ರ ಇಂತಹ ವ್ಯಕ್ತಿ, ಇಂತಹ ಸಮಾಜದವ ಎಂದು ತಿಳಿದುಕೊಳ್ಳುವ "ಬುದ್ಧಿವಂತಿಕೆ"ಯನ್ನು ಯಾರಾದರೂ ತೋರಿಸಬಲ್ಲರಾದರೆ ಈ ನಾಟಕ ಸಾರ್ಥಕವಾಗಲಿಲ್ಲ ಎನ್ನುತ್ತೇನೆ.

ವಿಮರ್ಶಕರ ದೃಷ್ಟಿಯಿಂದ ಇನ್ನೊಂದು ಮಹತ್ತ್ವದ ಸಂಗತಿ ಎಂದರೆ ಈ ನಾಟಕವನ್ನು ಶುಕ್ರವಾರ ತಾ. ೨೩-೧-೧೯೫೯ರ ಸಾಯಂಕಾಲ ಏಳೂವರೆ ಗಂಟೆಗೆ ಬರೆಯಲು ಪ್ರಾರಂಭಿಸಿದೆ, ಮೊದಲ ಅಂಕವನ್ನು ಮುಗಿಸಿದೆ; ಮರುದಿನ, ಎರಡನೆಯ ಅಂಕವನ್ನು ಮುಗಿಸಿದೆ ; ಮೂರನೆಯ ದಿನ, ಎಂದರೆ ಭಾನುವಾರ ತಾ. ೨೫-೧-೧೯೫೯ರ ಸಾಯಂಕಾಲ ಕೊನೆಯ ಅಂಕವನ್ನು ಬರೆದು ರಾತ್ರಿ ೯-೪೫ ಗಂಟೆಗೆ ಮುಗಿಸಿದೆ.

ಇದಿಷ್ಟು ನಾಟಕಕ್ಕೆ ಹಿನ್ನೆಲೆ.

—ಶ್ರೀರಂಗ



ಬಿ. ಸಿ. ರಾಮಚಂದ್ರಶರ್ಮ



ಶಿವರಾಮ ಕಾರಂತ



ದಿ. ಮುಳಿಯ ತಿಮ್ಮಪ್ಪಯ್ಯ



ಸಮೇತನಹಳ್ಳಿ ರಾಮರಾಯ



ಪು. ತಿ. ನರಸಿಂಹಾಚಾರ್ಯ

ಪಾತ್ರಗಳು:

ನಾಯಕ
ನಾಯಕನ ಹೆಂಡತಿ (ತಾಯಿ)
ನಾಯಕನ ಮಗ
ನಾಯಕನ ಮಗಳು
ಪ್ರಧಾನ ಮಂತ್ರಿ
ಹೆಂಗಸು
ಸಭೆಯಲ್ಲಿ ಕಾಣುವ ಮೂರು ಜನ. ಮುದುಕಿ ಮತ್ತು ತರುಣ
ಬೆಸ್ತರ ಸಂಸಾರದ ಗಂಡ
ಹೆಂಡತಿ

ಜೊತೆಗೆ:

ಮುದುಕ

ನಾಟಕದಲ್ಲಿನ ಕಾರ್ಯ ಹೀಗೆ ಹಂಚಿದೆ:

ದೃಶ್ಯ ಒಂದು — ಬೆಳಿಗ್ಗೆ
ದೃಶ್ಯ ಎರಡು — ಮಧ್ಯಾಹ್ನ
ದೃಶ್ಯ ಮೂರು — ಸಂಜೆ
ದೃಶ್ಯ ನಾಲ್ಕು — ರಾತ್ರಿ.

ಆಡುವದಕ್ಕೆ ಬೇಕಾದ ಕಾಲ :

ಸುಮಾರು ಎರಡು ಗಂಟೆಗಳು

## ದೃಶ್ಯ ೧

[ ಒಂದು ಗುಡಿಸಿಲು. ಗುಡಿಸಿಲಿನ ಕಿಟಕಿಯ ಮೂಲಕ ಸೂರ್ಯನ ಬೆಳಕು ಒಳಕ್ಕೆ ಬರುತ್ತಿದೆ. ನೆಲದ ಮೇಲೆ ಚೊಕ್ಕಾಕವಾದ ಬೆಳ್ಳಿ ತಗಡು ಹಾಸಿದೆ. ಕಿಟಕಿಯ ಹೊರಗೆ ಮಾರು ದೂರದಲ್ಲಿ ಹೂವು ತುಂಬಿದ ಬಳ್ಳಿಯೊಂದು ಮೈಕುಲುಕಿಸುತ್ತಿದೆ. ಹೊರಗೆ ತೋಟದಲ್ಲಿ ಯಾರೋ ಕೆಲಸ ಮಾಡುತ್ತಿದ್ದಾರೆ. ಗುದ್ದಲಿಯ ಅಗತದ ಸದ್ದಿನ ಜೊತೆಗೆ ಬಿಂದಿಗೆಯಿಂದ ನೀರು ಸುರಿಯುತ್ತಿರುವ ಸದ್ದೂ ಕೇಳುತ್ತದೆ. ಆಗಾಗ ಗಂಡಸೊಬ್ಬನು ಕಿಟಕಿಯ ಒಂದು ಕಡೆಯಿಂದ ಇನ್ನೊಂದು ಕಡೆಗೆ ದಾಟಿ ಹೋಗುವುದೂ ಕಾಣುತ್ತದೆ.

ತುಂಬ ಸುಂದರವಾದ ಬೆಳಗು. ಕೆಲಸ ಮಾಡುತ್ತಿರುವವನು ಸಂತೋಷವಾಗಿರಬೇಕು. ಗುಡಿಸಿಲು ಹೆಚ್ಚುಕಡಿಮೆ ತೆರವು. ಒಂದು ಮೂಲೆಗೆ ಸಣ್ಣದೊಂದು ಮೇಜು. ಮೇಲೆ ಬಿಳಿಯ ಕಾಗದ, ಮಸಿಕುಡಿಕೆ. ಮೇಜಿನ ಹಿಂದೆ ಒಂದು ಸ್ಟೂಲು, ಹತ್ತಿರಕ್ಕೆ ಒಂದು ಬೆಂಚು. ನೆಲದ ಮೇಲೆ ಹಾಸಿರುವ ಚಾಪೆಯ ಮೇಲೊಂದು ಚರಕ.

ಚರಕವನ್ನು ಉಪಯೋಗಿಸುತ್ತ ಹೆಣ್ಣೊಂದು ಕುಳಿತಿದ್ದಾಳೆ. ಸುಮಾರು ಇಪ್ಪತ್ತರ ಪ್ರಾಯ. ಖಾದಿ ಸೀರೆಯನ್ನುಟ್ಟಿದ್ದಾಳೆ.

ಅವಳ ಹಾಡು ಗುಡಿಸಲನ್ನು ತುಂಬಿದೆ. ಹಾಡುತ್ತಿರುವುದು 'ವೈಷ್ಣವ ಜನತೋ' ಹಾಡು ಮುಗಿಯುವ ಹೊತ್ತಿಗೆ ಸುಮಾರು ಐವತ್ತರ ಹೆಂಗಸೊಬ್ಬಳು ಒಳಬಾಗಿಲೊಂದ-ರಿಂದ ಅಲ್ಲಿಗೆ ಬರುತ್ತಾಳೆ. ಅವಳುಟ್ಟಿರುವುದೂ ಖಾದಿ ಸೀರೆ. ಅವಳ ಕೈಯಲ್ಲಿ ತಟ್ಟೆ-ಯಿದೆ. ತಟ್ಟೆಯ ಮೇಲೆ ಚಪ್ಪಾತಿ. ಲೋಟದ ತುಂಬ ಹಾಲು. ತಂಬಿಗೆ ನೀರು.

ತನ್ನ ಮಗನು ಅಲ್ಲಿಲ್ಲದಿರುವದನ್ನು ನೋಡಿ ಕೂಗುತ್ತಾಳೆ : ]

ತಾಯಿ : ಮಗು, ಮಗು ... ...

ಗಂಡಸಿನ ಧ್ವನಿ : ( ಹೊರಗಿನಿಂದ ) ಬಂದೆ, ಅಮ್ಮ, ಬಂದೆ.

[ ಗಳಿಗೆಯಾದ ಮೇಲೆ ಅವನ ಮುಖ ಕಿಟಕಿಯಲ್ಲಿ ಕಾಣುತ್ತದೆ ]

ಬಂದೆ. ಒಂದೇ ನಿಮಿಷ.

[ ತಾಯಿ ತಟ್ಟೆಯನ್ನು ಮೇಜ ಮೇಲೆ ಇಡುತ್ತ ಮಗಳಿಗೆ ಹೇಳುತ್ತಾಳೆ. ]

ತಾಯಿ : ನೀನು ಅಲ್ಲೇ ಬಂದು ತಿನ್ನು, ತಾಯಿ.

ಮಗಳು : ಬೇಡಮ್ಮ
ನನಗೆ ಹಸಿವಿಲ್ಲ.
ತಂದೆ ಬಂದಾದ ಮೇಲೇ ಅವರ ಜೊತೆ ತಿಂದರಾಯ್ತು.

ತಾಯಿ : ಅವರು ಬರುವುದು ಇನ್ನು ಯಾವ ಕಾಲಕ್ಕೊ ಏನೊ.

[ ಮಗ ಒಳಗೆ ಬರುತ್ತಾನೆ. ಅವನಿಗೆ ಸುಮಾರು ಮೂವತ್ತರ ಪ್ರಾಯ. ಪಾಯಿ-ಜಾಮದ ಮೇಲೆ ಬನಿಯನ್ನು ಹಾಕಿದ್ದಾನೆ. ಹೆಗಲ ಮೇಲಿನ ಚೌಕದಿಂದ ಕೈಯನ್ನು ಒರೆಸಿಕೊಳ್ಳುತ್ತ ಮೇಜಿನ ಹತ್ತಿರ ಬರುತ್ತಾನೆ. ಬರುತ್ತ ಮಾತಾಡುತ್ತಾನೆ. ]

ಮಗ : ಬೆಳಗಾದ ಕೂಡಲೇ ಸೊರೆಹಾಲು, ಜೊತೆಗೆ ಚಪ್ಪಾತಿ, ಉಪ್ಪಿನಕಾಯಿ.
( ಲೊಟ್ಟೆ ಹೊಡೆಯುವನು )
ಇದ್ದರಿರಬೇಕಮ್ಮ ನಿನ್ನಂಥ ತಾಯಿ.
ತಾಯಿ : ನೋಡು, ಮಗು: ರೊಟ್ಟಿ ಬೆಂದಿದೆ ತಾನೆ. (ಮಗ ಆಗಲೇ ತಿನ್ನುತ್ತಿದ್ದಾನೆ)
ಮಗ : ನೀನು ಮಾಡಿದ ರೊಟ್ಟಿ ಕೇಳಬೇಕೇ ?
ತಾಯಿ : ಆರಿದ್ದರದನತ್ತಲಾಗೇ ಇಟ್ಟುಬಿಡು, ಮಗು.
ರೊಟ್ಟಿ ಆರಿದರಂತು ನಾರು ಕಟ್ಟಿಗೆ ಅನ್ನು.
ಹಲ್ಲು ಮುರಿದರೂ ಅದು ಜೇರಿ ಸವೆಯುವುದಿಲ್ಲ.
ಮಗ : ನೀನು ಮಾಡುವ ರೊಟ್ಟಿ ನಿನ್ನಂತೆ— ಬಲು ಮೃದು
ದುಡಿದುಡಿದು ನಿನ್ನ ಕೈ ಒರಟಾದರೇನಂತೆ ?
ನೀನು ತಟ್ಟುವ ರೊಟ್ಟಿ ನಿನ್ನಂತೆ.
ತುಂಬ ಮೃದು, ಅಮ್ಮ.
ಮಗಳು : ಸಾಕುಮಾಡೋ ಸಾಕುಮಾಡು.
ನೀನೊಬ್ಬ ಹೊಗಳುಭಟ್ಟ
ತಾಯಿ : ಬೆಳಗಾದ ಕೂಡಲೇ ಮಗನಿಂದ ಅಮ್ಮನಿಗೆ ಬಣ್ಣಬಣ್ಣದ ಮಾತು.
ಬೆಳೆದ ಮಗ ಕೊಡುವ ಉಡುಗೊರೆ ಮಾತು.
ಹೆತ್ತ ತಾಯಿಯ ಕಿವಿಗೆ ಪಂಚಾಮೃತ.
ಆದರೂ ನೀನು ಹೇಳಿದ್ದು ದಿಟ :
ಇವನೊಬ್ಬ ಹೊಗಳುಭಟ್ಟ.
ಮಗ : ( ಜೇಬಿನಿಂದ ಏನನ್ನೋ ಹೊರತೆಗೆಯುತ್ತ )
ಅಮ್ಮ , ನೋಡು ಇದು ಸಿಕ್ಕಿತು—
ನೆಲ ಅಗೆಯುವಾಗ,
ಮಗಳು : ಮೊಳೆಯಿರದ ಬುಗುರಿ. ಮೊಳೆ ಹೊಡೆದು ಆಡು.
ತಾಯಿ : ಯಾವ ಮಗು ಎಂದು ಕಳಕೊಂಡ ಬುಗುರಿಯೊ ಏನೊ.
ಸಿಕ್ಕದೇ ಹೋಯಿತಲ್ಲಾ ಎಂದು ತುಂಬ ಅತ್ತಿರಬೇಕು.
ಮಗಳು : ಮನೆಯವರು ಬೈದಿದ್ದರೂ ಆಶ್ಚರ್ಯವಿಲ್ಲ.
ಮಗ : ನಾನು ಆಡಲೆ ಇಲ್ಲ —
ಆಡಿದ್ದ ನೆನಪಿಲ್ಲ.
ತಾಯಿ : ಇಲ್ಲಪ್ಪ. ನೀನಾಡಲಿಲ್ಲ.
ಮಗ : ಎಳೆತನದ ಒಂದು ಒಂದೂ ಇಲ್ಲ :
ಬುಗುರಿ, ಚಿಣ್ಣೀದಾಂಡು, ಪಟ, ಗೋಲಿ, ಮರಕೋತಿ —
ಒಂದು ಒಂದೂ ಇಲ್ಲ.

ಕದ್ದ ಸೇರಿಳೆ, ಮಾವು, ಸೀಬೆ, ನೆಲ್ಲೀಕಾಯಿ.
ಮೇಷ್ಟ್ರ ಚಿತ್ತದ ಏಟು, ಸ್ನೇಹಿತರ ಜೊತೆ ಜಗಳ, ಬೈಗುಳ —
ಒಂದು ಒಂದೂ ಇಲ್ಲ.
ಏನೊಂದು ಇಲ್ಲದೇ ಬೆಳೆದ ಧಾಂಡಿಗ ನಾನು.

ಮಗಳು : ಹುಟ್ಟು. ಹುಟ್ಟಿದ ಕ್ಷಣವೆ ಬೆಟ್ಟ ಹೊತ್ತೆವು ನಾವು.

ಮಗ : ಬೆಟ್ಟ ಹೊತ್ತೇ ಹುಟ್ಟಿದೆವು ನಾವು.

ಮಗಳು : ಮಿಕ್ಕ ಹುಡುಗಿಯರಂತೆ ನಾನು ಎಂದೂ ಕೂಡ ಮೆರೆಯಲಿಲ್ಲ.
ಮೈಗೆ ಕಾಮನಬಿಲ್ಲ ತೊಡಲಿಲ್ಲ. ಒಮ್ಮೆಯೂ ಬೀಗಲಿಲ್ಲ.
ನಾನಾಯ್ತು, ಈ ಒರಟು ಸೀರೆಯಾಯ್ತು.
ನಕ್ಕಿ ಕೆಲಸದ ಚಪ್ಪಲಿಯ ಮೆಟ್ಟಿ ಜರತಾರಿ ಚಿಮ್ಮಲಿಲ್ಲ.
ಮುಖಕೆ ಪೌಡರ ಬಳಿದು, ಮುಡಿಗೆ ಮಲ್ಲಿಗೆ ಮುಡಿದು
ಜೊತೆಯುವರ ಕೂಡ ಆರತಿ ಹಾಡ ಹಾಡಲಿಲ್ಲ.
ಒಂದು ಒಂದೂ ಇಲ್ಲ,
ನಾನಾಯ್ತು. ಈ ಬೂದು ಸೀರೆಯಾಯ್ತು.
ಮೊದಲ ಗೊಂಬೆಯೆ ತಕಲಿ, ಆ ಮೇಲೆ ಈ ಚರಕ
ಅಣ್ಣ, ಅಲ್ಲಿಗೆ ನನ್ನ ಕತೆಯು ಮುಕ್ತಾಯವಾಯ್ತು.

ತಾಯಿ : ಅಪ್ಪ, ಅಮ್ಮ,
ಏನು ಮಾತಿದು ? ಸಾಕು.
ಎಲ್ಲರಂತಲ್ಲಪ್ಪ ನೀವು ಬದುಕಿದ್ದು, ಬದುಕುವುದು.
ಹುಟ್ಟಿಂದಿನಿಂದ ಇಲ್ಲಿಯವರೆಗು ಜೈಲುವಾಸ.
ಈಗ ತಾನೇ ನಮಗೆ ಉಸಿರು ಬಿಡಲವಕಾಶ ?
ದಾರಿ ಕೊನೆ ಕಂಡಾಗ ಹೀಗೆ ಗೊಣಗುವುದು ಜಾಣರ ರೀತಿಯಲ್ಲ.
(ಮಗನಿಗೆ)
ಮಗು, ನಿನಗೇ ಗೊತ್ತು :
ನಿನಗೆ ಹದಿನಾರು ತುಂಬುವವರೆಗು ನೆಲೆಯಿಲ್ಲದಲೆತವಾಯ್ತು.
ನಮ್ಮದೆನುವಂಥ ನೆಲವೆ, ನೆಲೆಯೆ ?

ಮಗ : ನನಗೆ ಹದಿನಾರು ತುಂಬವವರೆಗು ಊರೂರು ಅಲೆದಾಯ್ತು.
ಆಮೇಲೆ ಜೈಲು : ಹಕ್ಕಿಯ ರೆಕ್ಕೆ ಸುಟ್ಟು ಕಂಬಿಯರಮನೆವಾಸ
ಒಳ್ಳೆಯದೆ ಆಯಿತೆನ್ನು.

ಮಗಳು : ಒಳ್ಳೆಯದೆ ?
ಹೇಗಣ್ಣ ?

ಮಗ : ( ನಗುತ್ತ ) ಗಿಡ ನೆಡುವದನ್ನು ಕಲಿತೆ.

ಗಿಡದ ಪಾತಿಗೆ ನೀರು ಹಾಕುವುದು ಬಂತು.

ಈಗ ಬೇರೇ ಏನು ಸಾಧ್ಯವಿರದಿದ್ದರೂ ತೋಟಗಾರನ ಕೆಲಸ ಖಾತರಿಯೊ.

ತಾಯಿ : ಗಿಡ ನೆಡುವದನ್ನು ಕಲಿತೆ.

ಗಿಡದ ಪಾತಿಗೆ ನೀರು ಹಾಕುವುದು ಬಂತು.

ಗಿಡ ಹಣ್ಣು ಕೊಡುವವರೆಗೂ ಕಾಯುವುದು ಮಾತ್ರ ಕಲಿಯಲಿಲ್ಲ.

ನೀನು ಪಾತಿಗೆ ನೀರು ಸುರಿದೆ. ಅಲ್ಲವೆ, ಮಗು ?

ನಿಮ್ಮ ತಂದೆಯು ಆಗ ಸುರಿದದ್ದು ನೀರಲ್ಲ, ಮೈಯ ರಕ್ತ.

ಎಂದೆ ನೂರಾರು ತೋಟದ ತುಂಬ ನಗುವ ಹೂ, ಬಣ್ಣ ಬಣ್ಣದ ಹಣ್ಣು,

ಹಕ್ಕಿ ಹಾಡು.

ಮಗ : ತಂದೆಯೊಬ್ಬರೆ ಏನು ದುಡಿದಿದ್ದು ?

ನಾನು ಮಾಡಿದ ತ್ಯಾಗ ಯಾರ ಗಮನಕ್ಕು ಬರುವುದೆ ಇಲ್ಲ.

ಮಗಳು : ನಾನು ಮಾಡಿದ ಸೇವೆ ಕವಿಗೆ ವಸ್ತು.

ಅಂಥ ಕವಿ ಇಲ್ಲವೇನೋ.

ತಾಯಿ : ನೀವು ಮಾಡಿದ್ದು ದಿಟ.

ಪಡೆದು ಬಂದಿರಬೇಕು — ನಾನು ನಿಮ್ಮಂಥ ಮಕ್ಕಳ ತಾಯಿಯಾದೆ.

ಮಗ : ಎಷ್ಟು ಎಷ್ಟೊಂದನ್ನು ಬಿಟ್ಟುಕೊಟ್ಟೆ !

ತಾಯಿ : ಯಾರಿಗಾಗಿ ?

ಮಗ : ನಿನ್ನ ಮೇಲಿನ ಪ್ರೀತಿಗಾಗಿ.

ತಾಯಿ : ನಾನೆಷ್ಟು ಬಿಟ್ಟುಕೊಟ್ಟೇ ಹೇಳು ತಂದೆಗಾಗಿ !

ತಂದೆ ತಾನೇ ಎಷ್ಟು ಎಷ್ಟೊಂದು ಮಾಡಿದರು ನಾಡಿಗಾಗಿ !

ಆದ್ದರಿಂದಲೆ ಬಂತು ದೇಶಕ್ಕೆ ಬಿಡುಗಡೆ.

ಮಗ : ದೇಶಕ್ಕೆ ಬಂತು ಬಿಡುಗಡೆ, ಅಮ್ಮ

ನಮಗೆ ಬರಲಿಲ್ಲ........

ಮಗಳು : ಅರೆಹೊಟ್ಟೆಯಿಂದ ಬರಲಿಲ್ಲ ಬಿಡುಗಡೆ

ವನವಾಸದಿಂದ ಬರಲಿಲ್ಲ ಬಿಡುಗಡೆ.

ಒರಟು ಪತ್ತಲದಿಂದ ನನಗಿಲ್ಲ ಬಿಡುಗಡೆ.

ಮಗ : ನಾನು ತಂದೆಯ ಹಾಗೆ ಬಿಡುಗಡೆಗೆ ದುಡಿದೆ.

ಆದ್ದರಿಂದಲೆ ನನ್ನ ಪ್ರಶ್ನೆ.

ತಾಯಿ : ಹೋಗಿ ಅವರನ್ನೆ ಕೇಳು.

ಮಗ : ನಿನಗೆ ಗೊತ್ತು ಅದು ಸಾಧ್ಯವಿಲ್ಲ.

ತಂದೆ ಮಕ್ಕಳ ನಡುವೆ ಇರುವ ಸಂಬಂಧವೆಂಥಾದ್ದು ನಿನಗೆ ಗೊತ್ತು.

ತಾಯಿ : ನಿಮಗವರು ತಂದೆ.

ನೀವವರ ಮಕ್ಕಳು.

ಮಗ : ಅವರು ಎಂದಾದರೂ ನನ್ನನೆತ್ತಿಕೊಂಡಿದ್ದುಂಟೆ ?

ತೊಡೆಯ ಮೇಲಿಟ್ಟು ಮುದ್ದಾಡಿದರೆ, ಅಮ್ಮ ?

ಕೂಸುಮರಿ ಮಾಡಿದರೆ ?

ಸಿಟ್ಟಾದರೇ ? ಏಟು ಕೊಟ್ಟರೆ ಹೇಳು.

ತಾಯಿ : ಎಲ್ಲ ಗಂಡಸರಂತೆ ಅವರಲ್ಲ.

ಮಗ : ಎಲ್ಲರಂತಲ್ಲ — ಅದೆ ಕೊರಗು.

ಅವರು ಮಕ್ಕಳ ತಂದೆಯಲ್ಲಿ.

ತಾಯಿ : ಸಾಕು, ಮಗು, ಮಾತು ಹದ ಮೀರಿತು.

ಒಪ್ಪು, ಬಿಡು, ಅವರು ದೇವರು. ಅವರು ಸಾಮಾನ್ಯರಲ್ಲ.

ಮಗ : ಇರಬಹುದು.

ದೇವರಲ್ಲವೆ ಅಲ್ಲ ಅನ್ನಲಾರೆ.

ಇಷ್ಟು ಮಾತ್ರ ದಿಟವೊ :

ಎಂದು ಎಂದೂ ಕೂಡ ಮನೆಗೆ ಬಂದದ್ದೆ ಮಗುವನ್ನೆತ್ತಿಕೊಳ್ಳಲಿಲ್ಲ,
ಮುದ್ದಾಡಲಿಲ್ಲ.

ತಾಯಿ : ನೀನು ಅಷ್ಟೇ. ಮುತ್ತು ಬೇಡಲಿಲ್ಲ.

ಮಗಳು : ನಕ್ಕಾರು ಯಾರಾದರೂ.

ಮಗು ಮುತ್ತು ಬೇಡಬೇಕೇ ?

ಮಗ : ತಂದೆ ನನಗೆಂದು ತಂದೆಯ ಪ್ರೀತಿ ತೋರಲಿಲ್ಲ.

ಗುರುವಾದರೇ ಹೊರತು ತಂದೆಯಲ್ಲ.

ಮುಂದಾಳುವಾದರು — ಗೆಳೆಯನಲ್ಲ.

ತಾಯಿ : ಅವರಿಗಿದ್ದುದೊಂದೇ ಕನಸು : ಬಿಡುಗಡೆ.

ನುಡಿದುದೊಂದೇ ಒಂದು ಮಂತ್ರ : ಬಿಡುಗಡೆ.

ಋಷಿಗೆ ಕೈ ಹಿಡಿದವಳ ಚಿಂತೆಯೆ ?

ಅವನು ಮಕ್ಕಳನೆತ್ತಿ ಮುದ್ದಾಡಲಿಲ್ಲಾ ಎಂದು ಕೊರಗುವುದು ಸರಿಯೇ ?

ಮಗಳು : ಅವರ ಪಾಲಿಗೆ ನೀನು ಮಡದಿಯಲ್ಲ.

ತಾಯಿ : ನೀನು ಹುಟ್ಟುವವರೆಗು ಕೈಹಿಡಿದ ಹೆಂಡತಿ.

ಆಮೇಲೆ ಜೊತೆಯ ಸತ್ಯಾಗ್ರಹಿಯಾದೆ.

ಮಗಳು : ನಾನು ಹುಟ್ಟಿದೆ.

ಆಮೇಲೆ ಹೀಗೆ.

ತಾಯಿ : ನೀನು ಹುಟ್ಟುವವರಗೆ ಗಂಡ-ಹೆಂಡಿರ ಬಾಳು.

ಆಗ ಕರೆ ಬಂತು : ಬಾಳಿಗೆ ಬಂತು ಹೊಸತೊಂದು ನಕ್ಷತ್ರ.

ನರನರದ ಮೂಲೆಯನ್ನೂ ಹುಡುಕಿ ಕಾಡಿದ ಬಯಕೆ.
ಬಾಳಕತೆ ಬದಲಾಯಿತು.

ಮಗಳು : ಅಂಥಾದ್ದು ಏನಾಯ್ತು ?

ತಾಯಿ : ನೋವು ತಲೆ ತೋರಿದ್ದಕ್ಕು, ನೀನು ಹುಟ್ಟಿದ್ದಕ್ಕು ಹೆಚ್ಚು ಹೊತ್ತಿರಲಿಲ್ಲ.
ಹತ್ತಿರವೆ ಆಸ್ಪತ್ರೆ, ನಾನು ಹೋದೆ.
ಗೇಟಿ ಮುಂದೇ ಇತ್ತು ಬೋರ್ಡು :
ಯೂರೋಪಿಯನ್ನರಿಗೆ ಮಾತ್ರ ಅವಕಾಶ ಎಂದಿತ್ತು.
ಆದರೂ ಒಳಗೆ ಹೋದೆ.
ನಿಮ್ಮ ತಂದೆಯು ಗಂಟಲೊಣಗಿತು, ಅಷ್ಟೆ.
ಹೊರಗೆ ಬಂದೆ.
ದಾರಿಯಲ್ಲೇ ನಿನ್ನ ಜನ್ಮವಾಯ್ತು.

ಮಗ : ದಾರಿಯಲ್ಲೇ ಹುಟ್ಟು, ದಾರಿಯಲ್ಲೇ ಬಾಳು, ದಾರಿಯಲ್ಲೇ ಸಾವೊ ಏನೋ.

ತಾಯಿ : ಇಂಥ ಪೈಶಾಚಕೃತ್ಯದ ಮೂಲ ನಾಡ ಬಂಧನದಲ್ಲಿ
ನಾಡು ಬಿಡುಗಡೆಯಾದರೇ ಇಂಥ ಅನ್ಯಾಯ ಸಾಯುವುದು ಎಂದೆ
ದುಡಿದರು ತಂದೆ.
ಅಂದೆ ಕೊನೆ ಎಲ್ಲಕ್ಕು.

ಮಗ : ತಂದೆ ಮನೆ ಸುಟ್ಟರು.

ಮಗಳು : ಊರು ಬೆಳಕಾಯ್ತಲ್ಲ — ತೃಪ್ತರಾದರು ತಂದೆ.

ಮಗ : ನಮ್ಮ ನಾಡಿಗೆ ಬಂತು ಬಯಸಿದ್ದ ಬಿಡುಗಡೆ.
ನಮಗಿಲ್ಲ ಬಿಡುಗಡೆ, ನಮಗಿಲ್ಲ ನಿಲುಗಡೆ.

ತಾಯಿ : ಮಗು, ಯಾಕೆ ಈ ನೋವು ?

ಮಗಳು : ನಾಡಿಗೆಂದೇ ನಾವು ಜೀವ ತೇಯ್ದಾಯ್ತು—
ಇನ್ನಾದರೂ ನಾವು ನಿಲ್ಲಬಾರದೆ, ಅಮ್ಮ ?
ದಾರಿ ಸವೆದಾಯ್ತು— ಮನೆಗೆ ಬಂದಾಯ್ತು—
ಇನ್ನಾದರೂ ನಾವು ಹಾಸಿಗೆಯ ಬಿಚ್ಚೋಣ.

ಮಗ : ನಿತ್ಯಯಾತ್ರಿಕರಾಗಬೇಕೇ ನಾವು ?
ಯಾವ ನೆಲೆಯೂ ಇರದೆ ಅಲೆಯುವಂತಹ ಬೀದಿ-ನಾಯಿ-ಬಾಳೇ ನಮಗೆ
ಪರಮಗತಿಯೆ ?

ತಾಯಿ: ಬಂದದ್ದೆ ಮನೆಯೆಂದು ನಂಬಿ ನಿಲ್ಲುವ ಆಸೆ ಸಾಮಾನ್ಯರಿಗೆ ಸಾಧ್ಯವೇನೋ.
ಸಾಮಾನ್ಯರೇ ಹೇಳು ನಿಮ್ಮ ತಂದೆ ?

ಮಗ : ತಂದೆ ದುಡಿದರು ನಾಡ ಬಿಡುಗಡೆಗೆ.
ಈಗ ನೆಮ್ಮದಿ ಬದುಕು —

ಅದು ಅವರ ಹಕ್ಕು.

ತಾಯಿ : ಹಕ್ಕು ದಿಟ.

ಅಲ್ಲವೆಂದವರು ಯಾರೂ ಇಲ್ಲ.

ಹಕ್ಕಿದ್ದರೇ ಸಾಕೆ? ಹಕ್ಕು ಹೇಳುವ ಜೊತೆಗೆ ಪಡೆಯುವಂತಹ ಹಟವು ಬೇಕು.

ನೆಲದಲ್ಲಿ ರೂಪಾಯಿ ಹೂತಿಟ್ಟರೇನು ಫಲ ? ಏನು ಬೇಕೋ ಅದನು ಕೊಂಡಾಗ ತಾನೆ ಬೆಲೆ ?

ಅಂಥ ಆಸೆಯೆ ಇಲ್ಲ.

ಮಗಳು : ನಮಗೆ ಇರಬಹುದಲ್ಲ.

ಬೀಜ ನೆಟ್ಟಿದೆವಲ್ಲ, ನೀರು ಹಾಕಿದೆವಲ್ಲ. ಮರದ ಹಣ್ಣಿನ ಮೇಲೆ ನಮಗಿದೆ ಅಧಿಕಾರ.

ತಾಯಿ : ಯಾರಿಗಮ್ಮ , ನಿನ್ನ ಮಾತು ?

ಮಗ : ನಮ್ಮ ಬಾಳಿನ ಎತ್ತ ತಮ್ಮ ಬಂಡಿಗೆ ಕಟ್ಟಿ ಎಳೆದರಲ್ಲಾ ತಂದೆ — ಅವರಿಗೆ.

ತಾಯಿ : ಅವರು ಹೇಳುವದಿಷ್ಟೆ— ನಾನೆ ಹೇಳುತ್ತೇನೆ :

ನನ್ನ ದಾರಿಯು ನನಗೆ.

ನೀವು ಕೂಡಾ ಜೊತೆಗೆ ಬರಲೆಬೇಕೆಂದೆಂಬ ಬಲವಂತವಿಲ್ಲ.

ಮಗ : ಸುಲಭವಲ್ಲವೇ ಮಾತು ?

ಕೈತೊಳೆದುಕೊಳುವಂಥ ಮಾತು ಅತಿ ಸುಲಭ.

ಮೂವತ್ತು ವರುಷಗಳ ಅಷ್ಟನ್ನು ಬದಿಗಿಟ್ಟು ಹೀಗಂದು ಬಿಡುವುದೇ ?

ಮಗಳು : ತಂದೆ ಜೊತೆ ಜೊತೆಗೆ ಬೆವರನು ಸುರಿಸಿ ದುಡಿದೆವಮ್ಮ, ನಾವು.

ನಮ್ಮ ನೆಮ್ಮದಿ ಚಿಂತೆ ಮಾಡುವುದು ಈಗವರ ಕರ್ತವ್ಯ.

ಅದನು ಮರೆಯುವುದು, ಮರೆತಿಂಥ ದುಡುಕು ಮಾತಾಡುವುದು ಸುಲಭ, ಆದರೆ ತಪ್ಪು.

ತಾಯಿ : ಸಾಕು, ನಿಲ್ಲಿಸಿ. ಕೇಳಲಾರೆ.

ನಿಮ್ಮ ಮಾತಲ್ಲಿ ಹಿಂದೆಂದು ಇರದಂಥ ಬಿರುಸಿದೆ, ಜೋರು.

ಹಕ್ಕು ಕೇಳುವ ಜನದ ಮಾತಿನುಕ್ಕಿದೆ, ಹೊಳಪು.

ಮಗ : ಬಿಡುಗಡೆಯು ಬಂದರೂ ನಮಗೆ ಬಿಡುಗಡೆಯಿಲ್ಲ.

ಮನೆ ಮನೆಯು ಬೆಳಗಿತು — ನಮಗೆ ಮಾತ್ರ ರಾತ್ರಿ.

ಅಮ್ಮ , ಹೀಗಾಗಬಹುದೆಂದು ನೀನೇಕೆ ಹೇಳಲಿಲ್ಲ ?

ತಾಯಿ : ಕನಸಾಗಿ ಕಾಣಲಿಲ್ಲ.

ಯಾವ ಗುಡಿ ಕಡೆಗೆ ಈ ದಾರಿ, ಗುಡಿ ಎಷ್ಟು ದೂರ —

ಯಾವುದೊಂದನು ನಾನು ಕೇಳಲಿಲ್ಲ.

ಕೇಳುವಾಸೆಯು ಎಂದು ಕಾಡಲಿಲ್ಲ.

ನನ್ನ ದೇವರು ಅವರು

ಅವರ ದೇವರು ಯಾರೊ — ಕೇಳಲಿಲ್ಲ.

ಮಗಳು : ಎಂದೆ ನಮಗೀ ಪಾಡು — ನಾಯಿ-ಪಾಡು.

ಮಗ : ಬಿಸಿಲುಗುದುರೆಯ ಬೆನ್ನ ಹಿಡಿದು ಹೊರಟಂತಾಯ್ತು.

ಊರು ಕಟ್ಟುವದಕ್ಕೆ ವನವಾಸವಾಯ್ತು.

ಊರು ಕಟ್ಟಿದ ಮೇಲು ಕಾಡು ತಪ್ಪಿದ್ದಲ್ಲ.

ಬಂಗಲೆಯ ಉದ್ದಕ್ಕು ನಿಂತ ದೆವ್ವಕ್ಕೆ ಕೊಳ್ಳಿ ತೋರಿಸಿ ದೂರ ಅಟ್ಟಿದ್ದಾಯ್ತು,

ಬಂಗಲೆಯ ವಾಸ ನಮಗೆ ಅಲ್ಲ.

ತೆಂಗು-ಗರಿ ಜೋಪಡಿಯ ಜಾಡಮಾಲಿಯ ಬದುಕು ತಪ್ಪಲಿಲ್ಲ

ಮಗಳು: ದೇವರೇ ಬಂದು ಎದುರಿಗೆ ನಿಂತು 'ವರ ಬೇಡು' ಅಂದರೂ ಭಕ್ತನಿಗೆ ಬೇಡ.

ಬಂದ ದೇವರು ಬೇಡ, ಅವನ ವರವೂ ಬೇಡ.

ಅದು ಹೋಗಲಮ್ಮ.

ಈಗ ದೇವರು ಯಾರು, ಯಾವ ದೇವರ ಹಿಂದೆ ಇಂಥ ಪರೆದಾಟ

ಈ ಉರುಳು ಸೇವೆ ?

ಮಗ : ಒಂದು ನಿಲ್ದಾಣದಿಂದ ಇನ್ನೊಂದಕ್ಕೆ ಉರುಳುತ್ತಲಿರುವುದೇ ಇಂಥ ರೈಲಿನ ಧರ್ಮವೇನೋ.

ಅಮ್ಮ, ನಮಗಿದೆ ಪ್ರಶ್ನೆ ಕೇಳುವ ಹಕ್ಕು.

ಬೆಳಗಾಗ ಎದ್ದವನೆ ಪಾಯಿಜಾಮದ ತೋಳ ಮೇಲೆತ್ತಿ ಗಿಡದ ಪಾತಿಗೆ ನೀರು ಹಾಕುವವನೇ ನಾನು.

ಯಾವ ಗಿಡ ಇದು? ಮುಂದೆ ಅರಳುವುದು ಮಲ್ಲಿಗೆಯೋ ಅಥವಾ ಮುಳ್ಳೊ—

ನಮಗಿದೆ ಪ್ರಶ್ನೆ ಕೇಳುವ ಹಕ್ಕು.

ತಾಯಿ : ನಿಮಗಿದೆ, ಅಂಥ ಹಕ್ಕು.

ನನಗಿಲ್ಲ, ಕಂಡೆಯಾ ?

ಮದುವೆಯಾಗುವ ವರೆಗು ಹೆಣ್ಣುಮಗಳಿಗೆ ತಂದೆ ಮನೆ ದೇವರೇ ಅವಳ ದೇವರು ಕೂಡ.

ಮದುವೆಯಾಯ್ತೆನ್ನು — ಗಂಡನೇ ಅವಳ ದೇವರು ಮುಂದೆ.

ನನಗಿವರೆ ದೇವರು.

ಅವರ ದಾರಿಯು ನನಗೆ ಎಂದೆಂದಿಗೂ ದೇವರ ದಾರಿ.

ಪ್ರಶ್ನೆ ಕೇಳುವ ಹಕ್ಕು ನಿಮಗಿದೆ, ನನಗಿಲ್ಲ.

ಮಗಳು : ಊರು ಕೂಗುತ್ತಿದೆ:

ಮದುವೆ, ಮನೆ, ನಗುವ ಮಕ್ಕಳ ನವಿಲು ಗರಿ ಕೇಕೆ ;

ನೆರೆಹೊರೆ, ಸಂಜೆ ಜಗುಲಿಯ ಮಾತು, ಆರತಿ, ಅಕ್ಷತೆ —

ಅಮ್ಮ, ನನಗಿನ್ನು ಸಾಧ್ಯವಿಲ್ಲ.

ಮಗ: ಕೋಳಿ 'ಕೋ ಕೋ' ಎನುವ ಹೊತ್ತಿಗೆ ಎದ್ದು ಗದ್ದೆಯ ಕಡೆಗೆ ದುಡಿದೆವಮ್ಮ.
ಸೂರ್ಯ ನೆತ್ತಿಯ ಮೇಲೆ ಬಂದಾಗಲೂ ರೊಟ್ಟಿ ತಿನ್ನಲೆ ಇಲ್ಲ.
ಹತ್ತಿರದ ಹಳ್ಳ ಗುಳುಗುಳು ನಕ್ಕು ಕೂಗಿ ಕರೆದರು ನಾವು ಕೆಲಸ ಬಿಟ್ಟೇಳಲಿಲ್ಲ.
ಬಿತ್ತನೆಗೆ ಅಗೆದಂಥ ಮಣ್ಣು-ಕಾಲುವೆಯಲ್ಲಿ ಹರಿದಿದ್ದು ನೀರಲ್ಲ, ಬೆವರು,ಅಮ್ಮ
ಸಂಜೆಯಾಯಿತು, ಅದೋ
ದೂಳು ಆಕಾಶಕ್ಕೆ ನೆಗೆದು ಬಂಗಾರವಾಗಿದೆ ನೋಡು
ಮನೆಗೆ ಹೋಗುವ ಹೊತ್ತು
ಸಂಜೆ ಜಗುಲಿಯ ಮೇಲೆ ಕುಳಿತು ಹಾಯಾಗಿ ಬೀಡಿ ಸೇದುವ ಹೊತ್ತು ...
ಅಮ್ಮ, ನನಗಿನ್ನು ಸಾಧ್ಯವಿಲ್ಲ.

ಮಗಳು : ನಾವು ತಂದೆಗೆ ಧಾರೆಯೆರೆದಿದ್ದು ಬಂಗಾರ — ನಮ್ಮ ಯೌವನವಮ್ಮ.
ನಮಗಾಗಿ ತಂದೆ ಮುಪ್ಪನು ಕೊಡಲಿ.

ತಾಯಿ : ಕವಲು-ದಾರಿಗೆ ಬಂದು ನಿಂತಿದ್ದೇವೆ.
ನಿಮ್ಮ ದೇವರು ನಿಮಗೆ, ಅವರ ದೇವರು ನನಗೆ.
ಪೂಜೆಯಿಲ್ಲದ ಬಾಳು ಒಂದು ಒಂದೂ ಇಲ್ಲ.
ಒಂದೊಂದು ಬಾಳಿಗೂ ಒಂದೊಂದು ದೇವರು.
ಒಳ್ಳಿತಾಗಲಿ ನಿಮಗೆ ಹೋಗಿ ಬನ್ನಿ.

ಮಗ : ಹೋಗಿ ಬಾ ಅಂದೆಯಾ ? ಅನ್ನುವುದು ಸುಲಭ.
ಹೊರಟೆ, ಇದೊ, ಅನ್ನುವುದು, ಹಾಸಿಗೆಯ ಕಟ್ಟುವುದು, ಚಪ್ಪಲಿಯ
ಮೆಟ್ಟುವುದು ಸುಲಭ.
ಹೊರಟೆನಲ್ಲಾ ನಾನು ಹೋಗುವುದು ಎಲ್ಲಿಗೆ —
ಪ್ರಶ್ನೆಗುತ್ತರ ಸಿಗದೆ ಹುಬ್ಬು ಗಂಟಾದಾಗ ಕಾಲು ಮರ.
ಮೂವತ್ತು ವರುಷಗಳ ನೆನಪು ಬೆನ್ನಿಗೆ ಬೆಟ್ಟ —
ಕಳಚಿ ಕೈ ಕೊಡವಿಕೊಳ್ಳಲೆ, ಹೇಳು.
ಒಬ್ಬನೇ ಮಗನೆಂದು ನೀನು ತಟ್ಟಿದ ರೊಟ್ಟಿ, ಕೊಟ್ಟ ನೊರೆಹಾಲು,
ಸಕ್ಕರೆ, ಜೇನು —
ಹೇಗೆ ತಾನೇ ನಾನು ಹೋಗಲಮ್ಮ ?
ತಂದೆ ಮಗ್ಗುಲಿನಲ್ಲೆ ಕುಳಿತು ಮಂದಾಸನಕೆ ಎಸೆದ ಕುಂಕುಮ, ನುಡಿದ
ಮಂತ್ರ, ಹಾಕಿದ ಹೂವು —
ಹೇಗೆ ತಾನೇ ನಾನು ಹೋಗಲಮ್ಮ ?
ನಿನ್ನ ಪ್ರೀತಿಯನ್ನಷ್ಟು ಕಡಿಮೆ ಮಾಡು ಅಥವ ಬಯ್ಯಿ —
ರೇಗಿ ಮನೆ ಬಿಟ್ಟು ಹೋಗುತ್ತೇನೆ.
ಅಥವಾ, ತಂದೆ ಮಂದಾಸನಕೆ ಕರೆತಂದ ದೇವರ ಹೆಸರು ಹೇಳು —

ಇಂಥ ದೇವರ ಪೂಜೆ ನಮಗಿಲ್ಲವೆಂದಾದರೂ ಕೂಗಿ ಹೋಗುತ್ತೇನೆ.
ಜಗಳವಾಡಿದ ನೆಮ್ಮದಿಯು ಇಲ್ಲ —
ಹೇಗೆ ತಾನೇ ನಾನು ಹೋಗಲಮ್ಮ?

ತಾಯಿ : ದೇವರಂತಹ ತಂದೆ. ಜಗಳವೂ ಸಾಧ್ಯವಿಲ್ಲ.

ಮಗಳು : ದೇವರಂತಹ ತಂದೆ — ನೆಮ್ಮದಿಯು ಇಲ್ಲ.

ಮಗ : ಅಮ್ಮ, ತಂದೆಗೆ ಹೇಳು : ಅಲೆದಾಟ ಸಾಕು.
ಬಿಡುಗಡೆಯು ಬಂತು, ದಿಟ. ನಮ್ಮ ಮನೆ ನಮ್ಮದಾಯ್ತು
ಎಳೆ ಮಗುವಿನಂಥ ಬಿಡುಗಡೆ, ಅಮ್ಮ—
ಜೋಪಾನವಾಗಿ ಸಾಕುವ ಬುದ್ಧಿ ನಮಗೆ ಬೇಕು.
ಇಂದು ನಾಡಿಗೆ ಬೇಕು ತಂದೆಯಂತಹ ಮಂದಿ — ಅದನು ಹೇಳು.

ತಾಯಿ : ಒಂದು ಸಲವೂ ನಾನು ನಿಮ್ಮ ತಂದೆಗೆ ಏನು ಹೇಳಿಲ್ಲ.
ದಾರಿ ತೋರುವ ಕೈಯ ಪಂಜಾದುದಿಲ್ಲ.

ಮಗಳು : ಎಂದೆ ಮಾತಿಗೆ ಬೆಲೆ.
ಅಪರೂಪ ಬಂಗಾರ. ಆದ್ದರಿಂದಲೆ ಬೆಲೆ.

ತಾಯಿ : ಹೇಳಿ ನೋಡುತ್ತೇನೆ.
ಕಿತ್ತಳೆಯ ಗಿಡ ಮಾವು ಕೊಡಬಹುದೇನು ?
ಆದರೂ ಹೇಳಿ ನೋಡುತ್ತೇನೆ.

ಮಗ : ಅಮ್ಮ, ತಂದೆಗೆ ಹೇಳು : ಇದು ಕೂಡ ನಾಡಸೇವೆ.
ನೆಲ ಕೊಟ್ಟುದೆಲ್ಲವನ್ನೂ ನೆಲದ ಮೇಲೆಸೆದು ಹೋಗಿಬಿಟ್ಟರೇ ಸೇವೆ ಆಗದು, ಹೇಳು.

ತಾಯಿ : ತೊದಲುಗಾಲಿನ ಕೂಸು ತಾತನಿಗೆ ನಡೆಯುವುದು ಕಲಿಸುವಂತೆ ...
ಇರಲಿ, ಮಗು, ನೋಡೋಣ.

[ ದೇಶದ ಪ್ರಧಾನ ಮಂತ್ರಿಯು ಬಾಗಿಲಿಗೆ ಬರುತ್ತಾನೆ. ಅವನಿಗೆ ಸುಮಾರು ಐವತ್ತು ವರುಷ. ಸಾಮಾನ್ಯವಾದ, ಆಡಂಬರವಿಲ್ಲದ ಉಡುಪು. ]

ಮಂತ್ರಿ : ಒಳಗೆ ಬರಲೇ ?

ತಾಯಿ : ಬನ್ನಿ, ಅಪ್ಪ, ಬನ್ನಿ.
ಎಲ್ಲರೂ ಸೌಖ್ಯವೇ ?

ಮಂತ್ರಿ : ನಿಮ್ಮ ದಯೆ, ಎಲ್ಲ ನೆಮ್ಮದಿಯಮ್ಮ.
ನಾಯಕರು ಇರುವ ಹಾಗಿಲ್ಲ ....

ತಾಯಿ : ಬೆಳಗಾಗ ಹೋದವರು ಬಂದೆ ಇಲ್ಲ.
ಏಕೆ ? ಏನಾದರೂ ತುರ್ತು ಕೆಲಸದ ಮೇಲೆ ಬಂದಿರೇನು ?

ಮಂತ್ರಿ: ಅಂಥಾದ್ದು ಏನಿಲ್ಲ.

ರಾಜಧಾನಿಯ ಬಿಟ್ಟು ನಾಯಕರು ಬಂದಂದಿನಿಂದ ಅವರನ್ನು ನೋಡಿರಲಿಲ್ಲ.

ನೋಡುವಾಸೆಯ ಜೊತೆಗೆ ಸಣ್ಣ ಕೆಲಸವು ಸೇರಿ …

ತಾಯಿ: ಮಗು, ತಂದೆಗೆ ಹೇಳು,

ಹೋಗು.

ಮಂತ್ರಿ: ಏನು ಬೇಡ. ಇನ್ನೇನು, ಅವರೇ ಬಂದಾರು, ತಾಯಿ.

ನಾನು ಬರುವಾಗೆರಡು ಸುದ್ದಿ ತಂದಿದ್ದೇನೆ.

ಎರಡರಲ್ಲೊಂದು ಕೂಡಾ ನಾಯಕರ ಎದೆಗೆ ತಂಪು ತರುವಂಥದಲ್ಲ.

ತಾಯಿ: ಏನಪ್ಪ ? ಏನಾಗಿ ಹೋಯ್ತು ?

ಮಂತ್ರಿ: ನಿಮಗೆ ಆತಂಕ ಕೊಡುವಂತಿತ್ತೆ ಮಾತು ?

ಕ್ಷಮಿಸಿ, ತಾಯಿ.

ಒಂದಂತು ಶುಭದ ಮಾತೇ —

ದೇಶಕ್ಕೆ ಶುಭ. ಅವರಿಗೆ ಹೇಗೋ ....

ತಾಯಿ: ಹೇಳಿಬಿಡಿ

ನಾಡಿಗೊಳ್ಳೆಯದೆಂದು ಹೇಳಿದಿರಿ.

ಇವರಿಗೂ ಪ್ರಿಯವಾಗಲೇಬೇಕು ಮಾತು.

ಮಂತ್ರಿ: ಜನದ ಕನಸಿಗೆ ನಾನು ನಾಲಗೆ, ತಾಯಿ.

ನಾಯಕರು ರಾಷ್ಟ್ರಕ್ಕೆ ಅಧ್ಯಕ್ಷರಾಗಿ ನಾಳಿನ ಕತೆಯ ಬರೆಯಬೇಕೆಂದು ಜನದ ಆಸೆ.

ಮಗ: ಎಂಥ ಸೌಭಾಗ್ಯವಮ್ಮ !

ಮಂತ್ರಿ: ಲೋಕಸಭೆಯ ತುಂಬ ನಾವೇ ನಮ್ಮ ಪಾರ್ಟಿ ಜನವೆ.

ನಾಯಕರ ಹೆಸರು ಸೂಚಿಸಿ ಕೂತರಾಯಿತು ತಾಯಿ – ಬೇಡವೆನ್ನುವ ಜನವೆ ಇಲ್ಲ.

ಮಗ: ಬೇರೆ ಯಾರಾದರೂ ಸ್ಪರ್ಧಿಸಿದರೆ ?

ಮಂತ್ರಿ: ಅಂಥ ಸಂಭವವಿಲ್ಲ.

ಒಂದು ಪಾರ್ಟಿಯ ಜನಕ್ಕಿವರು ನಾಯಕರಲ್ಲ

ಇಡಿ ನಾಡಿಗೇ ಇವರು ತಂದೆಸಮಾನ.

ಇವರು ಒಪ್ಪಿದರಾಯ್ತು, ಸ್ಪರ್ಧೆ ಮಾತೇ ಬರದು.

ತಂದೆ ಎದುರಿಗೆ ಯಾರು ನಿಲ್ಲಬಹುದು ?

ಮಗಳು: ಏಕಮ್ಮ ? ಸುಮ್ಮನಾದೆ ?

ಮನೆಗು, ನಾಡಿಗು ಬಂತು ಭಾಗ್ಯ-

ಏಕಮ್ಮ ಸುಮ್ಮನಾದೆ ?

ತಾಯಿ : ನನಗೆ ಗೊತ್ತಮ್ಮ ಅವರ ಸ್ವಭಾವ —
ಎಂದೆ ಸುಮ್ಮನಿದ್ದೆ.
ಮಂತ್ರಿ : ನನಗು ಅದೆ ಚಿಂತೆ.
ಏನೆಂದುಬಿಡುವರೋ ?
ಮಗಳು : ನೀವೇನು ಬಂದು ಪಾಪದ ದಾರಿ ಕಡೆಗೆ ಕೈ ಮಾಡುತಿದ್ದೀರ ?
ಇಲ್ಲವಲ್ಲ.
ಇದುವರೆಗು ತುಳಿದಿದ್ದು ಜನದ ಸೇವೆಯ ದಾರಿ
ನೀವೀಗ ಬಂದು ಬಾ ಅನ್ನುವುದು ಜನದ ಸೇವೆಗೆ ತಾನೆ ?
ಮಗ : ನಾಡು 'ಕಾಪಾಡು ಬಾ' ಎಂದಾಗ ಕಾಡ ಕಡೆ ಹೋಗುವುದು ಧರ್ಮವಲ್ಲ.
ತಂದೆಯನ್ನಿವರು ಸಿಂಹಾಸನಕ್ಕೆ ಕರೆಯುತ್ತಿಲ್ಲ.
ಅರಮನೆಯ ಬಾಗಿಲಿಗೆ ಹಸಿರು ತೋರಣ ಕಟ್ಟಿ, ಬ್ಯಾಂಡು ಬಾರಿಸಿ
ತೆರೆದ ಕಾರಲ್ಲಿ ಮೆರವಣಿಗೆ ಮಾಡುವಾಸೆಯು ಇಲ್ಲ.
ಬಾ, ಬೆವರು ಸುರಿಸು ಬಾ — ಹೊಲದಲ್ಲಿ, ಫ್ಯಾಕ್ಟರಿಯಲ್ಲಿ
ನಮ್ಮ ಜೊತೆಗೂ ನೀನು ಸಾಯಿ ಬಾ ಎಂದು ಕರೆಯಬಂದಿದ್ದಾರೆ.
ಅಮ್ಮ ತಂದೆಗೆ ಹೇಳು :
ಪೂಜೆಗೂ ನೂರು ನೂರಾರು ವಿಧವುಂಟು.
ತನ್ನ ಜೊತೆಗೇ ಮಿಕ್ಕವರ ಉದ್ಧಾರ ಮಾಡುವುದು ಸಾತ್ವಿಕನ ರೀತಿ ಅಮ್ಮ.
ಮಂತ್ರಿ : ತಾಯಿ, ನಾನು ಹೇಳಿದ್ದು ನೀವು ಅವರಲ್ಲಿ ತಿಳಿಸಿ ಅಥವಾ ಸೂಚಿಸಿ
ಅವರನ್ನೊಪ್ಪಿಸಿಕೊಳ್ಳಿ.
ನಿಮ್ಮ ಮೇಲೇ ನಾನು ಭಾರ ಹಾಕಿದ್ದೇನೆ.
ಅವರ ಜೊತೆಗಿಂಥ ಮಾತನ್ನು ಎತ್ತುವ ಕೆಲಸ ನಿಮಗೆ ಸುಲಭ.
ನಿಮ್ಮ ಮಗ ಹೇಳಿದ್ದು ತುಂಬ ತೂಕದ ಮಾತು.
ಸೇವೆ ಮಾಡುವದಕ್ಕೂ ನೂರು ವಿಧ ಎಂದರು.
ತುಂಬ ಒಳ್ಳೇ ಮಾತು.
ಸೇವೆಗೆಂದೇ ನಾಯಕರು ಹುಟ್ಟಿದ್ದು.
ಅವರು ಎಲ್ಲಿದ್ದರೂ ಮಾಡುವುದೊಂದೆ, ಜನದ ಸೇವೆ.
ಅಲ್ಲೆ ಮಾಡಲಿ ಅಂಥ ಜೀವ ತೇಯುವ ಕೆಲಸ – ನಾವು ಹೇಳುವದಷ್ಟೆ.
ಸಂಜೆ ಬಹಿರಂಗ ಸಭೆಯಲ್ಲಿ ನಾಯಕರ ಮಾತಿದೆ.
ಅದು ಮುಗಿದ ಮೇಲೆ ಇಲ್ಲಿಗೆ ಬಂದು ಅವರನ್ನು ಕಾಣುತ್ತೇನೆ.
ನೀವು ಎತ್ತಿದ ಮಾತು ನಾನು ಬೆಳಸುತ್ತೇನೆ.
ನೋಡೋಣವಂತೆ ....
ಈಗ ಬರಲೆ ?

ಮಗಳು : ಎರಡನೆಯ ಸುದ್ದಿಯೇನು ?
ಮಂತ್ರಿ : ನೆನಪಿತ್ತು.
ಹೇಳುವುದೆ ಬೇಡವೆಂದೇ ಹೊರಟು ನಿಂತಿದ್ದೆ.
ತಾಯಿ : ಏನಪ್ಪ ಅಂತಹದು ?
ಮಂತ್ರಿ : ಇನ್ನೇನು, ತಾಯಿ, ಕೊಲೆಯ ಸುದ್ದಿ.
ದೇವ ದೇವರ ಹೆಸರು ತುಟಿ ಮೇಲೆ, ಹಾಡು ಹಗಲಲ್ಲೆ ಕಗ್ಗೊಲೆ.
ನೆನ್ನೆ ಸುರುವಾದದ್ದು ಇನ್ನು ನಡೆದಿದೆಯಂತೆ.
ಕಡಿಮೆಯೆಂದರೆ ನೂರು ಸಾವು.
ತಾಯಿ : ಕಡಿಮೆಯುಂದರೆ ನೂರು ಮನೆಯ ಜನ ಅತ್ತಿದ್ದಾರೆ.
ಹೂವು ಗಿಡದಲ್ಲಿಲ್ಲ ಮುಳ್ಳು ನೆಟ್ಟಿದ್ದಾರೆ
ಮಕ್ಕಳಿಳೆ ನಗು ಸತ್ತು ನೂರು ತಾಯಿಯರೀಗ ಕಾಳಿಯವತಾರವೆತ್ತಿದ್ದಾರೆ.
ಮಂತ್ರಿ : ನಾಯಕರು ದೊರೆಯಾಗಿ ಇಂಥ ದಾಯಾದಿ-ಕೊಲೆ ನಿಲ್ಲಬಹುದೇನೋ.
ನಮಗಿರುವ ಒಂದೆ ನೆಚ್ಚಿಕೆ ಅದು.
ಒಂದೆ ತಾಯಿಯ ಮಕ್ಕಳಲ್ಲಿ ಪ್ರೀತಿಯು ಬೆಳಗಿ ಮನೆ ಮತ್ತೆ ಮನೆಯಾಗ-
ಬಹುದು
ತಾಯಿ : ಆತಂಕವಿರದೆ ಮಕ್ಕಳು ಬಂದು ಬೀದಿಯಲ್ಲೇ ಗೋಲಿ ಆಡಬಹುದು.
ಮಳೆ ಬಂದು ನಿಂತಾಗ ಬೀದಿ ಬಚ್ಚಲ ಹುಚ್ಚು ಹೊಳೆಯಲ್ಲಿ ಕಾಗದದ
ದೋಣಿ ಓಡಾಡಬಹುದು.
ಮಗ : ಅಮ್ಮ, ತಂದೆಗೆ ಸುದ್ದಿ ತಿಳಿಸಬೇಡ
ಹೊರಟೆ ಬಿಟ್ಟಾರು ಗಂಟೆ ಮೂಟೆಯ ಕಟ್ಟಿ.
ತಾಯಿ : ಕೆಟ್ಟ ಸುದ್ದಿಯ ಗುಟ್ಟು ಮಾಡುವುದು ಕಷ್ಟ, ಮಗು.
ಇಲಿ ಸತ್ತ ವಾಸನೆಯು ಗುಟ್ಟಾಗಬಹುದೇ ?
ಮಂತ್ರಿ : ಆದರೂ ಈ ಹೊತ್ತು ತಿಳಿಯುವುದು ಬೇಡ.
ನಾಳೆ ನೋಡೋಣ.
ಹೇಗೆ ಹುಟ್ಟಿತೊ ಹಾಗೆ ಗಲಭೆ ಅಡಗಿದರೆ ಸರಿ —
ಅಡಗದಿದ್ದರೆ ಇದ್ದೆ ಇದೆ ನಾಯಕರ ಕಾಲು ಹಿಡಿಯುವ ಕೆಲಸ.
ನಾನೀಗ ಹೋಗಲೇ ?

[ ನಮಸ್ಕಾರ, ಪ್ರತಿ ನಮಸ್ಕಾರಗಳು. ಮಂತ್ರಿ ಹೋದಾಗ ಮಗನೂ ಎದ್ದು ಹೋಗುತ್ತಾನೆ. ತಾಯಿಯ ಕಣ್ಣು ಎಲ್ಲೋ ಅಡಗಿದ್ದಾಗ ಮಗ ಕೂಗಿ ಹೇಳುತ್ತಾನೆ. ]

ಮಗ : ಅಮ್ಮ, ತಂದೆ.

[ ತಾಯಿ ಬಾಗಿಲಿಗೆ ಒರಗಿಕೊಂಡು ಹೊರ ನೋಡಿದಾಗ ತನಗೆ ತಾನೇ ಹೇಳಿಕೊಳ್ಳುತಾಳೆ. ]

ತಾಯಿ : ತಲೆಗೆ ಚೌಕವು ಇಲ್ಲ. ಬಿಸಿಲಲ್ಲೆ ಬಂದರಲ್ಲ !

## ದೃಶ್ಯ ೨

[ಅದೇ ಗುಡಿಸಿಲು. ಆ ದಿನದ ಮಧ್ಯಾಹ್ನ. ತಂದೆ ಮತ್ತು ತಾಯಿ ಅಂದರೆ ನಾಯಕರು ಅವರ ಹೆಂಡತಿಯು ಮಾತನ್ನಾಡುತ್ತ ಕುಳಿತಿದ್ದಾರೆ. ತೆರೆ ಎದ್ದಾಗ ಆಕೆ ಹೇಳುತ್ತಾಳೆ]

ತಾಯಿ (ಹೆಂಡತಿ) : ತುಂಬ ಮಾತಾಡಿಬಿಟ್ಟೆ.
ತಪ್ಪು ಮಾಡಿದೆನೇನೊ.

ತಂದೆ (ನಾಯಕರು) : ನನ್ನ ಒಳ್ಳೆಯದಕ್ಕೆ ನಾಡಿನೊಳ್ಳೆಯದಕ್ಕೆ ಆಡಿದ ಮಾತು.
ಆಡಿದ್ದು ತಪ್ಪಲ್ಲ.
ಉದ್ದೇಶ ತಪ್ಪಲ್ಲ. ಮಾತು ಸರಿಯೋ ತಪ್ಪೊ ಉದ್ದೇಶ ಒಳ್ಳೆಯದು.
ಎದೆಯಲ್ಲಿ ಕೆಡುಕಿಲ್ಲ. ಆದ್ದರಿಂದಲೆ ಮಾತು ಗಮನಾರ್ಹ.
ಒಂದೊಂದನೂ ಹಿಡಿದು ತಳವ ಶೋಧಿಸಿ, ಹಿಂದು ಮುಂದನು ಎಣಿಸಿ,
ಗುಣಿಸಿ ಭಾಗಿಸಿ ನೋಡಿ ಆಮೇಲೆ ಇತ್ಯರ್ಥ ಮಾಡಬೇಕು.
ನಾಡ ಮಂದಿಗೆ ಮೋಕ್ಷ ಗಳಿಸಿಕೊಡುವುದರಲ್ಲಿ ನನ್ನ ಮೋಕ್ಷದ ಸಿದಿ –
ಇದು ನಿನ್ನ ವಾದ.
ರಾಜಧಾನಿಯೆ ಇನ್ನು ಮುಂದಕ್ಕೆ ಕಾರ್ಯಕ್ಷೇತ್ರ.
ಆಳು-ಜನದೊಡನೆ ನಾನೊಬ್ಬನಾಗಿದ್ದು ಜನದ ಸರ್ವೋದಯಕೆ
ದುಡಿಯುವುದು ಆತ್ಮಕಲ್ಯಾಣದ ಮಾರ್ಗ –
ಇದು ನಿನ್ನ ವಾದ.
ಹೌದು ತಾನೇ ?

ಹೆಂಡತಿ : ಹೌದು.

ನಾಯಕ : ಗಂಡನಿಗೆ ಅರಮನೆಯ ವಾಸ ಕಲ್ಪಿಸಿಕೊಡುವ ಹೆಣ್ಣ ಹಂಬಲವಲ್ಲ.
ನಿನಗಂಥ ಹಂಬಲವಿಲ್ಲ – ನನಗೆ ಗೊತ್ತು.
ನಿನಗಾಗಿಯೇ ಅರಸು-ಬಾಳನ್ನು ಬಯಸುವ ಸ್ವಾರ್ಥ ನಿನದಲ್ಲ —
ನನಗೆ ಗೊತ್ತು.
ಇನ್ನು ಮಕ್ಕಳಿಗೆಂದೆ ಈ ಸೂಚನೆ ?
ಹಾಗಿದ್ದರದನು ಹಾಗೇ ಹೇಳಿಬಿಡುತಿದ್ದೆ.
ಆದ್ದರಿಂದಲೆ ಮಾತು ತೂಕ. ನೋಡೋಣ.

ಹೆಂಡತಿ : ನನ್ನ ಹಾಗೆ ಪ್ರಧಾನಮಂತ್ರಿಯು ಅಂದ:
ನಾಡ ನೆಮ್ಮದಿಗಾಗಿ ನೀವು ಅರಮನೆ ದಾರಿ ಹಿಡಿಯಬೇಕು.

ನಾಯಕ : ನಾಡ ಹಿತವನ್ನು ಆತನ ಹಾಗೆ ಬಯಸುವಂತಹ ಜನರು ವಿರಳ.
ನಾಡ ಹಿತ ಮೊದಲು — ಆಮೇಲೆ ತನ್ನ ಹಿತ.

ಆತನಂತಹ ಮಂದಿ ಇರುವುದೇ ನಮ್ಮ ನಾಡಿನ ಪುಣ್ಯ.
ಅಂಥವನು ಹೀಗಂದ ಅಂದಮೇಲಿದು ವಿಚಾರಯೋಗ್ಯ.
ನೋಡೋಣ.

[ ಬಾಗಿಲಿಗೆ ವಯಸ್ಸಾದವನೊಬ್ಬ ಬರುತ್ತಾನೆ ಅವನ ವಯಸ್ಸು ಹೇಳುವುದು ಕಷ್ಟ. ನೋಡುವುದಕ್ಕೆ ವಯಸ್ಸಾಗಿದ್ದರೂ ಕಣ್ಣಲ್ಲಿ, ಮಾತಿನಲ್ಲಿ ವಯಸ್ಸು ಕಂಡುಬರುವುದಿಲ್ಲ. ]

ಮುದುಕ : ಒಳಗೆ ಬರಲೇ, ತಾಯಿ ?
ಹೊರಗೆ ವಿಪರೀತ ಬಿಸಿಲು.
ಹೆಂಡತಿ : ಬನ್ನಿ, ವಿಶ್ರಮಿಸಿಕೊಳ್ಳಿ
ನೀರು ಮಜ್ಜಿಗೆ ಕೊಡಲೆ ?
ಮುದುಕ : ಹಾಗೆ ಮಾಡಿ, ತಾಯಿ.
ಕೊಟ್ಟವರಿಗು ತೆಗೆದುಕೊಂಡವರಿಗೂ ಹೊಟ್ಟೆ ತಂಪಾಗುವಂಥದದು.

[ ತಾಯಿ ಎದ್ದು ಹೋಗುತ್ತಾಳೆ.]

ನಾನು ಯಾರು, ಎಲ್ಲಿಂದ ಬಂದೆ, ಎಲ್ಲಿಗೆ ಹೊರಟೆ –
ಪ್ರವರ ಒಪ್ಪಿಸಲೇನು ?
ನಾಯಕ : ಅಂಥದೇನೂ ಬೇಡ.
ನಿಮ್ಮ ಹಾಗೇ ನಾನು ದಾರಿಹೋಕ.
ನಿಲ್ಲಲೇಬೇಕಾಗಿ ಇಲ್ಲಿ ನಿಂತೆ.
ನಿಂತನೆಂದೇ ನಿಂತ ನೆಲವು ಮನೆಯಾಯಿತು.
ಮಣ್ಣು-ಗೋಡೆಯ ಮೇಲೆ ತೆಂಗು-ಗರಿ ಹಾಸಿ ಇದು ಮನೆಯಾಯಿತು.
ನನ್ನ ಮನೆಯಾದರಿದು ನಿಮ್ಮ ಮನೆ ಕೂಡ — ನಾವೆಲ್ಲರೂ ದಾರಿಹೋಕರು ತಾನೆ.

[ ತಾಯಿ ಮಜ್ಜಿಗೆ ಕೊಡುತ್ತಾಳೆ. ಮುದುಕ ಕುಡಿದು ತೃಪ್ತಿ ಸೂಚಿಸುತ್ತಾನೆ. ಅವಳು ಕೇಳುತ್ತಾಳೆ. ]

ಹೆಂಡತಿ : ಇನ್ನಷ್ಟು ತರಲೇ ?
ಮುದುಕ : ಬೇಡ, ತಾಯಿ ಸಾಕು.

[ ತಾಯಿ ಹೋಗುತ್ತಾಳೆ. ಮುದುಕ ಮಾತಾಡುತ್ತಾನೆ. ]

ನಿಲ್ಲಲೇಬೇಕಾಗಿ ನಿಂತೆನೆಂದೆ.
ನಿಂತ ಕೆಲಸವು ಮುಗಿದು ಮತ್ತೆ ಹೊರಡುವ ಹೊತ್ತು ಬಂದಿದೆಯೇನು ?

ಹೊರಡುವುದು ಎಲ್ಲಿಗೆ ?
ರಾಜಧಾನಿಗೆ ತಾನೆ ?

ನಾಯಕ : ರಾಜಧಾನಿಗೆ ನಾನು ಹೊರಡುವುದು ?

ಮುದುಕ : ಇನ್ನು ಇತ್ಯರ್ಥ ಮಾಡಿಲ್ಲವೇ ?
ಅರಮನೆಯು ಕರೆಯುತಿದೆ. ಮನೆಯವರ ಇಚ್ಛೆಯೂ ಅದೆ ತಾನೆ.
ಯಾವಾಗ ಹೊರಡುವುದು ?
ಸಂಜೆಗೆ ? ನಾಳೆಯೆ ?

ನಾಯಕ : ರಾಜಧಾನಿಯ ಕರೆಯು ಬಂದಿದ್ದು ಬೆಳಗಾಗ.
ಅವಳ ಜೊತೆ ಮಾತನಾಡಿದ್ದು ಮಧ್ಯಾಹ್ನ – ನೀವು ಬಂದರಗಳಿಗೆ ಮೊದಲು.
ಆದರೂ ನಡೆದ ಮಾತೆಲ್ಲ ನಿಮಗಾಗಲೆ ಗೊತ್ತು.
ನೀವು ಯಾರು ?

ಮುದುಕ : ಪ್ರವರ ಹೇಳಲೆ ಎಂದೆ. ಅಂಥದೊಂದೂ ಬೇಡ ಅಂದಾಗ ಪ್ರಶ್ನೆ ಕೇಳುವ ಹಕ್ಕು ಇದ್ದದ್ದು ಹೋಯ್ತು.
ನನಗಷ್ಟು ಅಷ್ಟೂ ಗೊತ್ತು.
ಅರಮನೆಯ ಕಡೆಯಿಂದ ಬಂದ ಕರೆ, ಮನೆಯಾಕೆ ಮಾತು —
ಎಲ್ಲ ಎಲ್ಲಾ ಗೊತ್ತು.
ಹೇಗೆ ಗೊತ್ತಾದ್ದು — ಆ ಮಾತು ಬೇಡ. ಅನಗತ್ಯ ಕೂಡ.
ದಾರಿಹೋಕರು ನಾವು — ನೀವೆ ಹೇಳಿದಿರಿ.
ನಿಮಗೆ ಗೊತ್ತಿರಬೇಕು : ಮೊದಲ ಸಾವಿರ ಮೈಲಿ ಹೋಗುವುದು ಅಷ್ಟೇನು ಕಷ್ಟವಲ್ಲ.
ಕೊನೆಯ ಮೈಲಿಯ ಉದ್ದ ನೂರು ಸಾವಿರ ಮೈಲಿ. ಹೌದು ತಾನೇ ?
ಮನೆಯ ಗೇಟಿನ ತನಕ ಹೋಗುವುದು ಅತಿ ಸುಲಭ.
ಮನೆಯೊಳಗೆ ಹೋಗುವುದು ಅತಿ ಕಷ್ಟ. ಜೊತೆಗೂ ಯಾರೂ ಇಲ್ಲ.
ಮರಣಸಂಕಟವಾದರೂ ಒಬ್ಬನೇ ಅನುಭವಿಸಬೇಕು.
ಹೆರಿಗೆ ಹೊತ್ತಿನ ತಾಯಿಯಂತೆ.
ಶಬ್ದಗಳ ಜೊತೆ ಕುಸ್ತಿ ಮಾಡಲೇಬೇಕು ಕವಿ.

ನಾಯಕ : ನನಗೆ ಮನೆಯಿಲ್ಲ.
ಮನೆಯಿಲ್ಲವೆಂಬ ಕೊರಗೂ ಇಲ್ಲ.
ಇರುವವರೆಗೂ ಇದ್ದ ಜಾಗವೇ ಗುಡಿಸಿಲು
ಬೀದಿಗಿಳಿದಾಗ ಉಳಿಯುವುದು ನೆನಪು. ಇನ್ನೊಂದು ಮನೆ ಕನಸು.

ಮುದುಕ : ಒಬ್ಬೊಬ್ಬನಿಗು ಒಂದು ಮನೆಯುಂಟು. ನಿನಗು ಇದೆ.
ನಿನ್ನ ಮನೆ ಬಿಟ್ಟು ಯಾವುದೊ ಮನೆಗೆ ನೀನು ಹೋದರೆ ನಿನಗೆ ನಷ್ಟ.

ನಾಯಕ : ಯಾವ ಮನೆಗೂ ನಾನು ಹೊರಟಿಲ್ಲವಲ್ಲ ?

ಮುದಕ : ಹಕ್ಕಿಗಿರದಿರಬಹುದು ಗೂಡು ಕಟ್ಟುವ ಚಿಂತೆ.

ಹಕ್ಕಿ ಸಾಕಿದ ಮಂದಿಗಿರಬಹುದು ಅಂಥ ಆಸೆ.

ಬಂಗಾರದೊಂದು ಪಂಜರದಲ್ಲಿ ಮುದ್ದು ಹಕ್ಕಿಯನಿಟ್ಟು ಅದರ
ಜೊತೆ ಜೊತೆಗೂ ತಾವು ನಗುವ ಆಸೆ.

ನಾಯಕ : ಇಲ್ಲ. ನನಗೆ ಗೊತ್ತಿದೆ.

ನಾನಂಥ ಗಿಣಿಯಲ್ಲವೆಂಬುದೂ ಗೊತ್ತಿದೆ – ನನಗೆ, ಅವರಿಗು ಕೂಡ.

ಮುದುಕ : ಅವರಿಗಂತಹ ಚಿಂತೆ ಇಲ್ಲವೇನು ?

ನಾಯಕ : ಇಲ್ಲ, ನನಗೆ ಗೊತ್ತು.

ಮುದುಕ : ನೀನಷ್ಟು ಖಾತರಿಯಾಗಿ ಹೇಳುವುದು ತಪ್ಪು.

ಅರಮನೆಯ ಮಾತು ಬಂದದ್ದು ಹೆಂಡತಿಯಿಂದ

ನಾಯಕ : ಅರಮನೆಯ ಮಾತು ಬಂದದ್ದು ಗೌಣ.

ಅವಳು ಹೇಳಿದ ಮಾತು ನಾಡ ಸೇವೆಯ ಮಾತು.

ಮುದುಕ : ನಾಡ ಸೇವೆಯ ಮಾತು, ದಿಟ. ಅರಮನೆಗು ಅವಕಾಶವುಂಟು.

ನಾಯಕ : ಅವಳು ಸುಳ್ಳಾಡಲಿಲ್ಲ.

ಅರಮನೆಯ ಕನಸನ್ನು ನನಗಾಗಿಯಾಗಲಿ ಅವಳಿಗೇ ಆಗಲಿ ಕಾಣಲಿಲ್ಲ.

ಮುದುಕ : ಅರಮನೆಯ ಕನಸಲ್ಲ.

ನೀನು ದಣಿದಿದ್ದಿ. ತುಂಬ ದೂರದ ನಡಿಗೆ. ಎಲ್ಲಾದರೂ ಒಂದು ಕಡೆ
ನೆಲೆನಿಂತು ಹಾಯಾಗಿರಲಿ ಎನುವ ಕನಸು.

ಅಂಥ ಕನಸಿದ್ದರೂ ಅವಳಿಗದು ಸಹಜ.

ಅರಮನೆಯ ಕನಸು ಕಂಡಿಲ್ಲವೆಂದೆ — ನಿನಗಾಗಿ ಅಥವಾ
ಅವಳಿಗಾಗಿಯು ಕೂಡ.

ಅವಳೊಬ್ಬ ತಾಯಿ.

ತನ್ನ ಮಕ್ಕಳಿಗಾಗಿ ಅಂಥ ಕನಸೊಂದು ಬಿದ್ದರು ಕ್ಷಮ್ಯ.

ನಾಯಕ : ಅವಳು ಸುಳ್ಳಾಡಲಿಲ್ಲ.

ಅವಳ ಮಕ್ಕಳಿಗಾಗಿ ಈ ದಾರಿ ತೋರಲಿಲ್ಲ.

ತೋರಿದ್ದರೂ ಹಾಗೆ ಅನ್ನುತಿದ್ದಳೆ ಹೊರತು ಮುಚ್ಚಿಟ್ಟು ಮಾತಾಡುತಿರಲಿಲ್ಲ.

ಮುದುಕ : ಅವಳು ಸುಳ್ಳಾಡಲಿಲ್ಲ.

ನಿಜ ಯಾವುದೆಂದು ಗೊತ್ತಿದ್ದು ಬಚ್ಚಿಟ್ಟರದು ಸುಳ್ಳು.

ಅವಳು ಬಚ್ಚಿಡಲಿಲ್ಲ.

ಹೇಳಿದ್ದು ನಿಜವಲ್ಲವೇನೊ ಎಂಬ ಶಂಕೆಯೂ ಇರಲಿಲ್ಲ.

ಅವಳು ಆಡಿದ ಮಾತು ಸುಳ್ಳಲ್ಲ – ಅರ್ಧ ಸತ್ಯ.

ನೆಲದ ಬಸಿರಲ್ಲಿ ಗುಳುಗುಳು ಹರಿದ ನೀರು ಕಣ್ಣಿಗೆ ಬೀಳದಿದ್ದರು ಕೂಡ
ನೀರು ಇರುವುದೆ ಸುಳ್ಳೆ ?

ಮಕ್ಕಳಿಗೆ ಮನೆ ಕೊಡುವ ಬಯಕೆ ತಾಯಿದೆಯ ಅಂತರ್ಗಂಗೆ.

ಬಯಕೆ ಆಡಿತು ಮಾತು – ಅವಳಿಗೂ ಗೊತ್ತಾಗಲಿಲ್ಲ.

ನಾಯಕ : ದೂರ ಬಂದಿದ್ದೇನೆ.

ಆ ದಾರಿಯುದ್ದಕ್ಕೂ ನನಗೆ ಬೆಂಬಲವಾಗಿ ನಿಂತವಳು ಆಕೆ.

ಊರುಗೋಲಾಗಿ ನಿಂತಿದ್ದು ಮಕ್ಕಳ ಶ್ರದ್ಧೆ.

ಕಾಡಲ್ಲಿ ಕಪ್ಪು ಕತ್ತಲಿನಲ್ಲಿ ಕೈಹಿಡಿದು ನಡೆಸಿದ್ದು ಅವರ ಈ ವಿಶ್ವಾಸ —

ನನ್ನಲ್ಲಿ ನನ್ನ ದೇವರಲ್ಲಿ.

ಮುದುಕ : ನೀನು ಭಾಗ್ಯವಂತ.

ನಾಯಕ : ಅಂಥ ವಿಶ್ವಾಸ ಕೈಬಿಡಬಹುದೆ ಈಗ ?

ದ್ರೋಹ ಬಗೆದೀತೇನು ?

ಮುದುಕ : ದ್ರೋಹವೆನುವುದು ತುಂಬ ದೊಡ್ಡ ಮಾತಾಯಿತು.

ಇದು ದ್ರೋಹವಲ್ಲ.

ದಾರಿ ಸವೆಯುತ್ತ ಬಂದಂತೆ ಹಲವರ ಕಾಲು ಸೋಲಬಹುದು.

ಮೊಣಕಾಲು ನೋವಿಂದ ಕುಸಿದು ಬಿದ್ದವ ಹೋಗುವಾತನಿಗೆ
ದ್ರೋಹಬಗೆದಂತೇನು ?

ಅಥವ ನಡೆದವನು ನಿಂತಾತನಿಗೆ ದ್ರೋಹ ಮಾಡಿದನೆಂದೆ ?

ಎರಡು ಬಯಕೆಯು ಸಹಜ — ಹೋಗುವಾಸೆಯು ಹಾಗೆ ನಿಲ್ಲುವಾಸೆ.

ಸಹಜವಾದೆರಡಕ್ಕೆ ನಡುವೆ ಘರ್ಷಣೆ ದ್ರೋಹವಲ.

ನಾಯಕ : ನನಗೀಗಲೇ ನಿಲ್ಲುವಾಸೆಯಿಲ್ಲ.

ರಾಜಧಾನಿಗೆ ಹೋದರೂ ನಿಲ್ಲಲೆಂದಲ್ಲ ಹೋಗುವುದು.

ಹೊಸದೊಂದು ವಿಧದ ದುಡಿತಕ್ಕೆ ತಾನೆ ?

ಅವರಿಗದೆ ಮನೆಯೇನೊ. ನನಗಂತು ಹೋಟೆಲು.

ಮುದುಕ : ಕಣ್ಣಿಗೂ ಕಾಣದಂತಹ ತೆಳ್ಳನೆಯ ಎಳೆಯ ಬಲೆಯಲ್ಲಿ ಸಿಕ್ಕಂಥ ಜನ

ಅಂಥದೇ ಒಂದು ಬಲೆ ಬೀಸುವುದು.

ಬಲೆಗೆ ಬಿದ್ದಾದ ಮೇಲೂ ಬಲೆಗೆ ಬಿದ್ದ ಅನುಭವವಾಗದಷ್ಟು ಮೃದು
ಬಂಧ. ಜೊತೆಗೆ ಹಿತ.

ಅಂಥ ಬಲೆ ಈ ಸೇವೆ ಮಾತು.

ನಿನ್ನ ಕಾಲಿಗೆ ತೊಡಕು ಹೆಣ್ಣಲ್ಲ, ಹೊನ್ನಲ್ಲ, ಅರಮನೆಯ ಖುಷಿಯ
ಜೀವನವಲ

ತೊಡಕು ಈ ಸೇವೆಯಾಸೆ.

ಜನಸೇವೆ, ತಾಯಿನಾಡಿನ ಸೇವೆ, ಅಂಥ ಸೇವೆಗೆ ಬರುವ ಅವಕಾಶ
ಕಣ್ಣಮುಂದೇ ಬಂದು ಬಣ್ಣಬಣ್ಣದ ನೂರು ಚಿತ್ರಗಳ ಬಿಚ್ಚುವುವು
ಎದೆ ಕದಿವ ಚಿತ್ರಗಳು.
ಕಲ್ಪನೆಗೆ ಬಲೆಯಾಗಿ ಹಾಳಾದ ಮಂದಿಯೆ ಹೆಚ್ಚು
ಎಂದೆ ಚಿಂತನೆ ಬೇಕು. ಕಾಳಿಂದ ಜೊಳ್ಳು ತೆಗೆದೆಸೆವ ಬುದ್ಧಿಯು ಬೇಕು.
ಎದೆ ಸೋಲುವುದು ಈಗ – ಕೊನೆಯ ಮೈಲಿಯಲ್ಲಿ.

ನಾಯಕ : ಕೊನೆಯ ಮೈಲಿಗೆ ಯಾರ ಜೊತೆಯೂ ಸಾಧ್ಯವಿಲ್ಲ.

ಮುದುಕ : ನದಿ ಇರುವದಲ್ಲಿ, ನದಿಯ ಸೇತುವೆ ಕೂಡ ಭದ್ರವಿಲ್ಲ.
ವೈತರಣಿಯಂಥ ನದಿ. ಆಚೆಗಿದೆ ಕಾಡು.
ಒಬ್ಬನೇ ಹೋಗಬೇಕು.
ಜೊತೆಗಾಗಿ ಅವರಿವರ ಹಾದಿ ನೋಡುವುದು ಶುದ್ಧ ತಪ್ಪು.
ಬಂದರೊಳ್ಳೆಯದು ಬರದಿದ್ದರಷ್ಟೇ ಹೋಯ್ತು ಎನುವ ಛಲ ಬೇಕು.

ನಾಯಕ : ಆಚೆ ಕಾಡಿಗೆ ಹೋದ ಜನವುಂಟೆ ?

ಮುದುಕ : ನದಿಯಾಚೆ ದಡದಲ್ಲಿ ನಾ ಕಂಡ ಹಾಗೆ ಬೆಸ್ತರ ಒಂದು ಸಂಸಾರವುಂಟು.
ಅವರಿಗಿನ್ನೂ ಕಾಡ ಕಡೆ ಹೋಗುವುದು ಸಾಧ್ಯವಿಲ್ಲ.

ನಾಯಕ : ಬಾಣ ನೇರದ ನಡಿಗೆ ನನ್ನನಿಲ್ಲಿಗೆ ತಂದು ನಿಲ್ಲಿಸಿದೆ.
ಈಗೆಲ್ಲಿಗೆ ?
ಜೊತೆಗೆ ಬಂದವರಿನ್ನು ಜೊತೆಗೆ ಬರಲಾರರು.
ಈಗೆಲ್ಲಿಗೆ ?
ಗೇಟುವರೆಗೂ ಜನದ ಜಾತ್ರೆ, ಗಲಿಬಿಲಿ, ಕೂಗು.
ಈಗ ಯಾರೂ ಇಲ್ಲ. ಹೋಗುವುದು ಮನೆಗೇ ?
ಜನದ ಮೋಕ್ಷದ ದಾರಿ ನನಗು ಮೋಕ್ಷದ ದಾರಿ —
ಅಲ್ಲವೇನೋ ?
ನನ್ನ ಮೋಕ್ಷದ ದಾರಿ ಬೇರೆಯೇನೋ

ಮುದುಕ : ಮೋಕ್ಷಕ್ಕೆ ದಾರಿ ಹುಡುಕುವ ಕೆಲಸ ಗುಂಪು ಮಾಡುವುದಲ್ಲ.
ಸ್ವರ್ಗಕ್ಕೆ ಇರುವ ಬಾಗಿಲು ಅಷ್ಟೆ — ಗುಂಪಿಗಲ್ಲ.
ಸುತ್ತು ತಿರುಗುವ ಗೇಟು — ಒಬ್ಬರಿಗೇ ಅವಕಾಶ.
ಮೈಕಟ್ಟಿಕೊಂಡಾತ್ಮ ಸ್ವರ್ಗದೆತ್ತರವನ್ನು ಮುಟ್ಟುವುದು ಸಾಧ್ಯವೇ ?
ಸಾಧ್ಯವಿಲ್ಲ.

ನಾಯಕ : ಕಟ್ಟಿರುಳ ಕಪ್ಪು ಬಯಲಲ್ಲಿ ಎಲೆಯಿರದ ಮರವಾಗಿ ನಿಲ್ಲಬೇಕು.
ಬಯಲ ಬೆತ್ತಲೆಯಲ್ಲಿ ಒಂದೆ ಮರ ನಿಲ್ಲಬೇಕು.

ಮುದುಕ : .ನಿಂತು ಹೂ ಬಿಡಬೇಕು.

ಕೊಂಬೆ ಕೊಂಬೆಗು ಹೂವು, ಹಣ್ಣನ್ನು ಹೊತ್ತು ಹೊರವಾಗಬೇಕು.
ಹತ್ತು ದಿಕ್ಕಿಗು ಕಪ್ಪು ನೆರಳಿಸೆಯಬೇಕು.
ದಾರಿಹೋಕರು ಬಂದು ನೆರಳಲ್ಲಿ ನಿಂತರೆ ಪುಣ್ಯ — ಮರಕಲ್ಲ, ಅವರಿಗೆ.
ಬರದಿದ್ದರದು ಅವರ ದೌರ್ಭಾಗ್ಯ.
ದಾರಿಹೋಕರಿಗಾಗಿ ಮರ ಹೋಗಿ ಮಾರುಕಟ್ಟೆಯ ಮಧ್ಯ
ನಿಂತರದಕದರಾಸೆಯೇ ಕೊಡಲಿ.

ನಾಯಕ : ಇದುವರೆಗು ಇದ್ದದ್ದು ಜನದ ಕನಸು.
ಹತ್ತು ಜನ ಇದ್ದಾಗಲೂ ಅಷ್ಟೆ, ಇರದಿದ್ದ ಗಳಿಗೆಯಲ್ಲೂ ಅಷ್ಟೆ —
ಇದ್ದದ್ದು ಒಂದೆ ಒಂದೇ ಚಿಂತೆ : ಜನದ ಚಿಂತೆ.
ನಾನು, ಜನ ಒಂದೆ, ಎರಡಲ್ಲ– ಅಂಥ ತಾದಾತ್ಮ್ಯವಿತ್ತು.

ಮುದುಕ : ಜನವು ನೀನೂ ಒಂದೆ ಎರಡಲ್ಲ ಅಂದೆಯಾ ?
ಜನ ಬೇರೆ, ನೀನು ಯಾವಾಗಲೂ ಅವರಿಂದ ಬೇರೆ.
ನೀನಂದುಕೊಂಡಿದ್ದು, ಬಿಟ್ಟಿದ್ದು ಮುಖ್ಯವಲ್ಲ.
ನೀನೆ ನೋಡುವಿಯಂತೆ.
ಎಂಥವರು ಈ ಜನ, ಅವರ ಕಣ್ಣಿಗೆ ನೀನು ಯಾರೆಂದು ನೀನೆ
ನೋಡುವೆಯಂತೆ.

ನಾಯಕ : ಜನದ ಜೊತೆ ಬಾಳಿದ್ದು, ದುಡಿದಿದ್ದು ವ್ಯರ್ಥವೇನು ?
ನಾನು ಬರೆದದು ನೀರ ಮೇಲೇ ?

ಮುದುಕ : ಜನದ ಜೊತೆ ಬಾಳಿದ್ದು ವ್ಯರ್ಥವಲ್ಲ.
ಮೇಲಕ್ಕೆ ಹಾರುವುದು ನೆಲವಿದ್ದರೇ ಸಾಧ್ಯ.
ಕಾಲ ಜೊತೆಗೂ ನೆಲವು ಬರುವುದಾದರೆ ಹಾರುವುದು ಸಾಧ್ಯವೆ ಹೇಳು.
ಈಗ ಬಂದಿದೆ ಗಳಿಗೆ. ಮುರುಕು ಸೇತುವೆ ಮೇಲೆ ಹೋಗಬೇಕಾದ ಗಳಿಗೆ.
ಅದಕೆ ಬೇಕಾದ್ದು ನೀನು. ನಿನ್ನ ನಿಶ್ಚಯ, ಕಣ್ಣುಪಟ್ಟಿಯ ಕುದುರೆ ಓಟ.
ನಿನಗೆ ನೀನೇ ಆಗಿ ಉದ್ಧಾರವಾಗಬೇಕು.
ನಿನಗೆ ನೀನೇ ಆಗುವದರಲ್ಲಿ ಸುತ್ತಲವರಿಗು ಕ್ಷೇಮ.

[ ಹೆಂಗಸೊಬ್ಬಳು ಬಾಗಿಲಿಗೆ ಬರುತ್ತಾಳೆ. ಅವಳ ಕೈಯಲ್ಲಿ ಬಟ್ಟೆ ಸುತ್ತಿದ ಮಗುವೊಂದಿದೆ. ಅವಳ ಮಾತಿನಲ್ಲಿ ದುಃಖವಿದೆ]

ನಾಯಕ : ಯಾರಮ್ಮ, ಒಳಗೆ ಬಾ.

ಹೆಂಗಸು : ಕಾಪಾಡು, ತಂದೆ.
ಕಾಪಾಡು.

ನಾಯಕ : ಏನಾಗಬೇಕಮ್ಮ ?

ಹೆಂಗಸು : ದಿಕ್ಕಿಲ್ಲದವಳಪ್ಪ – ನಾನನಾಥೆ.
ನೀನೆ ಕಾಪಾಡಬೇಕು.
ದೇವರಂತಹ ಗಂಡ ತೀರಿಕೊಂಡರು. ಇದ್ದುದ್ದೆಲ್ಲಾ ಹೋಯ್ತು
ಕುಂಕುಮದ ಜೊತೆಗೇ,
ನನ್ನ ಪಾಲಿಗೆ ನನ್ನದಾಗುಳಿದ ಮಗುವೊಂದು —
ಅದಕು ಬರಬೇಕೆ ಬೇನೆ ?
ತಬ್ಬಲಿಯ ಮೇಲೆ ದೇವರ ಕೋಪ.
ನೂರು ಜನ ಹೇಳಿದ್ದ ಎಲ್ಲವನ್ನೂ ಮಾಡಿ ಈಗ ಬಂದಿದ್ದೇನೆ ನಿಮ್ಮ ಬಳಿಗೆ.
ಹಸಿರಾಯ್ತು, ಇಂಗ್ಲಿಷೌಷಧವಾಯ್ತು, ಎಳೆಯ ಮೈತುಂಬ ಕಂಡಿಯಾಯ್ತು,
ಕಂಡ ದೇವರಿಗೆಲ್ಲ ಕೈ ಮುಗಿದರೂ ಕಂದ ಹಾಲು ಕುಡಿಯುವುದಿಲ್ಲ.
ಕಾಪಾಡು, ತಂದೆ...

ನಾಯಕ : ಅಮ್ಮ, ನಾನೇನು ಮಾಡಲಿ ?

ಹೆಂಗಸು : ಮಗುವು ತಬ್ಬಲಿ. ಉಳಿಸು.

ನಾಯಕ : ನನಗಂಥ ಯೋಗ್ಯತೆಯಿಲ್ಲ. ಯಾರಿಗೂ ಇಲ್ಲವೇನೋ.
ವೈದ್ಯರಲ್ಲಿಗೆ ಹೋಗು. ಮುಖ್ಯ ದೇವರಿಷ್ಟ.

ಹೆಂಗಸು : ವೈದ್ಯರಿಗೆ ಸಾಧ್ಯವಿಲ್ಲ,
ಎಂದೆ ಇಲ್ಲಿಗೆ ಬಂದೆ.

ನಾಯಕ : ನಾನು ಸಾಮಾನ್ಯ ಮಾನವ.
ನಾನೇನು ದೇವರೇ ?

ಹೆಂಗಸು : ನೀನು ದೇವರು ಎಂದೆ ಬಂದೆ.
ನೀನು ದೇವರು ಎಂದು ಜನರಂದರಲ್ಲ !

ನಾಯಕ : ಯಾರಮ್ಮ ಹೇಳಿದರು ?

ಹೆಂಗಸು : ಒಂದು ತಿಂಗಳ ಹಿಂದೆ ನೀನು ಊರಾಚೆ ಕಡೆ ಬಂದಿದ್ದೆಯಂತೆ.

ನಾಯಕ : ಹೌದು. ಬಂದಿದ್ದೆ.

ಹೆಂಗಸು : ಒಂದೊಂದು ಜೋಪಡಿಗು ಹೋಗಿ ಮನೆಯವರ ಜೊತೆ ಮಾತನಾಡಿದೆಯಂತೆ.

ನಾಯಕ : ಆಗ ಏನಾಯ್ತು ?

ಹೆಂಗಸು : ಒಂದು ಮನೆಯಲ್ಲಿ ಮಗುವೊಂದು ಮಲಗಿತ್ತು.
ಹೆಳವು ಮಗು. ಎಂದು ನಡೆದಿದ್ದಿಲ್ಲ.
ನೀನು ಮಗುವಿನ ಮೈಯ ಮೇಲೆ ಕೈ ಆಡಿದೆಯಂತೆ
ಮಗು ನಕ್ಕಿತಂತೆ.

ನಾಯಕ : ಇರಬಹುದು, ನೆನಪಿಲ್ಲ.

ಕೊಂಬೆ ಕೊಂಬೆಗು ಹೂವು, ಹಣ್ಣನ್ನು ಹೊತ್ತು ಹೊರವಾಗಬೇಕು.
ಹತ್ತು ದಿಕ್ಕಿಗು ಕಪ್ಪು ನೆರಳೆಸೆಯಬೇಕು.
ದಾರಿಹೋಕರು ಬಂದು ನೆರಳಲ್ಲಿ ನಿಂತರೆ ಪುಣ್ಯ — ಮರಕಲ್ಲ, ಅವರಿಗೆ.
ಬರದಿದ್ದರದು ಅವರ ದೌರ್ಭಾಗ್ಯ.
ದಾರಿಹೋಕರಿಗಾಗಿ ಮರ ಹೋಗಿ ಮಾರುಕಟ್ಟೆಯ ಮಧ್ಯ
ನಿಂತರದಕದರಾಸೆಯೇ ಕೊಡಲಿ.

ನಾಯಕ : ಇದುವರೆಗು ಇದ್ದದ್ದು ಜನದ ಕನಸು.
ಹತ್ತು ಜನ ಇದ್ದಾಗಲೂ ಅಷ್ಟೆ, ಇರದಿದ್ದ ಗಳಿಗೆಯಲ್ಲೂ ಅಷ್ಟೆ —
ಇದ್ದದ್ದು ಒಂದೆ ಒಂದೇ ಚಿಂತೆ : ಜನದ ಚಿಂತೆ.
ನಾನು, ಜನ ಒಂದೆ, ಎರಡಲ್ಲ– ಅಂಥ ತಾದಾತ್ಮ್ಯವಿತ್ತು.

ಮುದುಕ : ಜನವು ನೀನೂ ಒಂದೆ ಎರಡಲ್ಲ ಅಂದೆಯಾ ?
ಜನ ಬೇರೆ, ನೀನು ಯಾವಾಗಲೂ ಅವರಿಂದ ಬೇರೆ.
ನೀನಂದುಕೊಂಡಿದ್ದು, ಬಿಟ್ಟಿದ್ದು ಮುಖ್ಯವಲ್ಲ.
ನೀನೆ ನೋಡುವಿಯಂತೆ.
ಎಂಥವರು ಈ ಜನ, ಅವರ ಕಣ್ಣಿಗೆ ನೀನು ಯಾರೆಂದು ನೀನೆ
ನೋಡುವೆಯಂತೆ.

ನಾಯಕ : ಜನದ ಜೊತೆ ಬಾಳಿದ್ದು, ದುಡಿದಿದ್ದು ವ್ಯರ್ಥವೇನು ?
ನಾನು ಬರೆದದು ನೀರ ಮೇಲೇ ?

ಮುದುಕ : ಜನದ ಜೊತೆ ಬಾಳಿದ್ದು ವ್ಯರ್ಥವಲ್ಲ.
ಮೇಲಕ್ಕೆ ಹಾರುವುದು ನೆಲವಿದ್ದರೇ ಸಾಧ್ಯ.
ಕಾಲ ಜೊತೆಗೂ ನೆಲವು ಬರುವುದಾದರೆ ಹಾರುವುದು ಸಾಧ್ಯವೆ ಹೇಳು.
ಈಗ ಬಂದಿದೆ ಗಳಿಗೆ. ಮುರುಕು ಸೇತುವೆ ಮೇಲೆ ಹೋಗಬೇಕಾದ ಗಳಿಗೆ.
ಅದಕೆ ಬೇಕಾದ್ದು ನೀನು. ನಿನ್ನ ನಿಶ್ಚಯ, ಕಣ್ಣುಪಟ್ಟಿಯ ಕುದುರೆ ಓಟ.
ನಿನಗೆ ನೀನೇ ಆಗಿ ಉದ್ಧಾರವಾಗಬೇಕು.
ನಿನಗೆ ನೀನೇ ಆಗುವದರಲ್ಲಿ ಸುತ್ತಲವರಿಗು ಕ್ಷೇಮ.

[ ಹೆಂಗಸೊಬ್ಬಳು ಬಾಗಿಲಿಗೆ ಬರುತ್ತಾಳೆ. ಅವಳ ಕೈಯಲ್ಲಿ ಬಟ್ಟೆ ಸುತ್ತಿದ ಮಗು ವೊಂದಿದೆ. ಅವಳ ಮಾತಿನಲ್ಲಿ ದುಃಖವಿದೆ]

ನಾಯಕ : ಯಾರಮ್ಮ, ಒಳಗೆ ಬಾ.

ಹೆಂಗಸು : ಕಾಪಾಡು, ತಂದೆ.
ಕಾಪಾಡು.

ನಾಯಕ : ಏನಾಗಬೇಕಮ್ಮ ?

ಹೆಂಗಸು : ದಿಕ್ಕಿಲ್ಲದವಳಪ್ಪ – ನಾನನಾಥೆ.
ನೀನೇ ಕಾಪಾಡಬೇಕು.
ದೇವರಂತಹ ಗಂಡ ತೀರಿಕೊಂಡರು. ಇದ್ದುದ್ದೆಲ್ಲಾ ಹೋಯ್ತು
ಕುಂಕುಮದ ಜೊತೆಗೇ,
ನನ್ನ ಪಾಲಿಗೆ ನನ್ನದಾಗುಳಿದ ಮಗುವೊಂದು —
ಅದಕ್ಕು ಬರಬೇಕೆ ಬೇನೆ ?
ತಬ್ಬಲಿಯ ಮೇಲೆ ದೇವರ ಕೋಪ.
ನೂರು ಜನ ಹೇಳಿದ್ದ ಎಲ್ಲವನ್ನೂ ಮಾಡಿ ಈಗ ಬಂದಿದ್ದೇನೆ ನಿಮ್ಮ ಬಳಿಗೆ.
ಹಸಿರಾಯ್ತು, ಇಂಗ್ಲಿಷೌಷಧವಾಯ್ತು, ಎಳೆಯ ಮೈತುಂಬ ಕಂಡಿಯಾಯ್ತು,
ಕಂಡ ದೇವರಿಗೆಲ್ಲ ಕೈ ಮುಗಿದರೂ ಕಂದ ಹಾಲು ಕುಡಿಯುವುದಿಲ್ಲ.
ಕಾಪಾಡು, ತಂದೆ...
ನಾಯಕ : ಅಮ್ಮ, ನಾನೇನು ಮಾಡಲಿ ?
ಹೆಂಗಸು : ಮಗುವು ತಬ್ಬಲಿ. ಉಳಿಸು.
ನಾಯಕ : ನನಗಂಥ ಯೋಗ್ಯತೆಯಿಲ್ಲ. ಯಾರಿಗೂ ಇಲ್ಲವೇನೋ.
ವೈದ್ಯರಲ್ಲಿಗೆ ಹೋಗು. ಮುಖ್ಯ ದೇವರಿಷ್ಟ.
ಹೆಂಗಸು : ವೈದ್ಯರಿಗೆ ಸಾಧ್ಯವಿಲ್ಲ,
ಎಂದೆ ಇಲ್ಲಿಗೆ ಬಂದೆ.
ನಾಯಕ : ನಾನು ಸಾಮಾನ್ಯ ಮಾನವ.
ನಾನೇನು ದೇವರೇ ?
ಹೆಂಗಸು : ನೀನು ದೇವರು ಎಂದೆ ಬಂದೆ.
ನೀನು ದೇವರು ಎಂದು ಜನರಂದರಲ್ಲ !
ನಾಯಕ : ಯಾರಮ್ಮ ಹೇಳಿದರು ?
ಹೆಂಗಸು : ಒಂದು ತಿಂಗಳ ಹಿಂದೆ ನೀನು ಊರಾಚೆ ಕಡೆ ಬಂದಿದ್ದೆಯಂತೆ.
ನಾಯಕ : ಹೌದು. ಬಂದಿದ್ದೆ.
ಹೆಂಗಸು : ಒಂದೊಂದು ಜೋಪಡಿಗು ಹೋಗಿ ಮನೆಯವರ ಜೊತೆ ಮಾತನಾಡಿ
ದೆಯಂತೆ.
ನಾಯಕ : ಆಗ ಏನಾಯ್ತು ?
ಹೆಂಗಸು : ಒಂದು ಮನೆಯಲ್ಲಿ ಮಗುವೊಂದು ಮಲಗಿತ್ತು.
ಹೆಳವು ಮಗು. ಎಂದು ನಡೆದಿದ್ದಿಲ್ಲ.
ನೀನು ಮಗುವಿನ ಮೈಯ ಮೇಲೆ ಕೈ ಆಡಿದೆಯಂತೆ
ಮಗು ನಕ್ಕಿತಂತೆ.
ನಾಯಕ : ಇರಬಹುದು, ನೆನಪಿಲ್ಲ.

ಹೆಂಗಸು : ನಾನೆ ಕಣ್ಣಾರೆ ನೋಡಿದೆ ನೊನ್ನೆ.
ನೆರೆಹೊರೆಯ ಹತ್ತು ಮಕ್ಕಳ ಜೊತೆಗೆ ಜೂಟಾಟವಾಡುತಿತ್ತು ಮಗು.
ನಾಯಕ : ಆಶ್ಚರ್ಯ.
ಹೆಂಗಸು : ನನ್ನ ಮೇಲೂ ಅಂಥ ದಯೆಯು ಬಾರದೆ ನಿನಗೆ ?
ಬಾಳಿನುದ್ದಕ್ಕೂ ಯಾರಿಗೂ ಕೇಡು ಬಗೆದಿಲ್ಲ, ಸುಳ್ಳಾಡಲಿಲ್ಲ.
ಒಂದೆ ತಬ್ಬಲಿ ಮಗು, ಕಾಪಾಡು ತಂದೆ.
ನಾಯಕ : ನಾನೇನು ಮಾಡಲಿ, ಹೇಳು.
ನಾನು ದೇವರೆ ಅಲ್ಲ.
ನಿನ್ನ ಮಗುವಿನ ಪ್ರಾಣ ಉಳಿದರೂ ಕೂಡ ಅದು ನಿನ್ನ ಶ್ರದ್ಧೆಯ ಬಲ
ಅದರಲ್ಲಿ ನನ್ನ ಕೈವಾಡವಿಲ್ಲ.
ಇರಲಿ ಆ ಮಾತು. ನಿನಗೀಗ ಯಾವ ಮಾತೂ ಅರ್ಥವಾಗುವುದಿಲ್ಲ.
ನಾನೇನು ಮಾಡಲಿ, ಹೇಳು.
ಹೆಂಗಸು : ಮಗುವನ್ನು ನಿನ್ನ ಪಾದದ ಮೇಲೆ ಹಾಕುತ್ತೇನೆ.
ಮೈಯುದ್ದ ಕೈ ಆಡಿ. ಹರಸು ತಂದೆ.
ಮಗು ಬದುಕಲೆನ್ನು. ಅನ್ನು ದೇವರೆ, ಅನ್ನು. ಮೈತುಂಬಿಕೊಳಲೆನ್ನು.
ನಾಯಕ : ಹಾಗೆ ಆಗಲಿ, ತಾಯಿ.

[ ಹೆಂಗಸು ತನ್ನ ಮಗುವನ್ನು ನಾಯಕನ ಪಾದದ ಮೇಲಿಡುತ್ತಾಳೆ. ನಾಯಕ ಅದರ ಮುಖವನ್ನೇ ನೋಡಿ ಮೈ ಸವರುತ್ತಾನೆ. ಮಗು ಮಿಲುಗಾಡುತ್ತದೆ. ]

ಹೋಗಿ ಬಾ, ತಾಯಿ.
ಮಗುವನುಳಿಸಲಿ ನಿನ್ನ ಸುಕೃತ, ಶ್ರದ್ಧೆ

[ ಹೆಂಗಸು ಹೋಗುವಳು, ನಾಯಕನ ಮುಖ ನೋವಿನಲ್ಲಿ ಗೆರೆಗೆರೆಯಾಗುವುದು. ಅವನ ಮಾತು ಭಾರವಾಗಿದೆ. ]

ಓ ನನ್ನ ಜನವೇ
ನಿಮಗೆ ನಾನೆ ನನ್ನಂಥವನೆ ದೇವರಾದೆನೆ ? ಹೇಗೆ ?
ನಾನು ನಿಮ್ಮೊಳಗೊಬ್ಬ, ದೇವರಲ್ಲ.
ನಿಮ್ಮ ಮನೆಯೊಳಗೆ ನನಗೂ ಜಾಗವಿರಲಿ — ಅಡಿಗೆಮನೆಯಲ್ಲಿ,
ಜಗುಲಿಯ ಮೇಲೆ.
ಮಂದಾಸನದ ಮೇಲೆ ಬೇಡ.
ನೀನೆ ನನ್ನೆಲ್ಲ ಸಂಪತ್ತು, ನೆಮ್ಮದಿ, ಕನಸು
ದೂರವಿಡಬೇಡಿ. ಮುದುಕ ನಾನು.

ಎವೆತುಂಬ ಪ್ರೀತಿಯಿದೆ. ಮೈಗೆ ಮೈ ಬೆಸೆದು ಮೂಗುಜ್ಜಿ ಹೇಳುವ ಪ್ರೀತಿ.
ದೇವರದ್ದಲ್ಲ ಇಂಥ ಪ್ರೀತಿ.
ಗಾಯವಾದಾಗ ನೋಯುವ, ಅಳುವ ಮಾನವನ ಪ್ರೀತಿಯಿದು, ನನದು.
ನಂಬಿ.

ಮುದುಕ : ಜನ ಬೇರೆ, ನೀನು ಬೇರೆ.

ನಾಯಕ : ಜನ ಬೇರೆ, ನಾನು ಬೇರೆ.
ನಾನು, ಜನ ಒಂದಲ್ಲ ... ಒಂದಲ್ಲ.

ಮುದುಕ : ಒಂದಲ್ಲ.
ಒಂದಾಗುವದು ಸಾಧ್ಯವೂ ಅಲ್ಲ.
ನೀನೀಗ ಒಬ್ಬಂಟಿಗ.
ಜನ ಎಂದೂ ನಿನ್ನಲ್ಲಿ ತಮ್ಮ ದೇವರ ಕಂಡು ದೂರ ನಿಂತರು ಭಕ್ತಿಭಾವದಲ್ಲಿ.
ನೀನೀಗ ಒಬ್ಬಂಟಿಗ.

ನಾಯಕ : ಗಿಡದ ತುದಿಯಿಂದ, ಮಹಡಿ ಮನೆ ಮೇಲಿಂದ, ನೂರು ವೇದಿಕೆಯಿಂದ
ಕೂಗಿ ಹೇಳುತ್ತೇನೆ : ನಾನು ದೇವರಲ್ಲ.

ಮುದುಕ : ಹೇಳಿ ನೋಡುವೆಯಂತೆ.
ಅಲ್ಲ ಅಲ್ಲ ಎಂದು ಕೂಗಿಕೊಂಡಷ್ಟು ಅವರ ಶ್ರದ್ಧೆಗೆ ಪುಷ್ಟಿ.
ಹೇಳಿ ನೋಡುವೆಯಂತೆ.

ನಾಯಕ : ಎಂಥ ಅನ್ಯಾಯವಾಯಿತು !

ಮುದುಕ : ಇವರ ಪಾಲಿಗೆ ನೀನು ದೇವರಾದದ್ದಕ್ಕೆ ಆಶ್ಚರ್ಯವೇಕೆ ?
ಬಲು ಹಿಂದಿನಿಂದಲೂ ಜನದ ದೇವರ ಚಿತ್ರ ಇದು ತಾನೆ, ಅಲ್ಲವೇ ?
ಸರ್ವಗುಣಸಂಪನ್ನ, ಸರ್ವಾಂಗಸುಂದರ, ದಯಾಮಯದೇವ, ಸರ್ವಶಕ್ತ,
ಅವನಿಗಾರು ತಲೆ, ಹನ್ನೆರಡು ಕೈ, ಗರುಡವಾಹನ ಅವನು, ಅವನು, ಅಮರ.
ತಮಗೆ ದುಸ್ಸಾಧ್ಯವಾದದ್ದೆಲ್ಲ ಅವನಿಗೋ ನೀರು ಕುಡಿದಷ್ಟು ಸುಲಭ.
ತಮಗಿಲ್ಲದೆಲ್ಲ ಗುಣಗಳ ಮೂಟೆ, ಉಗ್ರಾಣ ದೇವರು
ಅವರಿಗೆಂದೂ ಸಾಧ್ಯವಿಲ್ಲದೆತ್ತರದಲ್ಲಿ ನೀನು ನಿಂತೆ.
ನಿನಗೆ ಗೊತ್ತಿಲ್ಲದಂತೆಯೆ ನೀನು ದೇವರಾದೆ. ಆಗಿ ಸೋತೆ.

ನಾಯಕ : ಜನ ದ್ರೋಹ ಮಾಡಿದರು : ನಾನು ಸೋತೆ.

ಮುದುಕ : ದ್ರೋಹವೋ ಅಲ್ಲವೋ ಅಂತು ಸೋತೆ.
ಭಾವ ಸೋಲುವದು ಮಾತಿಂದ.
ನಾಯಕನ ಸೋಲು ಅನುಯಾಯಿಯಿಂದ-

ನಾಯಕ : ಎಂಥ ಅನ್ಯಾಯವಾಯಿತು !

ಮುದುಕ : ಹೌದು, ಅನ್ಯಾಯ, ದೊಡ್ಡ ಅನ್ಯಾಯ.

ನೀನು ಹೇಳಿದ ನೀತಿ ಹಾಳಾಯಿತು.
ಬರೆದೆಲ್ಲ ಗ್ರಂಥಗಳ ಮೇಲೆ ಕುಂಕುಮ ಹೂವು.
ಒಳಗಿನೆಲ್ಲವು ಜಿರಳೆ ಪಾಲಾಯಿತು.
ನಿನ್ನವರಿಗೆ ಈಗ ದೇವರಾಡುವ ಮಾತು.
ಮಾತು ಪೂಜೆಗೆ ಯೋಗ್ಯ. ನಡೆಸುವದು ಸಾಧ್ಯವಿಲ್ಲ.
ನಾಯಕ : ಸುತ್ತಣ ಜನಕ್ಕಿನ್ನು ನನ್ನ ಅಪ್ಪುಗೆ ಬೇಡ.
ನಾನೀಗ ಅವರ ಪಾಲಿಗೆ ದೂರದೊಂದು ಲೋಕದ ಮಾಲು.
ಅವರು ಮನೆಯಲ್ಲಿ, ನನಗೋ ಗರ್ಭಗುಡಿವಾಸ, ಮಬ್ಬು, ಜಾವಲಿ, ಹೊಗೆ.
ಮುದುಕ : ಹೋಗುವುದು ರಾಜಧಾನಿಗೆ ? ಹೇಳು.
ನಾಯಕ : ಜನ ಬಂದು ನೋಡಬಾರದೆ ತಮ್ಮ ದೇವರನ್ನು !
ಎಲ್ಲ ಕಳಕೊಂಡು ತಬ್ಬಲಿ ನಿಂತ ದೇವರನ್ನು !
ಮುದುಕ : ನೀನು ಅರಮನೆಗೆ ಹೋಗಿ ನಾಡ ನಡೆಸುವ ಭಾರ
ಹೊತ್ತರೇನಾಗುವುದು, ಗೊತ್ತೆ?
ತಮ್ಮ ದೇವರೆ ಬಂದು ನೊಗ ಹೊತ್ತು ನಿಂತಾಗ ಜನದ ಕೆಲಸವು ಒಂದೆ —
ದೇವರರ್ಚನೆ ಕೆಲಸ.
ಗಣರಾಜ್ಯದಲ್ಲಿ ಸರಿಯೇ ಇಂಥ ಏರ್ಪಾಟು ?
ನೀನು ಆಡಿದ್ದೆಲ್ಲ ವೇದ.
ಯಾರಾದರೂ ಎದುರು ನಿಂತು ಪ್ರತಿವಾದ ಹೂಡುವುದೆ ? ಘೋರ ಪಾಪ!
ನೀನು ಮಾಡುವ ತಪ್ಪು ತಪ್ಪೇ ಅಲ್ಲ.
ತಪ್ಪು ಮಾಡುವ ಹಕ್ಕು ದೇವರಿಗೆ ಇಲ್ಲ.
ಸರ್ವಾಧಿಕಾರಿಯಾಗುವೆ ನೀನು. ಆಡಿದ್ದೆ ಆಟ, ನಡೆದದ್ದು ದಾರಿ.
ಒಂದೊಂದು ಮಾತಿಗೂ ಚಿನ್ನ, ಬೆಳ್ಳಿಯ ಕಟ್ಟು.
ಕುರುಬ ನೀನಾಗಿ ನಡೆಯುತ್ತ ಹೋದಂತೆ ಹಿಂದೆ ಬರುವುದು ದೊಡ್ಡ ಕುರಿ
ಮಂದೆ.
ಗಣರಾಜ್ಯ ಹಾಳು, ಎಲ್ಲ ಎಲ್ಲಾ ಹಾಳು, ನೀನೊ — ಮಣ್ಣುಪಾಲು.
ನಾಯಕ : ಬೇಡ ಹಾಗಾಗುವುದು ಬೇಡ.
ಓ ನನ್ನ ಜನವೇ, ಜನದ ಕನಸೇ ... ...
ಏನಾಗಿ ಹೋಯಿತು !
ಮುದುಕ : ನಿನಗಿನ್ನು ಬೆತ್ತಲೆ ನಿಲುವ ಗಳಿಗೆ ಬಂದಿಲ್ಲ.
ಪಶ್ಚಿಮದ ಆಕಾಶ ಗಾಯಗೊಂಡಾಗ ಬರುವುದು ಗಳಿಗೆ.
ಆಕಾಶದಲ್ಲಿ ಹೆಣ ತೇಲಿದಾಗ
ನೆಲದ ಮೇಲೂ ಒಂದು ಹೆಣ ಬೀಳುವುದು
ನಿನ್ನ ಹೆಣ ಅಥವಾ ಜನದ ಸೇವೆಯ ನಿನ್ನ ಹಂಬಲದ ಹೆಣ.

## ದೃಶ್ಯ ೩

[ರಂಗಭೂಮಿಯ ಒಂದು ಅಂಚಿಗೆ ದೊಡ್ಡ ಸಭೆಯೊಂದರ ಕೊನೆಯ ಸಾಲಿದೆ. ದೊಡ್ಡ ಸಭೆಯ ಗಲಭೆ ಕೇಳುತ್ತಿದೆ. ರಂಗಭೂಮಿಯ ಒಂದು ಕಡೆಯಿಂದ ಗುಂಪು ಸೇರಿರುವ ಕಡೆಗೆ ಮೂರು ಜನ ಬಂದು ಗುಂಪಿನಲ್ಲಿ ಜಾಗ ಮಾಡಿಕೊಂಡು ಮುಂದೆ ಹೋಗುವ ಪ್ರಯತ್ನ ಮಾಡುತ್ತಾರೆ. ಸಾಧ್ಯವಾಗದೇ ಬೆವರೊರಸಿಕೊಳ್ಳುತ್ತ ರಂಗಭೂಮಿಯ ಮಧ್ಯಕ್ಕೆ ಹಿಂದಿರುಗುತ್ತಾರೆ. ಆಗ ಅಲ್ಲಿಗೆ ಒಬ್ಬ ಮುದುಕಿಯೂ, ನಾಗರಿಕನಂತೆ ಕಾಣುವ ಒಬ್ಬ ತರುಣನೂ ಬರುತ್ತಾರೆ.]

ಒಬ್ಬ : ಅಬ್ಬ! ಸಾಧ್ಯವಿಲ್ಲ.

ಎರಡನೆಯವನು : ಎಷ್ಟು ಎಷ್ಟೊಂದು ಜನ! ಏನು ಕತೆ!

ಮೂರನೆಯವನು : ಇಂಥ ಭಾರೀ ಸಭೆಯು ಈ ಭಾಗದಲ್ಲೇ ಎಂದು ಸೇರಿದ್ದಿಲ್ಲ.
ನಿನ್ನ ಅಂದಾಜೇನು? ಹತ್ತು ಸಾವಿರ ತಲೆಯು ಇರಬಹುದು, ಅಲ್ಲವೇ?

ಎರಡನೆಯವನು : ಹತ್ತು ಸಾವಿರವಂತೆ........
ಇಪ್ಪತ್ತು ಅಥವಾ ಇಪ್ಪತ್ತೈದು.

ಮೊದಲನೆಯವನು : ಬೆಳಗಿನಿಂದಲೆ ಸುರುವು ಜನ ಬರುವುದಕ್ಕೆ
ದನದ ಜಾತ್ರೆಗು ಹೀಗೆ ಮಂದಿ ಬಂದಿದ್ದಿಲ್ಲ.

ಎರಡನೆಯವನು : ಪುಣ್ಯಾತ್ಮ.
ಎಂಥ ಎಂಥಾ ಮೋಡಿ ಇರಬೇಕು ಅವನಲ್ಲಿ!
ಮಧ್ಯಾಹ್ನದುರಿಬಿಸಿಲ ಹೊತ್ತಿನಲ್ಲೂ ಹೇಗೆ ಜನ ಬಂದರು —
ಎಂಥ ಎಂಥಾ ಮೋಡಿ ಇರಬೇಕು ಮುದುಕನಲ್ಲಿ!

ಮೊದಲನೆಯವನು : ನಮ್ಮಪ್ಪ ತಣ್ಣಗೆ ಇರಲಿ.

ಮೂರನೆಯವನು : ಆ ಮಹಾತ್ಮನ ಹೆಸರು ಹೇಳಿದರೆ ಸಾಕು — ಗಂಗೆಯಲ್ಲೇ
ಮಿಂದ ಪುಣ್ಯ ನಮಗೆ.

ಎರಡನೆಯವನು : ಮೊನ್ನೆ ನಡೆದದ್ದು ಕೇಳಿದೆ ತಾನೇ?

ಮೊದಲನೆಯವನು : ಏನದು?

ಮೂರನೆಯವನು : ಅದೆ — ಹೆಳವನಿಗೆ ಕಾಲು ಬಂದದ್ದು.
ಪುಣ್ಯಾತ್ಮ — ಗುಡಿಸಿಲಿನ ಬಾಗಿಲಿಗೆ ಬಂದು ನಿಂತದ್ದೆ ತಡ —
ಹೆಳವನೇ ಮೇಲೆದ್ದು ಬಂದನಂತೆ.

ಎರಡನೆಯವನು : ಮೊನ್ನೆ ಸಂತೆಗೆ ಭಾರಿ ಜರತಾರಿ ಹೊದ್ದು ಬಂದಿದ್ದನಲ್ಲಾ ಗೌಡ.
ಮೊನ್ನೆ ಮೊನ್ನೆಯವರೆಗು ತೊನ್ನಿತ್ತು ಅವನಿಗೆ.
ಈ ಮಹಾತ್ಮನ ಸ್ಪರ್ಶವಾದ ಕೂಡಲೆ ಎಲ್ಲ ಎಲ್ಲ ಸರಿಹೋಯಿತಂತೆ.

ಮೂರನೆಯವನು : ಒಂದು ವರ್ಷದ ಹಿಂದೆ.
ಇನ್ನೊಂದು ಊರಲ್ಲಿ ಕಣ್ಣಿಲ್ಲದೆಲ್ಲರಿಗು ಕಣ್ಣು ಬಂತು.

ನಮ್ಮ ಸೋದರಮಾವ ಆ ಊರಿನವನೇ. ಮೊನ್ನೆ ಬಂದಿದ್ದಾಗ ಕತೆ ಹೇಳಿದ.

ಮೊದಲನೆಯವನು : ನಮ್ಮಪ್ಪ, ತಣ್ಣಗೆ ಇರಲಿ.

ಎರಡನೆಯವನು : ಇವರಂಥವರು ಇಷ್ಟು ಇದ್ದಾರೆಂದೇ ಕಲಿಯುಗದಲ್ಲಿ ಈಗಲೂ ನೆಲ ಹಸಿರು, ಮಳೆಗಾಲದಲ್ಲಿ ಮಳೆ, ಅಲ್ಲವೇ?

ಮೊದಲನೆಯವನು : ದೇವರಂತಹ ಆಳ —

ಅನುಗಾಲವಿರಲಿ.

ಮೂರನೆಯವನು : ದೇವರಂತೇನು, ದೇವರೇ ಅನ್ನು.

ಎರಡನೆಯವನು : ಸರಿಯಾಗಿ ಹೇಳಿದೆ.

ಅದೆ, ಗೌಡ — ಹೇಳಿದೆನಲ್ಲ — ಗುಡಿ ಕಟ್ಟಿ ಅದರಲ್ಲಿ ಈ ಮಹಾತ್ಮನ ಪೂಜೆಗೇರ್ಪಾಟು ಮಾಡುವನಂತೆ.

ಮೊದಲನೆಯವನು : ದೇವರೇ ಆದ ಹಾಗಾಯ್ತು, ಅಲ್ಲಿಗೆ.

ಮುದುಕಿ : (ಮುಂದೆ ಬರುತ್ತಾಳೆ) ಅವರಿವರಿಗಾದದ್ದು ನೀವು ಹೇಳಿದಿರಿ.

ನನಗೆ ಆದದ್ದು ಇದು ; ಹೇಳಲೇ ?

ಎರಡನೆಯವನು : ಹೇಳಜ್ಜಿ.

ನಮ್ಮ ದೇವರ ಮಹಿಮೆ ಮಾತಾಡುವದು, ಕೇಳುವದು — ಎರಡೂ ಪುಣ್ಯ.

ಮೊದಲನೆಯವನು : ತುಂಬ ಒಳ್ಳೇ ಮಾತು.

ಮುದುಕಿ : ಇವರನ್ನು ನಾನು ನೋಡಿಯೇ ಇರಲಿಲ್ಲ ...

ಇವರ ಕತೆ ಕೇಳಿ ಇಂಥವರ ಮುಖದರ್ಶನದ ಭಾಗ್ಯ ನನ್ನಂಥ ಪಾಪಿಗೆ ಇದೆಯೊ, ಇಲ್ಲವೊ ಎಂದೆ ಕೊರಗುತ್ತಿದ್ದೆ.

ಎರಡನೆಯವನು : ಏನಾಯ್ತು ?

ಮುದುಕಿ : ಸುಡುವ ಬೇಸಿಗೆ ಆಗ—ಮಟಮಟ ಮಧ್ಯಾಹ್ನ.

ಬೀದಿ ಮಗ್ಗುಲಿಗೆ ಇದೆ ನಮ್ಮ ಗುಡಿಸಲು ಅನ್ನಿ.

ಯಾವುದೋ ಮೋಟಾರು ನಿಂತಂತಾಯ್ತು.

ಯಾವ ಕಾರೋ ಏನೊ ಎಂದಂದುಕೊಂಡೆ, ಮಲಗೇ ಇದ್ದೆ.

ಪುಣ್ಯಾತ್ಮ ಬಾಗಿಲಿಗೆ ಬಂದಿದ್ದ, ನಿಂತಿದ್ದ.

ಸರಿಯಾಗಿ ಅಲ್ಲಿಗೇ ಮೋಟಾರು ಕೆಟ್ಟು ಎಲ್ಲರು ಗಳಿಗೆ ಇಳಿಯಬೇಕಾಯ್ತಂತೆ.

ಮನೆಗೆ ದೇವರೆ ಬಂದ ಮುದುಕಿಯನು ಕೇಳಿಕೊಂಡು.

ಎರಡನೆಯವನು : ಬಂದವನು ಆತನೇ ಎಂದು ಗೊತ್ತಾದ್ದು ಹೇಗೆ ?

ಮೊದಲನೆಯವನು : ಚೆನ್ನಾಯ್ತು.

ದೇವರನ್ನೂ ಗುರುತು ಹಿಡಿಯಲಾರೆಯ ನೀನು ?

ಮುದುಕಿ : ಆತನೇ ಹೇಳಿಕೊಂಡ.

ನನಗು ಅನುಮಾನ ಬಂದಿತ್ತೆನ್ನು.

ತರುಣ : (ಮುಂದೆ ಬಂದು) ಏನೆಂದು ಹೇಳಿದ ?

ತಾನೊಬ್ಬ ದೇವರೆಂದೇ ?

ಮುದುಕಿ : ಎಲ್ಲಾದರೂ ಉಂಟೆ ?

ಎರಡನೆಯವನು : ಪುಣ್ಯ ಮಾಡಿದ್ದೆ ಅಜ್ಜಿ. ನಿನದು ಶಬರಿಯ ಭಾಗ್ಯ.

ಮುದುಕಿ : ನನ್ನದೇನಪ್ಪ ಬಂತು ?

ಎಲ್ಲ, ದೇವರ ಕರುಣೆ.

(ತರುಣನಿಗೆ) ಅಲ್ಲವೇ, ಸ್ವಾಮಿ ?

ತರುಣ : ಹೇಗೆಂದುಕೊಂಡರೆ ಹಾಗೆ.

ಮೋಟಾರು ನಿನ್ನಮನೆ ಮುಂದೆ ಸರಿಯಾಗಿ ನಿಂತಿದ್ದು ದೇವರ ಕರುಣೆ
ಎಂದುಕೊಂಡರೆ ಅದು ದೇವರ ಕರುಣೆ.

ನಿನ್ನ ಪುಣ್ಯದ ಫಲ, ಎಂದುಕೊಂಡರೆ ಅದು ಪುಣ್ಯದ ಫಲ.

ಅವನ ಕರುಣೆಯು ಅಲ್ಲ, ನಿನ್ನ ಪುಣ್ಯವು ಅಲ್ಲ, ಆಕಸ್ಮಿಕದ ರೀತಿ
ಎಂದಂದುಕೊಂಡರದಕಷ್ಟೇ ಅಷ್ಟೇ ಅರ್ಥ,

ಎರಡನೆಯವನು : ಇದು ಪವಾಡ, ಸ್ವಾಮಿ, ಇದು ಪವಾಡ.

ಒಂದೆ, ಎರಡೇ ಈತ ಸಾಧಿಸಿರುವುದು ಹೇಳಿ

ನೂರು ನೂರಾರು ಅನ್ನಿ

ಆಕಸ್ಮಿಕದ ಹೆಸರಿನಲ್ಲಿ ಒಂದೊಂದನ್ನು ಅತ್ತಲಾಗೆಸೆಯುವುದೇ,
ನೀವೆ ಹೇಳಿ.

ಕುರುಡನಿಗೆ ಕಣ್ಣು ಬಂದದ್ದು ಆಕಸ್ಮಿಕ.

ಹೆಳವನಿಗೆ ಕಾಲು ಬಂದದ್ದು ಆಕಸ್ಮಿಕ.

ದೇಶಕ್ಕೆ ಸ್ವಾತಂತ್ರ್ಯ — ಅದೂ ಆಕಸ್ಮಿಕ !

ಚೆನ್ನಾಯ್ತು, ಬಿಡಿ.

ಮೂರನೆಯವನು : ಈತ, ಈ ಪುಣ್ಯಾತ್ಮ ದೇವರಾದದ್ದು ಆಕಸ್ಮಿಕವೆ ?

ತರುಣ : ಈತ ದೇವರೆ ಅಲ್ಲ

ನಮ್ಮ ಹಾಗೇ ಒಬ್ಬ ಸಾಮಾನ್ಯ ಮಾನವ.

ಮುದುಕ : ನಾವು ಪಾಪಿಗಳು.

ಈತ ನಮ್ಮ ಹಾಗೇ ?

ಎರಡನೆಯವನು : ನೀವು ಯಾರೋ ಸ್ವಾಮಿ, ನನಗೆ ಗೊತ್ತಿಲ್ಲ.

ಗೊತ್ತಾಗುವುದೂ ಬೇಡವೆನ್ನಿ.

ಈ ಮಹಾತ್ಮನ ಯೋಗ್ಯತೆಯು ತಿಳಿಯಬೇಕಾದರೂ ಯೋಗ್ಯತೆ ಬೇಕು.

ನಮ್ಮ ದೇವರ ಸತ್ಯ ನಮಗೆ ಗೊತ್ತು.

ನೀವೇನು ಕೊಂಕು ಮಾತಾಡಬೇಡಿ.

ತರುಣ : ನನಗೆ ಅನಿಸಿದ್ದು ಹೇಳಿದೆ.
ಮತ್ತೆ ಹೇಳುತ್ತೇನೆ: ಇವನು ದೇವರು ....
ಎರಡನೆಯವನು : ಬೇಡಿ, ರೇಗಿಸಬೇಡಿ ....

[ "ಹೋಗಲಿ ಬಿಡು" "ಸುಮ್ಮನಿರಿ ಸ್ವಾಮಿ" ಎಂಬ ಸಮಾಧಾನದ ಮಾತುಗಳನ್ನು ಮಿಕ್ಕವರು ಆಡಿ ಮಾತು ತಣ್ಣಗಾಗುತ್ತದೆ. ಸಭೆ ಶುರುವಾಗುತ್ತದೆ. ಧ್ವನಿವರ್ಧಕದ ಮೂಲಕ ಕೇಳಿಬರುತ್ತದೆ ಸಭೆಯಲ್ಲಿ ಆಗುವದಷ್ಟು ]

[ಮೊದಲು ಪ್ರಾರ್ಥನೆ. ಹುಡುಗಿಯೊಬ್ಬಳು ಬಂದು 'ವೈಷ್ಣವ ಜನತೋ" ಹಾಡುತ್ತಾಳೆ ನಾಯಕ 'ಸೊಗಸಾಗಿ ಹಾಡಿದೆ ತಾಯಿ" ಅಂದದ್ದು ಕೇಳುತ್ತದೆ. ಜನ ಚಪ್ಪಾಳೆ ತಟ್ಟುತ್ತಾರೆ. ]

ಆಮೇಲೆ ಸ್ವಾಗತ ಭಾಷಣ : ಗಂಟಲು ಸರಿಮಾಡಿಕೊಂಡು ಒಬ್ಬ ಮೊದಲುಮಾಡುತ್ತಾನೆ. ಅವನಾಡುವ ಮಾತುಗಳು ಇವು:

ಪೂಜ್ಯರೇ
ಬಾಂಧವರೆ,
ನಮ್ಮಗಳ ಸೌಭಾಗ್ಯ — ನಮ್ಮ ದೇಶದ ತಂದೆ ಇಲ್ಲಿ ಬಂದಿದ್ದಾರೆ
(ಚಪ್ಪಾಳೆ)
ಅವರು ಈಚೆಗೆ ಯಾವ ಬಹಿರಂಗಸಭೆಯಲ್ಲು ಮಾತಾಡಲೊಪ್ಪಿದಿಲ್ಲ.
ಆದರೂ ನಮ್ಮ ಪ್ರಾರ್ಥನೆ ವ್ಯರ್ಥವಾಗಲಿಲ್ಲ.
ಈ ಕಡೆಯ ಜನರು ಬಯಸುತ್ತಾರೆ, ನೀವು ಬರಲೇ ಬೇಕು ಎಂದಾಗ
ತತ್‌ಕ್ಷಣವೆ ಒಪ್ಪಿದರು.
ನಿಮ್ಮ ಮೇಲವರ ಎದೆಯಲ್ಲಿರುವ ಪ್ರೀತಿ ಅಂಥಾದ್ದು
(ಚಪ್ಪಾಳೆ)
ಅಣ್ಣತಮ್ಮಂದಿರೆ,
ನೀವು ಬಂದದ್ದು ಪೂಜ್ಯರ ಮಾತು ಕೇಳಲಿಕ್ಕೆ.
ನಾನು ಮಾತಾಡುತ್ತ ಕಾಲಕಳೆಯುವುದು ಧರ್ಮವಲ್ಲ.
ದೇವರಿಗು, ಭಕ್ತರಿಗು ನಡುವೆ ಗೋಡೆಯ ಹಾಗೆ ಪೂಜಾರಿ ನಿಲ್ಲಬಾರದು,
ಗೊತ್ತು (ಜನ ನಗುತ್ತಾರೆ, ಚಪ್ಪಾಳೆ ತಟ್ಟುತ್ತಾರೆ)
ಆದರೂ —
ನಿಮ್ಮ ಕಡೆಯಿಂದ ಸ್ವಾಗತ ಕೋರಿ ನನ್ನಕಡೆಯಿಂದಲೂ ಆ ಮಾತು
ಹೇಳುವುದು ನನ್ನ ಕರ್ತವ್ಯ, ಜೊತೆಗೆ ಸತ್‌ಸಂಪ್ರದಾಯ.
ಬಾಂಧವರೆ,
ನಿಮಗೆ ಭಗವದ್ಗೀತೆ ಚೆನ್ನಾಗೆ ಗೊತ್ತು.

ಧರ್ಮಯುದ್ಧದ ಹೊತ್ತು.
ಯಾವುದೋ ಮೋಹಕ್ಕೆ ಸಿಕ್ಕಿ ಅರ್ಜುನ ತನ್ನ ದಾರಿ ಮರೆತಿದ್ದ,
ಮೂಢನಾದ.
ಕೃಷ್ಣ ಹೇಳಿದ ಆಗ:
ಭಗವಂತನಾಡಿದ್ದು ನಾರಿಕೇಳಾಪಾಕ.
ದೇವರಾಡಿದ ಮಾತು. ಒಂದೊಂದು ಮಾತಿಗೂ ಒಂದೊಂದು ಬದುಕನ್ನೆ
ನೈವೇದ್ಯ ಮಾಡಿದರು ಸಾಲದಂತೆ.
ಸ್ವಾಗತದ ಮಾತಲ್ಲಿ ಅವನಂದ ಅಷ್ಟನ್ನು ಹೇಳುವುದು ಕಷ್ಟ.
ಆದ್ದರಿಂದಲೆ ನಾನು ಇಷ್ಟು ಮಾತ್ರ ಹೇಳಿ ಮುಗಿಸುತ್ತೇನೆ.
ಕೃಷ್ಣ ಅಂದ :
ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ, ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ
ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ

ಧರ್ಮ ಬಿದ್ದು ಅಧರ್ಮವೆದ್ದಾಗ ನಾನು ಬಂದೇ ಸಿದ್ಧ ಎಂದ ಕೃಷ್ಣ.
ಕೆಲವು ಕಾಲದ ಹಿಂದೆ ನಮ್ಮ ನಾಡಿಗೆ ಅಂಥ ಸಂದರ್ಭವೊದಗಿತು.
ಧರ್ಮ ಬಿದ್ದು ಅಧರ್ಮವೆದ್ದಿತ್ತು.
ಆದ್ದರಿಂದಲೆ ದೇವರೆದ್ದು ಬಂದ. (ಚಪ್ಪಾಳೆ)
ಈ ಮಹಾತ್ಮರು ಜನಿಸಿ ದೇವರಾಡಿದ ಮಾತು ದಿಟವಾಯ್ತು, ಸಾರ್ಥಕ
ವಾಯ್ತು.
ಇವರು ದೇವರು ....

[ಏನೋ ಗಲಭೆಯಾಗುವುದು. ಅವನ ಮಾತು ನಿಲ್ಲುವದು]

ಎರಡನೆಯವನು : ಏಕೆ ? ಏನಾಯ್ತು ?
ಮೊದಲನೆಯವನು : (ಮೆಟ್ಟಿಂಗಾಲಮೇಲೆ ನಿಂತು ನೋಡುತ್ತ) ಏಕೊ, ಏನೋ.
ಮಹಾತ್ಮರೆದ್ದು ಹೊರಟಿದ್ದಾರೆ.
ಮೂರನೆಯವನು : ಹೊರಟೆ ಹೋದರೆ ? ಯಾಕೆ ?
ಮೊದಲನೆಯವನು : ಜನ ತಡೆದರೂ ನಡೆದೆ ಬಿಟ್ಟರು ....
ಎರಡನೆಯವನು : ನಮಗಷ್ಟೆ ಲಭ್ಯವೇನೊ.
ಮೊದಲನೆಯವನು : ದೇವರಾಡುವ ಮಾತು ನಮಗಲ್ಲವೇನೊ.

[ಜನ ಹಿಂದುಹಿಂಡಾಗಿ ರಂಗಭೂಮಿಯನ್ನು ದಾಟುತ್ತಾರೆ — ತಮ್ಮತಮ್ಮೊಳಗೆ ಮಾತಾಡಿಕೊಳ್ಳುತ್ತ]

[ ದೃಶ್ಯ ೪ ]

[ಒಂದು ನದಿಯ ಸೇತುವೆ. ಕತ್ತಲ ಹೊತ್ತು. ನದಿಯ ನೀರು ಹರಿಯುತ್ತಿರುವ ಸದ್ದು ಆಳದಿಂದ ಏಳುತ್ತಿದೆ. ಸೇತುವೆಯ ಒಂದಂಚಿನಿಂದ ಬಂದ ನಾಯಕ ಮಧ್ಯೆ ನಿಲ್ಲುತ್ತಾನೆ. ಸೇತುವೆಯ ಕಟ್ಟೆಯನ್ನು ಒರಗಿ ನಿಂತು ನದಿಯ ಕಡೆಗೆ ನೋಡುತ್ತಾನೆ.

[ಬೆಸ್ತರ ಒಂದು ಸಂಸಾರ ಸೇತುವೆಯ ಮೇಲೆ ಹೋಗುತ್ತಾರೆ. ಹೋಗುವಾಗ ನಾಯಕನ ಕಡೆಗೇ ನೋಡಿಕೊಂಡು ಹೋಗುತ್ತಾರೆ. ನಾಲ್ಕು ಜನದ ಸಂಸಾರ: ಗಂಡ, ಹೆಂಡತಿ, ಇಬ್ಬರು ಮಕ್ಕಳು.]

ನಾಯಕ : (ತನಗೆ ತಾನೇ ಹೇಳಿಕೊಳ್ಳುವವನಂತೆ)
ವೈತರಣಿಯಂಥ ನದಿ ..
ಆಚೆಗಿದೆ ಕಾಡು ...
ಒಬ್ಬನೇ ಹೋಗಬೇಕು ...

[ಆಳದಿಂದ ಹೆಣ್ಣು ಧ್ವನಿಗಳು ಮಾತಾಡುತ್ತವೆ.]

೧ನೆ : ನೆಲ ಹೊತ್ತಿ ಉರಿದಾಗ ಮಳೆಯಂಥ ಸೌಭಾಗ್ಯ
ತಂಪು, ನೆಮ್ಮದಿ, ಬೇರೆ ಒಂದು ಇಲ್ಲ.
೨ನೆ : ಎದೆ ಹೊತ್ತಿ ಉರಿದಾಗ ನದಿಯ ಸ್ನಾನಕ್ಕಿಂತ
ಚೆಲುವಾದ್ದು ಇನ್ನೊಂದು ಇಲ್ಲ, ಇಲ್ಲ.
೩ನೆ : ಎಡವಿ ಬಿದ್ದೆದ್ದ ಮಗು ತಾಯಿ ತೊಡೆಗೇರುವುದು
ಗಾಯ ಮಾಯುವುದಾಗ ಮಗು ನಗುವುದು
೧ನೆ : ತಾಯಿಯಾದರು ಮಗುವಿಗೇಟು ಕೊಟ್ಟಾಳೇನೊ
ತಾಯಿಗೂ ಮಿಗಿಲಾದ್ದು ನದಿಯ ಒಲವು.
೨ನೆ : ಕಾಲ ಕೆಳಗಡೆ ಮಣ್ಣು ಕೆಂಡವಾದವರೆಲ್ಲ
ಇಲ್ಲಿ ಬರುವರು ಇಲ್ಲಿ ತಾಯಿ ತೊಡೆಗೆ.
೩ನೆ : ಹತ್ತು ದಿಕ್ಕಿಗು ಹತ್ತು ನೆರಳೆದ್ದು ಕುಣಿದಾಗ
ನದಿಯ ನೀರೇ ದಿಕ್ಕು ನೊಂದವನಿಗೆ.
ಮೇಳ : ಬಂದು ಬಿಡು ಬಂದು ಬಿಡು
ಹಾರಿಬಿಡು, ನದಿಗೆ.
ತೂರಿಬಿಡು ದುಃಖವನ್ನು
ಹಾರಿಬಿಡು ತೊಡೆಗೆ.
ಮರೆತು ಬಿಟ್ಟು ಎಲ್ಲವನ್ನು
ಹಾರಿಬಿಡು ನದಿಗೆ.
ಮಲಗಿಬಿಡು ನೀರಿನೊಳಗೆ

ಶಂಕೆಯಿಂದ ಬಿಡುಗಡೆ.
ಸಾರಿನಾಳಪಾಳವಲ್ಲಿ
ಶಂಕಿಯಿಂದ ಬಿಡುಗಡೆ.
ಬಂದು ಬಿಡು, ಬಂದು ಬಿಡು
ಹಾರಿಬಿಡು ನದಿಗೆ.

೧ನೆ : ನೀನು ಮಾನವ, ದೇವರಲ್ಲಾ ಎಂದು ತೋರಿಸುವ ಆಸೆಯೇನು ?
ಹಾಗಾದರಂತೂ ಹಾರಿಬಿಡು, ನದಿಗೆ

೨ನೆ : ತಮ್ಮ ಪ್ರಾಣವ ತಾವೆ ನೀಗಿಕೊಳ್ಳುವ ಶಕ್ತಿ ದೇವರಿಗೆ ಇಲ್ಲ,
ಪ್ರಾಣಿಗೂ ಇಲ್ಲ
ಇರುವದಿವರಿಗೆ ಮಾತ್ರ — ಮಾನವರಿಗೆ.

೩ನೆ : ಸತ್ತು ಮೊದಲಿನ ಹಾಗೆ ಹತ್ತರಲ್ಲೊಂದಾಗು
ನಿನ್ನ ಗ್ರಂಥಕ್ಕಿಲ್ಲ ಕುಂಕುಮದ ಭಾರ

೧ನೆ : ಕಸಪರಿಕೆಯಿಂದ ಆಗ ಜಿರಳೆಗೆ ಮೋಕ್ಷಪ್ರಾಪ್ತಿ
ಜನಕು ಕೂಡಾ ಆಗ ಮೋಕ್ಷ ಸಿದ್ಧ.

೨ನೆ : ನಿನ್ನ ಸಾವಿನ ಗುಟ್ಟ ಒಡೆದು ನೋಡುತ್ತಾರೆ
ನೀನು ಮಾನವ ಎಂದೆ ಕಾಣುತ್ತಾರೆ.

೩ನೆ : ಸತ್ತು ಮೊದಲಿನ ಹಾಗೆ ಹತ್ತರಲ್ಲೊಂದಾಗು
ಮನೆಮನೆಯ ದೀಪವಾಗು.

ಮೇಳ : ಬಂದು ಬಿಡು ಬಂದು ಬಿಡು
ಹಾರಿಬಿಡು ನದಿಗೆ
ತೂರಿ ಬಿಡು ದು:ಖವನ್ನು
ಹಾರಿ ಬಿಡು ತೊಡೆಗೆ.

[ನದಿಯೆದ್ದು ಬರುತ್ತಿದೆ ಎನ್ನುವಂತಹ ಸದ್ದಾಗುತ್ತದೆ.ಬೆಸ್ತರ ಹೆಂಗಸು ಬರುತ್ತಾಳೆ]

ಹೆಂಗಸು : ಯಾಕಪ್ಪ, ಇಲ್ಲಿ ನಿಂತಿದ್ದೀರಿ ?
ಇಂಥ ಇಂಥಾ ಕಾಡ ಕತ್ತಲಲ್ಲಿ ?

ನಾಯಕ : ದಾರಿ ಕಾಣದೆ ನಾನು ನಿಂತಿದ್ದೇನೆ.
ಸೇತುವೆಯ ಅತ್ತಕಡೆ ಏನಿದೆಯೊ ತಿಳಿಯದು.
ದಾರಿ ಕಾಣದು, ತಾಯಿ, ನನಗೆ.

ಹೆಂಗಸು : ಆಚೆಗಿರುವುದು ಕಾಡು, ದೆವ್ವದಂಥಾ ಕಾಡು.
ಹಗಲಿನಲ್ಲೇ ಕಷ್ಟ, ಬಲು ಕಷ್ಟ ದಾಟುವುದು

ಹಿಂದಿರುಗಿ. ಮನೆಗೆ ಹೋಗಿ

ನಾಯಕ : ಮನೆ ಬಿಟ್ಟು ಬಂದಾಗ ಮನೆ ಸುಟ್ಟು ಹೋಯಿತು
ಹೆಜ್ಜೆ ಎತ್ತಿದ ಕ್ಷಣವೆ ನೆಲ ಕುಸಿಯಿತು.
ಹಿಂದೆ ಕಂದರ, ಮುಂದೆ ಕಗ್ಗಾಡು.
ಏನಮ್ಮಾ ಮಾಡಲಿ ?

ಹೆಂಗಸು : ಇಲ್ಲೆ ಇರಿ.
ಬೆಳಗಾದ ಮೇಲೆ ಹೋಗುವಿರಂತೆ

ನಾಯಕ : ಹೋದರೀಗಲೆ ಹೋಗಿಬಿಡಬೇಕು, ತಾಯಿ
ಕಾಯುವುದು ಕ್ಷೇಮವಲ್ಲ
ನದಿಯುಕ್ಕಿ ಮೇಲೆದ್ದು ನನ್ನ ಕರೆಯುತ್ತಿದೆ
ಕಾಯುವುದು ಕ್ಷೇಮವಲ್ಲ.

ಹೆಂಗಸು : ನಾವು ಬೆಸ್ತರು. ನಮ್ಮ ವಾಸ ಈ ದಡದಲ್ಲಿ
ಎಲ್ಲರನ್ನೂ ನದಿಯು ನುಂಗದಲ್ಲ !

[ಅವಳ ಗಂಡ ಅಲ್ಲಿಗೆ ಬರುತ್ತಾನೆ]

ಗಂಡನು : ಏನಂತೆ ?

ಹೆಂಗಸು : ಈ ಹೊತ್ತಿನಲ್ಲಿ ಕಾಡಿಗೆ ಹೋಗುವನಂತೆ ಮುದುಕನಿಗೆ
ಬೇಡವೆಂದರು ಹಟವ ಬಿಡುವುದಿಲ್ಲ.

ಗಂಡಸು : ಯಾಕಂತೆ ಅಂಥ ತುರ್ತು ?
ಏನು ಕಡಿಯುವನಂತೆ ಕಾಡಿನಲ್ಲಿ ?

ಹೆಂಗಸು : ಯಾವುದೊಂದಕ್ಕು ನೇರ ಉತ್ತರವಿಲ್ಲ.
ಮನೆ ಸುಟ್ಟ ಮಾತು ಆಡುತ್ತಾನೆ
ನನಗಂತು ಏನು ತಿಳಿಯುವುದೆ ಇಲ್ಲ.

ನಾಯಕ : ನನಗು ಅಷ್ಟೇ ತಾಯಿ. ಏನೊಂದು ತಿಳಿದಿಲ್ಲ.

ಗಂಡಸು : ತುಂಬ ಲಕ್ಷಣವಾಯ್ತು.
ನಾನು ಹೇಳುವ ಹಾಗೆ ಮಾಡು, ನಿನಗೇ ಕ್ಷೇಮ
ಗುಡಿಸಿಲಿಗೆ ಬಾ.
ಮಕ್ಕಳಿಗೆ ಆಗಿ ಮಿಕ್ಕಿದೆ ರೊಟ್ಟಿ. ತಿಂದು ಹಾಯಾಗಿ ಮಲಗು.
ಬೆಳಗಾಗ ಎದ್ದು ನಿನ್ನ ದಾರಿಯ ನೀನು ಹುಡುಕಿಕೊಳ್ಳುವೆಯಂತೆ

ನಾಯಕ : ನೀವು ಹೋಗಿ, ಮಲಗಿ.

ಗಂಡಸು : (ಹೆಂಡತಿಗೆ) ಬಂದು ಬಿಡು. ಹೋಗೋಣ
ಬೇಕಾದರವರೆ ಬಂದಾರು ಮನೆಗೆ.

[ಹೋಗುತ್ತಾನೆ. ಅಂಚಿನಿಂದ ನಾಯಕನಿಗೆ ಹೇಳುತ್ತಾನೆ]

ಬರಬೇಕು ಅನಿಸಿದರೆ ಬಂದು ಬಿಡು.
ಸಂಕೋಚ ಬೇಡ. (ಹೋಗುತ್ತಾನೆ)

[ಮುದುಕ ಬರುತ್ತಾನೆ. ನಾಯಕನಿಗೆ ಸಂತೋಷವಾಗುತ್ತದೆ]

ನಾಯಕ : ಬಂದೆಯಲ್ಲಾ, ಸದ್ಯ.
ಮುದುಕ : ಯಾಕೆ ? ಹೆದರಿದ್ದೆಯಾ ?
ನಾಯಕ : ಹೆದರಿಕೆ ಅಲ್ಲ .... ಅಲ್ಲದೇನೋ
ನದಿಯೆದ್ದು ಮೇಲೆದ್ದು ಕರೆದಾಗ ಎದೆ ಸ್ವಲ್ಪ ನಡುಗಿತ್ತು
ಹೆದರಿಕೆಗೊ, ಆಸೆಗೋ, ನಾನು ಕಾಣೆ.
ಮುದುಕ : ನದಿಯೆದ್ದು ಬಂದು ನೆಮ್ಮದಿಯಾಸೆ ಎಸೆದಾಗ ಚಿತ್ತ
ಚಂಚಲವಾಯ್ತೆ ?
ನಾಯಕ : ಇಲ್ಲ ಸ್ವಲ್ಪವೂ ಇಲ್ಲ.
ಅಂಥ ನೆಮ್ಮದಿಯಾಸೆ ಕಾಡಲಿಲ್ಲ.
ಮುದುಕ : ಸತ್ತು ಬದುಕೆಂದಾಗ ಚಿತ್ತ ಚಂಚಲವಾಯ್ತೆ ?
ನಾಯಕ : ರವೆಯಷ್ಟು. ತುಂಬ ಅಲ್ಲ.
ಮುದುಕ : ಒಳ್ಳೆಯದೆ ಆಯ್ತು ಬಿಡು.
ಸತ್ತು ಬದುಕುವ ರೀತಿ ಹೀಗಂತು ಇಲ್ಲ.
ಸತ್ತು ಸಾಯುವ ರೀತಿ ಇದು: ನಡೆದ ದಾರಿಯ ಮೇಲೆ ನೆರಳು ಬೀಳುವದಷ್ಟೆ.
ನಾಯಕ : ನಾನು ಬೆತ್ತಲೆ ಈಗ.
ಎಲ್ಲವನ್ನೂ ಬಿಟ್ಟು ನಿಂತ ಗೊಮ್ಮಟ ನಾನು.
ಮುದುಕ : ನಾಚಿಕೆಯೆ ನಿನಗೆ ?
ನಾಯಕ : ನಾಚಿಕೆಯೆ ?
ಇಲ್ಲವಲ್ಲ !
ಮುದುಕ : ಬೆತ್ತಲಾದರೆ ಸಾಧ್ಯ ಮೈ ಬೆಸಗೆ —
ಒಂದು ಇನ್ನೊಂದರೊಳಗಡೆ ಲೀನವಾಗುವ ಕೆಲಸ.
ಬೆತ್ತಲಾದರೆ ಸಾಧ್ಯ ಪೂರ್ಣಜ್ಞಾನ.
ನಾಯಕ : ನಾನೀಗ ಹೋಗಲೇ ?
ಮುದುಕ : ಬಾಳು ಒಡ್ಡಿದ ಮೂರು ಬಲೆಗಳಿಂದಲು ನುಸುಳಿ ಬಂದಿದ್ದೀಯೆ.
ತುಂಬ ಸಂತೋಷ ನನಗೆ.
ನಾಯಕ : ಮೂರು ಬಲೆಗಳೆ ? ಮೂರೆ ?
ಮುದುಕ : ಹತ್ತು ಮಂದಿಗೆ ದುಡಿವ ಆಸೆ.

ನಿನಗೆ ನೀನೇ ಮೊದಲು, ಕೊನೆ ಕೂಡ —
ಕಷ್ಟವಾದರು ಕೂಡ ಇದನು ತಿಳಿದೆ.
ದೇವರಾಗುವ ಆಸೆ; ಸಿಂಹಾಸನಕ್ಕೇರಿ ಅಲ್ಲೆ ಮನೆ ಮಾಡುವಾಸೆ;
ಅದನು ಗೆದ್ದೆ.
ದಣಿದಾಗ ಬರುವ ಹಾಸಿಗೆಯಾಸೆ; ಮಲಗುವಾಸೆ;
ದಾರಿ ಕಾಣದೆ ಬಳಲಿ ಕೊನೆಗೆ ಸತ್ತಾದರೂ ಹೋಗಿಬಿಡುವಾಸೆ; ನಿದ್ರಿಸಾಸೆ;
ಆ ಆಸೆಯನ್ನೂ ಗೆದ್ದು ಬದುಕಿದ.

ನಾಯಕ : ಕೊನೆಯ ಮೈಲಿಗೆ ನಾನು ಸಿದ್ಧ.

ಮುದುಕ : ಕಾದು ಕಾಡುವುದಿಲ್ಲ.
ಎರಡು ಗಿಡಗಳ ನಡುವೆ ದಾರಿ ಬೇಕಾಗಿ ತಾನೇ ನಿನ್ನ ನಡೆಸುವುದು
ಕಾಡಿನಾಚೆಯ ಮನೆಗೆ.
ಬೆಸ್ತನಾಡಿದ ಮಾತು ನಿನ್ನ ನಾಲಗೆ ಸೇರಿ ನುಡಿಸುವುದು ಕೊನೆಯತನಕ
ನಾನೆ ಹೋಗುತ್ತೇನೆ. ಆಮೇಲೆ ನೀನು.

[ಮುದುಕ ಹೋಗುತ್ತಾನೆ. ಅವನು ಸೇತುವೆಯ ಅಂಚಿಗೆ ಹೋದಾಗ ನಾಯಕ ಮಾತನ್ನಾಡುತ್ತಾನೆ.]

ನಾಯಕ : ಈಗಲಾದರೂ ಹೇಳು:
ನೀನು ಯಾರು ?

[ಮುದುಕ ನಗುತ್ತಾನೆ, ನಗುತ್ತಾ ಹೋಗುತ್ತಾನೆ, ಅವನ ಮಾತು ಸ್ಪಷ್ಟವಾಗಿ ಕೇಳುತ್ತದೆ.]

ದೂರದಿಂದ : ಮುದುಕನ ಧ್ವನಿ : ಕೇಳಬಾರದ ಪ್ರಶ್ನೆ —

[ಮುದುಕ ಹೋದ ದಿಕ್ಕನ್ನೇ ಅರೆಗಳಿಗೆ ನೋಡುತ್ತ ನಿಂತ ನಾಯಕ ... ... ಕಾಡಿನ ಕಡೆಗೆ ಹೆಜ್ಜೆ ಇಡುತ್ತಿರುವಾಗಲೂ ಮುದುಕನ ನಗುವಿನ ಅನುರಣನ ಇದ್ದೇ ಇರುತ್ತದೆ.]

[ ತೆರೆ ಬೀಳುತ್ತದೆ ]

## ಪಾತ್ರಪರಿಚಯ

**ಕೀಚಕ** — ವಿರಾಟರಾಯನ ಮನೆಗೆ ಆಗಮಿಸುವ ತರುಣ ದೊರೆ.

**ಸುದೇಷ್ಣೆ** — ಕೀಚಕನ ಸೋದರಿ ; ವಿರಾಟರಾಯನ ಮಡದಿ.

**ಉತ್ತರೆ** — ಸುದೇಷ್ಣೆ ಮತ್ತು ವಿರಾಟನ ಮಗಳು.
ಬೃಹನ್ನಳೆಯಿಂದ ನಾಟ್ಯ ಹೇಳಿಸಿಕೊಳ್ಳುತ್ತಿದ್ದಾಳೆ.

**ಸೈರಂಧ್ರಿ** — ಮಾಲಿನಿ ಎಂಬ ಹೆಸರಿನಲ್ಲಿ ಸೈರಂಧ್ರಿವೃತ್ತಿ ಮಾಡಿಕೊಂಡು ವಿರಾಟ
ನಗರದಲ್ಲಿ ಅಜ್ಞಾತವಾಸ ಮಾಡಲು ಬಂದ ಪಾಂಚಾಲೆ.

**ಕಂಕಭಟ್ಟ, ವಲಲ, ಬೃಹನ್ನಳೆ** — ಅಜ್ಞಾತವಾಸಿ ಧರ್ಮ, ಭೀಮ ಮತ್ತು ಅರ್ಜುನರು.

**ನಗೆಗಾರ** — ಅರಮನೆಯ ವಿದೂಷಕ ; ಕೀಚಕನ ಮಿತ್ರತ್ವಕ್ಕೊದಗುವ ವ್ಯಕ್ತಿ.

**ತಾರಿಣಿ** — ಮಾಲಿನಿಯ ಗೆಳತಿ ; ನಗೆಗಾರನ ಮಡದಿ.

ಕತೆಯಲ್ಲಿ ನಗೆಗಾರನು ಉತ್ತರೆಯಂತೆ ತಾನೂ ನಾಟ್ಯಾಭ್ಯಾಸ ಮಾಡುವ
ಒಂದು ಸನ್ನಿವೇಶ ಹೊಸತಾಗಿ ಸೇರಿದೆ.

# ಮುನ್ನುಡಿ

ಆರೆಂಟು ವರ್ಷಗಳ ಬಳಿಕ ಹೊಸತೇ ಆದ ಇನ್ನೊಂದು ಗೀತನಾಟಕವನ್ನು ಒರೆದು ನಿಮ್ಮ ಮುಂದಕ್ಕೆ ಇರಿಸುತ್ತಿದ್ದೇನೆ. ಹಾಗೆ ಬರೆಯದೆ ಕೆಲವು ವರ್ಷಗಳೇ ಸಂದಿವೆ. ಆದರ ನಡುವೆ ಸಂಗೀತದೊಡನೆ ಇರಬೇಕಾದ ಸಂಪರ್ಕ ತಪ್ಪಿಹೋಗಿ ಕೆಲಸಕ್ಕೆ ಅಡಚಣೆಯೂ ಬಂದುದುಂಟು. ಈ ನಾಟಕಕ್ಕೆ ಆರಿಸಿಕೊಂಡ ವಿಷಯ ಮಹಾಭಾರತದ ಕೀಚಕ-ಸೈರಂಧ್ರಿಯರ ಕತೆ. ಕತೆಯ ದೃಷ್ಟಿಯಿಂದ ಎಲ್ಲರಿಗೂ ಪರಿಚಿತವಾದುದೇ. ಅದರಲ್ಲಿ ನಾನು ಮಾಡಿಕೊಂಡಿರುವ ಬದಲಾವಣೆಯೆಂದರೆ ವಿದೂಷಕ ಇಲ್ಲವೆ ನಗೆಗಾರನ ಪಾತ್ರವನ್ನೂ ಆತನ ಮಡದಿ ತಾರಿಣಿ ಎಂಬವಳ ಪಾತ್ರವನ್ನೂ ಕತೆಗೆ ಜೋಡಿಸಿದ್ದು. ಈ ದಾರುಣ ಕತೆಯ ವಾತಾವರಣಕ್ಕೆ ತಕ್ಕುದಾದ ಪ್ರತಿ ವಾತಾವರಣ, ಭಾರತದ ಕತೆಯಲ್ಲಿ ಉತ್ತರನ ವಿಡಂಬನೆಯಿಂದ ಒದಗಿದೆ, ಇಲ್ಲಿ ಅದಕ್ಕೆ ಪ್ರತಿಯಾಗಿ ವಿದೂಷಕನ ನೆರವನ್ನು ಪಡೆದಿದ್ದೇನೆ.

ಇದರ ಸಂಗೀತಸಂಯೋಜನೆಗೆ ನೆರವಾದ ಶ್ರೀ. ಸೌಕೂರು ಕೃಷ್ಣರಾವ್ ಮತ್ತು ಶ್ರೀ. ಕೆ. ವಾಸುದೇವ ನಾಯಕ್ ಇಬ್ಬರನ್ನೂ ಇಲ್ಲಿ ಸ್ಮರಿಸಬೇಕಾಗಿದೆ. ರಾಗಾಲಾಪದಲ್ಲಿ ಹಾದಿ ತಪ್ಪಬಹುದಾದ ನನ್ನನ್ನು ಶಾಸ್ತ್ರದ ಹದ್ದುಕಟ್ಟಿಗೆ ಶ್ರೀ. ನಾಯಕರವರು ತಂದು ನಿಲ್ಲಿಸಲು ಹಿಂದೂಸ್ಥಾನಿ ಸಂಗೀತದ ತಮ್ಮ ವಿಶೇಷ ಜ್ಞಾನದಿಂದ ಸಹಾಯಮಾಡಿದ್ದಾರೆ.

ನಾಟಕವೊಂದು ಅಚ್ಚಿಗೆ ಬಿತ್ತೆಂದರೆ ನಾಲ್ಕುದಿನವೂ ಅಭ್ಯಾಸಮಾಡುವ ತಾಳ್ಮೆಯಿಲ್ಲದ ನಾಟ್ಯವಿಲಾಸಿಗಳ ಮಾಟಕ್ಕೆ ಗುರಿಯಾಗುವ ಭಯ ಹೆಚ್ಚು. ನನ್ನ ಗೀತ-ನಾಟಕಗಳನ್ನು ಅಪ್ಪಣೆಯಿಲ್ಲದೆ ಆಡಬಾರದೆಂದು ತಿಳಿಸಿದರೂ, ಆಡಿ ಆಮೇಲೆ ಅಪ್ಪಣೆ ಕೇಳಿ, ಇಲ್ಲವೆ ಕೇಳದೆ ದುಡುಕುತನ ತೋರಿಸುವವರ ಸಂಖ್ಯೆ ಬೆಳೆಯುತ್ತಿದೆ. ಆಡುವವರಿಂದ ನಾನು ಸಾಮಾನ್ಯವಾಗಿ ಗೌರವಧನ ಅಪೇಕ್ಷಿಸುತ್ತಲಿಲ್ಲ. ಅಪೇಕ್ಷಿಸುತ್ತಿರುವುದು — ನಾಟಕದ ಮೇಲಿನ ಗೌರವವನ್ನು. ಅದಿಲ್ಲದೆ, ರಾಗಜ್ಞಾನ ಉಂಟೆಂಬ ಹೆಮ್ಮೆಯಿಂದ ಇಂಥ ಗೀತ-ನಾಟಕಗಳನ್ನು ಹಿಂದುಮುಂದಿಲ್ಲದೆ ಆಡುವವರ ವಿಚಾರದಲ್ಲಿ ನಿಷ್ಠುರದ ದಾರಿ ಹಿಡಿಯಬೇಕಾಗುತ್ತದೆ. ಇದು ಯಾವ ನಿಶ್ಚಯ ಸಂಗೀತರೂಪದಲ್ಲಿ ರಚನೆಗೊಂಡಿತೋ ಅದನ್ನು ತಿಳಿದು, ಎರಡು ಮೂರು ತಿಂಗಳ ಕಾಲ ಅಭ್ಯಾಸಮಾಡಲು ಸಿದ್ಧರಿಲ್ಲದ ನಾಟ್ಯವಿಲಾಸಿಗಳಾಗಲೀ ಶಾಲಾ ದಿನಾಚರಣೆಯ ಉತ್ಸಾಹಿಗಳಾಗಲೀ, ಇಂಥ ನಾಟಕಗಳಿಗೆ ಕೈಹಾಕಬಾರದು ; ಇದರಿಂದ ನಾಟಕಕಲೆಗೆ ಅಪಚಾರವಾಗುತ್ತದೆ.

ಈ ನಾಟಕದ ಸಂಪೂರ್ಣ ಹಕ್ಕು ನನ್ನದೇ. ಶ್ರೀ ಜಿ. ಬಿ. ಜೋಶಿಯವರಿಗೆ ಅವರ ಗ್ರಂಥಮಾಲೆಯ ೨೫ನೆಯ ವರ್ಷದ ಬೆಳ್ಳಿಸಂಪುಟದಲ್ಲಿ ಮಾತ್ರ ಅದನ್ನು ಬಳಸುವುದಕ್ಕೆ ಒಪ್ಪಿದ್ದೇನೆ. ಸಾಹಿತ್ಯಪ್ರಕಾಶನದಲ್ಲಿ ತಮ್ಮ ಆಯುರ್ಮಾನವನ್ನು ಕಳೆದು ಶ್ರಮಿಸಿದ ಆ ನನ್ನ ಮಿತ್ರರಿಗೆ ಸುಖ, ಸಂಪತ್ತೊದಗಲೆಂದು ಹಾರೈಸುತ್ತೇನೆ.

— ಶಿವರಾಮ ಕಾರಂತ

## ಅಂಕ ೧

### [ ದೃಶ್ಯ ೧ ]

[ಕೀಚಕ ಸುದೇಷ್ಣೆಯರು, ಸುದೇಷ್ಣೆಯ ಅರಮನೆಯಲ್ಲಿ ಕೀಚಕ ಬರುತ್ತ]

ರಾಗ — ಪಟದೀಪ

ಕೀಚಕ : ಆವಳೋ ಕಾಂತೆ
ನಭದ ಉಲ್ಕೆಯಂತೆ
ಮಿಂಚಿ ಸರಿದಳಂತೆ
ಮೈ ನಿಮಿರಿತಂತೆ । ಮನ ಥರಿಸಿತಂತೆ
ಸುಖದ ಹೊಂಗನಸು ಸ್ಫುರಿಸಿತಽಂತೆ !
ಸ್ಫುರಿಸಿತಂತೇ ಹೊಂಗನಸು
ಸಂಜನಿಸಿ
ಸಂಭ್ರಮಿಸಿತಂತೆ
ಸೋದರಿಯ ಒಲಿಸುತಲಿ
ಆಽ ಚದುರ, ಪ್ರೊಂದುತಲಿ
ಈ ಬಾಳ ನಲಿಸುತಲಿ । ಮೆರೆವೆನಂತೆ
ಮೆರೆದೊಡೇ ಧನ್ಯನಂತೆ
ಆವಳೋ ಕಾಂಽತೇ
ನಭದ ಉಽಲ್ಕೆಯಂತೆ
ಆವಳೊಽ ಆವಳೊ ಆ — ವಳೊ ಕಾಂತೆ

ಸುದೇಷ್ಣೆ : ಏನಿದು ತನುಜಾ । ಮನದಾ । ಘನದಾ ಆ ಮೊದಾ
ಮನದಾಽ ವಾಗ್ವಾದಾ
ಆವ ಕಾಂತೆ ?
ಆರ ಚಿಂತೆ ?
ಬಯಸಿದೊಡೆ ನಿನಗಿರದ ಕಾಂತೇ ಆರಿಗಂತೆ !
ಸಾಮಂತರಲಿ । ಸರಿಸಮರಲ್ಲಿ । ಭಾರತದ ಸೀಮೆಯಲಿ ।
ಆವ ಕಾಂತೆ ? ಯಾರ ಚಿಂತೆ ?

ಕೀಚಕ : ಬಯಸಿದೊಡೆ ದೊರೆತಪುದೆ
ಚಂದಿರನ ಬಿಂಬವದು, ಬರಿದೆ — ಅಂತೇ !
ಸೋದರಿಯೆ, ನೀನಿಂದು ಒಲಿದರಂತೆ
ಚಂದಿರನ ಪಡೆಯಲಿಕೆ ಸಾಧ್ಯವಂತೆ.
ಆವಳೋ ಕಾಂತೆ ನಭದ ಉಲ್ಕೆಯಂತೆ

ಹೃದಯುವನೆ ಸೆಳೆದಳಂತೆ
ಬದುಕಿದುವೆ, ಸೂರೆಯಂತೆ

ಸುದೇಷ್ಣೆ : ಬಳಸುನುಡಿ ಏಕಸ್ತಂತೆ
ಸೋದರಿಯ ಬಳಿಯಂತೆ ?
ತಿಳಿಸಿದೊಡೆ ನಿಜವಂತೆ
ಯನ್ನರಸನಿಂ ಕೂಡಿಸುವೆನು. । ಆವ ಕಾಂತೆ ?

ಕೀಚಕ : ಆವನಾ ಸುತೆಯೊ, ಆ ವಿದ್ಯುಲ್ಲತೆಯೊ !
ಆವನಾ ಸುತೆಯೊ ! ಅರಿಯೆ ನಾನ್ ಇನಿಸಿನಿಸು
ಮನವ ಸೆಳೆದಳು ನಾರಿ। ಆವನಾ ಸುತೆಯೊ ।
ಅದನು ತಿಳಿವುದು ಬೇಡ
ಪರರ ಹಂಗದು ಬೇಡ
ಅರಸಲಿಕೆ – ಅಂಗೈಯೊಳಿರುವ ರತುನ,
ಸಲಿಸುವುದು ನೀನೆನಗೆ ನಿಜದ ವಚನ.

ಸುದೇಷ್ಣೆ : ನಿನಗಿದುವೆ ವಚನಾ। ಪೇಳೆನಗೆ ಜತನ ।
ಅಷ್ಟು ಸನಿಯದೊಳಿರಲು, ಇಲ್ಲವೆಂಬೆನೆ ನಿನಗೆ ?
ಪೇಳು, ಪೇಳೆನ್ನ ಮುದ್ದುಮಣಿ, ಆವ ರತುನ
ಆವ ಕಾಂತೆಯು ಅವಳು ?
ಯಾಕೆ ಚಿಂತೆಯು ನಿನಗೆ !
ಭಾವನೆಯ ಬೆನ್ನೇರಿ ಬಂದ ವನಿತೆ। ಆವ ಕಾಂತೇ

ಕೀಚಕ : ಆವಳೋ ಕಾಂತೆ,
ನಭದ ಉಲ್ಕೆಯಂತೆ,
ಮಿಂಚುತಲಿ, ಎನ್ನೆದೆಯ ಗೂಡ ಪೊಗ್ಗಿದಳಂತೆ —
ಅವಳೆನಗೆ ಕಡು ನಿಜದ ಪ್ರಾಣಕಾಂತೆ.
ಮ....ತ್ಪ್ರಾ....ಕಾಂತೆ.

ಸುದೇಷ್ಣೆ : ಆವಳೋ ಆ ಕಾಂತೆ ?
ಆವ ಪೆಸರಿನ ರತುನ ? ಮತ್ತೆಲ್ಲಿ ಕಂಡುದು....ಅಂತೆ ?

ಕೀಚಕ : ಅರಿಯೆನಂತೆ । ನಾನ್ ಅರಿಯೆನಂತೆ
ಮಿಂಚಿನಂತೆ,
ಮಿನುಗಿ । ಸರಿದಳಂತೆ
ನಿನ್ನೆ ದಿನ ನಿನ್ನದೇ ಸಭೆಯೆಲಂತೆ !
ಕಂಡ ಕ್ಷಣದಿಂ ಮನವು ಭ್ರಾಂತುಗೊಂಡಿದೆಯಂತೆ ...
ಬಂಡುಣಿಯ ಕಣ್ಣುಗಳ ಕಂಡು ಬೆರಗಾದೆನಂತೆ.

ರಾಗ — ಬಹಾರ್

ಸುದೇಷ್ಣೆ : ಆರ ಕಂಡುದೊ ಸೋದರಾ। ನೀನಾರ ಕಂಡುದೊ ಸೋದರಾ

ನನ್ನದೇ ಸಭೆಯೊಳಗೆ ಇನ್ನಾವಾರನು ಕಂಡೆ!
ಮುನ್ನದುವೆ ಮನಸಿನಲಿ ತತಿಯುಗೊಂಡೆ?
ನಿನ್ನೆದಿನ ನನ್ನ ಬಳಿ ಅನ್ಯರಿದ್ದಿಲ್ಲವಲ
ನನ್ನದೇ ಪರಿವಾರ; ಚನ್ನೆ ಯಾರದು ಪೇಳು?
ಆರ ಕಂಡುದೋ ಸೋದರಾ?

ಕೀಚಕ : ನಿನ್ನ ಬೆನ್ನಿನ ಹಿಂದೆ
ಚವರಿ ತಿರುವುತ, ಒಂದೆ
ನಿಟ್ಟಿಲಿ ನೆಲನ ನೋಡಿ, ಮುಂದೆ
ನೆಪ ತೋರಿ ಅಲ್ಲಿಂದ ನಾಯುವೆಂದೆ!

ಸುದೇಷ್ಣೆ : ನನ್ನ ಬೆನ್ನಿನ ಹಿಂದೆ!
ಚವರಿ ಬೀಸುತಳೆಂದೆ.
ಎಲ್ಲಿ ಬಂದೆ?
ಸೋದರಾ! ನೀನೆಲ್ಲಿ ಬಂದೆ?
ದಾಸಿಜನ ಕಂಡಿಷ್ಟು ಭ್ರಮೆಯುಗೊಂಡೆ!
ಚನ್ನಲ್ಲ, ಚನ್ನಲ್ಲ। ಮತಿವಿಭ್ರಮೆಯುಗೊಂಡೆ

ಕೀಚಕ : ದುಮ್ಮಾನವೆಂದೆ!
ಕುಲಶೀಲಗಳ ಮಾತು ಬರಿಯ ದುಮ್ಮಾನವೆಂದೆ!
ಎನ್ನ ಮೋಹದ ಬಲೆಗೆ,
ಬಿದ್ದಿರುವ ಹರಿಣವನೆ ಸದ್ದಿಲ್ಲದಿರೆ ಕೊಡಿಸು;
ತವ ನುಡಿಯು, ದುಮ್ಮಾನವೆಂದೆ.

ಸುದೇಷ್ಣೆ : ಆರ ಮೋಹದ ಬಲೆಗೆ
ಯಾರು ಬಿದ್ದವರೆಂದೆ? ಆರ ಬಯಸುವೆ ಎಂದೆ?
ಮಡದಿಯನೆ? ದಾಸಿಯನೆ? ಮೋಹದಾಟಕೆ ಕನ್ನೆಯನ್ನೇ?

ರಾಗ — ಶಂಕರಾ

ಕೀಚಕ : ಗೈವೆಯೇನೆ ಮಾನಭಂಗ?
ಆವ ನೀತಿ? ಏನು ಖ್ಯಾತಿ? ಮಾನಭಂಗ
ಅಂತರಂಗ ಅರಿತ ಮೇಲೆ ಪೇಳ್ವ ರೀತಿ ಇದುವೆ ಏನೆ?
ಮನದ ಕಾಂಕ್ಷೆ ಮುರಿವ ನೀತಿ।
ಗೈವೆಯೇನೆ ಮಾನಭಂಗ? ಅಭಿಮಾನ ಭಂಗ
ಬಂದ ದಾರಿ ಪಿಡಿವುದಕ್ಕೆ ಬಂದು ಇಲ್ಲ ಸುಂಕವೆನಗೆ

ಬಂದ ತೆರದಿ, ಕೇಕಯಕ್ಕೆ ಪೋಪೆನಕ್ಕ, ಸಾಕು, ಸಹಿಸೆ.
ಗೈದೆ ನೀನು ಮಾನಭಂಗ ! ಅಭಿಮಾನ ಭಂಗ !

ರಾಗ — ಜಂಜಾವತಿ

ಸುದೇಷ್ಣೆ : ಭಂಗವಲ್ಲ, ಭಂಗವಲ್ಲ, ಅಭಿಮಾನ.
ಉತ್ತುಂಗಕುಲದ ಕನ್ಯೆಯಲ್ಲಿ ಸಲದು ಮಾನ.
ಸೈರಂಧ್ರಿಯವಳು, ಯನ್ನ ಒಳಿಯ
ವ್ಮೈ ಮರೆಯಬೇಡ, ಸಲದು ಮಾನ
ಸಲದು ಮಾನ
ನಮ್ಮ ಕುಲದ ಘನತೆಗಿಂಥ
ಹೆಣ್ಣು ಸಲದು; ಬಲು ದುಮ್ಮಾನ.
ಭಂಗವಲ್ಲ, ಭಂಗವಲ್ಲ — ಅಭಿಮಾನ !

ಕೀಚಕ : ಸಾಕು ಬಿಡೆಲೆ ಉಪದೇಶ; । ಕಳೆಯ ನಾನು ಬಾಳ ಶೇಷ
ಮನಸು ತೆತ್ತ ಕನ್ಯೆಯನ್ನು ಇತ್ತರಾಯ್ತು । 'ಇಲ್ಲ' ಎನ್ನು !
' ಇತ್ತ ಮಾತು ಇಲ್ಲ ತನಗೆ, ಇಲ್ಲ' ವೆನ್ನು । ಪೋಪೆ ನಾನು
ಪೋಪೆ ನಾನು
ಪೋಪೆ ನಾನು

ಸುದೇಷ್ಣೆ : ಇಂಥ ಕೋಪ ಯಾರಿಗಾಗಿ !
ಎಂಥ ಮೋಹ ತಾಳ್ದೆ ನೀನು !
ಕಂಡೆಯೆಲ್ಲಿ ? ಯಾರು ಪೇಳು – ಕಂಡಳೇನು ನಿನ್ನವಳು ?

ಕೀಚಕ : ಕಂಡೆ ನಾನು, ನಿನ್ನ ಬಳಿಯೆ
ನಿನ್ನ ಕುರುಳು ತಿದ್ದಿ ನಿಂತ
ಭೃಂಗನಯನೆ, ಕಮಲವದನೆ
ಮನಕೆ ಬಂದ ಮುದದ ಆನೆ, ಮದದ ಆನೆ

ಸುದೇಷ್ಣೆ : ಅರಿತೆ ನಾನು । ಬೇಡವಿಂನ್ನು

ಕೀಚಕ : ಎನ್ನ ಕರಕೆ ಈವೆಯೇನು

ಸುದೇಷ್ಣೆ : ಏನು ?

ಕೀಚಕ : ಕಳುಹು ನೀನು

ಸುದೇಷ್ಣೆ : ಯಾರು ಅವಳು ? ಯಾರು, ಏನು ?

ಕೀಚಕ : ಯಾರೆ ಇರಲಿ, ಕಳುಹು ನೀನು ।

ಸುದೇಷ್ಣೆ : ಅನುಜ ಕೇಳು – ಗಂಧರ್ವಕನ್ಯೆ !
ಆಸರೆಯ ಬಯಸಿ ಬಂದ ರನ್ನೆ

ಕೈಯ್ಯ ಪಿಡಿದ ಇನಿಯರುಂಟು
ಹುಚ್ಚು ಬಯಕೆ, ಸಲದು ನಂಟು !
ಸಲದು ನಂಟು

[ಕೀಚಕ ಅವಳು ಗಂಧರ್ವೆಯೆಂದು ಕೇಳಿ ವಿಶ್ವಾಸ ತಾಳಿ ಹೊರಡುತ್ತಾನೆ.]

ರಾಗ — ಗಾರಾ

ಕೀಚಕ : ಗಂದರ್ವ ಕನ್ಯೆ ! ಏನ್ ! ಏನ್ ! ಏನ್ !
ಕಾಮನರಗಿಣಿಯವಳು, ಮೈ ಮನವ ಸೆಳೆದವಳು ।
ಗಂಧರ್ವ ಕನ್ಯೆ
ಹಾಗಾದರಿನ್ನೊಳಿತು, ಆಕೆ ಯನಗಲ್ಲ ಅನ್ಯೆ,
ಅನುಜೆಯಾ ಸೈರಂಧ್ರಿ । ಗಂಧರ್ವೆಯುವಳು !
ಗಂಧರ್ವೆ ಅವಳಿರಲು, ಪತಿಯಿದ್ದರೂ ಅಂತೆ
ಇಲ್ಲದಿರಲೂ ಅಂತೆ
ರೂಪರಾಶಿಯು ಪೂಜೆಗರ್ಹಳಂತೆ ।
ತಪಿಪ ಕಾಮನ ಕರೆಗೆ ಸೈಗುಡುವಳಂತೆ ।
ಗಂದರ್ವಕನ್ಯೆ !

[ದೃಶ್ಯ : ೨]

[ಅರಮನೆಯ ಚಾವಡಿಯಲ್ಲಿ ಕೀಚಕನನ್ನು ಅರಸಿ ಬರುವ ನಗೆಗಾರ]

ರಾಗ — ತೆಲಂಗ

ನಗೆಗಾರ : ಎಲ್ಲಿ ಕಾಂಬೆನೊ ಅವನನ್ನು । ಕೇಕಯದ ಕೀಚಕನ ।
ಆ ಹಸುಮಗನ । ಮದುವೆಯಿಲ್ಲದ ಮದುಮಗನ ।
ದೊರೆಯ ಮೈದುನನ । ಕೀಚಕನ । ಎಲ್ಲಿ ಕಾಂಬೆನೊ ಅವನ
ಓಹೊ — ಇಲ್ಲೇನೆ ನಿಂತಿಹನ !
ಕಂಡೂನು, ಕಾಣದನ್ನು !

[ನಗೆಗಾರನ ಕೊನೆಯ ಮಾತನ್ನಾಲಿಸಿ]

ಕೀಚಕ : ಯಾರವನ್ನು ?
ನಗೆಗಾರ : ಈ ಕೀಚಕನ್ನನ ।
ದೊರೆರಾಯ ಕರೆದು ತಾರೆಂದಪ್ಪನ ।
ನಿನ್ನನೆ ಕರೆದು ತಾರೆಂದಪ್ಪನು

ಅದಕೇನೆ ಬಂದಪೆನೊ, 'ಶುಭಮಕ್ಕೆ' 'ಶುಭಮಕ್ಕೆ' ನಿನಗಿನ್ನು
ಅದಕ್ಕೇನೆ ಬಂದಪೆನೊ !

ಕೀಚಕ : ಅಪ್ಪರಿನ್ನಿಲ್ಲ, ಎನ್ನು
ನಗೆಗಾರ, ಪೇಳ್ವೆಯ ಪ್ರಶ್ನೆಗುತ್ತರವನ್ನು ?

ನಗೆಗಾರ : ಉತ್ತರೆಗೆ ಪ್ರಶ್ನೆಯನ್ನೇ ?
'ಸಣ್ಣವಳು, ಅವಳಿಂದ ಬರಿ ಕುಣಿತ;
ಇನ್ನಿಲ್ಲ—ವೆನ್ನು !

ಕೀಚಕ : ಉತ್ತರೆಗೆ ಪ್ರಶ್ನೆಯಲ್ಲ !
ಹೇಳುವೆಯೇನು ನಗೆಗಾರ, ಬಗೆಗಾರ

ನಗೆಗಾರ : ಸೇರಿಸು ಮತ್ತಿಷ್ಟು — , ಬಗೆಗಾರ, ಹಗೆಗಾರ ....

ಕೀಚಕ : ಇಲ್ಲಿಲ್ಲ, ನಗೆಗಾರ ನೀನಹುದು
ಯನ್ನಯ ಪ್ರಶ್ನೆಗೆ ಉತ್ತರವ ಸಲಿಸುವುದು.
ಉಂಟೇ ಲೋಕದಿ ಮದುವೆ ?
ಗಂಧರ್ವಜನಕೆ, ನಿಜದೆ !
ಉಂಟೇ ಲೋಕದಿ ಮದುವೆ ?

ನಗೆಗಾರ : ನಂಟಿಲ್ಲ ಆ ಮದುವೆ ! ಎಂಟೆಂಟು ದೇವರ ಆಣೆ
ನಂಟಿಲ್ಲ ಆ ಮದುವೆ.

ಕೀಚಕ : ಉಂಟೇ ಲೋಕದಿ ಮದುವೆ ? ಗಂಧರ್ವೆಗೆ ?

ನಗೆಗಾರ : ಗಂಧರ್ವೆಯೆ ! ಗಂಟಿಲ್ಲ ನಿನಗದುವೆ ....

ಕೀಚಕ : ಕಂಡೆ ಗಂಧರ್ವೆಯನು ! ಸೌಂದರ್ಯ ದಿವ್ಯೆಯನ್ನು,
ಪೊಂದದಿ ಬಾಳೆ ನಾನು, ಹೇಳುವೆಯೇನು ।

ನಗಗಾರ : ಪೇಳುವುದೇನು ! ಬಿದ್ದಳು ಬಲೆಗೆ ಎನ್ನು !
ಅದೃಷ್ಟವಂತ ನೀನು ।

ಕೀಚಕ : ಬಗೆಯ ಹೇಳು,
ನಗೆಗಾರ ಬಗೆಗಾರ ! ಮೋಹವಶ ನಾನಿರಲು । ಬಗೆಯ ಹೇಳು,
ಪಡೆವ ಬಗೆಯ ಹೇಳು ।
ಗಂಧರ್ವ ಕನ್ಯೆಯವಳು, ಸೌಂದರ್ಯ-ಮೂರ್ತಿಯವಳು ।

ನಗೆಗಾರ : ಅದಕೆ ಚಿಂತೆಯೆ ! ಮರುಳು !
ಚೆಲುವ ನೀನಿಹೆ; ತೆರಳು –
ಆಗವಳ ಬೆಂಬಿಡದ ನಿಜ ನೆರಳು.

ಕೀಚಕ : ಆ ಮೇಲೆ ?

ನಗೆಗಾರ : ಆ ಮೇಲೋ । ಹೊಗಳು ಹೊಗಳು ।

ಹೊಗಳಿಕೆಗೆ ಒಲಿಯದಾ ಮೃಗವುಂಟೆ ಲೋಕದಲಿ !
ಹೊಗಳು, ಹೊಗಳು.

'ಅಂಥ ಕಣ್ಣುಳ್ಳವಳೆ ! ಇಂಥ ಮೈಯುಳ್ಳವಳೆ !
ತಲೆಯುಲಿ ಬುದ್ಧಿಯೆಂಬುವ ತೈಲ ತುಂಬಿದವಳೆ'
ಹೀಗೆ ಹೊಸೆಯಲು ಪ್ರಾಸ; ದೊರೆಯುವಳನಾಯಾಸ ।

ಕೀಚಕ : ಒಲಿಯದಿರೆ ?

ನಗೆಗಾರ : ಹಿಂದೆ ತೆರಳು ! ಮನೆಗೆ ಮರಳು !
ಒಲಿದುದಾದರೆ ಮಾತ್ರ ಬಂದು ಹೇಳು ।
ಕಷ್ಟವಾಗದು ನಿನಗೆ ...

ಕೀಚಕ : ಅಕ್ಕ ಕಳುಹಳು ಬಳಿಗೆ ?

ನಗೆಗಾರ : ಅಕ್ಕ ಕಳುಹಳೆ ಬಳಿಗೆ !
ಯಾರವಳು ಗಂಧರ್ವೆ? ಅಷ್ಟು ಸನಿಯ !
ಹೇಳಲೇಬೇಕೆನಗೆ ನಿಜದ ವಿಷಯ.

ಕೀಚಕ : ದೊರೆತ ಮೇಲ್ ಪೇಳುವೆನು, ಗೂಢ ವಿಷಯ !

ನಗೆಗಾರ : ಬಾ, ಬಾರ. ಮರೆತೆ ನಾ – ಬಂದ ವಿಷಯ
ಅರಸು ಒರಹೇಳಿದನು, ಅದುವೆ ವಿಷಯ.
ಬಾ ಪೋಪ ಏನುಂಟೊ ತ್ವರೆಯ ವಿಷಯ !

[ ಇಬ್ಬರೂ ಕೂಡಿ ತೆರಳುವರು ]

[ ದೃಶ್ಯ : ೩ ]

[ ಅರಮನೆಯ ಚಾವಡಿಯೊಂದರಲ್ಲಿ — ಸುದೇಷ್ಣೆಯ ಪರಿಚಾರಿಕೆಯಾದ ಸೈರಂಧ್ರಿ ]

**ರಾಗ — ಅಠಾಣ**

ಸೈರಂಧ್ರಿ : ಆವನೋ ರಾಹು, ಕರಾಳ ಬಾಹು ।
ನಿನ್ನೆ ದಿನ ನೋಟದಿಂ ಇರಿಯೆ ಬಂದವನು,
ಮನದೊಳಗೆ ಬೀತಿಯನು ನಟ್ಟನಿವನು,
ಘನತರದ ಭವಣೆಯಲಿ ಬಿದ್ದೆ ನಾನು.
ಕನಸೊಳಗು ಬೆಚ್ಚುವೆನು — ಪೇಳ್ವನೇನು
ಆಸರೆಯನಿತ್ತವಗೆ, ತಾನು ಮೈದುನನು,
ವಾಸ ಅಜ್ಞಾತಕೆ ಮೃತ್ಯುವಾದಪನು । ಆವನೊ ರಾಹು !

**ರಾಗ — ಭೀಮಪಲಾಸ**

ತಾರಿಣಿ : ( ಪ್ರವೇಶಿಸಿ ) ಏನಿದು ಪ್ರಿಯ ಗೆಳತಿ, ಖೇದವು ಮುಖದೊಳತಿಕ

ಸ್ಯೆರಂಧ್ರಿ : ಖೇದವೆ — ಯಾರಿಗತಿ ?
ಯಾರಿಗತಿ ?

ತಾರಿಣಿ : ಬೇಡವು – ವಿಕಲಮತಿ.
ತವ ಗೆಳತಿಯೊಳೀತೆರ ಮರೆಮಾಜದಿರೆ.
ಆವುದು ಮನದ ಖತಿ ?

ಸ್ಯೆರಂಧ್ರಿ : ಇಲ್ಲವು ಮನಕೆ ಖತಿ.

ತಾರಿಣಿ : ನಿನ್ನೆಯಿಂ ನಿನ್ನಯ ಆನನ ಬಾಡಿದೆ
ಕಣ್ಣುಗಳೆರಡು ಬೆದರಿ ಕಂಗೆಟ್ಟಿವೆ
ಎನ್ನೊಳು ಪೇಳದ ಒಡಪದು ಇಹುದೇ
ಸನ್ನುತೆ, ಏನಿದು ಚಿಂತೆಯು, ಅದುವೆ

ಸ್ಯೆರಂಧ್ರಿ : ಯನ್ನಯ ಸಲ್ಲನ ಚಿಂತೆಯು, ಅದ

ತಾರಿಣಿ : ಅಲ್ಲವೆ ಅಲ್ಲವು — ಪ್ರಿಯ ಗೆಳತಿ,

ಸ್ಯೆರಂಧ್ರಿ : ಅಂತಿರೆ ಪೇಳ್ವುದು ನೀನೇನೆ

ತಾರಿಣಿ : ಪೇಳಲೆ ಕಾರಣ, ನಾನೇನೇ ?

ಸ್ಯೆರಂಧ್ರಿ : ಪೇಳೆಲೊ ಜಾಣೆ, ಪೇಳ್ ರನ್ನೆ ।

ತಾರಿಣಿ : ಕೋಪವೆ ? ಆಣೆ, ಪ್ರಿಯಮನ್ನೆ ...

ಸ್ಯೆರಂಧ್ರಿ : ಇನಿತಿಲ್ಲವು ಮುನಿಸು, ಜೀವಸಖಿ, ವನಜಮುಖಿ,

ತಾರಿಣಿ : ಪೇಳ್ವೆನು ಕೇಳು ... ಪ್ರಿಯ ರನ್ನೆ
ಕೊಳದಿಂ ಕಿತ್ತಿಹ ಕಮಲವು ನೀನೇ
ತಳದಿಂ ಕದಲಿಹ ಕದಳಿಯು ನೀನೇ

ಸ್ಯೆರಂಧ್ರಿ : ಅಹುದೆನ್ನೆ ।

ತಾರಿಣಿ : ಅಹುದೆನ್ನು
ತಳದಿಂ ಕದಲಿಹ ಕದಳಿಯು ನೀನು
ಕೆಸರಿಗೆ ಎಸೆದಿಹ ರತುನವು ನೀನು

ಸ್ಯೆರಂಧ್ರಿ : ರತುನವು ನಾನೇ ?

ತಾರಿಣಿ : ರತುನವೆ ನೀನು.
ಈ, ತಾವಿಗೆ ಸಲ್ಲದ ದೇವತೆ ನೀನು.

ಸ್ಯೆರಂಧ್ರಿ : ದೇವತೆ ನಾನೇ?

ತಾರಿಣಿ : ಸುದೇಷ್ಣೆಗೆ ಸಲ್ಲದ ಮಾಲಿನಿ ನೀನು

ಸ್ಯೆರಂಧ್ರಿ : ಕುಪಿತಳೆ ಏನು ?
ಈ ದಾಸಿಯ ಮೇಲಕೆ ಕೋಪವೆ ಏನು !
ಅರಸಿಗೆ ಯನ್ನೊಳು ಬೇಸರವೇನು !

ತಾರಿಣಿ : ಸುಮ್ಮನಿರೆನ್ನು ....
ಸಾಸಿರ ರಾಣಿಯರ್ಕೊಂಬವಳ್ನೀನು !
ಆವುದೋ ದುರ್ವಿಧಿ ಸೆಳೆದಿತು, ಎನ್ನು,
ತಂದೀ ಸೇವೆಗೆ ಕೆಡವಿತು — ಎನ್ನು.

ಸೈರಂಧ್ರಿ : ಚೆನ್ನು, ಚೆನ್ನು, ಚೆನ್ನು
ಅರಸಿಯು ತೊತ್ತಿಗೆ ಪಟ್ಟವ ಕೊಟ್ಟಿ
ಎತ್ತುತೆ ಎತ್ತುತೆ ಸಗ್ಗಕೆ ಇಟ್ಟಿ !

ತಾರಿಣಿ : ಯನ್ನೊಳಗಿರಲು ಸಗ್ಗದ ಪಟ್ಟ
ನಿನಗೇ ನಿಜವಲ; ದಿಟ್ಟವೇ, ದಿಟ್ಟ !
ಪ್ರಿಯ ಗೆಳತಿ ,
ಖೇಚರ ಮಾರ್ಗದ ರಾಹು ಅದಾವುದೊ
ಚಂದಿರ ಬಿಂಬವ ನುಂಗಲ್, ಅತೀ .... ....

[ಆ ವೇಳೆಗೆ ತಾರಿಣಿಯ ಪತಿಯಾದ ವಿದೂಷಕ ಕಾಣಿಸಿಕೊಳ್ಳುತ್ತಾನೆ]

ಸೈರಂಧ್ರಿ : ಪ್ರಿಯ ಗೆಳತಿ,
ಕನಸನು ನಿಲ್ಲಿಸು ಪ್ರಿಯ ಗೆಳತಿ,
ನೋಡದೊ ನಿನ್ನಯ ಪ್ರಿಯತಮ, ಬಂದಿಹ ....
ಓಡೆಲೊ ಬೆನ್ನಿಗೆ, ಪ್ರಿಯ ಗೆಳತಿ,
ಪ್ರಿಯ ಗೆಳತಿ,
ಸಗ್ಗದ ಪಟ್ಟವ ಕೊಟ್ಟಿರೆ ನೀನು
ಮನಸಿನ ಮಂಡಿಗೆ ಮೆಲ್ಲುವೆ ನಾನು.
ಪ್ರಿಯ ಗೆಳತೀ ಪ್ರಿಯ ಗೆಳತಿ

ಸೈರಂಧ್ರಿ : ಖೇಚರ ಮಾರ್ಗದ ರಾಹು ಅದಾವನೋ
(ತಾನೇ ಅಲ್ಲಿಂದ ಸರಿದು ಹೋಗುತ್ತಾಳೆ)

[ನಗೆಗಾರ ಪ್ರವೇಶಿಸುತ್ತಾನೆ]

**ರಾಗ — ಪಹಾಡಿ**

ನಗೆಗಾರ : ತಾರಿಣಿ .... ಬಾ .... ಇಲ್ಲಿ ....
(ಎಂದು ಪತ್ನಿಯನ್ನು ಕರೆಯುತ್ತಾನೆ)

ತಾರಿಣಿ : ಥೀ, ಈ ವೇಳೆಗೆ ನೀವಿಲ್ಲಿ.

ನಗೆಗಾರ : ತಾರಿಣಿ ಬಾ ಇಲ್ಲಿ,
ಹೋದಳು ಯಾರಲ್ಲಿ ?

ತಾರಿಣಿ : ಏನಿದು ಪರಿಹಾಸ;
ಸಲ್ಲದ ಹವ್ಯಾಸ.
ನಗೆಗಾರ : ಹೋದಳು ಯಾರ್ ಎನ್ನು
ನಿಸ್ನೋರಗೆ ಆ ಹೆಣ್ಣು ?
ತಾರಿಣಿ : ನುಚ್ಚಿರಿ, ಈ ಬಾಯಿ
ಚೆಲುವಲ್ಲವು; ಬಿಡು-ಬಾಯಿ.
ನಗೆಗಾರ : ಗಂಧರ್ವೆ ಅವಳೇನು ?
ಈ ತಾವಿಗೆ ಹೊಸತೇನು ?
ತಾರಿಣಿ : ನಾಲಿಗೆ ಕಡಿದೇನು ?
ನಗೆಗಾರ : ಗಂಡರು ಉಂಟೇನು ?
ತಾರಿಣಿ : ಶಾಸನ ಬೇಕೇನು ?
ನಗೆಗಾರ : ಅಹದೆಂದೊಡೆ ಪೋಗುವೆನು ..
ತಾರಿಣಿ : ಛೀ ಮರೆತೆನು ನಾನೇನೊ,
ನಗೆಗಾರ : ಏನೇನು ?
ತಾರಿಣಿ : ನಾಗಂದಿಗೆ ಮೇಲಕೆ ಫೇಣಿಯನಿರಿಸಿ
ಮರೆತೇ ಬಂದಿಹೆನು.
ನಗೆಗಾರ : ಹಾಗಿದ್ದರೆ ಈಗಲೆ ಹೋಗುತ ಬೇಗನೆ
ತಿಂದೇ ತಿಂದಪೆನು !
ಹೊರಟೇ ಹೊರಟಿಹೆನು.
ನಾನೂ ನಾನೂ; ನಾನೂ; ನಾ ನು
ತಾರಿಣಿ : ಇಂತಹ ಮೂರ್ಖನನು, ಬಾಳಲಿ ಕೂಡಿರೆ,
ಬಾಳ್ವಿಗೆ ಚೆಲುವೇನು.

ಸೈರಂಧ್ರಿ : ಇಲ್ಲಿ ನಿಲ್ಲೆ ಘರವಲ್ಲ
ದುಷ್ಟ ಕಣ್ಣ ಭಯವಲ (ಮರೆಯಾಗುತ್ತಾಳೆ.)
ಕೀಚಕ : ಎಲ್ಲಿ ಅವಳು ? ಪೋದಳೇ !
ಎಂಥ ಚೆಲುವ ಚೀರ್ದಳೊ ।
ಆವ ರೂಪ, ಹಾವಭಾವ,
ಮೋಹಜಾಲ ಬೀರ್ದಳೊ

[ಉತ್ತರೆಯನ್ನು ಕುರಿತು ವಿಚಾರಿಸುತ್ತಿದ್ದಾನೆಂದು ಊಹಿಸಿ]

ಸುದೇಷ್ಣೆ : ಬಂತೇ ನಿನ್ನ ಮನಸಿಗೆ ?
ಸೋಗು ಕಳಚಿ ಬರುವಳು

ರಾಗ — ಕಾಫಿ

ಕೀಚಕ : ಪೋದಳೇ ಕಲಹಂಸೆ,
ಭ್ರಮೆಯೊಳಿರಿಸಿ ಪೋದಳೇ
ವಿಭ್ರಮೆಯ ತೊಡಿಸಿ ಪೋದಳೇ, ಕಲಹಂಸೆ ।
ಸುದೇಷ್ಣೆ : ಆವ ಕನಸ ಕಾಂಬೆ ನೀನು
ಗಾಢ ನಿದ್ದೆ ಬಂದಿತೇನು ?
ಕೀಚಕ : ಅಕ್ಕ ಪೇಳು, ಇದುವೆ ನಿಶ್ಚಯ
ತಕ್ಕು ಸಲದು, ಬೇಡ ನಿರ್ದಯ.
ಮಗಳ ಹಂಸನಾಟ್ಯ ತೋರಿ
ನಿಜದ ಹಂಸ ಹರಿಪೆಯಾಕೆ ?
ಸುದೇಷ್ಣೆ : ಆವ ಹಂಸ ಸ್ಮರಿಪೆಯಾ ?
ಸೊಸೆಯ ನಾಟ್ಯ ಭ್ರಮೆಯಲಿ ...
ಕೀಚಕ : ಇನ್ನಾವ ಹಂಸ ಪೇಳ್ವೆನೆ !
ಕುಣಿದ ಕುವರಿ ಹಂಸವಲ್ಲ; ನಿಜದ ಹಂಸ ಎದೆಯಲಿ ...
ಹೃದಯ ಸರಸಿನಲ್ಲಿ ನಲಿದು ಕಾಣೆಯಾಯ್ತು ನಿಜದಲಿ !
ನಿಜದಲಿ, ನಿಜದಲಿ ...
ಹಂಸೆಯವಳು, ನಿನ್ನ ಹಿಂದೆ, ಎಂದು ನಿಂದು ಸರಿದಳು
ಕೊಡಿಸದಿರಲು ಆಣೆ ನಿನಗೆ। ತಿರುಗಿ ಬರೆನು ನಿಜದೊಳು
ಸುದೇಷ್ಣೆ : ಯಾಕೆ ದುಃಖ ? ಯಾಕೆ ಕೋಪ ? ಯಾಕದಿಷ್ಟು ತಾಪವೂ !
ಕೀಚಕ : ಕೋಪವಿಲ್ಲ ತಾಪವಿಲ್ಲ; ಬೇಕದಾಗೆ ಸ್ನೇಹವೂ
ಕಳುಹು ಬಳಿಗೆ, ಕಳುಹು ನಿಜದೆ
ಯನ್ನ ಗೃಹಕೆ ಹಂಸೆಯಾ

ಇಲ್ಲದಿದಲು ಕಳೆಯಿತೆನ್ನು
ಋಣದ ಬಂಧ, ಬಾಧೆಯು

[ಬೇಸರದಿಂದ ಹೊರಟೇ ಹೋಗುತ್ತಾನೆ]

ರಾಗ — ಸಾರಂಗ

ಸುದೇಷ್ಣೆ : ಆವ ಕಿಡುಗಳಿಗೆಯಲಿ ಬಂದು ಸೇರಿದಳೆನ್ನ,
ಈ ವಿಧದ ಚೆಲುವಿನಾ ಬಲೆಯ ಕಿಡಿದೂ
ತನ್ನವರ ತಾನಾಗಿ ಹಿಂದೆ ಕಳೆದೂ।
।ಆವ ಕಿಡುಗಳಿಗೆಯಲಿ।

ಸೈರಂಧ್ರಿ ತಾನೆಂಬ ಸೋಗು ತೊಟ್ಟು,
ಕಡೆಗಣ್ಣ ಬಾಣದಿಂ ಇರಿದು ಬಿಟ್ಟು
ಮೋಹದಾ ನಂಜನ್ನು ಲೇಪಿಸಿಟ್ಟು
ಒಂದೂ ತಿಳಿಯದ ತೆರನ, ನಟನೆ ತೊಟ್ಟು ...।
।ಆವ ಕಿಡುಗಳಿಗೆಯಲಿ।

ಗಂಧರ್ವ ಜಾತಿಗೇ ಸಲುವಂಥ ನಡತೆ
ಇಂದದರ ಬಗೆಯರಿತೆ ! ಚೆಲುವಿಲ್ಲ ಚರಿತೆ !
ಬಂದುದನು ಪಡೆದಿರಲಿ ಯನಗಿಲ್ಲ–ಕೊರತೆ।
।ಆವ ಕಿಡುಗಳಿಗೆಯಲಿ।

ಮಾಲಿನೀ ....

ಸೈರಂಧ್ರಿ : ಕರೆದಿರೇನ್ ... ? (ಮರೆಯಿಂದ ಬರುತ)
ಸುದೇಷ್ಣೆ ; ಮಾಲಿನೀಂ
ಸೈರಂಧ್ರಿ : ಕರೆದೆರೇಂ ?
ದೇವಿ ಏನ್ ?
ಸುದೇಷ್ಣೆ : ಇಂದು ಬೈಗಿನ ವೇಳೆ
ಮರೆಯದೀ ಕಜ್ಜವನು
ಮಾಡಲಾಣತಿಯೀವೆ ....
ಸೈರಂಧ್ರಿ : ಆಜ್ಞೆ, ದೇವಿ !
ಸುದೇಷ್ಣೆ : ಹೊನ್ನ ಬಟ್ಟಲ ಪಿಡಿದು, ಚೆನ್ನ ಫಲಗಳನಾಯ್ದು,
ಮಧು, ಮಧುರ, ತಾಂಬೂಲ, ಗಂಧ ಸುಮಗಳನೊಯ್ದು
ಸೈರಂಧ್ರಿ ಆಜ್ಞೆ, ದೇವಿ,
ತಮ್ಮ ಬಳಿಗೈದುವೆನು.

ಆಜ್ಞೆ ದೇವೀ

ಸುದೇಷ್ಣೆ : ಉಪಚಾರವೆನಗಲ್ಲ
ಬಂದ ಸೋದರ ನಮ್ಮತಿಥಿಯಲ್ಲ
ಒಯ್ಯುವುದು ಅವನ ಬಳಿಗಿವನು ಎಲ್ಲ
ಮನವ ನೋಯಿಸ ಸಲ್ಲ .... (ಆಜ್ಞಾಪಿಸಿ ಸುದೇಷ್ಣೆ ನಿಲ್ಲುತ್ತಾಳೆ)

ಸೈರಂಧ್ರಿ : ಏನೇನು !
ದೇವಿ ಆಜ್ಞೆಯಿದೇನು ?
ಪರಪುರುಷನಿರುವೆಡೆಗೆ ಪೋಪುದೇನು .... ?

ಸುದೇಷ್ಣೆ : ಬದಲು ಮಾತದು ಮಾಣು !
ಅವನೆನ್ನ ಸಹಜಾತ, ಕಾಣು ! (ಸರಿದು ಹೋದ ಬಳಿಕ)

ರಾಗ — ಬಾಗೇಶ್ರಿ

ಸೈರಂಧ್ರಿ : ಆವುದಿದು ದುರ್ವಿಧಿಯೂ
ಬೆಂಬಿಡದೆ ಕಾರುತಿದೆ ಕಾಳ್ಗಿಚ್ಚಿನುರಿಯೂ
ಕಾವ ತಾಣವು ಎಂದು ವಿಪಿನದಿಂ ಬಂದಿರಲು
ಗೋವು ತಾನಾಗಿಯೇ ಹುಲಿಯ ಸೇರ್ದಂತಾಯ್ತು
ಗಂಧರ್ವರೆಯೆಂದುದೇ ಇಂದೆನಗೆ ಮೃತ್ಯುವು
ಮುಂದಿನ ಬಗೆಯೇನು ! ಅಂಧಮತಿಯಾದೇ (ತೆರಳುತ್ತಾಳೆ.)

[ಅರಮನೆಯ ಚಾವಡಿ. ವಿದೂಷಕ ( ನಗೆಗಾರ ) ತಾರಿಣಿಯರ ಪ್ರವೇಶ.]

ರಾಗ — ಮಿಯಾಮಲ್ಹಾರ

ನಗೆಗಾರ : ತಾರಿಣಿ, ನಿನಗರಿವೇ?
ಇಂದು ಬೆಳಗಿನಲಿ, ನೊಸೆಯ ನಾಟ್ಯವನು
ಕಂಡು ಕೀಕಯನು ಮೈಯ್ಯ ಮರೆತನೆ ?

ತಾರಿಣಿ : ಇಲ್ಲವು ಎನಗರಿವು !
ನಾಟ್ಯವು ಬಹು ಚೆಲುವು !
ಅಂಚೆಯಾಗುತಲಿ ವಿಧ ವಿಧ ಲಾಸ್ಯದ
ಚಂಚಲ ಜಲದಲಿ, ನಲಿದಿಹ ಬೆಡಗೊ !

ನಗೆಗಾರ : ತಾರಿಣಿ ನಿನಗರಿವೇ ?
ಇಂದು ಬೆಳಗಿನಲಿ, ಹಂಸನಾಟ್ಯವನು
ಕಂಡು ಕೀಚಕನು ಮುಗ್ಧನಾದನೇ?

ತಾರಿಣಿ : ‘ ಕಂಡು ಕೀಚಕನು ಮುಗ್ಧನಾದನೇ ! ’
ನಗೆಗಾರ : ಮುಗ್ಧನಾದನೇ ?
ತಾರಿಣಿ : ಕಂಡು ನಾಟ್ಯವನು ಮುಗ್ಧನಾದನೇ ?
ನಗೆಗಾರ : ಮುಗ್ಧನಾದನೇ ?
ತಾರಿಣಿ ಮುಗುದೆ ಯಾರನೋ ಕಾಣಬಂದವನು
ಕಾಣುವ ರಸಿಕನೆ — ಹಂಸನಾಟ್ಯವನು
ಕಂಡೊಡೆ ತಿಳಿಯದೆ — ಷಂಡುಗಾರನವ
ಭಂಡನ ಸುದ್ದಿಯ ಬಿಡು ಬಿಡು ಪ್ರಿಯತಮ ।
ನಗೆಗಾರ : ಆರನು ಕಂಡನೇ ನಾಟ್ಯವ ಮರೆಯಲಿಕೆ ?
ತಾರಿಣಿ : ಭಂಡನ ಮಾತದುವೇ, ಬಿಡಿ ಬಿಡಿ
ಸಲ್ಲದ ಸೊಲ್ಲಿದುವೇ

[ ಸಮೀಪದ ನಾಟ್ಯಶಾಲೆಯಿಂದ ಗೆಜ್ಜೆಧ್ವನಿ ಕೇಳಿಸುತ್ತದೆ. ]

ರಾಗ—ಭೂಪ

ನಗೆಗಾರ : ತಾಳು ರನ್ನೆ, ಕೇಳ್ವುದು
ಹೆಜ್ಜೆ ಪೆಟ್ಟು ಬೀಳ್ವುದೂ
ನೋಡಿ ಬರುವ, ಏನದು
ಹೆಂಗಂಡು ನಾಟ್ಯ ಇವನದು !
ತಾರಿಣಿ : ‘ ಹೆಂಗಂಡು ’ ನಾಟ್ಯ — ಯಾರದು.
ನಗೆಗಾರ : ಗಂಡುಹೆಣ್ಣು ಅಲ್ಲದಾತ
ನಾಟ್ಯಗುರುವು ಅವನಲ ।
ಷಂಡನಿಂದ ಕಲಿಯೆ ವಿದ್ಯೆ
ಕಲೆಗೆ ಬಹುದೆ ಚೆಲುವೆಲ ?
ತಾರಿಣಿ : ಅಹಹ ಎಂಥ ಮಾತೆಲ !
ವಿವೇಕದೊಂದು ಮೃಗವಲ,
ಬುದ್ಧಿಮತ್ತ ಪಶುವಲ.
ಸರಿವ ಗೃಹಕೆ, ತ್ವರೆಯಿಂದೀಗ ದಾರಿಯಲ್ಲಿ ಬೇಡೆಲ
ಬುದ್ಧಿಗೆಟ್ಟ ಮಾತಿಗಂತು ಜಾಣರಹುದು ನೀವೆಲ
ನಗೆಗಾರ : ಅದಕೆ ನನಗೆ ಸಂಬಳ ;
ಅವಿವೇಕವೆನಗೆ ಬೆಂಬಲ.
ತಾರಿಣಿ : ಸಾಕು, ಸಾಕು, ಸಾಕೆಲ

[ ನಾಟ್ಯಾಭ್ಯಾಸ ಮುಗಿಸಿಕೊಂಡು ಗುರು-ಶಿಷ್ಯೆಯರಾದ ಬೃಹನ್ನಳೆ-ಉತ್ತರೆಯರು ಬರುತ್ತಾರೆ. ]

ರಾಗ — ಪೂರ್ವಿ

ಉತ್ತರೆ : ಮರೆಯಲಾರೆ
ನಾಳೇನ ಕಲಿಸುವಿರಿ ನಾಟ್ಯವಾಡಲು ಎನಗೆ
ಇಂದಿನದ ಆನಂದ ಮರೆಯಲಾರೆ.
ಅರಸಂಜೆ ಕನಸಿನೊಳೆ ತೇಲಿ ನಲಿದೆನು, ಗುರುವೆ
ಸೌಂದರ್ಯಸ್ವಪ್ನವನು ಮರೆಯಲಾರೆ। ನಾಳೇನ ಕಲಿಸುವಿರಿ ?।
ಬೃಹನ್ನಳೆ : ರಾತ್ರಿ ಬರಲಿಹ ಕನಸ ತಿಳಿಸಬಲ್ಲೆಯ ಈಗ ?
ನಾಳೆಗಾವುದೋ ಏನೋ ಭಾವರಾಗ
ದಿನದಂತೆ ದಿನವಿರದು, ಮನದಂತೆ ಮನವಿರದು ;
ನಾಳೆ ಉದಯಿಸಲಂತೆ, ಪೇಳ್ವೆನಾಗ
ಉತ್ತರೆ : ಒಮ್ಮೆ ಮುಳುಗಿದ ರವಿಯು, ಬರನೆ ಬೇಗಾ ?
ನಾಳಿನಾ ಚೆಲುವನ್ನು ತರನೆ ಬೇಗಾ ?
ಬೃಹನ್ನಳೆ : ನಾಳೆ ಬರಲಿದೆ ಏನೊ ! ನಿನ್ನೆ ಸಂದುದು ಏನೊ !
ಇಂದಿನಾ ಸೊಗವದುವು ... ಬೇರೆ ಏನೊ !
ನಾಟ್ಯಭಾವವು ಅಂತೆ — ದಿನದಂತೆ ದಿನವಿರದು,
ಮನದ ಬಗೆಯನು ತಾನು ಅರಿವುದೆಂತು !
ನಾಳೆಗಿಹ ಕೌತುಕವ ಕಾಯುತಿರು ಚದುರೇ।
ಬಾಳು ಎಂಬುದು ನೋಡು — ನಿತ್ಯ ಹೊಸತು ।
ಉತ್ತರೆ : ಅಂತು ಪೇಳಲೆ ಇಲ್ಲ ಪ್ರಶ್ನೆಗುತ್ತರವನ್ನು
ಬೃಹನ್ನಳೆ : ನಾನರಿತರಲ್ಲವೇ ಪೇಳ್ವುದದನು !
ಉತ್ತರೆ : ಅರಿತಿಲ್ಲವೇ ನೀವು ?
ಬೃಹನ್ನಳೆ : ಅರಿತಿಲ್ಲ — ನಾಳಿನದ.
ಅರಿತರದ, ನಿನಗಿಂದು ಪೇಳದಿಹನೆ ?
ಚಿನ್ನ, ಕೇಳಿದು ನಿಜವು
ಯನ್ನ ಕಲಿಕೆಯದೆಲ್ಲ
ನಿನಗಿಲ್ಲದಿರೆ ಅನ್ಯ ಶಿಷ್ಯೆಗಲ್ಲ !
ಉತ್ತರೆ : ಆಶೀರ್ವಚನವಲ್ಲ
ಧನ್ಯಳಾದೆನು ನಾನು, ಪೋಪೆ ಮೆಲ್ಲ.

[ಎಂದು ಗುರುವಿನ ಪಾದಕ್ಕೆರಗುತ್ತಾಳೆ]

ಬೃಹನ್ನಳೆ : ಪೋಗು ಮೆಲ್ಲ ; ಶುಭಮಕ್ಕೆ — ಎಲ್ಲ ... ...

[ಉತ್ತರೆ ಹೊರಟು ಹೋಗುತ್ತಲೆ, ಬೃಹನ್ನಳೆಯ ಆಂತರಿಕ ವ್ಯಾಕುಲ ಹೆಚ್ಚುತ್ತದೆ.]

ಶುಭದ ಮಾತ ನುಡಿವೆನಲ್ಲ, ಅಶುಭವದೇನೊ ಕಾಡ್ವುದಲ್ಲ !
ಇದುವೆ ಚಣದೊಳೆಲ್ಲ ಎಲ್ಲೊ ಆಪ್ತ ಜೀವವೊಂದು ನೋಡು
ತಪ್ತ ತೈಲ ಭಾಂಡದೊಳಗೆ — ಬಿದ್ದ ತೆರನ ... ಕನಸಿದೊ !
ಶುಭದ ಮಾತ ಕಾಣಲಿಲ್ಲ

[ ಅದೇ ದಾರಿಯಿಂದ ಕಂಕಭಟ್ಟನ ಆಗಮನವಾಗುತ್ತದೆ. ]

ರಾಗ—ರಾಗೇಶ್ರೀ

ಕಂಕ : ಕ್ಷೇಮವೆ ನಟ್ಟುವರ
ಏನಿಲ್ಲಿ ಕಾದಿಹಿರಿ ! ಆರ ಬರವ ?
ಎದೆಯೊಳಗೆ ಕಾಡುತಿದೆ – ಆವ ಭವರ ?
ಬೃಹನ್ನಳೆ : ಬಲ್ಲಿದರು ತಾವಿಹಿರಿ, ಹೇಳಿ ಭವಿಷ್ಯ.
ಶುಭವೊ ಅಶುಭವೋ ಎಂದು ಈ ನಿಂತ ನಿಮಿಷ !
ಅಪಶಕುನ ಬಂದಂತೆ ಕಾಣುತಿದೆ ನಿಮಿನಿಮಿಷ
ಕಂಕ : ಒಂಟಿ ವಿಪ್ರನು ಅಡ್ಡ ಬಂದೆನೆಂದೇ ?
ಈ ಕಂಕಭಟ್ಟನ ಭರವೆ ಅಪಶಕುನವೆಂದೇ ?
ಶಕುನವದು ಗಂಡುಸಿಗೆ !
ಶಕುನವದು ಹೆಂಗುಸಿಗೆ !
ತಮಗೆ ತಟ್ಟಿದು ಬಾಧೆ ; ಹೇಳಿ, ಮುಂದೇ.......?
ಬೃಹನ್ನಳೆ : ಅಂತಿಲ್ಲದಿರೆ ಭಯವು ಕಾಡುತಿದೆಯೇಕೆ ?
ಸಂಶಯವು ಮನದೊಳಗೆ ಮೂಡುತಿದೆಯೇಕೆ ?
ಕಂಕ : ಏನೆಂದು ? ಏನೆಂಬ
ಬೃಹನ್ನಳೆ : ರಕ್ತರಂಜಿತ ಬಾನು, ಕಂಡು ನಿಂತಿರೆ ನಾನು ।
ತಪ್ತ ತೈಲದ ಭಾಂಡದೊಳಗಾರನೋ ಅದ್ದಿದಂತಾಯ್ತು ।
ಮತ್ತಗಜ ಸೆಳೆತರಿಸಿ, ತುಳಿಸಿದಂತಾಯ್ತು
ಕರ್ಣಭೇದಕ ಆರ್ತನಾದವನೊಂದು ಕೇಳಿದಂತಾಯ್ತು.

[ದೂರದಲ್ಲಿ ಸೈರಂಧ್ರಿ ಕಾಣಿಸುತ್ತಾಳೆ.]

ನೋಡಿದಿರ, ನೋಡಿದಿರ, ಅವಳಲ್ಲವೆ ಆರ್ತೆ ?
ಜಡೆಗೆದರಿ, ಮುಡಿಗೆದರಿ, ಪುಡಿಧೂಳಿೊಳದ್ದಿ ।

ಹುಲಿಯ ಭಯದಿಂದೋಡ್ವ ಹರಿಣದಂತೆ
ರಾಹುಭೀತಿಯಿಂ ಧರಿವ ಚಂದ್ರನಂತೆ...
ತಡೆದು ಮಾತಾಡಿಸಲೇ ?

ಕಂಕ : ಮುಸ್ಸಂಜೆ ವೇಳೆಯಲಿ ಪರನಾರಿಯೊಳು ಸಲ್ಲ

[ ಎಂದು ಮಾತನಾಡಲು ಮುಂದುವರಿದ ಬೃಹನ್ನಳೆಯನ್ನು ತಡೆಯುತ್ತಾನೆ. ]

ಸೈರಂಧ್ರಿ : ಆವ ಜನರೈ ನೀವು ? ಯಾಕಿಲ್ಲಿ ನಿಂದಿಹಿರಿ ?
ಮಾನಿನಿಗೆ ಅಪಮಾನ ಕಂಡು, ಸಹಿಸಿ,
ಹಿಂಡನಗಲಿದ ಹಸುವ ಹುಲಿಯೊಂದು ಕಾಡುತಿರೆ
ಗಂಡುತನವಿರೆ ನಿಮಗೆ ಕಾವುದದನು.

ಕಂಕ : ಮಾನಿನಿಯೆ ಪೇಳಿದನು....ಆದುದೇನು ?
ನೀ ಬೆದರುಗಣ್ಣಿಂ ಬಂದ ನಿಜವದೇನು ?

ಸೈರಂಧ್ರಿ : ಅಬಲೆಯನು ಕಂಡೊಡನೆ ತಿಳಿಯದೇನು ?
ನಾ ಬಂದ ತಾವ್. ಅದುವೆ — ಕಾಣಿರೇನು !

ಕಂಕ : ಕೀಕಯನ ಗೃಹವೇನು ! ಅಲ್ಲಿ ಪೋಗಿಹೆಯೇನು !
ರಾಜಬಂಧುವು ಅವನು ; ತಿಳಿಯೆ ಹದನು.

ಬೃಹನ್ನಳೆ : ಗಂಡು ನಾನಲ್ಲದಿರೆ
ಹೆಣ್ಣು ನಾನಲ್ಲದಿರೆ
ಷಂಡನೆನ್ನೊಳು ವ್ಯರ್ಥ ಮೊರೆಯದಿರು ನೀನು ;
ಕಂಕನಿವ ಬಲ್ಲಿದನು ಧರುಮಪಂಡಿತನು

ಕಂಕ : ಬಲ್ಲೆ ನಾನ್, ಎಲ್ಲವನು,
ಧರುಮವೆಂಬುದೆ ಹದನು.
ಅವರವರ ಧರುಮವನು ಕಾಯೆ ನಾವು,
ಪದುಮನಾಭನು ಕಾಯ್ವ ಲೋಕ ಭಾವವನು.

ಸೈರಂಧ್ರಿ : ನೀವಿಲ್ಲಿ ನಿಂತಿರ್ದು ಪೇಳ್ವುದೇನು ?
ನಿಂತು ವ್ಯರ್ಥದಿ ನಾನು ಕೇಳ್ವುದೇನು ?
ಪುಸ್ತಕದ ಪಾಂಡಿತ್ಯ ಬಿತ್ತರಿಸಬೇಕಿಲ್ಲ
ಅತ್ತವಳ ಕಂಬನಿಗೆ ಕುರುಡಾದಿರೆಲ್ಲ.
ಬತ್ತಿಹುದು ನಿಮ್ಮೆದೆಯ ಕರುಣೆ-ಸರಸಿನ ಜಲವು
ಸತ್ತು ಹೋಗಿಹುದೆಲ್ಲ ಧರ್ಮಬುದ್ಧಿ !
ಧಿಕ್ಕಾರ ! ಧಿಕ್ಕಾರ ಧರುಮಪಂಡಿತರೇ.
ಸ್ವೀಕಾರ ಸಾವೆನಗೆ. ಶಾಸ್ತ್ರಖಂಡಿತರೆ !

# ಅಂಕ ೩

## [ ದೃಶ್ಯ ೧ ]

[ ವಿರಾಟನ ಪಾಕಶಾಲೆಯಲ್ಲಿ ಮಲಗಿ ನಿದ್ದೆಹೋಗಿರುವ ವಲಲನನ್ನು ಸೈರಂಧ್ರಿಯು ಆ ರಾತ್ರಿ ಸಮೀಪಿಸಿ ತನ್ನ ದುಃಖ ತೋಡಿಕೊಳ್ಳುತ್ತಾಳೆ. ]

ರಾಗ— ಸೂರ್-ಮಲ್ಹಾರ

ವಲಲ : ಆರೊ, ಆರೋ !

ವಲಲನಿವನ ಸುಖದ ಕನಸ.... ಕರೆದು....ಕುಲುಕಿ ಕೆಡಿಪರಾರೋ !

( ಎಂದು ನಿದ್ದೆ ಕಳೆಯಲು ಯತ್ನಿಸುತ್ತ ಕಿವಿಗೊಡುತ್ತಾನೆ )

ಆರೋ ...

ಸೈರಂಧ್ರಿ : ನಾನೋ

ವಲಲ : ಆರು ನೀನು ? ಆರ್ತಿಯೇನು ? ಧ್ವನಿಯದೇನು ?

ಸೈರಂಧ್ರಿ : ನಾನೊ ... ಪಾಂಚಾಲೆ ನಾನು

ವಲಲ : ( ಚಕಿತನಾಗಿ ) ಬಂದೆಯೇನು ?

ಕರೆವ ಮೊರೆಯಿದೇನು !

ಘಾತವೇನು ? ಬಂದಾಘಾತವೇನು ?

ಸೈರಂಧ್ರಿ : ನಾನೂ ಯನಗೆ ಗತಿ ನೀನು ।

ರಾಣಿ ತನ್ನ ಸೋದರನ ಸೇವೆಗೆಂದು ನೇಮಿಸಿಹಳು.

ಕಾಮಿಯವನ ಕರದಿ ಮಾನ — ಉಳಿವ ಪರಿಯ ಕಾಣೆ ನಾನು.

ವಲಲ : ಹಿರಿಯನವನ ಕೇಳ್ದಿಯೇನು ?

ಸೈರಂಧ್ರಿ : ಧರುಮಕೆನ್ನ ಮಾರಿ, ತಾನು

ಕರುಮಬಾಹ್ಯ ಆಗಿಹನು ।

ವಲಲ : ಕಿರಿಯನನ್ನು ಕಂಡೆಯೇನು ?

ಸೈರಂಧ್ರಿ : ಕಂಡೆ ನಿಜಕು — ಷಂಡ ಅವನು ।

ಮಾನ್ಯ ನೀನು, ಅಭಿಮಾನಧನನು

ಕಾಯ್ದರುಂಟು — ಇಲ್ಲದಿರಲು ...

ವಲಲ : ಇಲ್ಲದಿರಲು ?

ಸೈರಂಧ್ರಿ : ಯಮನ ನಂಟು !

ರಾಗ— ದರ್ಬಾರ ಕಾನಡಾ

ವಲಲ : ಯಾರಿಗೆಂಬೆ, ಯಮನ ನಂಟು ?

ಭೂರಿ ಭಯವದೇನು ಉಂಟು ?

ಕೇಸರಿಯನು, ಭಂಡ ತಾನು
ಕೆಣಕಿ ಸುಖದಿ ಬಾಳ್ವನೇನು ?
ಅಣ್ಣನಿಲ್ಲ, ತಮ್ಮನಿಲ್ಲ, ನಿನ್ನ ಬಿಟ್ಟು ಧರುಮವಿಲ್ಲ
ಸನ್ನುತಾಂಗಿ — ಮರೆಯ ಚಿಂತೆ,
ಆರ ಹಂಗು ಮುಂದೆ ಇಲ್ಲ !

ಸೈರಂಧ್ರಿ : ಮಾತು ಮೆಲ್ಲ ! ಕೂಗು ಸಲ್ಲ
ಮುಂದಿನರುಹು ಪೇಳಿರೆಲ್ಲ
ಖಳನಿಗೊಮ್ಮೆ ಬುದ್ಧಿಗಲಿಸಿ
ಇಳೆಯ ಹೊರೆಯ ಕಳೆವುದೆಲ್ಲ.

ವಲಲ : ಖಳಗೆ ಪೋಗಿ ಪೇಳು, ಮೆಲ್ಲ,
ನಾಟ್ಯ ಕಳಕೆ ಬರುವ ಸೊಲ್ಲ.
ಬಂದೆ ಬರುವ; ಕಾಮಿಯುವನು.
ನಿನ್ನ ಮಾನ ಕಳೆದ ಖಳನು !
ಭೇಟಿಗೊಂಬ ಭೀಮು, ಯಮನು !

ಸೈರಂಧ್ರಿ : ಮುಂದೆ ಕೇಡು ಬಂದೊಡೇನು

ವಲಲ : ಬಂಡುದೆಲ್ಲ ಬರಲಿ, ನೀನು
ಅಂದುದನ್ನು ನಡೆಸು. ಪ್ರೀತೆ — ಚಂದಿರಾನನೆ.

[ ಅವಳನ್ನು ಭೀಮನು ಬೀಳ್ಕೊಡುತ್ತಾನೆ ]

[ ದೃಶ್ಯ ೨ ]

[ ನಗೆಗಾರನ ಮನೆಯಲ್ಲಿ. ನಗೆಗಾರ ನಾಟ್ಯಾಭ್ಯಾಸಿಯಾಗಲು ಯತ್ನಿಸುತ್ತಿದ್ದಾನೆ ]

**ರಾಗ — ಕಲ್ಯಾಣ**

ನಗೆಗಾರ : ವಾರಣವದನಾ, ಮೋದಕಜಪನಾ
ಮೂಗಿಲಿ ಮೇಲಕೆ ಕುಳಿತವನಾ
ಹಾವನು ಹೊಟ್ಟೆಗೆ ಬಿಗಿದವನಾ
ನಮಿಸುವ ನಗೆಗಾರ — ತರನನನಾ । ತೋಂ ತರನನನಾ ॥
ಕೂತರೆ ನಿಂತರೆ, ಕಾಯುವನಾ
ಬೇಡುವೆ ಭಕ್ತಿಲಿ, ಮಣಿಯುವೆ ನಾ
ಕುಣಿತವ ಕಲಿಸೊ ಶಿಷ್ಯನು ನಾ ।
ಕಿಣಿ ಕಿಣಿ ಧಿಂಕಿಣಿ ಜಿಗಿವುದನಾ....
ನಿನಗಾಗಿ ಕಟ್ಟಿದೆ ಪದವಿದನಾ । ತೋಂ ತರನನನಾ.

[ ಆ ಗದ್ದಲಕ್ಕೆ ಸಿಡಿಮಿಡಿಗೊಳ್ಳುವಳು ಮಡದಿ ತಾರಿಣಿ ]

ತಾರಿಣಿ : ಏನಿದು ತೊಡಗಿದೆ, ಹೊಸ ಹದನಾ ?
ಯಾಕಂತೆ ರಾಗವು ... ... ಈ ಕವನಾ !

ನಗೆಗಾರ : ತಾರಿಣಿ ಕೇಳೇ, ಆ ಹದನ.
ಸ್ವರ್ಗದ ಹಂಬಲ ತಾಳಿಹೆ ನಾ
ಮದಗಜಗಾಮಿನಿಯಾಗುತೆ ನಾ
ಗಜಮುಖದವನನು ಬೇಡುವೆ ನಾ !
" ಕುಣಿತವ ಕಲಿಸೊ ಗಜವದನ ... ...
ಧಿಂ ತತ್ತ ಧಿತ್ತೈ ವಜಗದನ ... ... "

ತಾರಿಣಿ : ಹಾಗಿದೆಯೇನಿದು, ಹೊಸ ಹದನ !
ನೀವ್ ಕುಣಿಯಲು ಕಾಂಬಿರಿ ಯಮವಾಹನ !
ಭವ ತಾರಿಣಿಯಾಪೆನು, ಪ್ರತಿಯಾಗಿ ನಾ. ( ಕಿವಿ ಹಿಡಿಯುವಷ್ಟರಲ್ಲಿ )

ನಗೆಗಾರ : ಛೀ, ಛೀ, ಬಿಡು ಬಿಡು ನೋಡವನ
ನಮ್ಮನೆಗೇನೆ ನೇರಾಗಿ ಬರುವವನ ...
ಕುಂತಳ ನಗರಕ್ಕೆ ಮೈದುನನ ... ...

ತಾರಿಣಿ : ' ಕುಂತಳ ನಗರಕ್ಕೆ ... ಮೈದುನ ... ...

ನಗೆಗಾರ : ಆ ಕೀಚಕನ, ಕುಂತಳ ದೊರೆಗೆ ಮೈದುನನ,
ನನ್ನಾಟ್ಯಕ್ಕೆ ಅಡ್ಡ ಬಂದವನ
ಸರಿ – ಸರಿ – ಒಳ ನಡೆ ನೀಯೇನ ... ...
ಎದುರಿಗೆ ಬಂದರೆ ಕೊಂದೇನು, ತರನನನಾ ... ...
ಓಹೋ – ವಂದಿಪೆ ನಾನು ಕೀಚಕನ,
ವರ ಕೇಕಯನ
ಪ್ರಾಸಕ್ಕೆ ಬೇಕು —— ಮತ್ತೇನೊ ।
ಅಲ್ಲಿಗೆ ನಿಲ್ಲಿಸೆ ಈ ಕವನ ... ... ...

ರಾಗ— ಮಾಲಕಂಸ

ಏನಿದು ಮಿತ್ರ, ಕ್ಷಾತ್ರಪವಿತ್ರ
ಆನನ ಬಾಡಿದೆ ! ಕಾತರ ನೇತ್ರ !
ನೆಮ್ಮದಿ ತಾನೆ ? ಬೆದರಿದೆ ಶಾನೆ !
ಅಂತಿರೆ ತಿಳಿಸೆಲೆ ಕಾರಣವನ್ನೆ.
ಗಂಧರ್ವೆಯವಳ ಚಿಂತೆಯದೇನು ?
ಚಂದಿರಾನನೆಯೆ ನೆಪವೇನು ?

ಕೀಚಕ : ಮೂರ್ಖನು ನಾನೆ, ಏನೆನ್ನುವೆನೆ
ತಪಕಿಸಿ ಕಾರ್ಯವ ಕೆಡಿಸಿದೆನೆ ।
ಗಂಧರ್ವೆ ಅವಳನು ಕಾಡಿದೆನೆ ! ದರ್ಪವ ತೋರಿಸಿ ಕೆಣಕಿದೆನೆ !
ಸರಸದ ದಾರಿಯ ಮುರಿದಿಹೆನೆ !

ನಗೆಗಾರ : ಇಷ್ಟೇನೆ, ಓಹೋ ಆದುದು ಬರಿ ಇಷ್ಟೇನೆ ।
ಬಿಡು ಬಿಡು ಚಿಂತೆಯ ; ತಡೆ ತಡೆ ಶೋಕವ,
ಶೃಂಗಾರದಾಟಕೆ ಸೋಲೆಲ್ಲಿ ;
ಸೋಲಿಗು ಗೆಲುವಿಗು ಅಂತರವೆಲ್ಲಿ ?
ಎಸೆಯಲೆ ಚಿಂತೆಯ ಆ ಕೊಳದಲ್ಲಿ

ಕೀಚಕ : ಆಕೆಯ ಗರ್ವವ ಮೆಟ್ಟಿದೆನೇ !

ನಗೆಗಾರ : ಮೆಟ್ಟಿದೆನೇ ?

ಕೀಚಕ : ಹಿರಿಯಪರಾಧವ ಗೈದಿಹೆನೆ
ಗೆಲುವಿನ ಬಗೆಯದು ಇನ್ನೇನೆ । ?

ನಗೆಗಾರ : ಮಣಿವುದೆ ದಾರಿ, ಚೆನ್ನಿನ್ನು.
' ಮನ್ನಿಸು ಮನೋಹರಿ ನೀನ್ ' ಎನ್ನು
' ಪಾದಕೆ ಮಣಿವೆನು ' ಎನ್, ಎನ್ನು ;
ನೀನೇ ದೀಪ, ನಾನೇ ಕೀಟ ;
ನೀನೊಲಿಯದ ಬಾಳು ಸಾವೆ 'ನ್ನು.
ಬಗೆ ಬಗೆ ವಿಸಯದ ಆಟವ ತೋರಿ
ಒಲಿಸಲು ಬರುವುದು; ಒಂದೇ ದಾರಿ.
ಸೋಲೇ ಗೆಲುವು, ಗೆಲುವೇ ಸೋಲು
ಶೃಂಗಾರಲಾಸ್ಯದ ಕೇಳಿಯಲಿ.

ಕೀಚಕ : ಧೈರ್ಯವನಾಂತೆ, ಮರೆತೆನು ಚಿಂತೆ;
ನಿನೀ ಮಾಟವ ಹೂಡುವೆನಂತೆ

ನಗೆಗಾರ : ಹೂಡೆಲೊ ... ಮುಂತೆ !

ಕೀಚಕ : ಪೋಗುವೆನಂತೆ [ಸಮಾಧಾನತಾಳಿ ಸರಿಯುತ್ತಾನೆ.]

ನಗೆಗಾರ : ಪೋಗುತೆ ಮುಂತೆ, ಗಂಧರ್ವೆಯನೊಲಿಸುತ ...

[ತಾರಿಣಿ ಆ ಮಾತನ್ನು ಆಲಿಸಿ]

ತಾರಿಣಿ : 'ಗಂಧರ್ವೆಯನೊಲಿಸುತ?'

ನಗೆಗಾರ : (ವಿಷಯಾಂತರಕ್ಕೆ ಹೋಗುತ್ತ)ಗಂಧ ಕಸ್ತೂರಿಯ ಅರ್ಪಿಪೆ ನಾ ।
ಚಂದದಿ ಕಲಿಸೆನಗೆ ಕುಣಿತವನಾ ।

(ಎಂದು ಹಿಂದಿನ ವಿನಾಯಕ-ಪೂಜೆಯ ನೃತ್ಯಕ್ಕೆ ತೊಡಗುತ್ತಾನೆ)

[ ದೃಶ್ಯ ೩ ]

[ನಿಲಯದಲ್ಲಿ ವಿರಕ್ತನಾಗಿ ಕಾದಿರುವ ಕೀಚಕ]

ರಾಗ — ಜಯಜಯವಂತಿ

ಕೀಚಕ : ಕಾದಿಹೆನೊ ನಾನು —

ಚಂದಿರಾನನೆಗಾಗಿ, ಮಂದಗಾಮಿನಿಗಾಗಿ,
ಇಂದು ಭ್ರಮೆಗೀಡಾಗಿ ನೊಂದು ಬೆಂದು
ಬರುವಳೊ, ಬಾರಳೋ ಮಧುಪಾತ್ರೆ
ತರುವಳೊ ತಾರಳೋ
ಬಂದೊಡೆಯು, ಒಲಿವಳೊ, ಮುನಿವಳೊ ?
ಕಾಣೆ ನಾನೂ —
ಬಂದಂತೆ ಕಾಣುತಿದೆ ... ಯಾರು ಏನು ?

[ಸೈರಂಧ್ರಿ ಬಂದು ಮಣಿಯುತ್ತಾಳೆ]

ಸೈರಂಧ್ರಿ : ಸೈರಂಧ್ರಿ, ಮಾಲಿನಿಯು, ಆಜ್ಞೆಯೇನು ?
ರಾಣಿ ಕಳುಹಿದ ಮಧುವ ತಂದು ನಿಂದಿಹೆನು.

ಕೀಚಕ : ಮಾನಿನಿಯೆ ಬಂದಿಹೆಯ !
ಇಲ್ಲೇಕೆ ನಿಂದಿಹೆಯ ?
ನಿನ್ನಿನಾ ದುಡುಕವನು ಕ್ಷಮಿಸಲಿಹೆಯ
ಸನ್ನುತಾಂಗಿಯೆ ನಿಜಕು, ಮನ್ನಿಸುವೆಯ ?
ಮಾತನಾಡೆಲೊ ದೇವಿ !
ಮೌನದಿಂ ದಂಡಿಪೆಯ ?

ಸೈರಂಧ್ರಿ : ತೊದಲದಿರೆ ನಾಲಗೆಯು, ಏನನೆಂಬೆ ?
ಕೀಚಕ : ನಿನ್ನಿನಾ ಅಪರಾಧ ಮರೆಯು ಎಂಬೆ
ಸೈರಂಧ್ರಿ : ತೊತ್ತಿನೊಳು ಸಲ್ಲದೀ ಭಾವ – ಎಂಬೆ
ಕೀಚಕ : ತೊತ್ತಲ್ಲ, ನೀನೆನ್ನ ಪ್ರಾಣಬಿಂಬೆ !
ಸೈರಂಧ್ರಿ : ದಿಟವೆನಲೆ, ನನಗೆಲ್ಲ ಭಯುವದೆಂಬೆ.
ಕೀಚಕ : ಆರ ಭಯ ನಿನಗೆಂಬೆ ?
ಸೈರಂಧ್ರಿ : ದಾರಿಕಾರರ ಕಣ್ಣು ಸಾರಿ ಹೇಳುವ ತಾವು, ಬೇಡವೆಂಬೆ !
ಕೀಚಕ : ಯಾರಿಗೂ ಕಾಣದಿಹ ....
ಸೈರಂಧ್ರಿ : ತಾವುಂಟು. ಕೇಳಿರೇ ....
ತಾಳುವುದು, ತಾಳಿದೊಡೆ ಬಾಳು ಚೆಲುವು

ಕೀಚಕ : ಪೇಳು; ಮುದವು !
ನಿನಗಾಗಿ ಮನವನ್ನೆ ಯೆನ್ನ ಜೀವನ ತೆರವ್ರ !
ಸೈರಂಧ್ರಿ : ಅದು ಬರಿಯ ಪ್ರೇಮ ಭರವು !
ಕೀಚಕ : ನನ್ನೆದೆಯ ಮಿಡಿತವನರಿಯೆ !
ಸೈರಂಧ್ರಿ : ಅರಿವ ಆತುರವುಂಟು; ಪ್ರೇಮದಾಳವ ನಿಜಕು ಅಳೆಯಲುಂಟು.

[ಮೆಲ್ಲಗಿನ ಧ್ವನಿಯಲ್ಲಿ]

ಮಧ್ಯರಾತ್ರಿಯ ಸನಿಯ, ನಾಟ್ಯಶಾಲೆಯೊಳ್ ನಿಂತು
ಕಾದಿರಲೆ ಚಕೋರ, ಚಂದ್ರಗಾಗಿ ?
ಪೋಗಲೇನು ? ಆಗಲೆನ್ನು.
ಕೀಚಕ : ಮಾನವಂತೆ
ನೀ ಧೀಮಂತೆ
ಸೈರಂಧ್ರಿ : ಪೋಗಲೇನು ?
ಆಗಲೆನ್ನು.
ಕೀಚಕ : ಗಂಧರ್ವ ಕನ್ಯೆ
ಹೃದಯ ಮಾನ್ಯೆ
ಸೈರಂಧ್ರಿ : ಪೋಗಲೇನು ?
ಆಗಲೆನ್ನು.
ಸೈರಂಧ್ರಿ : ಕೇಕಯೇಶ, ನಿಜಕು ನಿನ್ನ ಮೋಹಪಾಶ !

[ವಯ್ಯಾರದ ನಾಟಕ ಹೂಡಿ ಸರಿಯುತ್ತಾಳೆ]

ಕೀಚಕ : ಸೋಲು ಚೆನ್ನು; ಗೆಲುವಿಗದುವೆ ದಾರಿಯೆನ್ನು !
ಚಂದಿರನ ಕಾದಿರುವ ಚಕೋರ ತಾನು ! ....

[ಎಂಬ ಅವಳ ಕೊನೆಯ ನುಡಿಯನ್ನು ಮೆಲುಕಾಡುತ್ತ ಸರಿಯುತ್ತಾನೆ]

[ ದೃಶ್ಯ ೪ ]

[ಭೀಮಸೇನ ಹೆಣ್ಣುಡುಗೆಯಲ್ಲಿ ನಾಟ್ಯಶಾಲೆಯಲ್ಲಿ ಕಾಲಿರಿಸುತ್ತಾನೆ. ಕತ್ತಲು ಆವರಿಸಿದೆ]

ರಾಗ — ಖಮಾಚ್

ಭೀಮ : ಆವ ಧರುಮವೊ, ನಾಣ ಕಾಣೆ
ದೇವನಾಣೆ
ಮಾನ ಅಪಮಾನಗಳ, ಹೀನಗೈಯ್ಯುತ ಬಾಳಿ,
ಮಾನಿನಿಯ ಶೀಲವನು ಪಣಗೈದು, ತಾಳಿ

ಬಾಳಿ ಬದುಕಲು ಏಕೆ। ರಾಜ್ಯವಾಳುವುದೇಕೆ ?
ಪೌರುಷವ ಮರೆತಿರ್ಪ ಬಾಳ್ವೆ ಏಕೆ ?
ಆವ ಧರುಮವೊ ನಾ ಕಾಣೆ ....
ಎನ್ನರಸಿ ನೀ ಎಲ್ಲಿ ?
ಚೆನ್ನರಸಿ ಬಾ ಇಲ್ಲಿ
ಚೆನ್ನಾಯ್ತು ನಾ ತೊಟ್ಟ ಸೋಗು, ಮಲ್ಲಿ !

(ಕೀಚಕನು ಬರುತ್ತಿರುವ ಹೊಲಬನ್ನು ತಿಳಿದು ಬಂದು)

ಸೈರಂಧ್ರಿ : ಬಂದಂತೆ ಕಾಣುತಿದೆ, ಬೆಳದಿಂಗಳಲಿ ಛಾಯೆ
ಬಂದು ಸುಳಿದುದ ಕಂಡೆ, ಅವನೆ ಇಹನೊ !
ಬಂದುದೇ ಇಂಥ ಪರಿ ಎಂಬ ಭಯವೆನಗಕ್ಕು
ಮುಂದೆ ಕಾಯುವ ಬಗೆಯು ಹರಿಗೆ ನಿಲುಕು !

ವಲಲ : ಅಂದುಗೆಯ ಧ್ವನಿಸುತ್ತ ನೀ ಮರೆಗೆ ಸೇರು
ಹರಿಯ ಮರೆಯ ಕೋರು.
ಇಂದು ನಾಟ್ಯದ ಶಾಲೆ, ಮಾರಿಗೌತಣ–ಬಾಲೆ
ಚಂದ ನೋಡುತೆ ಹಿಗ್ಗು । ಖಳನ ಲೀಲೆ

[ಹೆಣ್ಣಿನ ವೇಷದಲ್ಲಿ ಭೀಮನು ಕತ್ತಲಲ್ಲಿ ಕಾಲಂದುಗೆಯಲ್ಲಿ ಸದ್ದುಮಾಡುತ್ತಾನೆ. ಆ ಧ್ವನಿಯ ಮೇಲಿಂದ ಕೀಚಕ ಆಲಿಸುತ್ತ. ಆಚೀಚೆ ನೋಡುತ್ತ ಚಲಿಸುತ್ತಾನೆ.]

ಕೀಚಕ : ಎಲ್ಲಿರುವೆ ಮನ್ಮನ, ಮಾನಸೀ ?
ಕತ್ತಲಲಿ ಕಾಣದಲ, ಪ್ರೇಯಸೀ ಪ್ರೇಯಸೀ.
ಸೈರಂಧ್ರಿ : ಇಲ್ಲಿಯೆ ನಿಂದಿಹೆ, ಸಾಹಸೀ ....
ಸಲ್ಲದ .... ಭಯವದು — ಸಾಹಸೀ ....
ಕೀಚಕ : ತಲ್ಲಣವೇತಕೆ ಪ್ರೇಯಸಿ ?
ಝುಲ್ಲನೆ ನೂಪುರ ಸದ್ದಿಸೀ ಸದ್ದಿಸೀ ....
ಇರುವೆಡೆ ಸೂಚಿಸು, ರೂಪಸೀ, ರೂಪಸೀ
ಸೈರಂಧ್ರಿ : ಇಲ್ಲಿಯೆ ನಿಂತಿಹೆ, ಸಾಹಸಿ
ಮೆಲ್ಲನೆ ಬರುವುದು ಸಾಹಸೀ
ಕೀಚಕ : ಲೋಕವು ಸ್ತಬ್ಧವು, ನಿದ್ದಿಸೀ.
ಸೈರಂಧ್ರಿ : ಸ್ವಾಗತ ಕಾದಿದೆ; ಸದ್ದಿಸಿ

[ಸದ್ದುಮಾಡುತ್ತ]

ಕೀಚಕ : ಪ್ರೇಯಸೀ, ಪ್ರೇಯಸೀ
ಮೋದದಿ ಬೆರೆಯುವ ಮಾನಸೀ

ಸಾಕದಿ ನಲಿಯುವ ಶೋಭಿಸಿ
ಅಪ್ಪುಗೆ, ಒಪ್ಪುಗೆ, ಕಾಮಿಸೀ ....

ವಲಲ : (ವಲಲನನ್ನು ಸಮೀಪಿಸುತ್ತಿರುವಾಗ) ತೃಪ್ತಿಯನೀವೆನು ಸಾಹಸೀ

[ಎಂದು ಅವನನ್ನು ತಬ್ಬಿ ಕತ್ತು ಹಿಸುಕುತ್ತಾನೆ]

ಕೀಚಕ : ಮೋಸದ ಉರುಳಿಗೆ, ರಾಕ್ಷಸೀ ....

ವಲಲ : ಸಾಹಸೀ, ನೀ ಸಾಹಸೀ
ರಕುತವ ಬಸಿವೆನು ....

[ಕೀಚಕನು ಮೃತಿಗೊಂಡು ಉರುಳಿ ಬೀಳುತ್ತಾನೆ]

ಸೈರಂಧ್ರಿ : (ಓಡಿ ಬಂದು) ಸಾಕಿದು ಕೃತ್ಯವ, ನಿಲ್ಲಿಸಿ !
ತ್ವರಿತದಿ ... ಪೋಗಿರಿ ... ಧಾವಿಸಿ ...

[ವಲಲನು ಆ ಕ್ಷಣದಲ್ಲಿ ಅಲ್ಲಿಂದ ಕಣ್ಮರೆಯಾಗುತ್ತಾನೆ]

ಯದುಕುಲ ಪತಿಯೆ ನೀಂ ... ಕರುಣಿಸೀ ...
ಕಾಯ್ವುದು, ಪಥವನು .... ತೋರಿಸೀ

ರಾಗ — ಸಿಂಹೇಂದ ಮಧ್ಯಮ

ನೋಡಾ ನೋಡಾ ... ನೋಡಾ
ಹೆಣ್ಣು ಜನುಮ ಬೇಡಾ
ಗಂಧರ್ವ ಬಂದು ನೋಡಾ –
ಮಾಡ್ದ ಮಾಟ ನೋಡಾ
ಬೇಡಾ ಬೇಡಾ
ಕಾಣಲಾರೆ ನೋಡಾ

[ಕೀಚಕನ ಚೀತ್ಕಾರವನ್ನಾಲಿಸಿದ ಸುದೇಷ್ಣೆ, ದೀಪಗಳನ್ನು ಹಿಡಿಸಿಕೊಂಡು ಆ ಸ್ಥಳಕ್ಕೆ ಧಾವಿಸಿ ಬರುತ್ತಾಳೆ]

ಸುದೇಷ್ಣೆ : ಆವ ಸದ್ದು – ನೋಡಾ ...
ಅನುಜನೆಲ್ಲಿ ಓಡಾ ...

[ಶವವನ್ನು ಕಂಡು]

ಆರು ಬಿದ್ದುದಿಲ್ಲಿ ?
ಆರ ಕಾಂಬೆನಿಲ್ಲಿ ! ಮೃತ್ಯುಘಾತದಲ್ಲಿ !

ಆಮದೇನು ಅರಿಯೆ,
ತಮ್ಮಗಿಂಥ ಪರಿಯೆ !

[ಅಲ್ಲಿಯೇ ನಿಂತಿರುವ ಸೈರಂಧ್ರಿಯನ್ನು ನೋಡಿ ವಿಸ್ಮಿತಳೂ ಕುಪಿತಳೂ ಆಗಿ]

ಯಾರು ನೀನು ದಿಟ್ಟಿ ?
ಏನು ಪಣವ ತೊಟ್ಟಿ ...

ಸೈರಂಧ್ರಿ : ಬೇಡಾ ... ಬೇಡಾ ... ಬೇಡಾಽ ...
- ಹೆಣ್ಣು ಜನುಮ ಬೇಡಾ
ಗಂಧರ್ವನಾಟಿ ನೋಡಾಽ !
ಸುಂದರುವ ಕಂಡು, ನೇಡಾ
ಸಲ್ಲಿಸಿದನು, ಗಾಢಾ !
ಬೇಡವೆಂದೆ ರಾಣೀ,
ನಿಮ್ಮನುಜ ಭಂಡಪ್ರಾಣಿ;
ಗಂಧರ್ವ ಪತಿಯು ತ್ರಾಣಿ ....
ಕೊಂದು ನಡೆದ, ರಾಣೀ !
ಬೇಡಾ, ಬೇಡಾ, .... ಬೇಡಾಽ

ಸುದೇಷ್ಣೆ · ವಿಧಿಯ ಲಿಖಿತ ನೋಡಾ!

(ಪರಿಸ್ಥಿತಿಯನ್ನು ಮೆಲ್ಲಗೆ ಅರಿತವಳಾಗಿ)

ಸೈರಂಧ್ರಿ ಕ್ಷಮೆಯ ನೀಡಾ !

[ಎಂದು ಮೊರೆಯಿಡುವಾಗ ಆಕೆ ಸಮಾಧಾನ ಹೇಳುತ್ತಾಳೆ]

ಸೈರಂಧ್ರಿ : ಬೇಡಾಽ .... ಬೇಡಾಽ .... ಬೇಡಾಽ ....

[ಆಚೀಚೆ ನಿಂತ ದೀವಟಿಗೆಕಾರರು ತಬ್ಬಿಬ್ಬಾಗುತ್ತಾರೆ]

## ಗೀತ-ನಾಟಕಗಳು

# ರಾವುತ-ರಂಗಪ್ಪ

( ದಿವಂಗತ ಮುಳಿಯ ತಿಮ್ಮಪ್ಪಯ್ಯನವರು ಪ್ರಾರಂಭಿಸಿ ಮುಗಿಸದ ಒಂದು ಕೃತಿ )

[ನಸುಬೆಳಕು ಹರಿಯುತ್ತಿತ್ತು. ಯಾರಿಗೂ ಎಚ್ಚರವಾಗಿರಲಿಲ್ಲ. ಹಗಲ್ವಾಡಿಯ ಹಂಗನ ಕೇರಿಯಲ್ಲಿ ನರಸಣ್ಣರಿಬ್ಬರು ಹರಿಯುತ್ತಿದ್ದರು. ಮೊದಲಿನವನು ತನ್ನ ಕಿರುತಕ್ಕೆಯ ತಾಳಕ್ಕನುವಾಗಿ ಹಾಡುತ್ತಿದ್ದನು. ಮತ್ತಿನವನು ಅದಕ್ಕೆ ಪಲ್ಲವಿಗೂಡಿಸುತ್ತಿದ್ದನು.]

ಮೂಡಲಲಿ ಮೂಡುತಿದೆ ತಳತಳಿಸುತೆಳೆಬೆಳಕು ।
ಹೌದಣ್ಣ ಹೌದೂ ಹೌದಣ್ಣ ಹೌದೂ ॥
ಕತ್ತಲೆಯ ಕಂಬಳಿಯನೋಸರಿಸಿ ಮಿನುಗುವುದು ।
ಹೌದಣ್ಣ ... ಹೌದೂ ॥
ಬಾಂದಳದ ಹೊಸ್ತಿಲಾ ರಂಗವಲ್ಲಿಯ ನೋಡು ।
ಹೌದಣ್ಣ ... ಹೌದೂ ॥
ನೆರೆಹೊರೆಯರಿದ್ದಿಹರು ಕಣ್ಗೆ ಕೈಗೊಟ್ಟಿಹರು ।
ಹೌದಣ್ಣ ... ಹೌದೂ ॥
ನಾಡುಗಳೊಳೆಲ್ಲ ಕನ್ನಡನಾಡೆ ಮೇಲಂತೆ ।
ಹೌದಣ್ಣ ... ಹೌದೂ ॥
ಕನ್ನಡದೊಳೆಲ್ಲಾ ಹಗಲ್ವಾಡಿ ಮೇಲಂತೆ ।
ಹೌದಣ್ಣ ... ಹೌದೂ ॥
ಹಗಲ್ವಾಡಿಯೊಳಗೆ ಹಂಗನಕೇರಿ ಮೇಲಂತೆ ।
ಹೌದಣ್ಣ ... ಹೌದೂ ॥
ಅದರೊಳಗೆ ಗುಡಿಗೊಂಡ ಹಾಲುಮನೆ ಮೇಲಂತೆ ।
ಹೌದಣ್ಣ ... ಹೌದೂ ॥
ಹಾಳುಮನೆ ಮಾರ್ಪಟ್ಟು ಹಾಲುಮನೆಯಾಯ್ತಂತೆ ।
ಹೌದಣ್ಣ ... ಹೌದೂ ॥
ರಂಗಪ್ಪ ರಾವುತನ ಕೈ ಮದನ ಕೈಯಂತೆ ।
ಹೌದಣ್ಣ ... ಹೌದೂ ॥
ಹಾಲ್ಗಡಲ ಕೆರೆಯಾತನೆದೆಯ ಹಾಡುಹುದಂತೆ ।
ಹೌದಣ್ಣ ... ಹೌದೂ ॥
ಹಾಡಿದರೆ ನಾಡೆಲ್ಲವೂ ತೇಲಬಹುದಂತೆ ।
ಹೌದಣ್ಣ ... ಹೌದೂ ॥
ತೇಲಾಡೆ ನೆಲದಾಸೆಯಿಲ್ಲವೆಂದಂಜುತ್ತ ।
ಹೌದಣ್ಣ ... ಹೌದೂ ॥
ನಿದ್ದೆಬಳ್ಳಿಯೊಳವನ ಮಾಯೆ ಕಟ್ಟಿಹಳಂತೆ ।

ಹೌದಣ್ಣ ... ಹೌದೂ ॥
ಅರಸು ಕೆಟ್ಟರೆ ಆಟ ಕೆಟ್ಟದೆಂಬವೊಲಂತೆ ।
ಹೌದಣ್ಣ ... ಹೌದೂ ॥
ರಂಗಪ್ಪನೊರಗಿ ಕನ್ನಡವೊರಗುವಂತಾಯ್ತು ।
ಹೌದಣ್ಣ ... ಹೌದೂ ॥
ನಿದ್ದೆಗಣ್ಣನು ಕಿತ್ತು ಕುರುಡಾದನಂತೊಮ್ಮೆ ।
ಹೌದಣ್ಣ ... ಹೌದೂ ॥
ಕಣ್ಣಾಂತು ಕುರುಡನೋಡಿಸು ಕಾಲವೀಗಂತೆ ।
ಹೌದಣ್ಣ ... ಹೌದೂ ॥
ಹೌದಣ್ಣ ಹೌದಂತೆ ಅಲ್ಲಣ್ಣ ನಿಲ್ಲಂತೆ ।
ಹೌದಣ್ಣ ಹೌದೂ ಹೌದಣ್ಣ ಹೌದೂ ॥

[ ಹೀಗೆ ಹಾಡುವ ಪಲ್ಲವಿಗೂಡಿಸುವ ನರಸಣ್ಣರಿಬ್ಬರೂ ಹಾಲುಮನೆಯ ಅಂಗಳದೊಳಗಾದರು. ತುಸು ಹೊತ್ತಿನೊಳಗೆ ಮನೆಯ ಬಾಗಿಲು ಭರ್ರನೆ ತೆರೆಯಿತು. ಉದ್ದವಾದ ಮೆಯ್ಯ, ಹಸಿ ನೀಳವಾದ ಮೋರೆಯ; ಎಣ್ಣೆಗಪ್ಪಿನ ಬಣ್ಣದ ಆಳೊಬ್ಬನು ಕೆಂಗಣ್ಣನ್ನು ಒರಸೊರಸುತ್ತಾ ಹೊರಗೆ ಬಂದನು. ಕಣ್ಣುಗಳು ಕೆಂಡಗಳಂತಿದ್ದವು. ಬಳಕೆಯೇ ಹಾಗೆಯೋ, ನಿದ್ದೆಗೆಟ್ಟು ಹಾಗಾದುವೋ ಎಂಬುದನ್ನು ಪರಾಂಬರಿಸಿಕೊಳ್ಳುವಷ್ಟು ಮಸುಕು ಮಾಸಿರಲಿಲ್ಲ. ಆದರೂ ಕಣ್ಣೊರಸುವ ಅಂದವನ್ನು ನೋಡಿದರೆ ಅದು ನಿದ್ದೆಗೇಡಿತನಕೆಂದೆಂದೇ ಎಣಿಸಿಕೊಳ್ಳುವಂತಿತ್ತು. ಅದಿರಲಿ, ಹೊರಟವನ ಬಾಯಿಂದ ಮಾತುಗಳು ಉರುಳತೊಡಗಿದುವು. ಮೊದಲು ಅವುಗಳನ್ನು ಹೆಕ್ಕಿಕೊಳ್ಳುವ. ]

"ಎಲ್ಲಿಯವರೋ ನೀವು ?"

"ಇದೇ ಊರವರು ಬುದ್ಧಿ"

"ಎಂದರೆ ಈ ಹಗಲ್ವಾಡಿ ...."

"ಹೌದು ಬುದ್ಧಿ, ಇನ್ನು ಹಾಗೇ ಹೇಳಬೇಕು."

"ಇನ್ನು ಹಾಗೇ ಹೇಳಬೇಕು ಎಂದರೇನು ?"

"ಹೌದು; ನೀಳವಾದ ಇರುಳು ಅರಳಿ ಬೆಳಗಾಗುವ ವರೆಗೆ ಆ 'ಇರುಳ್ವಾಡಿ'ಯಲ್ಲೆ ಇದ್ದೆವು. ಆದರೆ ಈ ಹೊತ್ತಿನ ಬೆಳಕು ಕರೆದೊಡನೆ ಬಾಯ್ದೆರೆಯುತ್ತಾ ಬಂದು ಈ ಹಗಲ್ವಾಡಿಯವರಾದೆವು."

"ಈ ನನ್ನ ಹಗಲ್ವಾಡಿಯವರಾಗಿಬಿಟ್ಟಿರೋ ? ಅದೇಕೆ ? "

[ಅದನ್ನು ಕೇಳಿದೊಡನೆ ನರಸಣ್ಣನ ಕಣ್ಣುಗಳರಳಿದುವು. ಹೊಸತೊಂದು ಹೊಳಪೇರಿದುವು. ಕಣ್ಣುಲುಗಿಸದೆ ಮರು ಮೋರೆಯನ್ನೇ ನೋಡುತ್ತಿದ್ದನು.]

"ಯಾಕೋ ಬೆಪ್ಪಾದೆ ? ಮೊದಲು ಅದೇಕೆಂದು ಹೇಳು."

"ಏಕೋ ಬುದ್ಧಿ. ನಿನ್ನೆ ನಡುವಿರುಳು ಬುದ್ಧಿ; ಇರುಳಿನ ನಡುವೆ ಒಂದು ಕನಸು. ಆ ಕನಸು ಈ ಮನಸಿಗೆದುರಾಯಿತು ಬುದ್ಧಿ. ಆಗ ಕನಸು ಬೂತ ವಾಯಿತು, ಮನಸು ನಾನೇ ಆದೆ."

"ಮತ್ತೆ ?"

"ಮತ್ತೆ ಬೂತ ಮಾತೆತ್ತಿತು."

"ಏನೆಂದು ?"

"ಕನ್ನಡದ ರಂಗದಲಿ ಹೋರಿ ಹೆಸರಾಂತಿರುವ,
ರಂಗಪ್ಪನಡಿಯೊಂದಿ ಬಾಳು ಜಟ್ಟಿಗನಾಗು,"

"ಹಾಗೆಂದರೇನು ?"

"ಅವೆಲ್ಲ ಹಾಡು ಬುದ್ಧಿ. ಬೂತದ ಮಾತೆಲ್ಲ ಹಾಡಾಗಿ ಹರಿಯಬೇಕಂತೆ"

"ಇರಲಿ; 'ಹೋರಿ ಹೆಸರಾಂತ .... ರಂಗಪ್ಪನ' ಎಂದರೇನು ?"

"ರಂಗಪ್ಪರಾವುತರೆಂದರೆ ಹಲವು ಕನ್ನಡ ಮಲ್ಲರೊಡನೆ ಹೋರಾಡಿ ಹೆಸರು ಗೊಂಡವರಂತೆ ಬುದ್ಧಿ."

"(ನಗುತ್ತಾ) ಸರಿ, ಹೋರಿ ಹೆಸರು ಅಂದರೆ ಹಾಗೆ, ಸರಿ ಸರಿ. ಆದರೆ, ಈ ಸುದ್ದಿ ಆ ಬೂತಕ್ಕೂ ಗೊತ್ತಾಯಿತಲ್ಲವೆ?"

"ಏನು ಬುದ್ಧಿ, ಬೂತಕ್ಕೆ ಮಾಯಕ್ಕೆ ಗೊತ್ತಾಗದ ಸುದ್ದಿಯಂತಿರಲಿ, ನಪ್ಪಾದದ್ದೂ ಸುಳಿದೀತೇ ?"

"ಹಾ, ಸರಿಯದು. ಮತ್ತೇನೆಂದು ಹೇಳಿತು ?"

"ಅರಸು ರಾವುತನಡಿಯ ಕಂಡು ಡಕ್ಕೆಯ ಬಿಸುಡು,
ಅರಸವನ ಕಾಲಡಿಯೊಳೊಂದಾಗು ಹಿಂದಾಗು,
ತಲೆ ಬತ್ತಳಿಕೆಯಹುದು ಕೈಯೆ ಬಿಲ್ಲಾಗುವುದು
ಲೆಕ್ಕಣಿಕೆ ಕೋಲಹದು, ಕಾಗದವು ಹಗೆಗಳೆದೆ,
ಬರಹವೇ ಬರೆಕೋಲ-ಗಾಯಗಳಾಗುವುವು.
ರಾವುನಾಳಿಕೆಯ ಹೊಚ್ಚ ಹೊಸಗನ್ನಡದ,
ಗುಡಿಯೊಂದೆ ಮೇಲೇರಿ ಬಾಂದಳದ ಗಾಳಿಯ-
ಲ್ಲೇರಾಡುತಿಳಿದಾಡುತೊಲೆದಾಡುದಲೆದಾಡು"

"ಹಾಗೆಂದರೇನು ? ನಮ್ಮ ಹೊಚ್ಚ ಹೊಸಗನ್ನಡ ಗುಡಿಯೊಂದೆ ತರತರದ ಆಡುಗಳಾಗಿಬಿಡುವುದೇ ?"

"ಹಾಗಲ್ಲ; ಅದು ಬೂತದ ಮಾತಿನ ಹಾಡಲ್ಲವೆ ಬುದ್ಧಿ ? ಗುಡಿಯೊಂದೆ ಗಾಳಿ ಯಲ್ಲಿ ಏರಿ ಆಡುತ, ಇಳಿದು ಆಡುತ, ಒಲೆದು, ಅಲೆದು ಆಡುತ, ಹೋಗುವುದು. ನನ್ನ ಬಾಯಲ್ಲಿ 'ಆಡು'ವಲ್ಲಿಯೆ ನೀವು ತಡೆದು ಅದು ಹಾಗಾಯಿತು ಬುದ್ಧಿ."

"(ತಲೆದೂಗುತ್ತ) ಆಗಲಿ ; ಆಮೇಲೆ ?"

"ಆಮೇಲೆ — "ತಡೆಯದಿರು ತಡೆಯದಿರು ನೆರೆನಂಬಿದಡಿಯಾಳಿ
ಗುರಿವಿಡಿದು ಹೋಗು ಮೈಮರೆದು ನೆಲದಾತರಲ್ಲಿ
ಅರಿಮುರುಳನಾಗಿರುವ ಚಲದಂಕ ಮಲ್ಲನನು
ಕನ್ನಡಕೆ ಕನ್ನಡಿಯ ನಡವಳಿಗೆ ಮುನ್ನುಡಿಯು
ರಂಗಪ್ಪ ರಾವುತನ ಕಾಲಡಿಯೊಳೊಂದಾಗು" ಎಂದು ಹಾಡಿತು.

"ಸರಿ, ಅದಿರಲಿ, ಈ ಹೊತ್ತಿನ ಬೆಳಗೆಂದರೆ ಕನ್ನಡದ ಬೆಳಕು. ಅದು ಕಣ್ಣನ್ನಲ್ಲ ಕಿವಿಯನ್ನಲ್ಲ, ನನ್ನೆದೆಯನ್ನೆ ಬೆಳಗಿತು. ಈ ನಿನ್ನ ಹಾಡೆಂದರೆ ಹಾಡು. ಒಂದಂದ ಒಂದು ಚೆಂದ, ಒಂದು ಸೊಗಸು ಒಂದು ನೊಗಸು, ಒಂದು ಸವಿ ಒಂದು ನಾರ, ಒಂದು ಹಾವ ಒಂದು ಬಾವ, ಎಲ್ಲವೂ ಒಂದಾಗಿ ಹೊನಲುಗೂಡಿದ ಹಾಡಿದು ನಿನ್ನ ನಾಲಗೆಯಲ್ಲಿ ಸುರಿದಿದೆ. ಹಾ! ನಲ್ಲಿಯ ನೀರಿನಂತೆ ಹಾಡು, ಕಲ್ಲಿಯ ಕೋಳಿನಂತೆ ಹುರುಳು, ಮಲ್ಲಿಗೆ ಗಂಟಿನಂತೆ ಬಾವ!! ಇದಲ್ಲವೆ ಹೊಚ್ಚಹೊಸ ಹೊಸಗನ್ನಡದ, ಮುಂಬರಿವ ಕನ್ನಡದ, ಹಿಂದಿರುಗದ ಕನ್ನಡದ ತಿರುಳೆಂದರೆ? ಹುಡುಕುವ ಮದ್ದು ಬೇರಾಯಿತು; ಬೇರಾಗಿ ಕಾಲಿಗೆ ತೊಡಗಿತು."

"ಇದು ಹಾಡಲ್ಲ ಬುದ್ಧಿ; ಆ ಕಣ್ಮಣಿಯಾದ ಬೂತದ ಬಾಯಿಂದಲೆ ಹರಿದ ಹಾಡು ಬುದ್ಧಿ."

"ಹಾಗೋ? ಈವರೆಗೆ ಹಾಡುತ್ತಾ ಬಂದುದೆಲ್ಲವೂ?"

"ಹೌದು ಬುದ್ಧಿ"

"ಮೊದಲು ಹಾಡಿದೆಯಲ್ಲ, —"ರಂಗಪ್ಪ ರಾವುತನ ಕೈ ಮಥನ ಕೈಯಂತೆ" ಎಂದು. ಅದೂ ಬೂತದ ಬಾಯಿಂಧಲೆ ಬಂದುದೋ?"

"ಹೌದು ಬುದ್ಧಿ, ಆ ಸಿರಿಬಾಯಿಂದಲೆ ಬಂದುದು."

"ಹಾ, ಮಾಯದ ಕಣ್ಣಿಗೆಲ್ಲವೂ ಅಂಗೈನೆಲ್ಲಿ!! ಅಲ್ಲವಾದರೆ, ಈ ನನ್ನ ಗುಟ್ಟೆಲ್ಲವೂ ನನಗಿಂತಲೂ ಹೆಚ್ಚಾಗಿ ಆ ಬೂತಕ್ಕೆ ಗೊತ್ತಾಗುವುದು ಹೇಗೆ? ಭೂತವೆಂದರದು ಅಣಿಗಟ್ಟಿ ಬಾರಣೆ ಮುಕ್ಕುವ ಈ ಹೊರಗಿನ ಬೂತವಲ್ಲ; ಕಣ್ಮೀರಿದೊಳಗಿನ ಬೂತ. ಅದನ್ನು ಕಂಡ, ಮಾತಾಡಿದ ನಿನ್ನ ಹುಟ್ಟೇಗೆ ಹುಟ್ಟು. ಉಳಿದವರದು ಹೊಟ್ಟು."

[ಅದನ್ನು ಕೇಳಿದ ನರಸಣ್ಣನು ನೆಡುಗಣ್ಣಾಗಿ ನೋಡುತ್ತ ನಿಂತುಬಿಟ್ಟನು. ಮೋರೆಯ ಸನ್ನೆಗಳಿಂದಾಗಿ ಬೆರಗಾದವನಂತೆ ತೋರುತ್ತಿದ್ದನು. ಅವನೆಣಿಕೆಯ ಗೊಣಸೊಂದು ಮೂರಾಳಿನ ಮೋರೆಯಲ್ಲೆಲ್ಲೋ ಸಿಲುಕಿದಂತಿತ್ತು. ಛಕ್ಕನೆ ಆ ಗೊಣಸು ಕಳಚಿ ಹೋದಂತಾಯಿತು. ಆ ಮೇಲೆ ಅವನು ತನ್ನೊಡನಾಡಿಯ ಮೋರೆಯಲ್ಲಿ ಕಣ್ಣಿಟ್ಟನು.]

"ಇದೇನೋ, ನೀವಿಬ್ಬರೂ ಬೆಪ್ಪಾಗಿಬಿಟ್ಟಿರಲ್ಲಾ!"

"ಹೌದು ಬುದ್ಧಿ; ಹಾಗಾದೆವು. ಏನೋ ಹೇಳುತ್ತಾರಲ್ಲಾ, ಕಾಶಿಗೆ ಹೊರಟವನಿಗೆ ಬಾಗೀರತಿ ಎದುರಾಯಿತೆಂದು. ಹಾಗಾದ ಮೇಲೆ ಬೆಪ್ಪಾಗದೆ ಹೇಗಿರುವುದು ಬುದ್ಧಿ? ರಂಗಪ್ಪ ರಾವುತರೆಂದರೆ ನೀವೇ ಎಂದು, ಇದು ನಿಮ್ಮದೇ ಮನೆಯೆಂದು

ನವುಗೆ ಗೊತ್ತಿರಲಿಲ್ಲ ಬುದ್ಧಿ. ಆದರೂ ಬಂದಲ್ಲಿ ಬೀದಿ ಹೊಕ್ಕಲ್ಲಿ ಹೊನ್ನಾಯಿತು ಬುದ್ಧಿ."

[ಎಂದು ಇಬ್ಬರೂ ನೆಲಮುಟ್ಟಿ ಅಡ್ಡಬಿದ್ದರು. ರಂಗಪ್ಪನು ಅವರನ್ನು ಹಿಡಿದೆತ್ತಿದನು.]

ರಂಗ : "ನಿನ್ನ ಹೆಸರೇನು ?"

"ಕಂಪಣ್ಣನೆಂದು."

ರಂಗ ; "ಅವನವು ?

"ಜಂಪಣ್ಣ

ರಂಗ : ಹಾಗಾದರಿನ್ನು ಈ ಬಿಕ್ಕೆ ಬೇಡುವುದನ್ನುಳಿದು ನಮ್ಮ ಹೊಚ್ಚಹೊಸಗನ್ನಡದ ಗುಡಿಯನ್ನೇರಿಸುವ ರಾಯಗೆಲಸಕ್ಕೆ ಕೈನೀಡುತ್ತೀರೊ ?

ಕಂಪ : ಹೌಂದು ಬುದ್ಧಿ !

ರಂಗ : ನೋಡಿರಿ. ಮುಂದಿನವರೆಗೆ ಕಣ್ಣಿಟ್ಟುಕೊಳ್ಳಿರಿ. ಈ ರಂಗಪ್ಪನ ದಾಳಿ ಹೊರಟಿತೆಂದರೆ ಕನ್ನಡದೊಳಗಿನ ತಂಟೆಗಾರರೆಲ್ಲ· ದಾಳಾದೂಳಿಯಾಗುವುರು.

ಜಂಪ : ಆಗಲಿ ಬುದ್ಧಿ. ಆಕಾಶ ಬೀಳುವಾಗ ಅಂಗೈಯೊಡ್ಡಲಾಗುವುದೆ ?

ರಂಗ : ನಿಮ್ಮ ಹುಟ್ಟೂರೆಂಬುದು ನೆರೆಯ ಇರುಳ್ವಾಡಿ. ಅಲ್ಲಿಗೇ ನಮ್ಮ ಮೊತ್ತ ಮೊದಲಿನ ದಾಳಿ. ನಿಮ್ಮ ಮನೆ ಇರುವುದಲ್ಲಿ, ಮಂದಿ ಇರುವುದಲ್ಲಿ; ಎಲ್ಲವೂ ಅಲ್ಲಿ. ಅದರಿಂದ ನೋಡಿರಿ. ನಮ್ಮ ಕನ್ನಡದ ಕೋಲೆಂದರೆ ಬೆಂಕಿಗಾರುವ ಕೋಲು. ನಮ್ಮೆದೆಗೆ ಕನಿಕರವುಂಟು. ಕೈಗೋಲಿನ ಬೆಂಕಿಗೆ ಕನಿಕರವಿಲ್ಲ. ಹಿಟ್ಟು ಬೂದಿಯೊಂದಾಗಿ ಕಲಸುವುದು 'ರಾಮಬಾಣ' ಕುರುಡಾದುದುಂಟು! ರಾವುತನನೆಂತಾಗದು.

ಕಂಪ : ಹೌದು ಬುದ್ಧಿ ; ಅದೆಲ್ಲವೂ ಬೂತದ ಬಾಯಿಂದಲೇ ಬಂದಿದೆ ಬುದ್ಧಿ.

ರಂಗ : ಹಾಡಾಗಿಯೇ ಬಂದಿದೆಯೊ ? ·

ಕಂಪ : ಹೌದು; ಹೇಳಿದೆನಷ್ಟೆ, ಬೂತ ಬಾಯಾಡಿಸುವುದೆಲ್ಲ ಹಾಡೆಂದು.

ರಂಗ : ಹಾಂ, ಹೌದು. ನೆನಪಾಯಿತು. ಇದ್ದುದನ್ನಿದ್ದಂತೆಯೇ ಹೇಳದಿದ್ದರೆ ಅದು ಬೂತವಾಗುವುದು ಹೇಗೆ ? ಆದರೆ, ನಾನೆಂದಂತೆ ,ಅದೂ ಈ ಎಚ್ಚರಿಕೆಯ ಮಾತನ್ನು ಸಾರಲಿಲ್ಲವೆ ?

ಕಂಪ : ಹೌದು, ಮೂರು ಮೂರು ಮಾತೆತ್ತಿ ಸಾರಿತು.

ರಂಗ : ಹೇಗದು ?

ಕಂಪ : ಎಡರುಗಳು ಮೇಲೆ ಮೇಲಡರುವುವು ತೊಡರುವುವು।
ಕಡ್ಡಿ ಮುರಿವೆನು ಮೂರು ಬಾರಿಗೂ ಸಾರುವೆನು।
ಮುನ್ನಡೆಯ ಮುಂಗಣ್ಣ ಮುಂದಾಳಿನಡಿಯೊಂದಿ।
ಬೆಂಗೆ ಕಂದೆರೆದೆನ್ನ ಮೊಗಕೆ ಮಸಿ ಬಳಿಯದಿರಿ, ಹೀಗೆ

ರಂಗ : ( ಮುಗುಳುನಗೆಯೊಡನೆ) ಹಾಂ, ನಾನೆಂದರೇನೆಂದು ಅದಕ್ಕೆ ಗೊತ್ತಿದೆ. ಅಜ ರಿಂದಲೇ ಅದು ಬೂತವಾಯಿತು. ಇರಲಿ; ನಿಮ್ಮ ಇರುಳ್ವಾಡಿಯ ಆ ಹಳ-ಗನ್ನಡದ ಬಳ್ಳುಗಳ ಸುದ್ದಿಯನ್ನೆತ್ತಲೇ ಇಲ್ಲವೆ ಆ ಬೂತವು ?

ಕಂಪ : ಎಲ್ಲವನ್ನೂ ಹೇಳಿತು, ಆ ಮಾಯದ ನಾಲಗೆ. ಅಷ್ಟು ಚುಟುಕಾಗಿ ಚೊಕ್ಕವಾಗಿ, ಸೊಗಸಾಗಿ ಸೊಂಪಾಗಿ ಹೇಳಲಿಕ್ಕೆ ಈ ನಾಲಗೆಗೆ ಸಾಗುವುದೆ? ಆನೆಯ ಹೆಜ್ಜೆ ಚದುರಂಗದಾನೆಗೆಲ್ಲಿಂದ ಬುದ್ಧಿ ?

ರಂಗ : ಸರಿ, ಹಾಗಾದರೆ ನಿನಗಾವುದನ್ನೂ ಎಚ್ಚರಿಸಬೇಕಾಗಿಲ್ಲ. ಬೂತವೆಂದರೆ ಕನ್ನಡಿಯಂತೆ. ನಿನ್ನ ಮಾತಿನಲ್ಲಿ ಆ ಬೂತವೇ ಕನ್ನಡಿಯಾಗಿ ಹೊಳೆಯುತ್ತದೆ.

ಕಂಪ : ಯಾಕೆ ? ನನ್ನ ಮಾತೇ ಬೂತಗನ್ನಡಿ ಎಂದು ನಂಬಬಹುದು ಬುದ್ಧಿ.

ರಂಗ : ಆಗಲಿ; ಈಗ ಹೊತ್ತಾಯಿತು. ನಾಳೆ ನಸುಕುಹರಿವಲ್ಲಿ ನಿಮ್ಮ ಸಂಗಡಿಗ ರೊಡನೆ ತಯಾರಾಗಿ ಬನ್ನಿರಿ.

ಕಂಪ : ಆಯಿತು ಬುದ್ಧಿ (ಎಂದು ಕೈಮುಗಿದು ಡಕ್ಕೆಯನ್ನೆತ್ತ ಬಿಸುಟನು.)

> " ಕನಸೇ ಸೊಬಗಿನ ತಾಯೂರ ಕೋಂಟೆ ।
> ನೆನಸೆಂಬುದೆಲ್ಲವು ಗಾಳಿಯ ಗಂಟೆ ।
> ಕನಸಿದೆವ್ವದೊಲುಮೆ ತಲೆಗೊಂಡೆ
> ಸಲೆ ಚೆನ್ನಪೊಂಗನ ರಂಗನ ಕಂಡೆ ॥

೨

(ಚಾವಡಿಯ ಜಗಲಿಯಲ್ಲಿ ರಂಗಣ್ಣ ಅತ್ತಿತ್ತ ತಿರುಗಾಡುತ್ತಿದ್ದನು, ಅವನ ಕಣ್ಣೇನೋ ತೆರೆದುಕೊಂಡಿತ್ತು. ಆದರೆ ಆ ಕಣ್ಣಿಗಾವುದೂ ತೋರುವಂತಿರಲಿಲ್ಲ. ಅದರಿಂದ ತಿರು-ಗಾಟವೆಂದರದು ಬರಿಯ ಮೈಯ್ಯದಲ್ಲ; ಮೆದುಳಿನದೆಂದು ತೋರುತ್ತಿತ್ತು. ಥಕ್ಕನೆ ನಿಂತನು. ಗೊಣಗಾಡತೊಡಗಿದನು.)

" ತಿಳಿವಿನ ಗುಳಿಗೆಯಾದ ಒಂದೇ ಒಂದು ಗುಳಿಗೆಯನ್ನು ಬಿಂದುವಿನಲ್ಲರೆದೆ. ಮದ್ದರೆದೆ ಅರೆದೆ. ಇದುವೆ ಒಂದು ; ಇದುವೆ ಅನಂತವು. ಅರೆಯದ್ದರೆ ಒಂದು ; ಅರೆದರೆ ಅನಂತ. ಅರೆದ ಮದ್ದನ್ನು ಕುಡಿಯಿಸಬೇಕು. ಆದರೆ, ಕಿವುಡುಸನ್ನಿಯದು. ಕುರುಡುಸನ್ನಿ ಬಗುಳುಸನ್ನಿಗಳ ಮೂಗನ್ನೊತ್ತಿ ಹಿಡಿದು ಗಂಟಲುಗಳಿಗೆ ಮದ್ದೆರೆದರೆ ಸಾಲದು. ಕಿವುಡುಸನ್ನಿಯೆಂದರೆ ಸನ್ನಿಗಳೊಳಗೆ ರಾಯಸನ್ನಿಯಂತೆ. ಕಿವಿ-ಮೂಗು –ಕಣ್ಣು–ನಾಲಗೆ–ಮೈಯೆಲ್ಲವೂ ಬರಡಾಗುವುದಂತೆ. ಅದರ ಅರಮನೆ ಕಿವಿಯಾದರೆ ಮೂಗು ಮೊದಲಾದುವುಗಳೆಲ್ಲ ಸಾಮಂತಮನ್ನೆಯರ ಠಾಣಗಳಂತೆ. ನಮ್ಮೀ ಮದ್ದಿನ ಗುಳಿಗೆಯೆಂದರೆ ಎಲ್ಲವಕ್ಕೂ ಏಕಮೂಲಿಕೆಯಂತೆ; ಲೆಕ್ಕಗಳಿಗೆ ಬಿತ್ತಾದ ಒಂದರಂತೆ. ನೂರು ಸಾವಿರಗಳನ್ನಲ್ಲ; ಕಟ್ಟಕಡೆಯ 'ಅನಂತ'ದ ವರೆಗಿನ ಲೆಕ್ಕವನ್ನೆಲ್ಲ ನೋಡಿರಿ. ಅದರೊಳಗೇನಿದೆ ? ಒಂದು —, ಬಿಂದುಗಳು; ಒಂದುಗಳೆ ಕೂಡಿ ಒಂಬತ್ತರ ವರೆಗೆ.

ಏರಿದುವು; ಪಿತ್ತಿನಂತೆ. ಅವಕ್ಕೊಂದು ಸೊನ್ನೆ ಬಂದು ಸೇರಿ ಹತ್ತಾಯಿತು, ಕಫದ ಕೆಮ್ಮಿನಂತೆ. ಮುತ್ತಿನ ಲೆಕ್ಕವೆಲ್ಲವೂ ಆ ಒಂದು — ಬಿಂದುಗಳ ಕೂಟಿಗಳು; ವಾತದ ಸುತ್ತಾಟದಂತೆ. ಒಂದರ ಮೇಲೆ ಬಿಂದುಗಳೇರುತ್ತಾ ಹೋದರೂ ಅನಂತ ದಲ್ಲಿ; ಒಂದರಿಂದ ಬಿಂದುಗಳಿಳಿಯುತ್ತಾಹೋದರೂ ಅನಂತದಲ್ಲಿ ಒಂದಾಗುವು ದಲ್ಲವೆ ? ಹೌದು, ಒಂದಾಗುವುದು. ಆ ಲೆಕ್ಕದಂತೆ ಈ ಪಕ್ಕವು. ' ಲೆಕ್ಕಪಕ್ಕ ಗಳೆರಡು ತಕ್ಕಡಿಯೊಳಳೆದಂತೆ ' ಎಂದಲ್ಲವೆ ನಮ್ಮ ' ಹೊಚ್ಚ ಹೊಸಗನ್ನಡದ ತಿರುಳಿನೊಳಗಿನ ಹುರುಳು ? ' ಹೌದು, ಹಾಗಾದರೆ ಆ ಪಕ್ಕವೆಂದರೇನು ? ಇಡೀ ನೆಲದ ಬಿತ್ತೊಂದು. ಆ ಬಿತ್ತಿಗೆ ಮಾಯದ ಸೊನ್ನೆ ಬಲವಂದು ಸೇರಿ ಹತ್ತು ಹಲ ವಾಗಿ ' ಅನಂತ ಪ್ರಪಂಚ' ವೆನ್ನಿಸುವುದು. ಅದಕ್ಕೆ ಎಡಗೊಂಡು ಇಳಿಯುತ್ತಾ ಹೋದರೂ ಅದೆ ' ಅನಂತ ಪ್ರಪಂಚ 'ದಲ್ಲಿ ಕೂಡಲುಗೊಳ್ಳುವುದು. ಹಾಗೆಯೇ ಆ ' ಅನಂತ ಪ್ರಪಂಚ 'ದಿಂದತ್ತ ಎಡಗಡೆಗೆ ಇತ್ತ ಬಲಗಡೆಗೆ ಇಕ್ಕವಲಾದ ಸೊನ್ನೆಯ ಬೀದಿಯಲ್ಲಿ ಹರಿದರೂ ಒಂದಾದ ಬಿತ್ತಿನಲ್ಲೇ ಬಂದು ಬಿತ್ತುವುದು. ಅದರಿಂದಲ್ಲವೇ ಬಲ್ಲವರು :

" ಸೊನ್ನೆ ಸೊನ್ನೆಯೆನುತ್ತ ಚುನ್ನವಾಡುವುದೇಕೆ ।
ಸೊನ್ನೆಯೊಳೆ ಜೊಮ್ಮೊಂಡ ತೇಲಾಡುವುದು ಜೋಕೆ ॥
ಸೊನ್ನೆ ದೋಣಿಯನೇರಿತಲೆವನಂತದೊಳೊಂದು ।
ಸೊನ್ನೆಯೊಳೆ ಕೆಳಗೆ ಕೆಳಗಿಳಿದು ಬಂದಹುದೊಂದು ॥
ಬಿಂದೆ ಬಿತ್ತಿದ ಸತ್ತು ಹಲವನಂತಾನಂದ ।
ಬಿಂದು ಕೂಟದ ಚಿತ್ತು, ನೆಲದ ಹೊಲಬಿನ ಹಾಸು ॥
ಹೊಕ್ಕಿಂತು ಬೆರೆದು ನೂಲೇ ಬಟ್ಟೆಯಾಗಿಹುದು ।
ಬಂದರಾ ಹಿಂಮುಂದೆ ಸೊನ್ನೆಯೇ ಸುತ್ತಿಹುದು ॥
ಸೊನ್ನೆಯೊಳಗಿನ ಸವಿಯ ಬಲ್ಲರೇ ಬಲ್ಲರು ।
ಹಳದೆಂದು ಹಿನ್ನೋಡುತಿಹ ಕಣ್ಣೆ ಸೊನ್ನೆಯಿದೊ ।
ಹೊಸತೆಂದು ನೀಕರಿಪ ನಾಲಿಗೆಯೆ ಸೊನ್ನೆಯಿದೊ ।
ಗುಳಿಗೆಯನು ಬಿಂದುವೆನ್ನಿಸುತರೆದು ಮದ್ದಾಗಿ
ಕುತ್ತವನು ಕೆಡಿಸುತ್ತನಂತವಾದಾ ಸೊನ್ನೆ "

[ರಂಗಣ್ಣ ರಾವುತನ ಬಗೆ ಹಾಡಾಗಿ ಹರಿಯುತ್ತಿತ್ತು. ಅಷ್ಟರಲ್ಲಿ ಅಂಗಳದಿಂದ ' ರಂಗಪ್ಪ ರಾವುತಕೀ ಜೈ' ಎಂಬ ದನಿಯುಕ್ಕಿತು. ರಾವುತನ ಮಾತು ತಡೆಯಿತು; ಕಣ್ಣು ಅತ್ತ ವಾಲಿತು. ನೂರಾರು ಮಂದಿ ದಾಳಿದೊಡಿಯ ಆಳುಗಳು ಸಾಲಾಗಿ ನಿಂತಿದ್ದರು. ಆ ಸಾಲೆಂದರೆ, ಹೊಸಗನ್ನಡದ ಗುಡಿಯೇರಿದ ಮುಡಿಯು; ಹೊಸಗನ್ನಡದ ಅಚ್ಚುಗೊಂಡ ಉಡಿಗೆತೊಡಿಗೆಯ, ಹೊಸಗನ್ನಡ ಮೆಚ್ಚುವಡೆದ ಬಿರುದುಬಾವುಲಿಯ ಸಾಲಾಗಿದ್ದುದು. ಎಲ್ಲರ ಮುಂಗಡೆಯಲ್ಲಿ ಮುಂದಾಳಾದ ಕಂಪಣ್ಣನು ಕೈವೀಸುತ್ತಿದ್ದನು. ಅದನ್ನು ನೋಡಿದ ರಾವುತನೆದೆ ಉಕ್ಕಿಹೋಯಿತು. ರಾವುತನ ಕಡೆಗಣ್ಣು ತನ್ನದನ್ನೊರಸಿದೊಡನೆ

ಕಂಪಣ್ಣನ ತುಟಿ ಮತ್ತೊಮ್ಮೆ ತೆರೆಯಿತು. 'ರಂಗಪ್ಪ ರಾವುತನಿಗೆ ಜೈ' ಹಿಂದಾಳುಗಳ ತುಂಡುದನಿಯ 'ಜೈ'ಕಾರದೊಡನೆಸುಕ್ಕಿದ ದನಿಯದು ಬಾಂದಳಕ್ಕೇರಿತು.]

ರಂಗ : (ಕಂಪಣ್ಣನ ಮೋರೆಯನ್ನು ನೋಡಿ) ಗುಡಿಯನ್ನೇರಿಸುವುದಕ್ಕೆ ಮೊದಲೆ ಜೈಕಾರವೇಕೆ ?

ಕಂಪ : ಜೈಕಾರವೆಂದರದು ತಮ್ಮ ಸಿರಿಬಾಯಿಂದ ಸೊನ್ನೆಯಂತಲ್ಲವೆ ಬುದ್ಧಿ ?

ರಂಗ : ನನ್ನೆಣಿಕೆ-ಮಾತುಗಳನ್ನೆಲ್ಲ ಕೇಳಿದೆಯಾ ?

ಕಂಪ : ನಾನೆಂದೇನು ? ಇವರೆಲ್ಲರೂ ಕೇಳಿದರು.

ರಂಗ : ಆ ಪಿಸುಮಾತು ಕೇಳಿಸುವಂತಿದ್ದುದೆ ?

ಕಂಪ : ಪಿಸುಮಾತಾದರೇನು ? ಹೊಸ ಹುರುಳು ಗಮಗಮಿಸುತ್ತಿತ್ತು. 'ನಾನೆ ರಾವುತನೆಡೆಯ ಸೊನ್ನೆಯಾಗುವೆನೆಂದು' ಆ ಬೂತವೆ ಹಾಡಿದುದನ್ನು ಈ ಕಿವಿಯಿಂದಲೆ ಕೇಳಿದವನಲ್ಲವೆ ನಾನು ?

ರಂಗ : ಸರಿ ಸರಿ. ಈ ಯೆದೆಯಲ್ಲೀಗ ಮೊದಲಿಲ್ಲದೆಣಿಕೆಗಳೇ ಒಂದಾಗಿ ಹಲವಾಗಿ ಮೂಡಿ ಜೀಳದ ಜೆನ್ನೆಯಾಗಿ ಹರಿಯುತ್ತಿವೆ. ಆ ಬೂತವು ಈಯೊಡಲಲ್ಲಿ ಮನೆಮಾಡಿದುದರಿಂದಲೆ ಹಾಗಾಗುವುದಾಗಿರಬೇಕು.

ಕಂಪ : 'ಆಗಿರಬೇಕೆ'ನ್ನಲಾಗದು ಬುದ್ಧಿ ; 'ಹಾಗಾಗಿದೆ' ಎನ್ನಬೇಕು.

ರಂಗ : ಇರಲಿ; ಎಲ್ಲವೂ ತಯಾರಾಗಿದೆ ಏನು ?

ಕಂಪ : ನೋಡಿರಿ ಬುದ್ಧಿ. ನನ್ನ ಆ ಮಾತು ಒಬ್ಬನ ಕಿವಿಗೆ ಬಿತ್ತು. ಕಿವಿಯಿಂದ ಕಿವಿಗದು ನೂಲುಗಟ್ಟಿತು. ಆ ನೂಲು ಕಟ್ಟಿದ ಕಿವಿಗಳೆಲ್ಲವನ್ನೂ ಸೆಳೆದುದರಿಂದಲೆ ಇಷ್ಟು ಮಂದಿ ಮಾಲೆಯಾಗಿ ಬಂದಿವೆ. ಇನ್ನೂ ಎಷ್ಟೆಷ್ಟೊ ಮಂದಿ ನಮ್ಮ ಹರಿವ ದಾಳಿಗೆ ಕಾಲುವೆಯಾಗಿ ಕೂಡುವರು.

ರಂಗ : ಆಗಲಿ; ನಮ್ಮ ದಾಳಿಯ ಗುರಿ ಏನೆಂಬುದು ಆ ಬೂತದ ಒಲವನ್ನುಂಡ ನಿನ್ನೆದೆಯಲ್ಲೊಂದಾಗಿರಲೇಬೇಕು. ಈ ನಿನ್ನ ಸಂಗಡಿಗರೆದೆಯಲ್ಲೂ ಅದು ಕರಗಿದೆಯೊ ?

ಕಂಪ : ಗೊತ್ತಾಗಿದೆ. ಆದರೂ ಒಮ್ಮೆ ಈ ನಿಮ್ಮ ಸಿರಿಬಾಯಿಂದಲೆ ಸುರಿದು ಬಿಟ್ಟರೆ ಕೆಸರು ಕೊಚ್ಚಿಹೋಗುವುದು.

[ರಂಗಪ್ಪ ರಾವುತನು ಆ ದಂಡಾಳುಗಳತ್ತ ತಿರುಗಿದನು. ತನ್ನ ಬುಡಗಣ್ಣು – ನಡುಗಣ್ಣು – ಕಡೆಗಣ್ಣುಗಳನ್ನು ಆ ಸಂದಣಿಯಲ್ಲೆತ್ತಲೂ ಹರವಿದನು. ಮತ್ತೆ ಮಾತೆತ್ತಿದನು.]

ರಂಗ : ಗುರಿಯನ್ನಚ್ಚುಗೊಂಡೆಣಿಕೆಯ ಕೆಚ್ಚೆದೆಯ ದಂಡಾಳುಗಳೇ, ನಮ್ಮ ದಾಳಿಯನರುಗಾಳಿಯಿಂದ ಕಂಪಣ್ಣನನ್ನು ಮುತ್ತಿಮುಸುರಿಸಿದ ಚೆಂದುಂಬಿಗಳೇ ಕಿವಿಗೊಟ್ಟು ಕೇಳಿರಿ —

ತೂಗಲಾರದ ಹೊಚ್ಚಹೊಸಗನ್ನಡದ ರಾಯ-
ಗೆಲಸವಿದೊ ಹಣೆಯೇರಿ ತೂಗಲ್ಕೆ ತೊಡಗುತಿದೆ ।
ಹಳೆಗನ್ನಡದ ಕೆಸರಿನೊಸರ ತುಂತುರುಗಳನು ।
ಹೊಸಗನ್ನಡದ ಕಲ್ಲುಗಟ್ಟಿ ತಡೆಯಲು ಬೇಕು.
ಬೂತವುಂಡಿಹ ಕೂಳು ಹಳದಲ್ಲಿ ಕರಗದೆ ।
ಉಗುಳಿದೆಂಜಲಿನುಂಡು ನೆಲವೆ ಹೊಲಸಾಗುವುದು ।
ಅದನು ತಡೆಯಲಿಕೆ ನೆಲವನ್ನೆತ್ತಿ ಹಿಡಿಯಲಿಕೆ
ರಂಗಪ್ಪನೆದ್ದಿಹನು, ಬತ್ತಳಿಕೆ ಬಿಗಿದಿಹನು।
ಕನ್ನಡದ ಜಿಲ್ಲಿದೋ ಬಾಗಿಹುದು ಹೊಚ್ಚಹೊಸ
ಕನ್ನಡಕೆ ಬಾಗುವುದು, ಕೋಲಕಡೆಗಣ್ಣ ಕೊನೆ
ನೆಡುಂಗುರಿಯ ನೋಡುವು ಹುರುಪೆದ್ದು ಕುಣಿಯುವುದು
ಕಡೆಹರಿದು ಹಾರುವುದು ಅಡಿಯಮೇಲೆಸಸುವುದು ।
ಕನಸು ಮನಸಿಂದೆದ್ದು ನೆನಸಾಗುತರಳುವುದು
ಅನಿಸುಕಂಪನು ಗಾಳಿ ಕೈಯೊಡ್ಡಿ ಕೂಗುವುದು ॥
ಊರೆಲ್ಲ ಮೂಗರಳಿ ಕಂದೆರೆದು ನೋಡುವುದು ।
ನಮ್ಮ ಹೊಸಗನ್ನಡದ ಗುಡಿ ಬಾನ ಮುಟ್ಟುವುದು ॥

[ ಹಾಡಿನ ಕೋಡಿ ನಿಂದೊಡನೆ "ರಾವುತ ರಂಗಪ್ಪಕೀ ಜೈ" ಎಂಬ ದನಿ ಬಾನಿಗೆದ್ದಿತು. ]

೩

## ಮುನ್ನುಡಿ

ಹಿಂದೆ ಹೇಳದ ಮುನ್ನುಡಿಯೊಂದನ್ನಿಲ್ಲಿ ಹೇಳಬೇಕಾಗಿದೆ. ಮುನ್ನುಡಿ ಮೊತ್ತ ಮೊದಲಾಗಿರಬೇಕಲ್ಲವೇ ಎಂದು ಯಾರೂ ಕೇಳಲಾರರು, ಕೇಳಬಾರದು. ಹೊಚ್ಚ ಹೊಸಗನ್ನಡಕೆ ಲಕ್ಷಣದ ತೊಡಕಿಲ್ಲ. ಬೇಕಾಗಿ ಬಂದಲ್ಲಿ ಮುನ್ನುಡಿಯಲ್ಲವೆ? ಹಸಿವಾದಲ್ಲಿ ತಿಸಿಸು ಎಂಡಿಗಳು. ಮನೆಯಲ್ಲಿ ತಯಾರಾಗಿಲ್ಲದಿದ್ದರೆ ಅಂಗಡಿಯಿಲ್ಲವೆ? ಅದರಿಂದಲೆ ಈ ಮುನ್ನುಡಿ :— ಹಗಲ್ವಾಡಿಯೆಂದರೆ ನೆಲದೊಳಗೆ ಹೆಸರಾದ ಕನ್ನಡ ದಲ್ಲಿ ಹೆಗ್ಗಳಿಕೆಗೊಂಡ ನಾಡು. ಅದರ ಚಚ್ಚೌಕದಳತೆ ಸುಮಾರು ಒಂದು ಮೈಲುದ್ದ ಒಂದು ಮೈಲಗಲ. ಆದರೂ ಅದೊಂದು ಹೊಸ ನಾಡಾಗಿದೆ; ಮೂರ್ತಿ ಸಣ್ಣ ದಾದರೂ ಕೀರ್ತಿ ದೊಡ್ಡದು. ಗಡಿನಾಡಿನವರಾರೂ ಅದರೊಳಗೆ ಹೋಗಬಾರದೆಂದು ಸರಕಾರದ ಕಟ್ಟಪ್ಪಣೆ. ಅದರಿಂದ ಅವರಿಗೂ, ಹೊರಗಿನವರಿಗಾದಂತೆ ಅದು ಹೊಸ ನಾಡು. ಹೊರಗಿನವರಿಗಿರುಳಾಗಿ ತೋರುವ ಕಾಲವು ಅವರಿಗೆ ಹಗಲು. ಹಗಲಲ್ಲಿ ನಿದ್ದೆ, ಇರುಳಲ್ಲಿ ಎಚ್ಚರ. ನಮ್ಮ ಈ ಸಂಜೆ ಅವರಿಗಾ ಸಂಜೆ. ನಾವು ತಲೆಗಿಟು

ಕೊಳ್ಳುವ ಟೊಪ್ಪಿ ಮುಂಡಾಸುಗಳನ್ನು ಅವರು ಕಾಲಿಗೆ ಸುತ್ತಿಕೊಳ್ಳುವರು. ಅದರಂತೆಯೇ ಉಳಿದವುಗಳ ಉಪಯೋಗವೆಂಬುದನ್ನೆಣಿಸಿಕೊಂಡರೆ ಸಾಕು. ಅಂತೂ ಅವರ ನಡವಳಿ ಎಲ್ಲವೂ ನಮಗೆ ತಿರುಗುಮುರುಗಾಗಿ ತೋರುವುದು. ಯೋಗಿಗೆ ಭೋಗಿ ಮರುಳು, ಭೋಗಿಗೆ ಯೋಗಿ ಮರುಳು ಎಂದಲ್ಲವೆ ಗಾದೆ? ಅದರಂತೆ ಮರುಳಾರು ಹುರುಳಾರು ಎಂಬುದನ್ನು ಕಂಡುಹಿಡಿವವರಿಲ್ಲ ಎಂದೇ ಹೇಳಬೇಕು.

ಹೊರಗಿನ ಮರುಳನ್ನೆಲ್ಲ ಸರಕಾರದವರು ಸೆರೆಯಿಟ್ಟು ಕೋಟೆಯೇರಿಸಿದರು. ಆ ಕೋಟೆಯೊಳಗೆ ಹೊರಗಿನವರಾರೂ ಹೋಗಬಾರದು ಎಂದು ಕಟ್ಟಪ್ಪಣೆ ಮಾಡಿದರು. ಅದಕ್ಕೆ ದಿನಗಳೆದಂತೆ ಹಗಲ್ವಾಡಿ ಎಂಬ ಹೆಸರಾಯಿತು ಎಂದು ಹಳಬರ ಹೇಳಿಕೆ. ಒಮ್ಮೆ ನಮ್ಮೂರ ಗೊಲ್ಲ ಹುಡುಗರು ಬೆಳಗ್ಗೆ ಈ ಹಗಲ್ವಾಡಿಯ ಕೋಟೆಯಿಂದ ಹೊರಗಿನ ಮೈದಾನಿನಲ್ಲಿ ದನಗಳನ್ನು ಮೇಯಿಸುತ್ತಿದ್ದರು. ದನ-ಕರುಗಳು ಹಾಯಾಗಿ ಮೇಯುತ್ತಿದ್ದುವಲ್ಲಿ; ಮೇಪಿನ ಹುಡುಗರು ತಾಳ ಹಾಕುತ್ತಾ ಹಾಡತೊಡಗಿದರು :—

ಹೊರಗಿನ ಮರುಳರ ಕೈಕಾಲು ಕಟ್ಟಿ
ಒಳಗಡೆಯಿಟ್ಟರು ಕೋಟೆಯನೊಟ್ಟಿ
ಇರುಳ ಬೊಬ್ಬಾಟದಿಂದಲಿ ನಿದ್ದೆಗೆಟ್ಟಿ
ನೆರೆಯವರಾಸಿಲಿ ಹೆಸರೊಂದನಿಟ್ಟಿ
ಕತದಿಂದಲಾದುದು ಹಗಲ್ವಾಡಿ
ಮರುಳರ ತಿಂತಿಣಿಯುದೊ ಕುಣಿದಾಡಿ ॥

ಈ ಹಾಡನ್ನು ನಮ್ಮಲ್ಲಿಯ ಒಬ್ಬ ಕವಿ ಘಂಟಾಮಣಿ ಎಂಬವರೆ ಕಟ್ಟಿದುದಂತೆ. ಅವನ ಕವಿತಾರಸವನ್ನು ಹೀರಿ ಹುರುಪೇರಿದ ನಾಡವರು ಅವನ ಕೊರಳಿಗೆ ಗಂಟೆಯನ್ನು ಕಟ್ಟಿ ಮನ್ನಿಸಿದುದರಿಂದ ಅವನ ತಂದೆ-ತಾಯಿಗಳಿಟ್ಟ ಹೆಸರೇ ಮಾಸಿ ಹೋಗಿದೆಯಂತೆ. ಅದಿರಲಿ ; ತಮ್ಮ ಮುಚ್ಚಂಜೆಯ ಗಾಳಿಗೆ ಮೆಯ್ಯೊಡ್ಡುತ್ತಿದ್ದ ಹಗಲ್ವಾಡಿಯ ನಾಗರಿಕರು ಈ ಹಾಡನ್ನಾಲಿಸುತ್ತಿದ್ದರೆಂದು ತೋರುತ್ತಿದೆ. ಅಷ್ಟು ಹತ್ತಿರವಷ್ಟೆ. ಆದರೂ ಆವರೆಗೆ ಹೊರಗಿನವರು ಒಳಗೆ, ಒಳಗಿನವರು ಹೊರಗೆ ಹೊಕ್ಕು ಹೊರಡುವ ಬಳಕೆಯೇ ಇರಲಿಲ್ಲ. ಅಲ್ಲಲ್ಲಿಯ ಕೋಟೆಯ ಬಿರುಕಿನಲ್ಲಿ ಅತ್ತಿತ್ತ ನೋಡುವುದು, ಕಣ್ಸನ್ನೆ ಬೆರಳುಸನ್ನೆಗಳನ್ನೆಸಗುವುದು, ಅಷ್ಟೇ ಆ ವರೆಗಿನ ಬಳಕೆ. ಆ ಹಾಡಿನಿಂದಾದ ಹಾಡೇ ಬೇರೆ. ಹತ್ತು ನಿಮಿಷದೊಳಗೆ ಆ ಹಗಲ್ವಾಡಿಯ ಹೆಬ್ಬಾಗಿಲು ಭರ್ರನೆ ತೆರೆಯಿತು. ಡೊಣ್ಣೆ-ಬೆತ್ತ-ಹಾರೆ-ಗುದ್ದಲಿಗಳನ್ನೆತ್ತಿಕೊಂಡ ಆ ಅಣ್ಣಂದಿರ ದಂಡೇ ಹೊರಟುಬಿಟ್ಟಿತು. ಅವರ ನಡುವೆ ಅದೊಂದು ತರದ ಬಿಲ್ಲು-ಬಾಣಗಳನ್ನು ಹಿಡಿದುಕೊಂಡ ಮುಂದಾಳೊಬ್ಬನಿದ್ದನಂತೆ. ಅವನೆ ಈ ರಂಗಣ್ಣನೆಂದರೆ. ಅದಿರಲಿ; ಕೂಡಲೆ ವಾಡಿಯ ಪಹರೆಯವರೂ ಊರ ಹಿರಿಯರೂ ಒಡೆ

ಗೂಡಿ ಆ ಪಂತನ್ನು ಸವಿನಯಗಳಿಂದ ಸಂತಯಿಸಿ ಒಳಗೊಯ್ದರು. ಇದು ಎರಡನೆಯ ಪರ್ಯಾಯ. ಈಗ ಮೊದಲಿನದರಷ್ಟು ಭಂಡಾರ ಬಲವಿಲ್ಲದುದರಿಂದ ಸರಕಾ-ರವು ಎರಡು ಮೂರು ವಹರಿಗರನ್ನಷ್ಟೆ ಇಟ್ಟಿದೆ. ಅಷ್ಟೆ ಅಲ್ಲ; ನಮ್ಮ ಘಂಟಾಮಣಿಯ ಕಡೆಯವರಾದ ಕೆಂಪಣ್ಣ ಜಂಪಣ್ಣ ಮೊದಲಾದ ಆ ಹಿಂದಿನ ಮೇಷಿನವರ್ಕೈದಿ ಆ ರಾವುತರಂಗಪ್ಪನನ್ನು ಉಬ್ಬಿಸಿ ಕೆರಳಿಸಿದ್ದಾರೆ. ಅದೇ ಈಗ ಕತೆಗೆ ಕಾರಣ. ಆಗಲಿ; ಮುಂದೇನಾಗುವುದೋ ನೋಡೋಣ.

ಉಡಿಗೆತೊಡಿಗೆಗಳಿಂದ ಹೊಗರೇರಿದ ರಾವುತನು ಅಂಗಳಕ್ಕಿಳಿಯುತ್ತಿದ್ದನು. ಹೊಸಗನ್ನಡದ ಅದೊಂದು ದೆವ್ವವು ಅವನಡಿಯಿಂದ ಮುಡಿವರೆಗೂ ಅಲೆದಾಡುತ್ತಿದ್ದಂತೆ ತೋರುತ್ತಿತ್ತು. ಹುಬ್ಬಿನಲ್ಲಿ ಸನ್ನೆಯಾಗಿ ಕಣ್ಣಿನಲ್ಲಿ ಕಡೆ-ನೋಟವಾಗಿ, ಬೆನ್ನಿನಲ್ಲಿ ಬತ್ತಳಿಕೆಯಾಗಿ, ಬತ್ತಳಿಕೆಯಲ್ಲಿ ಬಾಣವಾಗಿ,ಕೈಯಲ್ಲಿ ಬಿಲ್ಲಾಗಿ, ಬಿಲ್ಲಿನಲ್ಲಿ ಹೆದೆಯಾಗಿ – ಹೆಚ್ಚೇಕೆ ? – ಆಯಾ ಕಡೆಗಳಲ್ಲಿ ಆಯಾ ಅವತಾರಗೊಂಡ ಹೊಸಗನ್ನಡವು ಜುಮ್ಮು ಜುಮ್ಮೆನ್ನುತ್ತಿತ್ತು. ಅಷ್ಟರಲ್ಲಿ ಅವನ ಹುಚ್ಚು ಹೊಸ ಬಗೆಯ ಅಪರಾವತಾರಗೊಂಡುದೊ ಎಂಬಂತಿರುವ ಕುದುರೆಯೊಂದು ಸಜ್ಜಾಗಿ ಬಂದು ನಿಂತಿತು. ಜಯ ಜಯಕಾರದೊಡನೆ ರಾವುತನು ಕುದುರೆಯನ್ನೇರಿದನು. 'ಕುರ್ರ' ಎಂಬ ಹೆಸರು ಹೊತ್ತ ಕುದುರೆ ರಂಗಣ್ಣನನ್ನೂ ಹೊತ್ತುದು. ಹಿಂದುಮುಂದಾಗಿ ಅಕ್ಕಪಕ್ಕವಾಗಿ ಅನುಸರಿಸುವ ಒಡನಾಡಿಗಳೊಡನೆ ದಾಳಿ ಹೊರಟಿತು. ಮೊತ್ತ ಮೊದಲು ವಾಡಿಯ ಬೀದಿಗಳಲ್ಲಿ ಮೆರವಣಿಗೆಯಾಗಿ, ದಾಳಿ ಹೆಬ್ಬಾಗಿಲಿಗೆ ಮುಟ್ಟಿತು;. ಜೈಕಾರದೊಡನದು ಹೊರಗಿನ ಬೀದಿಗೂ ಇಳಿಯಿತು.

[ಮುಂದೆ ತುತ್ತೂರಿಗಾರರು ಮೇಳದೊಡನೆ ಊದುತ್ತಾ ಹೋಗುವರು]

ಹಗೆಸಂದಣಿಯು ಸವ್ಯಸಾಚಿಯನು ರಂಗಪ್ಪರಾಹುತನನ್ನು ನೋಡಿ
ಕೋದಂಡದಿ ಕೈ ಕೋದಂಡಲೆಯಿವ ರಾಹು ಬಹನು ತಡೆವಾನೆ ಬಿಡಿ
ಹೆಮ್ಮೆಯ ಮುಗಿಲಿಗೆ ಬಿರುಗಾಳಿಯಿದೋ ಬಿಮ್ಮನೆ ಬೀಸುವುದಂ ನೋಡಿ ।
ಹಿಂದಣ ಬಗೆಯಾ ಕನಸಿನ ಮಂಡಿಗೆ ಬಾಯಿಗೆ ಬಾರದು ಕಣ್ಣು ಬಿಡಿ
ಹಳೆಬಗೆ ಹಳೆಗನ್ನಡ ನುಡಿ ಜೋಕೇ ಹಳೆ ನಡೆ ಜೋಕೇ ಕೆಸರು ।
ಹೊಸ ಬಗೆ ಹೊಸ ನುಡಿ ಹೊಸ ನಡವಳಿಯೇ ಹೊಸ ರಾಯನಿಗೆ
ಸಲಾಂಮಾಡು.

ಮೇಳದವರ ತಾಳಕ್ಕನುವಾಗಿ ದಾಳಿ ನಡೆಯತೊಡಗಿತು. ಆ ದಾಳಿಯ ಸುದ್ದಿ ಊರೊಳಗೆಲ್ಲ ಆ ಮೊದಲೆ ಹಬ್ಬಿತ್ತು. ಉಳಿದವರೆಲ್ಲರಿಗೂ ಅದೊಂದು ಹುಚ್ಚರ ಗುಂಪಾದರೆ, ನಮ್ಮ ಕವಿ ಘಂಟಾಮಣಿಯ ಕಡೆಯವರಿಗೆ ಅದೊಂದು ತಮಾಶೆಯಾಗಿತ್ತು. ಅವರೆಲ್ಲರೂ ಕೂಡಿ ರಂಗಪ್ಪ ರಾವುತನ ಕುದುರೆಯ ಮೈನಡೆಗಳ ಅಂದ-ಚಂದಗಳಲ್ಲೆ ಕಣ್ಣಿಟ್ಟು ನೋಡುತ್ತಿದ್ದರು. ದಾಳಿ ಹತ್ತಿರವಾಯಿತು. ಹೆದ್ದಾ-

ರಿಯ ಬದಿಗೊಂಡು ನಿಂದ ಆ ಗುಂಪಿನವರ ಬಾಯ್ದೆರೆಯಿತು —

೧ನೆಯವ : ಹುರ್‍ರೇ ಕುರ್‍ರೇ ರಂಗನ ಕುರ್‍ರೇ–ರಾವುತರಾಯನ ಹುರ್‍ರೇ ಕುರ್‍ರೇ ।

೨ನೆಯವ : ಸಂಕಲೆ ಕಡಿವಾಣವಿಲ್ಲದ ಕುರ್‍ರೇ– ಹೊಸಗನ್ನಡದ ಸವಿಯು ಕುರ್‍ರೆ ।

೩ನೆಯವ : ಮೆಯ್ಗುಂಪಿನ ರಾವುತನೆದೆಗುಂಪನು – ಸುಯ್ಗುಂಪಿನ

ಮೂಗಿಂ ನೆರೆ ಹೇರುತ

ಕಾಲ್ಗೊಂಬಾ ಹೆಮ್ಮೆಯ ಹೊಸ ಕುರ್‍ರೇ – ನಾಲ್ಬ್ದಾರಿಯ ಘಂಟಾಮಣಿ

ಹುರ್‍ರೇ ॥

ಎಲ್ಲರೂ : ಹುರ್‍ರೇ – ಕುರ್‍ರೇ – ಹುರ್‍ರೇ – ಕುರ್‍ರೇ – ರಾವುತರಾಯನ

ಕುರ್‍ರೇ ಹುರ್‍ರೇ ॥

ಆ ವಂಗಡದವರ ಚಪ್ಪಾಳೆಯು ಸದ್ದು ಬಾನೇರಿತು. ಅದರೊಡನೆ ನಮ್ಮ ರಾವುತರಾಯನ ಮೆದುಳು ಒಳೆಯುಲ್ಲಿಟ್ಟ ಕಾವಲಿಯೋಡಾಯಿತು. ಎಣಿಕೆಗಳು ಮೇಲೆರಚಿದ ಭತ್ತದ ಕಾಳುಗಳಾದುವು. ಗಲಭೆಗೊಂಡ ಕುದುರೆಯನ್ನು ನಿಲ್ಲಿಸಲಿ-ಕ್ಕಾಗಿ ಆ ಹೊಸತರದ ಕಡಿವಾಣವನ್ನು ಒಂದಿಷ್ಟು ಸೆಳೆದನು. ಅದು ಹೊಸ ಕುದುರೆ, ಸುತ್ತಮುತ್ತಣವರು ಹೊಸಬರು, ಹಾಡಿನಂದವೂ ಹೊಸದು ; ಅದರಿಂದ ಅದರ ಕಿವಿಗೆ ಗಾಳಿ ತೂರಿದಂತಾಗಿತ್ತು. ಸಾಲದುದಕ್ಕೆ ಕಡಿವಾಣವನ್ನೆಳೆದುದರಿಂದ ಅದರ ಕೊರಳನ್ನು ಮೇಲಕ್ಕೆ ಕಟ್ಟಿದಂತಾಯ್ತು. ಸೈಸಲಾರದ ಕುದುರೆ ಗುರ್‍ರೆಂದು ಬೀದಿಯ ಪಕ್ಕದ ಕಣಿಯಿಂದತ್ತ ಹಾರಿಬಿಟ್ಟಿತು. ರಾವುತನು ಬಿದ್ದುಹೋದನು. ಆದರೆ ಹೆಚ್ಚಿನ ನೋವಾಗಲಿಲ್ಲ. ಕವುಚಿದುದರಿಂದ ಮೋರೆ ತುಟಿಗಳಲ್ಲೆಲ್ಲ ಮಣ್ಣಾಯಿತು. ಅದ-ನ್ನೊರಸಿಕೊಳ್ಳುವಾಗ ಅರಿದಾಳವನ್ನು ಬಳಿದ ಬೂತದ ಮೋರೆಯಾಯಿತದು. ಅಷ್ಟರಲ್ಲಿ ಜಾಣನಾದ ನೋಟಕರೊಳಗೊಬ್ಬನು :—

" ಅಡಿ ತಪ್ಪಿದರಾಯ್ತು ಮುರುಳುವುದು

ಅದರಿಂದಾನೆಗೆ ಕುಂದೇನಿಹುದು । "

ಎಂದು ಹಾಡಿದನು. ಮೋರೆಯ ದೂಳಿಯನ್ನು ಬಿದ್ದುದರಿಂದಾದ ನಾಚಿಕೆ ಯೊಡನೊರಸುತ್ತಾ ರಾವುತನು ಹತ್ತಿರಕ್ಕೆ ಬಂದನು. ಬೆಪ್ಪಾದವನಂತೆ ನೋಟಕನು ಅವನನ್ನೇ ನೋಡುತ್ತಿದ್ದನು.

ರಂಗ : ಯಾರೋ ನೀನು ?

' ನಾನು ಬುದ್ಧಿ '

ರಂಗ : ' ನಾನು ' ಎಂದರೇನು ಹೆಸರಿಲ್ಲವೆ ?

' ಉಂಟು '

ರಂ : ಏನದು ?

' ಹೊಚ್ಚಹೊಸಗನ್ನಡ ' ಎಂದು.

ರಾವುತನದನ್ನು ಕೇಳಿ ಬೆರಗಾದನು. ಇದೇನು ಮನುಷ್ಯನಿಗಿಂಥ ಹೆಸರಿರುವು

ವನ್ನವನು ಕೇಳಿದುದಕ್ಕಿದೇ ಮೊದಲು. ಇರಲಿ ಕಟ್ಟಿದ ಬೂತವಿರುವಲ್ಲಿ ಎಣಿಕೆಯ ಪೂಜಾರಿಯಲ್ಲೇನು ಕೇಳುವುದು ಎಂದುಕೊಂಡನು.

ರಂಗ : ಇಂಥ ಹೆಸರೂ ಮನುಷ್ಯರಿಗಿರುವುದೆ ?

ಹೊ–ಹೊ : ಹೌದು ಬುದ್ದಿ; ಹಿರಿಯರಿಂದ ಬಂದ ಹೆಸರದು.

ರಂಗ : ಹಾಗೆಂದರೇನು ?

ಹೊ–ಹೊ : ನನ್ನ ಹೆಸರು ಗೊತ್ತಾಯಿತಷ್ಟೆ, ಹೊಚ್ಚಹೊಸಗನ್ನಡವೆಂದು. ನನ್ನಪ್ಪನದು ಹೊಸಗನ್ನಡ, ಅಜ್ಜನದು ಕನ್ನಡವೆಂದು. ಹಾಗೆಯೇ ಹಿಂದೆ ಹಿಂದೆ ಹೋಗುತ್ತಿದೆ ಆ ಹೆಸರುಗಳ ಸಾಲು.

ರಂಗ : ಹೇಗೆ ?

ಹೊ–ಹೊ : ಅಜ್ಜನ ಹೆಸರು ಕನ್ನಡವೆಂದಷ್ಟೆ. ಅವನಪ್ಪ ಹಳೆಗನ್ನಡ, ಅವನ ಹಿರಿಯನದು ಹಳೆಯಹಳಗನ್ನಡವೆಂದಂತೆ, ಅವನಿಂದತ್ತಣವನದು ಹಚ್ಚಹಳೆಯ ಹಳೆಗನ್ನಡವೆನ್ನುತ್ತಾರೆ. ಅವನ ಹಿಂದಿನವನದು ಬೆಳ್ಗನ್ನಡವೆಂದಾಗಿರ ಬಹುದಂತೆ. ಅವನ ಹಿಂದೆ ಬೆಳ್ಬೆಳುಗನ್ನಡ, ಬೆಚ್ಚಬೆಳ್ಬೆಳುಗನ್ನಡ ಎಂದು ಮೊದಲಾಗಿರಬಹುದೆನ್ನುತ್ತಾರೆ.

ರಂಗ : ಯಾರು ?

ಹೊ–ಹೊ : ಹಳಬರು.

ರಂಗ : ಹೋಗಲಿ ಆ ಹಳಬರ ತಂಗಳು- ಈ ನಿನ್ನ ಹಿರಿಯರೊಳಗೆ ಈಗ ಯಾರಿದ್ದಾರೆ ?

ಹೊ–ಹೊ : ನಮ್ಮಪ್ಪ 'ಹೊಸಗನ್ನಡ' ನಮ್ಮಮ್ಮ 'ಹೊಸಗನ್ನಡಿ' ಮಾತ್ರ.

ರಂಗ : ಭಲೇ, ಇರಲಿ; 'ಹೊಸಗನ್ನಡಿ' ಎಂದು ನಿನ್ನಮ್ಮನ ಹೆಸರೆ ?

ಹೊ–ಹೊ : ಹೌದು ಬುದ್ದಿ; ಅವಳಿಂದಲೆ ಈ ಹೊಚ್ಚಹೊಸಗನ್ನಡ ತಲೆದೋರಿದುದು.

ರಂಗ : ಅವಳ ತವರೂರಾವುದು ?

ಹೊ–ಹೊ : ಮೇಲೂರು.

ರಂಗ : ಭಲಾ, ಬಲ್ಲವನೇ ಸರಿ. ನೋಡು, ನಾವೀಗ ಹೊಚ್ಚಹೊಸಗನ್ನಡದ ರಾಜ್ಯವನ್ನು ನೆಲೆಗೊಳಿಸಲಿಕ್ಕೇ ಹೊರಟುದು.

ಹೊ–ಹೊ : (ಸಂತಸದಿಂದ ಕುಣಿದು) ಹಾಗಾದರೆ ನೆಲೆಗೊಳ್ಳುವ ರಾಜ್ಯವೆಂದರೆ ನನ್ನದೇ ಬುದ್ದಿ ?

ರಂಗ : (ನಗುತ್ತಾ) ಹುಂ; ಆದರೆ, ಹೊಚ್ಚಹೊಸಗನ್ನಡವಲ್ಲದೆ ಬೇರೊಂದೂ ಅಲ್ಲಿ ತಲೆದೋರದಂತೆ ನೋಡಿಕೊಳ್ಳಬೇಕು.

ಹೊ–ಹೊ : ಅದು ಹೇಗೆ ಬುದ್ದಿ ?

ರಂಗ : ಅವೆಲ್ಲ ಸತ್ತುಹೋದ ಹೆಣಗಳು

ಹೊ–ಹೊ : ಅಲ್ಲ ಬುದ್ಧಿ; ನಮ್ಮಪ್ಪ ಇದ್ದಾನೆ.

ರಂಗ : ಇರಲಿ, ಹೊಸಗನ್ನಡವಲ್ಲವೆ ? ದೋಷವಿಲ್ಲ.

ಹೊ–ಹೊ : ಅಜ್ಜ ಮೊದಲಾದವರೆಲ್ಲರೂ ಇದ್ದಾರೆ.

ರಂಗ : (ಕೆರಳಿ) ಎಲ್ಲಿದ್ದಾರೆ ?

ಹೊ–ಹೊ : ಮನೆಯಲ್ಲಿದ್ದಾರೆ ?

ರಂಗ : ಏನು ಅವರಿನ್ನೂ ತಿರುಗಾಡುವಷ್ಟು ಬಲಗೊಂಡಿದ್ದಾರೆಯೆ ?

ಹೊ–ಹೊ : ಹೌದು; ಆಗಾಗ ಹೊರಗೂ ಬರುತ್ತಾರೆ. ಆದರೆ, ನಮ್ಮಂಥ ಹುಡುಗಾಟದವರಂತೆ ಊರೆಲ್ಲ ಅಲೆದಾಡುವುದಿಲ್ಲ. ಅವರಿಲ್ಲದಿರುತ್ತಿದ್ದರೆ ನಮ್ಮ ಮನೆಯೇ ಕಾಡಾಗುತ್ತಿತ್ತು ಬುದ್ಧಿ.

ರಂಗ : ಅಲ್ಲ; ನಿನ್ನ ಹೆಸರು ಹೊಚ್ಚಹೊಸಗನ್ನಡವೆಂದು. ಆದರೆ ನಿನ್ನೊಳವು ಬಚ್ಚಬರಿಗನ್ನಡವಾಗಿ ತೋರುತ್ತಿದೆ. ಆ ಮುದುಕರೆಲ್ಲರಿಗೂ ಕಾಲ ಬರುತ್ತಿದ್ದರೆ, ಬಾರದಿದ್ದರೆ ಬರಿಸಿಕೊಳ್ಳುತ್ತಿದ್ದರೆ, ಬಂದಣಿಕೆಯಳಾದ ನಂದನದಂತೆ ನಿನ್ನ ಕೈಯೇ ಕೈಯಾಗುತ್ತಿತ್ತೀಗ.

ಹೊ–ಹೊ : 'ಬಾರದಿದ್ದರೆ ಬರಿಸಿಕೊಳ್ಳುತ್ತಿದ್ದರೆ' ಎಂದರೆ ಹೇಗೆ ?

ರಂಗ : ತಾನೆಂದರೆ ಮನೆಗೊಂದು ಹೊರೆಯೆಂದಾದ ಮೇಲೆ, ಆ ಮುದುಕರು ವಿಚಾರವಂತರಾದರೆ ಆತ್ಮಹತ್ಯವನ್ನೆ ಮಾಡಿಕೊಳ್ಳಬೇಕು. ಅದೂ ಸಾಗದಿದ್ದರೆ ಕಿರಿಯರಾದವರು ಅವರನ್ನೆಲ್ಲ ಹುಟ್ಟಡಗಿಸಬೇಕು. ಗುಣವಾಗದ ರೋಗದ ಕುದುರೆಯನ್ನು ಗುಂಡಿನ ಬಾಯಿಗೆ ಕಟ್ಟುವುದು ಗೊತ್ತಿಲ್ಲವೆ ? ಮುಪ್ಪುಗೊಂಡ ದನಗಳನ್ನು ಕಟುಕರಾದರೂ ಬೇರೇನು ಮಾಡುತ್ತಾರೆ?

ಹೊ–ಹೊ : ಹೂಂ ಹೂ, ಬುದ್ಧಿ, ಇದೆಲ್ಲ ನಮ್ಮೂರಿಗೆ ನಮ್ಮ ಮೆದುಳಿಗೊಪ್ಪದ ಸಂಗತಿ ಬುದ್ಧಿ. ಹೀಗೆ ಹೇಳಬಾರದು ಬುದ್ಧಿ.

ರಂಗ : ಹೇಳಲಾಗದೆಂದಾದರೆ ಮಾಡಿ ತೋರಿಸಲಿಕ್ಕೆಂದೇ ನಾವೀಗ ಬಂದುದು (ತಿರುಗಿ) ಅಲ್ಲವೆ ಕೆಂಪಣ್ಣ ?

ತಮ್ಮಣ್ಣ : ಹೌದು ಬುದ್ಧಿ. ಇವನು ಹುಚ್ಚ ಬುದ್ಧಿ.

ರಂಗ : ನಿಜ ನಿಜ. ಇವನಾರೆಂದು ನಿನಗೆ ಗೊತ್ತಿದೆಯೆ ?

ತಮ್ಮಣ್ಣ : ಹೌದು, ಇವ ನನ್ನ ತಮ್ಮ.

ಅಪೂರ್ಣ

ಪಾತ್ರಗಳು:

ಶ್ರೀಕೃಷ್ಣ
ದೇವರಾಜ
ಕಾಮದೇವ
ಗಾಯಿತ್ರಿ
ಗೋಪಿಯರು
ಕೃಷ್ಣೆ.
ಗೋಪನಾಯಕಿ
ನರ್ಮದೆ
ಯಮುನೆ
ಶರಾವತಿ
ಕಪಿಲೆ
ತುಂಗೆ
ಕಾಳಿಂದಿ

## ಮೊದಲನೆಯ ಪ್ರವೇಶ

[ ಸ್ಥಾನ : ನಿಬಿಡ ನಿಸರ್ಗ ಸೌಂದರ್ಯದ ನಡುವಣ ಗೋಕುಲ ]

[ ಬೆಳುದಿಂಗಳ ಆ ಮನೋಹರ ರಾತ್ರಿಯಲ್ಲಿ ಗೋಕುಲದಲ್ಲೆಲ್ಲ ಗಂಭೀರವಾದ ಶಾಂತಿ ನೆಲಸಿರುವುದು. ಹಸುಗಳು ಕೊರಲನ್ನಲುಗಿದಾಗ ಹೊರಟ ಕಿರುಗಂಟೆಯ ನಿನದ ಒಮ್ಮೊಮ್ಮೆ ಕೇಳುವುದು. ದೂರದ ಕಾನಿನೊಳಗಿಂದ ಹೊರಬಂದ ಸಿಂಹದ ಘನಗರ್ಜನೆ ಗಾಳಿಯಲ್ಲಿ ತೇಲಿ ಬರುವುದು. ]

ಗಾಯಿತ್ರಿ : ( ಒಂದಂಚಿನಲ್ಲಿ ತಿಸುಳಪಾಣಿಯಾಗಿ ನಿಂತು, ಸುತ್ತ ತನ್ನ ಬೆದರು-ಗಣ್ಣುಗಳಿಂದ ಅಭೀಕ್ಷಿಸುತ್ತಿರುವಳು. )

ದೇವರಾಜ : ( ಗಾಯಿತ್ರಿಯ ಇರವನ್ನರಿಯದೆ ಪ್ರವೇಶಿಸಿ ಗುಡಿಲೊಂದರ ಬೆಳಕು-ಕಂಡಿಯಲ್ಲಿ ಇಣಿಕಿ ನೋಡುವಾತುರದಿಂದಿರುವನು. )

ಗಾಯಿತ್ರಿ : ಯಾರವರು ?

ದೇವರಾಜ : ( ಉಸಿಕನೆ ತನ್ನಾತುರವನ್ನೆತ್ತಿ ತೋರಿರುವನು. )

ಗಾಯಿತ್ರಿ : ( ಕಟುಗೊರಲಲ್ಲಿ) ಕರೆದ ದನಿ ಕೇಳಿಸದೆ !

ದೇವರಾಜ : ( ಹಿಂಜರಿದು ನಿಲ್ವನು )

ಗಾಯಿತ್ರಿ : ಗಂಡುಸಿಲ್ಲದ ಬೀಡು ಅದು ; ಒಳಗೆ ಹೆಣ್ಣೊಬ್ಬಳೇ.
ದೂರ ಸರಿ; ಇಲ್ಲದಿರೆ ಕ್ರೂರವನು ಕಾಣ್ಬೆ ಸರಿ.

ದೇವರಾಜ : ಶಕ್ರನಿವ ಹೇ ತಾಯೆ.

ಗಾಯಿತ್ರಿ : ಮತ್ತಾವ ಭೋಗವನು ಬಯಸಿ ಬಂದೆಯೊ ರಾಜ ?
ಋಷಿಪತ್ನಿಯನು ಕೂಡಿ ಅಂದು ನೀನುಂಡ
ಕಹಿಯುಣಿಸು ತುಟಿಯಿಂದವಾರಿಲ್ಲವಾಗಳೇ
ಬಯಕೆಯೇ ? ಗೋಕುಲವು ಇದು ಜೋಕೆ ! ಆರವಳು
ಬಗೆವೆಯಾ ? ನಡೆ – ಬಂದ ದಾರಿಯನು ಹಿಡಿದು, ನಡೆ !

ದೇವರಾಜ : ಅರಿತಿಹೆನು ಎಲೆ ತಾಯೆ, ಅವಳದಾರೆಂಬುದನು.
ನಾ ಬಲ್ಲೆನೆಲ್ಲವನು, ಹೆಣ್ಣವಳ ಕತೆಯನ್ನು.

ಗಾಯಿತ್ರಿ : ಒರೆ, ಕೇಳ್ವೆ, ಸರಿಯೇನೊ !

ದೇವರಾಜ : ಕೇಳ್ ತಾಯೆ, ಹೇಳುವೆನು, ಅವಳೆಸಗಿದಾಟವನು ಬಣ್ಣಿಸುವೆ ಕೇಳು.
ಆ ರಾತ್ರಿ ನಾಟಕವು ನಡೆದಿತ್ತು. ಸುಖಸಿದ್ಧಿಯನು ತೋಡಿ ಊಡಿ.
ಆಟದಾಚಾರ್ಯದೇವನು ಭರತಮುನಿ ರಂಭೆಯಭಿನಯವ ಮೆಚ್ಚಿ–
ನೀನೆ ಧನ್ಯಳು ತಂಗೆ, ನೆರೆದೆಲ್ಲ ದೇವರ್ಗೆ ಈ ಎಲ್ಲ ಸುಖದ ತಲೆ ಮುಟ್ಟಿ
ಮರೆವ ಬಲ್ ಹಿರಿಯ ಆನಂದವನು ಕಾಣಿಸುವ ಕಲೆ ಕಲಿತೆ ಜಾಣೆ.
ಪುರುಷೋತ್ತಮನು ವಿಷ್ಣು ಒಪ್ಪುವನು ಮೆಚ್ಚುಗುಡುವನು ಬಗೆದು ಬಲ್ಲೆ.

ಒಂದೆ ಸಂದೆಗ ಮಗಳೆ, ನೀನ್ ಚಪಳೆ ; ಕಲೆಗೆಂದೆ ಈ ನಿನ್ನ ಜೀವ.
ಅವನ ಆ ಮಂಗಳನ ಕಂಡೆಯುಪ್ಪೊಡೆ ಮರಳೆ ; ಬಳಿಕಿಲ್ಲಿ ಬೇಗೆ !
ಎಂದವಳ ರಸಿಕಾತ್ಮವನ್ನೆಚ್ಚರಿಸಿ ಕಳಿಸೆ, ಅಹ, ಏನೊ ಪೇಳ್ವೆ !
ಒಂದಿರುಳು ನಾಟ್ಯರಂಗದೊಳೊವ್ಮ್ ಎದೆಯಾಸೆಯನೆ ನೆನೆದು ನೆನೆದು,
ಹೆಜ್ಜೆಯನು ಮರೆತು ಹಾಳ್ಗೆಯ್ದ್ದಳಾಟವನು ; ಸಭೆ ಚೆದುರಿತ್ತು ಹೊರಟು.
ಭರತಮುನಿ ಉರಿದೆದ್ದು — ಏನೆಂಥ ಸೊಕ್ಕಿಲಗೆ ! ಸಹೃದಯರನು ಮರೆತೆ !
ಅವರ ರಸದನುಭವವ ಮುರಿದೆಯಲ ಪಾಪಿ ! ನಿನ್ನಾಸೆಯನು ಬಲ್ಲೆ.
ನಿನ್ನೊಳ್ಳಿತಕೆ ಅದು ಹಿರಿದು ಬಲ್ಲೆ ! ಆದರನುಭವಿಗಳಿನಿತರ
ಹಿತವನು ಮರೆತೆ ; ನಿನ್ನೊಬ್ಬಳಾಸೆಯನೆ ಹಿರಿದಾಗಿಸಿದೆ ಎತ್ತಿ.
ಅದಕೆ ದಣ್ಡಣೆಯುಂಟು. ನಡೆ ನೆಲಕೆ ! ಮಂಕು ಕವಿಯಲಿ ನಿನಗೆ ಅಲ್ಲಿ,
ನಿನ್ನಾಸೆಯವನನ್ನು ಕಂಡೊಡನೆ. ನಿನ್ನ ಓರಗೆಯವರು ನೆರೆದು,
ಆಮುಷ್ಮಿಕಾನಂದವನು ಕಾಂಬ ಮಧುರ ಭಾವವ ಬಳಿಸಿ ಸುತ್ತ,
ಕಾಡು ನಾಡಿನಲೆಲ್ಲ ರಸವನುಕ್ಕಿಸುತಿರಲು ನಿನಗಿರಲಿ ಬೇವು —
ಎಂದೊದರೆ ಗೋಷ್ಠಿ ಚೆದುರಿತು ಚೆಲ್ಲಿ. ಶಿಷ್ಯೆ ತಲ್ಲಣಿಸಿದಳು ಕೇಳಾ.
ದಿಟಮವಳು ಏನ್ನಿಚ್ಛೆಗಾರ್ತಿಯೇ ! ನಾ ನಿವಾರಿಪೆನೆಂತೊ ನೋವ !
ಕಣ್ಣ ನೀರ್ಗರೆದವಳು ಕಾಲ್ವಿಡಿಯೆ, ಕರಗಿ ಗುರು, — ಆಯ್ತು ಬಿಡು ರಂಭೆ,
ತೊದಳಾಗದಾನಂದ ನುಡಿ, ದಿಟಂ ! ಒಂದಿನಿತು ದಿನ ನೊಂದ ಬಳಿಕ,
ಅವನ ಸೇರುವೆ ಹೋಗು. ಚೆಲುವನವನಿಳಿವನಾಯಮುನೆ ಜುಳುಜುಳನೆ
ಸುಳಿವ ಹೊಸ ವನದ ಬೃಂದಾವನದ ಸೌಂದರ್ಯಧಾಮದೆಲ್ಲೆಯಲಿ —
ಎಂದನವಳೇ ಕೃಷ್ಣೆ. ಏಗೆಯ್ವಳೆಂಬುದನು ಕಾಣಲಾಸಿಸುವೆ.

ಗಾಯಿತ್ರಿ : ಛಲಗಾರ್ತಿ, ಬಲ್ ನಿಷ್ಠೆ, ಅಭಿಮಾನಿ ದಿಟ್ಟೆಯವಳು.

ದೇವರಾಜ : ಅಹುದಹುದು. ಸೌಶೀಲ್ಯವದು ಸಹಜಸುಂದರಂ.

ಗಾಯಿತ್ರಿ : ತನ ತಂಗೆ ಎಲ್ಲ ಗೋಪಿಯರಂತೆ ಕೈಮೀರ
ದಿರಲೆಂದು ಕಣ್ಣಿಕ್ಕಿ ಕಾಯುತಿಹಳಾವಗಂ.

ದೇವರಾಜ : ಆದರೂ ಹೇ ದೇವಿ, ಕಾಳಿಂದಿ ಕೃಷ್ಣನೊಡ
ನಾಟದಲಿ ಬೆರೆತು ಉಲ್ಲಸವಾಂತು ಸಮ್ಮೋದ
ಗೊಂಡಿಹಳು. ನಿನ್ನ ಕಣ್ ಕಾಣದೇನೋ ಅದನು ?

ಗಾಯಿತ್ರಿ : ಆ ಭಾಗ್ಯವೆನಗುಂಟು. ಅವನೊಲುಮೆ-ಬೆಳಕಿನಲಿ
ಗಂಡಾದರೂ ಹೆಣ್ಣ ಭಾವದಲವನ ನೋಡುವುದು.

ದೇವರಾಜ : ಆ ಜೀವ ಜೀವೈಕ್ಯವನು ಕಾಂಬುದೇ ಸೊಗಸು.

ಗಾಯಿತ್ರಿ : ಕೃಷ್ಣೆಯನು ಕರೆಯಲೇ ? ನೋಡಲಾಸೆಯೆ ಹೇಳು.

ದೇವರಾಜ : ಬೇಡ. ಒಳಗಿರಲವಳು.

ಗಾಯಿತ್ರಿ : ಭಯವೇಕೆ ? ನಿನ್ನೊಳಿಗದ ಆಳು ಈ ಕೃಷ್ಣೆ.
ದೇವರಾಜ : ಹೇಡಿತನವೇನಲ್ಲ. ಗಂಡೊಬ್ಬನೆದುರಿಗಿರೆ
ಮನ ಬಿಚ್ಚಿ ಮಾತನಾಡಳೊ ಏನೊ. ಅದಕಳುಕು.
ಗಾಯಿತ್ರಿ : ಸರಿ, ಮರೆಯಾಗು ನುಡಿಸುವೆನು.
ದೇವರಾಜ : (ಬಯ್ತುಕೊಳ್ಳಸು)
ಗಾಯಿತ್ರಿ : ಕೃಷ್ಣೆ, ಓ ಕೃಷ್ಣೆ !
ಕೃಷ್ಣೆ : (ಓಗುಡಳು)
ಗಾಯಿತ್ರಿ : ಮೌನವೇ ಎಲೆ ಗೋಪಿ ? ನಾನು ಗಾಯಿತ್ರಿ ಬಾ.
ಕೃಷ್ಣೆ : (ಪಡಿಪರಿದು) ಬಾ ದೇವಿ, ಬ್ರಹ್ಮಪ್ರಿಯೆ.
ಈ ನಿನ್ನ ಸೋಗೇನು ? ಏಕೆ ಬಂದಿಹೆ ಹೇಳು ?
ಗಾಯಿತ್ರಿ : ನನ್ನ ಬರವಂತಿರಲಿ.
ಇಂದೇನೊ ನಿಶಿಪೊಳ್ತಿನೊಳಗಿಂತು ಈ ಕಾಳಿ-
ಯವತಾರ ! ಅಗ್ನಿಪರ್ವತದುಕ್ಕು ಏತಕ್ಕೋ !
ಕೃಷ್ಣೆ : ಏಕೆ ಕರುಳನು ಕೊರೆವೆ ? ! ಸುಮ್ಮನಿರು ಬೇಡುವೆನು.
ಗಾಯಿತ್ರಿ : ದುಕ್ಕವೆನ್ನೊಳು ತೋಡು ; ನೋವು ನುಡಿಯನು ಆಡು.
ಕೃಷ್ಣೆ : ವೇದರೂಪಿಣಿ ಕೇಳು,
ಈ ದಿವಸದವಸಾನದಲಿ ರವಿ ರಾಗವನು ಚೆಲ್ಲಿರಲು ಹರಡಿ,
ಗೋಕುಲದ ಗೊಲ್ಲ ಹುಡುಗೆಯರೆಲ್ಲ ಕಲೆತು ಕುದಿಕುದಿದರೇನಂಬೆ !
ಪೆರೆ ತುಂಬಿ ಮೂಡಿದನು. ಹಾಲ್ತೊರೆಯುದಾನಂದ ಬಾನಿಂದ ಬಂತು.
ಆ ಹಾಲಿನಲೆಗಳನು ಬಿಡಿಸಿ ಬಂದಿತು ತೇಲಿ ಕೊಳಲ ದನಿ ಹಾಳು.
ಏನೊರೆವೆನೆಂತೊರೆವೆ ಆ ಆಟವನು ದೇವಿ, ಸೋಜಿಗದ ನೋಟ !
ಬರಿದಾಯ್ತು ಈ ಕೇಳಿ. ತುರು ಕರುಗಳನಿತುವನು ಕಟ್ಟದೆಯೆ ಬಿಟ್ಟು,
ಕೊಳಲ ದನಿಯಾಲಿಸುತ ನಡೆದ ಬಿನುಗಿನ ಬಳಗ ! ಓ ಏನು ಮಾಟ !
ಮೈಮರತೆನಚ್ಚರಿಗೆ ! ತಿಳಿದೊಡನೆ ಕಣ್ ಜಿಡಲು ತಂಗೆ ಇರಲಿಲ್ಲ !
ಕಡೆಗೋಲಿನಿಂದಾದ ಬಾಸುಳಾರುವ ಮುನ್ನ ನುಣ್ಚಿದಳು ಮತ್ತೆ.
ಅಲ್ಲಿ ಆ ಕೇಳಿಯಲಿ ಕೆಲೆದುಲಿದು ಕುಣಿಕುಣಿದು ಬಂದಿಹಳು ನೋಡಾ.
ಆ ಹೇಡಿ ಮೋರೆಯನು ಹೊತ್ತಿವಳು ಮರಳಿಹಳು ನೋಡೊಳಗೆ ಬಾರಾ.
ಒರಗಿಹಳು ನುಡಿಸು ಬಾ. ಮನೆಯ ಮುಂದಿಗೆ ಕುಂದು ತಂದಳು ಅಯ್ಯೋ !
ಏನು ಮಾಡಲಿ ದೇವಿ ? ಮಾನ ಮುಡಿ ಪುಡಿಯಾಯ್ತು ! ಇನ್ನು ಗತಿ **ಸಾವೆ** !
ಒಳಗುಂಟು ಕರವಾಳು. ಮುಕ್ಕಳೀಪಾಪ್ಪೆಯನು ತುಂಡರಿಸಿಬಿಡುವೆ.
ಗಾಯಿತ್ರಿ : ಸಖಿ ಬೇಡವಾ ಬಲ್ಮೆ. ಬದುಕ ಬಯಸುವ ಹೆಣ್ಣು
ಆಡಿಕೊಂಡಿರಲೇಳು ; ಹಾಡಿಕೊಂಡಿರಲೇಳು.

ಕೃಷ್ಣೆ : ಒಪ್ಪುವೆನು. ನೂರು ಜನವೊಬ್ಬನೊಡನಾಡುವುದೆ ?
ಗಾಯಿತ್ರಿ : ಸಿದ್ಧಾಂತವದು ಸರಿಯೆ, ನಾನರಿವೆ. ಈ ಹೆಣ್ಣು
ಗಳಿಗೆಲ್ಲ ಹುಚ್ಚು ಹಿಡಿಸಿದ ಕೃಷ್ಣ ಹೆಣ್ಣೊಡನೆ
ಗಂಡನೂ ತನ್ನತ್ತ ಸೆಳೆದಿಹನು ಇದು ಚೋದ್ಯ !
ಅವನ ಕುರಿತಾಸೆ ತೆರತೆರನ ಭಾವದಲಿದ್ದು
ಮನಮನವನಾಳುತಿದೆ ಗೋಕುಲದಲೆಲ್ಲೆಲ್ಲು.
ಕೊಳಲ ನುಡಿಸುವನವನ ಕಂಡು ಕೇಳಿರುವೆಯಾ ?
ಕೃಷ್ಣೆ : ಹಾಲ್ಗೆನ್ನೆ ಹೊಸ ಹುಡುಗನವನಿನ್ನು. ಕಂಡಿರುವೆ.
ಚೆಲುವನೇನೋ ಅಹುದು. ಮುದ್ದು ಬೀರುವ ಮಾಟ.
ಕಣ್ಣ ಸೆರೆ ಹಿಡಿವಂತೆ ನಗು ಚಿಗುರಿ ನಿಲ್ಲುವುದು.
ಬಾನ ನೀಲಿಯು ಮೆಯ್ಗೆ ಒಳ್ಳಿ ಬಳುಕುವ ಒನಪು.
ಆ ನಡಿಗೆ, ನವಿಲುಗರಿ ಎಲ್ಲ ಸರಿಯಾದರೂ —
ಗಾಯಿತ್ರಿ : ಚೆದುರನವನೆಲ್ಲರಂತಲ್ಲವಲ ಎಲೆ ಹೆಣ್ಣೆ
ನಿನ್ನ ಮನಸಿನ ಚೆಲುವೆ ತಿಳಿದನಾದರೆ ಬಿಡನು
ತುಂಟು ಕಣ್ಣವನವನು ; ಅಂಕೆಯಿಲ್ಲದ ಅವನು.
ಕೃಷ್ಣೆ : ಚೆಲುವಿದ್ದರೇನಾಯ್ತು ? ಗಂಡನನ್ನಾಳ್ವವಳು
ನಾನೇಕಕಳುಕುವೆನೊ ! ಮನೆ ತುಂಬ ನನ್ನವನೆ.
ಗಾಯಿತ್ರಿ : ಅವನಾತ್ಮ ಸೌಂದರ್ಯ ಬಗೆಗಿನಿತು ಸಾಕೆಲವೆ
ರಸಿಕತನವೆಲ್ಲವನು ಎಚ್ಚರಿಸಿ ಕುಣಿಸುವುದು.
ಬಗ್ಗಿದರೆ ಜಿಡ ನಮ್ಮ. ತಾನ್ ನಲಿದು ನಲಿಸುವನು
ತರತಮಂಗಳು ಅಲ್ಲಿ ಇನಿತಿಲ್ಲ. ಎಚ್ಚರಿಕೆ !
ಕೃಷ್ಣೆ : ಹರಕೆಯನು ತಲೆಯಲಿಡುವಸು ಮಣಿದು ಓಂತಾಯಿ.

[ ಒಳಹೊಕ್ಕು ಪಡಿಯನ್ನಿಕ್ಕಿಕೊಳ್ವಳು ]

ಗಾಯಿತ್ರಿ : ಕಂಡೆಯಾ ದೇವೇಂದ್ರ ರಂಭೆಯುಭಿನಯುಗಳನು ?
ದೇವರಾಜ : ಪಾತ್ರವದು ಬಲ್ ನೇರ. ಮೊದಲೆ ಒಲಿದಿಹ ಹೆಣ್ಣು
ಎಲ್ಲ ಕಲೆಗಳ ಕಲಿತ ಸುಪ್ರೌಢೆ, ಬಹು ಜಾಣೆ.
ಆಸೆಗಳನನುಭವಿಸಿ ಬಂದಾಳೋ, ಬಾರಳೋ !
ಗಾಯಿತ್ರಿ : ಆ ಮಾತು ಈಗೇಕೆ ? ಅಧಿಕಾರವೆಮಗೇಕೆ ?
ಇರಲಿ ಬಿಡು. ಎಲ್ಲ ಮಂತ್ರಗಳಧಿದೈವವನು
ನಾಟಕಕೆ ನೂಕಿ ಅವನಾಟವನು ಕಣ್ತುಂಬ
ನೋಡುತಿಹೆವದುವೆ ಹೇರಾನಂದವಾನಂದ !

ದೇವರಾಜ : ಹೋಗಿ ಬರುವೆನು ತಾಯೆ, ಮತ್ತೆ ಬರುವೆನು ಕಳಿಸು.
ಗಾಯತ್ರಿ : ದೇವನಾಡುವ ಆಟ. ಬಾರದಿಹುದೆಂತಯ್ಯ ?
ಹೊತ್ತು ಮೀರಿತು ಹೋಗು. ಮುಂದಣದು ಬಲು ಚೆಲ್ವು—ಬಾ ಹೋಗು.

[ ಇಬ್ಬರೂ ಎರಡು ಕಡೆಯಿಂದ ಮರೆಯಾಗುವರು. ]

— ತೆರೆ —

## ಎರಡನೆಯ ಪ್ರವೇಶ

[ ಸ್ಥಾನ : ಹೊಸ ಚಿಗುರು ತುಂಬಿರುವ ತರುನಿಕರ ]

ಶ್ರೀಕೃಷ್ಣ : ( ಕೊಳಲನ್ನೂದುತ್ತಿರುವನು. )

[ ಒಬ್ಬೊಬ್ಬರಾಗಿ ಗೋಪಿಯರು ಕಾಣಿಸಿಕೊಳ್ಳುವರು. ]

ಗೋಪನಾಯಕಿ : ಶ್ರೀಕೃಷ್ಣ ಕಮನೀಯಗಾತ್ರ ಓ ಗಂಭೀರ
ನರ್ಮದೆ : ಇಚ್ಛೆಗಾರನೆ ಇನಿಯ ಶಾಮಸುಂದರ ಮಾರ.
ಯಮುನೆ : ಬಾ ಬಾರ, ನೇಹಿಗನೆ ಜಗದೊಂದೆ ಚೆಲುವನೇ
ಶರಾವತಿ : ಆನಂದದಾಗರ್ಭನೆ ಪರಿಪೂರ್ಣಗಾತ್ರನೇ
ಕಪಿಲೆ : ನಾವೆಲ್ಲ ನಿನ್ನವರು, ತಿಳಿವನರಳಿಸು ಬಾ.
ತುಂಗೆ : ಎಲ್ಲವನು ಸೂರೆಗೊಂಡಿಲ್ಲವಾಗಿಸುವೆ ಬಾ.
ಅನಿಬರೂ : ( ಕೃಷ್ಣನನ್ನು ಬಳಸಿ )

ಶೃಂಗಾರ ಶೋಭನನೆ ಮಂಗಳನೆ ಓಪ
ಕುಣಿವ ಬಾ, ಕಾಲವನು ಮರೆತು ಓ ಗೋಪ
ತಾರತಮ್ಯಗಳೆಮ್ಮ ನಾಡಿನೊಳಗಿಲ್ಲ
ಆನಂದದೊಳಗಾತ್ಮವನು ತೇಯ್ವೆವೆಲ್ಲ.

[ ಕುಣಿವರು ]

ಗೋಪನಾಯಕಿ : ಆನಂದವೇ ಧರೆಗೆ ಹರಿಯಿತೇ ಸಖಿ ಆಗೆ
ನರ್ಮದೆ : ಅದರೊಡನೆಯೇ ಇಳಿದು ಬಂತೇನೆ ಈ ಮೋಹ !
ಯಮುನೆ : ಕೃತತ್ರೇತೆಗಳ ತವಸಿ ಈ ಸೊಗವ ಕಾಣುವನೆ ?
ಶರಾವತಿ : ಮುನಿಗಳಿಗೆ ಕರುಬಾದವಳು ಗೋಪಿಯರು ಕಾಣೆ
ಕಪಿಲೆ : ಬೊಮ್ಮನರಿಯದ ಭಾವವಿದು ದಿವ್ಯ ಸಂಬಂಧ ?

ತುಂಗೆ : ಜೋಗದಲಿ ಮರವಡುಪನವಗೇಕೆ ಈ ಬಂಧ ?
ಶ್ರೀಕೃಷ್ಣ : ನೀವೆ ರಸ ಶ್ರೀಮಂತೆಯರು ರಸಿಕ ಹೆಣ್ಣುಗಳೆ
ಗೋಪನಾಯಕಿ : ಸೊಗಸಿದ್ಧಿಯರು ನಾವೆ ನೀನಿರಲು ಓ ಬಾಳೆ
ಶ್ರೀಕೃಷ್ಣ : ಎಲ್ಲ ನಿಂದೆಯ ಸಹಿಸಿ ನನ್ನ ಕೂಡುವಿರೇಕೊ ?
ಗೋಪನಾಯಕಿ : ಬದುಕಿನಮೃತವೆ ನೀನು ಉಳಿದ ಬಾಳೇತಕೋ !
ಶ್ರೀಕೃಷ್ಣ : ಆನಂದ ಬಿಂದುಗಳು ಓ ಚೆಲ್ವೆಯರೆ ನೀವು.
ಗೋಪನಾಯಕಿ : ನಮ್ಮದಾ ಸೌಭಾಗ್ಯ ಏಕಿಲ್ಲವೆನ್ನುವೆವು.
ಸರ್ವರೂ : ದಿಪದ ಭಾಗ್ಯವೆ ನಮ್ಮ ಕೃಷ್ಣನಾಗಿರಲು
ಬಾಳು ಬೆಳಗುವುದೆಂಬ ಈ ಸಿರಿಯ ಮರಳು
ಬನ್ನಿರೇ, ಸತ್ಯ ಸೌಂದರ್ಯಕಿದುವೆ ತಾಣ
ಹಿಂದು ಮುಂದನು ಮರೆತು ಕುಣಿದು ಕುಣಿಯೋಣ.

[ ಕುಣಿವರು ]

ಶ್ರೀಕೃಷ್ಣ : ( ಬಿಡುತೆಗೊಂಡು ಬೆದಕುವ ಕಣ್ಣಳಿಂದ ನೋಡುವನು. )
ಗೋಪಿಯರು : ( ಕುಣಿತವನ್ನು ನಿಲ್ಲಿಸುವರು. )
ಶ್ರೀಕೃಷ್ಣ : ನಲ್ಲೆಯರೆ, ಕಾಳಿಂದಿಯನು ಕಾಣೆಯೇಕೇಸೊ ?
ಬಿರುನುಡಿದೆನೇನವಳ ? ಸಿಡುಕೊ ಚಪಳೆಗೆ ಹೇಳಿ ?
ಶರಾವತಿ : ಬರೆವೆನೆಂತದನಾಣ್ಮ ! ಅವಳು ಆ ಕಟ್ಟುಗ್ರ
ಶಿಕ್ಷೆಯಲಿ ಬವಣೆಗೊಳುತಿಹಳಯ್ಯೊ ಗೋಳಿಟ್ಟು !
ಶ್ರೀಕೃಷ್ಣ : ಅಪರಾಧವೇನೇಕೆ ನೋಯುವಳು ನುಡಿ ಎಲಗೆ
ನಮಗಿನಿಯಳಹುದಹುದು ಕಾಳಿಂದಿ. ಒರೆ ಕೇಳ್ವೆ.
ಶರಾವತಿ : ಅವಳಾತ್ಮದರಿಲಾವಗಂ, ಕೃಷ್ಣ ಕಮನೀಯ, ನಿನ್ನತ್ತ ನಿತ್ಯ
ಬಿಡಗಣ್ಣಿನಲಿ ನೋಡುವುದೆ ಕೇಡು. ಕಾಳಿಂದಿಯಾನಂದ ಕೇಳು
ಕೃಷ್ಣೆಗೇಕೋ ಕರಬು. ನಾವರಿಯದರ್ಥವನು ಶೀಲವನು ಸುತ್ತಿ,
ಶಿಕ್ಷಿಸುತ್ತಿಹಳಯ್ಯೋ, ಈ ಕೂಟವನು ಕೆಡಿಸಿ.' ತಡೆವಳೆಂತವಳು !
ನಿನ್ನೆ ನಡೆದುದ ಕೇಳು. ಬಿದುಗೆಯ್ಯನಿಳುಹಿದನು ಬೆಳ್ಳಿ ತೊರೆಯನ್ನು
ಕಾಡುನಾಡೆಯವನು ಸುಧೆಯ ಸಂಭ್ರಮ ಸುತ್ತಿ ತೇಂಕಾಡಿಸಿತ್ತು.
ಈ ಇವಳ ರಸದೆದೆಯ ಮುನ್ನೀರು ಮೊಗೆದೆದ್ದು ನೊರೆಯ ಚಿಮ್ಮಿತ್ತು ;
ಇನಿಯನನು ಸ್ವಾಮಿಯನು ಕಾಣುವಾತುರದಲ್ಲಿ ದೇಹವನು ಮರೆತು.
ನೋಡಿದಳು ಆ ಕೃಷ್ಣೆ ! — ಏನೆಲಗೆ ಕೀಳ್‌ಹೆಣ್ಣೆ, ಹಿರಿಯಳಾನಿಹೆನು.
ನನ್ನ ಕಣ್ಣನು ಮುಚ್ಚಿ ನಡೆವ ಸಾಹಸವೇನು ! ನಿನ್ನ ಇರವೇನು !
ನಡೆ ತೊತ್ತೆ ಮನೆಯ ಚಾಕಿಗೆಸೆ ನಡೆ. ಕಡೆಗೋಲ ಕಂಬಕ್ಕೆ ಕಟ್ಟಿ,

ಕ್ಕೇಳಿ ಬಡಿಯುವೆನು ; ದೇವತೆಗಳೆಲ್ಲರನು ಕರೆ ಬಿಡಿಸಿಕೊಳ್ಳಿ-
ಎಂದುರಿದು ಸತ್ಯಕುರಿಯಂತೆಳೆದು ಬಾಗಿಲನು ಮುಚ್ಚಿದಳು ಉಯ್ಯು.
ಓ ಸರಕ ! ನರಕಮೆಲೆ ಸಖಿಯರಿರ ! —ಭಕ್ತವತ್ಸಲ ಕೃಷ್ಣ ಪ್ರೊರೆಯ !—
ಎಂಬ ಪೆಣ್ಬುಯ್ಯಲದು ತುಂಬುತಿರಲಿಲ್ಲ ಆ ಕೃಷ್ಣೆ ಮತ್ತೆ,
ಕಸೆಗೋಂಡು ಮರದ ಕೊರಡೆಂದೆಣಿಸಿ — ಎಲ್ಲಿ ಆ ಕೃಷ್ಣನೆಂಬವನು !
ಕರೆ ತುಡುಗಿ, ಬಾಸುಳಂ ಬಿಡಿಸುವೆನು — ಎಂದು ಕೆಡೆ ಬಡಿದಳಹ ಮಲೆತು!
ಹೆಣ್ಣವಳ್ವುಸುರ್ಗಟ್ಟಿ ಬಸವಳಿದು ಜೇಯುತಿರುವಳು ನೊಂದು ಕಂದಿ.

ಗೋಪನಾಯಕಿ : ಎಂಥ ಚೆಲುವವಳಲ್ಲಿ ! ಆ ನಡುವೆ ರೂಕ್ಷತೆಯೆ ?
ಇದುವೆ ಸೋಜಿಗ ನನಗೆ, ದಾತಾರನಲ್ಪಮತಿಗೆ.

ಸರ್ಪಜೆ : ನಮ್ಮನನು ಸಿತಗನೆಂದೆಂಬ ಸಿಡುಕೇತಕೋ !

ಯಮುನೆ : ಸೌನ್ದರ್ಯ ಸಾಧಕಳದಾರವಳು ಪಗೆಯುವಳು
ಚೆಲುವನ್ನು, ಈ ನಮ್ಮ ವೇಣು ಮಾಧವನನ್ನು !
ಎಲ್ಲಿ ಕಲೆಯನು ಬಲ್ಲ ಆ ಕೃಷ್ಣೆ ಸಿಡುಕುವಳೆ ?

ಶ್ರೀಕೃಷ್ಣ : ಕಲಾವಿದಳದಾರವಳು ? ಕಾಣೆನೆಂದೂ ನಾನು.

ಗೋಪನಾಯಕಿ : ಕೃಷ್ಣೆಯೆಂದಭಿದಾನ. ನೀನ್ನೊಮ್ಮೆ ಕಾಣವಳ
ಒಮ್ಮೆ ಕಂಡರೆ ಸಾಕು. ಓಡಿ ಬರುವಳು ಅವಳೆ.

ಶರಾವತಿ : ಬೇಡ. ಅದು ಹುಸಿಯಾಸೆ. ಬಲ್‌ನಿಷ್ಠೆ ಕೆಣಕದಿರು.

ಗೋಪನಾಯಕಿ : ಎಲ್ಲರೆದೆಗಳ ತಣಿಸಿ ಮೆರೆಸಲೆಂದೇ ಕೃಷ್ಣ-
ನವತಾರ. ಹಿಂದೆ ಮಾಡಿದ ಪುಣ್ಯ ಕೃಷ್ಣೆಯನು
ಗೋಕುಲಕೆ ನೂಕಿರಲು ಕಾಣಬೇಡವೆ ಕೃಷ್ಣ ?
ನಡೆಸಬೇಡವೆ ಅವಳ ನಮ್ಮಂತೆ ? ಓ ಕೃಷ್ಣ
ನೀ ಕಾಣಬೇಕವಳ ; ಕಂಡು ಕರೆತರಬೇಕು.

ಕಪಿಲೆ : ಬರಬೇಕು ಬಹು ಕಲೆಯ ಕೋವಿದಳು. ಬಂದೆಮಗೆ
ಹೊಸಹೊಸತು ಕಲ್ಕೆಗಳ ಕೇಳಿಗಳ ಕಲಿಸಬೇಕು.

ತುಂಗೆ : ಬಳೆದವಳು, ಅರಿತವಳು ! ನಲವು ಒಲವುಗಳುಂಟು.

ಶರಾವತಿ : ಹೆಚ್ಚು ಸುಖವನು ಬಯಸಿ ಎಲ್ಲವನು ಕೊಲೆಗೊಟ್ಟು
ಬಲಿಯಾಗಿ ಬಯಲಾಗದಿರು ಕೃಷ್ಣ, ಬೇಡುವೆನು.

ಶ್ರೀಕೃಷ್ಣ : ನಮಗೆಲ್ಲರೂ ಬೇಕು. ಬರುವುದಾದರೆ ನಮ್ಮ
ವನದ ಗಿಡ ಬಳ್ಳಿಗಳು, ಹೂ, ಚಿಗುರು, ಹಣ್ಣುಗಳು
ಮಿಗ ಹಕ್ಕಿಗಳದೆಲ್ಲವೂ ಬರಲಿ. ಅವು ಎಲ್ಲ
ಬರುವಂತೆ ನಮ್ಮ ಪ್ರೇಮವನವಕೆ ಸುತ್ತೋಣ.

ಗೋಪನಾಯಕಿ : ತುಂಬು-ಜೊನ್ನವ ಸವಿದ ಬಿದುಗಲ್ಲೆ ಆಗುವಳು

ಆ ಕೃಷ್ಣೆ ಶ್ರೀಕೃಷ್ಣನನು ಕಂಡು. ಅಳುಕೇಕೋ !
ಶ್ರೀಕೃಷ್ಣ : ಸಾಕಿಂದು ಹೋತ್ತಾಯ್ತು. ಮಡುಮಳಲ ತಳಿರಲ್ಲಿ
ನಾಳೆ ಸೇರುವ ಮತ್ತೆ. ಹೊಸಹೊಸತು ರಾಗಗಳ
ನಾದದಲೆಗಳ ಬಿಡಿಸಿ ಕೂಡಿ ಕುಣಿಯೋಣವೆಲ್ಲ.
ಗೋಪಿಯರು : (ಶ್ರೀಕೃಷ್ಣನನ್ನೇ ನೋಡುತ್ತ ಹೆಜ್ಜೆಗಳನ್ನು ಕಿತ್ತು ಕಿತ್ತಿಕ್ಕುತ್ತ ಅರಳಿ ಮರೆ
ಯಾಗುವರು.)
ಶ್ರೀಕೃಷ್ಣ : (ಅವರನ್ನು ಮಂದಹಾಸದಿಂದ ನೋಡುತ್ತ ನಿಲ್ವನು.)

— ತೆರೆ —

## ಮೂರನೆಯ ಪ್ರವೇಶ

[ಸ್ಥಾನ : ಗೋಕುಲದಲ್ಲಿ ಕೃಷ್ಣೆಯ ಗುಡಿಸಿಲಿನ ಮುಂದೆ]

[ಬೆಳುದಿಂಗಳ ಅದೇ ಮನೋಹರತೆ ಮನೆಮಾಡಿರುವಾಗ ದೇವರಾಜ ಮತ್ತು ಗಾಯಿತ್ರಿ
ಯರು ಒಂದೊಂದು ದಿಕ್ಕಿನಿಂದ ಪ್ರವೇಶಿಸುವರು.]

ದೇವರಾಜ : ಮಣಿಯುವೆನು ಮಾತಾಯಿ, ಬಾನೆರೆಯನೆರಗುವೆನು.
ಗಾಯಿತ್ರಿ : ಹೊತ್ತಿನಲಿ ಬಂದೆ ಬಾ, ಆಟವನು ನೋಡು ಬಾ.
ನಾಂದಿ ಮುಗಿಯಿತು ಸಂಜೆ. ಭವ್ಯವನು ಕಾಣು ಬಾ.
ದೇವರಾಜ : ನಡೆದುದೇನದು ಸಂಜೆ ?
ಗಾಯಿತ್ರಿ : ನಡೆದುದೇ ? ನೇರವಾಯಿತು ಎಣಿಕೆ ! ನೋಡುತಿರು.
ದೇವರಾಜ : ಪ್ರೇಮದುರಿ ಮುಟ್ಟಿತೇ ಕೃಷ್ಣನೆದೆಯನು ದೇವಿ ?
ಗಾಯಿತ್ರಿ : ಅದರ ಮೊದಲಿದೇ ನಿಲ್ಲು.

(ದೂರದಲ್ಲಿ ಕೊಳಲು ಕೇಳ್ವುದು)

ಅದೊ, ಮಾಧವನು ರಾಜ. ಅರುಗಾಗು ಬರುತಿಹನು.
ಇಬ್ಬರೂ : (ಬಯ್ತುಕೊಳ್ವರು)
ಶ್ರೀಕೃಷ್ಣ : (ಪ್ರವೇಶಿಸಿ ಕೊಳಲನ್ನೂದುವನು)
ಕೃಷ್ಣೆ : (ಪಡಿದೆರೆದು ಆಲಿಸಿ ಕೇಳ್ವಳು)
ಶ್ರೀಕೃಷ್ಣ : ಕೊಳ್ಳಲಾಟ ಚೆಂದವೇ ಓ ಕೃಷ್ಣೆ.
ಕೃಷ್ಣೆ : ಯಾರವನು ?
ಶ್ರೀಕೃಷ್ಣ : ಕಾಣೆಯಾ ಓ ಕೃಷ್ಣೆ ? ಕೃಷ್ಣನನು ಕೇಳ್ದರಿಯೆಯಾ ?
ಕೃಷೆ : ಬಂದೆಯಾ ?

ಶ್ರೀಕೃಷ್ಣ : ಬಂದಿರುವೆನೆಲೆ ಚೆಲುವೆ, ನಿನ್ನೊಳಗನೀಕ್ಷಿಸಲು.

ಕೃಷ್ಣೆ : ಎನ್ನೊಳೇನಿಲ್ಲ ನಡೆ (ಬಾಗಿಲಿಕ್ಕುವಳು)

ಶ್ರೀಕೃಷ್ಣ : ಎಲೆ ಗೋಪಿ, ನಾಂ ಕೇಳೆನೇನನೂ, ಪಡಿಯ ತೆರೆ.

ಕೃಷ್ಣೆ : ಗಂಡುಸಿಲ್ಲದ ಬೀಡು. ನಡೆ ತೆರೆಯೆ.

ಶ್ರೀಕೃಷ್ಣ : ಇಲ್ಲದಿರಲೇನ್ ಕೆಡುಕು ? ನಾನೊಳಗೆ ಕಾಲಿಡೆನು.
ಗೋಕುಲದೊಳೆಲ್ಲರೂ ಈ ಕೊಳಲು ಚೆಂದವೆಂ-
ದಾಡುವರು. ನೀನು ಪರಿಣತೆಯಂತೆ ತಿಳಿಸುವೆಯ ?
ದಿಟ, ನಾನು ದುಷ್ಟನೇ. ಒಪ್ಪುವೆನು ಎಲೆ ನಿಷ್ಠೆ.
ಈ ಕೊಳಲು ನಿರ್ದೋಷ. ನಾಡ ಕಿಲುಬಾವುದೂ
ಕಲೆಗಂಟದೆಂಬುದನು ಅರಿತವಳು ನೀ ಬಲ್ಲೆ.
ಚೆಲುವೊಲವು ಕಲೆಗಳನು ಬಲ್ಲವರು ತೆಗಳುವರೆ ?
ಕೀಳ್ಗೈಯ್ಮೆ ಬೇಡ, ಬೇಡೆಲೆ ಗೋಪಿ, ಕದವ ತೆರೆ.

ಕೃಷ್ಣೆ : (ಮಾತನಾಡುವುದಿಲ್ಲ)

ಶ್ರೀಕೃಷ್ಣ : ದಿಟ್ಟೆಳೆಂದರು ಯಾರೊ ! ಹಿರಿಯರಾಳಿದ ಇಲ್ಲಿ,
ಗಂಡುನೆಲವಿದರಲ್ಲಿ, ಅಂಜಿ ಅಡಗುವ ಹೆಣ್ಣು
ಇಹಳೆಂತೋ ! ದಿಟವಿದಚ್ಚರಿ ನಮಗೆ ಗೋಕುಲಕೆ !

ಕೃಷ್ಣೆ : (ಹೊರಬಂದು) ಏನಂದೆ ?

ಶ್ರೀಕೃಷ್ಣ : ಹಂದೆ ಹೆಣ್ಣೊಂದೆಂದು ನುಡಿದು ತೋರಲೆ ಮತ್ತೆ ?

ಕೃಷ್ಣೆ : ನಾನೆಲ್ಲರಂತಲ್ಲ. ತೆಗೆದರಂಜಿಕೆಯಿಲ್ಲ.

ಶ್ರೀಕೃಷ್ಣ : (ಈಷತ್ಕಾಲ ದಿಟ್ಟಿಸಿ ನೋಡಿ)
ನಿನ್ನ ರೂಪಿನ ಮುದವು ಕುಣಿತಕೆಳೆಯುತಿದೆ ಬಾ
ಬೆಳುದಿಂಗಳೀಯಿರುಳಿನಲಿ ಕೊಳಲ ನುಡಿಸುತ್ತ
ಗೋಪ ಗೊಪಿಯರೊಡನೆ ಕುಣಿದು ಹಾಡೋಣ ಬಾ –
ಆಡೋಣ ಬಾ

ಕೃಷ್ಣೆ : ಈ ಮಾತು ತರವಲ್ಲ. ನನ್ನವನು ಒಳಗಿಲ್ಲ.

ಶ್ರೀಕೃಷ್ಣ : ಇಲ್ಲದಿರಲೇನ್ತೊಡಕು ? ಮುದವ ಕೂಡಿಸುವೆ ಬಾ,
ಮನಕೆ ಮನ ಬೆರಸು ಬಾ. ಓಡಿ ಬಾ, ಆಡು ಬಾ.

ಕೃಷ್ಣೆ : ನಿನ್ನ ಎಣಿಕೆಯ ಹೆಣ್ಣು ನಾನಲ್ಲ, ಹೋಗಿ ಬಾ.

ಶ್ರೀಕೃಷ್ಣ : ನನ್ನ ಎದೆಯಾಸೆಯನು ಎಲ್ಲ ಜೀವಗಳಲ್ಲಿ
ಕಾಣಲೆಳಸುವೆ ಕೃಷ್ಣೆ. ಕಂಡೆನಾದರೆ ಸಾಕು,
ದಾಸನಾಗುವೆನೊಲಿದು. ನನಗಂಟಿ ಬಂದುದದು.
ಏನಗೆಯ್ಯಲಿ ಹೇಳು. ಬೇರೆ ಇದ್ದರೆ ತೋರು.

ಕೃಷ್ಣೆ : ಸಕಲ ಪರಿವೇಷ್ಠಿತನು, ಸರ್ವಶುಭದಾಗರನು,
ಗೋಪಾಲನಾಯಕನು, ಗೋಪಿಯರ ಮನ್ಮಥನು,
ದಾಸನೇಕಾಗುವನು ? ಸಾಕಿರಲಿ ಹೋಗಿ ಬಾ.

ಶ್ರೀಕೃಷ್ಣ : ನಾನಂಥ ಕೀಳನೇ ! ಮಾನಗೆಟ್ಟವನೇನು ?

ಕೃಷ್ಣೆ : ಕೀಳನೆಂತಾಗುವೆಯೊ. ಬಹು ಭೋಗ ಭಾಗ್ಯನೆ !

ಶ್ರೀಕೃಷ್ಣ : ಎಲೆ ಶುಭವೆ, ಓ ಸಿರಿಯೆ, ಓ ನನ್ನ ಭಾಗ್ಯವೇ, ಭೋಗವೇ ಆಹ !
ನೀವೆಲ್ಲ ಪಳಿನುಡಿಯು ಬಳಿಯಲೆಂದೇ ಕೇಳಿಗೊಂಡಿರಾ ಹೇಳಿ ?
ಹೆತ್ತಮ್ಮ ದೇವಕಿಯೆ, ಬಸಿರಲ್ಲ ಉಸಿರಲ್ಲ ನಿನಗಾಗಲಿಲ್ಲ.
ಏಳ್ವರಣ್ಣಂದಿರನು ನುಂಗಿ ಬಂದೆನು ತಾಯೊಡಲಿನಿಂದ. ಸೂಲ್‌ಮುಲುಕು
ಮಾಯ್ವಂತೆ ಕಂದನಾನಂದವನು ಕಾಣಿಸದ ಪಾಪಿ ನಾನಮ್ಮ.
ಓವಿದವಳಾ ತಾಯಿ ಬಲ್‌ಗಟ್ಟಿ ಹರಕೆಯನು ಕಟ್ಟಿ ಬಿಟ್ಟಿಹಳು.
ಇಂದೇನ ಕಾಣುವಳು ?– ಈ ತುಂಟ ಮಗನನ್ನು ! ಅಯ್ಯೋ ಓ ಫಲವೆ !
ನಂದವಸುದೇವರೇ, ಹೆತ್ತ ಬಸುರಿಗೆ ಯಾವ ಸುಖ ತುಂಬಿದೆನೊ !
ಜನವೆ, ಬೃಂದಾವನವೆ, ಹೇ ಯಮುನೆ, ತಿಳಿನೀರೆ, ತುರುಗಳೇ, ಕಾನೇ !
ಕಳೆದ ಬದುಕಿನಲೇನಗೆಯ್ದಿರೋ ! ಕೊರಗುತಿಹಿರೆನ್ನ ಕತದಿಂದ !
ಉಗ್ರಸೇನರು ಅವರು ಹಿರಿಯರಿವ್ರಗೊಂಡವರು–ನೆನೆವಿನೋ ಏಕೆ ?
ನೆನೆವ ಯೋಗ್ಯತೆಯುಂಟೆ ? ಬರ್ದಿಲದ ಹಿರಿಯರಾರ್ಜಸಿದ ಓ ಜಸವೆ,
ಕೆಚ್ಚನಭಿಮಾನವನು ಮಾನವನು ನಲ್ಲರಿವನಿನ್ನಾದರೂ ನೀಡು.

ಕೃಷ್ಣೆ : ನಿನ್ನ ಬಗೆ ನೂರು ತೆರ. ಅದರೊಳಗಿದಾವುದೋ !
ನಡೆನುಡಿಗಳೊಂದಾಗೆ ಬಾಳುವುದನಭ್ಯಸಿಸು.

ಶ್ರೀಕೃಷ್ಣ : ಇದು ನೇರವೆಂದೆನಿಸುತಿದೆ ಕೃಷ್ಣೆ. ಅದೆ ಇರಲಿ.

ಕೃಷ್ಣೆ : ನಿನ್ನ ಜಾಡನೆ ಹಿಡಿದೆ. ಅರಿವೆನರಿವೆನು ಕೃಷ್ಣ
ಹೊಸ ಚದುರ ನೀ ಕೃಷ್ಣನೆಂಬುದಿಂದಿನ ಮಾತು.

ಶ್ರೀಕೃಷ್ಣ : ನೆಲದ ಮಾತಂತಿರಲಿ. ನಿನ್ನ ಮಾತೇನುಸುರು.
ಬೆಳುದಿಂಗಳಿದು ಹಾಳಾಗುತಿಹುದಯ್ಯೊ ಕೃಷ್ಣೆ.
ಹೊಸತು ಕೆಳೆತನವಿದನು ಕುಣಿದು ಮೊದಲಿಡುವ ಬಾ.

ಕೃಷ್ಣೆ : ಎಚ್ಚರಿಕೆ ಹೇ ಕೃಷ್ಣ ! ಅಡಿಯೆತ್ತಿ ನಡೆ ಬೇಗ !
ನೀನ್ ಕನಸಿನೆಲೆ ಭೋಗವನ್ನುಂಡೆ ನಡೆ ಬೇಗ !

ಶ್ರೀಕೃಷ್ಣ : ಕನಸಲ್ಲ ದಿಟ ಇದು. ಹೊಂಗನಸೆ ಆಹಹಾ !

ಕೃಷ್ಣೆ : ಚಕ್ಕಂದವೇ ತರಳ ! ಕ್ರೂರವನು ಕಾಣದಿರು !

ಶ್ರೀಕೃಷ್ಣ : ಗೋಕುಲದ ಬಲವೆಲ್ಲ ನನ್ನದೆಂದೆನ್ನುವರು
ಬಾ ಕೃಷ್ಣೆ, ಕೊಳಲಿನಲೆಗಳ ಮೇಲೆ ತೇಲುತ್ತ

ಕೇಳಿ ಹೋಗೋಣ ಬಾ; ಓಡಿ ಹೋಗೋಣ ಬಾ !

ಕೃಷ್ಣೆ : ಕೋಳಲಾಣೆ ! ಬಾರದಿರು, ದುಡುಕದಿರು ಕೃಷ್ಣ !

(ಬಾಗಿಲನ್ನಿಕ್ಕಿಕೊಳ್ಳುವಳು)

ಶ್ರೀಕೃಷ್ಣ : ಎಲೆ ಕೆಚ್ಚೆ, ಸಾಹಸವೆ, ಎದುರು ನುಡಿ ಏಕೇನೊ !

ಅನ್ಯಾಯವೇನೊ !

ನಾ ತಪ್ಪಿ ನಡೆದಿಲ್ಲ ಕೃಷ್ಣೆ, ನಡೆವಂತೆಯೂ ಇಲ್ಲ. ತಪ್ಪುವಳು ನೀನೆ.
ವಿಧಿಯಾಸೆಗೆದುರಾಗಿ ಬಾಳ್ವೆನೆಂಬುವ ನಿನ್ನ ಈ ಕೆಚ್ಚೆ ಕೆಚ್ಚು !
ನಿನ್ನ ಅಜ್ಞಾನವನು ನಾನ್ ನೊಂದು ಅನುಭವಿಸುವೆನು ಮುಗಿಸಿ.
ಜನದ ಹಿತಕೆಂದಂದು ಶಿವನಂದು ನಂಜನುಂಡಂತೆ ನಾನಿಂದು
ಗೋಕುಲದ ಈಯೊಂದು ಕರೆ ತೊಳೆಯಲಾಗದೇ ? ಆಯ್ತು ಬಿಡು ನಡೆವೆ.

(ಹೋಗುವನು)

ಗಾಯಿತ್ರಿ : ಮೈಮರೆತೆಯಾ ರಾಜ ?

ದೇವರಾಜ : ಎಚ್ಚರಾಯಿತು ತಾಯೆ.

ಗಾಯಿತ್ರಿ : ಕಣ್ಣಾರೆ ಕಂಡಿರುವೆ ಕಾಮನನು ಕಳುಹು ನಡೆ.

ದೇವರಾಜ : ಕಾಮನೇತಕೊ ಕಾಣೆ. ಕಾಮಜನಕನೆ ಇಲ್ಲಿ –

ಗಾಯಿತ್ರಿ : ಮಧುರಭಾವವು ಸುಪ್ತವವಳಲ್ಲಿ ಕೇಳಣ . .
ಕುಸುಮ ಬಾಣವನೆಚ್ಚು, ಮುಸುಕನೊಡೆಯಲಿ ಅವನು.

ದೇವರಾಜ : ಕಳುಹುವೆನು ದೇವಿ, ಇಂದೀಗಲಟ್ಟುವೆನು.

(ಹೋಗುವನು)

ಗಾಯಿತ್ರಿ : (ಗೋಕುಲದತ್ತ ನಟ್ಟ ದಿಟ್ಟಿಯಿಂದಭೀಕ್ಷಿಸುತ್ತಿದ್ದು)
ಆದಿಯಿಂದಿದುವರೆಗೆ ಸೋಂತ ಸಾಧಕರೆ,
ಬನ್ನಬಟ್ಟೆರಿ ತಪದಿ ಬ್ರಹ್ಮವನು ಸೇರೆ
ನೀವಾಯ್ದ ಮಧುರಭಾವವೆ, ಬಲ್ಲೆ, ಒಳಿತು.
ಗುರಿಯ ಸೇರುವಿರೆಲ್ಲ ನಲ್ಲನನು ಬೆರೆತು.

(ಹೋಗುವಳು)

— ತೆರೆ —

## ನಾಲ್ಕನೆಯ ಪ್ರವೇಶ

[ಸ್ಥಾನ : ಬೃಂದಾವನ]

[ಗೋಪಿಯರು ತಮ್ಮ ದುಕ್ಖವನ್ನು ತೋಡಿಕೊಳ್ಳುತ್ತಿದ್ದಾರೆ]

**ಗೋಪನಾಯಕಿ :** ಏನೆ ಸಖಿ, ಗೋಕುಲವದಿಂತಾಯ್ತು ಮುಂದೇನು ?

**ನರ್ಮದೆ :** ನನ್ನ ಮನಸೂ ಮಂಕು ಎಲೆ ಕೆಳದಿ ಗತಿಯೇನು ?

**ಯಮುನೆ :** ವನವೆ ಗೋಳಿಡುತಿಹುದು ಯಾವ ದೇವತೆ ಮುನಿಸು ?

ಶರಾವತಿ : ಸಖಿ ಕೃಷ್ಣೆ ಕಣ್ಣೆದುರೆ ಇಹಳಲ್ಲವೀಕ್ಷಿಸು.
ಕಪಿಲೆ : ಅವಳೋ ಬರಿ ಕಾರಣಳು. ಇದರ ತೆರ ಬೇರೆ ಸಖಿ.
ತುಂಗೆ : ಅವಳ ನುಡಿಯೇ ಸಲ್ಲ. ಓ, ಹೊಲ್ಲ ಚಂದ್ರಮುಖಿ !
ಗೋಪೀವೃಂದ : ತಪ್ಪು ಒಪ್ಪುಗಳಿರಲಿ ಮನವಿಂದು ಕಪ್ಪು
ಬೆಳಕು ಚೆಲ್ಲುವುದಾವುದೋ ಹಿರಿಯ ಮುಪ್ಪು
ಎಲೆ ದೇವ ದೇವಿಯರೆ ಮರುಕವನು ತಳೆದು
ಬಿಸಿಲಲೆಗಳನು ಚೆಲ್ಲಿ ಬನ್ನಿರೈ ಇಳಿದು.
ಗೋಪನಾಯಕಿ : ಅಯ್ಯೋ ಸಖಿ, ಹಾಲು ಹೊಳೆಯುಕ್ಕಿ ಹರಿದಂತಿತ್ತು
ನರ್ಮದೆ : ಅದು ಬತ್ತಿಹೋಯ್ತುಯ್ಯೊ ಈಯುಳಲ ಬಿತ್ತು ಬಿತ್ತು
ಯಮುನೆ : ಶೃಂಗಾರ ಸಾಗರನೆ ಆನಂದದಾಗರವೆ !
ಶರಾವತಿ : ರಸಲೋಕವಸು ಕಡೆವ ಓ ಕೊಳಲ ಮಂಜುಳನೆ !
ಕಪಿಲೆ : ಎದೆಗೆ ಸೊಗವನು ತಾರ ರಾಸಲೀಲಾಮಾರ !
ತುಂಗೆ : ಬಾಳಬಂಚರ ಮಿಡಿದು ನುಡಿಸು ಬಂಧುರ ಸುಂದರಾ !
ಎಲ್ಲರೂ : ಓ ಕೃಷ್ಣ ಶ್ರೀಕೃಷ್ಣ ಇನ್ನೇಸು ದಿನಕೆ,
ತುರು ಕರುವ ತೊರೆ ತಳಿರ ಕೊಳಲ ಬಿನದಕ್ಕೆ,
ಕುಣಿಸುತ್ತ ಮೈಮರೆಸಿ ಮುದವ ನೀ ತರುವೆ ?
ನಿನ್ನ ನಲವಿನ ಸುಖವ ಗೋಕುಲಕೆ ಕೊಡುವೆ ?
ಗೋಪನಾಯಕಿ : ಬದುಕೆಲ್ಲ ಬರಿದಾಗಿ ಉಲ್ಲಾಸವಿಂಗಿದುದೆ ?
ನರ್ಮದೆ : ಓ ಇದುವೆ ಕಾರಿರುಳನೊಟ್ಟೈಸಿ ನಿಂದ ಮೆದೆ !
ಯಮುನೆ : ಕಂಡವರು ಹೇಳಿರೇ ನಮ ಕೃಷ್ಣನೆಂತಿಹನು ?
ಶರಾವತಿ : ಓಡಿಬಂದಿಹೆನಕ್ಕ ನೋಡಲಾರದೆ ನಾನು.
ಕಪಿಲೆ : ಕೇಳಲಾರೆನು ಸಖಿಯೆ ಅದರ ಬಣ್ಣನೆಯೇಕೆ ?
ತುಂಗೆ : ಅವನ ನೋವನ್ನುಂಡು ಹೊರೆಯಿಳುಹಿಕೊಳಲಿಕ್ಕೆ.
ಸಕಲರೂ : ದುಷ್ಟವಿಧಿ, ನಮ್ಮ ಮುದ ನಿನಗೆ ಬೇಡವೇಕೆ ?
ಹೆರರ ನಲಿವಿಗೆ ನಲಿವ ಸಿರಿ ಬಾರದೇಕೆ ?
ಸೃಷ್ಟಿ ಚೇತನಕೆಲ್ಲ ಒಲವೆ ಹೊಸ ಶಕ್ತಿ
ಅದನುಳಿದ ಜೀವ ಚಕ್ರಕ್ಕೆಂತೊ ಮುಕ್ತಿ !
ಒಬ್ಬಳು : ನಾನೆ ಕಣ್ತುಂಬ ಕಂಡೆನು ಅಕ್ಕ, ಮನ್ಮನೋಹರನ ಮಾಧವನ.
ನುಡಿವುದೆಂತೋ ಕಾಣೆ ಕೆಳದಿ, ಪಿಡಿದಾಂಕುತಿದೆ ದುಕ್ಕ ಕುತ್ತಿಗೆಯ.
ಪಗಲಪೆರೆ ಕಂಡಂತೆ ನಮ್ಮೆರೆಯ ಕಳೆಗುಂದಿ ಮಲಗಿರಲು ಅಬ್ಬೆ,
ತಲ್ಲಣಂಗೊಂಡು ಮಗನೆಡೆಗೋಡುತ್ತೈತಂದು ಕೆನ್ನಯನು ಮುಟ್ಟಿ,
– ಓ ಕಂದ, ಮನದ ಬೇಗುದಿಯನಾಡೆನ್ನಲ್ಲಿ; ಕೇಳುವೆನು ಆಡು –

ಎಂದು ಕೇಳಿದ ತಾಯ್ಗೆ ಮಗನೇನನೊರೆವನೊ ! ಅದ ಹೇಳಲಳವೆ !
ಹಾ ! ಒಳಗೆ, ತೋಡಲಾಗದ ಕಿಚ್ಚು ಬೆಣ್ಣೆ ತನಿವಣ್ಣುಗಳು ಹಾಲೆ ?
ಸುಡಿವನೆಂತೋ ಕಾಣೆ ! ಕೃಷ್ಣೆಯಲಿ ಮನಸು ಎಂದೆಂಬನೇ ಎರೆಯ ?
ಪತ್ತೆ ಸಾರ್ದಮ್ಮನಿಗೆ – ದುಗುಡವೇತಕೆ ತಾಯೆ ? ಇದೊ ಬರುವೆ – ನೆಂದ.
ಓ, ಕ್ರೂರ ಮಾಟವೇ, ಹೇಗೆ ಬಣ್ಣಿಸುವೆ ಜಿದಿಯಾಟವಾಕಾಟ !
ತಾಯತ್ತ ಮರೆಯಾಗಲಿಂದು ಹತಕನು ಇತ್ತ ಉದಿಸಿದನು ಮದಿಸಿ;
ಹಾಲು ಹೊಳೆ ವೊಗೆಸಿದನು. ಹಿತನವನು ಅನಿಲ ನೆರವಾದವಾ ಉರಿವ
ಶಿಖಿಗಾಜ್ಯವನು ಎರೆದು. ಮೈಯ್ಯುರಿಗೆ ಮಾಧವನು ಒರಗಿದನು ಬೆಂದು.
ನಯನುಡಿಯು ಕೇಳಲೊಲ್ಲನು ಕೃಷ್ಣ. ಏನೆಂಥ ಪಾಪಿ ಆ ಕೃಷ್ಣೆ !
ಬೀಡಿನಲಿ ದುಗುಡವೆಂದರಿತವನು, ಓ ಅದೋ, ಆ ಬಳ್ಳಿವನೆಗೆ
ಹೋಗಿ ಮಲಗಿಹನಮ್ಮ. ಉಣ್ಣನೀಂಟನು ಉಡನು; ಬಹಳ ಸೊರಗಿಹನು.
ಹೇಳುವೆನೆ ಸಖಿಯರೆ, ಆ ಅವನ ಸಂಕಟವನಳೆಯುವೆನೆ ನಾನು !
ಹಾಸಿಗೆಯು ಹೊಸ ಚಿಗುರು ಕೌಳುಡೆಯು ಕಮ್ಮಲರು ಮೆಯ್ಯುರಿಗೆ ಬಾಡಿ
ಕಪ್ಪಾದ ಹಿರಿ ರಾಶಿ ಯೊರಗಿಹುದು. ಈ ನೋವಿಗೆಂತಾಗುವೆವೋ !
ಎಲ್ಲ ಹಿರಿಯರು ಕೃಷ್ಣನನು ಬಳಸಿ, ಭೂತವೆಂದರು ಕೆಲರು; ಕ್ರೂರ
ಶಕ್ತಿಗಳ್ಕಾಡುತಿಹರೆಂದಲ್ಲ ಹರಕೆಯನು ಕಾಣ್ಕೆಯನು ಕಟ್ಟಿ,
ಮಗನ ಮಂಗಳವನ್ನು ಉಳಿಸಿಕೊಡಿರೆಂದೆಲ್ಲ ಬೇಡಿದರು ನೊಂದು.

ಗೋಪನಾಯಕಿ : ನೀನೆ ಸಖಿ ಸೇವಿಸುವ ಸೌಭಾಗ್ಯವನು ಕಂಡೆ.

ನರ್ಮದೆ : ಯಾವ ಒಳ್ಳಿತಕೇನೊ ಬಂದೆರಗಿತೀ ಪೀಡೆ.

ಯಮುನೆ : ಓ ಕೃಷ್ಣೆ ಈ ಛಲದಿ ನಿನಗಾವ ಸುಖವುಂಟು!

ಶರಾವತಿ : ಎಲ್ಲರಾನಂದನೊಡನೇಕೆಯೋ ಕಟು ಕಂಟು !

ಕಪಿಲೆ : ಒಳಗಣ್ಣಿನಿಂ ನೋಡ ನಿನ್ನ ಭಾಗ್ಯದ ತೌರ.

ತುಂಗೆ : ಏಸು ದಿನ ಕಾರುವುದೋ ಈ ದುಕ್ಕ ಮುನ್ನೀರು !

ಅವರೆಲ್ಲ : ಹಾ ಅಯ್ಯೊ, ಚಿರದುಃಖವಮರಿತೇ ನಮಗೆ !
ತಿಳಿಮೂಡಿಸುವರಾರೊ ನಮ ಬೆಂದ ಬಗೆಗೆ !
ಒಳಗಿರದ ಹೊರಗೆ ಬಾರದ ಹಿರಿಯ ನೋವೆ,
ನಮ್ಮ ಭಾಗ್ಯದ ದೇವಿ ತಿಳಿಸು ಬಾರೆಲವೆ.

ಗಾಯಿತ್ರಿ : (ಕಾಣಿಸಿಕೊಂಡು)
ಮಕ್ಕಳಿರ, ನಿಮ್ಮಳಲು ನಾಕವನೆ ಕುದಿಸೀತು !
ಮನದ ಹಸುರದು ಪಣ್ತು ಸೊಗನಡುವಿರೌ ಬಾಳಿ.

ಗೋಪನಾಯಕಿ : ನಮ್ಮ ಗೋಳನು ಕೇಳ್ವೆ ಓ ತಾಯಿ ನೀನಾರೆ ?

ಗಾಯಿತ್ರಿ : ಗಾಯಿತ್ರಿ ನಾನಮ್ಮ ನನ್ನೆಂದು ಕಾಣಿರೇ ?

ನರ್ಮದೆ : ತಣ್ಣಗಿರು ತಣ್ಣಗಿರು ತಾಯೆ, ನಲ್ ಒಸಗೆ ತಂದೆ.
ಯಮುನೆ : ಕರಿ ಮುಗಿಲುಗಳ ಸರಿಸಿ ಬಿಸಿಲಾಗಿ ಐತಂದೆ.
ಶರಾವತಿ : ಕಪ್ಪು ಕರಗುವ ಮಾಯೆ ನಮಗೆ ತಿಳಿಯದು ಕಲಿಸು.
ಗಾಯಿತ್ರಿ : ಇಂದೀಗ ನಾನದಕೆ ಬಂದಿರುವೆನೊಲಿದಾಲಿಸು.
ಕಪಿಲೆ : ಮೊಳ್ಳುವೆನು ಮಾತಾಯಿ ಓ ದಿವ್ಯೆ ಓಂಕಾರೆ.
ತುಂಗೆ : ಓ ವೇದಮಾತೆಯೇ ತುಳಿಲೊಪ್ಪಿಕೊಳು ಬಾರೆ.
ಅಖಿಲರೂ : ಆ ಸತ್ಯಸಾಗರದ ಹಿರಿ ಚೆಲುವಿನಲರೇ

ಈ ನಾಡ ಸಗ್ಗವಾಗಿಸುವಂಥ ಚದುರೆ
ಕೃಷ್ಣೆಯೀ ಮೊಂಡಾಟ ಸಹಜವೇ ಹೇಳು
ಅವಳಿಂದಲೀ ಪಾಡು ಗೋಕುಲಕೆ ಕೇಳು.

ಗಾಯಿತ್ರಿ : ಕಣ್ಣನೊರಸಿಕೊಳ್ಳಿ ಕನ್ನೆಯರ,ನೀವೆಲ್ಲರೊಂದಾಗಿ ಇದು ಯಾವ ಮಾತು!

ಓ, ಕಾಣುವುದೆ ಗೋವರ್ಧನದ ಗಿರಿ ನಿಮ್ಮಿನಿಯನೊಲ್ಮೆಯಾ ಚೆಲ್ವು ?
ನೋಡಿರುವಿರೇನಲ್ಲಿ ಕಿಬ್ಬಿಯಲಿ ಯಮುನೆ ಹಾಲ್ಬಂಡೆಗಳ ಧುಮುಕಿ,
ಬಣ್ಣ ಬಣ್ಣದ ಬಿಲ್ಲುಗಳನೆತ್ತಿ ಮುತ್ತುಗಳ ಚೆಲ್ಲಾಡುವುದನು ?
ಅಲ್ಲಿಯೇ ಬಲ ಮುರಿಯ ಸಂಕಿನೋಲ್ಸಮೆದಮೃತಗಲ್ಲಿನಾ ಗುಹೆಯು.
ಅವನು ಆ ಮನ್ಮಥನು, ಈ ನಿಮ್ಮ ಭಾವವನು ಹೊಮ್ಮಿಸುವ ಸೋಮ,
ಮಾಗಿ ಮುಗಿದುದ ನೋಡಿ ಬೀಡು ಬಿಟ್ಟಿಹನು ಹೂಬಾಣಗಳ ತೊಟ್ಟು.
ನೋಂಪಿಯನು ಕೈಕೊಂಡು ಒಲಿಸಿಕೊಳಿ. ಬಯಕೆಗಳ ಸಲಿಸುವನು ಹೋಗಿ.

ಗೋಪನಾಯಕಿ : ನಿನ್ನುಪಕೃತಿಗೆ ಮಣಿಯುವೆವು ಮಹತಾಯಿ.
ನರ್ಮದೆ : ಕೈಮುಗಿವೆನಿಂದಿನಂತಾವಗಂ ನೀನ್‌ ತಾಯಿ.
ಯಮುನೆ : ನಿನ್ನ ಮಕ್ಕಳ ಬಳಗ ಬೇರೆ ಗೋಕುಲವಾಗಿ—
ಶರಾವತಿ : ಕಳಕಳನೆ ಬದುಕಿ ಬೆಳಗಲಿ ನಾಡ ಹೊನ್ನಾಗಿ.
ಕಪಿಲೆ : ಓ ಅಕ್ಕ, ಚೆನ್ನಕ್ಕ, ನಮಿಸುವೆವು ತನುವೆರಸಿ.
ತುಂಗೆ : ಹೋಗಿ ಬರುವೆವು ತಾಯೆ, ಹೋಗಿ ಬರುವೆವು ಹರಸು.
ಗೋಪೀಕದಂಬ : (ಹೊರಡಲು ಇಂದ್ರಚಾಪಗಳಂತೆ ಬಳುಕಿ ನಿಲ್ಲುವುದು)
ಗಾಯಿತ್ರಿ : ನಿಮ್ಮಾಸೆಗಳಿಗೆಲ್ಲ ಮಕ್ಕಳಿರ ಮಂಗಳಂ !

ರಾಸವನು ಬಳೆದು ಬೆಳಗುವಿರಮ್ಮ ಮಂಗಳಂ !

ಅವರೆಲ್ಲ : ( ಮಂಜೀರದ ಘಲಿರು ಘಲಿರುಲಿಯ ತುಮುಲ ತರಂಗದಲ್ಲಿ ಒಟ್ಟಿಗೆ ಹೊರಟು ಮರೆಯಾಗುವರು. )
ಗಾಯಿತ್ರಿ : (ನೋಡುತ್ತ ನಿಲ್ಲುವಳು)

— ತೆರೆ —

## ಐದನೆಯ ಪ್ರವೇಶ

[ಸ್ಥಾನ : ಗೋವರ್ಧನ ಗಿರಿಯ ಗುಹೆಯ ಹೊರಗೆ]

(ಗೋಪೀವೃಂದ ನಿಂತು ಜಾನಿಸುವುದು)

ಗೋಪಿಯರು : ಅಂತರಂಗದ ಆತ್ಮಬಂಧುವೇ ಮಾರ
ನುತಿಸುವೆವು ದರ್ಶನವ ಕಾಣಿಸುವೆ ಬಾರ
ಚಾರುಸುಂದರ ರೂಪ ಮೀನಕೇತನನೆ
ಮೈದೋರಿ ಗೋಕುಲದಿ ಹರಿಸು ಹಾಲ್ಸೋನೆ
ಹಾಕಷ್ಟ ! ಸುಡು ಕಪ್ಪು ಹೊರಗೊಳಗೆ ಕಾಣು
ಕಣ್ಣೆವೆಗಳನು ಬಿಡಿಸು ಈ ಬದುಕೆ ಗೇಣು
ಚೆಂದವೇ ಚೆದುರ ಈ ಗೋಪಿಯರ ಗೋಳು ?
ಯಾವ ಸೌಭಾಗ್ಯಕೋ ಈ ಪರಿಯ ಬಾಳು ?
ನಾವು ಮಾಡಿದ ತಪಕೆ ಈ ಬೇವೆ ಫಲವೆ ?
ಎಲ್ಲರನು ಎತ್ತಿ ಬಾ ಓ ಸಿರಿಯ ಒಲವೆ.

ಕಾಮ : (ಮುಗುಳ್ನಕ್ಕು ಚಂಚಲದೃಷ್ಟಿಯನ್ನು ಸುತ್ತ ಬೀರುತ್ತ ಗುಹೆಯಿಂದ ಹೊರಗೆ ಬರುವನು ಅವನದ. ಉಜ್ವಲವಾದ ರೂಪು)

ಒಕ್ಕೊರಲಲೆಲ್ಲರೂ : ಜಯ ಕಾಮ ಜಯ ಶಾಮ ಶೃಂಗಾರ ಸಾಗರಾ !
ಜಯ ನಾಮ ಜಯ ಸೋಮ ಮಂದಾರ ಬಂಧುರಾ !

ಗೋಪನಾಯಕಿ : ಜಯ-ಜಯತು ಜಯ ಜಯತು ಚೈತನ್ಯ ಚೆಲುವಿಕೆಯೇ !

ನರ್ಮದೆ : ಜಯ ಜಯಾ ನಸೆಗಾರ ಒಲವುಗಳ ಭೂಮಿಕೆಯೆ

ಯಮುನೆ : ಜಯ ಜಯಾ ರಸರೂಪ ರಮಣೀಯಗಾತ್ರನೇ

ಶರಾವತಿ : ಜಯ ಜಯಾ ಮನ್ಮಥನೆ ಆನಂದಮತ್ತನೇ

ಕಪಿಲೆ : ಜಯ ಜಯಾ ಸಿಹಿ ಬಿಲ್ಲೆ ಜೇನ್ ಹೆದೆಯೆ, ಅಲರಂಬೆ

ತುಂಗೆ : ಜಯ ಜಯಾ ಸೃಷ್ಟಿ ಚೇತನ ಚೆನ್ನ ಬಾರೆಂಬೆ.

ಗೋಪನಾಯಕಿ : ಬನ್ನಿ ಕೆಳದಿಯರೆ, ಈ ಹುವ್ವ ಕೊಳ್ಳಿರೇ

(ಹೆಣ್ಣುಗಳ ಕರಸಂಪುಟಗಳಲ್ಲಿ ಹೊಸ ಕುಸುಮಗಳನ್ನು ನಿಗುಂಬಿಸಿ ತಾನೂ ಅಂಜುಳಿಯಲ್ಲಿ ಸೇರ್ಕಗೆಯ್ದು ನೇರ ನಿಂತು)

ಹೊಸ ಅರಳ ಮಳೆಗರೆದು ಜಯವೆಂದು ಹಾಡಿರೇ

ವಧೂವೃಂದ : (ಹೂಮಳೆಗರೆದು)
ಜಯರಾಗ ಜಯ ಭೋಗ ಓ ವಿಜಯ ಜಯ ಜಯಾ
ಜಯ ಯೋಗ ಜಯವೀಗ ಶ್ರೀವಿಜಯ ಜಯ ಜಯಾ !

ಗೋಪನಾಯಕಿ : ಸ್ವಾಗತವು ಸ್ವಾಗತವು ಹೇ ಮದನಸುಕುಮಾರ
ನರ್ಮದೆ : ಆನಂದವನೊಟ್ಟೈಸುವೆ ಬಾರ ಓ ಸಿಂಗಾರ
ಯಮುನೆ : ಪಳಿಯಳಿಯೆ ತೆರೆ ಮುಸಗು ಚಿರಕಲೆಯು ಸಿರಿಯೊಲವೆ
ಶರಾವತಿ : ಸುಧೆಗಡಲ ರಸಶುಕ್ತಿಯಾಗೆಸಗು ಓ ಚಲುವೆ
ಕಪಿಲೆ : ಅಡಿಗಳಲಿ ಬಾಳ ಕೊಟ್ಟೆಜನಿಡುವೆನೆಲೆ ಇನಿಯ
ತುಂಗೆ : ಬಳವಿಯರ ಪುದುವಾಳು ಬೇಡುವೆನು ಕಮನೀಯ.
ಗೋಪನಾಯಕಿ : ಬಾ, ಕೈಗೆ ಕೊಡು ಬಾರ, ಎತ್ತಿ ಕೊಡು ಬಾರ
ಸುಧೆಯ ಹಿರಿ ಜಿದುವಟ್ಟಲಿದು ಬಂದು ಬಾರ
ವಿಷಮಧುಗಳೊಳೇನ ತುಂಬುವೆಯೊ ಮಾರ ?
ಬನ್ನಬಡಲಾರೆವೈಸಿರಿಯೊಲವು ದೂರ
ಎದೆ-ನೋವ ತಿನ್ನುವೆವು ಎಲ್ಲವನು ತಡೆದು
ಹಾ, ಕೃಷ್ಣೆಯನ್ಯಾಯವನು ಸಹಿಸಲರಿದು
ಅವಳ ಒಳಗಣ್ಣ ತೆರೆ ಹೂಬಾಣಗಳನೆಸೆದು
ಮುಕ್ತರಾಗುವೆವೆಲ್ಲ ನಮ್ಮವನ ಪಡೆದು

[ಈ ವೇಳೆಗೆ ಬೈಗು ಕ್ರಮೇಣ ಮರೆಯಾಗಿ ಮೂಡಣ ದಿಗಂತದಲ್ಲಿ ಚಂದ್ರಮನ ಹುಣ್ಣಿಮೆಯ ಕಾಂತಿ ಹಾಲುಹೊಳೆಯಾಗಿ ಬಳುಕಿ ಇಳಿಯುವುದು. ಪರ್ವತದ ಆ ನಿರ್ಝರಣಿ ಹಾಲ್ಗಲ್ಲಿನ ಬಂಡೆಗಳಿಂದ ಧುಮುಕಿ, ಬಿಳಿ ಮುತ್ತಿನ ಸೇಸೆ ಚೆಲ್ಲಿ, ಇಳಿದು ಮಂದವಾಗುತ್ತಿರುವುದು. ಎಲ್ಲೆಲ್ಲಿಯೂ ಶ್ವೇತವರ್ಣ. ಆ ಶ್ವೇತಪ್ರದೀಪ್ತಿಯಲ್ಲಿ ಕಾಮನು ತನ್ನ ಮಂದಸ್ಮೇರದ ತಿಳಿಕಾಂತಿಯನ್ನು ಬೆರೆಸುವನು.]

ಕಾಮ : ಬಳಲಿದಿರಿ ದುಕ್ಕ ಪಳುವನು ಹೊಕ್ಕು ಏಳಿ
ನಲ್ಲೊಸಗೆ ನಲ್ಲೊಸಗೆ ನೀರೆಯರ ಕೇಳಿ
ಕವಿದಿರುವ ಕರಿಮುಗಿಲು ಬಾನಿಂದ ಕರಗಿ
ಬಿಸುಗಣ್ಣನೆಂದಿನೊಲು ತೊಳಗುವನು ಬೆಳಗಿ
ಕಾರಿರುಳಿನೊಳಗಲ್ತೆ ಅರಿಲ ನಗೆ-ಬಾಳು?
ಮಧುವ ಹೊಸದಾಗಿಸಲು ಬಾಗಿರುವಳವಳು
ಗೋಪನಾಯಕಿ : ಮಾಧವನು ಅರಳಿದಲರನು ಹೊಕ್ಕು ಮಧುರವನು
ಎಟುಕಿಸದೆ ಮರಳಿ ಮರುಳಾದುದನು ಕೇಳಿದೆಯ ?
ಕಾಮ : (ಕಬ್ಬಿನ ಬಿಲ್ಲನ್ನು ಹಿಡಿದೆತ್ತಿ ವಿಜೃಂಭಿಸುವನು. ದುಂಬಿಗಳು ಮೊರೆದು ಗಾನ-ಗೆಯ್ಯುವು. ಬೆನ್ನಿನ ಹೂಮುಡಿಗೆಗೆ ಕರವಿಕ್ಕಿ ಬಳುಕುವ ಉದ್ದ ನಾಳದ ತಾವರೆಯನ್ನು ತೆಗೆದು ತೋರಿ)
ಹೂಬಾಣವಿದು ಗೋಪಿ ವಿಶ್ವಕಂಪನಕಾರಿ
ಪ್ರಳಯರೂಪನು ಹರನು, ಶಸ್ತ್ರಗಳಿಗಂಜಿದನು.

ಮೃತ್ಯುವಿಗೆ ಪ್ರತಿ ಮೃತ್ಯು, ಯೋಗ ಮೇರುವನಿಳಿದು
ಶರಣಾದನಿದ ಕಂಡು ಅವನಿಗಿಂತಧಿಕಳೇ !

ಗೋಪನಾಯಕಿ : ಸಾಮಾನ್ಯವೆಂದರಿಯದಿರು. ಇವಳ ಬಗೆ ಬೇರೆ.

ಕಾಮ : ಹೆಣ್ಣವಳು. ಅವಳಾಸೆ ಮಾನಸವು ಚಳಿಮಲೆಯ
ಹಿಮದ ಗಾಳಿಗೆ ಪಣ್ತಿ ಹೆಪ್ಪುಗಟ್ಟಿಹುದೆಲವೆ.
ಬಿಸುಗೆಯ್ಯನಿದೆ ಬಂದೆ. ನೀಹಾರವದನಿಂದು
ಕರಗಿಸುವೆ; ರಸ ಹರಿಸಿ ಹೊಸ ಸುಖವ ಕಾಣಿಸುವೆ.

ಮತ್ತೊಬ್ಬಳು : ಕ್ರೋಧ ಭೈರವಿಯೆ ಆ ಕೃಷ್ಣೆ !
ನೆನೆಯಲೆದೆಯಳುಕುವುದು ! ಉಗ್ರದೀವನು ರಂಧ್ರ, ಹದಿಬದೆಯರನ್ನು,
ನೆನೆವಾಗ ತನಗೆ ತಾನ್ ತೂಗುವನು. ನಾನಿಂದು ಕಂಡುದನು ಕೇಳ –

ಗೋಪನಾಯಕಿ : ಆಡಬಾರದುದನ್ನು ಏಕಾಡಿದಿಯೊ ಕೆಳದಿ ?
ಶಂಕೆ ನುಡಿಯುಡಿಗಿಸದೆ ಉತ್ಸಾಹಮಂ ಗೋಪಿ ?

ಅದೇ ಅವಳು : ನಾನು ಅಂಜಿದೆನಿಲ್ಲ ಹಗೆಯಾಳವನು ಅಳಿದೆ.

ಕಾಮ : ನಿನ್ನ ನುಡಿ ನೇರ್ಪು ಒಪ್ಪಿದೆನು ಶಿಷ್ಯೆ, ಕೆಚ್ಚಾಗು ಕಲಿಯಾಗು ಕೆಳರು.
ಪೆಂಪಿನೀ ಬಿಲ್ಬಲ್ಮೆ ನಾಡಾಡಿಯೇನಲ್ಲ, ಹಿರಿದು, ಪುರುಳಾಗು.
ಇಂದೆ ಮುಯ್ ನೋಡುತಿರಿ. ಅವಳೆದೆಯ ಕರೆತೊಳೆದು ಮೊಳ್ಗಿಸುವೆನೇಳಿ.
ಒಲುಮೆಯೊಳ್ಕನು ಪೊಂಗಿಸುವೆನಚ್ಚು, ಜಗವ ತೂಗುವ ಕಯ್ಗೆ ಕೃಷ್ಣೆ
ಏನೆಷ್ಟರವಳವಳು ! ಎನಿತೆನಿತೊ ಶಕ್ರರನು, ಮುನಿ ಬಳಗವನ್ನು,
ಒಸೆ ಬಗ್ಗಿಸಿಹೆ ಸುತ್ತಿ. ಇವಳೇನೊ ! ನಚ್ಚಿನಾರಾಧಕರೆ ನನ್ನ
ಪೂಜಾರಿಣಿಯರೇಳಿ, ಪ್ರಿಯ ಶಿಷ್ಯಯರೆ ಕೇಳಿ; ಸುಳಿಗಾಳಿಯಲ್ಲಿ
ತಿರ್ರೆಂದು ತರಗಾಗಿ ತಿರುಗುವಳು ಆ ಕೃಷ್ಣೆ ಭಯವ ಬಿಡಿ ಏಳಿ.

ಗೋಪನಾಯಕಿ : ಅಂತೆಸಗು ಓ ದೇವ, ಮೆಯ್ಯಿಕ್ಕಿ ಮೊರೆಯುವೆವು.

ಕಾಮ : ಈ ನಿಮ್ಮ ಕಳಕಳಿಯೆ ಇಳಿಸಿತೆನ್ನನು ಏಳಿ.

ಗೋಪನಾಯಕಿ : ನೀನಲ್ಲದಿನ್ನಾವ ದೇವರೆಮ್ಮನು ಪೊರೆವನ್ !

ಕಾಮ : ನಿಮ್ಮ ಆ ಕೃಷ್ಣನಲ್ಲಿ
ನಟ್ಟಾಲಿಯಲಿ ಮಲಗಿಹನು ಹೋಗಿ, ಚಂದನದ
ಚರ್ಚೆಗಳ ನರುಗುಂಪು ಹೊಸ ಹುವ್ವುಗಳ ತುಂಬಿ
ಕಾಯವನು ಕಾಪಿಡಿರಿ. ಇಲ್ಲದಿರೆ ಕೇಡೋಡಿ

ಗೋಪನಾಯಕಿ : ಬೇಗ ಬಾ ತಡ ಬೇಡ ಬೆನ್ನೊಳೇ ಬಾ ನೀನು.

ಕಾಮ : ಬಿಲ್ಗೊಂಡು ಗಿಳಿಯೇರಿ ಬರುವೆನಿದೊ ಹಾರುವೆನು.

ಗೋಪಲಲನೆಯರು : (ಓಡಿ ಓಡಿ ಹೋಗುವರು)

ಕಾಮ : (ಗವಿಯನ್ನು ಪ್ರವೇಶಿಸುವನು)

— ತೆರೆ —

## ಆರನೆಯ ಪ್ರವೇಶ

[ಸ್ಥಾನ : ಕೃಷ್ಣೆಯ ಬೀಡು]

(ರಜನಿಯ ಪ್ರಶಾಂತ ನೀರದ)

ಗಾಯಿತ್ರಿ, ಕಾಮ } (ಗುಡಿಸಿಲಿನತ್ತ ನೋಡುತ್ತಿರುವರು)

ಕೃಷ್ಣೆ : ಓ ಪಾಪಿ ಶೀಲವೇ ! ಅಯ್ಯೋ ಏನಾಗಿ ಹೋಯ್ತು !

ಕಾಳಿಂದಿ : ಏಕೊ ಅಳುತಿಹಳಕ್ಕ ! ಏನು ಕಂಡಳೊ ಕಾಣೆ !

ಕೃಷ್ಣೆ : ಓ ನನ್ನ ಕಪಟತನವೆ ! ಆಹ ಪಾಪವೆ !

ಕಾಳಿಂದಿ : ಅಗ್ನಿಪರ್ವತದವಳು, ಹೇಗೆ ನುಡಿಸಲಿ ಹೋಗಿ !

ಕೃಷ್ಣೆ : ಬಾ ವತ್ಸೆ, ಬಾ ಕೆಳದಿ, ಬಾ ಸಖಿಯೆ ಬಳಿಗೆ ಬಾ ಬೇಡುವೆನು ಬಾರೆ.
ಗುರು ನಿನ್ನನರಿಯದಾದೆನು ಬಾರೆ, ಮನ್ನಿಸರಿಯವೆುಯನ್ನು ಬಾರೆ.
ಓ ಛಲವೆ, ಪೌರುಷವೆ, ನಿಮ್ಮ ನೆಲೆ ದೆಸೆಗೆಡಲಿ, ಇದೊ ಶಾಪವೀವೆ.
ಓ ವಿಧಿಯ ಕ್ರೌರ್ಯವೇ, ಹೆಣ್ಣ ಕಣ್ಣನು ಮುಚ್ಚಿ ದಾರಿ ತಪ್ಪಿಸಿದೆ.
ನಾಡವರ್ಗರಿಯ ಹಗೆ, ಒಳ್ಳಿತನವನು ಹೊದ್ದ ಅರಗುಲಿಯೆ ನೀನು.
ಎಲೆ ಪಾಪಿ ಕೃಷ್ಣೆ ಏನಾದೆಯೇ ! ಇನ್ನೆಂತೊ ಈ ನಿನಗೆ ಬಾಳು !

ಕಾಳಿಂದಿ : ಅಕ್ಕಾ !

ಕೃಷ್ಣೆ : (ಅಳುವಳು)

ಕಾಳಿಂದಿ : ಏನಕ್ಕ ? ಏನಾಯ್ತೊ ಹೇಳಬಾರದೆ ನನಗೆ ?

ಕೃಷ್ಣೆ : ಎಂಥ ದರ್ಶನ ತಂಗಿ ! ಬಾಳ್ ತಿಳಿವ ಹೊಸಹೊಸದು ರಮ್ಯದರ್ಶನವು !
ಹೇಳಲಿನ್ನೆಂದಳವೆ ! ಓ ಸ್ವರ್ಗ ! ಓ ಸತ್ಯ ! ವರ್ಣಿಸುವೆನೆಂತು !

ಕಾಳಿಂದಿ : ಕೇಳಬಯಸುವೆನಕ್ಕ.

ಕೃಷ್ಣೆ : ಅದು ಸಂಜೆ ಬೃಂದಾವನದ ವನ್ಯಸುಖಶಾಂತಿಯೊಳಗಾನು ನಿಂತು,
ತೊಳೆದ ರೋದೋಂತವನು ನಿಂತು ನೋಡಿದೆನಮ್ಮ. ಏನು ಸವಿ ಆಹ !
ಸುಪ್ತ ಚೇತನವೊಂದು ಹೊರಹೊಮ್ಮಿ ಹೊನಲಾಗಿ ನುಂಗಿತೆಲ್ಲವನು.
ನನ್ನ ತಿಳಿವೇ ಅಳಿದು ಕಣ್ಣು ಮುಚ್ಚಿದೆ ಸುಖಿಸಿ ಆಮೇಲೆ ಕೇಳು.
ಮೊಗದೆದುರ ಆ ಬಾನು – ಏಕೆ ಕರೆವೆನೊ ಅಂತು ! ಇಂಗಡಲೆ ಹೌದು,
ಪದ್ಮನಾಭನು ವಿಷ್ಣು ಶ್ರೀಪತಿಯು ನೆಲೆನಿಂತ ಹಾಲ್ಗಡಲೆ ಹೌದು.
ನಕ್ಷತ್ರದಲರುಗಳು ಅರಳುತ್ತ ಬೆಳುದಿಂಗಳೇ ನಾಳವಾಗಿ,
ಹಬ್ಬಿ ನಿಂತುವು ಅಲ್ಲಿ. ದೇವಲೋಕದ ಹುವ್ವು; ಹೆಸರೇನೊ ಅರಿಯೆ.
ಒಂದೆರಡೆ ? ಅಗಣ್ಯಂ ! ಅನಂತಂ ! ಬೆರಗಾದೆ ನಟ್ಟಾಲಿ ನೆಟ್ಟು.
ನೋಡ ನೋಡುತ ನೋಟ ಮರೆಯಾಯ್ತು ಮತ್ತೊಂದು ದರ್ಶನವು ಬಂದು.

ಹೇಗೆ ಹೇಳಲಿ ಕೆಳದಿ, ಜಡೆ ಹೊತ್ತು ಯೋಗದಾನಂದದಲಿ ಕುಳಿತು,
ಕಣ್ಣೆವೆಗಳನು ಮುಚ್ಚಿ, ತನು ಮರೆತ ತೆರತೆರನ ಋಷಿಗಳನು ಕುರಿತು ?
ಅವರ ಬಗೆಯೊಂದೆ ತೆರ ತಪದ ಬೆಳಕದು ಬಾನ ತುಂಬಿತ್ತು ಕೇಳು.
ಓ ಎಂಥ ಭಾವವದು ! ಆತ್ಮವದರಲಿ ಕರಗಿ ರಸವಾದ ಸುಖವು.
ಅಂತಿರಲು ಆ ದೀಪ್ತಿಯನು ನುಂಗಿ ಉಜ್ವಲಂ ಮತ್ತೊಂದು ಕಾಂತಿ,
ಮೂಡಿತದನತ್ತ ಒತ್ತಿ, ಯೋಗಿಗಳು ರೆಪ್ಪೆಯನು ಮೆಲುಮೆಲನೆ ತೆರೆಯೆ,
ಗಡ್ಡೆಕಟ್ಟಿತು ಬೆಳಕು ರೂಪಾಯ್ತು, ಕಯ್‌ ಕತ್ತು ಕಾಲುಗಳು ಎಲ್ಲ.
ಚೆಲುವ ದೇವರು ಆಹ ! ಮುಡಿ ಕಿರೀಟವು ಹಾರಕೌಸ್ತುಭವು ಗೆಜ್ಜೆ !
ಕವಲಾಯ್ತು ತೋಳು. ಗದೆ ಶಂಖ ಚಕ್ರಗಳ ಧರಿಸಿದನು ಸ್ವಾಮಿ ವಿಷ್ಣು.
ಬಾನೆತ್ತರದ ಆಳು ಅಡಿಗಳನು ನೆಲದ ಕರೆಯಲಿ ನೆಟ್ಟು ನಿಂತು,
ಋಷಿಗಳೆಡೆಗೈತಂದು ಮುಗುಳುನಗೆ ಬೀರಿದನು ಚಂದ್ರಿಕೆಯ ಚೆಲ್ಲಿ.
ಅವರು ಮರುನಗುವ ನಕ್ಕರು ನೋಡಿ ಮಾತಾಡರೊಬ್ಬರೂ ಅಲ್ಲಿ.
ತುಂಬುಶಾಂತಿಯ ತೃಪ್ತಿ ತುಂಬಿತ್ತು, ಅವರಿವನ ಇವನವರ ಅರಿತು.
ಕೈಬೀಸಿ ದೇವ ತಿರೆಯನು ತೋರಿ ಮತ್ತೊಮ್ಮೆ ಮಿದುವಾಗಿ ನಕ್ಕ.
ಸಂತೃಪ್ತಿಯಲಿ ತಣಿದ ಋಷಿಗಳೆವೆ ಮುಚ್ಚಿದುವು. ಏನು ಚೆಲುವ ನೋಟ !
ದೇವ ನಡೆದನು ಬಳಿಕ. ಕೇಳೆನ್ನ ಎದೆ ಭಕ್ತಿ ತುಳುಕಾಡಿ ಬಂತು.
ಓಡಿದೆನು ! ನಿಟ್ಟೋಟದಲಿ ಓಡಿದೆನು ಬೀಳ್ವುದೇಳ್ವುದನು ಮರೆತು.
ಹಿಡಿಯೆ ಕರ ಚಾಚಿದೆನು. ಚರಣವನು ಸರಿಸಿ ನಗೆಮೊಗದಲ್ಲಿ ನೋಡಿ.
ಬೃಂದಾವನವ ತೋರಿ – ಇವರೆಲ್ಲರೊಡನೆ, ನಡೆ, ನಡೆಯ ಎಲೆ ಭಕ್ತೆ –
ಎಂದು ಕಣ್ಮಾಯವಾದನು ಪ್ರಭುವು. ಹಾ ಫಲವೆ ಎಂದೆದ್ದೆನಮ್ಮ.
ಎದ್ದು ಕುಳಿತೆನು ಕೇಳು, ಕನಸೆ ನನಸಾಗಿತ್ತು ಬೆಳಕಿಲ್ಲಿ ತುಂಬಿ.
ಎಂಥ ಬೆಳಕದು ತಂಗಿ, ಈ ದೇಹವನು ಇಲ್ಲವಾಗಿಸುವ ಬೆಳಕು !
ಅಂಗವಿಲ್ಲದ ವಾಣಿ – ಹೇ ಯೋಗಿ, ಎಲೆ ಗೋಪಿ, ಅರಿವುಗೊಳ್‌ ಏಳು.
ಹಿಂದಣಾಸೆಗಳನ್ನು ಪೂರ್ಣಗೊಳಿಸಲು ಕೃಷ್ಣನಿಳಿದಿಹನು ಕಾಣು.
ಪ್ರೇಮಪೂರ್ಣನು ಅವನು ನಿಮ್ಮ ಪ್ರೇಮದ ಸುಳಿಗೆ ಸಿಕ್ಕಿದನು ಒಲಿದು –
ಎಂಬುಸಿರೊಡನೆ ಬೆಳಕು ಮರೆಯಾಯ್ತು. ಓ ನನ್ನ ತಿಳಿಗೇಡಿತನವೇ !
ಏನು ಮಾಡಿದೆನಮ್ಮ ! ಒಲಿದು ಬಂದವನನ್ನು ಅಟ್ಟಿದೆನೆ ಇರಿದು !

ಕಾಳಿಂದಿ : ತಿಳಿವು ಮೂಡಲು ಹುಚ್ಚು ಕರಗುತಿದೆ ಎದ್ದೇಳು.

ಕೃಷ್ಣೆ : ಓ ಜ್ಞಾನಗರ್ವವೇ, ಏನು ಮಾಡಿದೆ ಹಾಳು !

ಕಾಳಿಂದಿ : ತಿಳಿವು ರವಿ ತಳತಳನೆ ಮೂಡಿದನು ಬಿನದಕ್ಕೆ
ನಾಳೆ ಹಾಡುವೆ ಕುಣಿವೆ ಅವನಾಸೆ ನೇರಕ್ಕೆ.

ಕೃಷ್ಣೆ : ಹೆಣ್ಣುತನದಿಂಗಡಲೆ ಒಡೆಯುತೀ ಬಾಳ ಹುಳಿಗೆ.

ಕಾಳಿಂದಿ : ತಿಂದುಕೋ ದುಃಖವನು, ತಂದುಕೋ ಜ್ಞಾನವನು.

ಕೃಷ್ಣೆ : ಕೃಷ್ಣನನು ನೋಯಿಸಿದೆನಾವ ಸುಖವನು ಕಂಡು ?
ದ್ರೋಹಕ್ಕೊಂದೇ ತೀರ್ಪು, ಸಾಯುವುದು ವಿಷವುಂಡು.

ಕಾಳಿಂದಿ : ಸರಿರಾತ್ರಿ ಸುಮ್ಮನಿರು. ತುಸ ಕಾಲ ಸೈರಿಸಿರು.

(ಬಾಗಿಲನ್ನು ಮುಚ್ಚುವಳು)

ಗಾಯಿತ್ರಿ : ಏನು ಮಾಡಿದೆ ಕಾಮ, ಈಯುರುಬ ತಡೆವಳೇ ?
ಅವಳೀಗ ಹೊಸ ಹೆಣ್ಣು ನುಡಿಸುವೆನು ಕೇಳುವೆಯ ?

ಕಾಮ : ಬೇಡವೆನ್ನಲೆ ನಾನು ? ಮರೆಯಾಗುವೆನು ನುಡಿಸು.

ಗಾಯಿತ್ರಿ : ಏಕೆ ಮರೆ ?

ಕಾಮ : ಗಂಡಾನು. ಮನಬಿಚ್ಚಿ ನುಡಿಯಲಾರಳು ಹೆಣ್ಣು.

ಗಾಯಿತ್ರಿ : ಗಂಡುತನವೇ ಆಗ ! ಆಹ ! ಗಂಡಿನೊಡನಾಟವನು
ಬಾಳ ಹೊಸ ಸುಖವನ್ನು ಕೆರಳಿಸುವ ನಸೆಗಾರ !

ಕಾಮ : ನೀನು ಕೈ ಸಡಲಿಸಲು ನಾನು ಮೆರೆಯುವೆನೆದ್ದು
ಓ ತಾಯೆ, ಅಧಿದೇವಿ ನೀನೆನ್ನ ಜಯಗಳಿಗೆ.

ಗಾಯಿತ್ರಿ : ಅರಿವೆನರಿವೆನು ಕಾಮ, ಈಯಣಕದೆಸುಗೆಯನು.

ಕಾಮ : ನಿನ್ನ ಕೃಪೆ. ನನ್ನ ಬಾಳಿಗೆ ಸೊಗವು ಇದುವರೆಗೆ. (ಮರೆಯಾಗುವನು)

ಗಾಯಿತ್ರಿ : ಎಚ್ಚರಾಗಿರುವೆಯಾ ಎಲೆ ಕೃಷ್ಣೆ.

ಕೃಷ್ಣೆ : (ನೀರವ)

ಗಾಯಿತ್ರಿ : ನನ್ನ ದನಿ ಸಿಗದೇನು ? ಆಲಸ್ಯವೇಕೆಲವೆ ?

ಕೃಷ್ಣೆ : (ಪಡಿದೆರೆವಳು)

ಗಾಯಿತ್ರಿ : ನಡುರಾತ್ರಿಯಾದರೂ ಹೊಸ ಹಣತೆ ಉರಿಯುತಿದೆ.
ಮುದವೇನು ? ಹೊಸದು ಕಳೆ ಏಕೇನು ? ನುಡಿ ಗೆಳತಿ.

ಕೃಷ್ಣೆ : ಹೊಸ ಹಣತೆ ! ಹೊಸ ಬೆಳಕು ! ಹೊಸ ಭಾವ ! ನಿಜವಹುದು.
ಆ ಕೃಷ್ಣನಾನಂದಕಿಂದೆತ್ತಿದೆನು ದೇವಿ,
ಪ್ರೇಮದಾನಂದದೀವಿಗೆಯನ್ನು ! ನಂದಿಸೆನು.

ಗಾಯಿತ್ರಿ : ಆ ಕೃಷ್ಣನಾನಂದ ! ಪ್ರೇಮನಂದಾದೀಪ !

ಕೃಷ್ಣೆ : ಅಣಕವೇಕೆಲೆ ದೇವಿ ? ರಸರೂಪನವನೆನಗೆ.
ನೀವೆಲ್ಲ ವಂಚಕರು; ಇದಕೆಲ್ಲ ಕಾರಣರು.

ಗಾಯಿತ್ರಿ : ನೀನಂದರೆನಗೇನು ಸಿಡುಕಿಲ್ಲ. ಇರಲಿ ಬಿಡು.
ಈ ಕಾಮನನು ನೋಡು; ನಿನಗಾಗಿ ಬಂದವನು.

ಕೃಷ್ಣೆ : ನನೆಬಿಲ್ಲ ಮೊನೆಗಾರ, ನೀನ್ ಪ್ರಿಯನು ನನಗೆ ಬಾ.

ಕಾಮ : ಕಲೆಯು ಕಣ್ಣನು ಬಿಚ್ಚಿ, ಹರಡು ನ್ನಾಡಿನಲೆಲ್ಲ.
ಕೃಷ್ಣೆ : ಬಿಚ್ಚುವೆವು ರಸಋಷಿಯೆ, ಬಳಸಿ ಬೆಳಗುವೆವಿಲ್ಲಿ
ರಾಸವನು ಸವಿ ಸೌಖ್ಯ ಸೌಂದರ್ಯಗಳ ಹರಸು.
ಕಾಮ : ತುಂಬುಸೊಗವನು ಕಾಣು ರಾಗರಸವನು ಸುರಿದು.
ಕಲಿತ ಕಲೆಯನು ಕೃಷ್ಣೆ, ನೀ ಮೆರೆಸಿ ಕಲಿಯಾಗು,
ಕೃಷ್ಣೆ : ಆಯ್ತು. ಇದೊ ನನ್ನ ವಂದನವನೊಪ್ಪಿಕೋ ಸ್ವಾಮಿ. (ನಮಿಸುತ್ತಿರುವಳು)

— ತೆರೆ —

## ಏಳನೆಯ ಪ್ರವೇಶ

[ಸ್ಥಾನ : ರೈವತ ಪರ್ವತದ ಒಂದು ಅರೆ]

ದೇವರಾಜ : (ಕೆಳಗಣ ಹಳುವನ್ನು ಇಣುಕಿ ನೋಡುತ್ತ ಸಂತೋಷಗೊಳ್ಳುತ್ತಿರುವನು)
ಕಾಮ : (ಸಂಭ್ರಮದಿಂದ ಪ್ರವೇಶಿಸುವನು)
ದೇವರಾಜ : ಅವಸರದ ನಡಿಗೆ ಏನಿದು ಕಾಮ ? ಮೇಣೆತ್ತ ?
ಕಾಮ : ಜಯವು ಜಯವೋ ಒಡೆಯ !
ದೇವರಾಜ : ಕಿವಿ ತುಂಬುವೆನು ಬಿತ್ತರಿಸು ಗೆಳೆಯ.
ಕಾಮ : ಕಣ್ಣ ತೆರೆದಳು ಕೃಷ್ಣೆ.
ದೇವರಾಜ : ಅದನರಿತೆ ಮುಂದೇನು ?
ಕಾಮ : ಭೋಗರಾಜನೆ ಕೇಳು, ಭಯವನಟ್ಟಿದ ಆಳ್ತನವನೊರೆವೆ.
ಕೃಷ್ಣನೊಲವನು ಅವಳು ಅರಿತಳೆಂಬುವ ಮಾತು ಹೊನ್ನ ಬಿಸಿಲಂತೆ,
ಹರಡಿ, ಆ ಗೋಕುಲವನೆಚ್ಚರಿಸಿ ಉತ್ಸಾಹವನು ಹರಿಸಿ ನಿಲಲು,
ಗೋಪಿಯರ ಸಂಭ್ರಮವೆ ಸಂಭ್ರಮವು ! ಏನ್ ಚೆಲ್ವು ಓ ರಾಜ ರಾಜ !
ಎಲ್ಲರೆದ್ದರು ಮಿಂದು, ಚಂದ್ರಂಗೆ ಈ ಎನಗೆ ಸೊಡರುಗಳನೆತ್ತಿ,
ಹರಕೆಯನು ಸಲಿಸಿದರು. ಆ ಒಸಗೆಯನು ಎಂತು ಅಳೆವುದೊ ಮಾತು !
ನೂರು ಚಂದ್ರರ ಕಂಡ ಜಕ್ಕವಕ್ಕಿಯ ಬಿನದ ಅವರ ಸಮ್ಮೋದ
ಇತ್ತ ಹಿರಿಯರು ಕಣ್ಣಮಣಿ ಕುತ್ತವನು ಕುರಿತು ವಿಧವಿಧದೊಳಾಡಿ,
ಕಡೆಗೆಂದರೆಲ್ಲರೂ – ಕ್ರೂರನಾ ಮಲೆಯ ರೈವತನು ತನ್ನನ್ನು
ಮರೆತರೆಂದುರಿದು ಈ ರೇಜಿಗೆಯನೆಸಗಿದನು. ನಡೆಯಿರೇ ಎಲ್ಲ,
ಸಾಹಿತ್ಯ ಸಂಭಾರಗಳ ತುಂಬಿ. ಪೂಜೆಯನು ಹಬ್ಬವನು ಗೆಯ್ವೊಂ
ಹಾ, ಅವನು ದುಡುಕಿದನು ! ದುಡುಕಿದನು ! ಪೊರೆವವನ ಮರೆವೆವೆ ನಾವು ?

ಎಂದೆಲ್ಲರೈವತಕೆ ನಡೆದಿಹರು. ಹಸುಕರುಗಳೊಟ್ಟೈಸಿ ಬಂದು,
ಮಲೆಗೆ ಹೊರಟಿಹುದೀಗ ನಂದದಣಿಯಾಜ್ಞೆ ! ಎದುರೆಂಬರುಂಟೇನು ?
ನೋಡಮೋ ಉತ್ಸವವು ! ನರೆತ ನವಿರಿನ ನಂದನಾಯಕನು ಅಲ್ಲಿ,
ತಲೆಯಾಳ್ಗಳೊಡನೆರಸು ನಡೆದಿಹನು. ಮೊಗದ ಆ ಶಾಂತಿಯನು ಕಾಣು.
ಗೊಲ್ಲರಿಗೆ ಏಸುರ್ಕು, ಮುನ್ನೀರು ಮಲೆಗಳನು ಬಗಿವ ಹಿರಿಯುಕ್ಕು !
ಕಾಡು ಕುಳಗಳು ಅವರು ಕುಣಿತದೊಳಗೇನು ಸವಿ ! ಏನೆಂಥ ಚೆಲ್ವು !
ಭೂಮಿ ಬಾನ್ಗೊಂಡೆಯು ನೀನ್ ಕಂಡುಮುಂಟೇನು ಭವ್ಯವನಿದನು ಅಲ್ಲಿ ?
ಇತ್ತ ನೋಡೆಲೆ ರಾಜ, ಈ ಗೊಲ್ಲ ಲಲನೆಯರ ಸುಖದ ಸಂಪದವ,
ಹಾಲ್ಮೊಸರುಗಳ, ಬೆಣ್ಣೆ, ತನಿವಣ್ಗಳಲರುಗಳ ಹೊತ್ತ ಕಲಶಗಳ !
ಓಯ್ ಅದೋ, ಶ್ರೀಕೃಷ್ಣ ! ಮುಂದೆ ಗೋಪರು ಹಿಂದೆ ಗೋಪಿಯರು ಬಳಸಿ.

ದೇವರಾಜ : ದಿವ್ಯದರ್ಶನ ಕಾಮ ! ಹೇ ದೇವ ಶ್ರೀಕೃಷ್ಣ,
ಇದೊ ವನ್ದಿಸುವೆನಯ್ಯ. ನಿನ್ನ ಬೃಂದಾವನದ
ತೊರೆ ಅರೆಯೊ, ತುರುತರುವೊ ಏನಾದರೂ ಮಾಡು
ಮರುವುಟ್ಟೆ ನೀಗುವೆನು ನಿನ್ನಾಟಗಳ ಸವಿದು.

ಕಾಮ : ತಣಿದೆಯೇನಾಗಳೇ ?

ದೇವರಾಜ : ತಣಿದೆಂ.

ಕಾಮ : ಬೊಗಸೆಯಲಿ ಕಡಲನಳೆದಂತಾಯ್ತು.

ದೇವರಾಜ : ಅಹುದೇನು ?

ಕಾಮ : ಸತ್ಯವದು ನೋಡಿತ್ತ ದುರ್ಲಭಳು ಆ ಕೃಷ್ಣೆ
ಏನೋ ನೆವವನು ತೆಗೆದು ಓಜೆಯನು ಮೀರಿ ಬಳಿ –
ಸಾರುವಳು ಅರಳುಗಣ್ಣಲಿ ಕೃಷ್ಣನನು ನೋಡಿ
ನಲಿಯುವಳು ಸಂಜೆ ಸಂಗಮನಿರಿಗೆ ನಡೆ ಪೋಪ.

ದೇವರಾಜ : ಅಂತಿರಲು, ರಂಗದಲಿ ನೇರವೇನೆಲ್ಲ ಕಾಮ ?

ಕಾಮ : ಕಳಕಳಿಸದಿರು ರಾಜ, ಹೆಣ್ಣಿನಾಟದ ಕಲೆಯ
ಹೊಸ ವಸಂತನು ಬಲ್ಲ. ಕಲ್ಕೆಯನು ಮೆರೆಸುವನು.

ದೇವರಾಜ : ಬೇಡಿಕೆಗಳೊ ?

ಕಾಮ : ಹೊಚ್ಚ ಹೊಸ ಕೆಂದಳಿರನಲಿ ಸಮೆದು ನಿಂತಿಹವು.

ದೇವರಾಜ : ಚೆಲ್ವಾಯ್ತು ಮೆತ್ತೆಗಳು ?

ಕಾಮ : ಬಿರಿದ ಬಿಳಿ ಹುವ್ವುಗಳೆ.

ದೇವರಾಜ : ಓಕುಳಿಗೆ ನಿನ್ನದೇ ಅಗ್ಗಳಿಕೆ ಎಂದರಿವೆ.

ಕಾಮ : ಏಕಿಲ್ಲವೆನ್ನುವೆನು ? ಕಿರಣಗಳೆ ಜೀಕರ್ಗೊಳವಿ.

ದೇವರಾಜ : ಬಲು ಚೆಲ್ವು. ಒಪ್ಪಿದೆನು ನೇಹಿಗನೆ ಒಪ್ಪಿದೆನು.

ಕಾಮ : ಬಾನ್‌ತಿಳಿಗೆ ಉದಯಾಸ್ತಗಳ ರಾಗವನು ಕದಡಿ–
ದೇವರಾಜ : ಕೇಳ್ವುದೇನೋ ಇನ್ನು ! ಕಂದರ್ಪನಿವ ಕೇಳಿ.
ಕೋವಿದನು; ರಾಸ ರಂಗದ ಚೆದುರ ಪಂಡಿತನು.
ಕಾಮ : ಬನದ ರಾಣಿಯು ತಳಿರ ಸಡೆಯ ಮುಡಿಯಲ್ಲಿ
ಲತಾಗಣಿಕೆಯರ್ಕುಣಿವರಲರುಗಳ ಚೆಲ್ಲಿ.
ಅನಿಲನೇ ಚಾಮರವನಿಕ್ಕುವನು ಹಿತನು.
ರಜನಿ ರಮಣನೆ ಕೇಳು ದೀವಟಿಗೆಯವನು.
ಹಕ್ಕಿ ಕುಕಿಲುವುದಲ್ಲಿ ರಾಗರಸ ಹೆಚ್ಚಿ
ಗಾನಗೈವುವು ದುಂಬಿ ರತಿರೆಕ್ಕೆ ಬಿಚ್ಚಿ
ನುಡಿಗೆ ನಿಲುಕದ ಸೊಗವು ಹಾ, ಎಂತು ನುಡಿವೆ !
ಇಂದ್ರಿಯಾತೀತವದು ನೋಡು ಬಾ ತೋರ್ವೆ !



(ದೇವರಾಜನನ್ನು ಕರೆದುಕೊಂಡು ಹೋಗುವನು)

— ತೆರೆ —

## ಎಂಟನೆಯ ಪ್ರವೇಶ

[ಸ್ಥಾನ : ರೈವತದ ಬೇರೊಂದು ಭಾಗ]

(ಹೊಸ ತಳಿರ ಗುಂಪಿನಲ್ಲಿ ಅಲ್ಲಲ್ಲಿ ಕಾಣುವ ಹಾಲುಗಲ್ಲಿನ ಒಂದೊಂದು ಬಂಡೆಯಲ್ಲಿ ಗೋಪಿಯರು ಘಮಘಮಿಸುವ ಬಣ್ಣಬಣ್ಣದ ಹೊಸ ಹೂವುಗಳನ್ನು ಮಾಲೆಗಳಾಗಿ ಮಾಡುತ್ತಿದ್ದಾರೆ. ಸಂಜೆಯ ಹೊಂಬಣ್ಣದ ಹೂ-ಬಿಸಿಲು ಸುತ್ತಣ ಹಸಲೆಯನ್ನು, ತಳಿರನ್ನು, ತುಂಬಿ ನಿಂತಿದೆ.)

[ತೆರೆಯಲ್ಲಿ ಕೊಳಲು ನುಡಿದು ನಿಲ್ಲುವುದು]

ಗೋಪಿಯರು : (ಸಂಭ್ರಮದಿಂದ ದಿಕ್ಕುದಿಕ್ಕಿಗೂ ಹರಡಿ ನಿಂತು)
ಬಂದನೇ ! ಗೋವಿಂದ ಬಂದನೇ ! ಬಂದನೇ !

[ಕೊಳಲು ಕೇಳುವುದು]

ಗೋಪಿಯರು : (ಕಿವಿಯ ಹತ್ತಿರ ತಮ್ಮ ತಳಿರ್ಬೆರಳುಗಳನ್ನು ಹರಡಿ ನಾದದಲೆಗಳನ್ನು ಆಹ್ವಾನಿಸಿಕೊಳ್ಳುವರು. ಕೊಳಲು ಹೆಚ್ಚು ಸ್ಫುಟವಾಗಿ ಕೇಳ್ವುದು. ಎಲ್ಲರೂ ಮುದವುಬ್ಬಿ ಕರೆವರು.)

ಹೇ ಕೃಷ್ಣ, ಶ್ರೀಕೃಷ್ಣ, ಬಾ ಓಡಿ ಬಾರೊ
ದೊರೆ ಕೃಷ್ಣ, ಸಿರಿ ಕೃಷ್ಣ ಬಾ ಕೂಡು ಬಾರೊ

ನಮಗೆಲ್ಲ ಈ ನೀನೆ ಬಾ ಆಡು ಬಾರೊ
ಸರ್ವ ಅರ್ಪಣ ನಿನಗೆ ಬಾ ಓಡಿ ಬಾರೊ

ಶ್ರೀಕೃಷ್ಣ : (ಹೂವರಳುವಂತೆ ನಗುತ್ತ ಪ್ರವೇಶಿಸುವನು)

ಗೋಪನಾಯಕಿ : (ಹೂಮಳೆಗರೆಯುತ್ತ)
ಜಯ ಜಯತು ವಿಶ್ವಮೋಹನ ಮಧುರ ಚಂದ್ರ !

ಗೋಪಿಯರು : ಜಯ ಜಯತು ವಿಶ್ವಮೋಹನ ಮಧುರ ಚಂದ್ರ !

ಗೋಪನಾಯಕಿ : ಜಯ ಜಯತು ಚೆದುರ ರಂಗನೆ ಮೋಹನಾಂಗ !

ಸರ್ವರೂ : ಜಯಜಯತು ಚದುರ ರಂಗನೆ ಮೋಹನಾಂಗ

[ಬೊಗಸೆಗಳಲ್ಲಿ ಹೂ ತುಂಬಿ ಎರಚುವರು]

ಕೃಷ್ಣ : ಎದೆ ಹೊನ್ನೆ ಸಾರಿ ಬಾ, ಕಲ್ಲು ಅರಳಲಿ ಬಾರ
ನೀಲಿ ಎಲೆಗಳನು ಬಿಡಿಸಿ ಬಾ, ಆಡು ಬಾರ
ಅರಿಲ್ದಂಡೆಯನು ಕೋದು ಮುಡಿಗಿಡಲು ಬಾರ
ಬಿಳಿ ಮುಗಿಲ ತೆಳು ಮಡಿಲು ಬಲ್ಸೊಗಸು ಬಾರ
ಜ್ಯೋತ್ಸ್ನೆಯಲಿ ಆತ್ಮವನು ಕರಗಿಸುವೆ ಬಾರ – ಆ
ತ್ತೌರು ಸೇರೋಣ ಬಾರ.

ಗೋಪನಾಯಕಿ : ಹೊಸ ಹೆಣ್ಣಿನೊಡಗೂಡಿ ಹೂ-ಮಣೆಗೆ ಬಾ ಕೃಷ್ಣ.
ಸಿಂಗರಿಸಿ ಕಣ್ತುಂಬಿಕೊಳ್ಳುವೆವು ಇತ್ತ ಬಾ.

ನರ್ಮದೆ : ಈ ಸುರುಗಿ ಕಡಗಗಳು ನನ್ನ ನಲ್ಮೆಯ ಕುರುಹು
ಕೇಣಿ ಶಾಶ್ವತ ನಿಲಲು ಮನವಾರೆ ಬಯಸುವೆನು.

ಯಮುನೆ : ನೈದಿಲೆಯ ತೋಳ್ಬಂದೆ ತೋಳು ನೀಡಲೆ ನೀರೆ
ಇರು ಬಿಗಿವೆ ಕುಣಿವಾಗ ಜಾರಿದರೆ ಬಲ್ತೊಡಕು.

ಶರಾವತಿ : ಕೆಂಡಸಂಪಿಗೆ ಡಾಬು ಹಿಡಿನಡುವಿಗೊಪ್ಪುವುದು.
ಎಲೆ ಕೃಷ್ಣೆ, ನನ್ನಾಣೆ ಕೆಡಿಸದಿರು ಬೇಡುವೆನು.

ಕಪಿಲೆ : ಮೊಲ್ಲೆ ಮುಂದಲೆಬೊಟ್ಟು, ಚೆಂಗುಲಾಬಿಯ ಕಂಠಿ
ನನ್ನೊಲುಮೆ ಕಾಣ್ಕೆಗಳು. ಅರುಗಾಗದಿರಲಕ್ಕ.

ತುಂಗೆ : ಚೂತ ಪುಷ್ಪದ ಗುಚ್ಛ ಹೆರಳಿಗಳವಡಿಸುವೆನು
ಮುಡಿಗೆ ಮಂದಾರವಿಟ್ಟು. ಸಾಕನಿತೆ ಸಿಂಗಾರ.

ಕಾಳಿಂದಿ : ಪಾರಿಜಾತದ ಕರ್ಣಕುಂಡಲಗಳನು ಗೆಯ್ದೆ
ನಿನಗಾಗಿ ಓ ಕೃಷ್ಣ, ನಾನೆ ತೊಡಿಸುವೆ ತಾಳು.

ಒಬ್ಬಳು : ಜಾಜಿ ಕಾಲ್ಗೆಜ್ಜೆ ನನ್ನದಿದು ಚರಣಗಳ ನೀಡು.

ಇನ್ನೊಬ್ಬಳು : ಮಲ್ಲಿಗೆಯ ಹೊಸ ಹಾರ ನಿನಗೆಲವೆ ಕೊಳ್ ಕೃಷ್ಣೆ

ಮಗುದೊಬ್ಬಳು : ಕೃಷ್ಣನಿಗೆ ತಳಿರು ತುಲಸೀ ಮಾಲೆ ತೊಡಿಸಿರಮ್ಮ
ಬೇರೊಬ್ಬಳು : ಕಯ್ ಬರಿದು ತಾವರೆಯ ಹಿಡಿದುಕೊಳ್ಳಲಿ ಕೃಷ್ಣೆ.
ಅನಿಬರೂ : (ಮತ್ತೊಮ್ಮೆ ಹೂಮಳೆಗರೆದು)

ಬಾನ್ನೀರ ಮುನ್ನೀರ ಸಂಗಮವೆ ಓಹೊ ಸುಖವೆ !

ಗೋಪನಾಯಕಿ : ಕೊಳಲೂದು ಓ ಕೃಷ್ಣ, ಬೆರೆತೆಲ್ಲ ಕುಣಿಯೋಣ.
ಶ್ರೀಕೃಷ್ಣ : (ಕೊಳಲನ್ನು ತುಟಿಗೆತ್ತಿ ಮಂಜುಳ ಅಲೆಗಳನ್ನು ತೇಲಿಸುವನು)
ಸಕಲರೂ : ತಕಿಟತಕ ಕುಣಿಯೋಣ ಬನ್ನಿರೇ ಬನ್ನಿ!

ಈ ಜನ್ಮವೇ ಸಾಕು ಬೇರೆ ಬೇಡೆನ್ನಿ.
ಕೊಳಲೂದಿ ಕುಣಿ ಕುಣಿಸಿ ತೇಲಿಬಿಡು ಕೃಷ್ಣ
ಆನಂದದೊಳಗೈಕ್ಯವಾಗಿಸಿಡು ಕೃಷ್ಣ.

[ಶ್ರೀಕೃಷ್ಣನ ಸುತ್ತ ಗೋಪಿಯರು ಕುಣಿವರು]

— ತೆರೆ —

## ಒಂಭತ್ತನೆಯ ಪ್ರವೇಶ

[ಸ್ಥಾನ : ಕೃಷ್ಣೆಯ ಬೀಡ ಮುಂದೆ]

(ಗುಡಿಸಿಲಿನ ಒಳಗೆ ಕೊಳಲ ದನಿ)

ಗಾಯಿತ್ರಿ : ಮತ್ತೇನ ನೋಡ ಬಗೆದೆಯೊ ಶಕ್ರ ?
ದೇವರಾಜ : ಗಾನರಸವನು ಕೂಡ ಕೃಷ್ಣೆ ಸೆರೆಹಿಡಿದಳೇನೊ !
ಗಾಯಿತ್ರಿ : ಇರಬಹುದು. ಮಿಡಿವ ಅವನಾತ್ಮವೇ ಅವಳದಿಂದು.
ದೇವರಾಜ : ಅದ್ಭುತವು ಓ ತಾಯೆ, ಎಲ್ಲ ಮುನಿಗಳ ತಪವ.

ಅಪಹಾಸ್ಯಗೈವಂತೆ ಒಂದೆ ಜನ್ಮದಲವಳು
ಸಾಮೀಪ್ಯ ಸಂಪದವನನುಭವಿಸಿದುದೇ ಪುಣ್ಯ.
ಏನದರ ಒಳ ಗುಟ್ಟು ? ನೀನರಿವೆ ಹೇಳಮ್ಮ.

ಗಾಯಿತ್ರಿ : ಅಹುದಹುದು ಎಲೆ ಶಕ್ರ, ಎಲ್ಲ ತಪಕೂ ಮಿಗಿಲು

ಉತ್ತಮೋತ್ತಮವಯ್ಯ, ಮಧುರಭಾವದ ದಾರಿ.
ಹುಟ್ಟಿದಂದೇ ಅವಳು ಪುರುಷೋತ್ತಮನನೊಲಿದು
ಬಗೆಯ ಸೋತುದು ಉಂಟು ಅವನ ಚೆಲುವನು ಬಯಸಿ.
ಆ ಆಸೆ ಕಾಮವೆಂದರಿತವನು ಶ್ರೀವಿಷ್ಣು
ಪುಣ್ಯಾತ್ಮರುಪಭೋಗಕಟ್ಟಿದನು ಸ್ವರ್ಗಕ್ಕೆ.

ಒಳಗೆ ಕುದಿದಳು ರಂಭೆ. ಪ್ರಭುವಿನಾಣತಿಯನ್ನು
ಪಾಲಿಸುತ ಯುಗಗಳನು ವಿರಹಾಗ್ನಿಯಲಿ ಸವೆಸಿ
ತನ್ನಾಸೆಗಳ ಸುಟ್ಟು ಸಿದ್ಧಳಾದಳು ಹೆಣ್ಣು
ಇದೆ ಕಟ್ಟಕಡೆ ಹುಟ್ಟು. ಅವನೊಳೈಕ್ಯಳು ಇನ್ನು.

ದೇವರಾಜ : ಸ್ವರ್ಗಕೇರಳೆ ಮತ್ತೆ ?

ಗಾಯಿತ್ರಿ : ಏರಳೆಂದೆಂದಿಗೂ, ರಂಭೆಯಾಗಳು ತಿರುಗಿ.

ದೇವರಾಜ : ಗೋಕುಲದ ಈ ನಿಕರ ?

ಗಾಯಿತ್ರಿ : ಎಲ್ಲವೂ ಅವಳಂತೆ ಮುಕ್ತಿ ಪಡೆದಪ್ರುದಹುದು.

ದೇವರಾಜ : ನಿನ್ನ ಸುಳಿವೇತಕಿಲ್ಲಿ ?

ಗಾಯಿತ್ರಿ : ಕಳೆದ ಯುಗಗಳಲವರು ನನ್ನ ಮಡುಲಾಶ್ರಯದಿ
ತಪವ ಕೈಕೊಂಡುದನು ಅರಿವೆಯಾ ಓ ರಾಜ ?

ದೇವರಾಜ : ಕೇಳಿಬಲ್ಲೆನು ಅದನು.

ಗಾಯಿತ್ರಿ : ಅಂದು ಆಶ್ರಯವಿತ್ತು ಅವರ ಭಾವಗಳನ್ನು
ಪ್ರೋಷಿಸಿದೆ. ಸಿದ್ಧಿವಡೆದರು ಎಲ್ಲ ಬಲು ಬೆಂದು.
ಬಂದರಿಲ್ಲಿಗೆ ಹೀಗೆ ನಂದಗೋಕುಲವಾಗಿ.
ಅಂದು ಸಾಕಿದ ಮಮತೆ ಎಳೆದುಯ್ದು ತರುತಿಹುದು;
ತಿರುಗುತಿರುವೆನು ಕಾಯ್ದು. ಸಿದ್ಧಿವಡೆದವರವರ
ಕಾವುದೇ ನನ್ನ ಭಾಗ್ಯದ ಪುಣ್ಯ. ಅದೆ ಸಾಕು.

ದೇವರಾಜ : ನನಗೆ ?

ಗಾಯಿತ್ರಿ : ಈ ರಾಸಲೀಲೆಯನು ಕಣ್ಣಾರೆ ಕಂಡುದೇ
ನಿನ್ನ ಸುಕೃತ ಕೇಳು; ಸಾಮಾನ್ಯವೇನಲ್ಲ.

ಶ್ರೀಕೃಷ್ಣ : (ಕೃಷ್ಣೆಯ ಬೀಡಿನಿಂದ ಹೊರಬೀಳುವನು)

ಕೃಷ್ಣೆ : (ಬಾಗಿಲನ್ನು ತೆಗೆದು ಕೃಷ್ಣನನ್ನು ಕಳುಹಿಸಿಕೊಡುತ್ತ)
ಅವರಾಸೆಗಳ ಮುರಿಯೆ. ಹೋಗಿ ಬಾ ಓ ಚೆನ್ನ.

ಶ್ರೀಕೃಷ್ಣ : ನನಗೆಲ್ಲರೂ ಬೇಕು. ತಾರತಮ್ಯವೆ ಇಲ್ಲ.

ಕೃಷ್ಣೆ : ಎದೆಬೆಳಕೆ ನೀನೊಬ್ಬರೊಡೆಮೆಯೇ ? ಹೋಗಿ ಬಾ.
ತಡೆಯಲಾರೆನು ಹೋಗು. ಮರೆವೆಯಾ ನಾಳೆಯನು ?

ಶ್ರೀಕೃಷ್ಣ : ಮರೆಯಲಾರೆನು. ಬರುವೆ. (ಹೋಗುವನು)

ಕೃಷ್ಣೆ : (ಕೃಷ್ಣನು ಮರೆಯಾಗುವವರೆಗೂ ನೋಡಿ, ಒಳಕ್ಕೆ ಹೋಗುವಳು)

ದೇವರಾಜ : ನನಗಿನ್ನು ಆಣತಿಯೆ ಓ ತಾಯೆ, ಹೋಗುವೆನು.
ರಂಭೆಯಭಿನಯಗಳನು ಭರತಮುನಿ ತಲೆದೂಗು-
ವಂತೊರೆವೆ. ಶಿಷ್ಯೆ ಶ್ರೇಷ್ಠಳೆ ಕೇಳಿ ಸುಖಿಸುವನು.

ಗಾಯಿತ್ರಿ : ಅಂತೆಸಗು.

ದೇವರಾಜ : ನಮಿಸುವೆನು ಮಾತಾಯಿ ನನ್ನ ನಾಡನು ಹೀಗೆ.
ಕೈ ಬಿಡದೆ ಕಾಪಾಡು. ನೀನೊಲಿಯೆ ನಾ ಮೆರೆವೆ. (ನಮಿಸುವನು)

ಗಾಯಿತ್ರಿ : (ವರದ ಹಸ್ತವನ್ನು ಮೇಲೆತಿ)
ನಾಡು ನಿನ್ನದು ಬಳೆಯ ಸೌಖ್ಯ ಸಂಪತ್ತುಗಳು
ತುಂಬಿ ಹರಡಲಿ ಹಬ್ಬಿ, ಸತ್ಯವಾಳಲಿ ಜಗವ.

ದೇವರಾಜ : (ಅವನತಶಿರನಾಗಿದ್ದು ಹರಕೆಯನ್ನು ಸ್ವೀಕರಿಸಿ ಹೋಗುವನು)

ಗಾಯಿತ್ರಿ : (ಅವನು ಹೋಗುವುದನ್ನೇ ನೋಡುತ್ತ ನಿಲ್ಲುವಳು)

ಗೀತ-ನಾಟಕಗಳು

# ವರ್ಷ - ಹರ್ಷ

( ಸಂಗೀತ ಕಲ್ಪನಾಚಿತ್ರ )

( ಸ್ವರಪ್ರಸ್ತಾರದೊಡನೆ )

ಪಾತ್ರಗಳು :

ಭಾವುಕ ತರುಣ
ಆತನ ಸಹಚರಿ
ಜಲಕನ್ನಿಕೆಯರು
ಬಿನದದ ಮಾಡದಲ್ಲಿರುವ ತರುಣ-ತರುಣಿಯರು
ಗಾಳಿ
ಜೋಗಿ
ಮೋಡ
ಕಿನ್ನರ ಕಿನ್ನರಿಯರು.

ಕಾಲ :

ಹಗಲೆಂದರೆ ಹಗಲು, ಇರುಳೆಂದರೆ ಇರುಳು
ಸಂಜೆ ಎಂದರೆ ಸಂಜೆ—ನೆನೆದ ಕಾಲ

ದೇಶ :

ತರುಣನ ಮನೆ, ಆ ಮೇಲೆ ಬಾನು, ಅಲ್ಲಿಂದ ಮಲೆಯ ಕೋಡು,
ಅಲ್ಲಿಂದ ಅಲ್ಲಿರುವ ಮನೆ.

ಸೂಚನೆ :

ಇದರ ಕೊನೆಗೆ ಗೀತನಾಟಕದ ಪ್ರಯೋಗಕ್ಕಾಗಿ ಅಂಕಿಗಳ ಅನುಕ್ರಮ
ದಲ್ಲಿದ್ದ ಸ್ವರಪ್ರಸ್ತಾರನ್ನು ಉಪಯೋಗಿಸಿಕೊಳ್ಳಬೇಕು.

## ಅವತರಣಿಕೆ

ಮಳೆಗಾಲದಲ್ಲಿ ನಾವು ಕೋಡುಮಲೆಗಳ ಕಾಡುಗಳಲ್ಲಿ ಅಲೆದಾಡಿದರೆ ಕಾಣುವ ಚೆಂದದ ನೋಟಗಳನ್ನೂ ಅನುಭವಿಸುವ ಆನಂದವನ್ನೂ ಈ ಸಂಗೀತ ಚಿತ್ರ ರೂಪಿಸುತ್ತದೆ. ಹೀಗೆ ಶ್ರಾವಣ, ಭಾದ್ರಪದ ಮಾಸಗಳಲ್ಲಿ ಭಾವುಕನ ಮನಸ್ಸು ತನ್ನಿಚ್ಛೆಯಂತೆ ಅಲೆದು ನೋಟಗಳನ್ನು ನೋಡಿ ಕೂಟಗಳಲ್ಲಿ ಬೆರೆದು ನಾಲು-ಹಬ್ಬಗಳಲ್ಲಿ ಪಾಲುಗೊಂಡು ವಿನೋದಿಸುವ ಅನುಕೂಲಕ್ಕಾಗಿ ಈ ನಿರೂಪಣದಲ್ಲಿ ಒಂದು ಕಲ್ಪನೆಯನ್ನು ಅಡಕ ಮಾಡಿದೆ. ಈ ಹಾಡುಗಬ್ಬ ತರುಣ-ತರುಣಿಯರಿಬ್ಬರ ಪ್ರಸನ್ನವಾದ ಹಾಸ್ಯಲಹರಿಯಲ್ಲಿ ಮೊದಲಾಗುತ್ತದೆ. ಹೊರಗೆ ಮಳೆ; ತರುಣ ನೆನೆದು ಬರುತ್ತಾನೆ; ತರುಣಿ ತಕ್ಕಂತೆ ಆದರಿಸುತ್ತಾಳೆ. 'ಈಗ ಒಂದು ರೇಡಿಯೋ ಇದ್ದರೆ ಎಷ್ಟು ಚೆನ್ನು' ಎನ್ನುತ್ತಾಳೆ. ಆತ ಬಡವ, ಆದರೆ ಭಾವುಕ. ಈಕೆ ಆತನಿಗೊಲಿದವಳು. ಆತ "ನನ್ನ ಮನಸ್ಸನ್ನು ನಿರ್ವಂಚನೆಯಿಂದ ಒಪ್ಪಿಕೊ, ಆಗ ನಾನು ನಿನಗೆ ರೇಡಿಯೊ ಕೇಳುವಂತೆ ಮಾಡುವುದಲ್ಲದೆ ಟೆಲಿವಿಷನ್ ತೋರಿಸುವ ನೋಟಗಳನ್ನೂ ತೋರಿಸುತ್ತೇನೆ" ಎನ್ನುತ್ತಾನೆ. ತರುಣಿ ಆತನನ್ನು ನೋಕಿ ಕುಳಿತು ತನ್ನ ಮನಸ್ಸನ್ನು ಆತನಿಗೇ ಒಪ್ಪಿಸುತ್ತಾಳೆ. ಈ ಮೋಡಿಯಲ್ಲಿ ಅವರಿಗೆ ಮಳೆಯ ನೀರಿನ ಓಟಗಳ ಹಾಡು ಕೇಳಿಸುತ್ತದೆ. ದೂರದ ಮಲೆಯೊಂದರ ಕೋಡಿನಲ್ಲಿ ಕಟ್ಟಿರುವ ಭವನವೊಂದರಲ್ಲಿ ನೆರೆದ ಜಿನದಿಗಳ ಮಳೆ-ಮುದದ ಹಾಡಿನೆಸಳು ಕೇಳಿಬರುತ್ತದೆ. ತರುಣ-ತರುಣಿಯರಿಬ್ಬರೂ ಮಳೆಯ ನೀರಿನ ಧಾರೆಯನ್ನು ಹಿಡಿದು ಮೋಡದ ಮೇಲೇರಿ ಬರುತ್ತಾರೆ. ಅಲ್ಲಿನ ತೇಜಃಪುಂಜವಾದ ತಿಳಿಬಾನನ್ನು ಕಂಡು ತರುಣಿ ಅಚ್ಚರಿಪಡುತ್ತಾಳೆ. ಬಿರುಗಾಳಿ ಬೀಸುತ್ತದೆ. ಅದು ನವನೀರದವನ್ನು ತರುವ ಗಾಳಿ. ಈ ಗಾಳಿಯ ಸುಳಿಯಲ್ಲಿ ತನ್ನ ಮತ್ತು ತನ್ನ ಪ್ರಿಯೆಯನ್ನು ಯಂತ್ರಗಳನ್ನು ತರುಣ ಬಹಳ ಕೌಶಲದಿಂದ ನಡೆಸಿ ಭವನವಿರುವ ಮಲೆಕೋಡಿಗೆ ಬಂದಿಳಿಯುತ್ತಾನೆ. ಅಲ್ಲಿ ಅವರಿಗೆ ಮಳೆಯ ಮೋಡದ ಸಂಮೋಹಕವಾದ ರೂಪ ಕಾಣುತ್ತದೆ. ಮಳೆ ಬರುತ್ತದೆ. ತರುಣ-ತರುಣಿಯರು ಮಾಡದಲ್ಲಿರುವ ಬಿನದಿಗಳ ಜತೆಯಲ್ಲಿ ಸೇರುತ್ತಾರೆ. ಅಲ್ಲೊಬ್ಬ ಜೋಗಿ ಏಕತಾರಿಯನ್ನು ಹಿಡಿದು ಮೋಡವನ್ನೇ ಮರಳುಮಾಡಿ ಮಕ್ಕಳೊಂದಿಗದು ಮಾತಾಡುವಂತೆ ಮಾಡುತ್ತಾನೆ: ಬಾನಿನಲ್ಲಿ ಕಿನ್ನರ-ಕಿನ್ನರಿಯರು ಹಾಡುತ್ತಿರಲು ಗೌರಿ ಬರುತ್ತಾಳೆ, ಗಣೇಶ ಬರುತ್ತಾನೆ. ಕೊನೆಗೆ ವರ್ಷಹರ್ಷದ ವೃಂದ-ಗೀತದಲ್ಲಿ ರೂಪಕ ಮುಗಿಯುತ್ತದೆ. ನೀರಿನೋಟಗಳ ಹಾಡನ್ನು ಕೇಳುತ್ತಾ ಮರಳಿ ಭವಕ್ಕೆ ಹಿಂದಿರುಗುತ್ತಾರೆ ಭಾವುಕ ದಂಪತಿಗಳು.

---

— ಪು. ತಿ. ನ.

[ ತರುಣನ ಮನೆ ]

[ ಮಳೆ ಹುಯ್ಯುತ್ತಿದೆ. ತರುಣ ನೆನೆದು ಹೊಸಿಲಿನೆಡೆ ನಿಂತಿದ್ದಾನೆ. ]

[ ೧ ] ಹಾಡು :

ತರುಣ : ಅಶ್ಶಿಶ್ಶಿ ಅಶ್ಶಿಶ್ಶಿ ಮಳೆ
ಎಲ್ಲೆಲ್ಲು ಕೊಚ್ಚೆ ಕೊಳೆ
ಬಿಸಿ ಬಿಸಿ ನೀರೊಳು ಕಾಲ ತೊಳೆ
ಕಳಕಳನುರಿಯಲಿ ಕಾಫಿಯೊಲೆ.

ತರುಣಿ : ಅಯ್ಯಯ್ಯೊ ನಿಲ್ಲಿರಲ್ಲೆ
ಅಂಗೈಯಗಲ ಕೋಣೆಯಲ್ಲೆ
ಬೀದಿಯ ನೀರೆಲ್ಲ ಚೆಲ್ಲೆ
ಏ ಗ ತಿ ?

ತರುಣ : ಏ ಗ ತಿ, ಏ ಗ ತಿ !
ಯಾಕೆ ನೀನಿಂತು ಕೂಗುತಿ ?
ನಿಲ್ಲಲಿಲ್ಲಿ ತಾಣವೆಲ್ಲೆ ?
ಅಲ್ಲೆ ಇಲ್ಲೆ ಇಲ್ಲೆ ಅಲ್ಲೆ ?
ತಲೆಯ ಮೇಲೆ ಸೂರ ನೀರು
ಸೋರುವುದಲ್ಲೆ !

ತರುಣಿ : ಏ ಗ ತಿ, ಏ ಗ ತಿ !

ತರುಣ : ಯಾಕೆ ನೀನಿಂತು ಕೂಗುತಿ ?

ತರುಣಿ : ನೆನೆದು ತೊಪ್ಪೆಯಾದರೇ ಗತಿ ?

ತರುಣ : ಏ ಗ ತಿ, ಏ ಗ ತಿ !
ಅಹ್ಹಹ್ಹ ಚಳಿ ಚಳಿ
ಬೆನ್ನೊಳು ಕಚಕುಳಿ
ಕೂರು ವೆನೊಲೆ ಬಳಿ

ತರುಣಿ : ಏ ಗ ತಿ, ಏ ಗ ತಿ ?

ತರುಣ : ಯಾಕೆ ನೀನಿಂತು ಕೂಗುತಿ ?

ತರುಣಿ : ಕೆಂಡವಾರಿದರೆ ಏ ಗ ತಿ ?
ಒದ್ದೆ ತೆಗೆದಿಟ್ಟು
ಹೊಸ ಬಟ್ಟೆಯುಟ್ಟು

ತರುಣ : ತಟ್ಟೆಯೊಳುಪ್ಪಿಟ್ಟು
ಕಾಫಿಯೊಂದು ಬೊಟ್ಟು

ಒಲಿಯ ಮುಂದೆ ನೀ ರೋಜಮುಖಿ
ಮಣಿಯ ಮೇಲೆ ನಾನೆಂಥ ಸುಖಿ !

[ ಸುಖಾಸೀನರಾದವೇಲೆ ]

ತರುಣಿ : ರೇಡಿಯೋ, ರೇಡಿಯೋ,
ಅಹ ಈಗೊಂದಿದ್ದರೆ ರೇಡಿಯೋ !
ತರುಣ : ರೇಡಿಯೋ, ರೇಡಿಯೋ,
ಕೈಗೆ ಬೇಡಿಯೋ
ಆಗಿ ಕೇಡಿಯೋ
ತಲೆ ಮರೆಸಿಕೊಂಡು ಓಡಿಯೋ
ತರಲಾಗದೆ ಒಂದು ರೇಡಿಯೋ !
ತರುವೆ ನಾನೊಂದು ರೇಡಿಯೋ, ಲೇಡಿ, ಓ.
ತರುಣಿ : ಲೇಡಿಯೋ ಲೇವಡಿಯೋ ?
ಬಿಡಿ ಬಿಡಿ ಏತಕೆ ರೇಡಿಯೋ
ಬಡವರಿಗೇತಕೆ ರೇಡಿಯೋ
ತರುಣ : ಸುಯ್ಯಲೇಕೆ ಇಗೊ ರೇಡಿಯೋ
ಟೆಲಿವಿಷನುಳ್ಳ ರೇಡಿಯೋ
ಕೈಗೆ ಕೈ ತಾಕಿ
ಮೈಗೆ ಮೈ ಸೋಕಿ
ನನ್ನೊಳಗೆ ನೀನು ಬಾರೆ
ಹರಣವೊಂದಾಗಿ ಸೇರೆ
ಆಗ ಕೇಳಿಸುವೆ ರೇಡಿಯೋ
ಈ ಮಳೆ ಮುದದ ಮೋಡಿಯೋ
ನಾವೆ ಕಿನ್ನರ ಜೋಡಿಯೋ —
ರೇಡಿಯೋ, ರೇಡಿಯೋ, ಲೇಡಿ ಓ.

[ನಿಶ್ಶಬ್ದ— ಮಳೆಯ ಹನಿ ತೊಟ್ಟಿಕ್ಕುತ್ತಿರುವಾಗ ಆಗುವ ಮಧುರಧ್ವನಿಲಹರಿ — ಜಲತರಂಗ್ ]

[ ೨ ] ನೀರಿನೋಟಗಳ ಹಾಡು :

ವಾರಾಶಿಯಾಕಾಶ ಧರಣೀ
ಎಲ್ಲಿಂದೆಲ್ಲಿಗೆ ?
ಇನ್ನು ಪಯಣವೆಲ್ಲಿಗೆ ? ॥ ಪ ॥

ಅಲೆಯೊಳು ಬೆಳುದಿಂಗಳ ಮಲ್ಲಿಗೆ
ಸವಿ ಸವಿ ನುಡಿ ತಡೆವ ಕಲ್ಲಿಗೆ
ಇನ್ನು ಮುಂದೆ ಪಯಣವೆಲ್ಲಿಗೆ ? ... ವಾರಾಶಿ ॥
ಮರ-ಗಿಡ ಬುಡಬುಡದೊಳು ಬಾಯ್ದೆರೆಯೆ
ಉಲಿವುಡುಗುತ ಹರಣದುಳಿವನೆರೆಯೆ,
ಹನಿಯೆರೆದು ರಸ ಹರಿಸಿ
ಹಸಿರ ಮೆರಸಿ ತೃಷೆಯ ಪರಿಹರಿಸಿ
ಜೀವನಕಿನ್ನು ಪಯಣವೆಲ್ಲಿಗೆ ? ... ವಾರಾಶಿ ॥
ತಿಟ್ಟೋ ತೆವರೋ ಕೊಳವೋ ಕಡಲೋ
ಮಲದ ಕೂಪವೋ
ಪುಣ್ಯತೀರ್ಥವೋ
ಕೃಷಿಯ ಕ್ಷೇತ್ರವೋ, ದೀಪ್ರಪ್ರಪಾತವೋ
ಎಲ್ಲಿಂದೆಲ್ಲಿಗೆ !
ಇನ್ನು ಪಯಣವೆಲ್ಲಿಗೆ ? ... ವಾರಾಶಿ ॥

[ ವೃಂದಗೀತ ಮತ್ತು ವಾದ್ಯಸ್ವರಲಹರಿ ಮೆಲ್ಲನೆ ಮಾಸಿ ಹೋಗಿ ನಿಶ್ಶಬ್ದವೇರ್ಪಡುತ್ತದೆ. ಮತ್ತೊಂದು ವೃಂದಗೀತ ದೂರದ ಪಲ್ಲೆಯ ಕೋಡಿನ ಮನೆಯಿಂದ ಮೂಡಿ ಬಂದು ಸ್ವಲ್ಪ ಹೊತ್ತಿನೊಳಗಿ ತಿರುಗಿ ಮಸಳುತ್ತದೆ.

[ ೩ ] ವೃಂದಗೀತದ ಪಲ್ಲವಿ:

ಹೊರಗಿಳಿಯೆ ಮಳೆ । ಒಳಗೆಸೆಯೆ ಕಳೆ ।
ಒಲಿದರಿಗಮಮಾ ಎಂಥ ಮುದ ॥
ಗುಡುಗಿನ ಮುಲುಕು । ಹೆಣ್ಣಿದೆ ಕುಲುಕು ।
ತರುಣರಿಗಿದುವೇ ಬಲು ಬಿನದ ॥

[ ೪ ] ಹಾಡು:

ತರುಣ : ಆಲಿಸು, ಸಖಿ, ಮುಗಿಲ ನೀರಿನೋಟಂಗಳ ಸವಿ ದನಿ —
ಮಳೆಯ ಮುದದ ಬಿನದಿಗರ ಹಾಡ ತೂರುವೀ ಹನಿ.
ಮನವನಪ್ಪಿ ನೀರ ಧಾರೆಯೇರಿ ಬಾರೆ, ನೀರೆ,
ಮೋಡದ ಮೇಗಣಾಗಸದಿಂದ ಆ ಮಾಡಕೆ ಜಾರೆ.

ತರುಣಿ : ( ಹನಿಯ ಧಾರೆಯನ್ನು ಹಿಡಿದು ತರುಣನೊಡನೆ ಮೇಲಕ್ಕೇರುತ್ತಾ )
ಅಹಹ,
ಮೇಲೆ ತೇಲುತೇರುವಂತೆ ನಾನಾದೆನು ಹಗುರ
ಹೆರಳ ಸುರುಳಿಯಲ್ಲಿ ಸೆಕ್ಕೆ ಎಳವೆರೆಯ ಚಿಗುರ.

ತರುಣ : ಅಚ್ಚಗಪ್ಪು ಬಾನಿದಾಯ್ತು ಹರಳ ಕನ್ನಡಿ ;<br>
ಬಾಂದಳದ ಪದುಮವೋ ಎನೆ ನಿನ್ನ ಚೆನ್ನಡಿ.<br>
ತರುಣಿ : ಚಂದ್ರದೀಪ ತಾರೆಕುಸುಮ ಶೃಂಗಾರದ ಹಂದರ<br>
ಕಂಪಿಸೆಲರೆ ಕುಟ್ಟಿಮವಾಗೆ ಕಿನ್ನರಿ ನಾ, ಕಿನ್ನರ.

[ ೫ ] [ಮೋಡದ ಮೇಗಣಾಗಸದಲ್ಲಿ ನಿಂತು ]

ತಿಳಿ ಬಾನು, ಅಹ ಏನು ಹೊಳಪೋ<br>
ಇಲ್ಲಿ ನಿಂತ ಬಸಂತ<br>
ಚಳಿ ಇರುಳ್ ತಲದೊಳು<br>
ಇಲ್ಲೊ ಎಲ್ಲ ಪ್ರಶಾಂತ !<br>
ಬೇರೆ ತಪದಿರವು – ಇದು ಕನಸೋ<br>
ತನುವಸುಳಿದು ಹರಣವುಳಿವ ನನಸೋ … ತಿಳಿ ಬಾನು ॥<br>
ಹಗಲಿದೋ ಇರುಳೋ ; ಬಿಸಿಲೋ ಜೊನ್ನವೋ ?<br>
ಎಂದು ಕಾಣದಿಂಥ ಬೆಳಕು ಚೆನ್ನವೋ ! … ತಿಳಿ ಬಾನು ॥

[ ೬ ] [ ಬಿರುಗಾಳಿ ಧಟ್ಟನೆ ಬೀಸುತ್ತದೆ. ]

ಬಿರುಗಾಳಿ : ಬಿಡಿ ಬಿಡಿ ಬಿಡಿ ಕರಿ ಮುಗಿಲಿಗೆ ದಾರಿ<br>
ಕಡಲಣುಗಗೆ ದಾರಿ<br>
ಮಳೆಯೊಡೆಯುಗೆ ದಾರಿ<br>
ಬಿಡಿ ಬಿಡಿ ಬಿಡಿ ಕರಿ ಮುಗಿಲಿಗೆ ದಾರಿ<br>
ದಾರಿ ದಾರಿ, ತಿರೆ ಹೌಹಾರಿ, ಬನ ಚೀರಿ<br>
ಮಲೆಯಾಡಲು ದೂರಿದೂರಿ<br>
ಬಂದನಿಗೋ ಝುಂಝಾಸಮೀರ<br>
ಕಾರ್ಮುಗಿಲನು ಕರೆವನಿಗೋ ' ಬಾರ ಬಾರ,<br>
ಕ್ಷೇಮಕಾರ, ಯಜ್ಞಸಾರ, ವರುಣ-ಕುಮಾರ '<br>
ಬಿಡಿ ಬಿಡಿ ಬಿಡಿ ಕರಿ ಮುಗಿಲಿಗೆ ದಾರಿ.

ಗುಡು ಗುಡು ಗುಡು ನೀರ ತೇರು ಹರಿಯೆ<br>
ಚಿಟಿ ಚಿಟಿ ಚಿಟಿ ಮಿಂಚಿನ ಕುಡಿ ಮೆರೆಯೆ<br>
ರವಿಯ ರಂಗ ಸೂರೆಗೈದ ಮಳೆಬಿಲ್ಲೆಸೆಯೆ<br>
ಬಂದ ನಿಗೋ ಬಾನಸಿಂಗಾರ<br>
ನೀರನೀರ, ಇಂದ್ರಚಾಪಹಾರ ;<br>
ನೆರೆಯ ತಂದನಿಗೋ —<br>
ಬಿಡಿ ಬಿಡಿ ಬಿಡಿ ಕರಿ ಮುಗಿಲಿಗೆ ದಾರಿ

ಕಡಲಣುಗಗೆ ದಾರಿ
ಬೆಳಿಯೊಡೆಯಗೆ ದಾರಿ.

[ ಬಿರುಗಾಳಿಯ ವೈಹಾಳಿಯಲ್ಲಿ ಮಲೆಕೋಡಿನ ಬಳಿಗೆ ತರುಣ-ತರುಣಿಯರು ಬರುತ್ತಾರೆ. ]

ತರುಣ : ( ಮಾತು ) ಬೆರಗಾಗಿರೆ ಕಣ್‌ಕರಣ
ಕಸುವಿನೊಳುಳಿಯಿತು ಹರಣ
ಕಾಲೆಡೆ ಸುಯ್ದಿತು ಗಾಳಿ
ಬಲು ರೌದ್ರವ ತಾಳಿ
ಅಗೊ ಅಗೊ ಪ್ರಿಯೆ,
ತಳದೊಳೆಸೆವ ಕೋಡಿನ ಮನೆಯೊಳು ಮುದದಾಟ
ಕೊರೆಯಿಲ್ಲದ ಮುಗಿಲನೋಟ, ಬಿನದಿಗಳೊಕ್ಕೂಟ !
ಅಲ್ಲಿಗಿಳಿವ, ಬಾ, ಬಾ, ಸಖಿ.

( ಇಳಿದು ) ಅದಿಗೋ, ಪ್ರಿಯ ಸಖಿ, ಮಳೆಯ ಮುಗಿಲ ಮೊದಲ ನೋಟ,
ಕೋಡು ಮೋಡದೊಕ್ಕೂಟ !
ಕುಸುಮಾಂಜಲಿಯಿದ ಕೊಳ್ಳೈ, ಸುಂದರ ನವನೀರದ
ತವನಿಧಿ ಪಾರಾವಾರದ.

[ ೭ ] ಹಾಡು :

ನೀಲದೊಳಗೆ ನವನೀರದಾಗುಮನ
ನೋಡಾ,
ಭೀಷ್ಮ ಗ್ರೀಷ್ಮ ದೂಷ್ಮ ಶಮನಪಟು ॥ ಪ ॥
ಶಿವನ ಜಡೆಯಿದೋ ಗಂಗೆಯ ತಳೆದ
ಸೊದೆಯ ಗೂಡಿದೋ ಸುರಮಧುವನದ
ಮುಗಿಲಿಗೋ
ಮುಗಿಲಿಗೋ
ಜಗದ ಜೀವದೆಲ್ಲ ದಿಗಿಲ ಕಳೆವ
ಮುಗಿಲಿಗೋ — ... ... ನೀಲದೊಳಗೆ,॥
ನವಿಲು ಕುಣಿಯೆ ಸೋಗೆಯ ಗರಿ ಕೆದರಿ,
ಆಸೆಯೆದೆಯೊಳೆಚ್ಚರೆ ಕಿವಿ ನಿಮಿರಿ,
ಗುಡುಗಿದೋ
ಗುಡುಗಿದೋ

ಸರವಸುಡುಗಿ ಮರದೊಳಡಗೆ ವಿಹಗ .... ನೀಲದೊಳಗೆ ॥

ಓ, ಬಗೆ ಬಗೆ ಬಣ್ಣದ ಬಯಕೆಗಳೊಡೆದಿರುವೆದೆಯ
ಜಲದ, ನೀ, ಮಳೆಬಿಲ್ಲನು ತಳೆದಣಿಸುತಿಹೆಯಾ ?
ಹೊಳವೇ
ಓ, ಹೊಳವೇ,
ರಸದೊಡಲಂಚಿನ ಸೆಳೆಮಿಂಚಿನ ಹೊಳವೇ,
ನಗುವೆಯೋ
ಕಳಕ್ಕಳಿಸಿ
ನಗುವೆಯೋ
ಬೆಳಕೆರಚುವ ನೆವದೊಳು ಮೋಹವ ನೆರೆವೆಯೋ
ಎರೆವೆಯೋ —
ನೀಲದೊಳಗೆ ನವನೀರದಾಗಮನ
ನೌಡೌ,
ಭೀಷ್ಮಗ್ರೀಷ್ಮದೂಷ್ಮ ಶಮನಪಟು —

ತರುಣಿ : (ಮಾತು) ಇನಿಯ, ಕರಿ ಮುಗಿಲಿದು ಬರೆ, ಬೂದಾಯಿತು ಬಾನು ;
ಹರಡಿತು ನೆರಳೆಲ್ಲೆಲ್ಲು, ಇದು ತಾನೇ ತಾನು.

ತರುಣ : ಅಹುದು ಸಖಿ,

(ವೃತ್ತ — ಕೇದಾರಗೌಳ)

ನೀಲ ಪೇಲವಮಾಗೆ ಸಾರವನು ಹೀರಿದೊಲು ಕಾಳವಮಮಾ
ಮೇಘ, ಈ ಸಮಯದೊಳು ಸಂಜೆ ತಳೆಯದು ಕುಸುಮರಾಗಸುಷಮಾ
ಶಶಿಸೂರ್ಯತಾರಾವಕಾಶ ತಾನುನ್ನತೋನ್ನತವೆಂಬುದಂ
ಮರೆತು ಸಾಕಾರಲೋಲಮಾಕಾಶಮಾಯ್ತೆನಿಸುವುದಂಬುದಂ.

ತರುಣಿ : ದಿಟ, ಇನಿಗಪ್ಪಿದು, ರಮಣ, ಈ ಮೋಡದ ಕಪ್ಪು
ಅದಕೇ ಇದು ತಾನಾಯಿತು ಶ್ಯಾಮನಿಗೊಪ್ಪು.
ಅಲ್ಲದೆ,

[ ೮ ] ಹಾಡು :

ಬಾನಿದಾಗೆ ಕರಿದು, ತಿರೆಯೊ
ಹಸಿರು ಹಳದಿ ಬಿಳಿದು ॥ ಪ ॥
ದಿವದ ಕಳೆಯ ಕಳೆದು ನೆಲಕೆ
ಪಚ್ಚೆ ಹೊನ್ನು ಹರಿದು ॥ ಅ:ಪ ॥

ಯಾರಿಗೀಗ ಕೊರಗು — ಇಲ್ಲಿ

ಯಾರಿಗೀಗ ಕೊರಗು – ಈ
ಮಲೆ ಮಾಡದೊಳೂ ಬೆರಗು –

ಕಡಲಿನಾಳದೊಳು ತೇಲುವ
ಶ್ಯಾಮಸೊ ಈ ಮಲೆ ಸಾಲು
ಇಂಥ ನೀಲಕಾವುದು ಮೇಲು
ಕಣಿವೆ ತೆವರೊಳಲೆಯೆ ಬಿಸಿಲು
ಮಲೆಗೋ ಮುತ್ತಿನ ಸೂಸಲು ... ಬಾನಿದಾಗೆ ॥

ಕುಳಿಕುಳಿಗೂ ಮಣಿಯ ಹಾಸಿ
ಬೆಳಕ ಕರೆವ ನೀರು
ಕೋಡುಕೋಡೊಳು ಪಚ್ಚೆಹರಳ
ಬನದ ತಡಸಲ ಜಾರು
ಬಲು ಬಗೆ ಹಸಿರಿನ ಮೇಳದ ಹಾಡನು
ಹಾಡುವ ಗುಂಗಿನ ಕಾಡು
ಇಂಥ ನೋಟಕಾವುದು ಈಡು. .... ಬಾನಿದಾಗೆ ॥

ಗಿಡದ ನಡುವೆ ಬಲೆಯ ಹಾಸಿ
ಬಿಸಿಲ ಹಿಡಿವ ಹುಲ್ಲು
ಗಾಳಿಗಿಲ್ಲಿ ಜಾರುವಾಟ
ವೆನ್ನೆ ಅಲೆಯಲೆ ನೆಲ್ಲು
ಹಬ್ಬಕೆ ನೆರೆಹೊರೆ ನೆರೆಯಿತೊ ಎನೆ
ಗದ್ದೆಯ ನೀರೊಳು ನೆರಳು
ಇಂಥ ನೋಟಕಾರಾಗರು ಮರುಳು
ಬಾನಿದಾಗೆ ಕರಿದು ತಿರೆಯೊ
ಹಸಿರು ಹಳದಿ ಬಿಳಿದು
ಯಾರಿಗೀಗ ಕೊರಗು
ಬಲ್ಲವರಾರಿಗೀಗ ಕೊರಗು
ಈ ಜಗಕೆಲ್ಲಕೂ ಬೆರಗು .... ಬಾನಿದಾಗೆ ॥

**ತರುಣ :** ದಿಟ, ಕೆಳದಿ,

( ವೃತ್ತ : ರಾಗ — ಆನಂದಭೈರವಿ )

ರಾಗದಾವೇಗವೆರದಂಥ ಬಹುವರ್ಣಸೃಷ್ಟಿ
ಗಂಧವತಿ ತಿರೆಗೀಗ ಶಾಂತಿ ತುಷ್ಟಿ
ಮಾಲಿನ್ಯ ತಾಪಗಳ ಕಳೆವೊಸಗೆಯೆಸಕದೊಳು

ಹೊಳೆ ನೆರೆಗಳೊಳೆ ರೌದ್ರ ; ಹದುಳೆ ಸೃಷ್ಟಿ.

(ಮಾತು) ಅಗೊ ಮರಳಿ ಬಂತು ಮಳೆ,
ನಮ್ಮ ನುತಿಗು ಖತಿಗೂ ತಾನು ಹೊರತೆಂಬ ಪರಿಗೆ
ಹನಿಯೆರಚಿ,
ಬಾ, ಕಾಂತೆ, ಬಿನದಿಗರ ಕೂಟದೊಳು ಬೆರೆವ ನಾ-
ವೀ ಮಲೆಮಾಡದೊಳಗೆ.

[ ಕೋಡಿನ ಮಲೆಮಾಡದಲ್ಲಿ ಬಿನದಿಸುವ ತರುಣ-ತರುಣಿಯರು ]

[ ೯ ] ಹಾಡು :

ವೃಂದಗೀತ : ಹೊರಗಿಳಿಯೆ ಮಳೆ
ಒಳಗೆಸೆಯೆ ಕಳೆ
ಒಲಿದರಿಗಹಹ ಎಂಥ ಮುದ ॥ ಪ ॥

ಗುಡುಗಿನ ಮುಲುಕು
ಹೆಣ್ಣೆದೆ ಕುಲುಕು
ತರುಣಿರಿಗಿದುವೇ ಬಲು ಬಿನದ ॥ ಅ. ಪ ॥

ದೆಸೆಗಳ ಮುಸುಕಿ
ಮಲೆಗಳ ಕುಸುಕಿ
ಮಸಗುವ ಮೋಡಕದೆಂಥ ಮದ
ಮಿಂಚಿನ ಹುಬ್ಬ
ಹಾರಿಸಿ ಮಬ್ಬ
ಕವಿಸುವ ಮಾಟವಿದೆಂಥ ಹದ !

ಕಡಲಿನ ಕುರುಳೋ
ಗಗನದ ಹುರುಳೋ
ಯಾರ ಮರುಳಿದು ಇಂಥ ಮಳೆ ?
ಹಳಹಳಸಲು ಇಳೆ
ಅಲೆದು ಬಯಲೊಳೆ
ಮರಳಿ ಯಿಳಿವವೋ ಹೊನಲು ಹೊಳೆ !

ಮೈ ಮೈ ಮುಟ್ಟಿರೆ
ಕೈ ಕೈ ಕಟ್ಟಿರೆ
ಕೂಡಿಹೆವೇ ಎನೆ ಶಂಕಿಸುವ
ತೆರದೊಳು ನೋಡಿಯ
ನೆಸಗುವ ರೂಢಿಯ

ಮೋಹನನಾವನು ಝೇಂಕಿಸುವ ?

ಕಿರಿದೆನಿಸುತ ಬಾನ್
ಹಿರಿದೆನಿಸುವ ತಾನ್
ಬಣ್ಣವ ಕೆಡಿಸುತಲೀ ತಿರೆಯು
ಮಾಯೆಯು ಸೆರಗ
ನೆಳಿವೀ ಬೆರಗ
ಕೊಂಡಾಡದರಾರೀ ಮಳೆಯ !

ಕಂಪಿನ ಜೊಂಪೆಯು
ಹಿಡಿದ ನಿಳಿಂಪೆಯು
ತೆರ ಬರುವೆಲರೆಸಳೇನಮಮ !
ಕೋಡಿನೊಳೆತ್ತರ
ಮೋಡದ ಹತ್ತಿರ
ಇಂಚರಿಸುವ ನಾವಮರ ಸಮ.

ಅಗೊ ಅಲ್ಲಲ್ಲಿ
ಹಿಡಿ ಹಿಡಿಯಲ್ಲಿ
ಬಿಸಿಲ ಚೆಲ್ಲುತಿದೆ ಮುಗಿಲ ಹಬೆ
ಎಂತಹ ಬಣ್ಣ
ಪುಣ್ಯವೊ ಕಣ್ಣ
ಹಳುಹಳುವಾಯಿತು ದೇವಸಭೆ

ತರುಣ : ಬಿರುವಳೆ ಬಿಟ್ಟಿತು ;
ಮರಳಿಯು ಕಟ್ಟಿತು
ಮುಗಿಲಾ ಕೋಡೊಳು – ಎಂಥ ಕಳೆ !
ಗಿರಿಧರನೋ ಗಿರಿ
ಮರಳಿದನೋ ಹರಿ
ಕವಿ ಯಾರಿಹನಿಲ್ಲಿದ ಹೊಗಳೆ

ವ್ಯಕ್ತಿ : ( ಮಾತು ) ಹೊಗಳುವೆ ನಾನೀ ಮೋಡವ ಹಾಡಿನೊಳು
ಸ್ವರಗಳ ಲಯದೊಳು, ಹಿರಿಯರ ಹಾದಿಯೊಳು
ನೆನೆದಾ ಶ್ಯಾಮನನು
ನಯನ ವಿರಾಮನನು.

[ ೧೦ ] ಹಾಡು :

ಗಿರಿಧರ, ಕಾಳಮೇಘ
ಉದರ ವನವಹ್ನಿ ಪಾನಶೀಲರಸೌಘ .... ಸ್ವರ ||

ಕಲುಷಹರ ಜೀವನಭರ
ಸುರಪಥಚರ ಮನೋಹರ
ಜಿತ ಸಾಗರಜನ್ಮ ಕ್ಷಾರ
ಶುಭ್ರನೀರ ನೀರದನೇ .... ಗಿರಿಧರ ॥

ಹರ್ಷಿತಕರ್ಷಕ ವರ್ಷ
ಕರ್ಷಿತೌಷಧಿ ತರ್ಷ
ಜಾಡ್ಯಜೃಂಭಣಾಮರ್ಷ
ಸಕಲಲೋಕ ಪ್ರಕರ್ಷಕನೆ .... ಗಿರಿಧರ ॥

[ ದೂರದಲ್ಲಿ ಏಕತಾರಿಯನ್ನು ಮಿಡಿಯುತ್ತ ಜೋಗಿ ]

[ ೧೧ ] ಹಾಡು :

ಜೋಗಿ : ಮಲೆಯೊಡನೆ ಮಲೆಯಾಗಿ ನಿಂತ ಮೋಡ
.ಬಳಿಗೆ ಬಾ ಹಾಡುವೆನು ನಿನಗೊಂದು ಹಾಡ
ತರುಣಿಯರು : (ಮಾತು) ಅಗೊ, ಅಲ್ಲಿ, ಏಕತಾರಿಯ ಹಿಡಿದು ಮಿಡಿವ ಜೋಗಿ!
ಮೋಡವನೆ ಕರೆಯುತಿಹನಾತ ಕೂಗಿ.

೧೨ ] ಹಾಡು :

ೋಗಿ : .( ಹತ್ತಿರಕ್ಕೆ ಬರುತ್ತಾ ) ಮಲೆಯೊಡನೆ ಮಲೆಯಾಗಿ ನಿಂತ ಮೋಡ
ಬಳಿಗೆ ಬಾ ಹಾಡುವೆನು ನಿನಗೊಂದು ಹಾಡ –
ಕೋಡಿಂದ ಕೋಡಿಂಗೆ ಮಲೆವ ಮೋಡ
ಇತ್ತ ಬಾ ಮಾತಿಹುದು ನಿನ್ನ ಕೂಡ.
ಬನಬನಕೆ ಹಾಲೆರೆಯುತಿರುವ ಮೋಡ
ಅರಿತರಾರ್ಸೈ ನಿನ್ನ ಕರುಣೆ ಜಾಡ ?
ಹೊಂಬಿಸಿಲ ಜಡೆಯೊಳಗೆ ಸೂಡಿರುವ ಮೋಡ
ನೆಲಕೆ ಚಳಿ ಕವಿದಿರುವೆ ರುದ್ರ ನೋಡ.
ಹಿಡಿಯೊಳಗೆ ಜಡ ಜೀವವಡಗಿಸಿಹೆ ಮೋಡ
ಸರಸವೇಕ್ಕೆ ನಮಗೆ ನಿನ್ನ ಕೂಡ.
ಮೋಡ : ( ಮಾತು ) ಓ, ಜೋಗಿ, ನಿನ್ನೊಡನೆ ನನಗಿಲ್ಲ ಬಿಂಕ
ಬೇಕಾದುದೊರೆ ನಿನ್ನ ನುಡಿಗಿಲ್ಲ ಸುಂಕ.
ಜೋಗಿ : ( ಸಂಹೃಷ್ಟನಾಗಿ ) ಮೇಘವಾದ ಪ್ರಸನ್ನ, ಮಕ್ಕಳೇ ನುಡಿಸಿರೀಗ
ಮೋಡ : ಕೇಳಿ, ಮಕ್ಕಳೆ, ಕೇಳಿ, ಎಳೆಯಗೂ ಎಳೆಯನಾನಾದೆನೀಗ.

[ ೧೩ ] ಹಾಡು :

ತರುಣ-ತರುಣಿಯರು : (ಎಳೆವಯಸ್ಸಿನವರು) ಮುಗಿಲೆ, ಮುಗಿಲೆ ಆಹಹಾಹಹಾ

ಎಲ್ಲಿಂದ ಬಂದೆ
ಏನೇನ ತಂದೆ
ಎಲ್ಲಿಂದ ಬಂದೆ ಏನೇನ ತಂದೆ
ಮುಗಿಲೆ ಮುಗಿಲೆ ಆಹಹಾಹಹಾ.

ಮೋಡ : ಕೇಳು ಕೇಳು ತಿರೆ ಮುಗಳೇ
ದೇವರ ಕನಸಿನ ಮುಗುಳೇ
ಕ್ಷೀರಸಾಗ ರಾಗಾರ ಕ್ಷಾರಾಬ್ಧಿಗೆ ಬಿದ್ದೆ
ಬಾನಾಗುತ ಜೀವಜಾತಕಲ್ಲಿ ತೆರೆಯೊಳಿದ್ದೆ
ಹೊಳೆವ ಬಿಸಿಲಕೋಲ ಕಣೆಯ ಅಲೆ-ಬಿಲ್ಲಿಗೆ ಹೂಡಿ
ಮರಳಿಸುವ ಆಟದೊಳಗೆ ಗಾಳಿಗಾದೆ ಜೋಡಿ
ಹಿಡಿದೆಬ್ಬಿಸಿ ಇನನ ಕರ
ಆದೆ ಎಲರಿಗಿಂತ ಹಗುರ
ಕೇಳು ಕೇಳು ತಿರೆ ಮುಗಳೇ
ದೇವರ ಕನಸಿನ ಮುಗುಳೇ ಅಹಹಾಹಹಾ

ತರುಣ-ತರುಣಿಯರು : ಮುಗಿಲೆ ಮುಗಿಲೆ ಆಹಹಾಹಹಾ
ಎಲ್ಲಿಂದ ಬಂದೆ,
ಏನೇನ ತಂದೆ
ಎಲ್ಲಿಂದ ಬಂದೆ ಏನೇನ ತಂದೆ
ಮುಗಿಲೆ ಮುಗಿಲೆ ಅಹಹಾಹಹಾ.

ಮೋಡ : ಕೇಳು ಕೇಳು ತಿರೆ ಮುಗಳೇ
ದೇವರ ಕನಸಿನ ಮುಗುಳೇ,
ಕ್ಷಾರವ ನೀಗುತ ಕ್ಷೀರದನಾದೆ
ಪಾರಾವಾರವ ಮೀರಿದನಾದೆ
ನೀಲಾಕಾಶದ ತೇಲಿಗನಾಗಿ
ಓಲಾಡಿ ಪುಣ್ಯರ ನಾಡಿಗೆ ಹೋದೆ.
ಕೇಳು ಕೇಳು ತಿರೆ ಮುಗಳೇ
ದೇವರ ಕನಸಿನ ಮುಗುಳೇ — ಆಹಹಾಹಹಾ

ತರುಣ-ತರುಣಿಯರು : ಮುಗಿಲೆ ಮುಗಿಲೆ ಆಹಹಾಹಹಾ
ಎಲ್ಲಿಂದ ಬಂದೆ
ಏನೇನ ತಂದೆ
ಎಲ್ಲಿಂದ ಬಂದೆ ಏನೇನ ತಂದೆ
ಮುಗಿಲೆ ಮುಗಿಲೆ ಆಹಹಾಹಹಾ

ಮೋಡ : ಕೇಳು, ಕೇಳು ತಿರೆ ಮಗಳೇ
ದೇವರ ಕನಸಿನ ಮುಗುಳೇ
ಕಣಕಣದಿ ನೆಲವೆದ್ದು
ಮಾಡಿತೆನಗೆ ಬಲು ಮುದ್ದು
ಕಾಳಿನಲ್ಲಿ ಕಾಡಡಗಿ
ಬೇಡಿತೆನ್ನ ಉಸಿರುಡುಗಿ
ಬನದ ತಾತ ಮಲೆ ಎನ್ನ
ಕರೆದನು "ಬಾ, ಸಂಪನ್ನ"
ಸುಯ್ದು ತುಯ್ಯೆ ಬಿರುಗಾಳಿ
ಆಯಿತೆನಗೆ ವೈಹಾಳಿ
ಕೇಳು ಕೇಳು ತಿರೆ ಮಗಳೇ
ದೇವರ ಕನಸಿನ ಮುಗುಳೇ ಆಹಹಾಹಹಾ

ತರುಣ-ತರುಣಿಯರು : ಮುಗಿಲೆ ಮುಗಿಲೆ ಆಹಹಾಹಹಾ
ಎಲ್ಲಿಂದ ಬಂದೆ
ಏನೇನ ತಂದೆ
ಎಲ್ಲಿಂದ ಬಂದೆ ಏನೇನ ತಂದೆ
ಮುಗಿಲೆ ಮುಗಿಲೆ ಆಹಹಾಹಹಾ.

ಮೋಡ : ಜಡೆಯನೊದರಿ ನೆರೆಯ ತಂದೆ
ಬೆಳಕ ಬಿಡಿಸಿ ಬಿಲ್ಲ ತಂದೆ
ನೀರ ಮಸೆದು ಮಿಂಚ ತಂದೆ
ಜಾಡ್ಯಕೆಲ್ಲ ಸಂಚ ತಂದೆ
ಬಟ್ಟ ಮಲೆಗೆ ಹಸಿರ ತಂದೆ
ಸುಟ್ಟಡವಿಗೆ ಸೊಂಪ ತಂದೆ
ಕಂಡ ನೆಲಕೆ ಕಂಪ ತಂದೆ
ಬೆಂದೊಡಲಿಗೆ ತಂಪ ತಂದೆ
ಕೇಳು ಕೇಳು ತಿರೆ ಮಗಳೇ
ದೇವರ ಕನಸಿನ ಮುಗುಳೇ ಆಹಹಾಹಹಾ

ತರುಣ-ತರುಣಿಯರು : ಮುಗಿಲೆ ಮುಗಿಲೆ ಆಹಹಾಹಹಾ
ಏನೇನ ತಂದೆ
ಎಲ್ಲಿಂದ ಬಂದೆ
ಎಲ್ಲಿಂದ ಬಂದೆ ಏನೇನ ತಂದೆ
ಮುಗಿಲೆ ಮುಗಿಲೆ ಆಹಹಾಹಹಾ

ನೋಡ : ಎಲ್ಲಿಂದ ಬಂದೆ ಏನೇನ ತಂದೆ
ಅಲ್ಲಿಂದ ಬಂದೆ ಇಲ್ಲಿಂದ ಬಂದೆ
ಎಲ್ಲೆಲ್ಲಿಂದಲು ಮೇಲೆದ್ದು ಬಂದೆ—
ಏನೇನ ತಂದೆ ? ಎಲ್ಲವ ತಂದೆ
ಹಸಿರ ತಂದೆ ಉಸಿರ ತಂದೆ
ಋಷಿಗಳರಿವ ಜನಕೆ ತಂದೆ
ಶ್ರುತಿಯ ಮೊರೆಯ ಮನಕೆ ತಂದೆ
ಹೊರಗೆ ಮಳೆಯ ಮಬ್ಬು ಕವಿಸಿ
ಒಳಗೆ ತಂದೆ ಹಬ್ಬಗಳ
ಕವಿಯ ಮನಕೆ ಕಬ್ಬಗಳ—
ತಂದೆ ಶ್ಯಾಮ ಶೌರಿಯ
ತಂದೆ ತಂದೆ ಗೌರಿಯ

[ಕೊನೆಯೆರಡು ಸಾಲುಗಳನ್ನುಚ್ಚರಿಸುತ್ತಾ ನೋಡಮರೆಯಾಗುತ್ತದೆ. ಜೋಗಿಯೂ ಅದರ ಜೊತೆಗೆ ಈ ಸಾಲುಗಳನ್ನು ಹೇಳಿಕೊಳ್ಳುತ್ತಾ ಭಾವಾವಿಷ್ಟನಾಗಿ ಏಕತಾರಿ ಮಿಡಿದು ಹಾಡುತ್ತಾನೆ. ]

[ ೧೪ ]

ಜೋಗಿ : ಬಂದಳು ಕಾಳಿ ಬಂದಳು ಗೌರಿ
ಬಂದಳೆಂತು ನುಡಿ ನನ್ನೇಕತಾರಿ
ಓ ಶ್ಯಾಮಳ ನೀರದ ಚಿಕುರೆ, ಗೌರವ್ವ
ಜಾತಿ ಶ್ಯಾಮಂತಿಕೆ ಮುಕುರೆ
ಕರುಳೊಳು ಸೆರೆ ಹಿಡಿದಿನಶಶಿತಾರಾವಳಿ ಬಿಡುಗಡೆಗೆಳಸಿ
ಮಿಸುಕಾಡುವೆಸಕದ ಥಾಳೋ ಎಂಬೊಲು ಮಿರುಮಿಂಚನಂಚೊಳು ಹೊಳಸಿ ;
ನೆಲದೊಡಲೊಳು ಬೆಳಕೆಲರಾಕಾಶದ ಹಂಬಲವನು ಕಾಳುತಾಳೆ —
ಮೇಲೆದ್ದ ತಿರೆ ಹುಡಿಗೋವಾಕರುಣೆಯ ಸರಿಯೋ ಎನೆ ಹನಿ ಬೀಳೆ ;
ಕಂಪಿನ ಗುಟುಕನು ಗಾಳಿಗೀವಂದದಿ ಹೊದರೊಳು ಹೊಡೆಯೆತ್ತೆ ತಾಳೆ ;
ಮರೆಯಾದ ನೀಲವ ಅಂಗೈಯೊಳೆ ಹಿಡಿದು ನೆಲಸಂಪಿಗೆ ಮೆಲ್ಲನೇಳೆ;—
ನೀ ಬಹಮುದದ ಜಾಡನೆ ಹಿಡಿದ ಒಸಗೆ ಹಾಡನಿದ ಅವ್ವ ನೀ ಕೇಳೆ —
ಓ ಶ್ಯಾಮಳ ನೀರದ ಚಿಕುರೆ, ಗೌರವ್ವ,
ಜಾತಿಶ್ಯಾಮಂತಿಕೆ ಮುಕುರೆ —
ಗಿರಿಯೆದೆ ಬನದೆಲೆಯಲೆ ಮೇಲೆ ತೇಲಲು,
ಬಿಳಿಪಟದೋಡೆನೆ, ಮುಗಿಲ ಸಾಲು ;

ಚಂಪಕೆ ಮಡಿಳಾಗೆ ಕಣ್ಣ ಮುಚ್ಚಿಸಿತನ್ನ
ನಿನ್ನ ಪರಿವಾರದ ಸುರರ ಧಾಳು.
ಇನ್ನೇನ ನುಡಿಯಲಿ ನರನೇನ ಹಾಡಲಿ
ಸುಮ್ಮನೆ ಕಿನ್ನರಿ ಮಿಡಿವೆನು.
ಕಿನ್ನರ ಗೀತವ ತರುವೆನು.

[ ಜೋಗಿ ಏಕತಾರಿಯನ್ನು ಸುಮ್ಮನೆ ಮಿಡಿಯುತ್ತಾ ಮೌನವಾಗಿರುವಾಗ ಕ್ರಮ ಕ್ರಮವಾಗಿ ಗೌರಿಯ ಆಗಮನವನ್ನು ಸಾರುವ ಕಿನ್ನರಗೀತ ಕೇಳಿಬರುತ್ತದೆ. ]

[ ೧೫ ] ಹಾಡು :

( ಗೌರಿಯನ್ನು ಬಿಜಯಗೈಯಿಸುತ್ತಾ )

ಕಿನ್ನರಿಯರು : ಚಂದ್ರಕಿರಣ ಕೃತಪಥೆ
ಸಂಗೀತ ಸ್ವರ ರಥೆ
ಅಮರವಂದ್ಯೆ ವಿಮಲವಿನುತೆ
ಪ್ರಥಿತ ಧೀರ ಕವಿ ಕಥೆ
ಜಯಪರಾಕೆಚ್ಚರಿಕೆ.
ತಾರಾವಳಿ ನೂಪುರೆ
ಅಂತರಿಕ್ಷ ಗೋಪುರೆ
ದಯಾ ವರ್ಷ ಹರ್ಷೋತ್ಸವೆ
ಜಯಶಂಕರಿ ಭವವಿಭವೆ —
ಜಯಪರಾಕೆಚ್ಚರಿಕೆ.

[ ೧೬ ]

ಮತ್ತೊಂದು ತಂಡ : ಭೋ, ದುರ್ಗೆ ಭರ್ಗಜಾಯೆ
ಸರ್ವತ್ರಗೆ ಸರ್ವಮಾಯೆ
ಓ ಅಕಾಮೆ ಕಾಮೇಶ್ವರಿ
ಜಯ ನಿಗೂಢೆ ಧೀ ಶರ್ವರಿ
– ಪರಾಕ್ ಪರಾಕ್ ಎಚ್ಚರಿಕೆ —

ತ್ರಿಗುಣಾತ್ಮಿಕೆ ಗುಣಾತೀತೆ
ಕಾಳಿ ಗೌರಿ ಭೋ ಸುವರ್ಣೆ
ಕರಣದೂರೆ ಹೋ ಅವರ್ಣೆ
– ಪರಾಕ್ ಪರಾಕ್ ಎಚ,

[ ೧೭ ]

ಮತ್ತೊಂದು ತಂಡ : ಹರಿ ಸಹೋದರಿ ಓ ಲಲಿತೆ

ಗಿರಿ ಕುಮಾರಿ ಶಿವ ದಯಿತೆ
ಪರಮೇಶ್ವರ ಪಾರ್ಶಗತೆ
ಮನಸಿಜಹರ ಕಾಮಲತೆ
ಜಯಪರಾಕೆಚ್ಚರಿಕೆ.
ಜಯ ಅಪರ್ಣೆ ಅನ್ನಪೂರ್ಣೆ
ಜಯ ಅಖಂಡೆ ಸಂಪೂರ್ಣೆ
ಶರ್ವಸ್ಥಿತೆ ಸರ್ವಗತೆ
ಅನುಪಮ ತಪ ಉಗ್ರಜಿತೆ
ಜಯಪರಾಕೆಚ್ಚರಿಕೆ.

ಜೋಗಿ : ನೆನೆವೆಡೆ ಬಂದಿರುವವಳೆ

ಇನಿಸು ಕುಂದದಂತೆ ಕಳೆ
ತಿರೆ-ಮಕ್ಕಳ ಹಿಡಿ ಮಣ್ಣೋಳು
ಪೂಜೆಗೆ ನಿಲೆ ಸಂದವಳೆ
ಜಯಪರಾಕೆಚ್ಚರಿಕೆ.
ನಭವ ತುಂಬುವೀ ಗರಿಯೆ
ರಣದೊಳಡಗುವಾ ಅಣಿಮೆ
ಮನನಿಲುವುದು ಸೊಲ್ಲಳಿದು
ನಮವೆನುವೀ ನುಡಿಯುಳಿದು
ಜಯಪರಾಕೆಚ್ಚರಿಕೆ.

[ ಮೃದಂಗ ಮೊದಲಾದ ವಾದ್ಯ ಧ್ವನಿ ಗಣೇಶನ ಬರವನ್ನು ಸೂಚಿಸುತ್ತದೆ. ]

[೧೮] ( ಹಾಡುತ್ತಾ ಬರುತ್ತಾರೆ )

ಕಿನ್ನರರು : ಜಯ ಗಣಪತಿ ವಿಘ್ನರಾಜ

ಸೌಮ್ಯಾಹಸ್ಕರ ತೇಜ
ವಾರಣ ಮುಖ ಶಂಕರ ಸುಖ
ಲಂಬೋದರ ಸ್ಮಿತ ಮಧುರ
ಜಯಪರಾಕೆಚ್ಚರಿಕೆ.
ಮೋದಪ್ರದ ಮೋದಕ ಪ್ರಿಯ
ಸಾಧುರುಚಿರ ಧೀರಾತ್ರಯ
ಪ್ರಣವರೂಪ ದುರಿತ ತಾಪ

ಏಕದಂತ ಮದಕೃತಾಂತ
ಪರಾಕ್‌ಪರಾಕೆಚ್ಚರಿಕೆ.
ಸೊಂಡಿಲಾಡೆ ದೆಸೆ ಹಿಗ್ಗೆ
ನಡೆಗೆ ನರ್ವಘರನೆ ಜಗ್ಗೆ
ನೋಟವ ಪುಳ ಕೆಡರೆಲ್ಲ
ತೋರೆ ಹುಲ್ಲ ಹಿಡಿದ ಹಲ್ಲ
ಎಲ್ಲರರಿವ ತಮವ ಕಳೆವ
ಶಿವಕುಮಾರ ತೋರಿ ಬಾ
ಗೆಲವಿನರಸೆ ನೇರ ಬಾ
ಸ್ವಾಮಿ ಪರಾಕೆಚ್ಚರಿಕೆ — ಎಚ್ಚರಿಕೆ.

[ ಈ ಸಂಭ್ರಮವನ್ನು ದೂರದ ತರುಣನ ಹಾಡು ಮರೆಸುತ್ತದೆ— ]

[ ೧೯ ]

ತರುಣ : ವಿಯನ್ಮೇಘಸಾರಂ
ಅದೃಷ್ಟಾರ್ಕ ತಾರಂ
ಅರಣ್ಯಾದ್ರಿ ಸೇವ್ಯಂ
ಘನಂ ಕಾವ್ಯ ಭಾವ್ಯಂ
ಶುಭಾವಿಷ್ಟ ರೌದ್ರಂ
ಜಗತ್ರಾಣನಾದ್ರ್ರಂ
ಅಹೋ ವರ್ಷಯೋಗಂ
ಪ್ರಿಯೇ ದೇವ ಭೋಗಂ

[ ಈಗ ಮಹಾವೃಂದಗೀತ ಮೊದಲಿಡುತ್ತದೆ. ]

[ ೨೦ ]

ತರುಣ : ವರ್ಷ ಹರ್ಷ
ವರ್ಷ ಹರ್ಷ
ನಭೋ ವಿತಾನ
ಲಸತ್ ತಟಿತ್ ಪ್ರತಾನ
ಕುಂಭೀ ನೀ
ಬಲು ಬಯಸಿದ ಕಾದಂಬಿನೀ
ಅಪ್ಪಲು ತುಳುಕುವ ಕಂಬನಿ
ಈ ಮಳೆ
ಇನ್ನೀ ಇಳೆ

ಸಮಗೀಮಳೆ
ಬಾಳ್ದಂ ಪ — ... ವರ್ಷ ಹರ್ಷ ॥
ಗುಡುಗಿದು
ಗುಡುಗಿದು
ದುಂದುಭಿ ಮೊಳಗುವ ಜಿಡಗಿದು
ಸೊಡೆ ನೆಲಕಿಳಿವ ತೊಡಗಿದು
ಕಾಡುವ ಜಾಡ್ಯವ ದೂಡುವ
ಸಡಗರ ... ವರ್ಷ ಹರ್ಷ ॥

ಮುದುಡಿತು ಹೆಡೆಯಸೆಗಳಿಕೆ
ಸಹಿಸರಿನಿಯರಿನ್ನಗಲಿಕೆ
ಬನಕೆ ಹಸಿರಿನಗ್ಗಳಿಕೆ
ಶೀರಿಕಿಳೆಗೆ ಹಂಬಲಿಕೆ
ಜನಕೋ ಖುಷಿಯರಿವಿನ ಗಳಿಕೆ
ಹರಿಸಿರಿ ಶಂಕರಿಯರ ಹರಕೆ
ಮೋಡದೊನಪು ಮಿಂಚ ಹೊಳಪು
ನೀರಿನೋಟಿಗಳ ಗಳಪು
ಸಾಲುಹಬ್ಬಗಳ ನೆನಪು ... ವರ್ಷ ಹರ್ಷ ॥

[ ಹಾಡು ಕಿವಿಮರೆಯಾಗುತ್ತದೆ. ಮಳೆ ಬೀಳುವ ಧ್ವನಿ. ನೀರಿನೋಟಗಳ ಹಾಡು ಕೇಳಿಬರುತ್ತದೆ, ಮಳೆಹನಿಯ ಧ್ವನಿಯನ್ನು ತೂರಿ. ]

ವಾರಾಶಿಯಾಕಾಶಧರಣೀ
ಎಲ್ಲಿಂದೆಲ್ಲಿಗೆ
ಜಾಜಿ ಸಂಪಗೆ ಸೇವಂತಿಗೆ ಕೇದಗೆ
ಮುಡಿಗೆ ಬೆಳುದಿಂಗಳ ಮಲ್ಲಿಗೆ
ಇನ್ನು ಪಯಣವೆಲ್ಲಿಗೆ
ವಾರಾಶಿಯಾಕಾಶ ಧರಣೀ —

[ ಹಾಡು ತೇಲಿ ಹೋಗುತ್ತದೆ. ]

ಕವಿಯ ಕನಸು ಕವಿಗಿರಲಿ
ಇಡರ ನನಸು ಕಲೆಗಿರಲಿ
ಈ "ವರ್ಷ ಹರ್ಷ"ದಿಂದ
ಸುಹೃದಕ್ಕೆ ಹರ್ಷ ವರ್ಷ.

# ವರ್ಷ-ಹರ್ಷಕ್ಕೆ

## ಸ್ವರ - ಪ್ರಸ್ತಾರ

[೧] (ರಾಗ — ರಿ₂ ಗ₃ ಮ₁ ದ₂ ನಿ₃: ಚತುಶ್ರ – ಏಕತಾಳ)

ತರುಣ :
ಸ ಸ ಸ ನಿ ನಿ ನಿ ದ ಪ ಮ ಮಾ ಮ ಪ ಪ ಪ ಪ ಮ ಪ ಮ ಗ
ಅಶ್ಶಿಶ್ಶಿ ಅಶ್ಶಿಶ್ಶಿ ಮಳೆ ಎಲ್ಲೆಲ್ಲು ಕೊಚ್ಚೆ ಕೊಳೆ ಬಿಸಿ ಬಿಸಿ
ಗ ಪ ಮ ಗ ಸಾ ರಿ ಗ ಮಾ ಮ ಪ ಮ ಗ ಗ ಪ ಮ ಗ ಸಾ ರಿ ಗ ಮಾ
ನೀ–ರೊಳು ಕಾಲ ತೊ ಳೆ ಕಳ ಕಳ ನುರಿಯಲಿ ಕಾಫಿಯೊ ಲೆ

ತರುಣಿ
ಸ ಸ ಸ ನಿ ನೀ ನಿನಿ ದ ದ ಪದದಾ ದ ದ ದ ದ ಪ ಪ ಪ ಪ
ಅಯ್ಯಯ್ಯೊ ನಿಲ್ಲಿ ರಲ್ಲೆ ಅಂಗೈಯಗಲ ಕೋಣೆಯಲ್ಲಿ ಬೀದಿಯ ನೀ
ಪ ಪ ಪ ದ ನಿ ॥ ದ ಪಾ
ರೆಲ್ಲ ಜೆಲ್ಲೆ ಏ ಗ ತಿ

ತರುಣ
ಗಾ ರಿ ಸ ॥ ಗಾ ರಿ ಸ ॥ ನಿ ರಿ ನಿ ಪಾ ಪ ಗಾ ॥ ಪ ದ ಗ ಪಾ
ಏಗತಿ – – ಏಗತಿ – – ಯಾ–ಕೆ ನೀ ನಿಂತು –ಕೂ–ಗು ತಿ

ವಾದ್ಯವೃಂದ : ಗಾ ರಿ ಸ ॥ | ಗಾ ರಿ ಸ ॥ | ನಿ ರಿ ನಿ ಪಾ ಪ ಗಾ ಪ ದ ಗ ಪ ॥ ||

ತರುಣ :
ನಿ ನಿ ನಿ ನಿ ನಿ ನಿ ನಿ ನಿ ದ ದ ದ ದ ದ ದ ದ ದ ಸ ಸ ಸಾ ನಿ ನಿ ಪ ದ ದ ಪ
ನಿಲ್ಲಲಿಲ್ಲ ತಾಣವೆಲ್ಲೆ ಅಲ್ಲೆ ಇಲ್ಲೆ ಇಲ್ಲೆ ಅಲ್ಲೆ ತಲೆಯ ಮೇಲೆ ಸೂರ ನೀರು
ಗ ಪ ಪ ಪ ಸಾ |
ಸೋರುವುದ ಲ್ಲೆ

ತರುಣಿ :
ಗಾ ರಿ ಸಾ ॥ | ಗಾ ರಿ ಸಾ ॥ |
ಏಗತಿ | ಏ ಗತಿ

ತರುಣ
ನಿ ರಿ ನಿ ದಾ ಪ ಗಾ ಪ ದ ಗ ಪ ॥
ಯಾ–ಕೆ ನೀನಿಂತು ಕೂ–ಗುತಿ – –

ವಾದ್ಯವೃಂದ : ಗಾ ರಿ ಸ ॥ | ಗಾ ರಿ ಸ ॥ |

ತರುಣಿ
ನಿ ರಿ ನಿ ದ ದ ದ ಪ ದ ನಿ ॥ ದ ಪಾ
ನೆನೆದು ತೊಪ್ಪೆಯಾ–ದ ರೀ–ಗ ತಿ

ತರುಣ :
ಗಾ ರಿ ಸ ॥ ಗಾ ರಿ ಸ ॥ | ॥ ಸ ಸ ಸ ಸ ಸ ಸ ಸ | ॥ ನಿ ನಿ ನಿ ನಿ ನಿ ನಿ ನಿ
ಏ ಗತಿ – – | ಏ ಗತಿ – – – ಅಹಹ ಚಳಿ ಚಳಿ | –ಬೆನ್ನೊಳು ಕಳಕುಳಿ
॥ ದ ದ ದ ದ ದ ದ ಪ
– ಕೊರುವೆ ನೊಳೆ ಬಳಿ

ತರುಣಿ ( ಗಾ ರಿ ಸಾ ವಾದ್ಯ–( ಗಾ ರಿ ಸಾ
– ಏಗ ತಿ

ತರುಣ : ನಿ ರಿ ನಿ ದಾ ಪ ಗಾ ಪಾ ( ಪ ಪಾ |
ಯಾ – ಕೆ ನೀ ನಿಂತು ಕೂಗು ತಿ |

ತರುಣಿ ನೀ ( ರಿ ( ನೀ ( ದ ಪ ದ ನೀ ( ( ದ ಪಾ ಸ ಸಾ ಸ ಸ ಸಾ ಸ ದ ದ ನೀ ( ದ
ಕೆಂಡ ವಾರಿದರೆ ಏಗ ಒಪ್ಪೆ ತೆಗೆದಿಟ್ಟು ಹೊಸ ಬಟ್ಟೆ
ದಾ ದ
ಯುಟ್ಟು

ತರುಣ : ಗಾ ಪ ಗ ಗ ಪಾ ಪ | ಗಾ ಗ ಗ ಪ ಪ ಗ ಪ | ನಿ ರಿ ನಿ ದಾ ಪ ಪಾ
ತಟ್ಟೆಯೊ ಳುಪ್ಪಿಟ್ಟು | ಕಾಫಿ ಯೊಂ-ದು ಬೊಟ್ಟು | ಒಲೆಯ ಮುಂದೆ ನೀ
ದಾ ದ ಗ ಪಾ | ನಿ ರಿ ನಿ ದಾ ದ ಪಾ ದಾ ದ ಗ ಪಾ |
ರೋ(ಜ ಮು ಖಿ | ಮಣೆಯ ಮೇ(ಲೆ ನಾ ನೆಂತ ಸು ಖಿ |

ವಾದ್ಯವೃಂದ : ಸ ಸ ಸ ನಿ ನಿ ನಿ ದ ಪ | ಮ ಮಾ ಮ ಪ ಪ ಪ ಪ | ಮ ಪ ಮ ಗ
ಗ ಪ ಮ ಗ | ಸಾ ರಿ ಗ ಮಾ | ಮ ಪ ಮ ಗ ಗ ಪ ಮ ಗ | ಸಾ ರಿ ಗ ಮಾ ||

ತರುಣಿ ( ಗಾ ರಿ ಸಾ ( ಗಾ ರಿ ಸಾ | ನಿ ನಿ ನಿ ರಿ ನಿ ದ ಪ ದ ಗಾ ( ಗ ಪಾ
– ರೇ(ಡಿಯೋ( ರೇ(ಡಿಯೋ( | ಅಹ ಈ - ಗೊಂದಿದ್ದರೆ ರೇ(ಡಿಯೋ(

ತರುಣ ( ಗಾ ರಿ ಸಾ | ( ಗಾ ರಿ ಸಾ ನೀ ( ನಿ ನಿ ( ( ನಿ ನೀ ( ದಾ ದ ದಾ ದ ದಾ
– ರೇ(ಡಿಯೋ( | ರೇ(ಡಿಯೋ( ಕೈಗೆ ಬೇ(ಡಿಯೋ( ಆಗಿ ಕೇ(ಡಿಯೋ(
ನಿ ರಿ ನಿ ದ ಪ ದ ಪ ದ | ನೀ ( ( ದ ಪಾ ನಿ ನಿ ನಿ ರಿ ನಿ ದ ಪ ದ
ತಲೆ ಮರೆಸಿ ಕೊಂ-ಡು ಓ – ಡಿ ಯೋ( ತರಲಾ – ಗದೆ ಬಂದು
( ನಿ ( ದ ವಾ | ( ದ ದ ದ ಪಾ ಪ ಮ ಪಾ ( ಮ ಗಾ ( ಗಾ ರಿ ಸಾ
– ರೇ(ಡಿ ಯೋ( – ತರುವೆ ನಾನೊಂದು ರೇ(ಡಿ ಯೋ( – ಲೇ(ಡಿ ಓ

ತರುಣಿ ( ಗಾ ರಿ ಸಾ ದಾ ನಿ ನಿ ನೀ ( | ನಿ ನಿ ನಿ ದ ಪ ದ ಪ ಗ ( ಪಾ ಪ ಪಾ
– ಲೇ(ಡಿಯೋ( ಲೇ(ವಡಿಯೋ( | ಬಿಡಬಿಡ ಏ–ತಕೆ –ರೇ(ಡಿ ಯೋ(
ನಿ ನಿ ನಿ ನಿ ನಿ ರಿ ನಿ ದ | ( ದಾ ಗ ಪಾ ||
ಬಡವರಿ ಗೇ(–ತಕೆ | -ರೇ(ಡಿ ಯೋ( ||

ತರುಣ : ಗಾ ಗ ಗ ಪ ಗ ರಿ ಸ | ರಿ ( ( ಸ ಸಾ | ಸ ಸ ಸ ಸ ರಿ ( ಸಾ | ( ರಿ ( ಸ
ಸುಯ್ಯಲೇ(-ಕೆ ಇಗೊ | ರೇ(ಡಿ ಯೋ( | ಟಿಲಿವಿಷ ನ್ನುಳ್ಳ | –ರೇ(ಡಿ
ಸಾ | ನೀ ( ನಿ ನೀ ( ನೀ ( ನಿ | ದಾ ದ ದಾ ದ ನಿ ದ | ದಾ ನಿ ರಿ ನಿ ಪಾ ಗ
ಯೋ( | ಕೈಗೆ ಕೈ ತಾಕಿ | ಮೈಗೆ ಮೈಸೋ(-ಕಿ | ನನ್ನೊಳಗೆ ನೀನು

ಪಾಪಾ ॥ ನಿನಿನಿ ನಿದ ದಪಗ ಪಾಪಾ ಗಾಗಗಾಗರಿಸ
ಬಾರೆ - - ಹರಣ ಒಂ ದಾ-ಗಿ ಸೇರೆ ಆಗ ಕೇಳಿಸುವೆ

ರಿ॥ಸ ಸಾ ನೀ॥ನಿನಿ ನಿದದದ ॥ನೀ॥ನಿ ನೀ ಗಾಗ
ರೇಡಿ ಯೋ ಈ ಮಳೆ ಮುದದ- -ವೋಡಿ ಯೋ ನಾವೆ

ಪದದನೀ॥ ॥ದಾಪ ಪಾ ॥ಗಾರಿಸಾ ॥ಗಾರಿ ಸಾ ॥ಗಾರಿಸಾ
ಕಿ-ನ್ನ-ರ -ಜೋಡಿಯೋ -ರೇಡಿಯೋ -ರೇಡಿ ಯೋ -ಲೇಡಿ ಓ

[೨] ( ರಾಗ— ನಠಭೈರವಿ ಜನ್ಯ : ಚತುಶ್ರ – ಏಕತಾಳ )

ತರುಣೀವೃಂದ : ಸಾ॥ನಿದಪ ನೀ॥ ॥ದಪಮಗಪಮಾ ॥॥ಪಮ
ವಾರಾ-ಶಿ ಯಾ –ಕಾ-ಶ ಧರಣೀ ––ಎಲ್ಲಿಂ

॥ಗಾಪ ಮಾ ಗಗ ಮಗಗರಿ ಸ ಸಾಸ ಸಾ। ಸಗರಿ ನಿರಿಸ
–ದೆಲ್ಲಿ ಗೆ ಇನ್ನು ಏಣ– –ವೆಲ್ಲಿ ಗೆ ಅಲೆ–ಯೊಳು–

ದಸ ನಿ ಪದಪಮ ॥॥ಮಾದಪಾ ಪದಪ ಮಪಮ ಗಪ।
ಬೆಳು। – ದಿಂ-ಗ ಳ–– –ಮಲ್ಲಿ ಗೆ ಸವಿ– ಸವಿ–ನುಡಿ।

ಮ। ಗಪಮ ಮಗಗಾ ॥ ॥ರಿ॥ಮ ಗಾ ॥ಸಸಸರಿರಿಮ
–। ತಡೆ– ವ–– –। ಕಲ್ಲಿ ಗೆ ಇನ್ನು ಮುಂ-ದೆ-

ಗರಿರಿಸಾಸಾ ಸ। ಸಾ॥।
ಪಯಣ–ವೆ ಲ್ಲಿ। ಗೆ

ವಾದ್ಯಗಳು : ಪದನಿಸರಿಗ ಮಾ। ॥ಸಾ। ನಿಸಾನಿ ॥। ದನೀ॥ದ ॥
ಮಪಾಮ ॥। ಸಪಾಮ॥। ಗರಿಸರಿಗಮಾ॥। ಸರಿ॥ ಸ॥॥

ತರುಣೀವೃಂದ : ಸಗರಿ ಸರಿಸದಸ ನಿ ದಸ ನಿ-ಪಪಾ॥ ಮಗಗಾ॥
ಮರ–ಗಿಡ–ಬುಡ –ಬುಡ– ದೊಳು ಬಾ–––

॥ಗದಾ। ಪಾ॥ ಪದಪಗಪಮರಿಗ ॥॥ಸರಿಮಾಗರಿ
–ಯ್ತುರಿ ಯೆ ಉಲಿ–ವುದು– ಗುತ –– ಹರಣ ದುಳಿ

ಗಾ॥॥ಗಪಮ ಮಗಗಾ॥॥॥ ನಿಸಗರಿಸಾ ಪದ। ನಿದಪಾ
ವ –– ಎರೆ– ಯೆ––––– ಹನಿಯೆರೆದು ರಸ ಹರಿಸಿ

ಪದನೀ॥ ದಪಮಾ ಗಗಪಾ ಮಮಗಪ ಮಾ ಸಾಸಸ ರಿ॥ಮಾ
ಹಸಿರ ಮೆರಸಿ ತೃಷೆಯ ಪರಿಹರಿ ಜೀವನ ಕಿನ್ನು

ಗರಿರಿಸಾ ಸಾಸ ಸಾ॥
ಪಯಣ- ವೆಲ್ಲಿ। ಗೆ

ವಾದ್ಯಗಳು : ಪದನಿಸರಿಗಮಾ। ರಿಗಾಸರಿ॥ ನಿಸ। ಪದನಿಸಾ ಪದಾ।
ಮಪಾಗಮಾ ಸರಿ। ಗಮಾರಿಗಾಸರಿ। ॥ನಿಸಾ ॥॥ ॥ವಾರಾಶಿ

( ಮಿಶ್ರಕಾಪಿ — ಚತುಶ್ರ ಏಕತಾಳ )

ಮಪ ಗಾ ( ರಿ ಸ ರಿ ಮ ಪ | ಗಾ ( ರಿ ಸ ರಿ ಸ ರಿ | ಪಾ ( ( |
ತಿಳಿ ಬಾನು – – ಅಹ | ಏನು – – ಹೊಳ | ಪೋ |
ದ್ವ ಮ ಗ ರಿ | ( ನಿ ರಿ ( ಸಾ | ( ನಿ ಸ ರಿ ಗಾ | ( ನಿ ಸ ರಿ ಗಾ |
ಇಲ್ಲಿ ಸಿಂದ – ಬಸಂತ | ಚಳಿಯಿಬಳ್ಳಾ | ತಲದೊ ಳು |
ದ್ವ ಮ ಗ ರಿ | ( ನಿ ರಿ ( ಸಾ |
ಇಲ್ಲೊ ಎಲ್ಲಿ | – ಪ್ರಶಾಂತ |
ಪ ಪ ನಿ ಸಾ ( | ( ನಿ ರಿ ( ಸಾ | ದ್ವಾ ಪಾ ( ಮ ವ್ವಾ ಪಾ
ಬೇರೆ ತರ | – ದಿರಪ್ಪ | ಇದು – ಕನ | ಸೋ |
( ಪ ದ ಪ ಮ ಪ ಮ ಗ ಮ ಗ ರಿ ಗ ರಿ ನಿ ರಿ ( ಸಾ ( ಮ ಪ
ತನುವ ಸುಳಿವ ಹ ರಣ ವ್ವಳಿವ ನನ ಸೋ ತಿಳಿ ಬಾನು ॥

[ ೬ ] ಇದನ್ನು ನಾಗಸ್ವರಾವಳಿಯ ಸ್ವರಗಳಲ್ಲಿ ಮರ್ಜಿಯರಿತು ಹಾಡಬೇಕು.

[ ೭ ] ( ರಾಗ: ಕಾಪಿ — ಚತುಶ್ರ ಏಕತಾಳ )

( ರಿ ನಿ (( ಸ ರಿ | ರಿ ರಿ ( ರಿ ಗ | ಮ ಗ ಮ ಗ ಗ ರಿ ಸಾ | ( ಸ ಸಾ
ನೀಲ ದೊ | ಳಗೆ ನವ | ನೀ- – – ರ – ದಾ | - ಗ ಮ

ನಾ | ಮ ಪ ಸಾ | (( ನಿ ಸ ನಿ ಪ ನಿ ಪ | ಮ ಪ ಮ ಗ ಮ ಗ ರಿ ಸ |
ನ | ನೋ– ಡಾ | ಭೀ-ಷ್ಮ ಗ್ರೀ-ಷ್ಮ | ದೂ-ಷ್ಮ ಶಮನಪಟು |
। ನೀಲದೊಳಗೆ ।

( ಪ ಪಾ ಪ ಮ ಪ ನಿ ಪ ಮಾ ಗ ಗಾ | ( ರಿ (( ಗ ಮಾ | ಗ ಸ ರಿ (
ಶಿವನ ಜ - ಡೆ - ಇದೊ ಗಂಗೆಯ | ತ ಳೆದ
( ಪ ಪಾ ಪ ಮ ಪ ನಿ ಪ ಮ ಗ ಗಾ | ( ಸ ರಿ ( ಗ ಮಾ | ಗ ಸ ರಿ (
ಸೊಡೆಯ ಗೂ- | – – ಡಿ – ದೋ | ಸುರಮಧು | ವನದ
( ಪ ನಿ ಪ ಸಾ | ( ಪ ನಿ ಪ ಸಾ | ( ನಿ ಸ ನಿ ಪ ನಿ ಪ ಮ |
-ಮುಗಿಲಿ ಗೋ | -ಮುಗಿಲಿ ಗೋ | ಜಗದ ಜೀ-ವ ದೆ |
ಪ ಮ ಗ ಮ ಗ ರಿ ಗ ಸ | ಪ ನಿ ಪ ಸಾ (( |
-ಲ್ಲ ದಿಗಿಲ ಕಳೆವ ಮುಗಿಲಿಗೋ -- | ॥ ನೀಲದೊಳಗೆ ॥

" ನವಿಲು ಕುಣಿಯೆ.... " " ಶಿವನ ಜಡೆಯಿದೋ.... " ಎಂಬಂತೆ

( ಪ ನಿ ಪ ಸಾ | ( ಪ ನಿ ಪ ಸಾ | (( ಸ ರಿ ಮಾ | ಗ ರಿ ಸಾ ನಿ ದ ನೀ |
ಗುಡುಗಿ ದೊ | -ಗುಡುಗಿ ದೊ | ಸರವ | ನುಡುಗಿ ಮರದೊ |
ಪ ಮ ಪಾ ಗ ರಿ ಸಾ ||
ಳೆಡಗೆ ಏಹಗ || ॥ ನೀಲದೊಳಗೆ ॥

|| ಪಾ ಮ ಪ ನಿ ಪ | ಮ ಪ ನಿ ಪ ಮ ಪ ನಿ ಪ | ಮ ಗ ಗ ರಿ ಸ ರಿ ಗಾ ( ಸ ರಿ ( ನಿ (
ಓ ಬಗೆ ಬಗೆ | ಬ – ಣ್ಣದ ಬ ಯ ಕೆ ಗ | ಳೊಡೆದಿರು ವೆದೆಯ – ಜಲ ದ

ಗಾ ಸ ರಿ ಮಾ ಗ ಗ ರಿ ರಿ ಸ ಸ ನಿ ನಿ | ನಿ ರಿ ಸಾ ( ( ಸ ರಿ ( ( ನಿ (
ನೀ ಮಳೆ ಬಿ ಲ್ಲನು ತಳೆ ದಣಿಕಿಸು | ತಿಹೆಯ – – ಹೊಳ ವೆ

ಸಾ ( ಸ ರಿ ( ನೀ ರಿ ರಿ ರಿ ರಿ | ಗ ರಿ ಸ ನಿ ಸ ರಿ ಗ ರಿ ಸ ನಿ ಸ ರಿ ( ನೀ ( |
ವೆ ರಸದೊಡ | ಲಂ– ಜಿನೆ ಸೆಳೆ ಮಿಂ– | ಜನ ಹೊಳವೇ |

( ಪ ನಿ ಪ ಸಾ ( ಪ ನೀ ( ಪ ನಿ ಪ ಪ ನಿ ಪ ಸಾ ( ( | ( ರಿ ಸಾ ಸ ನೀ ( ನಿ ಪಾ
– ನಗುವೆಯೋ ಕ ಳಕ್ಕಳಿ ಸಿ ನಗುವೆ ಯೋ – | ಬೆಳ ಕೆರ ಚು ವ

ನಿ ಪಾ ಪ ಮಾ || ಪಾ ನಿ ಮಾ ಪ ನಿ ಪ | ಸಾ ( (
ನವದೊಳು || ಮೋಹವ ನೆರೆವೆ | ಯೋ ನೀಲದೊಳಗೆ ||

[ ೮ ] (ರಾಗ: ಸ ರಿ$_2$ ಮ$_1$ ಪ ದ$_2$ ಸ | ಸ ನಿ$_2$ ದ$_2$ ಪ ಮ$_1$ ದ$_2$ ಮ$_1$ ಪ ಗ$_3$ ರಿ$_2$ ಸ || ರೂಪಕ)

( ಸಾ | ( ರಿ ಮಾ ಪ | ದ ಸ | ನಿ ದ ಪ ಮ || ( ಪ ದ ಮಾ ಗ ಸ ರಿ ಸ ಸ
ಬಾ | – ನಿ ದಾಗೆ | ಕರಿ | ದುತಿರೆಯೊ || ಹಸಿ ರು ಹಳದಿ ಬಿಳಿ

ಸಾ ( ( (
ದು

( ಪ ದ | ( ಸ ಸ ರಿ ಗ ಗ ಗ ರಿ ಸಾ ಸ ನಿ ನಿ ದ ದ ಮ ಪ ದ | ಮ ಗ ಸ ರಿ
ದಿವ – ದ ಕಳೆಯ ಕಳೆ – ದು ನ – ಲ – ಕೆ – ಪಚ್ಚೆ | – ಹೊ–ನ್ನು

ಗ ರಿ ಸಾ ( (
ಹ ರಿ | ದು

( ಗ | ಗಾ ಸ ಗ ಪ ಗ ಗ ಸ | ಸ ನಿ ನಿ ದ | ದ ಪಾ ( ಸ || ಸ ಗ
ಯಾ | ರಿ ಗೀ – – – ಗ – ಕೊ– ರ – | ಗು – ಇ || ಲ್ಲಿಯಾ

ಗಾ ಸ ಗ ಪ ಗ ಗ ಸ ಸ ನಿ ನಿ ದ ದ ಪಾ ( ದ ಮಾ ( ಮಮ | ಡಾ ಮ ಪ ಗ
ರಿ ಗೀ – – ಗ – ಕೊ – ರ – ಗು – ಈ ಮಳೆ | ಮಾ ಡದೊಳು

( ಗ ಸ ಸಾ (
ಬೆ ರಗು

( ಪ ದ ( ಸ ಸಾ ರಿ || ( ಗ ಪ ಗ ಪ ಗಾ ಸ ಸ ಸಾ ( ರಿ ಸಾ ನಿ ( ( ದ ಮಾ
– ಕಡ –ಲಿ ನಾ ಳ || – ದೊಳು ತೇ – – ಲುವ ಶಾಮ | ನೋ ಈ ಮಳೆ

ಪಾ | ಪಾ ( ( || ( ಪ | ಪ ಪ ದ ಸ || ನಿ ( ( ದ ಮ ಪಾ ಪ
ಸಾ | ಲು || ಇಂ | ಥ ನೀ–ಲ || ಕಾವು ದು ಮೇಲು

( ನಿ ನಿ | ( ನಿ ನಿ ನಿ ನಿ ದ || ಪ ದ || ಮ ಗ ಸ ಸ ಮಾ ಮ ಮ ಪ ಗ–ಗಾ ( ಸ ರಿ
ಕಣಿ | –ವೆ ತೆವ ರೊ– || ಳಲಿ || ಯೆ ಬಿಸಿಲು ಮಲೆಗೋ – ಮುತ್ತಿ– ನೆ

ಗ ಸ ಸಾ ॥
ಪೂಸ , ಲು ( ಈ ಜಾಡನ್ನು ಅನುಸರಿಸಿ ಮಿಕ್ಕ ಚರಣಗಳು )

[೯] ಸ್ವರಗಳಿಗೆ [೩] ಪುಟ ೫೦೦ ನೋಡಿ.

[೧೦] ( ರಾಗ — ಬೇಗಡೆ: ರೂಪಕ ತಾಳ )

। ಗ ಮ | । ದ ಪ ಗ ರಿ । । ॥ ಸಾ | ಸ ರಿ ಸ ನಿ ದ ಪ | ಸಾ | । । । ।
ಗಿರಿ | – ಧರ ಕಾ – ಲ | ಮೇ – – – – – ಪ | – – –

। ಗ ಮ । ಪ ದ ಪಾ । ಪ ದಾ ಪ ಸಾ । ನಿ ರಿ । ಸಾ । ಪ ದ | ನೀ ದ ಪ ಪ
ಉದ ರ ವ ನ | ವ – – ; – – – ಹ್ನಿ ವಾ ನ ಶೀ – ಲ

ಗ ಮ ಪ ಮ ಗ ರಿ ।
ರ ಸೌ – ಘ – –
"ಗಿರಿಧರ"

। ಗ ಮ ಪ ಪ ಪಾ ಪಾ ಪ ಪ ಪ ಪ । ಪ ದ । ನಿ ಪಾ ಪ ಪ
ಕಲು ಷ ಹ ರ ಜೀ ವನ ಭರ ಸುರ – ವಧು ಚರ ;

ಗ ಪ ಮ ಗ | ಮ ರಿ ಗ ಮ ಪಾ | । ದ ಪ , ಸಾ ಸ ಸ
ಮ – ನೋ – – – ಹ – ರ | ಜಿತ ಸಾಗರ

ಗಾ ಮ ಗ ರಿ । | ರಿ । ಸಾ ರಿ ಸ ನಿ ದಾ ಪ ಸಾ । ।
ಜ – – – ನ್ಯ ಕ್ಯಾ – – – – – | ರ

ಪ ದ . ನೀ । ದ ಪ | ಪ ಮ ದ ಪ ಮ ಗ ರಿ । | ।
ಶುಭ್ರ | ನೀ । – ರ | ನೀ – – – | ರ ದನೇ ;
॥ ಗಿರಿಧರ ॥

ದ ದ ಪ ಪ ಸಾ ಸ ಸ ಸಾ ಸಾ ॥ ನಿ ಸ ರಿ ಸ | ನೀ । ನಿ ನಿ ದ ದ ಪಾ
ಹ – ರ್ಷಿತ ಕರ್ಷಕ ವರ್ಷ | ಕ – ರ್ಷಿತ ಓ ಷ ಧಿ ತ – ರ್ಷ

ಗಾ ಗ ಗ । ಮ ರಿ । ಸಾ ಸ | ಪ ಪ ದ ನಿ । ದ ದ ಪಾ ಮ ಗ ರಿ
ಜಾಡ್ಯ ಜ್ವಂ – ಭಣಾ ಮರ್ಷ | ಸಕಲಲೋ – ಕ ಪ ಕರ್ಷಕನೆ

ಗ ಮ ದ ದ ಪ ಪ ಗ ರಿ । ಸ ಸಾ
ಗಿರಿ ಧ – ರ – ಕಾ – – ಲ
॥ ಮೇಘ

[೧೧ - ೧೨] ಶಾಮಾ ರಾಗದ ಛಾಯೆಯನ್ನು ಹಿಡಿದ ಹಳ್ಳಿಯ ಹಾಡಿನ ಧಾಟಿಯಲ್ಲಿ ಹಾಡಬೇಕು.

[೧೩] ( ರಾಗ: ನಠಭೈರವಿಜನ್ಯ – ತ್ರಿಶ್ರ ನಡೆ )

ಸ ರಿ ಸ ರಿ ಮ ಗ ಗ ರಿ ಗ ರಿ ಸಾ ಪಾ । ಮಾ ಮ ಗಾ । ರಿ ಸ ರಿ
ಮುಗಿಲೆ ಮುಗಿಲೆ ಆಹಹಾಹಹಾ ಎಲ್ಲಿಂದ ಬಂದೆ – –

ಸಾ ಸ ಸಾ ರಿ ರಿ ಮ ಮ ಗ ಸಾ | ಸಾ ಸ ರಿ ರಿ ಮ ಮ ಗ ಗ ಸ ಸಾ
ಕೇಳುಕೇಳು ತಿರಿಮಗಳೆ | ದೇವರ ಕನ ಸಿನ ಮುಗುಳೆ

ದಾ ದ ದಾ ದ ಪಾ ( ಪಾ ದ ಪಾ ಪಾ ಪ ಪ | ಗಾ ( ಪಾ ( | ಮಾ ಮಾ ಮ ಪ
ಕ್ಷೀರಸಾಗ ರಾ ಗಾರ ಕ್ಪಾರಾ ಬ್ಧಿಗೆ | ಬಿದ್ದೆ | ಬಾನಾಗುತ

ಗಾ ಗ ಮಾ ಮ ಗಾ ಮ ಗ ರಿ ಸ ಗಾ ( ಗಾ ( ಸ ಸ ಸ ಪ ಪ ಪ
ಜೀವ ಜಾತ ಕಲ್ಲಿ ತೆರೆಯೊ | ಳಿದ್ದೆ ಹೊಳೆವ ಬಿಸಿಲ

ಗಾ ಗ ಪ ಪ ಪ ಗ ಗ ಪಾ ಪ ದ | ಮಾ ( ಗಾ ( | ಸ ಸ ಮ ಮ ಮಾ
ಕೋಲ ಕಣೆಯ ಅಲೆ ಬಿಲ್ಲಿಗೆ ಹೂಡಿ ಮರಳಿಸುವ

ಗಾ ಗ ಗ ಗ ಗ ಸಾ ಸ ಗಾ ಸ ಗಾ ( ಗಾ ( | ಪ ಪ ಸಾ ನಿ ನಿ
ಆಟದೊಳಗೆ ಗಾಳಿ ಗಾದೆ ಜೋಡಿ ಹಿಡಿದೆಬ್ಬಿಸೆ

ದ ದ ದ ಮ ಗಾ | ಮಾ ಮ ಮ ಮ ಮ ಪ ಗ ಗ ಗ ಗ ಗ ಸಾ ಸ ಸಾ ರಿ
ಇನನಕರ | ಆದಿ ಸೆಲರಿ ಗಿಂ-ತ ಹಗುರ ಕೇಳುಕೇಳು

ರಿ ಮ ಮ ಗ ಸಾ | ಸಾ ಸ ರಿ ರಿ ಮ ಮ ಗ ಗ ಸ ಸಾ | ಮ ಗ ಗ ರಿ ಸಾ ||
ತಿರೆ ಮಗಳೆ | ದೇವರ ಕನ | ಸಿನ ಮುಗುಳೆ | ಆ ಹ ಹಾ ಹ ಹಾ ||

(ಈ ರಾಗದ ಮರ್ಜಿಯಲ್ಲಿ ಮನೋಧರ್ಮ ಹಿಡಿದು ಮಿಕ್ಕ ಚರಣಗಳನ್ನು ಹಾಡತಕ್ಕದ್ದು.)

[೧೪] ಹಿಂದೂಸ್ತಾನಿ ತೋಡಿಯ ಸ್ವರಗಳನ್ನು ಹಿಡಿದು ಜಾನಪದಗೀತಗಳ ಧಾಟಿಯಲ್ಲಿ ಮನೋಧರ್ಮದಂತೆ ಹಾಡತಕ್ಕದ್ದು.

[೧೫] (ರಾಗ : ಹಮ್ಮೀರ ಕಲ್ಯಾಣಿ — ರೂಪಕತಾಳ)

ಸಾ ಸ ಪ ಪ ಪ ಪ ಮ | ದ ಪ ಪ ಮ ಮಾ ( ( || ( ಸ | ದ ನಿ ದಾ ದ ಪ
ಚಂ ದ್ರ ಕಿರಣ ಕೃತ | ವ – ಥೆ – – || ಸಂ | ಗೀ – – ತ –

ಸ ಮ | ದ ಪ ಪ ಮ ಮಾ ( ( ದ ನಿ | ಸ ರಿ ( ಸ ನಿ ನಿ ಸ ಸ ನಿ ದ ಪ
ಸ್ವ ರ | ರ – ಥೆ – ಅಮ | ರ ವಂದ್ಯೆ | ವಿಮ ಲ ವಿ – ನುತೆ

( ಪ ಮ | ಪ ಪಾ ಮ ಪ ಮ | ದ ಪ ಪ ಮ ಮಾ ( ( ಸ ಸ ಪ ಪಾ (
ಪ್ರಥಿ | ತ ಧೀರ ಕವಿ | ಕ – ಥೆ – – || ಜಯ ಪರಾ

ಪಾ ( ಮ | ಪಾ ನಿ ದ ದ ಪ ಪಾ
ಕೆ – – ಚ್ಚರಿ ಕೆ – –

ಸಾ ಪಾ ಪ ಪ ಪ ಮ ದ ಪ ಪ ಮ ಮಾ ( ( . ( ಸ | ಸ ನಿ ಸ ರಿ ( ಸ
ತಾ ರಾವಳಿ ನೂ– ಪು-ರೆ - - | ಅಂ | ರಿ - - ಕ್ಷೆ

ಪಾ ದ ಪಾ . ಗ ಮ ( ರಿ ( ರಿ ಸಾ ದ ನಿ ಸ ನಿ ದ ಪ
ಗೋ ಪುರೆ || ದಯಾ ವರ್ಷ ಪೂರ್ಣ(- - - ತ್ರವೆ

ಸ ಸ ಪಾ ಪ ಪ ಪ ಪ | ಪ ಮ ದ ಪ ಪ ಮ ಮಾ ||
ಜಯ ಶಂಕರಿ | ಭವ | ವಿ - ಭ - ವೆ - - || ಜಯಪರಾಕೆಚ್ಚರಿಕೆ

[೧೬] (ರಾಗ: ದುರ್ಗಾ — ರೂಪಕತಾಳ)

ಸಾ ( ಪಾ ಪ ಪಾ ಮ ದಾ ದ || ದಾ ದಾ ದ ಪ
ಭೋ ದುರ್ಗೆ ಭ ರ್ಗಜಾಯೆ || ಸ ರ್ವತ್ರಗೆ

ಮ ಪ ( ನಿ ಪ ಮ ಪ ರಿ ಸ ನಿ ( ದ ಸ ಸ ಸಾ ( ಮ ರಿ ( ಮ ಪ ಪ ಪ
ನಭ - ವ ತುಂ - ಬು ವಿ ( - - ಗರಿಮೆ ‖ - ಕಣ - ದೊ ಳಡಗು

ಮ ಪ ನಿ ಪ ಮ ಪ ಪಾ ( ನಿ ದ ( ನಿ ಸ ಸ ಸ ನಿ ( ( ದ ನಿ ನಿ ಸಾ
ವಾ - - ಅಣಿಮೆ ಮನ ನಿ ಲುವುದು ಸೊ - - ಲ್ಲಳಿದು

ಮ ರಿ | ಮ ಮ ಪಾ | ಮ ಪ | ಮ ಪ ನಿ ಪ ಮ ರಿ
ನಮ | ವೆನುವಿ( ನುಡಿ | ಯು - ಳಿ - ದು -

ಜಯಪರಾಕೆಚ್ಚರಿಕೆ।

೧೮] ( ರಾಗ: ಅಮೃತವರ್ಷಿಣಿ : ರೂಪಕ ತಾಳ )

| ( ಪ ಮ ( ಗ ಮಾ ಗ ಸ ನಿ ( ಸ ಗಾ ಗ ಪಾ | ಪಾ ಪಾ ಪ ಪ
ಜಯ - ಗಣ ಪತಿ ವಿ ಘ್ನರಾಜ ಸೌ ಮ್ಯಾಹ ಸ್ಕರ

ಮ ನಿ ಪ ಮ ಗಾ | ಪಾ | ನಿ ನಿ ಸ ಸ ‖ ನಿ ಸ ಗಾ ಸ ಸ ನಿ ಪ
ತೇ( - - - ಜ | ವಾ ರಣ ಮುಖ ‖ ಶಂ - - | ಕರ ಸುಖ

ಪಾ | ಮ ಪ ನಿ ಪ ಮ ಗ ಮ ನಿ ಪ ಮ ಗ ಸ ಸಾ ನಿ ಸ | ಗ ಗಾ (
ಲಂ ಬೋ( - - - ದರ ಸ್ಮಿ - ತ - ಮಧುರ | ಜಯ | - ಪರಾಕ

ಪಾ | ಮ ನಿ ಪಾ
ಚ್ಚರಿಕೆ

ರಾಗ: ಚಕ್ರವಾಕ )

ಪ ಮ ಗ ರಿ ರಿ ಸ | ನೀ( ಸ ಸ ರಿ ರಿ ಮಾ ಪ ದ ದ ಮ ‖ ಮಾ ಗ ರಿ ( ರಿ ರಿ
ಮೋ( - ದ - ಪ್ರದ | ಮೋ( ದಕಪ್ರಿಯ ಸಾ ಧುರುಚಿರ | ಧೀ | ರಾ ಶ್ರಯ

( ದ ದ ದ ಸಾ ರಿ | ( ಗ ಮ ( ರಿ ರಿ ಸ ಪ ದ | ನಿ ಸ ನಿ ಪಾ
ಪ್ರಣ ವ ರೂಪ | ದುರಿ | - ತ ತಾಪ ಏಕ | ದಂ - ತ

( ಮ ಪ : ಮ ರಿ ( ರಿ ನಿ ಸ | ( ನಿ ಸಾ ಗ ರಿ ರಿ ಸ ಸಾ
ಮದ ಕೃತಾಂತ | ಪರಾಕ್ | - ಪರಾಕ್ ಎ - ಚ್ಚರಿಕೆ

ದಾ | ಪ ದಾ ಪ ‖ ಮ ರಿ | ಮಾ ಪ ದ ‖ ( ದ ದ | ದ ಸಾ ಸ | ನಿ ದ ನಿ ಪಾ ಪ
ಸೊಂ | ಡಿಲಾಡೆ | ದೆಸೆ | ಹಿಗ್ಗ - | ನಡೆ | ಗೆ ಸರ್ವ | ಧರ ನೆಜಗ್ಗೆ

ಗಾ ಗ ಗ ಪ ಗ ರಿ ( ‖ ನಿ ದ ನೀ ( ಸಾ ‖ ( ಗ | ಗ ಸಾ ಸ ದ ನಿ
ನೋ( ಟದ ಝಳ ‖ ಕೆಡ ರಿಲ್ಲ | ತೋ( | ರಿ ಹುಲ್ಲ ಹಿಡಿ

ಪ ನಿ ದ ಪ | ( ನಿ | ನಿ ನಿ ನಿ ನಿ ದ ಪ ಮ ಗ ರಿ ರಿ ಸ ರಿ ಗ ಪ ಗ ರಿ ರಿ
- ಹ - ಲ್ಲ | ಏ | ಲ್ಲರರಿವ ತಮ ವ ಕಳೆವ ಶಿವ ಕು - ಮಾ - ರ

ಗಾ ( ರಿ ಸಾ ( ‖ ( ನಿ ದ ನಿ ಸ ರಿ ರಿ ‖ ಗ ಪ ಗಾ | ರಿ ಸಾ ( ಧಾ ನಿ ಸ ರಿ (
ತೋ( ರಿಬಾ ‖ ಗೆಲ - ಏ ನರಸೆ ‖ ನೇ( - - ರ ಬಾ ಸಾ ಮಿಪರಾಕ್

‖ ಗ ರಿ | ಸ ಸ ಸಾ
‖ ಕೆ - | ಚ್ಚರಿಕೆ

೧೯] ( ಪೀಲೂರಾಗದಲ್ಲಿ ಮನೋಧರ್ಮದಂತೆ ಹಾಡತಕ್ಕದ್ದು )

[೨೦] ( ರಾಗ: ಹರಿಕಾಂಬೋಜಿ ಜನ್ಯ — ಚತುಶ್ರ — ಏಕತಾಳ )

ೱ ಸಾ ಗ ಮ ಪ ಪಾ ನಾ ಗ ಮ ಪ ಪಾ ಮ ಪ ದ ಪ ಮಾ
ವರ್ಷ ಹ - ರ್ಷ ವರ್ಷ ಹ - ರ್ಷ - - - - -

ಗ ಮ ಪ ಮ ಗಾ ರಿ ಗ ಮ ಗ ರಿ ೱ ಸ ರಿ ಗ ರಿ ಸಾ ಸ ನಿ ೱ ೱ ೱ ೱ ಪ | ದ ಪ ಪಾ
- - - - - - - - - - - - - - ನಭೋ ೱ - - ವಿ ತಾ - ನ

ೱ ೱ ಮಾ ಮ ಪ ದಾ ೱ ೱ ಮಾ ಮ ಪ ದಾ ೱ ಮ ಮ ಪ ಮಾ ಗ ಮ ಗಾ ರಿ ಗ ರಿ ೱ ಸಾ ೱ
ಲಸತ್ - | ತಟಿತ - - - ಪ್ರತಾ - -

ಸಾ ದ ಸಾ ೱ ೱ ಸ ಸ ಸ ಸ ನಿ ಸ ರಿ ಸ ನೀ ೱ ೱ ದಾ ನಿ ಪಾ
ಕುಂಭಿ | ನೀ ಬಲು ಬಯ | ಸಿ - ದ - ಕಾ | - ದಂಬಿ ನೀ

ಸಾ ಸ ಸ ಸಾ ರಿ ಸ ನಿ ನಿ ೱ ದಾ ನಿ | ಪಾ ೱ ಮಾ ಪ ದಾ ೱ ಮ
ಅಪ್ಪಲು ತುಳು- ಕುವ - ಕಂಬ | ನಿ ಈ ಮ ಳೆ ಇ

ಮಾ ೱ ಪ ದಾ ಮ ಮ ಮಾ ೱ ಪ ದಾ ಪ ದ ಪಾ ಮ ಪ ಮಾ ಗ ಮ ಗಾ ರಿ ಗ ರಿ ೱ
ನ್ನೀ ೱ ಇಳೆ ನಮ ಗೀ ೱ ಯ ಳೆ ಬಾ - - - - - | ಳ್ಳಂ

ಸಾ ೱ ಪ ವರ್ಷ ಹರ್ಷ ... ಪ್ರತಾನ ೱ ಸ ಸ ದ ಸಾ ಸ ಸ ದ | ಸಾ ೱ ೱ
ಗುಡುಗಿ | ದು ಗುಡುಗಿ | ದು

ಸಾ ಸಾ ರಿ ಸ ನಿ ನಿ ನಿ ನಿ | ೱ ದ ದ ನಿ ಪಾ ೱ ೱ ಸ ಸ ನಿ ಸ ರಿ ಸ ನಿ ನಿ ನಿ ೱ
ದುಂ ದುಭಿ - ಮೊಳಗುವ ಬೆಡಗಿ ದು ಸೊದೆ ನೆ - ಲ - ಕಿಳಿವ

ದ ದ ನಿ ಪಾ ೱ ೱ ಮಾ ೱ ಪ ದಾ ಮಾ ೱ ಪ ದಾ ಮಾ ೱ ಪ ದಾ ಪ ದ ಪಾ
ತೊಡಗಿ ದು ಕಾಡುವ ಜಾಡ್ಯವ ದೂಡುವ ಸ - -

ಮ ಪ ಮಾ ಗ ಮ ಗಾ ರಿ ಗ ರಿ ೱ ಸಾ ೱ ೱ
ಡ - - ಗ - - ರ - - - - - ವರ್ಷ ಹರ್ಷ ... ಪ್ರತಾನ

ಸ ಗ ಗ ಗ ಗ ಗ ಪ ಸ ೱ ಗ ಗ ಪ ಸಾ ೱ ೱ ಗ ಗ ಗ ಗ | ಗ ಗ ಪ ಸ |
ಮುದುಡಿತು ಹೆಡೆಯ - ಸೆಗಳಿ ಸಹಿಸರಿ | ನಿಯರಿನಾ

ೱ ಗ ಗ ಗ | ಪ ಸಾ ೱ ಸ ಸ ಸ ಸ ನಿ ನಿ ನಿ ೱ ದ ನಿ ಪಾ ಸಾ ರಿ ನಿ ನಿ ನಿ ದಾ
ನಗಲಿ | ಕೆ - ಬನಕೆ ಹ | ಸಿರಿನ | ಗ್ಗಳಿಕೆ ತೀ ೱ ರಿ ತಿ ಳಿಗೆ ಹಂ

ದ ನಿ ಪಾ ನಿ ನಿ ನೀ ೱ ದ ನಿ ದ ನಿ ದ ನಿ ದ ನಿ ಪಾ ೱ ೱ | ಸ ಸ ನಿ ಸ ರಿ ಸ
ಬಲಿಕೆ ಜನಕೋ ೱ ಖುಷಿಯರಿ ವಿನಗಳಿ ಕೆ | ಹರಿ | ಸಿ-ರಿ -

ನೀ ೱ ದ ದ | ಮ ಮ ಪ ದ ಪಾ ೱ ೱ ನೀ ೱ ನಿ ನಿ ನಿ ನಿ ದಾ ನಿ ದ ಪ ಪ
ಶಂಕರಿ | ಯರ ಹರ ಕೆ ಮೋ ೱ ಡದೊ ನವು ಮಿಂ ಚ ಹೊಳವು

ದಾ ದ ಪ ಮ ಮ ಮ ಮ | ಪ ದ ಸಾ ನೀ ೱ ನಿ ದ ೱ ದ ಪ ಮ | ಪ ದ ಸಾ
| ನೀ ೱ ರಿ ನೋ ೱ ಗಳ | ಗಳವು ಸಾಲು ಹ - ಬ್ಬಗಳ ನೆನವು

॥ ವರ್ಷ ಹರ್ಷ ... ಪ್ರತಾನ ॥



ಪರ್ವತವಾಣಿ



ಟಿ. ಸುನಂದಮ್ಮ



ಕಡೆಂಗೋಡ್ಲು ಶಂಕರಭಟ್ಟ



ಕ್ಷೀರಸಾಗರ



ಟೇಂಗ್ಸೆ ಗೋವಿಂದರಾವ



ಎನ್ಕೆ ಕುಲಕರ್ಣಿ



ಶಂಕರ ಮೊಕಾಶಿ (ಪುಣೇಕರ)

ಪಾತ್ರಗಳು :

ಬಿಂದೂರಾಯ
ಪಕ್ಕದ ಮನೆಯ ವಿಠಂತು ಸುಬ್ಬುಲಕ್ಷಮ್ಮ
ತನ್ನ ಮನೆಯಾಕೆ ಸುಬ್ಬುಲಕ್ಷ್ಮಿ
ಮಗಳು ಪದ್ದು
ಮಗ ಶಾಮು
ಪದ್ದೂ ಸ್ನೇಹಿತಿ ಎದುರು ಮನೆಯ ಚೆಲ್ಲು ಹುಡುಗಿ ರಾಜು.

ಅಲ್ಲದೆ :
ಸ್ಕೂಲ ಜವಾನ
ಕಳ್ಳೆಕಾಯಿ ಮಾರುವವಳು
ಸೀಬೆ-ಹಣ್ಣು ಮಾರುವವನು
ಶಾಮೂ ಸಹಪಾಠಿಗಳು

ಕಾರ್ಯವ್ಯಾಪ್ತಿ :

ದೃಶ್ಯ ೧ — ಬಿಂದೂರಾಯನ ಮನೆ
ದೃಶ್ಯ ೨ — ಶಾಮೂ ಸ್ಕೂಲಿನ ಮುಂದಿನ ಮೈದಾನ
ದೃಶ್ಯ ೩ — ಬಿಂದೂರಾಯನ ಮನೆ.

ಕಾಲವ್ಯಾಪ್ತಿ :

೪೦-೪೫ ನಿಮಿಷಗಳು

## ಮೊದಲ ಮಾತು

ನನ್ನ ಸ್ನೇಹಿತ ನನಗೆ ಒಂದು ಕಥೆ ಹೇಳಿದ. ಅವನು ಚಿಕ್ಕವನಾಗಿದ್ದಾಗ ಅಪ್ಪನ ಜೇಬಿನಿಂದ ದುಡ್ಡು ಕದ್ದನಂತೆ; ಅಪ್ಪ ಅವನ ತಂಗಿಯನ್ನು ಹೊಡೆದು ಬೆಚ್ಚಿದರಂತೆ. ಆವತ್ತಿನಿಂದ ಅವನು ಕದಿಯುವುದನ್ನು ಬಿಟ್ಟನಂತೆ.

ಆ ಕಥೆ ಈ ನಾಟಕದ ರೂಪ ತಾಳಿದೆ. ಎಲ್ಲ ಪಾತ್ರಗಳನ್ನೂ ಮಕ್ಕಳೇ ಮಾಡಿದರೆ ಚೆಂದ ಅಂತ ನನಗೆ ಅನ್ನಿಸುತ್ತದೆ.

ಮುಖ್ಯವಾಗಿ ಸ್ಕೂಲ ಹುಡುಗರಿಗೆ ತಕ್ಕ ನಾಟಕವೆಂದು ನನ್ನ ಅಭಿಪ್ರಾಯ, ಅವರಿಗೆ ವಿವಿಧ ಪಾತ್ರನಿರ್ವಹಣ ಶಕ್ತಿಗೆ ಈ ನಾಟಕ ಒಳ್ಳೆಯ ಮೆಟ್ಟಲು. ದೊಡ್ಡವರಿಗೂ ಮದ್ದಿಲ್ಲದಿಲ್ಲ.

ಈ ಕಲ್ಪನೆಯ ಹೆಚ್ಚು ಅರ್ಥ, ಓದಿದರೆ, ನೋಡಿದರೆ, ವ್ಯಕ್ತವಾದರೆ ಸಾರ್ಥಕ.

— ಪರ್ವತವಾಣಿ

[ ದೃಶ್ಯ ೧ ]

[ಬಿಂದೂರಾಯನ ಮನೆ. ಕೋಣೆ. ಗೋಡೆಯ ಮೊಳೆಗೆ ಅಂಗಿ, ರುಮಾಲು. ಬಟ್ಟೆಯ ನಿಲುವಿಗೆ ಬನಿಯನ್ನು, ಷರಟು ತೂಗುಹಾಕಿದೆ. ಎದುರಿಗೆ ಗಾಂಧಿಪಟ. ಒಂದು ಕಪ್ಪ ಟ್ರಂಕಿನ ಮೇಲೆ ಹಾಸಿಗೆ ಸುತ್ತಿಟ್ಟಿದೆ. ಬೆಳಗ್ಗಿನ ದೇವರಪೂಜೆ ಮುಗಿದಿದೆ. ರಾಯ ಪ್ರವೇಶಿಸುತ್ತಾನೆ. ಕಚ್ಚೆಪಂಚೆ, ದ್ವಾದಶನಾಮ, ಮುದ್ರೆ, ತುಳಸಿಮಣಿ, ಹೆಗಲ ಮೇಲೆ ಚೌಕ — ಅಲಂಕಾರ.]

**ಬಿಂದು :** ಕಲ್ಯಾಣಾದ್ಭುತಗಾತ್ರಾಯ (ಚೌಕವನ್ನು ಒಣಗಲು ಹಾಕಿ) ಕಾಮಿತಾರ್ಥಪ್ರದಾಯಿನೆ ( ಬನಿಯನ್ನು ಹಾಕಿಕೊಳ್ಳುತ್ತಾ ) ಶ್ರೀಮದ್‌ವೆಂಕಟನಾಥಾಯ (ಷರಟನ್ನು ಕೊಡವಿ ಮೈಗೆ ಸೇರಿಸುತ್ತಾ) ಶ್ರೀನಿವಾಸಾಯತೇ ನಮಃ(ಒಳ ಬಾಗಿಲ ಕಡೆ ನೋಡಿ) ಸಾಯತೇ ನಮಃ .... ಹಾಳು ಚೌಕ ಒಣಗು ಹಾಕಿ, ಅನಿಷ್ಟ ಬನಿಯನ್ನನ್ನು ಹಾಕಿಕೊಂಡು, ಪ್ರಾರಬ್ಧ ಷರಟಿನೊಳಗೆ ಅವಲಕ್ಷಣದ ಮೈಯನ್ನು ಸೇರಿಸಿದ್ದಾ. ದರೂ, ಈ ಅಪಸ್ಮಾರಿ ಕೈ ಹಿಡಿದ ಹೆಂಡತಿಗೆ ಕಾಫಿ ತಂದು ಕೊಡುವುದಕ್ಕೆ ಹೊತ್ತು ಬರಲಿಲ್ಲ !.... ನಾನೂ ನಿತ್ಯ ಬಡಕೊಳ್ಳುತ್ತೇನೆ.... "ಲೇ, ಮೊದಲು ಕಾಫಿ ಕೊಟ್ಟು ಬಿಡೇ, ಆ ಮೇಲೆ ನಿಧಾನವಾಗಿ, ಸಮಾಧಾನವಾಗಿ, ಏಕಮನಸ್ಕನಾಗಿ ಸಾಲಿಗ್ರಾಮವನ್ನು ಗಲಬರಿಸುತ್ತೇನೆ, ಸೀಗೇಕಾಯೋ ನಾಬೂನೋ ಬೇಕಾದರೂ ಹಚ್ಚಿ," ಅಂತ; ಊಹು : "ತೀರ್ಥ ಮೊದಲು ಕೊಡಿ. ಕಾಫಿ ಆ ಮೇಲೆ" ಅಂತ ಕ್ಕೊಲ್ಲುತ್ತಾಳೆ, ಕಣಿವೆಯ ಕೆಳಗಿನ ಗೊಡ್ಡು ಹೆಂಡತಿ .... ಯಾಕೋ ತಡ ? ಇವಳ ಮಡಿ ಬೇರೆ ಹಾಳು ಗೋಳು ! ಕುಮಟೆಯ ಮುಂದೆ ಹಸಿಯ ದಾರದ ಚೂರೇನಾದರೂ ಬಿದ್ದಿದೆಯೇ ಏನೋ ? ದೂ — ರದಿಂದ ನೋಡುತ್ತಾ ನಿಂತುಬಿಟ್ಟಿದಾಳೋ ಹ್ಯಾಗೆ ? ಈ ಸಂಪತ್ತಿಗೆ ಇವಳು S. S. L. C. ಪ್ಯಾಸು ! ಕೇಡು ! ಮೈಲಿಗೆ ದಾರಕ್ಕೆ ಹೆದರಿ ಮೈಲಿ ದೂರ ನಿಂತಿರೊಕ್ಕೆ ಮಡಿಯನ್ನು ಹಿಡಿದುಕೊಂಡು ! ಮಕ್ಕಳನ್ನು ಕರೆದು, ದಾರ ಬಿಸಾಡಿಸಿ ಕಾಫಿ ತಂದು ಕೊಡಬಾರದೇ ನನಗೆ ? ಹಯ್ಯೋ.... ಲೇ, ಪದ್ದೂ, ಪದ್ದೀ, ಪದ್ದೀಲೆ ........ ಸರಿ. ಸರಿಯಾದ ಮಗಳೇ. ಅವಳು ಯಾಕೆ ಮನೆಯಲ್ಲಿ ಇದ್ದಾಳು ? ವೈಜಯಂತಿಯ ಮರಿಮಾಲೆ ! ಎರಡು ಜಡೆಯ ಹುಡುಗಿ ಯಾವ್ದೋಳು ಬೀದಿಯಲ್ಲಿ ಹೋಗುತ್ತಿದ್ದಾಳೋ, ನೋಡುತ್ತಾ ತನ್ನ ಜಡೆ. ಯನ್ನು ಬಿಚ್ಚಿ ಹೆಣೆದುಕೊಳ್ಳುತ್ತಾ ನಿಂತುಬಿಟ್ಟಿದ್ದಾಳು ! ಮಗನಾದರೂ, ಶಾಮೂ, ಶಾಮೀ, ಪುಟ್ಟಶಾಮೂ, ಶಾಮಣ್ಣೀ, ... ಅರೆ ... ಅಂದಹಾಗೆಯೇ ಅವನಿಗೆ ಬೆಳಗ್ಗೆ ಕ್ಲಾಸು. ಸ್ಕೂಲಿಗೆ ಹೊರಟುಹೋಗಿದ್ದಾನೆ. ಅವನಾದರೂ ಇದ್ದಿದ್ದರೆ ... ಹುಂ ... ಕರ್ಮ. ಕರ್ಮ. (ತರ್ಕಾರಿ ತರಲು ಚಿಲ್ಲರೆ ತೆಗೆದುಕೊಳ್ಳಲು ಅಂಗಿಯ ಜೇಬಿಗೆ ಕೈ ಹಾಕುತ್ತ) ಇಷ್ಟಲ್ಲದೇ ದಾಸರು ಸುಮ್ಮ ಸುಮ್ಮನೆ ಹೇಳಿದರೇ, ದೇವರ ನಾಮದಲ್ಲಿ, 'ಯಾರಿಗೆ ಯಾರುಂಟು ?' ಅಂತ? ಹೆಂಡತಿ ಇದಾಳೆ; ಮಗಳಿದಾಳೆ; ಮಗನಿದಾನೆ; ನನಗೆ ಕಾಫಿ ಇಲ್ಲ! ಯಾರು? ಯಾರು? ಯಾರು? ಒದಗುತ್ತಾರೆ ಸಮಯಕ್ಕೆ ?

ಯಾರಿಲ್ಲ. (ಗಾಬರಿಯಿಂದ) ಆ? ಅರೆ! ... ಅಶ್ಶಿಶ್ಶಿಶ್ಶಿ ... ಏನಾಗಿಹೋಯಿತು ಎಂಟ್ರಾಣೆಯ ಬಿಲ್ಲೆ? ಆಂ? ಈ ಜೇಬಿನಲ್ಲೇ ಹಾಕಿದ್ದೆನಲ್ಲಾ! ಆಂ... ಉಂ ... ಸರಿ ... ಸರಿ. ಇವಳೇ. ಈ ಕಣಿವೆ ಕೆಳಗಿನ ಕೊರಮೀನೇ ಎಗರಿಸಿಬಿಟ್ಟಿರಬೇಕು. ಕೈ ಸುಟ್ಟುಬಿಡಬೇಕು. ಲೇ. ಲೇಯ್. ಸುಬ್ಬುಲಕ್ಷ್ಮೀ. ಆದರೆ ಸ–ಪ–ಸಾ ನೂ ಬರದ ಸುಬ್ಬುಲಕ್ಷ್ಮೀ.

[ಪಕ್ಕದಮನೆಯ ಮಡಿಹೆಂಗಸು ಸುಬ್ಬುಲಕ್ಷ್ಮಮ್ಮ ಕೈಯಲ್ಲಿ ಸೆಗಣಿಯ ಉಂಡೆ ಹಿಡಿದು ಪ್ರವೇಶಿಸಿ]

**ಪ.ಮ.ಸು.ಲ.:** ಏನಪ್ಪಾ? ಕೂಗಿದಿರಾ ನನ್ನ?

**ಬಿಂದು:** (ಬೆಚ್ಚಿ, ಎರಡು ಹೆಜ್ಜೆ ಮುಂದಿಟ್ಟು) ಆಂ? ಅ ಶ್ಶಿ ಶ್ಶಿ ... ಯಾರು ನೀವು? ರಾಮ ರಾಮ. ಎಲ್ಲಿಂದ – ?

**ಸು.ಲ.:** (ಕಾಫಿ ಲೋಟವನ್ನು ಹಿಡಿದು ಓಡಿ ಬಂದು) ಅಯ್ಯೋ, ಸುಬ್ಬುಲಕ್ಷ್ಮಮ್ಮನವರೇ, ನೀವು ಯಾಕೆ ಬಂದಿರಿ ಇಲ್ಲಿ? ಅವರು ಕೂಗಿದ್ದು ನಿಮ್ಮನ್ನಲ್ಲ, ನನ್ನನ್ನು. ನನ್ನ ಹೆಸರೂ ಸುಬ್ಬುಲಕ್ಷ್ಮೀನೇ, ಅದಕ್ಕೋಸ್ಕರ ....

**ಪ.ಮ.ಸು.ಲ.:** ಹಾಗಾ? ನಿನ್ನ ಹೆಸರೂ ಸುಬ್ಬುಲಕ್ಷ್ಮೀನೇನಾ? (ನಗುತ್ತಾ) ಇದು ಚೆನ್ನಾಯಿತು. ಅದೇ, ಇದು ಯಾಕೆ ನಿನ್ನ ಗಂಡ ನನ್ನ ಕೂಗಿ ಕರೆದರು ಅಂತ ಅರ್ಥವಾಗದೆ .... ಈಗ ಸರಿಹೋಯಿತು (ಬಿಂದೂರಾಯನಿಗೆ) ಏನೂ ತಿಳಿದು-ಕೊಳ್ಳಬೇಡಿಯಪ್ಪ. ನಮ್ಮ ಇಬ್ಬರ ಹೆಸರೂ ಒಂದೇ ಆದ್ದರಿಂದ (ಹಲ್ಲಿಲ್ಲದ ಬಾಯಿ ಬಿಚ್ಚಿ ನಗುತ್ತಾ) ಅವಾಂತ್ರ .... ನಾವು ·ಹೊಸದಾಗಿ ನಿಮ್ಮ ಮಗ್ಗಲುಮನೆಗೆ ಸಂಸಾರ ಬಂದಿದ್ದೇವೆ. ಮಗ ಇನತ್ತು ಸತ್ಯನಾರಾಯಣಪೂಜೆ ಮಾಡುತ್ತಾನೆ, ಸೆಗಣಿ ತೊಗೊಂಡು ಹೋಗೋಣ ಅಂತ ಬಂದೆ. ಎಂತಹ ತಮಾಷೆ ಆಗಿ ಹೋಯಿತೇ, ಸುಬ್ಬೀ? ನಮ್ಮ ಇಬ್ಬರ ಹೆಸರೂ ಒಂದೇ .... ಅಂದ ಹಾಗೇ ನಿನ್ನ ಗಂಡನ ಹೆಸರೇನೇ? .... ಹಯ್ಯೋ ನನ್ನ ಬುದ್ಧಿಗೆ ಇಷ್ಟು ಹಾಕಿತು. (ಬಿಂದೂರಾಯನಿಗೆ) ನಿಮ್ಮ ಹೆಸರೇನಪ್ಪಾ?

**ಬಿಂದು:** ಬಿಂದೂರಾಯ ಅಂತ.

**ಪ.ಮ.ಸುಲ.:** ಆ? (ತೆರೆದ ಬಾಯಿ ಮುಚ್ಚುವದಿಲ್ಲ. ಸೆಗಣಿಯ ಉಂಡೆ ಕೈಯಿಂದ ಬೀಳುವುದು. ಕೆನ್ನೆಗೆ ಚಟ್ಟು ಬಡೆದುಕೊಂಡು ಆಶ್ಚರ್ಯದಿಂದ) ಆ ಹೆಸರಾ? (ಅಳುವ ಧ್ವನಿಯಿಂದ) ಏನೆ? ಅದೇ ಹೆಸರೇನೆ?

**ಬಿಂದು:** (ಬೇಸರದಿಂದ) ಹೌದು. ಅದೇ ಹೆಸರು. (ಕಿವಿಗಳನ್ನು ಬೆರಳುಗಳಿಂದ ಹಿಡಿದು ಪ್ರವರ ಹೇಳುತ್ತಾ) ಚತುಸ್ಸಾಗರಪರ್ಯಂತಂ ಗೋಬ್ರಾಹ್ಮಣೇಭ್ಯಃ ಶುಭಂ ಭವತು, ಆಂಗೀರಸ ಬ್ರಾಹಸ್ಪತ್ಯ ಭಾರದ್ವಾಜ ತ್ರಯಿರಾನ್ವಿತ ಭಾರದ್ವಾಜ ಗೊತ್ರೋದ್ಭವಸ್ಯ,ಬಿಂದೂರಾಯ ಶರ್ಮನ್,ಅಹಂ ಭೋ ಅಭಿವಾದಯೇ(ಸಾಷ್ಟಾಂಗ ಪ್ರಣಾಮ ಹಾಕಿ ಎದ್ದು, ಹಲ್ಲು ಕಚ್ಚಿ) ಸಾಕೇ? ಹೋಗಿಬನ್ನಿ. (ಕೈಮುಗಿಯುವನು).

ಪ.ಮು.ಸು.ಲ. : (ಸೆರಗಿನಿಂದ ಕಣ್ಣೀರು ಒರೆಸಿಕೊಳ್ಳುತ್ತಾ, ಸೆಗಣಿಯನ್ನು ನೆಲ-ದಿಂದ ಬಳಿದು ಎತ್ತಿಕೊಳ್ಳುತ್ತಾ) ಏನು ಪರಮಾತ್ಮನೇ, ಸುಬ್ಬುಲಕ್ಷ್ಮೀ ! ಏನು ಲೀಲೆಯೋ ಆ ಪಾಪಿ ನಾರಾಯಣಂದು ! ಅವರ ಹೆಸರೂ ಅದೇ ಆಗಿತ್ತು ಕಣೇ ! ಮೂವತ್ತು ವರ್ಷ ಆಯಿತು ನನ್ನ ಹೀಗೆ ಮಾಡಿ ಹೋಗಿ. ಬರುವ ಪಾಡ್ಯ ಬರುತ್ತಾರೆ. ಬರುತ್ತೇನೆ. ಬರುತ್ತೇನೆ. (ನಿಷ್ಕ್ರಮಿಸುವಳು)

ಬಿಂದು : ಲೇ, ಸುಬ್ಬೀ, ಯಾವ ಮಗ್ಗುಲಲ್ಲಿ ಎಬ್ಬಿಸಿದೆಯೋ ನನ್ನನ್ನು ಇವತ್ತು?

ಸು.ಲ. : ಯಾವ ಮಗ್ಗಲು ಆದರೇನು, ಮಗ್ಗಲು ಮನೆಗೆ ಅವರು ಬಂದಿದಾರೆ ಅಂತ ಜ್ಞಾಪಕ ಇಟ್ಟುಕೊಂಡು, ಇನ್ನು ಮೇಲೆ ನನ್ನ ಹೆಸರನ್ನು ಅಷ್ಟು ಗಟ್ಟಿಯಾಗಿ ಕೂಗಬೇಡಿ. ತಗೊಳ್ಳಿ ಕಾಫಿ. (ನೆಲದ ಮೇಲೆ ಇಡುವಳು)

ಬಿಂದು : (ಎತ್ತಿಕೊಂಡು) ಬದುಕಿಸಿದಿ. (ಕುಡಿಯುತ್ತಾ) ಅಬ್ಬ! ಲೇ ಸುಬ್ಬೀ, ಇನ್ನು ಮೇಲೆ ನೀನು, ತುಂಗಿ. ಈ ಕಡೆ ಖಾಲಿ ಇರುವ ಮನೆಗೆ ಒಬ್ಬಳು ತುಂಗಿ ಬಂದು ತೂರಿಕೊಂಡರೆ, ಅಂದಿನಿಂದ ಗಂಗಿ .... ಅದಿರಲಿ, ಲೇ, ಆ ಅಂಗಿಯ ಜೇಬಿನ ಅರ್ಥ ಏನೇ ?

ಸು.ಲ. : ಅಂಗಿಯ ಜೇಬಿನ ಅರ್ಥ ?

ಬಿಂದು : ಬೆಕ್ಕಿನ ಹಾಗೆ ಆಡಬೇಡವೆ. ನೀನೇನೋ ಕಣ್ಣು ಮುಚ್ಚಿಕೊಂಡು ಹಾಲು ಕುಡಿಯಬಹುದು. ಆದರೆ ನಾನು ನನ್ನ ತಾವರೆಕಣ್ಣು ಬಿಚ್ಚಿಕೊಂಡು ಬರಿಯ ಬಟ್ಟೆಲನ್ನು ನೋಡಬಲ್ಲೆನಲ್ಲೇ. ಲೇ, ನಲ್ಲೇ, ನಿನಗೆ ನೂರು ಸರ್ತಿ ಹೇಳಿದೇನಲ್ಲೇ, " ನೀನು ನನ್ನ ಹೆಂಡತಿ ಇರಬಹುದು, ನಾನು ನಿನ್ನ ಗಂಡ ಇರಬಹುದು...

ಸು.ಲ. : "ಇರಬಹುದೂ"? ಇದೇನು ಬಂತು ಅಂದ್ರೇ ಈಗ ಈ ಅನು-ಮಾನ ? ನಾಚಿಗೇಡು ! ಮದುವೆ ಆಗಿ, ಮಕ್ಕಳಾಗಿ —

ಬಿಂದು : ಗೊತ್ತೇ. ಅದಲ್ಲವೇ ನಾನು ಹೇಳುತ್ತಿರುವುದು. ನಾನು ಹೇಳಿದ್ದು, ಇಷ್ಟೆಲ್ಲಾ ಆಯಿತು ಅಂತ ಅಂಗಿಯ ಜೇಬಿಗೆ ಕೈ ಹಾಕಬಾರದು, ಹಾಕಬೇಡ, ಅಂತ ಹೇಳಿದ್ದೆನೋ ಇಲ್ಲವೇ ?

ಸು. ಲ. : ಹೂಂ ? ಈಗ ನಿಮ್ಮ ಅಂಗಿಯ ಜೇಬಿಗೆ ಯಾರು ಕೈ ಹಾಕಿದರು ?

ಬಿಂದು : ಇನ್ನು ಯಾರು ? ನೀನೇ !

ಸು. ಲ. : ಅಯ್ಯೊಯ್ಯೋ. ಚೆನ್ನಾಗಿದೆ. ಬರಬರುತ್ತಾ ನೀವು ನಮ್ಮ ಮನೆಯ ಕೆಲಸದ ಹೆಂಗಸು ಹೇಳುತ್ತಿರುತ್ತಾಳೆ, ನಿತ್ಯ ಅವಳ ಗಂಡ ಸಾಯಂಕಾಲ ಹೆಂಡ ಕುಡಿದು ಬಂದು ಹೀಗೆ ಹುಚ್ಚುಚ್ಚಾಗಿ ಕೂಗಾಡುತ್ತಾನೆ ಅಂತ.... ನೀವು, ಬೆಳಗಾ-ಗೆದ್ದು, ಲಕ್ಷಣವಾಗಿ ಸ್ನಾನಮಾಡಿ, ಭಕ್ತಿಯಿಂದ ದೇವರಪೂಜೆ ಮಾಡಿ, ಸಂತೋಷದಿಂದ ಕಾಫಿ ಕುಡಿಯುತ್ತಾ (ಬಿಂದು ಕುಡಿದು ಲೋಟ ಕೆಳಗಿಡಲು) ಕುಡಿದು, ಕುಡಿದವರ ಹಾಗೆ —

ಬಿಂದು : ಲೇ, ನಿಲ್ಲಿಸು. ನಿಲ್ಲಿಸೇ. ಏನು ಬಾಯೇ! ಲೇ ನಿನ್ನ ಕಣಿವೆ ಕೆಳ-ಗಿನ ಪೇಳೆ ಇಲ್ಲಿ ಬೇಯೊಲ್ಲವೇ! ಒಂದು ಮಣ ಸೋಡ ಹಾಕು, ಈ ಮಹಿಶೂರ ಬಿಂಪೂಪಾಯ ಬಿಂ ಅನ್ನೊಲ್ಲವೇ! ಈಗ ಈ ಜೇಬಿನಲ್ಲಿದ್ದ ಎಂಟಾಣೆ ಯಾಕೆ ತೆಗೆದಿ? ಬೇಕು ಅಂದಿದ್ದರೆ ಎಂಟುರೂಪಾಯಿ ಬಿಸಾಡುತ್ತಿದ್ದೆನಲ್ಲೇ ನಿನ್ನ ಮೂತಿಯ ಮೇಲೆ ?

ಸು. ಲ. : ಅಯ್ಯೋ, ಇಲ್ಲಿ ಬಿಸಾಡಿಸಿಕೊಳ್ಳುತ್ತಿದ್ದವರು ಯಾರೋ ಕಾಣೆ. ನಿಮ್ಮ ಎಂಟು ರೂಪಾಯಿಗೆ ಗತಿಗೆಟ್ಟು ಘಟ್ಟ ಹತ್ತಿಬಂದೆ ಅಂತ ಇದೀರಾ ? ಹುಷಾರಾಗಿ ಬಯ್ಯಿರಿ. ನಮ್ಮಪ್ಪನಿಗೆ ಎಂಭತ್ತು ಎಕರೆ ಜಮೀನಿದೆ. ನದೀತೀರ. ನಿಮ್ಮ ಎಂಟಾಣೆ ಬಿಲ್ಲೆ ಕದಿಯೊಕ್ಕೆ ಬರುತ್ತೇನೆ ಬಾ ಅಂತ.

ಬಿಂದು : ಅಲ್ಲವೇ .... ಮತ್ತೆ ? .... ಆ ದೇವರ ತಲೆಯ ಮೇಲೆ ಬಡಿಯೊಕ್ಕೆ ಹೂವಿಗೆ ಜಗಳ ಆಡಿ, ರೂಪಾಯಿ ಮುರಿಸಿ, ನಾಲ್ಕಾಣೆ ಆ ಹೂವಿನವನ ವಾಲೆಗಿಟ್ಟು ಉಳಿದ ಎಂಟಾಣೆ ಬಿಲ್ಲೆ ನಾಲ್ಕಾಣೆ ಬಿಲ್ಲೆ ಇದೇ ಜೇಬಿನಲ್ಲಿ ಹಾಕಿದೆನಲ್ಲೇ. ಈಗ ಆ ಎಂಟಾಣೆಯ ಬಿಲ್ಲೆ 'ನಾಕಾಣೆ' 'ನಾಕಾಣೆ' ಆಗಿ ಹೋಗಿದೆಯಲ್ಲೇ, ಏನೇ ಅರ್ಥ ? ತರ್ಕಾರಿ ತರಬೇಕು ಅಂತ ಜೇಬಿಗೆ ಕೈ ಹಾಕುತ್ತೇನೆ, ಎಷ್ಟೆಷ್ಟು ತಡಕಿದರೂ, ಅದು ಮಂಗಮಾಯವಾಗಿದೆಯಲ್ಲೇ ! ಬೆಟ್ಟಿಗೆ ಬೆಟ್ಟು ಸಿಗತೇ ಹೊರತು ಬಿಲ್ಲೆ —

ಸು. ಲ. : ಅಂಗಿಯ ಜೇಬು ತೂತು ಇದ್ದೀತು ನೋಡಿ.

ಬಿಂದು : ಲೇ ಲೇ ಲೇ ನಿನ್ನ ಮೂತಿಯನ್ನು ಮಂಗನ ಮೂತಿಮಾಡಿ ಹಾಕಿ ಬಿಡುತ್ತೇನೆ ನೋಡು ನಾಲ್ಕು ಹೊಡೆದು. ರೇಗಿಸಬೇಡ ನನ್ನ. ಜೇಬು ತೂತಾದರೆ ನೆಲದ ಮೇಲೆ ಬಿದ್ದಿರಬೇಕಿತ್ತು. ನೆಲವೂ ತೂತಾಗಿ ಪಾತಾಳಕ್ಕೆ ಹೊರಟುಹೋಗಿದೆ ಅನ್ನುತ್ತೀಯೇನೇ ?

ಸು. ಲ. : ಮತ್ತೆ ಏನಾಯಿತು ?

ಬಿಂದು : ಕಂಡುಹಿಡಿಯುತ್ತೇನೆ. ಇದ್ದವರು ಮೂರು ಜನದಲ್ಲಿ ಕದ್ದವರು ಯಾರು ಅಂತ ಕಂಡುಹಿಡಿಯೊಕ್ಕೆ ಕಷ್ಟವೇನಿಲ್ಲ. ನಿನ್ನ ಬಾಯಿನಲ್ಲೇ ಹೊರಡಿಸುತ್ತೇನೆ ನೋಡು. ಲೇ, ನಾನು ಕದ್ದೆನೇನೆ ?

ಸು. ಲ. : ಇಲ್ಲ.

ಬಿಂದು : ನೀನು ನದೀತೀರದ ಎಂಭತ್ತು ಎಕರೆಯ ಭೂರಮಣನ ಪುತ್ರಿ. ಎಂಟಾಣೆಗೆ ಬರಗೆಟ್ಟು ಕದ್ದಿಲ್ಲ.

ಸು. ಲ. : ಇಲ್ಲ.

ಬಿಂದು : ನಮ್ಮ ಶಾಮಣ್ಣ ಕದ್ದಿದ್ದಾನೇನೇ ? ನಮ್ಮ ಶಾಮೀ. ಶಾಮಣ್ಣ, ಎಂಟಾಣೆ ಕದ್ದು ಸ್ಕೂಲಿಗೆ ಹೋಗಿದಾನೆ ಅನ್ನುತ್ತೀಯೇನೇ ?

ಸು. ಲ. : ಛಿ ಛಿ ಬಿಡ್ತು ಅನ್ನಿ.

ಬಿಂದು : ಇನ್ನು ಉಳಿದವಳು, ನಿನ್ನ ಮಗಳು ಪದ್ದಿ. ಅವಳೇ ಕದ್ದಿರಬೇಕು.

ಸು. ಲ. : ಛಿ ಛಿ ಪದ್ದು ಹಾಗಲ್ಲಾ — ಆದರೆ ....

ಬಿಂದು : ಅಗೋ, ಏನೋ ಗಂಟಲಲ್ಲಿ ಸಿಕ್ಕಿಕೊಂಡಿತಲ್ಲ, ಎಂಟಾಣೆ ಜಿಲ್ಲೆ.... ನುಂಗೋಕ್ಕಾಗದೆ .... ?

ಸು. ಲ. : ಉಹುಹು .... ಈಗ ಸ್ವಲ್ಪ ಹೊತ್ತಿಗೆ ಮುಂಚೆ ನಾನು ತುಳಸಿಯ ಪೂಜೆ ಮಾಡುತ್ತಿದ್ದಾಗ, ಆ ಹಾಳು ರಿಬ್ಬನ್ನಿನವನು, ಬೀದಿಯಲ್ಲಿ —

ಬಿಂದು : ಹೂ ಹೂ ನಾನು ಗಾಯತ್ರಿಯ ಜಪ ಮಾಡುತ್ತಿದ್ದೆ ... "ಟೇಪು ಟೇಪು ಜರ್ತಾರಿಯ ಟೇಪು" ಅಂತ ಕೂಗಿಕೊಂಡು ಹೋಗುತ್ತಿದ್ದ. ಕೇಳಿಸಿತು.

ಸು. ಲ. : ಅದೇ. ಪದ್ದು ಬಂದು ಕೇಳಿದಳು, "ಎರಡು ಟೇಪು ಕೊಡಿಸಮ್ಮ, ಎರಡು ಜಡೆಗೆ, ಎಂಟೇ ಆಣೆ ಅಂತಮ್ಮ" ಅಂದಳು.

ಬಿಂದು : ಅಂದಳೋ ?

ಸು. ಲ. : ಹೂ. ನಾನು "ಹೋಗೇ ಆಚೆ" ಅಂತ ಗದರಿಸಿದೆ.

ಬಿಂದು : ಸರಿ. ಹೋದಳಾಚೆಗೆ. ನನ್ನ ಜೇಬಿನಿಂದ ಎಂಟಾಣೆ ಕದ್ದುಕೊಂಡು ಹೋಗಿ, ಆ ಸುಡುಗಾಡು ಟೇಪನ್ನು ಕೊಂಡುಕೊಂಡು ಎರಡು ಜಡೆಗೂ ಬಿಗಿದು ಕೊಳ್ಳುತ್ತಾ, ಅವಳ ಸ್ನೇಹಿತಿ, ಆ ಎದುರು-ಮನೆ ಚೆಲ್ಲು-ಹುಡಿಗಿ ರಾಜು ಇದಾಳಲ್ಲ, ಅವಳ ಮುಂದೆ ಜಂಭ ಕೊಚ್ಚಿಕೊಳ್ಳುತ್ತಾ ಇದ್ದಾಳು — "ನೋಡೇ ನಮ್ಮಮ್ಮ ನನಗೆ ಕೊಂಡುಕೊಟ್ಟರು, ನಿನಗೆ ಇಲ್ಲವೇ ಇಲ್ಲ" ಅನ್ನುತ್ತಾ. ಈಗ ನೋಡು (ಬೆತ್ತ ಎತ್ತಿ) ಹೊರಗೆ ಎಳೆಯಿಸುತ್ತೇನೆ ಬಿಲ್ಲೆಯನ್ನು!(ಬೆತ್ತ ಸುಯ್ ಸುಯ್ ಎಂದು ಬೀಸಿ) ಲೇ ಪದ್ದು, ಪದ್ದಿ, ಪದ್ದೀ —

ಪದ್ದು : (ತಂದೆಯ ಕೂಗು ಕಿವಿಗೆ ಬಿದ್ದಿಲ್ಲ. ಕುಣಿಯುತ್ತ, ನೆಗೆಯುತ್ತ, ಸಂತೋಷ ದಿಂದ ಓಡಿ ಬಂದು ತಾಯಿಯನ್ನು ನೋಡಿ ನುಗ್ಗುತ್ತಾ) ಅಮ್ಮ ಅಮ್ಮ ಇಂಥಾ ಟೇಪಮ್ಮಾ. ಎಷ್ಟು ಚೆನ್ನಾ — ಗಿದೆ ನೋಡಮ್ಮಾ .... ಯಾಕಮ್ಮಾ ?

ಬಿಂದು : (ಅಣಕಿಸುತ್ತ) ಇಲ್ಲಿ ಬಾಮ್ಮ, ಅಪ್ಪನ ಹತ್ತಿರ, ಹೇಳುತ್ತೇನೆ 'ಯಾಕಮ್ಮಾ' ಅಂತ.

ಪದ್ದು : ಸುಮ್ಮನೆ ನೀವು ಹೊಡೆದು ಬಡೆದು ಮಾಡಬೇಡಿ ಅಂದ್ರೇ –

ಬಿಂದು : (ಅದೇ ರಾಗದಲ್ಲಿ) ನೀವು ಸುಮ್ಮನೆ ಅಡಿಗೆಯ ಮನೆಗೆ ಹೊರಟು ಹೋಗಿ ಅಂದ್ರೇ .... ಬರಿಯ ಹೊಡೆಯುವುದು ಬಡೆಯುವುದಲ್ಲವೇ; ಚರ್ಮಡೆ ಸುಲಿದು, ಚಪ್ಪಲಿಗೆ ಉಂಗುರ ಹೊಲಿಸಿಬಿಡುತ್ತೇನೆಯೇ, ನಿನ್ನೆ ಕಲ್ಲು ಎಡವಿ ಕಿತ್ತು ಹೋಗಿದ್ದನ್ನ .... ಬಾರೇ ಇಲ್ಲಿ, ಪದ್ದೀ.

ಪದ್ದು : ಅಪ್ಪ ?

ಬಿಂದು : ಮುಚ್ಚು ಬಾಯಿ. ನಾನು ನಿಮ್ಮ ಅಪ್ಪ ಅಲ್ಲ.

ಪದ್ದು : .... ಯಾಕಮ್ಮ .... ?

ಸು. ಲ. : ಥೂ, ದೂರ ಇರು. ನನ್ನ ಹತ್ತಿರ ಬರಬೇಡ. ನಾಚಿಗೆಕೆಟ್ಟದ್ದೆ.

ಪದ್ದು : ನಾನೇನು ಮಾಡಿದೆ ಅಮ್ಮ ?

ಸು.ಲ. : ಅವರ ಜೇಬಿನಿಂದ ಯಾಕೆ ಎಂಟಾಣೆ ಕದ್ದಿ ?

ಪದ್ದು : ನಾನೆಲ್ಲಿ ಕದ್ದೆ ಅಮ್ಮ ?

ಬಿಂದು : (ಮೈಎಲ್ಲ ಕುಲುಕುತ್ತ) "ನಾನೆಲ್ಲಿ ಕದ್ದೆ ಅಮ್ಮ" (ಅಣಕಿಸಿ) ಇನ್ನು ಹ್ಯಾಗೆ ಕೊಟ್ಟುಬಿಟ್ಟನೇ ಅಪ್ಪ ಆ ರಿಬ್ಬನ್ನಿನವನು ಈ ನಿನ್ನ ಚಿನ್ನಾರಿ ಟೇಪನ್ನು ?

ಪದ್ದು : ಇದಾ ಅಮ್ಮ ? ಇದು ಎದುರು ಮನೆ ರಾಜು ಕೊಟ್ಟಳು ಅಮ್ಮ. ಅವಳ ತಾಯಿ ತೆಗೆದುಕೊಟ್ಟರು ಎರಡು ಟೇಪು. ನನ್ನ ಬಿಳಿಯ ಜಡೆ ನೋಡಿ, "ಸ್ವಲ್ಪ ಹೊತ್ತು ಹಾಕಿಕೊಂಡಿರೇ ಪರವಾಗಿಲ್ಲ, ಆಮೇಲೆ ಇಸಗೊಳ್ಳುತ್ತೇನೆ" ಅಂತ ಈ ಒಂದು ಟೇಪನ್ನು ರಾಜೂನೇ ಹಾಕಿದಳು ಅಮ್ಮ.

ಬಿಂದು : ರಾಮ ರಾಮ ರಾಮ ರಾಮ. ಎಷ್ಟೊಂದು ಮಾತಾಡಿಬಿಟ್ಟಳೇ ? ಮುಗಿಯಿತು. ಮುಗಿಯಿತು. ಮುಗಿದೇ ಹೋಯಿತೇ. ಏನು ಹಾಳು ಹೆಂಗಸರೇ ನೀವು ? ಕೈಯಲ್ಲಿ ಕದ್ದು, ಸಾಲದುದಕ್ಕೆ ಸುಳ್ಳು ಬೇರೆ ಬೊಗಳಿ ಬಾಯಿಬಡಿಯುತ್ತೀರಲ್ಲೇ ! (ಪದ್ದೂಗೆ) ಲೇ, ರಾಜು ಕೊಟ್ಟಳೇನೇ ನಿನಗೆ ಇದನ್ನು ಕತ್ತೆ .... ಡೀ ?

ಸು.ಲ. : ಅಲ್ಲವೇ, ಪದ್ದು, ಸುಳ್ಳು ಯಾಕಮ್ಮ ಹೇಳುವುದು ? ಎಷ್ಟು ಸರ್ತಿ ಹರಿಶ್ಚಂದ್ರನ ಕಥೆ ಕೇಳಿದ್ದಿ —

ಪದ್ದು : ಕೇಳಿದ್ದೀನಮ್ಮ. ಅದಕ್ಕೇ ಮತ್ತೆ ನಿಜ ಹೇಳುತ್ತಿರುವುದು ಅಮ್ಮ, ಸತ್ಯವಾಗಿ

ಬಿಂದು : ಹರಿ. ಹರೀ. ಒಂದರ ಮೇಲೆ ಒಂದು ಕೆಟ್ಟ ಗುಣ. ಕದ್ದು, ಸುಳ್ಳು ಹೇಳಿ, ಸತ್ಯ ಅಂತ ಹಟ ಸಾಧಿಸುತ್ತಿದ್ದಾಳೆ ! ಏನು ಗತಿಯೇ ? ಯಾವ ನಕ್ಷತ್ರದಲ್ಲಿ ಹಡೆದೆಯೋ ಇದನ್ನು ? ಲೇ ಪದ್ದೀ ಘಟಿಂಗೀ, ಸುಳ್ಳು ಕೋರೀ, —

ಸು. ಲ.: ಹೊಡೆಯಬೇಡೀಂದ್ರೇ. ಮಕ್ಕಳನ್ನು ಹೀಗೆ ಶಿಕ್ಷಿಸಿದರೆ ಸ್ವಭಾವ ಮೊಂಡು ಬಿದ್ದು ಹೋಗತ್ತೆ ಅಂತ —

ಬಿಂದು : ಯಾವೋನೋ ಹುಚ್ಚು ಮುಂ...ಗಂಡ ಹೇಳಿದ್ದಾನು. ಅವನ ಮಾತನ್ನು ಕೇಳಿಕೊಂಡು ನೀನು ಬೇಕಾದರೆ ಮುದ್ದಿ ಡುತ್ತಲೇ ಪಾಠ ಕಲಿಸು. ನಿನ್ನ ಕಷ್ಟ ಮುದ್ದು ಕುವರಿಗೆ .... ಲೇ ಸುಮ್ಮನೆ ಹೋಗಿ ಮುಸುರೆ ತಿಕ್ಕೇ ... ಉಪದೇಶ ಕೊಡೊಕ್ಕೆ ಬಂದುಬಿಟ್ಟಳು. ನಿಮ್ಮ ಅಪ್ಪ ನಿನಗೆ S. S. L. C. ಕಲಿಸಿದ್ದು ನಸ್ಸೆ L. I. F. E.ಗೆ – ಪ್ರಾಣಕ್ಕೆ ಬಂದಿದೆ. ಇಲ್ಲಿ ಕೇಳೇ , ನಿನ್ನ ಪಶ್ಚಿಮದೇಶದ ಕೆಂಪು ಮುಖದ ಪ್ರಯೋಗ ನಮ್ಮ ಯೋಗದೇಶಕ್ಕೆ ಬೇಕಿಲ್ಲವೇ. ಸೂರ್ಯ ಪೂರ್ವದಲ್ಲಿ ಹುಟ್ಟೊಕ್ಕೆ ಪ್ರಾರಂಭಿಸಿದ ಕಾಲದಿಂದಲೂ ನಡೆದುಕೊಂಡು ಬಂದಿದೆಯೇ(ಬೆತ್ತವನ್ನು ತೋರುತ್ತಾ) ಇದು. ದಂಡಂ ದಶಗುಣಂ ಭವೇತ್. ಬೆತ್ತ ಬೆತ್ತ ಬೆತ್ತ. ಛಟ್ ಫಟ್, ಫ್ರೈಡ್. ಬಂತು ಪಾಠ. ಕೈ ಹಿಡಿ, ಪದ್ದೂ ಎಡಗೈಯೋ ಬಲಗೈಯೋ ಕದ್ದಿದ್ದು ?

ಪದ್ದು : (ಅಳುತ್ತ) ಇಲ್ಲಪ್ಪ, ನಾನು ಖಂಡಿತ ಕದಿಯಲಿಲ್ಲ.

ಬಿಂದು : ಬಂಗಾರಿ ಬಂಗಾರಿ ನೋಡಿದೆಯೇನೆ ? (ಚಿತ್ರವನ್ನು ಗೋಡೆಗೆ ಒರಗಿಸಿ ಮಗಳ ಕಡೆ ಬಂದು ಕೂತು) ಹಿಡಿ ... ಇನ್ನೊಂದಿಷ್ಟು ನೀರು ಕುಡಿ. (ಕುಡಿಸಿ) ಹಾಗೇ ಲೇ, ಒಳಗೆ ಆ ದೇವರಿಗೆ ಹಾಕಿರುವ ಒಂದು ಶಾಮಂತಿಗೆ ಹೂವಿನ ಹಾರ ತಂದು ಹಾಕೇ ಆ ಚಿತ್ರಕ್ಕೆ. ಪದ್ದು, ಈಗ ನೀನು ನನ್ನ ಮಗಳು. (ತೊಡೆಯ ಮೇಲೆ ಕೂಡಿಸಿಕೊಂಡು) ಚಿನ್ನಾರಿ ನೀನು. (ಕೂದಲು ನೇವರಿಸಿ) ಹೀಗೆ ನಿಜ ಹೇಳ-ಬೇಕಮ್ಮ. ಇನ್ನು ಮೇಲೆ ಕದಿಯೊಲ್ಲ ತಾನೆ ?

ಪದ್ದು : ಇಲ್ಲ.

ಬಿಂದು : ಸುಳ್ಳು ಹೇಳೊಲ್ಲ ತಾನೇ ?

ಪದ್ದು : ಉಹು.

ಬಿಂದು : ಹಟ ಮಾಡೊಲ್ಲ ತಾನೇ ?

ಪದ್ದು : ಉಹು.

ಬಿಂದು : (ಹಣೆಗೆ ಕೆನ್ನೆಗೆ ಮುದ್ದಿಟ್ಟು) ಬಂಗಾರಿ. ಚಿಂಗಾರಿ. ಈ ಟೇಪು ಮುಂ .... ಮೋಚಿತು. ಸಾಯಂಕಾಲ ಅಂಗಡಿಯಿಂದ ಒಂದು First Class ಸಿಲ್ಕು ಲಂಗ ಕುಪಸ ತಂದು ಕೊಡುತ್ತೇನೆ. ಹಾಕಿಕೊಳ್ಳುವೆಯಂತೆ. ತ್ಸುತ್ಸುತ್ಸು ... ಎಲ್ಲಿ ? ಬಾಸುಂಡೆ ! ಓಹೊಹೊಹೊಹೊಹೋ ... ನೋಡಿದೆಯಾ ಹ್ಯಾಗೆ ಏಟು ಬಿದ್ದು ಬಿಟ್ಟಿದೆ ? (ಊದುತ್ತಾ) ಊಫ್ ... ಊಫ್ . . ತ್ಸುತ್ಸುತ್ಸು ... ನೋಯುತ್ತಾ, ಪದ್ದೂ ?

ಪದ್ದು : ... ಉಂ.

ಬಿಂದು : (ಅಸಮಾಧಾನ) ಆ ?

ಪದ್ದು : ... ನೊಯ್ಯೊಲ್ಲ ಅಂದರೆ ಸುಳ್ಳು ಹೇಳುತ್ತಿ ಅಂತ ... ತಿರುಗೀ ಹೊಡೆಯುತ್ತೀರಿ (ಚಿತ್ರವನ್ನು ನೋಡುವಳು)

ಸು.ಲ. : ಅವಳನ್ನು ಬಿಟ್ಟು ಎದ್ದು ಬನ್ನಿ ಈಚೆಗೆ (ಬಂದ ಬಿಂದೂಗೆ) ಸಾಕು ಮಂಗಳಾರತಿ. ನೀವು ಹೊಡೆಯುವುದೂ ಸಾಕು. ಮುದ್ದು ಮಾಡುವುದೂ ಸಾಕು. ಯಾವೋನೋ ಹೆಂಡತಿಯ ಕುತ್ತಿಗೆ ಕಿವಿಚಿ, ಪ್ರೀತೀಗೆ ಅಂತ ಗಂಧದ ಮರದಲ್ಲಿ ಸುಟ್ಟನಂತೆ. ಅವನಿಗೂ ನಿಮಗೂ...

ಬಿಂದು : ಅಲ್ಲವೇ, ಚೋಟುದ್ದದ ಹುಡಿಗಿ, ಎಂಥಾ ಆರತಿ ಚೆಲ್ಲಿಬಿಟ್ಟಳೇ ಮೂತೀಗೆ ! ಸುಬ್ಬೀ, ನಿನ್ನದು ಊಟ ಆದ ಮೇಲೆ, ಮೈಲಿಗೆ ಮುಟ್ಟಿಕೊಳ್ಳುತ್ತೀ-ಯಲ್ಲ, ಸ್ವಲ್ಪ ಕೊಬ್ಬರಿ ಎಣ್ಣೆ ಹಚ್ಚು.

ಸು.ಲ. : (ಚಿತ್ರವನ್ನು ನೋಡುತ್ತಾ) ಚಿತ್ರಕ್ಕೆ ತಾನೇ ?

ಬಿಂದು : ಲೇ !

ಸು.ಲ. : ಮತ್ತೆ ಅಷ್ಟಲ್ಲದೆ ? ನೀವು ಮನುಷ್ಯರಾಗಿದ್ದರೆ ಸರಿ. ಸಾಕು

ನಡೆಯಿರಿ. ಬೆಳಗಾಗೆದ್ದು ಮಾಡಿದರಲ್ಲ. ಅಶ್ವಮೇಧಯಾಗ ! ನಿಮ್ಮ ತರ್ಕಾ-ರೀನೂ ಬೇಡ, ಒಲಕಾಡೂ ಬೇಡ. ಪೀಡೆ ಕಳೆಯಿತು.

**ಬಿಂದು :** ಪೀಡೆ ? ಎಲ್ಲಿ ಕಳೆಯಿತೇ ? ಯಾರೇ ಕಳೆದವರು ? ಅಲ್ಲವೇ, ಅವಳು ಆ ಒಂಮ ಜಿಕನಾಸಿ ಎಂಟಾಣೆಯ ತುಂಡು ಕದ್ದಳು ಅಂತ ಗೊಜ್ಜುಗೊಡ-ಸಾರು ತಿನ್ನುವ ಗತಿಗೆ ಬಂದುಬಿಡಿತು ಅನ್ನುತ್ತೀಯೇನೇ ಬಿಂದೂಡಾಯನ ಬಾಳು ? ಇಲ್ಲಿ ನೋಡೇ (ಜೇಬಿನಿಂದ ನೋಟಿನ ಕಂತೆ ಎಳೆದು ತೋರುತ್ತ) ನೋಡಿದೆಯೇನೇ ಎಷ್ಟು ನೋಟುಗಳಿವೆ? ಆ ಮಾರ್ಕೆಟ್ಟು ಮಾರ್ಕೆಟ್ಟನ್ನೇ – ಯಾಕೆ ? ಮಲ್ಲೇಶ್ವರ ಮಲ್ಲೇಶ್ವರವನ್ನೇ ಕೊಂಡು ಕೊಂಡುಬಿಡಬಹುದಲ್ಲೇ ! ಪೀಡೆ ಅಂತೆ. ಕಳೆಯು-ವುದಂತೆ! ಒಂದು ಗೂಡೆ. ಏನು ? ಬೆಂಡೆಯ ಕಾಯಿ. ಪದ್ದೂಗೆ ಇಷ್ಟವಾದದ್ದು. ಪ್ರಿಯವಾದದ್ದು. ಪ್ರಾಣವಾದದ್ದು. ಅದನ್ನು ತಂದು, ಪಲ್ಯ ಮಾಡಿ – ಹ್ಯಾಗೆ ಒಳ್ಳೆ ಪುಡಿ ಕುಟ್ಟಿ ಹಾಕಿ – ಹ್ಯಾಗಿರಬೇಕು ? ಆಫೀಸು ನೆಗೆದು ಬಿದ್ದುಹೋಗಬೇಕು ರಜಾ ಚೀಟಿಯಲ್ಲಿ! ನಾವು ಹಾಗೆ ತಿನ್ನಬೇಕು. ಪದ್ದೂಗೆ, ಪ್ರಾಯಶ್ಚಿತ. ಪಂಗನಾಮ. ಗಾಂಧಿಯ ತಾತನ ಆಣೆಗೂ ಅಂದದ್ದಕ್ಕೆ ಉಪವಾಸ ಪಲ್ಯಕ್ಕೆ. ಏನೇ ಪದ್ದು, ನಿನ್ನ ಪಲ್ಯ, ನಮ್ಮ ಊಟ.

**ಸು. ಲ. :** ನೀವು ಆಚೆಗೆ ನಡೆಯುತ್ತೀರೋ ಇಲ್ಲವೋ ?

**ಬಿಂದು :** ನೀನು ಹೊರಡೇ ಮೊದಲು. ಮುದ್ದು ಮಾಡಿ ಅವಳನ್ನ ಕುಲ-ಗೆಡಿಸಿ ಬಿಡುತ್ತಿದ್ದಿ.

**ಸು. ಲ. :** ನೀವು ಪದ್ದು ಉದ್ಧಾರಮಾಡಿದಿರಲ್ಲ ಸಾಕು, ನಡೆಯಿರಿ.

**ಬಿಂದು :** ಲೇ, S. S L. C. ಮಕ್ಕಳ ಎದುರಿಗೆ ಹೀಗೆ ಎದುರು ವಾದಿಸ ಬೇಡವೇ. ಮುಂದೆ ಹಾಳಾಗಿಹೋಗುತ್ತಾರೆ. ನಡಿ.

ತೆರೆ

## [ದೃಶ್ಯ : ೨]

[ಸ್ಕೂಲು ಮುಂದಿನ ಮೈದಾನ. ಜವಾನ ವಿರಾಮದ ಗಂಟೆ ಬಾರಿಸುವನು. ಹುಡುಗರು "ಹೋ" ಎಂದು ಕೂಗುತ್ತಾ ಬುಗುರಿ, ಚಿನ್ನಿ-ದಾಂಡು, ಚೆಂಡು ಹಿಡಿದು ಓಡಿಬರುವರು.]

**ತಿಮ್ಮ :** (ಬುಗುರಿ ಆಡಿಸುತ್ತ) ತೆಲ್ಲಾರೀನೋ ಟಿಗರೀನೋ.

**ಹನುಮ :** (ಬುಗುರಿ ಆಡಿಸುತ್ತ) ತೆಲ್ಲಾರಿ ತೆಲ್ಲಾರಿ.

**ಚೋರ :** ತೆಲ್ಲಾರಿ ಬೇಡ್ರೋ.

**ಹನುಮ :** ಯಾಕೋ? ಕೊಬ್ಬರಿ ಪಪ್ಪಲ್ ಎಗುರಿಸಿಬಿಡುತ್ತೇವೆ ಅಂತ —

**ಚೋರ :** ಹೌದು ಕಣೋ. ನಿಮ್ಮ ಅಪ್ಪ ಸಾಹುಕಾರರು. ಮೋಟಾರಿಟ್ಟ,

ದ್ದಾರೆ. ಹುಣಸೆಯ ಬುಗುರಿ ತೆಗೆದುಕೊಟ್ಟಿದ್ದಾರೆ. ನಮ್ಮ ತಾಯಿ ಎಂಟು ಮನೆ ಮುಸುರೆ ತಿಕ್ಕಿದರೂ ಎಕ್ಸರ್‌ಸೈಸ್ ಪುಸ್ತಕಕ್ಕೇ ಸಾಕಾಗುವುದಿಲ್ಲ.

ನಂಜ : (ಚಿನ್ನಿ ಹಾರಿಸುತ್ತ) ಸಿದ್ದ, ಸ್ಕ್ಕೋರು ?

ಸಿದ್ದ : ಎರಡು ಬ್ಯಾಂಕ್, ಸಲವತ್ತು.

ನಂಜ : ಊಫಿ ಊಫಿ ಅರವತ್ತಾಗಿತ್ತು.

ಸಿದ್ದ : ಹ್ಯಾಗೋ ಅರವತ್ತು ? ಇಪ್ಪತ್ತಕ್ಕೆ ಇಪ್ಪತ್ತು ಸೇರಿಸಿದರೆ ಎಷ್ಟೋ ? ಅದಕ್ಕೇ ನಿನಗೆ ಯಾವಾಗಲೂ ಲೆಖ್ಖದಲ್ಲಿ ನೂರಕ್ಕೆ ಮೂರರ ಮೇಲೆ —

ನಂಜ : ಓ. ಬಿಡು ಬಿಡೋ. ನನಗೆ ಆ ಲೆಖ್ಖ ಬರೊಲ್ಲವೇ ಹೊರತು, ಚಿನ್ನಿ ಕೋಲು ಲೆಖ್ಖ —

ಸಿದ್ದ : ಸುಮ್ಮನಿರೋ ಲೇ. ಕೂಡುವ ಲೆಖ್ಖ ಕ್ಲಾಸಿನಲ್ಲೂ ಒಂದೇ ಮೈದಾನದಲ್ಲೂ ಒಂದೇ.

ವೆಂಕಟ : ಹೋಗಲಿ. ಆ ಆಟವೇ ಬೇಡ. ಗಂಜೀಪೀಸ್ ಆಡೋಣ.

ನಿಂಗ : ಉಹುಹು ನನಗೆ ಬೇಡಪ್ಪ. ಮನೆಯಲ್ಲಿ ಇಲ್ಲದ ಗಂಜಿಯನ್ನು ಇಲ್ಲಿ ಕುಡಿಸೋಣ ಅನ್ನುತ್ತೀಯೇನೋ.

ಶ್ರೀಧರ : (ಗೋಲಿ ಹಾರಿಸುತ್ತಾ) ಊಂ ... ದೋಕು ಬ್ಯಾಮ್ಮ ಆನಂದು.

ಆನಂದು : (ದೋಕುತ್ತಾ) ಅಮ್ಮ ಯಾಕೋ ? (ಮುಂದೆ ಮೀಸೆ ಬೆಳೆಯುವ ಸ್ಥಳದಲ್ಲಿ ಕೈ ಹಾಕಿ) ನಾನು ಅಪ್ಪ ಆಗುವವನು ಕಾಣೋ ಲೇಯ್ ! ದೋಕೊಕ್ಕೆ ಹೆದರುತ್ತೇನೇನೋ ? ಬಾರೋ. ನೋಡು ಬಾರೋ.

["ತೆರೆಯಲ್ಲಿ : "ಐಸ್ ಕ್ಯಾಂಡಿ ಐಸ್ ಕ್ಯಾಂಡಿ"]

[ಎಲ್ಲರೂ : ಐಸ್ ಕ್ಯಾಂಡಿ .... ಬಾರೋ ಬಾರೋ]

[ಶ್ಯಾಮು, ರಂಗು, ಕಂಠಿ ಮತ್ತು ಸೋಮು ಪ್ರವೇಶ]

ರಂಗು : ನೋಡೋ, ಆ ಐಸ್‌ಕ್ಯಾಂಡಿನೋನೂ ಬಂದುಬಿಟ್ಟ.

ಸೋಮು : ಅಲ್ಲಿ ನೋಡೋ, ಕಡಲೆಕಾಯಿ ಮುದುಕಿ.

ಕಂ : ಆ ಸೀಬೆ-ಹಣ್ಣಿನವನಿಗೆ ಏನು ಬಂತೋ ಕಾಲರಾ ?

ಚಂದಿ : ಶಾಮೂ, ನಿಮ್ಮ ಅಪ್ಪ ಎಂಟಾಣೆ ಕೊಟ್ಟರೇನೋ ?

ಶಾಮು : ಇಲ್ಲ ಕಣೋ. ನನಗೆ ಕೇಳೊಕ್ಕೇ ಆಗಲಿಲ್ಲ. ಬೆಳಿಗ್ಗೆ ನಾನು ಹೊರಡುವ ಹೊತ್ತಿಗೆ ನಮ್ಮ ತಾಯಿ ಹೂವಿಗೆ ಜಗಳ ಹತ್ತಿಸಿಬಿಟ್ಟರು. ಆಮೇಲೆ ನಮ್ಮ ತಂದೆ ದೇವರಪೂಜೆಗೆ ಕೂತುಬಿಟ್ಟರು.

ಕಂಠಿ : ಹಾಗಾದರೆ ನೀನು ಬರೀ ಕೈಲಿ ಬಂದು ನಮಗೆ ಚಕ್ಕರ್ ಹಾಕಿಬಿಟ್ಟೆ ಅನ್ನು ?

**ಶಾಮು :** ಇಲ್ಲಪ್ರೋ. ಕೊಟ್ಟ ಮಾತಿಗೆ ನಾನು ತಪ್ಪುತ್ತೇನೇನೋ? ಇಲ್ಲಿ ನೋಡು. (ಜೇಬಿನಿಂದ ಎಂಟಾಣೆಯ ಬಿಲ್ಲೆ ತೆಗೆದು ತೋರುವನು.) ಕಂಠೀ, ನೀನು ಹೇಳಿದ ಹಾಗೇ (ಕದ್ದು ತಂದೆ ಎಂಬಂತೆ ಸಂಜ್ಞೆ ಮಾಡುವನು.)

**ಕಂಠಿ :** ಆ? ಭಲೆ! ಎಗರಿಸಿಗೊಂಡು ಬಂದುಬಿಟ್ಟೆಯಾ? ಭೇಷ್ ಅ–ದ್ದು ಕಾಣೋ, ಹಾ—ಗಿರಬೇಕು.

**ಸೋಮು :** ಕದ್ದುಕೊಂಡು ತಂದೆಯೇನೋ?

**ಕಂಠಿ :** ನಿನಗೆ ಯಾಕೋ ಅದೆಲ್ಲಾ? ಏನೋ ಮಾಡಿಕೊಂಡು ತಂದ. ಸೀಬೆಯ ಹಣ್ಣು ಕೊಡುತ್ತಾನೆ. ಲಗಾಯಿಸು.

**ಸೋಮು :** ಸುಮ್ಮನಿರೋ ಲೇ. ಕೋತಿ ತಾನು ಕೆಡುವುದಲ್ಲದೆ ಊರಿನ ತೋಟವನ್ನೆಲ್ಲಾ ಕೆಡಸಿತಂತೆ. ನೀನು ಕಳ್ಳ ಅಂತ ಅನ್ನಿಸಿಕೊಂಡಿರುವುದು ಸಾಲದೆ.

**ಕಂಠಿ :** ಹೌದೋ. ನಾನು ಕಳ್ಳನೋ. ನಾನು ಕದಿಯುತ್ತೇನೋ. ಎಲ್ಲರಿಗೂ "ಕದೀರಿ" ಅಂತ ಹೇಳಿಕೊಡುತ್ತೇನೆಯೋ. ನಿನಗೂ ಹೇಳಿ ಕೊಡುತ್ತೇನೋ. ದಂ ಇದ್ದರೆ ನಾಳೆ ನೀನೂ ಕದ್ದುಕೊಂಡು ಬಾರೋ. ಹೋಟಲ್ಲಿಗೆ ಹೋಗಿ ಮಸಾಲೆ ದೋಸೆ ಹೊಡೆಯೋಣ.

**ಸೋಮು :** ಸಾಕೋ ಸಾಕೋ, ನಿಲ್ಲಿಸೋ. ಶಾಮೂ, ನೀನು ಮಾಡಿದು ರೈಟಲ್ಲ ಕಣೋ. ನಿಮ್ಮ ಅಪ್ಪ ನಿನಗೆ ಅಷ್ಟು ನೀತಿ ಹೇಳುತ್ತಿರುತ್ತಾರೆ ಅಂತೀ. ನೀನು ಹೀಗೆ —

**ರಂಗು :** ಗೊತ್ತಾಗಿ ಹೋದರೆ ಏನು ಮಾಡುತ್ತಿಯೋ?

**ಶಾಮು :** ಅವರಿಗೆ ಗೊತ್ತಾಗೋದೇ ಇಲ್ಲ. ಗೊತ್ತಾದರೂ ನನ್ನನು ಬಯ್ಯೊಲ್ಲ ಕಣೋ. ನಾನು ಅಂದರೆ ಅವರಿಗೆ ತುಂಬ ಪ್ರೀತಿ. ನಾನು ಕದ್ದೆ ಅಂತ ಹೇಳಿದರೂ ಅವರು ನಂಬುವುದೇ ಇಲ್ಲವೋ.

**ಸೋಮು :** ತ್ಸು ತ್ಸು ತ್ಸು .... ಹಾಗಿರುವಾಗ, ಇಷ್ಟು ನಂಬಿಕೆ, ಪ್ರೀತಿ, ಇಟ್ಟಿರುವವರಿಗೆ ಮೋಸ ಮಾಡಬಾರದೋ. ಮಹಾ ಪಾಪ. ಛಿ ಛಿ ಛಿ, ನೀನು ಹೀಗಾಗುತ್ತಿ ಅಂತ —

**ಕಂಠಿ :** ಬಿಡ್ ಬಿಡೋ, ಏನೋ ಮಹಾ ಆಗಿ ಹೋಗಿರೋದು!

[ನೇಪಥ್ಯದಲ್ಲಿ ಸೀಬೆ-ಹಣ್ಣಿನವನ ಕೂಗು]

ಬಂದ ಕಣೋ, ಬಂದ. ಬೇಗ ಬಾರೋ ಬೆಲ್ ಹೊಡೆದುಬಿಡುತ್ತಾನೆ.

[ಸೀಬೆ-ಹಣ್ಣಿನ ಸಾಹೇಬು ಪ್ರವೇಶಿಸುವನು. ಎಲ್ಲರೂ ಮುತ್ತುವರು]

**ಸಿ. ಮಾ. :** ಆಣೆಗೆ ಒಂದು
ಸೀಬೇ ಹಣ್ಣು
ರಾಜಾ ಹಣ್ಣು ರಾಣೀ ಹಣ್ಣು
ಬಾ ರಾಜ ಬಾ ರಾಣಿ
ತೆಗೆ ಆಣಿ ಒಂದೇ ಆಣಿ
ರಾಜ ರಾಣಿ ಒಂದೇ ಆಣಿ.

ದೂರ ದೂರ. ನುಗ್ಗಬೇಡಿ. ಒಬ್ಬೊಬ್ಬರಾಗಿ ಆಣಿ ಕೊಟ್ಟು ಹಣ್ಣು ತಕ್ಕೊಳ್ಳಿ. (ಕೊಡುತ್ತಾ)
ಸೇಬಿನ ಹಣ್ಣು ಸಾವ್ಕಾರ್ರ ಹಣ್ಣು, ಯಾಕೆ ಬೇಕು?
ಸೀಬೇ ಹಣ್ಣು ಗರೀಬ್ರ ಹಣ್ಣು, ಸಾಕು ಸಾಕು.
ಚಾಕು ಬಿಚ್ಚಿ ಹೋಳು ಹೆಚ್ಚಿ
ಕಾರ ಉಪ್ಪು ಒಳಗಡೆ ಹಚ್ಚಿ
ಬಾಯೊಳು ಕಚ್ಚಿ. — ವಹ್ವಾ —
ಭಲಾರೆ ಭಲ್, ಭಲಾರೆ ಭಲ್
ಸಕ್ಕರೆ ಮಾಲು ಮಿಠಾಯಿ ಮಾಲು
ಬೇಗ ಬನ್ನಿ ಆಣೆ ತನ್ನಿ
ರಾಜಾ ರಾಣೀ ಜಲ್ದಿ ತಿನ್ನಿ ... ಎಷ್ಟ್ರೋ ?

**ಶಾಮು :** (ಎಂಟಾಣೆ ಕೊಡುತ್ತಾ) ಅಷ್ಟಕ್ಕೂ.

**ಸೀ. ಮಾ. :** ಭಲಾರೆ ಭಲ್.
ಎಂಟಾಣೆ ರಾಜ ಎಂಟಾಣೆ ರಾಣಿ (ಇನ್ನೊಬ್ಬ ಒಂದು ಆಣಿ ನೀಡಲು) ಏ ತಡಿಯೋ. ಯಾಕೆ ನುಗ್ಗುತ್ತೀಯಾ ? ಎಂಟಾಣೆಯ ರಾಜ ಇದಾನಿಲ್ಲಿ, ಒಂದಾಣೆ ತೋರಿಸುತ್ತೀಯಾ ? ತಡಿ ... ತೊಗೋ ರಾಜ ಎಂಟಣ್ಣು ... ಉಂ ... ಈಗ ಬಾ, ನನ್ನ ಯುವರಾಜಾ, ತೆಗಿ ಒಂದಾಣೆ.

[ಹಣ್ಣು ಮಾರುವನು. ಕೊಳ್ಳುವರು]

**ಕಂಠಿ :** ಲೋ, ಶಾಮೂ, ಆ ದೊಡ್ಡ ಹಣ್ಣು ನನಗೆ ಕಣೋ. ನಾನೇ ತಾನೇ ನಿನಗೆ ದುಡ್ಡು ತೊಗೊಂಡು ಬಾ ಅಂತ ಹೇಳಿಕೊಟ್ಟಿದ್ದು ?

**ಶಾಮು :** ಉಹುಹು ಇದು ಯಾರಿಗೂ ಇಲ್ಲ. (ಜೇಬಿಗೆ ಸೇರಿಸಲು)

**ರಂಗು :** ಆಮೇಲೆ ಒಬ್ಬನೇ ತಿನ್ನುತ್ತೀಯಾ ? ಹಿಂದಿನ ಬೆಂಚಿನಲ್ಲಿ ಕೂತು ?

**ಚಂದಿ :** ಹೊಟ್ಟೆಯ ನೋವು ಬರುತ್ತೆ ನೋಡು.

**ಶಾಮು :** ಇದು ನನಗಲ್ರೋ. ನನ್ನ ತಂಗೀಗೆ. ಅವಳಿಗೆ ಕೊಡದೆ ತಿಂದರೆ ನನಗೆ ಸಮಾಧಾನ ಇರುವದಿಲ್ಲ. ಅದಕ್ಕೆ ಇಗೋ, ಈ ಬಾಕಿಯದಷ್ಟು ನಾವು ತೊಗೊಳ್ಳೋಣ.

ರಂಗು : ಆಗಲಿ. ಆಗಲಿ. ಅಲ್ಲಿ ಮರದ ಕೆಳಗೆ ಕೂತುಕೊಂಡು ತಿನ್ನೋಣ. (ಹಂಚಿಕೊಳ್ಳುವರು)

ಸೋಮು : (ತನ್ನ ಸರದಿ ಬರಲು, ಶಾಮೂಗೆ) ನನಗೆ ಬೇಡವೋ ಈ ಹಣ್ಣು. ಶಾಮು, ಇವತ್ತಿಗೆ ಆಗಿದ್ದು ಆಗಿಹೋಯಿತು. ಮನೆಗೆ ಹೋಗಿ ನಿಮ್ಮ ತಂದೆಯ ಮುಂದೆ ಹೇಳಿಕೊಂಡು ಕ್ಷಮಾಪಣೆ ಕೇಳಿಕೊ. ನಾಳೆಯಿಂದ ಕದಿಯಬೇಡ, ಅವನ ಮಾತು ಕೇಳಿಕೊಂಡು. ನಾನು ನಲ್ಲಿಯಲ್ಲಿ ಬರಿಯ ನೀರು ಕುಡಿದು ಬರುತ್ತೇನೆ. (ಹೋಗುವನು)

ಕಂಠಿ : ಹೋಗ್ಗೋಲೇ. ಹೋಗೋ. Black-sheep. ಕರೀ ಕುರೀ. ಹೆಣ್ಣಾ ಪುಸಕೀ. ಕೈಲಾಗದವನೇ !

ರಂಗು : ಮೆಲ್ಲಗೋ ಲೋ ಕಂಠೀ. ನೀನು ಸಾಯುವ ಹಾಗಿದ್ದಿ. ಅವನು ಸ್ಕೌಂಡ್ರಲ್. ಒಂದು ಒಂದು ಬಿಟ್ಟ ಅಂದರೆ ನಿನ್ನ ಮೂಳೆಯ ಪುಡಿ ಕೂಡ ಸಿಗುವುದಿಲ್ಲ.

ಕಂಠಿ : (ನಗುತ್ತಾ) ಅವಕ್ಕೇನ್ರೋ ನಿಮ್ಮ ತಲೆಯಲ್ಲಿ ಮೂಳೆ ಇಲ್ಲ, ಅನ್ನ-ವೃಮು. ಅವನು "ಒಂದು ಒಂದು ಬಿಡುವವ" ನಲ್ಲವೋ. ಒಂದು ಕೆನ್ನೆಗೆ ಹೊಡೆದರೆ ಇನ್ನೊಂದು ಕನ್ನೆಯನ್ನು ತೋರಿಸುವ ಮಹಾತ್ಮ ಗಾಂಧಿ ಕಣೋ. ನನಗೇನೂ ಹೆದರಿಕೆ ಇಲ್ಲ. ಲೋ, ಶಾಮೂ, ಎಲ್ಲಿ ಅವನ ಹಣ್ಣೂ ನನಗೇ ಕೊಟ್ಟುಬಿಡೋ. (ಕಿತ್ತುಕೊಳ್ಳುತ್ತಿರಲು).

[ ದೃಶ್ಯ ೩ ]

[ ೧ ನೆಯ ದೃಶ್ಯದ್ದೇ. ಪದ್ದು ಹಾಸಿಗೆಯ ಮೇಲೆ ಒರಗಿ ನಿದ್ದೆ ಬದ್ದಿದ್ದಾಳೆ. ಊಟದ ಮನೆಯಲ್ಲಿನ ಮಾತುಕಥೆ ಕೇಳುತ್ತವೆ.]

ಸು.ಲ. : ಸಾಕು ಅಂದ್ರೇ. ಇದೇನು ಪಲ್ಯ ಹೀಗೆ ಬುಕ್ಕುತ್ತಿದೀರಿ ?

ಬಿಂದು : ಹ್ಯಾಗೆ ಬುಕ್ಕುತ್ತಿದೇನೇ ? ಕೈಯಲ್ಲಿ ತೊಗೊಂಡು ಬಾಯಿನಲ್ಲಿ ಬುಕ್ಕುತ್ತಿದ್ದೇನೆ. ನೀನು ರಟ್ಟೆ ಮುರಿಯ ಮಾಡಿದ್ದಿ ; ನಾನು ಹೊಟ್ಟೆ ಬಿರಿಯಾ ಬುಕ್ಕಬೇಡವೇನೆ ?

ಸು.ಲ. : ಅಲ್ಲ ಅಂದ್ರೇ —

ಬಿಂದು : ಏನು ಅಲ್ಲ ಅಂದ್ರೇ ? ಮಾಡಿರುವುದನ್ನು ಪಾತ್ರೆಯಲ್ಲಿಟ್ಟು ಪೂಜೆ ಮಾಡುತ್ತೀಯೇನೇ ? ಇಷ್ಟೊಂದಿದೆ. ಶಾಮೂಗೆ ಹುರಳಿಕಾಯಿ ಪ್ರಿಯ. ಅವನು ತಿನ್ನೊಲ್ಲ. ಪದ್ದೂಗೆ ಪ್ರಾಣ. ಆದರೆ ಪ್ರಾಯಶ್ಚಿತ್ತ. ನಮ್ಮಿಬ್ಬರಿಗೇ ಅಲ್ಲವೇನೇ ಇದು? ಎಷ್ಟಿದೆ ಡಬರಿಲ್ಲಿ ! ನೀನು ಆನೆಹೊಟ್ಟೆಯವಳಲ್ಲ. ಸಿಂಹದ ನಡುವಿನವಳು. ಲೇ, ಕಣಿವೆ ಕೆಳಗಿನವಳೇ, ಕಾರ್ಪಣ್ಯ ಮಾಡದೆ, ಕೈಬಿಚ್ಚಿ ಬಡಿಸೇ, ಪುಣ್ಯ ಬರುತ್ತೆ.

ಸು.ಲ. : ಅಯ್ಯೋ ಇದನ್ನು ನನಗೆ ಅಂತ ಇಟ್ಟುಕೊಂಡಿದೇನೆ ಅಂತ ಇದ್ದೀ. ರೇನು ? ನಾನು ಒಂದು ಹೋಳು ಬಾಯಿಗೆ ಇಟ್ಟುಕೊಂಡರೆ ಕೇಳಿ. ಅಲ್ಲ, ನೀವೇ ಹೀಗೆ ತಿಂದರೆ, ಆಫೀಸಿಗೆ ಹೋಗಿ —

ಬಿಂದು : (ಪಲ್ಯ ಬಾಯಲ್ಲಿಟ್ಟು) ಲೇ ಲೇ ಲೇ, ಅಯ್ಯೋ ಅಯ್ಯೋ, ಪಲ್ಯದ ಸ್ವರ್ಗ ಅನುಭವಿಸುತ್ತಾ ಇರುವಾಗ ಆಫೀಸಿನ ನರಕದ ತೊಳಸಂಬಟ್ಟೆ ಜ್ಞಾಪಿಸುತ್ತೀಯಲ್ಲೇ ! ಲೇ ಮಾರ್ಕೆಟ್ಟಿನಿಂದಾನೇ ರಜಾ ಚೀಟಿ ಕಳುಹಿಸಿಬಿಟ್ಟಿದೇನೆಯೇ. ಧಂಡಿಯಾಗಿ ತಿಂದು, ಹಾಸಿಗೆ ಹಾಸಿಕೊಂಡು, ತೃಪ್ತಿ ಏರಿರುವ ಹೊಟ್ಟೆಯ ಮೇಲೆ ಬೆರಳುಗಳಿಂದ ಮೃದಂಗ ಬಾರಿಸುತ್ತ ಸ್ವರ್ಗಸುಖದ ಸ್ವಪ್ನಕಾಣುತ್ತೇನೆಯೇ, ನೀನು ಕಾಫಿ ತಂದು ಎಬ್ಬಿಸುವವರೆಗೂ. ಅಲ್ಲವೇ, S. S. L. C. ಹೆಂಡತಿ. ನ್ಯಾಯವಾಗಿ ನೀನೇ ರಜಾ ಚೀಟಿ ಬರೆದು ನನ್ನ ಹೆಸರು forge ಮಾಡಿ ರೊಮ್ಯಾಂಟಿಕ್ ಹೆಂಡತಿ ಅನ್ನಿಸಿಕೋಬೇಕಾದವಳು — ಆಫೀಸು ಅಂತ ... ನೀನೂ ಎಲೆ ಹಾಕಿಕೊಂಡುಬಿಡು.

ಸು. ಲ. : ಶಾಮೂ ಬರಬೇಡವೇ ? ಒಳ್ಳೆಯ ಉಪಚಾರ.

ಶಾಮು : ಪದ್ದೂ ಪದ್ದೂ (ಕೂಗುತ್ತಾ ಓಡಿಬರುವನು. ಕೈಯಲ್ಲಿ ಸೀಬೆಯ ಹಣ್ಣಿದೆ) ಪದ್ದೂ ... (ಪದ್ದೂ ಮಲಗಿರುವುದನ್ನು ನೋಡಿ) ಆಂ ?

ಪದ್ದು : (ಕನವರಿಸುತ್ತಾಳೆ) ಅಮ್ಮ, ಅಮ್ಮ, ಜರ್ತಾರಿ ಟೇಪು ಕೊಡಿಸಮ್ಮ.

ಶಾಮು : ಆ ? ಯಾಕೆ ಇಷ್ಟು ಹೊತ್ತಿನಲ್ಲಿ, ಮಲಗಿಕೊಂಡು, ಕನವರಿಸಿಕೊಳ್ಳುತ್ತಿದ್ದಾಳೆ ? (ಸಮೀಪಿಸುವನು)

ಪದ್ದು : ಜಾಣೆ ಕಣೇ ರಾಜೂ ನೀನು. ಆಮೇಲೆ ತೊಗೊಂಡುಬಿಡು ನಿನ್ನಟೇಪು.

[ಊಟದ ಮನೆಯಿಂದ]

ಬಿಂದು : ಲೇ ಲೇ ಇದೇನೇ ಇದು ?

ಸು.ಲ. : ಬೆಂಡೆಯ ಕಾಯಿ ಪಲ್ಯ. ಬಯಕೆ ಪೂರ್ತೀ ಆಗಲಿ.

ಬಿಂದು : ಮಜ್ಜಿಗೆ ಅನ್ನ ಆಗಿ ಹೋಗಿತ್ತಲ್ಲೇ !

ಸು.ಲ. : ಏನಂತೆ ಆಗಿ ಹೋಗಿದ್ದರೆ ?

ಶಾಮು : ಇದೇನಿದು ? ಅಪ್ಪ ಊಟ ಮಾಡುತ್ತಿದ್ದಾರೆ, ಪದ್ದೂನ ಬಿಟ್ಟು ?

ಪದ್ದು : .ಅಮ್ಮ ಅಮ್ಮ ಈ ಟೇಪು ನೋಡಮ್ಮ ... ಆ ? ಯಾಕಮ್ಮಾ ?... ಇಲ್ಲಪ್ಪಾ, ನಾನು ನಿಮ್ಮ ಜೇಬಿನಿಂದ ಎಂಟಾಣೆ ಕದಿಯಲಿಲ್ಲ.

ಶಾಮು : ಆ ? ಎಂಟಾಣೆ ? ನೀನು – ? (ಕಿವಿ ಕೊಡುವನು).

ಪದ್ದು : ನಾನು ಖಂಡಿತ ಕದಿಯಲಿಲ್ಲಪ್ಪಾ. ನಿನ್ನ ಎಂಟಾಣೆ ಕದ್ದು ಟೇಪು ಕೊಂಡುಕೊಳ್ಳಲಿಲ್ಲ. ಗಾಂಧಿ ತಾತನ ಆಣೆಗೂ ಕದಿಯಲಿಲ್ಲ ... ಅಪ್ಪ ಅಪ್ಪ ಹೊಡೆಯಬೇಡಿ ... ಅಯ್ಯೋ ...

ಶಾಮು : ಆಂ ? ... ಅಲೆಲೆ ... ಕೈಮೇಲೆ ಬಾಸುಂಡೆ ? ... ಏನಾಗಿ ಹೋಯಿತು ? ಪದ್ದೂ, ಪದ್ದೂ ... (ಎಬ್ಬಿಸುವನು).

ಪದ್ದು : ಆ ? ... ಶಾಮೂ ? ... ಶಾಮೂ ? ಶಾಮೂ ! (ಅಪ್ಪಿ ಅಳಲು).

ಶಾಮು : ಅಳಬೇಡ ಅಳಬೇಡ ... ಏನಾಯಿತು, ಪದ್ದು ? ಅಪ್ಪ ಹೊಡೆದರಾ?

ಪದ್ದು : ಹೂ ಕಾಣೋ. ನಾನು ಅವರ ಜೇಬಿನಿಂದ ಎಂಟಾಣೆ ಕದ್ದೆನಂತೆ.

ಶಾಮು : ಹೂಂ ... ?

ಪದ್ದು : ನಾನು ಎಷ್ಟೆಷ್ಟೋ ಹೇಳಿದೆ. ಕೇಳಲಿಲ್ಲ. ನಾವು ಎಲ್ಲಿಯಾದರೂ ಕದಿಯುತ್ತೇವೇನಣ್ಣಾ ?

ಶಾಮು : ಹು ... ಹು... ಆಮೇಲೆ ?

ಪದ್ದು : ನನ್ನ ಮಾತು ನಂಬದೆ, ಸುಳ್ಳು ಹೇಳಿದೆ ಅಂತ ಆ ಬೆತ್ತ ತೊಗೊಂಡು ಚೆನ್ನಾಗಿ ಹೊಡೆದುಬಿಟ್ಟರು. ನಿಜ ಹೇಳುವವರೆಗೂ ಬಿಡೊಲ್ಲ ಅಂದರು. ನಾನು ... ನೋವು ತಡೆಯೋಕ್ಕೆ ಆಗದೆ ... ಕದ್ದೆ ಅಂತ ಸುಳ್ಳು ಹೇಳಿಬಿಟ್ಟೆ, ಅಣ್ಣ. ಅನ್ಯಾಯ-ವಾಗಿ ಸುಳ್ಳು ಹೇಳಿಬಿಟ್ಟೆ ಅಣ್ಣ.

ಶಾಮು : ಊಂ ... ನೀನು ಸುಳ್ಳು ಹೇಳಿದ ಮೇಲೆ, ಅವರು ಹೊಡೆಯು-ವುದನ್ನು ನಿಲ್ಲಿಸಿದರಾ ?

ಪದ್ದು : ಹೂಂ. ಬೆಂಡೆಕಾಯಿ-ಪಲ್ಯ ಮಾಡಿದಾರೆ. ನನಗೆ ಪ್ರಾಯಶ್ಚಿತ್ತ ಅಂತೆ. ಹಾಕೊಲ್ಲವಂತೆ.

ಶಾಮು : ಅಳಬೇಡ ಅಳಬೇಡ, ಪದ್ದು (ಸೀಬೆ-ಹಣ್ಣು ಕೆಳಗುರುಳಿ ಬೀಳಲು)

ಪದ್ದು : ಸೀಬೆಯ ಹಣ್ಣು. ಎಲ್ಲಿತ್ತೊ ? ಯಾರು ಕೊಡಿಸಿದರೋ ? ಯಾಕಣ್ಣ ನಿನ್ನ ಕಣ್ಣು ? ... ಅಣ್ಣ ... ಅಣ್ಣ ... ಮಾತಡಣ್ಣ ... ನಾನೇನು ಮಾಡಿದೆ ಅಣ್ಣ, ನೀನೂ ಕೋಪಿಸಿಕೊಳ್ಳುತ್ತಿ ?

ಶಾಮು : ಪದ್ದು, ಪದ್ದು ... ನಾನು ಕಳ್ಳ. ನಾನು ಕಳ್ಳ.

ಪದ್ದು : ಶಾಮೂ !

ಶಾಮು : ಹೌದು ನಾನು ಕಳ್ಳ. ಅಪ್ಪನ ಜೇಬಿನಿಂದ ಎಂಟಾಣೆ ಕದ್ದವನು ನಾನು. ಕಂಠಿಯ ಮಾತು ಕೇಳಿಕೊಂಡು, ಪದ್ದು ... ಪದ್ದು ... ನನ್ನಿಂದ ನೀನು ಏಟು ತಿಂದು...

ಪದ್ದು : ಲೇ, ಸುಮ್ಮನಿರೋ, ನನಗೆಲ್ಲ ಗೊತ್ತು. ನಾನು ಕಳ್ಳಿ ಅಲ್ಲ ಅನ್ನಿಸೋಕ್ಕೆ ನೀನು ಹೀಗೆ ಹೇಳುತ್ತೀಯಾ ?

ಶಾಮು : ಇಲ್ಲ. ನಿಜ ನಿಜ ನಿಜ ... ಪದ್ದೂ ... ಸೋಮು ನನಗೆ ಅಷ್ಟು ಹೇಳಿದ. ಹಿಡಿಯಲಿಲ್ಲ. ಈಗ .... ನನ್ನ ಕಳ್ಳತನದಿಂದ .... ನೀನು ಏಟು ತಿಂದು ... ನಾನು ತಿನ್ನಬೇಕಾಗಿದ್ದ ಏಟು ತಿಂದು ... ನಿನಗೆ ಸೀಬೆ - ಹಣ್ಣು ತಂದಿ-ದ್ದೇನೆ ... ಪದ್ದು ... ನಾನಿನ್ನು ಸಾಯುವವರೆಗೂ ಕದಿಯೊಲ್ಲ. (ಹೋಗಿ ಬೆತ್ತ ತೆಗೆದುಕೊಳ್ಳಲು)

ಪದ್ದು : ಅಣ್ಣ, ಅಣ್ಣ, ಏನು ಮಾಡುತ್ತಿ ? ಮುರಿದುಬಿಡಬೇಡವೋ.

ಬೈತಾರೆ ! (ಬಿಂದೂ, ಸು.ಲ. ಪ್ರವೇಶಿಸುವರು) ಷ್ ! ಬಂದರು.

ಬಿಂದು : ಓ ... ಶಾಮು. ಯಾವಾಗ ಬಂದೆಯೋ ? (ಸುಬ್ಬುಲಕ್ಷ್ಮಿ ಕೊಟ್ಟ ವೀಳೆಯದೆಲೆ ಸ್ವೀಕರಿಸಿ ಬಾಯಿಗೆ ಸೇರಿಸಿ) ಆ ಬೆತ್ತ ... ಹೇಳಿಕೊಂಡೆಯೇನ್ರೀ?

ಶಾಮು : ಅಪ್ಪ, ಈ ಬೆತ್ತ ತೊಗೊಳ್ಳಿ ... ಅನ್ಯಾಯವಾಗಿ ಅವಳನ್ನ ಹೊಡೆದಿರಿ.

ಬಿಂದು : ಅನ್ಯಾಯವೇನೋ ? ಕದ್ದಳು. ಏಟು ತಿಂದಳು.

ಶಾಮು : ಇಲ್ಲ ಇಲ್ಲ ಇಲ್ಲಪ್ಪಾ. ಏಟು ತಿಂದಳು ಅವಳು ನಿಜ. ಆದರೆ ಕದ್ದವನು ನಾನು. ನಾನಪ್ಪ ನಿಮ್ಮ ಜೇಬಿನಿಂದ ಎಂಟಾಣೆ ಕದ್ದವನು.

ಬಿಂದು : ಶಾಮು ?

ಸು.ಲ. : ಶಾಮು ?

ಪದ್ದು : ಬೇಡ ಬೇಡ ಅಣ್ಣ ... ಯಾರು ಕದ್ದರೇನು ? ಯಾರೋ ಶಿಕ್ಷೆ ಅನುಭವಿಸಿ ಆಗಿಹೋಯಿತು. ನನ್ನನ್ನು ಅನ್ಯಾಯವಾಗಿ ಹೊಡೆದೆ ಅಂತ ಸಂಕಟಪಟ್ಟುಕೊಳ್ಳುತ್ತಾರೆ.

ಬಿಂದು : ಏನ್ರೀ, ಏನೋ ಅದು ನಿಮ್ಮ — ?

ಶಾಮು : ನಿಜ ಅಪ್ಪ. ಹಾಳು ಕಂಠೀ ಮಾತು ಕೇಳಿ ನಾನು ಸೀಬೆ-ಹಣ್ಣಿಗೆ ಅಂತ ಎಂಟಾಣೆ ಕದ್ದು ಸ್ಕೂಲಿಗೆ ಹೋಗಿದ್ದೆ.

ಬಿಂದು : ಅಯ್ಯಯ್ಯೋ ... ಏನೇ ಸುಬ್ಬಿ ?

ಸು. ಲ. : ಮತ್ತೆ ... ಪದ್ದು ... ಹಾಗಾದರೆ ನೀನು ಆ ಟೇಪು ಕೊಂಡು ಕೊಳ್ಳಲಿಲ್ಲವೇ ?

ರಾಜು : (ಓಡಿಬರುತ್ತಾ) ಪದ್ದೂ, ಪದ್ದೂ, ನನ್ನ ಟೇಪು ನನಗೆ ಕೊಟ್ಟು ಬಿಡೇ (ಪಕ್ಕದ ಮನೆಯಲ್ಲಿ ಮಂಗಳಾರತಿ-ಜಾಂಗಟೆ) ನಾನು ನಿನಗೆ ಕೊಟ್ಟಿದ್ದೇನೆ ಅಂತ ಎಷ್ಟು ಹೇಳಿದರೂ ಕೇಳದೆ, "ಸುಳ್ಳು ಹೇಳತ್ತೀ" ಅಂತ ಬೆತ್ತತೊಗೊಂಡು ನಮ್ಮ ತಂದೆ ಚೆನ್ನಾಗಿ ಹೊಡೆದುಬಿಟ್ಟರು ಕಣೇ. ನೋಡೇ ಕೈಮೇಲೆ ಬಾಸುಂಡೆ. ಈ ಟೇಪನ್ನು ತೊಗೊಂಡು ಹೋಗಿ ತೋರಿಸಿ ತಿರುಗಿ ತಂದು ಕೊಡುತ್ತೇನೆ ಕಣೇ ... ಪದ್ದೂ, ಇದೇನೇ ನಿನ್ನ ಕೈಮೇಲೂ ಬಾಸುಂಡೇ ?

[ಪಕ್ಕದ ಮನೆಯಿಂದ ಸುಬ್ಬುಲಕ್ಷಮ್ಮನ ಧ್ವನಿ]

ಪ. ಮ. ಸು. ಲ. : ಲೇ ಸುಬ್ಬುಲಕ್ಷ್ಮೀ, ಮಂಗಳಾರತಿ ಆಗುತ್ತಾ ಇದೆ. ಮಕ್ಕಳನ್ನೂ ನಿನ್ನ ಗಂಡನ್ನೂ ಕರೆದುಕೊಂಡು ಬಾರೇ. ಸತ್ಯನಾರಾಯಣನ ಪ್ರಸಾದ ತೊಗೊಂಡು ಹೋಗುವಿರಂತೆ.

ಬಿಂದು : ಮಂಗಳಾರತಿ. ಮಂಗಳಾರತಿ. ಅವನ ಮಗನ ಮಂಗಳಾರತಿಗಿಂತ ಇಲ್ಲಿ ಆಗುತ್ತಿದೆಯಲ್ಲೇ ಮಹಾಮಂಗಳಾರತಿ ! (ಬೆತ್ತ ಮುರಿದು) ಅವರನ್ನೇ ಇಲ್ಲಿ ಕರಿಯೇ, ಅವರ ಕಣ್ಣೀರಿನ ತೀರ್ಥ, ಈ ಅನಿಷ್ಟ ಪ್ರಸಾದ (ಬೆತ್ತವನ್ನು ಎಸೆಯುತ್ತಾ) ವನ್ನು ತೊಗೊಂಡು ಹೋಗಲಿ.

— ಅಂಕದ ತೆರೆ —

# ಬರಿದ ಕೈ

( ಒಂದು ಪ್ರಹಸನ )

ಪಾತ್ರಗಳು :

ರಾಜು — ಮದುವೆಗಿರುವ ಯುವಕ
ಗೋಪು — ಅವನ ತಮ್ಮ
ಅಕ್ಕ — ಇವರಿಬ್ಬರನ್ನು ಸಾಕಿದಾಕೆ
ಸರಸು — ರಾಜುವನ್ನು ಕೈಹಿಡಿವ ಕನ್ಯೆ

[ದೃಶ್ಯ ೧]

[ರಾಜು ಅನ್ಯಮನಸ್ಕನಾಗಿ, ಕೈಲೊಂದು ಪುಸ್ತಕ ಹಿಡಿದು ಕುಳಿತಿರುವನು. ಗೋಪು ಸಮೀಪದಲ್ಲಿಯೇ ಅದೇ ಮೇಜಿನ ಮುಂದೆ ಕುರ್ಚಿಯಲ್ಲಿ ಕೂತು ಗಟ್ಟಿಯಾಗಿ ಓದು-ತ್ತಿರುವನು.... ಅಕ್ಕ ಪ್ರವೇಶಿಸುವಳು.]

ಅಕ್ಕ : ರಾಜೂ ! ... ಏನಂತಿ ನಾನು ಕೇಳಿದ್ದಕ್ಕೆ ? ...

[ರಾಜೂ ತಿರುಗುವುದೇ ಇಲ್ಲ. ಗೋಪು ಮತ್ತೂ ಗಟ್ಟಿಯಾಗಿ 'ಘಜನೀಮಹಮ್ಮದನ ನಾಲ್ಕನೆ ದಂಡಯಾತ್ರೆಯಲ್ಲಿ ....' ಎಂದು ಓದುತ್ತಿರುವನು.]

ಸ್ವಲ್ಪ ನಿಲ್ಸಪ್ಪ ಗೋಪು. ಅವನು ಯಾವ್ನೋನೋ ನಾಲ್ಕನೇ ದಂಡಯಾತ್ರೆ ಮಾಡಿದರೆ ನೀನು ಆರನೇ ದಂಡಯಾತ್ರೆ ಮಾಡೋದರಲ್ಲಿದೀ ಹೈಸ್ಕೂಲ್ ಪರೀಕ್ಷೆಗೆ! ... ರಾಜೂ ? ಕೇಳಿಸ್ಲಿಲ್ವೇ ನಾನು ಮಾತಾಡ್ಸಿದ್ದು ನಿನ್ನ ?

ರಾ. : (ಎಚ್ಚತ್ತವನಂತೆ) ಅ ... ಅ ... ಏನಕ್ಕ ? ಮಾತಾಡಿದ್ಯ ?

ಅ. : ಸರಿಯಾಯ್ತು! ... ಮೂರ ಸರ್ತಿ ಆಯ್ತು ನಾನು ನಿನ್ನ ಕೂಗಿದ್ದು ! ... ನಾನು ಕೇಳುತ್ತಿರೋದು, ಏನು ಇತ್ಯರ್ಥ ಮಾಡಿದೆ ನಿನ್ನ ಮದುವೇ ವಿಷಯದಲ್ಲೀ ಅಂತ ... ಇಷ್ಟೇ, ಹೆಣ್ಣುಗಳು ಬಂದಿವೆ, ಯಾವುದನ್ನಾದರೂ ಒಪ್ಕೊಂಡು ಮಾಡಿ ಕೊಂಡು ಬಿಡು.

ರಾ. : ಅದೇ ಅಕ್ಕ ಈಗ ಬಂದಿರೋ ಸಮಸ್ಯೆ! — ಯಾವ್ದನ್ನ ಚುನಾ ಯ್ಸೋದೂ ಅಂತ. ಒಂದೊಂದು ಕ್ಯಾಂಡಿಡೇಟಿಗೂ ಒಂದಷ್ಟು ಇನ್ವಾಲಿಡ್ ಓಟು ಗಳು ಸಿಕ್ಕುತ್ವೆ !

ಅ. : ಕ್ಯಾಂಡಿಡೇಟು ! .... ಓಟು ! .... ಇದೇನು ಚುನಾವಣೆ ಕೆಟ್ಹೋ ಯ್ತೇನೋ (ನಗುವಳು)

ರಾ. : (ನಗುತ್ತ) ಅಂದರೆ, ಯಾವದನ್ನ ಆರಿಸೋದೂ ಅಂತ. ಹುಡುಗೀರು ಒಂದು ವಿಷಯದಲ್ಲಿ ಸರಿಯಾಗಿದ್ದರೆ ಮತ್ತೊಂದರಲ್ಲಿ ಊನ !

ಅ. : ಹಾಗೆ ನೋಡ್ತಾ ಹೋದರೆ ನೋಡು, ( ನಗುತ್ತ ) ನೀನು ಭೀಷ್ಮಾ ಚಾರ್ಯನಾಗೇ ಇರಬೇಕಾಗುತ್ತೆ ಜನ್ಮವೆಲ್ಲ .... ಅಥವಾ, ಅತೀ ಅತೀ ಹುಡುಕ್ತಾ ಹೋದರೆ, ಕೊನೆಗೆ ಹಳ್ಳಕ್ಕೇ ಬೀಳೋದು, ... ಕರೀ ಮುಸುಡಿನೋ ಕುದುರೇ ಮುಖೀನೋ ಕಟ್ಟಿಕೊಳ್ಳೋದು ! .. ಹೆಚ್ಚು ಕಡಿಮೆ ಸವರಿಸ್ಕೊಂಡು, ಯಾವ ದಾದರೂ ಒಂದನ್ನ ಒಪ್ಪಿಕೋಬೇಕು !

ಗೋ. : ಅಣ್ಣಾ ಅಣ್ಣಾ ! .... ನಾನು ಹೇಳಲೇನಣ್ಣ ! .... ಆ ಸಿನೀಮಾ ಡೈರೆಕ್ಟರ್ ಮಗಳನ್ನು ಮಾಡಿಕೊಂಡುಬಿಡಣ್ಣ .... ಬಿಟ್ಟೀ ಪಾಸು ಸಿಕ್ಕತ್ತೇ ಪಿಕ್ಚರ್ ಗಳಿಗೆಲ್ಲ !

ರಾ. : (ನಗುತ್ತ) ಅಷ್ಟೆ! ಆಮೇಲೆ, ಆ ಹುಡುಗೀದು, ಪ್ಲಾಸ್ಟಿಕ್ ಮೂಗೋ, ಕಟ್ಟಿಸಿದ ಹಲ್ಲೋ, ಚೌರೀ ಜಡೆಯೋ ಆಗಿರಲಿ, ಚೆನ್ನಾಗಿರುತ್ತೆ.

ಅ. : ಅಷ್ಟೇನೇ! ಹಾಕಿರೋ ಬಂಗಾರ, ವಜ್ರ, ಎಲ್ಲ ಸಿನಿಮಾ ಒಡವೆಗಳೇ! — ಗಿಲೀಟು !

ರಾ. : ಬೇಡಪ್ಪ ಬೇಡ. ನಿನಗೆ ಪುಗಸಟ್ಟೆ ಪಾಸ್ ಸಿಗದಿದ್ರೂ ಚಿಂತೆಯಿಲ್ಲ. ನನಗೆ ನಕಲಿ ಅರ್ಧಾಂಗಿ ಅಗತ್ಯವಿಲ್ಲ.

ಅ. : ಹೋಗ್ಲಿ, ನಕಲೀ ಅರ್ಧಾಂಗಿ ಬೇಡ. ನಾನು ಹೇಳಿದ್ದು ಮಾಡಿಕೊ. ಅಸಲೀ ಅರ್ಧಾಂಗಿ ಸಿಕ್ತಾಳೆ .... ಪಂಡಿತರ ಮಗಳು ಪಾರ್ವತೀನ ತಂದು ಕೊಳ್ಳೋಣ ರಾಜೂ. ಹುಡುಗಿ ಲಕ್ಷಣವಾಗಿದಾಳೆ, ಒಬ್ಬಳೇ ಮಗಳು ; ಕೊಟ್ಟು ಬಿಟ್ಟು, ಅಣಿಯಾಗಿ ಮದುವೆ ಮಾಡಿಕೊಡ್ತಾರೆ.

ಗೋ. : (ನಗುತ್ತ) ಅಣ್ಣ, ಅಣ್ಣ ! ಗೊತ್ತಾಯ್ತೇ ಅಕ್ಕನ ಉಪಾಯ! ನೀನು ಆ ಹುಡುಗೀನ ಮಾಡ್ಕೊಂಡರೆ, ತನ್ನ ಕಾಲು-ಸೇದು, ವಾಯು ನೋವುಗಳಿಗೆಲ್ಲ, ಮಾತ್ರೆಗಳ್ನ, ತೈಲಗಳ್ನ, ಬಿಡಿಕಾಸು ಬಿಚ್ಚದೆ ಬಿಟ್ಟೀ ಗಿಟ್ಟಿಸಬಹುದು ಬೀಗರಕೈಲಿ ಅಂತ !

ಅ. : ಸಾಕು ಸುಮ್ಮನಿರೋ ನಿನ್ನ ತಲೆ ಹರಟೆ !

ರಾ. : ಮಾಡ್ಕೋಬಹುದೂನ್ನು. ಆದರೆ, ಆ ಹುಡುಗೀನ ನೋಡುವಾಗ, ಕಣ್ಣಿಗೆ ಕಪ್ಪು ಕನ್ನಡಕ ಹಾಕ್ಕೊಳ್ಳಬೇಕಾಗುತ್ತೆ ಅಷ್ಟೆ. ಪಾಪ, ಊರಿಗೆಲ್ಲ ಔಷಧಿ ಕೊಡೋ ಪಂಡಿತರು, ತಮ್ಮ ಮಗಳ ಬಾಲನರೇಗೆ ಮಾತ್ರ ವೈದ್ಯ ಮಾಡಿಲ್ಲ ! ಆ ಹುಡುಗೀ ತಲೇ ನೋಡಿದರೆ ಬಿಳೀ ಕಂಬಳಿ ಜ್ಞಾಪಕ್ಕೆ ಬರುತ್ತೆ !

ಅ. : ( ಸಿಟ್ಟಿನಿಂದ ) ಬಿಡಪ್ಪ, ಒಂದೊಂದಕ್ಕೂ ಒಂದೊಂದು ತೆಗೀತಿ. ಹೇಗೆ ಆಗಬೇಕು ಹೇಳು ನಿನ್ನ ಮದುವೆ !

ಗೋ. : ನನ್ನ ಅಭಿಪ್ರಾಯ ಕೇಳಿದರೆ, ಆ ರೇಡಿಯೋ ಇಂಜನಿಯರ್ ಮನೆ ಹುಡುಗೀನ ಮಾಡ್ಕೊಳ್ಳೋದು ಸರಿ. ಯಾಕೆ ಅಂದ್ರೆ, ಅಣ್ಣ ತಂದಿಟ್ಟಿರೋ ಥರ್ಡ್ ಹ್ಯಾಂಡ್ ರೇಡಿಯೋ ತಿಂಗಳಿಗೆ ನಾಲಕ್ಕು ಸಾರಿ ಕೆಡುತ್ತಿರುತ್ತೆ; ರಿಪೇರಿಗೆ ಸರಾಗವಾಗಿ ಸಾಗಿಸಬಹುದು.

ಅ. : ಸರಿ, ಸಧ್ಯ! ಎಲ್ಲ ಬಿಟ್ಟು ಅದನ್ನ ಮಾಡ್ಕೊಂಡರೂ ಸರಿಯೇ. ಹತ್ತು ಮಕ್ಕಳಿವೆ ಅವರಿಗೆ. ಹನ್ನೊಂದನೇದು ಪೀಠಿಕೆ ಪ್ರಕರಣದಲ್ಲಿದೆಯಂತೆ. ಮದುವೇನೂ ಹತ್ತರಲ್ಲಿ ಹನ್ನೊಂದೂಂತ ಮಾಡ್ತಾರೆ, ಕಂಡೇ ಇದೆ ! .... ಅದೊಂದೂ ಬೇಡ ರಾಜು. ನಾನು ಹೇಳೋದು ಕೇಳು. ಆ .... ಅವರ್‍ಯಾರೋ ಮೊನ್ನೆ ಬಂದಿದ್ರಲ್ಲ .... ಹೇನುಹರಿರಾಯರೋ ಅವರ್‍ಯಾರೋ ....

ಗೋ. : (ನಗುತ್ತ) ಹೇನುಹರಿರಾಯರಲ್ಲಕ್ಕ ! ಹೇ. ನ. ಹರಿರಾಯರು ಅಂತ. ಅಂದರೆ, ಹೆಗ್ಗಣದ ಕೋಟೆ ನರಸಿಂಹಯ್ಯನ ಮಗ ಹರಿರಾಯ ಅಂತ !

ಅ. : ಅದೇನವಸ್ಥೆ ... ಆ ತರಹ ಹೆಸರಿಟ್ಕೊಂಡಿದಾರೆ !

ಗೋ. : ಅದು ನವನವೀನ ಮಾದರಿ ಅಕ್ಕ ... ಸ್ವಾತಂತ್ರ್ಯ ಬಂದ ಮೇಲೆ ! ಇಂಗ್ಲಿಷ್ ಅಕ್ಷರಗಳ್ನ ಹೆಸರಿಗೆ ಸೇರಿಸ್ಕೋಕೂಡದು ಅಂತ. ಮಂಚೇನಹಳ್ಳಿ ಕುಮಾರಪ್ಪನ ಮಗ ತಿಮ್ಮಯ್ಯ, ಮಂ. ಕು. ತಿಮ್ಮಯ್ಯ ಅಂತ. ಸೋಲೆಪಿಲೆ ತಮ್ಮಣ್ಣಭಟ್ಟರ ಮಗ ಸೋ. ತ. ವಿಜಯೇಂದ್ರ, .... ಹೀಗೆ ....

ಅ. : (ನಗುತ್ತ) ಹಾಗೋ ! .... ಅದೇನಾದರೂ ಆಗಲಿ, ಆ ಹರಿರಾಯರ ಮಗಳು – ಆತ ಏನೋ ಬಹಳ ಕತೆಗಿತೆ ಬರದಿದಾರಂತಲ್ಲ — ಅವರ ಹುಡುಗಿ ಗೌರಮ್ಮನ ಹಾಗಿದಾಳೆ.

ರಾ. : ಅದೇ ಅಕ್ಕ ನನಗೆ ಭಯ ! ಹುಡುಗಿಯೇನೋ ಚನ್ನಾಗಿದೆ. ಆದರೆ, ಅಪ್ಪನ ಚಾಳೀನೇ ಆದರೆ ?

ಅ. : ಅಪ್ಪನ ಚಾಳೀ !

ರಾ. : ಹುಂ .... ಕತೇ ಕವನ ಬರೆಯೋದು ! .... ನನಗೆ ಬೇಡಮ್ಮ ಬರೆಯೋ ಹುಡುಗಿ ಸಧ್ಯ ! .... ಅದೇನೋ ಈಗಿನ ಹುಡುಗೀರಿಗೆಲ್ಲ ಹಿಡಿದಿರೋ ಹಾಗಿದೆ ಆ ಹುಚ್ಚು. ಕಾಲೇಜು ಮುಗ್ಸಿ, ಕೈಹಿಡಿಯೋನು ಸಿಕ್ಕದೆ ಕೂತರು ಅಂದರೆ, ಕಾಗದದ ಮೇಲೆ ಕೊರಿಯಕ್ಕೆ ಶುರು ! ಯಾವುದರಲ್ಲಿ ನೋಡಿದರೂ ಅವರ ಬರಹಗಳೇ ! ಅಂಥಾ ಹುಡುಗೀನ ಮಾಡ್ಕೊಂಡು, 'ಕಾಫೀಗೆ ಸಕ್ರೆನೇ ಇಲ್ವಲ್ಲೆ' ಅಂದರೆ 'ಕಾಗೀ ಪುಕ್ಕದ ಮೇಲೆ ಕವನ ಬರೀತಿದ್ದೆ' ಅನ್ನಲಿ, 'ಅಡಿಗೆ ಆಯ್ತೇನೇ' ಅಂದರೆ, 'ಕೋಗಿಲೆ ಹಾಡು ಕೇಳ್ತಿದ್ದೆ' ಅಂತ ಜವಾಬು ಕೊಡಲಿ !

ಅ. : (ನಕ್ಕು) ಭಯಪಡಬೇಡಪ್ಪ. ಅದೆಲ್ಲ ಆಗಲೇ ನಾನೂ ವಿಚಾರಿಸೇ ಇದೀನಿ. ಆ ಹುಡುಗಿ ಆ ಪಾಪಕ್ಕೇ ಹೋಗಲ್ಲವಂತೆ, ಸರಸ್ವತೀ ವೈರಿಯಂತೆ !

ಗೋ. : 'ಪಂಡಿತ ಪುತ್ರಿ' ಅನ್ನು ! .... ಗೊತ್ತೇನಕ್ಕ ಹಾಗಂದ್ರೆ ಏನು ಅಂತ ?

ರಾ. : ಸ್ವಲ್ಪ ನಿಲ್ಲಿಸೋ ನಿನ್ನ ಹರಟೇನ ಗೋಪು ! .... ಏನು ಹೇಳುತ್ತಿದ್ದೆ ಅಕ್ಕ ? .... ಹಾಗಾದರೆ '.... ?

ಅ. : ಅದೇ ಹೇಳಿದೆನಲ್ಲ, ಎಸ್ಸೆಸ್ಸೆಲ್ಸಿ ಏಳನೇ ಸಲ ಕಟ್ಟಿದ್ದಳಂತೆ ಹೋದ ವರ್ಷ; ಅದೂ ಹೋದ ಮೇಲೆ, ಈಗ ಲಕ್ಷಣವಾಗಿ ಮನೆಗೆಲಸ ಮಾಡಿ-ಕೊಂಡಿದಾಳೆ.

ರಾ. : ಹಾಗಿದ್ದಮೇಲೆ ....

ಅ. : (ಸಂತೋಷದಿಂದ) ಒಪ್ಪಿದೇ ಅನ್ನು ! .... ಸಧ್ಯ ತಲೆಭಾರ ಇಳಿದ ಹಾಗಾಯ್ತು ನನಗೆ ! .... ಹೇಳಿ ಕಳಿಸಿಬಿಡ್ತೀನಿ ಅವರ ಮನೆಗೆ, ಮುಂದಿನ ತಿಂಗ-ಳಲ್ಲೇ ಮುಹೂರ್ತ ಇಟ್ಟುಬಿಡೀ ಅಂತ ! (ಹೋಗುವಳು).

ಗೋ. : ಅ ಹ ಹ ಹ ! .... ಸಿಹಿ ಅಣ್ಣ; ಸಿಹಿ ಕೊಡಿಸ್ಬೇಕು .... ಸರಸ್ವತೀ ಸ್ವರಿ ಸರಸಮ್ಮ ನನ್ನ ಅತ್ತಿಗೆ ಆಗೋದಕ್ಕೆ ! (ಓಡುವನು).

ಅ. : (ಅವನನ್ನು ಅಟ್ಟಿಸುತ್ತ) ಎಲ್ಲಿ ! .... ಯಾರು ಅವನು ... !

[ ದೃಶ್ಯ ೬ ]

[ರಾಜುವಿನ ಮನೆ. ಊರಿಗೆ ಬಂದ ರಾಜು ಜಟಕಾದಲ್ಲಿ ಇಳಿಯುವನು.]

ರಾ. : (ಗಾಡಿಯವನಿಗೆ) .... ತೊಗೊಂಡು ಬಾ ಹಾಸಿಗೆ ಪೆಟ್ಗಿ ಒಳಕ್ಕೆ ... ಹುಂ ... ಅಲ್ಲಿಟ್ಟುಬಿಡು. (ದುಡ್ಡು ಕೊಟ್ಟು ಕಳಿಸುವನು) ಉಶ್ಶಪ್ಪ ಊರಿಗೆ ಬಂದು ಬಿದ್ದ ಹಾಗಾಯ್ತು ! ... ಇಪ್ಪತ್ತು ದಿನ ಹಾಕಿಬಿಟ್ರು ಸರ್ಕೀಟು ಈ ಸರ್ತಿ ; .... ಏನೋ ಹೊಸದಾಗಿ ಮದುವೆಯಾದೋನು ಅನ್ನೋ ಸಹಾನುಭೂತಿ ಏನಾದರೂ ಉಂಟೇ !... ಏನ್ಮಾಡೋದು, ಗುಲಾಮಗಿರಿ ! .... ಇದೇನು, ಮನೇಲಿ ಸದ್ದೇ ಇಲ್ವಲ್ಲ ! .... ಸರ್ರೂ ! .... ಸರ್ರೂ ! .... ಎಲ್ಹೋದಳು ನಾನು ಊರಿಗೆ ಬರ್ತೀನಿ ಅಂತ ಬರೆದಿದ್ರೂ ? .... ಸರ್ಸೂ ! .... ಹಾ ! .... ಇದೇನು, ಕೊಠಡೀಲಿ ಒಬ್ಳೇ ! .... ಏನೋ ಬರೀತಾ ಬೇರೆ ಇದಾಳೆ ! (ಜೋರಾಗಿ) ಸರ್ರೂ !!

ಸರಸೂ : (ಬೆಚ್ಚಿ ಮೇಲೆದ್ದು) ಆ ? .... ಯಾರು ? .... ಓಹೋ ನೀವೇ ? ಯಾವಾಗ ಬಂದಿರಿ ? .... ಬಂದದ್ದೇ ಗೊತ್ತಾಗಲಿಲ್ಲ ನನಗೆ ! .... ಬಾಗಿಲ ಸದ್ದೂ ಕೇಳಿಸಬೇಡವೇ !

ರಾ. : (ಸಿಟ್ಟಿನಿಂದ) ಸರಿಯಾಗಿ ನಾಲ್ಕೂವರೆ ನಿಮಿಷ ಆಯ್ತು ನಾನು ಮನೆಗೆ ಬಂದು. ಎರಡು ನಿಮಿಷ ಆಯ್ತು ಈ ರೂಮಿನ ಬಾಗಿಲಿಗೆ ಬಂದು ನಿಂತು !

ಸ. : ಆಹಾ ! .... ಕ್ಷಮಿಸಿ, ತಪ್ಪಾಯ್ತು ! .... ಹಹ .... ಹಹ .... ಏನೋ ಬರೀತಿದ್ದೆ, ಕೇಳಿಸ್ಲಿಲ್ಲ ! .... ಹೇಗಿತ್ತು ಟೂರು ! ಬೇಜಾರಾಗಿರಬೇಕಲ್ಲ ಹೋಟೆ ಲೂಟ ? .... ಯಾಕೆ, ಉತ್ತರಾನೇ ಕೊಡದೇ ಹಾಗೇ ನೋಡ್ತೀರಿ ನನ್ನ ?

ರಾ. : ಆ .... ಅಲ್ಲ ! .... ನಿನ್ಮುಖದಲ್ಲಿ ಏನು ಇಷ್ಟು ಬದಲಾವಣೆ ಅಂತ ನೋಡ್ತಿದೀನಿ ! .... ಆ ? .... ಒಳ್ಳೇ ಅರಳುಮಲ್ಲಿಗೇ ಆಗಿದೀಯಲ್ಲ ! .... ಏನೋ ಹಿಗ್ಗು, ಕನಸು ಕಾಣೋ ಖಳೆ ! .... ಏನು ಸಂದರ್ಭ ?

ಸ. : ಹಹಹಹ ! .... ತುಂಬ ಸಂತೋಷದ ಸುದ್ದಿ ಕಣ್ರೀ ! ಕೇಳಿದರೆ ನಿಮಗೂ ಸಂತೋಷವಾಗತ್ತೆ. ನಿಧಾನವಾಗಿ ಹೇಳ್ತೀನಿ, ಬಟ್ಟೆ ಬಿಚ್ಚಿ ಕೈಕಾಲು ತೊಳದ್ಕೊಳ್ಳಿ. ಕಾಫಿ ತಿಂಡಿ ಆದಮೇಲೆ ಮಾತಾಡೋಣ.

ರಾ. : ಇಲ್ಲ ಸರ್ರೂ, ಆಗುಲ್ಲ. ನಿನ್ನ ಮುಖದ ಗೆಲವು ನೋಡಿದರೆ, ಅದೇನೋ ಭಾರೀ ಬಾಬತೇ ಇದ್ದಾಗಿದೆ ... ಕುತೂಹಲ ಕೆರಳಿದೆ ನನಗೆ; ಹೇಳಿ

ಬಿಡು. ಕೇಳಿ, (ನಗುತ್ತ) ನಾನೂ ಅಷ್ಟು ಆ ಸಂತೋಷದಲ್ಲಿ ಭಾಗಿ ಆಗಿಬಿಡ್ತೀನಿ.

ಸ. : (ನಗುತ್ತ) ಹಿಹಿ .... ನೋಡ್ರಿ .... ಹಿಹಿ ನಾನೊಂದು ಕಾದಂಬರಿ ಬರೆದೆ, ನೀವು ಊರಿಗೆ ಹೋದ ಮೇಲೆ !

ರಾ. : (ಬೆಚ್ಚಿಬೆದರಿ) ಹಾ !!

ಸ. : ಹುಂ ಕಣ್ರೀ. ಹೊತ್ತು ಹೋಗದೇ, ನೋಡೋಣ ಅಂತ ಶುರೂ ಮಾಡಿ, ಆರೇ ದಿನದಲ್ಲಿ ಮುಗಿಸಿಬಿಟ್ಟೆ! ಹೇಗಿದ್ರೂ ಹಿಂದಕ್ಕೆ ಬರತ್ತೆ ಅಂತ, ಗೋಪು ಕೈಲಿ ಅದ್ಯಾವುದೋ ಪ್ರಕಾಶಕರಿಗೆ ಕಳಿಸಿಕೊಟ್ರೆ, .... ಏನಾಶ್ಚರ್ಯ ಅಂತೀರಿ, ಮಾರನೇ ದಿನಾನೇ ಅದನ್ನ ಅಚ್ಚು ಹಾಕಿಸ್ಬಿಟ್ರಂತೆ ! ಎಂಟೇ ದಿನದಲ್ಲಿ ಎರಡ್ಸಾವಿರ ಪ್ರತಿ ಖರ್ಚಾಗಿಹೋಯ್ತಂತೆ ! ಈಗ ಇನ್ನೊಂದು ಮುದ್ರಣ ಮಾಡುತ್ತಿದಾರೆ !

ರಾ. : ಅ .... ಅ .... ಆದರೆ .... ಆದರೆ ನಿನಗೆ ಬರವಣಿಗೇ ಗಂಧಾನೇ ಇಲ್ಲ ಅಂತ ಭಾಷೆ ಕೊಟ್ಟಿದ್ರಲ್ಲೇ ನಿಮ್ಮಮ್ಮ ? .... ಹೇಗ್ಬಂತೇ .... ?

ಸ. ಅದೇ ಕಣ್ರೀ ನನಗೂ ಆಶ್ಚರ್ಯ ! ಒಂದು ದಿನವಾದರೂ ಸ್ವಂತವಾಗಿ ಒಂದ್ನಾಲು — ತರಗತೀ ಪುಸ್ತಕದ್ದು ಸಹ — ನೆಟ್ಟಗೆ ಬರೆದೋಳಲ್ಲ ನಾನು. ವಾಕ್ಯರಚನೇಲಿ ಮೂರರ ಮೇಲೆ ಏರಿದ್ದೇ ಇಲ್ಲ ನನ್ನ ಮಾರ್ಕ್ಸು ! ಅಂಥಾದ್ದರಲ್ಲಿ ಅದೇನಾಯ್ತೋ, ನಿಮ್ಮ ಕೈ ಹಿಡೀತಾಲೇ ಸ್ಫೂರ್ತಿ ಬಂದುಬಿಡೋಣೇ !

ರಾ. : (ಮೆಲ್ಲನೆ) ಸ್ಫೂರ್ತಿ ! ... ನನ್ನ ಕೈ ಹಿಡೀತಾಲೇ !

ಸ. : ಆ ಕಾದಂಬ್ರಿ, ಅಷ್ಟು ಚೆನ್ನಾಗಿ ಯಾಕೆ ಬಂತು ಅಂತೀರಿ, ...

ರಾ. : ಹುಂ ... ?

ಸ. : ನಾವಿಬ್ರು ಮಾತಾಡಿದ್ನೆಲ್ಲ, — ಅವತ್ತು ಸಂಜೆ ಲಾಲ್‌ಬಾಗ್ ತಿರುಗಾಡಿದ್ದು, ಇನ್ನೊಂದು ದಿನ ಕಬ್ಬನ್‌ಪಾರ್ಕಿನಲ್ಲಿ ಸಣ್ಣದೊಂದು ಮಾತ್ಗೆ ಕಿತ್ತಾಡಿದ್ದು, ಮತ್ತೊಂದು ದಿನ — ಬೆಳದಿಂಗಳಲ್ಲಿ ಬೋಟಿಂಗ್ ಹೋಗಿದ್ದು ... ಹೆಗಲ್ಮೇಲೆ ಕೈಹಾಕ್ಕೊಂಡು ನಾವ್ ನಾವು ಮಾತಾಡಿದ್ದು, ಎಲ್ಲ ಅಚ್ಚಿಳಿಸ್ಬಿಟ್ಟಿದೀನಿ ಅದರಲ್ಲಿ.

ರಾ. : ಹಾ ! ... ನಾವ್ ನಾವು ಮಾತಾಡಿದ್ನೆಲ್ಲ !

ಸ. : ಹುಂ, ಎಲ್ಲ ! ... ಇನ್ನೂ ಥಮಾಷೆ ಏನೂಂತೀರಿ ! ಆ ಕಾದಂಬ್ರಿ ಎಷ್ಟು ಜನಪ್ರಿಯವಾಯ್ತು ಅಂದ್ರೆ, ಬೇರೆ ಬೇರೆ ಆರು ಭಾಷೇಲಿ ಸಹ ಅನುವಾದ ಆಗ್ತಾ ಇದೆಯಂತೆ ! ಸಿನಿಮಾಕ್ಕೆ ಸಹ ಬಳಸ್ಕೋಬೇಕೂಂತಿದಾರಂತೆ !

ರಾ. : (ತನಗೆ ತಾನೆ) ಆರು ಭಾಷೇಲಿ ! ... ನಾನೂ ನನ್ಹೆಂಡ್ತಿ ಮಾತಾಡಿದ್ದೆಲ್ಲ ! ... ಮದುವೆ ಆದ ಹೊಸ ಹುರುಪಿನ ಹರಟೆದ ಹುಚ್ಚೆಲ್ಲ! ... ಅಯ್ಯೋ, ಮದುವೇ ಮೋಸವೇ ! ಹಗಲ್ಕಂಡ ಭಾವೀಗೆ ಹಗಲೇ ಬಿದ್ದೆ !

## [ ದೃಶ್ಯ ೩ ]

[ ರಾಜುವಿನ ಮನೆ ]

ಅ. : ರಾಜೂ ... ರಾಜಣ್ಣ ... ಯಾಕಪ್ಪ ಹೀಗಾಗಿದ್ದೀ ಈಚೆಗೆ, ಮಾತಾಡ್ಸಿ-ದರೆ ಮಾತೇ ಆಡೊಲ್ಲ. ಅರಳು ಹುರಿದ ಹಾಗೆ ಮಾತು ಉದುರಿಸೋ ಹುಡುಗ, ಮೂಗುಬಸವನಾಗಿ ಬಿಟ್ಟಿದೀಯಲ್ಲ !

ರಾ. : ... ಹುಂ ...

ಅ. : ಹೇಳ್ಕೇಳಿ, ಇವತ್ತು ದೀಪಾವಳಿ, ನಿಮ್ಮತ್ತೇ ಮನೆಗೆ ಊಟಕ್ಕೆ ಕರೆದ್ಹೋಗಿದಾರೆ, ಅಳಿಯಾ ಮಗಳು ಬರಲೀ ಅಂತ. ಹೋಗ್ತೀರೋ ಇಲ್ವೋ ?

ರಾ. : ಉ ಹೂ ...

ಅ. : ರಾಜೂ! ... (ಗಾಬರಿಯಿಂದ) ಯಾಕೋ, ಮೈ ಹುಷಾರಿಲ್ವೇ!

ರಾ. : ಹುಂ ... ಉಹುಂ ...

ಅ. : ಇದೇನೋ ಇದು ಎಲ್ಲಕ್ಕೂ 'ಹುಂ, ಉಹುಂ,' ಅಂತೀ ಮೂಗನ ಹಾಗೆ. ಮಾತೇ ಮರೆತ್ಹೋಯ್ತೇನು ?

ರಾ. : ಮರೆತ್ಬಿಡೋದೇ ವಾಸಿ ಅಕ್ಕ. ಆಮೇಲೆ ಆರು ಭಾಷೇಲಿ ಅನುವಾದ ಆಗಿಹೋಗಿ ಬಿಟ್ಟೀತು !

ಅ. : ಏನೋ ಅರ್ಥವಿಲ್ಲದೇ ಮಾತಾಡ್ತೀಯಪ್ಪ. ಎತ್ಲಾಗದರೂ ಹೋಗಲಿ, ಆ ಹುಡಗೀನಾದರೂ ಸ್ವಲ್ಪ ವಿಚಾರಿಸ್ಕೋ. ಎಂಟು ದಿನವಾಯ್ತು ಅವಳು ಅನ್ನ ತಿಂದು, ಸುಮ್ಮನೆ ಅಳುತ್ತೆ! ನೀರು ಕೂಡ ಹಾಕ್ಕೊಳ್ಳದೆ ಕೂತಿದಾಳೆ ಹಬ್ಬದ ದಿನ! ನಿನ್ನ ಮದುವೆ ಆದಕೂಡ್ಲೆ, ಗಂಡಹೆಂಡ್ತಿ ತಮ್ಮ ಪಾಡಿಗೆ ತಾವಿರಲಿ ಅಂತ ಮೈಸೂರಿಗೆ ಹೋದೋಳು ಮೊನ್ನೆ ಬಂದರೆ, ನೋಡ್ತೀನಿ, ನೀವಿಬ್ಬರೂ ಕೂತ್ಕೊಂಡು ನಾಲಕ್ಕು ಮಾತಾಡಿದ್ದು ಕಾಣೆ! ಏನನ್ಯಾಯವೋ ಇದು?

ರಾ. : (ವ್ಯಂಗವಾಗಿ) ಯಾಕಕ್ಕ ? ... ಅವಳಿಗೆ ಬರೆಯೋ ಕೆಲಸ ಇಲ್ವೇ ?

ಅ. : ಬರೆಯೋ ಕೆಲ್ಸ ? ಬರೆದದ್ದೂ ಕಾಣೆ, ಕೊರೆದದ್ದೂ ಕಾಣೆ ! ಸಧ್ಯ ಏನೋ ಕೊರಗು ಹಚ್ಕೊಂಡು, ಕೂತಿದೆ ಹುಡುಗಿ; ... ವಿಚಾರಿಸ್ಕೊ. ಕಂಡೋರ ಮನೇ ಹುಡುಗೀನ ಕಣ್ಣೀರು ಹಾಕಸ್ಬಾರದು. ಏನೋ ತಾಯಿ ಇಲ್ಲದ ಮಕ್ಕೊಂತಾ ಸಾಕಿ ಸಲಹಿದೆ ನಿಮ್ಮಿಬ್ರನ್ನ .... (ಅಳುತ್ತ) ನೀವು ಚನ್ನಾಗಿದ್ದರೆ ಸಾಕು.

ರಾ. : ಅಳಬೇಡಕ್ಕ .... ಕೇಳ್ತೀನಿ ನೀನು ಹೇಳಿದ ಹಾಗೇ, ಸರಸೂನ್ನೆ ಏನಾಗಿದೆ ಅಂತ .... ಅಳಬೇಡ. ಆಯ್ತೀ !

ಅ. : ಅಷ್ಟು ಮಾಡಪ್ಪ.

[ದೃಶ್ಯ ೪]

[ಸಂಸೂವಿನ ಕೊಠಡಿ. ಅವಳು ಅನ್ಯಮನಸ್ಕಳಾಗಿ ಕುಳಿತಿರುವಳು. ರಾಜು ಪ್ರವೇಶ]

ರಾ. : (ಗಂಟಲು ಸರಿಪಡಿಸಿಕೊಳ್ಳುತ್ತ) .... ಅ .... ಅ .... ಸಸ್ರೂ .... ಸಸ್ರೂ.

ಸ. : (ಮೆಲ್ಲನೆ) ಏನು ?

ರಾ. : ಅಕ್ಕ ಹೇಳಿದಳು, ನೀನೇನೋ ಸಪ್ಪಗಿದೀ ಅಂತ. ಅದಕ್ಕೋಸ್ಕರ .... ನಿನ್ನ .... ಮಾತಾಡಿಸ್ತೀನಿ. ಆದರೆ .... ಒಂದು ಷರತ್ತು. .... ಆ ? ನೀನು ಈಗ ನಾವು ಮಾತಾಡಿದ್ದೆಲ್ಲ ನಿನ್ನ ಮುಂದಿನ ಕಾದಂಬರಿಗೆ ಸೇರಿಸಕೂಡದು ಅಷ್ಟೆ !

ಸ. : (ಅಳುವ ಧ್ವನಿಯಲ್ಲಿ) ಯಾಕೆ ನನ್ನ ಹಂಗಿಸಿ ಕೊರಳು ಕೊಯ್ಯುತ್ತೀರಿ ?

ರಾ. : ಯಾಕೆ ! .... ನಾನ್ಹೇಳಿದ್ದು ಸುಳ್ಳೇ ?

ಸ. : (ಬಿಕ್ಕಿಬಿಕ್ಕಿ ಅಳತೊಡಗುವಳು)

ರಾ. (ಬೆದರಿ) ಇದ್ಯಾಕೆ ಸಸರ್ೂ ? ಹೀಗಳ್ತೀ ? .... ಆ ? .... ಏನಾಯ್ತು ? .... ಹೇಳ್ಸಸರ್ೂ !

ಸ. : ( ಅಳುತ್ತ ಡ್ರಾಯರೆಳೆದು ಕಾಗದದ ಕಟ್ಟೊಂದನ್ನು ಅವನ ಕೈಗಿಟ್ಟು ) ನೋಡಿ ಇವನ್ನ.

ರಾ. : (ಬಿಚ್ಚಿ ನೋಡುತ್ತ) ಓಹೋಹೋಹೋ ! ಇದೇನು ? ... ತ್ಸುತ್ಸು ತ್ಸುತ್ಸು ! ಎಷ್ಟು ಕಾರ್ಡುಗಳು ! ಎಷ್ಟು ತಂತಿಗಳು ! ಎಕ್ಸ್‌ಪ್ರೆಸ್ ಕಾಗದಗಳಿ ಗಂತೂ ಲೆಕ್ಕವೇ ಇಲ್ಲ !

ಸ. : ಎಲ್ಲಾ ನೂರಾರು ಸಂಪಾದಕರದ್ದು. ದಿನಪತ್ರಿಕೆ, ವಾರಪತ್ರಿಕೆ, ಮಾಸಿಕ ಗಳಿಂದ ಹಿಡಿದು, ಚಲಚಿತ್ರ ಸುದ್ದಿಗಾರರ ವರೆಗೆ — ಕತೆ ಬೇಕು, ಕವನ ಕಳ್ಸಿ, ನಾಟ್ಕ ನೀಡಿ, ಕಾದಂಬರಿ ಕೊರೆಯಿರಿ, ಅಂತ ಬೆನ್ನು ಹತ್ತಿದಾರೆ ಒಂದೇಸಮನೆ!

ರಾ. : (ವ್ಯಂಗ್ಯವಾಗಿ ನಕ್ಕು) ಕಳ್ಸೋದು ತಾನೇ! ನಿನ್ನಂಥಾ ಬರಹಗಾರ್ತೀಗೆ ಅದೊಂದು ಕಷ್ಟವೇ !

ಸ. : ಏನು ಕಳಿಸ್ಲಿ ? ಆ ಕಾದಂಬರೀ ಜೊತೇಗೇ ನನ್ನ ಸ್ಫೂರ್ತಿ ಸತ್ಹೋಯ್ತು. ಈಗ, ಅವತ್ತಿಂದ ಇವತ್ತಿನವರೆಗೆ, ಒಂದು ಸಾಲೂ ಸಾಗಿಲ್ಲ !

ರಾ. : ನಿಜವಾಗಿ !

ಸ. : ಸತ್ಯವಾಗಿ !

ರಾ. : ಹ ಹ ಹ ಹ ! ಹ ಹ್ಹ ಹ್ಹ ಹ್ಹ !

ಸ. : (ಸಿಟ್ಟಿನಿಂದ) ನಗ್ತೀರಿ, ನಿಮಗೆ ಹಾಸ್ಯ ! ‹ ಮಗುವಿಗೆ ಚೆಲ್ಲಾಟ, ಮುದುಕೀಗೆ ಮರಣಸಂಕಟ' ಅಂತ ! .... ಇವರಿಗೆಲ್ಲ ಹೇಗೆ ಬರೀಲಿ ‹ ನಾನು ಬರೀಲಾರೆ' ಅಂತ ?

ರಾ. : ಇಷ್ಟೇ ತಾನೇ ! ನಿನ್ನ ಈ ಸಂಧಿಗ್ಧಾನ ನಾನು ಪರಿಹರಿಸಿ ಕೊಟ್ರೆ, ಇನ್ನು ನೀನು ಬರೆಯೋ ಹವ್ಯಾಸಕ್ಕೆ ಹೋಗುಲ್ಲ ಅಂತ ಮಾತು ಕೊಡ್ತೀಯಾ ?

ಸ. : ಖಂಡಿತ ಹೋಗುಲ್ಲ. ನನಗೆ ಬರೆಯಕ್ಕೆ ಬಂದರೆ ತಾನೇ ಬರೆಯೋದು!

ರಾ. : ಆಡಿದ್ಮಾತ್ರನ್ನೆಲ್ಲ ಆರು ಭಾಷೇಲಿ ಅನುವಾದ, ಹನ್ನೆರಡು ಭಾಷೇಲಿ ಕಾದಂಬರಿ ಕಟ್ಟೆಲ್ವೋ ?

ಸ. : ಅಯ್ಯೋ ಇಲ್ಲ, ಇಲ್ಲ! ನನ್ನಾಣೆಗೂ ಇಲ್ಲ!

ರಾ. : ಆಣೇನೂ ಬೇಡ, ಕಾಸೂ ಬೇಡ, ನಯಾಪೈಸಾ ಮೊದಲೇ ಬೇಡ. ಬರೆಯೊಲ್ಲ ಅಂತ ಒಪ್ಪಿಕೊಂಡಿದೀಯಲ್ಲ, ಅಷ್ಟೇ ಸಾಕು.

ಸ. : ಆದರೆ ... ಈಗಿನ ಗತಿ?

ರಾ. : ಅದಕ್ಯಾಕೆ ಯೋಚನೆ? ನಾನೂ ಓದ್ತಿದ್ದಾಗ, ಬೇಕಾದಷ್ಟು ಕವನಗಳನ್ನ ಕತೆಗಳನ್ನ,ಕಾದಂಬರಿಗಳನ್ನ, ಗೀಚಿ ಗೀಚಿ ಹಲವಾರು ಸಂಪಾದಕರಿಗೆ ಕಳ್ಸಿ,ಹಿಂದಕ್ಕೆ ಬಂದು ಬಿದ್ದೋವು ಹೊರೆ ಹೊರೆಯಾಗಿವೆ; ಆ ಅಟ್ಟದ ಮೇಲಿಟ್ಟಿರೋ ಜಾಯಿಕಾಯಿ ಪೆಟ್ಟಿಗೇಲಿ. (ನಗುತ್ತ) ಕಳ್ಸು ಅವನ್ನ ಒಂದೊಂದಾಗಿ !

ಸ. : ಆದರೆ ... ಬರೆದೋರು ... ನೀವು ! ಹೆಸರು ... ನಂದೆ ?

ರಾ. : (ನಕ್ಕು) ಬರೆದ ಕೈ ಯಾವದಾದರೇನು ಸರ್ರೂ! ಮುಕ್ಕಿಸೋ ಮಣ್ಣು ಮುಖ್ಯ ಅಷ್ಟೆ.!

ಇಬ್ಬರೂ ನಗುವರು)

[ ತೆರೆ ]

# ಮಹಾಯೋಗಿ

( ಪೌರಾಣಿಕ ಏಕಾಂಕ )

ಪಾತ್ರಗಳು :

ಮಾಂಡವ್ಯ
ಅಶರೀರ ವಾಣಿ
ಮೃತ್ಯು
ಇನ್ನೊಂದು ಅಶರೀರ ವಾಣಿ
ಕಾಲ
ಚಿತ್ರಗುಪ್ತ
ಪ್ರೇತಗಳು
ಒಂದು ಪ್ರೇತ — ಪ್ರೇತನಾಯಕ
ರಾಜಪ್ರೇತ
ಯಮಧರ್ಮ

( ಮಹಾಭಾರತ — ಆದಿಪರ್ವ-ಸಂಭವಪರ್ವ, ಅಧ್ಯಾಯ ೧೦೭, ೧೦೮ )

[ ೧ ]

[ ಮಾಂಡವ್ಯನ ಪರಲೋಕಯಾತ್ರೆ ; ವೈತರಣೀ ನದಿಯ ಪರಿಸರ. ಅದನ್ನು ಕಂಡು ಮುನಿ ದಿಗ್ಭ್ರಾಂತನಾಗುತ್ತಾನೆ. ]

**ಮಾಂಡವ್ಯ :** ಮನುಷ್ಯಲೋಕವನ್ನು ಬಿಟ್ಟು ಇಲ್ಲಿಗೆ ಬಂದುದಾಯಿತು. ಇಲ್ಲಿ ರಕ್ತಪಾತ ಇರಲಾರದೆಂದು ಭಾವಿಸಿದ್ದೆ. ಆದರೆ ಈ ಲೋಕದ ನೀರು ಸಹ ರಕ್ತವಾಗಿರುವಂತೆ ತೋರುತ್ತದೆ. ಆಶ್ಚರ್ಯ !

**ಅಶರೀರವಾಣಿ :** ಆಶ್ಚರ್ಯಕ್ಕೆ ಕಾರಣ ಏನೂ ಇಲ್ಲ. ಇದು ವೈತರಣಿ. ಮಾನವ ಜೀವನದ ವೈಫಲ್ಯಕ್ಕೆ ಸಾಕ್ಷಿಯಾದ ರಕ್ತತರಂಗಿಣಿಯೇ ಇದು.

**ಮಾಂಡವ್ಯ :** ಅಶರೀರರಾಗಿ ಮಾತಾಡುತ್ತಿರುವವರು ಯಾರು? (ಸ್ವಲ್ಪ ಯೋಚಿಸಿ) ಯಾರೇ ಇರಲಿ; ನಾನು ಬ್ರಹ್ಮಲೋಕಕ್ಕೆ ಹೋಗುವ ಏಕಾಂತ ಪ್ರಯಾಣಿಕ. ವೈತರಣಿಯನ್ನು ದಾಟುವವನಲ್ಲ.

**ಅಶರೀರವಾಣಿ :** ಎಲ್ಲ ಲೋಕಗಳಿಗೂ ಇಲ್ಲಿಯೇ—ಈ ಮಾರ್ಗವಾಗಿಯೆ ಹೋಗಬೇಕು.

**ಮಾಂಡವ್ಯ :** ಇಲ್ಲಿ ಎಂದರೆ ?

**ಅಶರೀರವಾಣಿ :** ಮೃತ್ಯುರಾಜ್ಯದ ಅಂಚಿನಲ್ಲಿ !

**ಮಾಂಡವ್ಯ :** ಮೃತ್ಯು ಇತರರಿಗೆ. ನನ್ನ ಮೃತ್ಯು ಎಂದೋ ಮೃತಿ ಹೊಂದಿದೆ.

**ಮೃತ್ಯು :** (ಪ್ರತ್ಯಕ್ಷನಾಗಿ) ಮೃತ್ಯು ಎಂದರೆ ಶರೀರಧರ್ಮ; ಅಖಂಡ ಜೀವನದ ಒಂದು ಖಂಡಚಿತ್ರ ಅದು. ಅದರ ಅಭಿಮಾನಿದೇವತೆ ನಾನು. ನನಗೆ ಹೆದರಿ ಭೌತಿಕ ಶರೀರವನ್ನು ಸುಖವಿಲಾಸಗಳ ಕೋಟೆಯೊಳಗೆ ಅಡಗಿಸಿ ಇಟ್ಟುಕೊಂಡವರ ಚರಮಾವಸ್ಥೆಯನ್ನು ನೋಡು ; ಅವರ ಜೀವಗಳು ಈ ನೆತ್ತರ ನದಿಯಲ್ಲಿ ಬಿದ್ದು, ನೆಣದ ಪ್ರವಾಹದಲ್ಲಿ ಸಿಕ್ಕಿ, ಎಲುಬುಗೂಡುಗಳ ಮೇಲೆ ಹೊಡೆದು ಛಿದ್ರಿತವಾಗಿ ತೇಲಿ ಮುಳುಗಿ ಕೊಚ್ಚಿ ಹೋಗುತ್ತಿವೆ. ದ್ವೇಷಭಾವವಿದ್ದರೆ ತಾನೆ ಹೋರಾಟ, ಸೋಲು, ಗೆಲವು ? ಆ ದೃಷ್ಟಿಯಿಂದ ನೀನು ನನ್ನನ್ನು ಅವಲೋಕಿಸಿಲ್ಲ !

**ಮಾಂಡವ್ಯ :** (ಬೆರಗಿನಿಂದ) ನೀನು ನಿಜವಾಗಿಯೂ ಮೃತ್ಯುವಾಗಿದ್ದರೆ, ನನ್ನ ಶರೀರಪತನ ಹೊಂದುವ ಮುಂಚೆ ಏಕೆ ಕಾಣಿಸಿಕೊಳ್ಳಲಿಲ್ಲ ?

**ಮೃತ್ಯು :** ನಿನ್ನ ಆತ್ಮವು ಸಮಾಧಿಮಗ್ನವಾಗಿದ್ದಾಗ ನಾನು ಬಂದೆ. ನಿನ್ನ ಚರ್ಮ ಚಕ್ಷುವಿಗೆ ಗೋಚರಿಸಲಿಲ್ಲ; ಅಷ್ಟೆ. ಕಳಿತ ಹಣ್ಣು ಬೀಳುವಂತೆ ಶರೀರ ಪತನವಾಯಿತು. ವೇದನಾನುಭವ ಇರಲಿಲ್ಲ. ಬಿದ್ದ ಹಣ್ಣನ್ನು ಎತ್ತಿಕೊಳ್ಳುವಂತೆ ನಿನ್ನ ಜೀವವನ್ನು ಹಿಡಿದೆತ್ತಿದೆ.

**ಮಾಂಡವ್ಯ :** ಎಲ್ಲ ಸಿದ್ಧಿಗಳು ನನ್ನ ವಶವಾಗಿದ್ದುವು. ಮೃತ್ಯು ಸಹ ನನ್ನ ವಶದಲ್ಲಿತ್ತು.

**ಇನ್ನೊಂದು ಅಶರೀರವಾಣಿ**: ಇಲ್ಲ ಮಹಾ ಮುನಿ ! ಇಲ್ಲ !

**ಮಾಂಡವ್ಯ**: ಇದೇನು ಇನ್ನೊಂದು ವಾಣಿ? ಎಲೈ ಅದೃಶ್ಯ ಭೂತವೇ ! ನೀನು ಯಾರು ?

**ಅಶರೀರವಾಣಿ**: ಭೂತವೂ ನಾನು ! ವರ್ತಮಾನವೂ ನಾನು ! ಭವಿಷ್ಯತ್ತೂ ನಾನು ! ನಿನ್ನ ಪೂರ್ವಾಪರಗಳು ನನ್ನ ಕಣ್ಣಿನೊಳಗೆ ಅಡಗಿವೆ.

**ಮಾಂಡವ್ಯ**: ಇದು ಅಸಾಧ್ಯ. ಯೋಗಿಗಳನ್ನು ತಿಳಿಯುವ ಶಕ್ತಿ ಯಾರಿಗೂ ಇಲ್ಲ.

**ಅಶರೀರವಾಣಿ**: ತ್ರಿಕಾಲಜ್ಞಾನದ ಸಾರಸ್ವರೂಪನಾದ ಕಾಲನೆ ನಾನು.

**ಮಾಂಡವ್ಯ**: ತ್ರಿಕಾಲಜ್ಞಾನವು ಬ್ರಹ್ಮಜ್ಞಾನದ ಒಂದು ಅಂಶಮಾತ್ರ !

**ಅಶರೀರವಾಣಿ**: ನಾನೂ ಬ್ರಹ್ಮದ ಅಂಶ !

**ಮಾಂಡವ್ಯ**: ಬ್ರಹ್ಮ ನನ್ನದು ; ನಿನ್ನದಲ್ಲ !

**ಅಶರೀರವಾಣಿ**: ಸರ್ವವೂ ಬ್ರಹ್ಮವೆ. ಈ ಸತ್ಯವನ್ನು ಅರಿಯದವರು ನಿನ್ನಂತೆ ಕುರುಡು ದಾರಿಯಲ್ಲಿ ಸುತ್ತುತ್ತಾರೆ !

**ಮಾಂಡವ್ಯ**: ಎಲೈ ದುಷ್ಟ ಶಕ್ತಿಯೆ ! ಯೋಗಬಲದಿಂದ ನಿನ್ನನ್ನು ಧ್ವಂಸ ಮಾಡುವೆನು.

**ಅಶರೀರವಾಣಿ**: ( ನಗುತ್ತ ) ಇದು ಸಾಧ್ಯವಲ್ಲ; ಸರ್ವಥಾ ಸಾಧ್ಯವಲ್ಲ. ಸಾಧ್ಯವೆಂದು ಭಾವಿಸಿದರೆ ನೀನು ಹುಚ್ಚನೆ ಸರಿ. ನಿನ್ನ ಹಿಂದೆ – ಮುಂದೆ, ಎಡಕ್ಕೆ – ಬಲಕ್ಕೆ, ಮೇಲೆ – ಕೆಳಗೆ – ಸರ್ವತ್ರ ಇರುವವನೇ ನಾನು. ನನ್ನಲ್ಲಿಯೆ ನೀನೂ ಇರುವೆ. ಹಸುಗೂಸನು ತೊಡೆಯಮೇಲೇರಿಸಿಕೊಂಡಂತೆ ನಿನ್ನನ್ನು ನನ್ನಲ್ಲಿಯೇ ಇಟ್ಟುಕೊಂಡಿರುವೆನು – ಮಾಂಡವ್ಯ. ನಿನ್ನ ಆತ್ಮವೀಗ ಅರಳಿದೆ. ತ್ರಿಕಾಲಗಳಲ್ಲಿ ಅತಿ ವಿಸ್ತಾರವಾಗಿ ಹಬ್ಬಿಕೊಂಡಿರುವ ಕರ್ಮಸರಣಿ ನಿನಗೆ ಗೋಚರವಾಗಲಿದೆ. ನೋಡು ... ನೋಡು ... ದಿವ್ಯದೃಷ್ಟಿಯಿಂದ ನೋಡು ...

**ಮಾಂಡವ್ಯ**: ( ಸ್ತಂಭೀಭೂತನಾಗಿ ಸ್ವಲ್ಪ ಕಾಲ ನಿಂತು ಆಮೇಲೆ ) ಹುಂ ; ಕಾಲದೇವ ! ನಿನ್ನನ್ನು ಕಾಲದೇವನೆಂದು ಒಪ್ಪಿಕೊಂಡಿರುವೆನು. ಇನ್ನೊಬ್ಬನು ಮೃತ್ಯುದೇವನೆಂಬುದೂ ನಿಜವೆ. ಆದರೆ ನನಗೆ ಬೇಕಾದುದು ನಿಮ್ಮ ಸಂದರ್ಶನ ಅಲ್ಲವಷ್ಟೆ....

**ಇಬ್ಬರೂ**: ನೀನು ಸ್ವರ್ಗದ ಸಮೀಪಕ್ಕೆ ಬಂದಿರುವೆ.

**ಮಾಂಡವ್ಯ**: ನನಗೆ ಸ್ವರ್ಗ ಬೇಡ.

**ಇಬ್ಬರೂ** : ಇದು ಪುಣ್ಯಾತ್ಮರ ಸ್ವರ್ಗ ; ಪಾಪಿಗಳ ನರಕ.

**ಮಾಂಡವ್ಯ** : ನನಗೆ ಪುಣ್ಯಾತ್ಮರ ಸ್ವರ್ಗವೂ ಬೇಡ; ಪಾಪಿಗಳನರಕವೂ ಬೇಡ. ಪುಣ್ಯ ಪಾಪಗಳಿಂದ ಬಾಹಿರವಾದ — ಬ್ರಹ್ಮವೆ ನನ್ನ ಗಮ್ಯ...

**ಇಬ್ಬರೂ**: ಧರ್ಮನನ್ನು ಒಲಿಸಿ ಬ್ರಹ್ಮನ ಕಡೆಗೆ ಪ್ರಯಾಣ ಮಾಡಬೇಕಾಗಿದೆ. ಮಾಂಡವ್ಯ ; ಅದನ್ನು ತಿಳಿಯೆಯಾ ?

**ಮಾಂಡವ್ಯ:** ತಿಳಿದಿರಬಹುದು; ಅಥವಾ ಇಲ್ಲದಿರಬಹುದು. ನಿಮ್ಮ ಧರ್ಮ ರಾಜನು ಎಲ್ಲಿರುವನು ?

**ಇಬ್ಬರೂ:** ಈ ಸೃಷ್ಟಿಚಕ್ರದ ಮಧ್ಯದಲ್ಲಿ.

**ಮಾಂಡವ್ಯ:** ನಾನು ಮಧ್ಯಕ್ಕೆ ಬರುವವನಲ್ಲ ; ಕೊನೆಗೆ ಹೋಗತಕ್ಕವನು.

**ಇಬ್ಬರೂ:** ಮಧ್ಯದಲ್ಲಿ ಹಾದುಹೋಗಿ ಕೊನೆಯ ಸೀಮೆಯನ್ನು ಮುಟ್ಟ ಬೇಕಲ್ಲವೆ ?

**ಮಾಂಡವ್ಯ:** ( ಧ್ಯಾನಮಗ್ನನಾಗಿ) ಶಕ್ತಿಗಳೆ ! ನನ್ನ ಸಹಾಯಕ್ಕೆ ಬನ್ನಿರಿ !

**ಮೃತ್ಯು:** ಯಾವ ಶಕ್ತಿಗಳು ಮಾಂಡವ್ಯ ?

**ಮಾಂಡಯ್ಯ:** ಯೋಗಬಲದಿಂದ ಸಂಪಾದಿಸಿದ ಸಿದ್ಧಿಗಳು ....

**ಕಾಲ:** ಅವೆಲ್ಲ ಒಟ್ಟು ಸೇರಿ ನಿನ್ನನ್ನು ಇಲ್ಲಿಯ ವರೆಗೆ ಹೊತ್ತುತಂದು:ನಮ್ಮ ಕೈಗೆ ಒಪ್ಪಿಸಿ ಹೊರಟುಹೋದುವು... ಅವುಗಳಿಂದ ಆಗುವುದು ಅಷ್ಟೆ. ಈಗ ನೀನು ಧರ್ಮರಾಜನ ಅಂಕೆಯಲ್ಲಿರುವೆ.

[ ಆಗ ದೊಡ್ಡ ಬೊಬ್ಬೆ ಕೇಳಿಸುತ್ತದೆ]

ನಾವೇ ಸಿದ್ಧಿಗಳು ! ಮಾಂಡವ್ಯ ! ನೀನು ಶರೀರಧಾರಿಯಾಗಿದ್ದಾಗ ನಿನ್ನನ್ನು ಓಲೈಸಿದೆವು. ನಮ್ಮ ಕರ್ತವ್ಯ ಮುಗಿಯಿತು. ನಿನ್ನ ಆತ್ಮವು ಶರೀರವನ್ನು ಬಿಟ್ಟು ಹೊರಟಾಗ ನಾವೂ ಹೊರಟೆವು....ಇನ್ನು ನಿನಗೆ ನೀನೇ ಶರಣು !

**ಮೃತ್ಯು:** ಕೇಳಿದೆಯೋ ಮಾಂಡವ್ಯ ?

**ಮಾಂಡವ್ಯ:** ಕೇಳಿದುದು ಮಾತ್ರವಲ್ಲ ; ಅನುಭವಿಸುತ್ತಲೂ ಇರುವೆನು.

**ಕಾಲ:** ಏನನ್ನು ಅನುಭವಿಸುತ್ತಿರುವೆ ?

**ಮಾಂಡವ್ಯ:** ಕರ್ಮೇಂದ್ರಿಯ, ಜ್ಞಾನೇಂದ್ರಿಯ, ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ ... ಇವೆಲ್ಲ ಗತಿವೇಗವನ್ನು ಕಳೆದುಕೊಂಡಂತಿವೆ; ಸ್ತಂಭಿತ ವಾದಂತಿವೆ; ಎಲ್ಲ ಅನುಭವಗಳು ಒಂದೆ ಅನುಭವದಲ್ಲಿ ಲಯಹೊಂದಿದಂತಿವೆ. ಅನು ಭವವು ಜ್ಞಾನದಲ್ಲಿ ಐಕ್ಯಗೊಂಡಿದೆ. ಜ್ಞಾನವು ಅನಂತದ ಮಧ್ಯದಲ್ಲಿ ಬಿದ್ದು ಒದ್ದಾಡುತ್ತಿದೆ !

**ಇಬ್ಬರೂ:** ಪಾರ್ಥಿವ ದೇಹದ ಭಾವಸಂಸ್ಕಾರಗಳು ನಿನ್ನನ್ನು ಬಿಟ್ಟುವು; ಅಥವಾ ಬಿಡುತ್ತಿವೆ !

**ಮಾಂಡವ್ಯ:** ಈ ರಾಜ್ಯದ ಅನುಭವ ಹೀಗೊ ?

**ಇಬ್ಬರೂ:** ಎಲ್ಲರಿಗೂ ಹೀಗಿಲ್ಲ ; ನಿನ್ನಂತಹ ಯೋಗಿಗಳಿಗೆ ಮಾತ್ರ !

**ಮಾಂಡವ್ಯ:** ಉಳಿದವರಿಗೆ ?

**ಇಬ್ಬರೂ:** ಪಾಪಪರಿಪಾಕದಿಂದ ಬೇಯುತ್ತಿರುವವರಿಗೆ ರೌರವ... ಕುಂಭೀ-ಪಾಕ...ಭೈರವ... ಅಸಿಪತ್ರವನ ಮೊದಲಾದ ಭೀಕರ ನರಕಗಳಲ್ಲಿ ಸದಾ ಸ್ಥಾನವಿದೆ.

ಮಾಂಡವ್ಯ : ಧರ್ಮರಾಜ್ಯದಲ್ಲಿಯೂ ನರಕ-ಕೂಪಗಳಿರುವುದು ಹಾಸ್ಯಾಸ್ಪದ ವಲ್ಲವೆ ?

ಇಬ್ಬರೂ: ಎಲ್ಲವೂ ಧರ್ಮನಿಯಮದಂತೆ ನಡೆಯುತ್ತದೆ. ಸ್ವರ್ಗಪ್ರಾಪ್ತಿ ಯಂತೆ ನರಕಪ್ರಾಪ್ತಿಯೂ ಧರ್ಮಸಮ್ಮತ ...

ಮಾಂಡವ್ಯ : ದೇವತೆಗಳಿರಾ ! ನಿಮಗೆ ನನ್ನ ಅನಂತ ನಮಸ್ಕಾರ. ಸ್ವರ್ಗ-ನರಕಗಳಮಾತು ಕೇಳಿದೊಡನೆ ಜುಗುಪ್ಸೆಯುಂಟಾಗುತ್ತದೆ. ನನ್ನನ್ನು ಧರ್ಮನಲ್ಲಿಗೆ ಕರೆದೊಯ್ಯಿರಿ. ಅವನನ್ನು ಸಂದರ್ಶಿಸಿ ಒಪ್ಪಿಗೆ ಪಡೆದುಕೊಂಡು ನೇರಾಗಿ ಬ್ರಹ್ಮ ಲೋಕಕ್ಕೆ ಹೊರಡುತ್ತೇನೆ ...

ಇಬ್ಬರೂ: ಆಗಬಹುದು ; ಆದರೆ ಅಪ್ಪಣೆ ಪಡೆಯುವುದು ಅಷ್ಟೇನೂ ಸುಲಭ ವಲ್ಲ.

ಮಾಂಡವ್ಯ: ನನಗೆ ಅಪ್ಪಣೆ ಬೇಕಾಗಿಲ್ಲ. ನಾನು ಆ ಕಡೆಗೆ ಹೋಗುವ ಯಾತ್ರಿಕನೆಂಬ ಒಪ್ಪಿಗೆ ದೊರೆತರೆ ಸಾಕು ...

ಇಬ್ಬರೂ : ಅಪ್ಪಣೆಯಾಗಲಿ ; ಒಪ್ಪಿಗೆಯಾಗಲಿ ; ದೊರೆಯುವುದಕ್ಕೆ ಒಂದು ಪೂರ್ವ ವಿಧಿಯುಂಟು. ಅದಾಗದಿದ್ದರೆ ಏನೂ ಇಲ್ಲ.

ಮಾಂಡವ್ಯ : ಅದೇನು ?

ಮೃತ್ಯು: ನನ್ನ ಸ್ಪರ್ಶವಾದೊಡನೆ ದೇಹಭಾವದ ಅನೇಕ ಸಂಸ್ಕಾರಗಳು ಸುಟ್ಟುಹೋಗುತ್ತವೆ. ಆದರೂ ಕೆಲವು ವಾಸನೆಯನ್ನು ಅಂಟಿಕೊಂಡು ಉಳಿಯು ತ್ತವೆ. ಅವುಗಳ ಪಾಪ ಪುಣ್ಯವನ್ನು ಪರೀಕ್ಷಿಸಬೇಕಾಗುತ್ತದೆ.

ಮಾಂಡವ್ಯ : ಪರೀಕ್ಷಿಸುವವರು ಯಾರು ?

ಮೃತ್ಯು: ಅವನೊಬ್ಬ ಅಧಿಕಾರಿ.

ಮಾಂಡವ್ಯ : ಮನುಷ್ಯಲೋಕದಲ್ಲಿರುವಂತೆ ಇಲ್ಲಿಯೂ ಅಧಿಕಾರಿಗಳು ! ಅಧಿ ಕಾರಿಗಳು ! ಹಾಗಾದರೆ ಇಹಲೋಕಕ್ಕೂ ಪರಲೋಕಕ್ಕೂ ಭೇದವೇನು ?

ಮೃತ್ಯು : ಅದನ್ನು ಈ ಕಾಲನು ಕಾಣಿಸುವನಲ್ಲ ! ನೀನು ಪ್ರತ್ಯಕ್ಷವಾಗಿ ಕಾಣುವೆ.

ಮಾಂಡವ್ಯ : ಅವನು ಪರೀಕ್ಷಿಸುವ ವಿಧಾನ ಯಾವುದು ?

ಕಾಲ : ಎಲ್ಲವೂ ಅನುಭವಗೋಚರವಾಗುವುದು.

ಮಾಂಡವ್ಯ : ಈ ಪಾಪ-ಪುಣ್ಯಗಳನ್ನು ಲೆಕ್ಕಿಸುವಾತನು ಯಾರು ?

ಕಾಲ : ಚಿತ್ರಗುಪ್ತ !

ಮಾಂಡವ್ಯ : ಚಿಕ್ಕ ಸೆರೆಮನೆಯಿಂದ ದೊಡ್ಡ ಸೆರೆಮನೆಗೆ ಬಂದಹಾಗಾ ಯಿತು. ಭೂಲೋಕದಲ್ಲಿದ್ದಾಗ ಧರ್ಮರಕ್ಷಕನಾಗಿದ್ದ ರಾಜನು, ನನ್ನ ಮೇಲೆ ಕಳ್ಳ ತನದ ಮಿಥ್ಯಾರೋಪಣೆ ಮಾಡಿ ಶೂಲಕ್ಕೇರಿಸಿದನು. ಅವನ ಅಧಿಕಾರಿಗಳ ಅಂಧ-ಬುದ್ಧಿಯೇ ಇದಕ್ಕೆ ಕಾರಣವಾಯಿತು. ಇಲ್ಲಿಯೂ ಅದೇ ಪಾಡೇ ?

**ಕಾಲ :** ಸರ್ವಥಾ ಅಲ್ಲ. ಭೂಲೋಕದ ನ್ಯಾಯನಿಷ್ಕರ್ಷೆಯ ಕ್ರಮವೇ ಬೇರೆ ; ಇಲ್ಲಿಯದು ಬೇರೆ. ಅಲ್ಲಿಯ ಧರ್ಮರಕ್ಷಕರು, ಅಧಿಕಾರಿಗಳು, ರಾಜರು, ಪ್ರಜೆಗಳು, ಆರೋಪಕರು, ಆರೋಪಿತರು, ಹೆಚ್ಚೇನು ? ಸಕಲರೂ ಸಮಾನವಾಗಿ ಆತ್ಮಪರೀಕ್ಷಣೆಗೆ ಒಳಗಾಗುತ್ತಾರೆ ಇಲ್ಲಿ. ತಂತಮ್ಮ ಕರ್ಮಫಲದ ಕಡೆಗೆ ತಾವೇ ತೆರಳುತ್ತಾರೆ. ಬಲಾತ್ಕಾರದ ದಂಡವಿಧಾನ ಇಲ್ಲಿ ಇಲ್ಲವಲ್ಲ.

**ಮಾಂಡವ್ಯ :** ಹಾಗಿದ್ದರೆ ಅವನ ಸನ್ನಿಧಿಗೆ ಹೋಗೋಣ ... ನನ್ನ ಯಾತ್ರೆ ಮಧ್ಯದಲ್ಲಿಯೆ ತಡೆದ ಹಾಗಿದೆ. ವಿಲಂಬವು ಅಸಹ್ಯ ... ಎಷ್ಟು ಬೇಗನೆ ಬ್ರಹ್ಮ ಸಾಕ್ಷಾತ್ಕಾರವಾಗುವುದೊ... ಅಷ್ಟು ಲೇಸು... ಮೃತ್ಯುದೇವತೆ ! ಕಾಲಪುರುಷ ! ನನ್ನನ್ನು ಅಲ್ಲಿಗೆ ಕರೆದೊಯ್ಯಿರಿ ...

**ಇಬ್ಬರೂ :** ನೀನು ನಡೆಯಬೇಕಾಗಿಯೂ ಇಲ್ಲ ; ನಾವು ನಡೆಯಿಸುವುದೂ ಇಲ್ಲ. ಇಲ್ಲಿ ಎಲ್ಲ ಕ್ರಿಯೆಗಳು ತಮ್ಮಿಂದ ತಾವೆ ಆಗುತ್ತಿವೆ ಎಂಬುದನ್ನು ಮರೆಯ ಬೇಡ ಮಾಂಡವ್ಯ ... ಇಷ್ಟರಲ್ಲಿಯೆ ನಿನ್ನ ಪುಣ್ಯ-ಪಾಪಗಳ ಶೋಧನೆ ಆಗಿರಲೂ ಬಹುದು. ಆಗಿದ್ದರೆ ಚೆನ್ನಾಯಿತು ; ನೀನು ನೇರಾಗಿ ಧರ್ಮಸನ್ನಿಧಿಗೆ ಹೋಗಲು... ಬಹುದು.

**ಮಾಂಡವ್ಯ:** ಬಹುದು ಎನ್ನುವಿರಲ್ಲ ?

**ಇಬ್ಬರೂ:** ಹೌದು; ಹೋಗಲೂ ಬಹುದು; ಹುಂ ಹೋಗದಿರಲೂಬಹುದು.

**ಮಾಂಡವ್ಯ:** ಆಗುವುದು ಏನೆ ಇರಲಿ. ಆಗುವುದು ಆಗಿಯೆ ಹೋಗಲಿ.

**ಇಬ್ಬರೂ :** ಹಾಗೆಯೇ ಆಗಲಿ ... ನಾವು ಚಿತ್ರಗುಪ್ತನ ಮಂದಿರದ ಹೆಬ್ಬಾಗಿಲಿನ ಮುಂದೆಯೆ ನಿಂತಿರುವೆವು ... ಚಿತ್ರಗುಪ್ತಮಹಾರಾಜ ! ಭೂಲೋಕದಿಂದ ದಿವ್ಯ ಪ್ರಯಾಣಿಕನೊಬ್ಬ ಬಂದಿರುವನು. ಅವನ ಪಾಪ-ಪುಣ್ಯಗಳ ಪರೀಕ್ಷಣವಾಗ ಬೇಕಾಗಿದೆ. ಆತ ವಿಲಂಬವನ್ನು ಸಹಿಸುವುದಿಲ್ಲ. ನೇರಾಗಿ ಬ್ರಹ್ಮದ ಕಡೆಗೆ ಹಾರ ಬೇಕೆಂದಿದ್ದಾನೆ ... ನಿನ್ನ ಅಭಿಮತವೇನು ?

**ಅಶರೀರವಾಣಿ :** ನಿಮ್ಮ ಅಭಿಮತವೆ ನನ್ನ ಅಭಿಮತ. ಆತನ ಸುಕೃತದುಷ್ಕೃತಗಳ ಪರಿಶೋಧನೆ ಇಷ್ಟರಲ್ಲಿಯೇ ಆರಂಭಿಸಿದೆ. ಅದರ ಫಲಾಫಲಗಳು ಅವನ ಅನುಭವಕ್ಕೇ ಗೋಚರವಾಗಲಿವೆ. ವಿಲಂಬವಿರುವುದು ಅತ್ಯಲ್ಪ. ಅದನ್ನು ಅವನು ಸಹಿಸಲೆಬೇಕು. ಅಸಹಿಷ್ಣುತೆಯಿಂದ ಧರ್ಮವೂ ನಷ್ಟವಾಗಬಹುದು. ಬ್ರಹ್ಮವೂ ಗುರಿ ತಪ್ಪಬಹುದು. ತಿಳಿದಿರಲಿ !

**ಇಬ್ಬರೂ :** ಕೇಳಿದೆಯೊ ಮಾಂಡವ್ಯ ?

**ಮಾಂಡವ್ಯ:** ಕೇಳಿದೆ— ಹಾಗಿಯೇ ಆಗಲಿ.

[ ದೃಶ್ಯ : ೬ ]

[ಚಿತ್ರಗುಪ್ತನ ಮಂದಿರದ ಇನ್ನೊಂದು ಬಾಗಿಲು. ಹಲವು ಪ್ರೇತಗಳು ಓಡಿಕೊಂಡು ಬರುತ್ತಿವೆ. ಭಯವಿಸ್ಮಯಗಳ ಭಾವವಿದೆ. ಎಲ್ಲವೂ ಏಕಕಂಠವಾಗಿ "ಬಿಡುಗಡೆ! ಬಿಡುಗಡೆ! ನಮಗೆ ಬಿಡುಗಡೆ ಆಗಲೇ ಬೇಕು"— ಎಂದು ಬೊಬ್ಬಿಡುತ್ತಿವೆ. ]

**ಚಿತ್ರಗುಪ್ತ :** ಚಿತ್ರಗುಪ್ತನ ಮನೆಯ ಮುಂದೆಯೂ ಇಂತಹ ಗದ್ದಲ !

**ಪ್ರೇತಗಳು :** ಹೌದು ಮಹಾರಾಜ ! ನಾವು ನರಕವಾಸಿಗಳು !

**ಚಿತ್ರಗುಪ್ತ :** ಇಲ್ಲಿಗೆ ಬಂದಿರೇಕೆ ?

**ಪ್ರೇತಗಳು :** ನಮ್ಮ ಪಾಪ ಸವೆಯಿತು. ಪಾಪ-ಪುಣ್ಯಗಳನ್ನು ತುಲನೆ ಮಾಡುವ ಅಧಿಕಾರ ನಿನ್ನದು. ನೀನು ಬರೆದಂತೆ ಧರ್ಮನು ವರ್ತಿಸುತ್ತಾನೆ. ನಮ್ಮ ಪ್ರಾಕೃತದಲ್ಲಿ ಪಾಪದ ಹೊತ್ತ ಕಳೆದುಹೋಯಿತೆಂಬುದನ್ನು ಬರೆದುಕೊ ಮಹಾ ರಾಜ.

**ಚಿತ್ರಗುಪ್ತ :** ನಿಮ್ಮ ಮಾತಿಗೆ ಆಧಾರವಿಲ್ಲ.

**ಪ್ರೇತಗಳು :** ಈಗ ತಾನೆ ಸ್ವರ್ಗದ ಕಡೆಯಿಂದ ತಂಗಾಳಿಯೊಂದು ಬೀಸಿತು. ಮಂಜಿನ ಭಾರದಿಂದ ಬಾಗಿ ಮುದುಡಿದ ಪುಷ್ಪಗಳು ಮತ್ತೊಮ್ಮೆ ಅರಳಿ ಎಸಳೆತ್ತಿ ಮುಂಬೆಳಕಿನಲ್ಲಿ ನಲಿವಂತೆ ನಮ್ಮ ಜೀವ ಯಾವುದೋ ಒಂದು ಹೊರೆಯನ್ನಿಳಿಸಿ ಹಗುರವಾಯಿತು. ಹೊಸ ಪ್ರಾಣದ ಸಂಚಾರವಾಯಿತು. ನರಕ-ಬಿಲಗಳು ಬಾಯಿ ತೆರೆದುವು. ನಾವು ಹೊರಟುಬಂದೆವು ಮಹಾರಾಜ ...

**ಚಿತ್ರಗುಪ್ತ :** ನೀವು ಹೊರಬಂದಿರಿ ; ಬರಿಸಿದವರು ಯಾರು ?

**ಪ್ರೇತಗಳು :** ನಮ್ಮ ಪುಣ್ಯ.

**ಚಿತ್ರಗುಪ್ತ :** ಧರ್ಮನ ಸಮ್ಮತಿಯಿಲ್ಲದೆ ಪುಣ್ಯವೂ ಪ್ರವರ್ತಿಸಲಾರದು.

**ಪ್ರೇತಗಳು :** ಇಂದು ಒಬ್ಬ ಮಹಾಯೋಗಿ ಸ್ವರ್ಗ-ನರಕಗಳ ನಡುವಣ ದಾರಿ ಯಲ್ಲಿ ನಡೆದು ಬಂದಾಗ ಅವನ ಪ್ರಕಾಶ ನಮ್ಮ ಮೇಲೆ ಹೊಡೆದು ಹಾಗಾಯಿತು. ಆಗಲೆ ನಾವು ಹೊಸಬರಾದೆವು.

**ಚಿತ್ರಗುಪ್ತ :** ( ಆತ್ಮಗತ ) ಇವನು ಅವನೇ ಆಗಿರಬೇಕು — ಮಾಂಡವ್ಯ ! ಬ್ರಹ್ಮಯೋಗಿ ಮಾಂಡವ್ಯ ! ಪ್ರಪಂಚದ ಕಾಲಧರ್ಮಗಳಿಗೆ ಇವನಿಂದ ಬಲವಾದ ಆಘಾತ ಬಂದಿದೆ. ಇವನ ತಪಸ್ಸಿನಿಂದ ಜಗತ್ತು ಉರಿದಿದೆ. ಇವನ ಅಧ್ಯಾತ್ಮ ಶಕ್ತಿ ಯಿಂದ ಈ ಲೋಕ ಬೆಳಗುತ್ತಿದೆ. ಇವನ ಪಾಪ-ಪುಣ್ಯವು ಸಹ ಪರೀಕ್ಷೆಗೆ ಒಳಗಾಗ ಬೇಕಾಗಿದೆ. (ಪ್ರಕಾಶವಾಗಿ) ಪ್ರೇತಗಳಿರಾ! ನೀವು ನಿಮ್ಮ ದಾರಿ ಹಿಡಿಯಿರಿ. ನಿಮ್ಮ ಮೇಲೆ ಮಾಂಡವ್ಯನಿಗೆ ಯಾವ ಅಧಿಕಾರವೂ ಇಲ್ಲ. ಈ ರಾಜ್ಯದಲ್ಲಿ ಧರ್ಮನದೇ ಅಧಿ ಕಾರ. ಪಾಪ-ಪುಣ್ಯಗಳನ್ನು ಗುರುತಿಸುವವರು ನಾವು. ಮಾಂಡವ್ಯನಲ್ಲ.

**ಪ್ರೇತಗಳು :** ಅದೇನೋ ಇರಬಹುದು. ಇದು ವರೆಗೆ ನರಕಕೂಪಗಳಲ್ಲಿ

ಯಮಯಾತನೆಯನ್ನು ಅನುಭವಿಸುತ್ತಿದ್ದ ನಮಗೆ ಈಗ ತಾನೆ ತಾತ್ಕಾಲಿಕವಾದ ಈ ವಿಮೋಚನೆ ದೊರೆಯಲು ನೀವೇ ಕಾರಣವಾದಿರಾ? ಹಾಗಿದ್ದರೆ ಚೆನ್ನಾಯಿತು. ನಮಗೆ ಶಾಶ್ವತ ವಿಮೋಚನೆಯನ್ನು ದಯಪಾಲಿಸಿರಿ.

**ಚಿತ್ರಗುಪ್ತ** ; (ಆತ್ಮಗತ) ಮಾಂಡವ್ಯನ ಆತ್ಮಬಲ ಅಂತಹದು. ಅವನ ಯಮ ನಿಯಮಗಳು ಪ್ರಕೃತಿನಿಯಮದಲ್ಲಿ ಏಕೀಭವಿಸಿದಂತಿವೆ. (ಪ್ರಕಾಶ) ನಿಮಗೆ ಅಂತಹ ಯೋಗ್ಯತೆ ಬಂದಿಲ್ಲ. ಅದನ್ನು ಮಾಂಡವ್ಯನೂ ಕೊಡಲಾರ.

[ "ಮಾಂಡವ್ಯ ಮಹಾಯೋಗಿ! ನಮ್ಮನ್ನು ಕಾಪಾಡು! ಕಾಪಾಡು!" ಎಂದು ಪ್ರೇತಗಳು ಬೊಬ್ಬಿಡುತ್ತಿವೆ.]

**ಚಿತ್ರಗುಪ್ತ** : ( ಆತ್ಮಗತ ) ಈ ಮಹಾಪುರುಷನಲ್ಲಿಯೂ ಪಾಪವನ್ನು ಅರಸಬೇಕಂತೆ. ಇರಲಿ ; ಪ್ರೇತಗಳನ್ನು ಹೀಗೆ ಮೂದಲಿಸುವೆನು. (ಪ್ರಕಾಶ) ನಿಮ್ಮ ಮಾಂಡವ್ಯ ಸಾಮಾನ್ಯಮನುಷ್ಯ ; ಬರಿಯ ಜಂತು.

**ಪ್ರೇತಗಳು** : ಸರ್ವಥಾ ಅಲ್ಲ ; ಅವನು ಮಹಾಯೋಗಿ. ಆತನ ಪಾದವನ್ನು ಸ್ಪರ್ಶಿಸುವ ಯೋಗ್ಯತೆ ಈ ಸ್ವರ್ಗಕ್ಕಿಲ್ಲ.

**ಚಿತ್ರಗುಪ್ತ** : ಸ್ವರ್ಗವನ್ನು ನಿಂದಿಸಿ ಪಾಪದ ಮೇಲೆ ಪಾಪವನ್ನು ಆಚರಿಸುತ್ತಿದ್ದೀರಿ.

**ಪ್ರೇತಗಳು** : ಮಾಂಡವ್ಯನ ಪುಣ್ಯದ ಮುಂದೆ ಯಾವ ಪಾಪವೂ ನಿಲ್ಲಲಾರದು.

**ಚಿತ್ರಗುಪ್ತ** : ನಿಮ್ಮ ಮಾತು ಸುಳ್ಳು. ಅವನಲ್ಲಿಯೂ ಪಾಪ ಸೇರಿಕೊಂಡಿತ್ತು.

**ಪ್ರೇತಗಳು** : ಒಂದು ಕಾಲದಲ್ಲಿ ಇದ್ದಿರಬಹುದು ಮಹಾರಾಜ! ಆದರೆ ದೀರ್ಘ ತಪಸ್ಸಿನಿಂದ ಪಾಪವಾಸನೆಗಳನ್ನು ಸಹ ಸುಟ್ಟು ಭಸ್ಮ ಮಾಡಿದ್ದಾನೆ.

**ಚಿತ್ರಗುಪ್ತ**: ನೀವು ಮನುಷ್ಯಜೀವಿಗಳಾಗಿದ್ದಿರಿ. ಅವನೂ ಮನುಷ್ಯ. ನಿಮ್ಮ ಮುಖದಿಂದಲೇ ಕೇಳಬಯಸುತ್ತೇನೆ ... ಆತ ಮನುಷ್ಯನಾಗಿ ಬಾಳಿಕೊಂಡಿದ್ದಾಗ ಸಾಧಿಸಿದ ಪುಣ್ಯಸಿದ್ಧಿಯೇನು ?

**ಒಂದು ಪ್ರೇತ** : ಅದನ್ನು ಕೇಳುತ್ತೀರಾ ? ಸಂತೋಷದಿಂದ ಹೇಳುವೆನು ...

**ಚಿತ್ರಗುಪ್ತ** : ಸಂತೋಷದಿಂದ ಕೇಳುತ್ತಿದ್ದೇನೆ. ಪ್ರೇತನಾಯಕ, ಎಲ್ಲವನ್ನು ಹೇಳು.

**ಒಂದು ಪ್ರೇತ** : ನಾನು ದಸ್ಯುಗಳ ನಾಯಕನು. ಈ ಪುಣ್ಯಾತ್ಮ ಕಾಡಿನಲ್ಲಿ ತಪಸ್ಸು ಮಾಡುತ್ತಿದ್ದಾಗ ಒಮ್ಮೆ ಸಂಗಡಿಗರೊಡನೆ ಸೂರೆಸುಲಿಗೆ ಮಾಡಿ ಅದೇ ಕಾಡಿಗೆ ಅವಿತುಕೊಳ್ಳುವುದಕ್ಕಾಗಿ ಬಂದೆ ...

**ಚಿತ್ರಗುಪ್ತ** : ಈ ಪ್ರೇತಗಳು ನಿನ್ನ ಅನುಯಾಯಿಗಳಾಗಿದ್ದುವೊ ?

**ಉಳಿದ ಪ್ರೇತಗಳು** : ಹೌದು ಮಹಾರಾಜ ; ಈತ ನಮ್ಮ ನಾಯಕ ; ನಾವು ಅನುಯಾಯಿಗಳು. ಒಟ್ಟಿಗೆ ಹೋದುದು ನಿಜ.

**ಪ್ರೇತನಾಯಕ** : ರಾಜದ್ರವ್ಯವನ್ನು ಅಪಹರಿಸಿದುದರಿಂದ ಕ್ರುದ್ಧರಾದ ರಾಜ-ಭಟರು ಬೆಂಬತ್ತಿಕೊಂಡು ಬಂದರು. ತಪ್ಪಿಸಿಕೊಳ್ಳುವ ಉಪಾಯ ಹೊಳೆಯಲಿಲ್ಲ. ಕದ್ದ ಒಡವೆಯನ್ನು ಮಾಂಡವ್ಯನ ಬೆನ್ನ ಹಿಂದೆ ಅಡಗಿಸಿ ಇಟ್ಟೆವು ...

**ಚಿತ್ರಗುಪ್ತ** : ನಿಮ್ಮ ಪಾಪದಲ್ಲಿ ಅವನಿಗೂ ಪಾಲು ಕೊಟ್ಟಿರಲ್ಲವೆ ?

**ಪ್ರೇತನಾಯಕ** : ಎಂದೂ ಅಲ್ಲ. ಅವನ ಮನಸ್ಸು ಅಧ್ಯಾತ್ಮದಲ್ಲಿ ತಲ್ಲೀನವಾಗಿತ್ತು. ದೇಹಬೋಧೆ ಇರಲಿಲ್ಲ. ಮುಖದಲ್ಲಿ ಮೌನ ಬಲಿತಿತ್ತು. ನಾಡಿಗಳ ಬಡಿತವು ಸಹ ನಿಂತಂತೆ ತೋರುತ್ತಿತ್ತು. ಒಡವೆಗಳನ್ನು ಅವನ ಹಿಂದೆ ಇಟ್ಟು ಗುಹೆಯೊಳಗೆ ಅಡಗಿ ಕುಳಿತೆವು. ಆಗ ರಾಜಭಟರು ಬಂದು ಈತನನ್ನು ಹಿಡಿದರು.

**ಚಿತ್ರಗುಪ್ತ** : ಮಾಂಡವ್ಯನನ್ನು !

**ಪ್ರೇತನಾಯಕ** : ಹೌದು ಪ್ರಭು — ಈ ಮಹಾಪುರುಷನನ್ನು ...

**ಚಿತ್ರಗುಪ್ತ** : ರಾಜಭಟರು ಇವನನ್ನು ಹಿಡಿದರು . . ಎನ್ನುವುದಕ್ಕೆ ಬೇರೆ ಸಾಕ್ಷಿಗಳಿವೆಯೆ ?

**ಕೆಲವು ಪ್ರೇತಗಳು** : ಹೌದು ಮಹಾರಾಜ. ರಾಜಭಟರಾಗಿದ್ದವರು ನಾವೆ. ಕಳ್ಳರಾಗಿ ಸುಲಿದವರಿಗೂ ಕಳ್ಳನಲ್ಲದವನನ್ನು ಹಿಡಿದವರಿಗೂ ಒಂದೆ ನರಕದಲ್ಲಿ ಸ್ಥಾನ ದೊರೆಯಿತು ...

**ಚಿತ್ರಗುಪ್ತ** : ಧರ್ಮಲೋಕದ ನೀತಿ ಹಾಗಿದೆ. ಆಗಲಿ ; ಮುಂದೇನಾಯಿತು? ಹೇಳಿ ಮುಗಿಸಿ ...

**ಪ್ರೇತನಾಯಕ** : ಮಾಂಡವ್ಯನನ್ನು ಹಿಡಿದು ಹೊಡೆದು ನಾನಾ ರೀತಿಯಲ್ಲಿ ಚಿತ್ರಹಿಂಸೆ ಮಾಡಿ ರಾಜಸನ್ನಿಧಿಯಲ್ಲಿ ನಿಲ್ಲಿಸಿದೆವು. ಅಪರಾಧಸ್ಥಾಪನೆಯಾಗಲು ಕಷ್ಟವಿರಲಿಲ್ಲ. ಕದ್ದ ಒಡವೆ ಜೊತೆಯಲ್ಲಿಯೇ ಇತ್ತು.

**ಚಿತ್ರಗುಪ್ತ** : ರಾಜನು ವಿಧಿಸಿದ ಶಿಕ್ಷೆಯೇನು ?

**ಪ್ರೇತನಾಯಕ** : ರಾಜಸ್ವವನ್ನು ಅಪಹರಿಸಿದಾತನಿಗೆ ಶೂಲಾರೋಹಣ ಎಂದು ಮಾನವರ ಧರ್ಮಶಾಸ್ತ್ರದಲ್ಲಿ ವಿಧಿಯಿದೆ.

**ಚಿತ್ರಗುಪ್ತ** : ಶೂಲದ ತುದಿಯಿಂದ ಆತ ಸ್ವರ್ಗಾರೋಹಣ ಮಾಡಿದನೆಂದು ನಿಮ್ಮ ಅಭಿಪ್ರಾಯವೆ ?

**ಪ್ರೇತನಾಯಕ** : ಎಂದೂ ಅಲ್ಲ. ದಂಟಿನ ಮೇಲೆ ಕುಳಿತ ತಾವರೆ-ಮೊಗ್ಗೆಯಂತೆ ಈತ ಮೌನವ್ರತಧಾರಿಯಾಗಿ ಶೂಲದ ಮೇಲೆ ನಿಂತು ಮಾಸಗಳನ್ನು ಕಳೆದ ; ವರ್ಷಗಳನ್ನು ಕಳೆದ. ಶರೀರ ಗಾಳಿಗಿಂತ ಹಗುರವಾಗಿದ್ದಿರಬೇಕು. ಮುಳ್ಳಿನಿಂದ ಚುಚ್ಚಿದಷ್ಟು ಸಹ ಗಾಯವಾಗಿರಲಿಲ್ಲ. ಅವನ ತಪೋಜ್ವಾಲೆ ಸುತ್ತಲೂ ಹಬ್ಬಿತು. ಪ್ರಜೆಗಳು ಗೋಳಿಟ್ಟರು. ಅದ್ಭುತವನ್ನು ಕಂಡು ರಾಜನು ಬೆಚ್ಚಿಬಿದ್ದನು. ಮುನಿಯ ಬಳಿಗೆ ಬಂದು ಸಾಷ್ಟಾಂಗ ಎರಗಿ ಕ್ಷಮೆಯನ್ನು ಬೇಡಿದನು.

**ಚಿತ್ರಗುಪ್ತ** : ಈ ಪ್ರೇತಗಳ ಮಧ್ಯೆ ರಾಜಪ್ರೇತವೂ ಇರಬಹುದಲ್ಲವೆ ?

**ರಾಜಪ್ರೇತ:** ಹೌದು ಪ್ರಭು ... ನಾನೇ ಆ ಪ್ರೇತ ... ಇವರ ಮಾತು ಅಕ್ಷರಶಃ ಸತ್ಯ. ನನ್ನ ಅಪರಾಧ ಇವರದಕ್ಕಿಂತಲೂ ಘೋರವಾದ ಕಾರಣ ಹಿಂದೆ — ಬಲು ಹಿಂದೆ — ದೂರದಲ್ಲಿ ನಿಂತಿದ್ದೆ ...

**ಚಿತ್ರಗುಪ್ತ:** ಪ್ರೇತಗಳಿರಾ! ನಿಮ್ಮ ಮಾತು ಸತ್ಯ. ಮಾಂಡವ್ಯ ಮಹಾ-ಯೋಗಿ ಎನ್ನುವುದೂ ನಿಜವೆ. ಆದರೆ ಇಲ್ಲಿರುವ ಶಕ್ತಿಗಳೆಲ್ಲ ಒಂದೆ ಶಕ್ತಿಯ ಅಲೆಗಳು. ಇಲ್ಲಿಯ ಇಚ್ಛೆಗಳೆಲ್ಲ ಒಂದೆ ಇಚ್ಛೆಯ ಸ್ಫುರಣಗಳು. ಒಂದರ ಚೋದನೆಯ ಫಲ ಇನ್ನೊಂದು. ಒಂದರ ಉತ್ತರಪರಿಣಾಮ ಇನ್ನೊಂದು. ಕರ್ಮದ ಸಂಕಲೆ ಎಲ್ಲರನ್ನೂ ಕಟ್ಟಿಕೊಂಡೇ ಇದೆ. ಅದರ ನಡುವೆ ಎಲ್ಲಿಯೂ ವಿಚ್ಛೇದವಿಲ್ಲ. ಒಂದು ವೇಳೆ ವಿಚ್ಛೇದವಾಗುವುದಿದ್ದರೆ ಇಂಥವರಿಂದಲೇ ಆಗುವುದೆಂಬುದನ್ನು ಒಪ್ಪಿಕೊಳ್ಳ ಬಹುದು.

**ಪ್ರೇತಗಳೆಲ್ಲ ಒಟ್ಟಾಗಿ:** ಹಾಗಿದ್ದರೆ ನಮ್ಮ ವಿಮೋಚನೆ ಇವನಿಂದಲೇ ಆಗ ಬೇಕು...

**ಚಿತ್ರಗುಪ್ತ:** ಸರ್ವಥಾ ಅಲ್ಲ. ಪರಮ-ಪರಾತ್ ಪರ-ಶಕ್ತಿ ಒಂದಿದೆ. ಅದುವೆ ಧರ್ಮದ ಆಧಾರ. ಅದರ ಆವರಣದೊಳಗೇ ಈ ಧರ್ಮರಾಜ್ಯದ ಶಾಸನ ಗಳು ಸಹ ಪ್ರವರ್ತಿಸಬೇಕು. ನೀವು, ನಾನು, ಮಾಂಡವ್ಯ... ಹೆಚ್ಚೇನು? ಯೋಚಿ ಸಿದರೆ ಧರ್ಮರಾಜನು ಸಹ ... ಅದಕ್ಕೆ ಅಧೀನವಾಗಿರಲೇಬೇಕು ... ನಾನು ಈಗ ವ್ಯವಹರಿಸಿದುದಾದರೂ ಅದರ ಸಂಕೇತದಂತೆ ...

**ಪ್ರೇತಗಳು:** ಹಾಗಾದರೆ ನಮಗೆ ಬಿಡುಗಡೆ ಎಂದು?

**ಚಿತ್ರಗುಪ್ತ:** ಹೇಳುವ ಅಧಿಕಾರ ನನ್ನದಲ್ಲ. ಇಂದು ನೀವಿಲ್ಲಿಗೆ ಬಂದುದು ಮಾಂಡವ್ಯನ ಪುಣ್ಯಪ್ರೇರಣೆಯಿಂದ ಎಂದು ಭಾವಿಸಬೇಡಿ; ಧರ್ಮರಾಜನ ಅಪೇಕ್ಷೆ ಯಂತೆ ಬಂದಿರಿ. ಅದು ನಿಮಗೆ ತಿಳಿದಿರಲಿಲ್ಲ; ಅಷ್ಟೆ. ಆತನನ್ನು–ಯೋಗಿ ಮಾಂಡವ್ಯ ನನ್ನು – ಧರ್ಮಸನ್ನಿಧಿಗೆ ಕಳುಹಿಸುವ ಮುಂಚೆ ಪರೀಕ್ಷಿಸಬೇಕಾಯಿತು. ಭೂಲೋಕ ದಲ್ಲಿ ನೀವೂ ಅವನೂ ಬಾಳುತ್ತಿದ್ದಾಗ ನಿಮ್ಮ ಕರ್ಮಗಳೂ ಅವನ ಕರ್ಮಗಳೂ ಒಟ್ಟಾಗಿ ಹೆಣೆದುಕೊಂಡಿದ್ದುವೆಂಬುದನ್ನು ನೀವೆ ಬಲ್ಲಿರಿ. ನಿಮ್ಮ ಪರೀಕ್ಷಣವಾದಾಗ ಅವನ ಪರೀಕ್ಷಣವೂ ಆಗಿಹೋಯಿತು. ನಿಮ್ಮನ್ನು ಇಲ್ಲಿಗೆ ಬರಮಾಡಿದುದರ ಉದ್ದೇಶ ತಿಳಿಯಿತೇ?

**ಪ್ರೇತಗಳು:** ಎಲ್ಲವೂ ನಿನ್ನ ತಂತ್ರ! ಹಾಗಿದ್ದರೆ ಮತ್ತೊಮ್ಮೆ ನರಕ-ಬಿಲ ಗಳನ್ನು ಪ್ರವೇಶಿಸಬೇಕೆ ಮಹಾಸ್ವಾಮಿ!

**ಚಿತ್ರಗುಪ್ತ:** ಭಾವದ ಕಲ್ಮಷ ಕಡಿಮೆಯಾದಂತೆ ನರಕದ ಭೀಕರತೆಯೂ ಕಡಿಮೆಯಾಗುವುದು. ಪ್ರೇತಗಳಿರಾ ಹಿಂದೆ ಹೋಗಿರಿ. . . ಬಂದ ದಾರಿಯನ್ನೆ ಹಿಡಿಯಿರಿ. . . .

**ಪ್ರೇತಗಳು:** ಮಾಂಡವ್ಯ ಎತ್ತ ಹೋಗುವವನು?

**ಚಿತ್ರಗುಪ್ತ :** ಧರ್ಮರಾಜನ ಆಸ್ಥಾನಕ್ಕೆ ...

**ಪ್ರೇತಗಳು :** ಪ್ರವೇಶ ಸಿಕ್ಕಿತೇ ?

**ಚಿತ್ರಗುಪ್ತ :** ಸಿಕ್ಕದೇನು ? ಅವನ ಆಚಾರವೇ ಧರ್ಮಸೂತ್ರವಾಗಿದೆ. ಅದಕ್ಕಿಂ ಇನ್ನೇನಾದರೂ ಅತಿ ಸೂಕ್ಷ್ಮ ದೋಷವಿದ್ದರೆ ಧರ್ಮಪ್ರಭುವೇ ಹೇಳಬೇಕು.

**ಪ್ರೇತಗಳು :** ಆತನು ಹಿಂದೆ ಬರುವವರೆಗೆ ಇಲ್ಲಿಯೆ ನಿಂತಿರುವೆವು.

**ಚಿತ್ರಗುಪ್ತ :** ಕೂಡದು, ಕೂಡದು !

**ಪ್ರೇತಗಳು :** (ಒಟ್ಟಾಗಿ) ಮಾಂಡವ್ಯ ಮಹಾಯೋಗಿಗೆ ಜಯವಾಗಲಿ ! ಮಾಂಡವ್ಯ ಮಹಾಯೋಗಿಗೆ ಜಯವಾಗಲಿ .... ನಾವು ಇಲ್ಲಿಂದ ಕದಲುವಂತಿಲ್ಲ.

**ಚಿತ್ರಗುಪ್ತ :** ನರಕವಾಸಿಗಳು ದಂಗೆ ಎಬ್ಬಿಸಿದಂತಿದೆ.

**ಪ್ರೇತಗಳು :** (ಒಟ್ಟಾಗಿ) ಮಾಂಡವ್ಯ ಮಹಾಯೋಗಿಗೆ ಜಯವಾಗಲಿ ! ಮಾಂಡವ್ಯ ಮಹಾಯೋಗಿಗೆ ಜಯವಾಗಲಿ... ಅವನಿರುವಲ್ಲಿಯೆ ನಮ್ಮ ಸ್ಥಾನ.

**ಚಿತ್ರಗುಪ್ತ :** ಪ್ರೇತಗಳಿರಾ ! ನಿಮ್ಮ ನಡತೆಯನ್ನು ಧರ್ಮದೇವತೆಗೆ ತಿಳಿಸುತ್ತೇನೆ... ಬಿಡುಗಡೆಯನ್ನು ಕೊಡುವುದಿದ್ದರೆ ಆತನೇ ಕೊಡಬೇಕು.

[ "ಮಾಂಡವ್ಯನಿಗೆ ಜಯವಾಗಲಿ ! " ಎನ್ನುವ ಬೊಬ್ಬೆ ಮತ್ತಷ್ಟು ಗಟ್ಟಿಯಾಗಿ ಕೇಳಿಸುವುದು.]

## [ ದೃಶ್ಯ : ೩ ]

[ ಯಮಧರ್ಮನ ಆಸ್ಥಾನ ಆತನು ಸಿಂಹಾಸನದಲ್ಲಿ ಕುಳಿತದ್ದಾನೆ. ಎಡದಲ್ಲಿ ಕಾಲ ; ಬಲದಲ್ಲಿ ಮೃತ್ಯು; ನಡುವೆ ಮಾಂಡವ್ಯ. ಮೂವರೂ ಸ್ವಲ್ಪ ದೂರದಲ್ಲಿ ಧರ್ಮನಿಗೆ ಅಭಿಮುಖರಾಗಿರುವರು. ]

**ಮೃತ್ಯು :** ಇದು ಧರ್ಮರಾಜನ ಆಸ್ಥಾನ ; ಅಖಿಲ ಬ್ರಹ್ಮಾಂಡಗಳ ಕೇಂದ್ರ ; ವಿಶ್ವಚೈತನ್ಯಪ್ರವಾಹದ ಉದ್ಗಮಸ್ಥಾನ ; ಜನನ-ಮರಣಗಳ ಸಂಗಮಭೂಮಿ ; ತ್ರಿಕಾಲವ್ಯಾಪಿಯಾದ ಕರ್ಮಚಕ್ರದ ನಾಭಿ ; ಇಲ್ಲಿಗೆ ಬಂದವರನ್ನೆ ಮುಕ್ತರೆನ್ನುವುದಾಗಿದೆ. ಇಂಥವರೆ ದೇವತೆಗಳು ಮಾಂಡವ್ಯ ! ನಿನಗೂ ದೇವನಾಗುವ ಆಸೆಯಿಲ್ಲವೆ ?

**ಮಾಂಡವ್ಯ :** ಎಂದೂ ಇಲ್ಲ. ಎಂದೂ ಇಲ್ಲ. ನನಗೆ ಬ್ರಹ್ಮನಿರ್ವಾಣದಲ್ಲಿ ಮಾತ್ರ ಅಪೇಕ್ಷೆ.

**ಕಾಲ :** ಆ ಅಪೇಕ್ಷೆ ಈಡೇರುವ ಕಾಲ ಇನ್ನೂ ಬಂದಿಲ್ಲ, ಎನ್ನುವಂತೆ ತೋರುವುದು.

**ಮೃತ್ಯು :** ಕಾಲನು ಹೇಳಿದುದು ಸತ್ಯವನ್ನೆ- ಅತಿಪ್ರಯಾಸದಿಂದ ಇಲ್ಲಿಗೆ ಬಂದವರು, ಇಂದ್ರತ್ವವನ್ನೂ, ಕುಬೇರತ್ವವನ್ನೂ ಪಡೆದು ಲೋಕಪಾಲಕ-ವರ್ಗದಲ್ಲಿ ಸೇರಿ ಶಾಶ್ವತವಾಗಿ ಬಾಳುತ್ತಾರೆ !

**ಮಾಂಡವ್ಯ :** ಈ ಬಗೆಯ ಶಾಶ್ವತತೆಗೆ ನನ್ನ ಧಿಕ್ಕಾರ ...

**ಮೃತ್ಯು :** ನೀನು ಯೋಗಿಯಾಗಿದ್ದ ಕಾಲದಲ್ಲಿ ಈಶತ್ವ-ವಶಿತ್ವ-ಪ್ರಾಕಾಮ್ಯ ಮೊದಲಾದ ಸಿದ್ಧಿಗಳನ್ನು ಪಡೆದಿದ್ದೆ ಎಂಬುದನ್ನು ಬಲ್ಲೆ. ಬೇಕಿದ್ದರೆ ಅವುಗಳನ್ನು ಪುನಃ ಬರಿಸೋಣ. ನೀನು ಬಯಸಿದಂತಾಗುವೆ ... ಧರ್ಮರಾಜನಲ್ಲಿ ಬೇಡಿಕೊ ...

**ಮಾಂಡವ್ಯ :** ಮೃತ್ಯುದೇವ ! ಸುಮ್ಮನೆ ಕಾಲವಂಚನೆ ಮಾಡಬೇಡ. ನಿಮ್ಮ ಧರ್ಮರಾಜನ ಅಂಕೆಯನ್ನು ನಾನು ಒಪ್ಪಿಕೊಳ್ಳುವುದಿಲ್ಲ; ಅವನ ಸರ್ವಶಕ್ತತೆಯನ್ನು ಒಪ್ಪಿಕೊಳ್ಳುವುದಿಲ್ಲ. ಬ್ರಹ್ಮಲೋಕಪ್ರಯಾಣಿಕರಿಗೆ ಇದೊಂದು ವಿಶ್ರಮಸ್ಥಾನವೆಂದು ಇಲ್ಲಿಗೆ ಬಂದೆನಲ್ಲದೆ ವರವನ್ನು ಬೇಡುವ ಅಪೇಕ್ಷೆಯಿಂದಲ್ಲ. ಬ್ರಹ್ಮನು ಸೃಷ್ಟಿಯ ಪ್ರಭು; ಯಮನು ವಿನಾಶದ ಅಧಿಪತಿ. ಮೃತ್ಯುವಿನ ಕಡೆಯಿಂದ ಅಮೃತದ ಕಡೆಗೆ ಹೋಗುವುದಲ್ಲವೆ ಜೀವನದ ಪರಮ ಧ್ಯೇಯ ?

**ಕಾಲ :** ನಿನ್ನ ಪ್ರಯಾಣ ವ್ಯರ್ಥವಾಗಿ ತೋರುತ್ತದೆ.

**ಮಾಂಡವ್ಯ :** ಯಾರೆಂದರು ?

**ಕಾಲ :** ಇಷ್ಟು ಮಂದಿಯೂ ಹಾಗೆನ್ನುತ್ತಾರೆ. ಯಮಧರ್ಮನ ಆಸ್ಥಾನದಲ್ಲಿ ಕುಳಿತಿರುವ ಮಹಾ ವಿಭೂತಿಗಳನ್ನು ನೋಡು. ಇವರಲ್ಲಿ ಅನೇಕರು ಮಹಾಯೋಗಿಗಳು ; ಮಹಾ ತಪಸ್ವಿಗಳು ; ಹಲವರು ರಾಜಾಧಿರಾಜರು ; ಧರ್ಮಾತ್ಮರು; ಕೆಲವರಿಗೆ ಸಶರೀರ ಸ್ವರ್ಗಪ್ರಾಪ್ತಿಯಾಗಿದೆ ; ಕೆಲವರಿಗೆ ಅಶರೀರ ಸ್ವರ್ಗ ದೊರೆತಿದೆ. ಇಂದ್ರ-ಪಟ್ಟ ಕುಬೇರ-ಪಟ್ಟ ಮೊದಲಾದ ಅಧಿಕಾರಪದವಿಗಳನ್ನೇರಿ ಬೇಸತ್ತು ಬಿಟ್ಟು ಬಂದು ಧರ್ಮನ ಒಡ್ಡೋಲಗದಲ್ಲಿ ಕುಳಿತು ಬ್ರಹ್ಮದ ಕಡೆಗೆ ಎಂದು ಹೋಗುವೆವೊ, ತಮಗೆ ಎಂದು ಆ ಶುಭಕಾಲ ಬರುವುದೋ ಎಂದು ಸಮಯವನ್ನೂ ಧರ್ಮರಾಜನ ಅನುಜ್ಞೆಯನ್ನೂ ಕಾಯುತ್ತಿದ್ದಾರೆ. ಅವರೂ ನಿನ್ನಂತೆಯೆ ಇಲ್ಲಿ ಬಂದವರೆಂಬುದನ್ನು ಮರೆಯಬೇಡ.

**ಮಾಂಡವ್ಯ :** ನನ್ನ ಘೋಷ "ಅಹಂಬ್ರಹ್ಮಾಸ್ಮಿ . . . ." ದೇವ ಪದವಿಯನ್ನು ಒಂದು ಪದವಿಯೆಂದು ಸಹ ಭಾವಿಸಿದಾತ ನಾನಲ್ಲ. ಸ್ವರ್ಗನರಕಗಳನ್ನು ಎಡಗಾಲಿನಿಂದ ಒದೆಯುತ್ತೇನೆ ಮೃತ್ಯುದೇವ . . .

**ಮೃತ್ಯು :** ಇದು ಬರಿಯ ಅಹಂಕಾರ.

**ಮಾಂಡವ್ಯ :** ನನ್ನ 'ಅಹಂ' ಬ್ರಹ್ಮನನ್ನೆ ಅಪ್ಪಿ ಹಿಡಿದಿದೆ.

**ಕಾಲ :** ಇದು ಬಾಯ್ಬಡಿಕತನ.

**ಮಾಂಡವ್ಯ :** ನಿಮ್ಮೊಡನೆ ನನಗೆ ವಾಗ್ವಾದ ಬೇಕಾಗಿಲ್ಲ. ಧರ್ಮನನ್ನು ಕಂಡು ಮುಂದೆ ಪ್ರಯಾಣ ಬೆಳೆಸುವೆನು.

ಧರ್ಮ : ಮಾಂಡವ್ಯ ಮಹಾಯೋಗಿ ... ನೀನು ಧರ್ಮನ ಮುಂದೆಯೆ ನಿಂತಿ ರುವೆ.

**ಮಾಂಡವ್ಯ** : ಹಾಗಿದ್ದರೆ ಚೆನ್ನಾಯಿತು. ಭೂಲೋಕದಿಂದ ಇಲ್ಲಿಗೆ ಬಂದು ಬಹಳ ದಿನಗಳಾದುವು. ಮುಂದೆ ಸಾಗಬೇಕಾಗಿದೆ.

**ಧರ್ಮ** : ಅದನ್ನು ತಿಳಿದೆ ಇಲ್ಲಿಗೆ ಬರಮಾಡಿರುವೆನು. ನೀನು ಈ ರಾಜ್ ಬಂದುದು ನನಗೆ ಅಗೋಚರವಾಗಿಯೆಂದು ಭಾವಿಸಿದೆಯಾ ?

**ಮಾಂಡವ್ಯ** : ಹೇಗೂ ಭಾವಿಸಿರಬಹುದು. ಈಗ ನನ್ನನ್ನು ಹೋಗ ಬಿಡು. ನನಗೆ ಬೇಕಾದುದು ಅಷ್ಟೆ.

**ಧರ್ಮ** : ಧರ್ಮಸಾಕ್ಷಾತ್ಕಾರವಾದ ಮೇಲಲ್ಲವೇ ಬ್ರಹ್ಮಸಾಕ್ಷಾತ್ಕಾರ ? ನೀನಿನ್ನೂ ನನ್ನನ್ನು ಚೆನ್ನಾಗಿ ತಿಳಿದುಕೊಳ್ಳಲಿಲ್ಲ.

**ಮಾಂಡವ್ಯ** : ನೀನು ಪ್ರೇತರಾಜ ನಿನ್ನ ರಾಜ್ಯದಲ್ಲಿರುವುದು ನರಕ. ಜೀವ ಶಕ್ತಿಯು ನಿನ್ನದಲ್ಲ ; ಪ್ರೇತಶಕ್ತಿಯು ನಿನ್ನದು ; ಅದನ್ನು ಚೆನ್ನಾಗಿ ಬಲ್ಲೆ.

**ಧರ್ಮ** : ನಾನು ಸಮದರ್ಶಿ. ಕರ್ಮಕ್ಕೆ ತಕ್ಕ ಫಲ ಕೊಡುವುದು ನನ್ನ ಕರ್ತವ್ಯ. ಲೋಕದಲ್ಲಿ ದುಷ್ಕರ್ಮಿಗಳ ಸಂಖ್ಯೆ ಅಗಣಿತವಾದುದರಿಂದ ನರಕಬಿಲ ಗಳು ಯಾವಾಗಲೂ ತುಂಬಿಕೊಂಡೆ ಇವೆ. ಸತ್ಕರ್ಮಿಗಳು ಅಲ್ಪಸಂಖ್ಯರು. ಅವರಿಗೆ ಸ್ವರ್ಗದಲ್ಲಿ ಪ್ರತ್ಯೇಕ ವಸತಿಯಿದೆ. ಸ್ವರ್ಗದಲ್ಲಿರುವುದು ಅಮರಜೀವನ ; ಅದಕ್ಕೂ ನನ್ನ ಆಶ್ರಯ ಬೇಕೇಬೇಕು.

**ಮಾಂಡವ್ಯ** : ವರ್ಷಗಟ್ಟಳೆ ಶೂಲದ ಮೊನೆಯ ಮೇಲೆ ಕುಳಿತು ಸಮಾಧಿ ಮಗ್ನನಾಗಿದ್ದೆ. ಎಲ್ಲ ಕರ್ಮಗಳೂ ಯೋಗಾಗ್ನಿಯಲ್ಲಿ ಸುಟ್ಟು ಭಸ್ಮವಾಗಿರುವುದ ರಿಂದ ನಿನ್ನ ನಿಯಮ-ಸಮ್ಮತಿಗಳಿಗೆ ನಾನೇಕೆ ಒಳಗಾಗಬೇಕು ?

**ಧರ್ಮ** : ಆಗಬೇಕು ಮಾಂಡವ್ಯ ; ಆಗಲೆಬೇಕು. ಭೂಲೋಕದ ಸುಕೃತ-ದುಷ್ಕೃತಕ್ಕೂ ಇಲ್ಲಿಯದಕ್ಕೂ ಬಹಳ ವ್ಯತ್ಯಾಸವುಂಟಲ್ಲ ? ನಿನ್ನಲ್ಲಿ ಅತ್ಯಲ್ಪ ಕ್ರೂರ ವಾಸನೆಗಳು ಅಂಟಿಕೊಂಡಿವೆ ; ಬಹಳ ಇಲ್ಲ.

**ಮಾಂಡವ್ಯ** : ಸುಳ್ಳು ಧರ್ಮದೇವ ! ಇದು ಶುದ್ಧ ಸುಳ್ಳು !

**ಧರ್ಮ** : ಆದುದರಿಂದಲೆ ನಿನ್ನ ಯಾತ್ರೆಗೆ ಭಂಗ ಬಂದಿರುವುದು.

**ಮಾಂಡವ್ಯ** : ಎಂದರೆ, ನನ್ನನ್ನು ಹೋಗಬಿಡದೆ ಈ ವಿಶಾಲ ಕಾರಾಗ್ರಹದಲ್ಲಿ ಕಟ್ಟಿಹಾಕುವೆಯಾ ? ಅದು ಸಾಧ್ಯವಲ್ಲ.

**ಧರ್ಮ** : ಬಿಡುವುದೂ ಬಿಡದಿರುವುದೂ ನಾನಲ್ಲ. ನಿನ್ನ ಕರ್ಮ, ಅಥವಾ ಯಾವ ಒಂದು ಪರಮೇಚ್ಛೆಗೆ ಅಧೀನವಾಗಿ ಸಕಲ ಚರಾಚರಗಳು ಇರಬೇಕಾದ ರೀತಿ ಯಲ್ಲಿ ಇವೆಯೋ ಅದು ನಿನ್ನನ್ನು ತಡೆದಿದೆ !

**ಮಾಂಡವ್ಯ** : ಅರ್ಥವಿಲ್ಲದ ಮಾತು ! ಇದನ್ನು ನಂಬಿ ಇಲ್ಲಿ ಕುಳಿತುಕೊಳ್ಳುವ ಹಾಗಿಲ್ಲ.

ಧರ್ಮ : ನಿನ್ನ ಪೂರ್ವಸಂಚಿತ ಕರ್ಮಸರಣಿಯನ್ನು ನೋಡು ... ಇಲ್ಲಿ ನಿಂತರೆ ಎಲ್ಲವೂ ಕಾಣಿಸುತ್ತದೆ. ನೋಡಿದಿಯೊ ...

ಮಾಂಡವ್ಯ : ನೋಡುವುದಕ್ಕೇನಿದೆ ? ಮನುಷ್ಯಲೋಕದಲ್ಲಿ ಹುಟ್ಟಿ ಹನ್ನೆರಡು ವರ್ಷಗಳವರಗೆ ಮಾತ್ರ ನಾನು ಬಾಲಭಾವದ ಸುಖವನ್ನು ಅನುಭವಿಸಿದ್ದೆ. ಅನಂತರ ಶರೀರಪಾತವಾಗುವ ವರೆಗೂ ಒಂದೇ ಒಂದು ಸಾಧನೆ — ಬ್ರಹ್ಮಸಾಕ್ಷಾತ್ಕಾರ ಸಾಧನೆ — ಮಾತ್ರ ಇದ್ದಿತು. ಭೂತಕಾಲವು ಕಣ್ಣಮುಂದೆ ತೆರೆದಿಟ್ಟ ಪುಸ್ತಕದಂತೆ ಕಾಣಿಸುತ್ತದೆ ಧರ್ಮದೇವ !

ಧರ್ಮ : ಹಾಗಿದ್ದರೆ ಚೆನ್ನಾಯಿತು. ಯೋಗಸಾಧನೆಯು ಕಾಲವನ್ನು ಗಣನೆಯಿಂದ ಬಿಟ್ಟುಬಿಡು. ಅದರ ಬಲದಿಂದಲೇ ನೀನು ಇಲ್ಲಿಯವರೆಗೆ ಬಂದೆ. ತತ್ಪೂರ್ವದ ಕರ್ಮಬಂಧಗಳು ನಿನ್ನ ದಾರಿಯನ್ನು ಈಗ ತಡೆಯುತ್ತಿವೆ.

ಮಾಂಡವ್ಯ : ಆಗ ಚಿಕ್ಕ ಹುಡುಗನಾಗಿದ್ದೆ. ತಾಯಿತಂದೆಗಳನ್ನು ಬಿಟ್ಟು ಅಗಲಿದವನಲ್ಲ . . ಸ್ವತಂತ್ರವಾದ ಕರ್ಮಪ್ರವೃತ್ತಿಯೂ ಇರಲಿಲ್ಲ . .

ಧರ್ಮ : ಅದೇನೋ ನಿಜ. ಆದರೆ ಆಗ ನಿನ್ನ ಮನಸ್ಸಿಗೆ ಎಂತಹ ಹಿಂಸಾಬುದ್ಧಿ ಅಂಟಿಕೊಂಡಿತ್ತು, ನೋಡು.

ಮಾಂಡವ್ಯ : ಏನೂ ಕಾಣಿಸುವುದಿಲ್ಲವಲ್ಲ . .

ಧರ್ಮ : ಇನ್ನೊಮ್ಮೆ ದಿವ್ಯದೃಷ್ಟಿಯಿಂದ ನೋಡು . . . ನಿನ್ನ ಆಯುಸ್ಸಿನ ಮೊದಲ ಹಂತದಲ್ಲಿ ಏನು ತೋರುತ್ತಿದೆ ?

ಮಾಂಡವ್ಯ : ಒಂದು ಹರುಕು ಗುಡಿಸಲು. ಅದರೊಳಗೆ ಬಡಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದೆ . .

ಧರ್ಮ : ಮತ್ತೇನು ?

ಮಾಂಡವ್ಯ : ತಾಯಿ ತಂದೆ !

ಧರ್ಮ : ಹುಂ. ಇಷ್ಟು ಮಾತ್ರವೆ ?

ಮಾಂಡವ್ಯ : ಮಾತೃದೇವೋ ಭವ ! ಪಿತೃದೇವೋ ಭವ ! ಎನ್ನುವ ಉಪನಿಷದ್ವಾಕ್ಯದಂತೆ... ಪ್ರತಿ ದಿನ ಪ್ರಾತಃಕಾಲ ತಾಯಿ-ತಂದೆಗಳ ಪಾದಕ್ಕೆ ಅಡ್ಡಬಿದ್ದು ಆಶೀರ್ವಾದ ಪಡೆಯುವ ಆ ಮುದ್ದು ಮಗು ಮಾಂಡವ್ಯನ ಪುಣ್ಯಸಂಚಯವನ್ನು ಕಂಡು ಸಂತೋಷವಾಗುವುದಿಲ್ಲವೆ ಪ್ರೇತರಾಜ ?

ಧರ್ಮ : ಬಹಳ ಸಂತೋಷ. ಆದರೆ ಮನೆಯ ಮುಂದೆ ಏನಾಗುತ್ತಿದೆ ಕಾಣಿಸದೊ ?

ಮಾಂಡವ್ಯ : ಅಲ್ಲೊಂದು ಅರಳಿಕಟ್ಟೆಯಿದೆ.

ಧರ್ಮ : ಅಲ್ಲಿ ಯಾರು ಕುಳಿತಿದ್ದಾರೆ ?

ಮಾಂಡವ್ಯ : ಬಾಲನಾದ ಮಾಂಡವ್ಯ.

ಧರ್ಮ : ಏನು ಮಾಡುತ್ತಿದ್ದಾನೆ ?

**ಮಾಂಡವ್ಯ :** ಮುಗ್ಧಭಾವದ ಆಟಗಳನ್ನು ಆಡುತ್ತಿದ್ದಾನೆ.

**ಧರ್ಮ :** (ನಗುತ್ತಾ) ಎಂಥ ಆಟಗಳೊ . . !

**ಮಾಂಡವ್ಯ :** ಕೆಲವು ಪತಂಗಗಳಿವೆ . .

**ಧರ್ಮ :** ಅವುಗಳನ್ನೇನು ಮುದ್ದಾಡುತ್ತಿರುವನೊ ...

**ಮಾಂಡವ್ಯ :** ಮೈಯ ಮೇಲೆ ಬೀಳುವ ಪತಂಗಗಳನ್ನು ಎಂದಾದರೂ ಮುದ್ದಾಡುವುದುಂಟೆ ಧರ್ಮದೇವ ? ಎಲ್ಲ ಮಕ್ಕಳೂ ಮಾಡುವಂತೆ ಅವುಗಳನ್ನು ಓಡಿಸುತ್ತಿದ್ದಾನೆ.

**ಧರ್ಮ :** ಬುದ್ಧಿ ಹೇಳಿ ಓಡಿಸುತ್ತಿರುವನೊ ...

**ಮಾಂಡವ್ಯ :** (ನಗುತ್ತಾ) ವಿಚಿತ್ರ ಪ್ರಶ್ನೆಗಳನ್ನು ಹಾಕುತ್ತಿರುವೆ. ಹುಲ್ಲುಕಡ್ಡಿ ಮೊನೆಯಿಂದ ಇರಿದು ಓಡಿಸುತ್ತಿರುವನು.

**ಧರ್ಮ :** ಅವುಗಳಿಗೆ ನೋವಾಗಿರಬಹುದೆ ?

**ಮಾಂಡವ್ಯ :** ಈ ಕ್ಷುದ್ರ ಕೀಟಗಳಿಗೆ ಏನು ನೋವೊ ... ಏನು ನಲವೊ ಯಾರು ಬಲ್ಲರು ? ಇದೂ ಒಂದು ಪ್ರಶ್ನೆಯೆ ?

**ಧರ್ಮ :** ಈ ಕೀಟಗಳಲ್ಲಿ ಪ್ರತಿಯೊಂದರಲ್ಲಿಯೂ ಬ್ರಹ್ಮದ ಒಂದಂಶ ಇಲ್ಲವೆ ?

**ಮಾಂಡವ್ಯ :** ಈ ಕೀಟಗಳಲ್ಲಿ ಸಹ ಪರಬ್ರಹ್ಮನಿರುತ್ತಿದ್ದರೆ ನಾನು ಅಲ್ಲಿಯೇ ಇದ್ದು ಬ್ರಹ್ಮವನ್ನು ಕಾಣುತ್ತಿದ್ದೆನಲ್ಲವೆ ?

**ಧರ್ಮ :** ಕಾಣಬಹುದಾಗಿತ್ತು. ನಿನಗೆ ಆ ಬುದ್ಧಿಯಿರಲಿಲ್ಲ.

**ಮಾಂಡವ್ಯ ;** ಧರ್ಮದೇವ ! ತಿಳಿದು ಮಾತಾಡು. ಪ್ರತಿಯೊಂದು ನೊಣವು ಸಹ ಬ್ರಹ್ಮವಾದರೆ ಬ್ರಹ್ಮಗಳ ಸಂಖ್ಯೆ ಎಷ್ಟಾಯಿತೊ ?

**ಧರ್ಮ :** ಇರುವ ಒಂದೇ ಒಂದು ವಸ್ತು ಹಲರೂಪಗಳಲ್ಲಿ ಕಾಣಿಸಿಕೊಳ್ಳುತ್ತದೆ; ಅಷ್ಟೆ !

**ಮಾಂಡವ್ಯ :** ಅಹಂಬ್ರಹ್ಮಾಸ್ಮಿ ಎಂದು ನಿಮಿಷ ನಿಮಿಷ ಸ್ಮರಿಸುತ್ತೇನೆ ... ನೀನು ಹೇಳಿದಂತೆ ಒಂದು ವೇಳೆ ಆ ಕೀಟಗಳು ಸಹ ಬ್ರಹ್ಮಾಂಶವಾಗಿದ್ದರೆ... ಅವು ನಾನು ಘೋಷಿಸುತ್ತಿರುವ ಪರಬ್ರಹ್ಮನೊಳಗೇ ಅಡಗಿರಬೇಕಲ್ಲವೆ ?

**ಧರ್ಮ :** ಅಡಗಿವೆ ; ಸಂದೇಹವೇನು ? ಆದರೆ ನೀನು ಅಹಂಬ್ರಹ್ಮಾಸ್ಮಿ ಎಂದು ಭಾವಿಸಿದೆಯಲ್ಲದೆ ಅಹಂ ಕೀಟೋಽಸ್ಮಿ ಎಂದು ಒಂದು ಬಾರಿಯಾದರೂ ಭಾವಿಸಲಿಲ್ಲ ...

**ಮಾಂಡವ್ಯ :** " ಕೀಟೋಽಸ್ಮಿ " ಎಂದು ಭಾವಿಸಬೇಕಾಗಿತ್ತು ?

**ಧರ್ಮ :** ಹಾಗೆ ಎಣಿಸದೆ ಆ ಕೀಟಗಳನ್ನು ಹಿಂಸಿಸಿ ಓಡಿಸಿದುದರಿಂದ ಕೀಟಗಳಲ್ಲಿದ್ದ ಬ್ರಹ್ಮಾಂಶವನ್ನು ನಿರಾಕರಿಸಿದಂತಾಯಿತೆ ? ಇಲ್ಲವೆ ?

**ಮಾಂಡವ್ಯ :** ಧರ್ಮದೇವ ! ಏನು ಹೇಳುತ್ತಿರುವೆ ?.

**ಧರ್ಮ:** ಶುದ್ಧ ಸತ್ಯವನ್ನು ...

**ಮಾಂಡವ್ಯ** : ಹಾಗಿದ್ದರೆ ನಾನು ಇಲ್ಲಿಯ ವರೆಗೆ ಬಂದುದು, ಇದುವರೆಗೆ ಮಾಡಿದ ದೇಹದಂಡನೆ, ದೀರ್ಘ ತಪಸ್ಸು, ನಿರ್ಬೀಜ ಸಮಾಧಿ, ಇದೆಲ್ಲ ವ್ಯರ್ಥವೆಂದು ನಿನ್ನ ಅಭಿಪ್ರಾಯವೆ ?

**ಧರ್ಮ** : ಹೇಗೆ ವ್ಯರ್ಥವಾದೀತು ? ಲೋಕಪಾಲಕನಾಗುವ ಅಧಿಕಾರ ನಿನಗೂ ದೊರಕಿದೆ — ನಿನ್ನ ಯೋಗಬಲದಿಂದ ... ಘೋರ ತಪಸ್ಸಿನಿಂದ ಬಲ್ಲು. ಮಟ್ಟಿಗೆ ಪಾಪಕ್ಷಯ ಮಾಡಿಕೊಳ್ಳದಿರುತ್ತಿದ್ದರೆ ಇಂದು ನೀನು ಈ ನರಕ ಕೂಪಗಳಲ್ಲಿ ಬಿದ್ದು ನರಳುತ್ತಿದ್ದೆ. ಆ ಸಂಭವ ತಪ್ಪಿತೆ ? ಇಲ್ಲವೆ ?

**ಮಾಂಡವ್ಯ** : ಅದರಿಂದೇನಾಯಿತು ?

**ಧರ್ಮ** : ದೇವನಾದೆ ...

**ಮಾಂಡವ್ಯ** : ದೇವರು ಹಲವರಿರುವರು. ಬ್ರಹ್ಮ ಒಬ್ಬನೆ. ನಾನು ಹಲವರಲ್ಲಿ ಒಬ್ಬನು ಮಾತ್ರ ! ಒಬ್ಬನೆ ಒಬ್ಬನಲ್ಲ ...

**ಧರ್ಮ** : ದೇವತ್ವದಿಂದ ನಿನಗೆ ಆಗುವ ಪ್ರಾಪ್ತಿಯೇನೆಂದು ಬಲ್ಲೆಯಾ ?

**ಮಾಂಡವ್ಯ** : ಏನು ?

**ಧರ್ಮ** : ಶಾಪಾನುಗ್ರಹ ಸಾಮರ್ಥ್ಯ ...

**ಮಾಂಡವ್ಯ** : ಶಾಪ ಕೊಡುವುದು ಹಿಂಸೆಯಲ್ಲವೆ? ಒಂದು ಕೀಟವನ್ನು ಹಿಂಸಿಸಿದುದರಿಂದ ಬ್ರಹ್ಮವು ಕೈತಪ್ಪಿ ಹೋಯಿತೆಂದು ನೀನು ಹೇಳುವುದು ಸತ್ಯವಾದರೆ ಜೀವಗಳಿಗೆ ಶಾಪ ಕೊಟ್ಟರೆ ಏನಾಗದು ?

**ಧರ್ಮ**: ಶಾಪ ಕೊಡುವ ಸಾಮರ್ಥ್ಯವು ಸಹ ಧರ್ಮನಿಯಮದಿಂದಲೆ ದೊರಕುತ್ತದೆ.

**ಮಾಂಡವ್ಯ** : ಹಾಗಿದ್ದರೆ ಶಾಪ ಕೊಡುವುದರಲ್ಲಿ ಪಾಪವೇನೂ ಇಲ್ಲ!

**ಧರ್ಮ**: ಶಾಪವನ್ನು ಬರಿಸಿಕೊಳ್ಳುವುದು ಪೂರ್ವಾರ್ಜಿತ ಕರ್ಮ ...

**ಮಾಂಡವ್ಯ**: ನೀನು ನನಗೆ — ನಾನು ನಿನಗೆ ಶಾಪವನ್ನು ಕೊಟ್ಟುಕೊಂಡರೆ ಏನಾದೀತು ?

**ಧರ್ಮ**: ಒಂದು ತೆರೆ ಇನ್ನೊಂದನ್ನು ಎಬ್ಬಿಸಿ ಎರಡೂ ಕುಣಿದ ಹಾಗಾದೀತು !

**ಮಾಂಡವ್ಯ** : ಹಾಗಾದರೆ ಪ್ರೇತರಾಜ... ಈ ದಿನ ನನ್ನ ಕೈಯಲ್ಲಿ ಸಿಕ್ಕಿಬಿದ್ದೆ ...

**ಧರ್ಮ** : ಕಾರಣವೇನು ?

**ಮಾಂಡವ್ಯ** : ಅದನ್ನು ಹೇಳುತ್ತೇನೆ ಕೇಳು .. ನನ್ನ ಗುರಿಯನ್ನಂತೂ ಹೊಂದಲಾಗಲಿಲ್ಲ. ಅದನ್ನು ನೀವು ತಡೆದಿರಿ ... ಈಗ ಇರುವ ಸ್ಥಾನದಲ್ಲಿಯೆ ಇದ್ದು ಸಾಧಿಸಿ ಪರಮ ಸಾಧ್ಯವಾದುದೇನೋ ಅದನ್ನು ಬೇಗನೆ ಪಡೆಯುವೆನು. ಅದಕ್ಕಿಂತ ಮುಂಚೆ ಕರ್ಮಾಕರ್ಮಗಳ ನೀತಿಯನ್ನು ಒಂದಿಷ್ಟು ನಿಯಂತ್ರಿಸಬೇಕಾಗಿದೆ ... ಎಂದರೆ ನಿನ್ನನ್ನೆ ತಿದ್ದಬೇಕಾಗಿದೆ. ಒಂದು ಕೀಟಕ್ಕೆ ಅಲ್ಪ — ಅತ್ಯಲ್ಪ ಹಿಂಸೆಯನ್ನು ಕೊಟ್ಟುದು ಮಹಾಪಾಪವೆಂದು ಹೇಳುವ ನೀನು ನಿಮಿಷ ನಿಮಿಷ ಅಸಂಖ್ಯ

ಪ್ರಾಣಿಕೋಟಿಗಳನ್ನು — ಪಾಶದಲ್ಲಿ ಹಿಡಿದು ವಧಿಸುತ್ತಿರುವೆಯಲ್ಲವೆ ?

**ಧರ್ಮ :** ಬ್ರಹ್ಮಾಂಡದ ಸುವ್ಯವಸ್ಥೆಗಾಗಿ !

**ಮಾಂಡವ್ಯ :** ಅದನ್ನೆ ನಾನೂ ಹೇಳುತ್ತಿದ್ದೇನೆ – ಬ್ರಹ್ಮಾಂಡ ವ್ಯವಸ್ಥೆಯನ್ನು ! ಮಾನವ-ಗುಣ-ದೋಷಗಳ ತಾರತಮ್ಯವನ್ನು ತಿಳಿಯದವರಿಂದ ಯಾವ ವ್ಯವ. ಸ್ಥೆಯೂ ಚನ್ನಾಗಿ ನಡೆಯುವ ಹಾಗಿಲ್ಲ. ಲೋಕನಿಯಂತ್ರಗಳಿಗೆ ಮಾನವೀಯತೆಯ ಪರಿಜ್ಞಾನವಿರಲೇಬೇಕು. ಪ್ರೇತರಾಜ ! ಯಮಧರ್ಮ ! ಸಿದ್ಧನಾಗು... ಸಿದ್ಧನಾಗು ... ನಿನ್ನ ಪರೀಕ್ಷಾಕಾಲ ಬಂದಿದೆ.

**ಧರ್ಮ:** ಸಿದ್ಧನಾಗಿಯೇ ಇರುವೆನು.

**ಮಾಂಡವ್ಯ:** ನನ್ನ ಮಾತು ಸಿಡಿಲಾಗುವುದು ; ಮಿಂಚಾಗುವುದು ; ಭೂ. ಕಂಪವಾಗುವುದು ; ಧೂಮಕೇತುವಾಗುವುದು ; ಪ್ರಳಯಕಾಲದ ಉಲ್ಕೆಯಾಗು ವುದು. ನಿನ್ನನ್ನು ಹೊಡೆದು ಮರ್ತ್ಯಭೂಮಿಗೆ ಉರುಳಿಸುವುದು ; ಮನುಷ್ಯಜನ್ಮಕ್ಕೆ ತಳ್ಳುವುದು... ಮಾನವನಾಗಿ ಹುಟ್ಟಿ ಮನುಷ್ಯ-ಬುದ್ಧಿ-ಸಂಸ್ಕಾರಗಳನ್ನು ಅಭ್ಯಾಸಿಸಿ ಮತ್ತೆ ನೀನು ಧರ್ಮಪೀಠವನ್ನೇರುವೆ !

**ಧರ್ಮ:** ಮಹಾಯೋಗಿ ! ನಿನ್ನ ಮಾತು ಫಲಿಸುವುದು ...

**ಮಾಂಡವ್ಯ:** ಸಿಡಿಲುಗಳೆ ! ಮಿಂಚುಗಳೆ ! ಧೂಮಕೇತುಗಳೆ ... ಹೊಡೆ ಯಿರಿ ... ಹೊಡೆಯಿರಿ ... ನನ್ನ ಶಾಪವಿದೆ ... ಈ ಧರ್ಮದೇವತೆ ಮನುಷ್ಯಕೀಟ ವಾಗಿ ಹುಟ್ಟಲೇಬೇಕು. (ಸಿಡಿಲು, ಮಿಂಚು, ಗುಡುಗುಗಳ ಶಬ್ದ)

**ಧರ್ಮ:** ಮಾಂಡವ್ಯ ! ಅಹಂಕಾರದಿಂದ ಆರ್ಭಟಿಸಬೇಡ. ಅದು ನಿರ್ಬೀಜ ವಾಗಿ ಸುಟ್ಟು ಹೋಗುತ್ತಿದ್ದರೆ ನೀನು ಇಷ್ಟರಲ್ಲಿಯೆ ಬ್ರಹ್ಮನಿರ್ವಾಣವನ್ನು ಹೊಂದು ತ್ತಿದ್ದೆ ...

**ಮಾಂಡವ್ಯ:** ನನ್ನ ಅವಸ್ಥೆ ಹೀಗಾಯಿತು. ನಿನ್ನದಕ್ಕೆ ಏನೆನ್ನುವೆ ?

**ಧರ್ಮ:** ದ್ವಾಪರ ಹೋಗಿ ಕಲಿಯುಗವು ಬೇಗನೇ ಪ್ರವೇಶಿಸಲಿದೆ. ಯುಗ ಪರಿವರ್ತನವಾಗುವ ಕಾಲಕ್ಕೆ ಮಾನವಮತ್ಸರ, ಸ್ವಾರ್ಥ, ಯುದ್ಧ, ವಿಪ್ಲವ, ಧರ್ಮ ಸಂಕರ ಇತ್ಯಾದಿ ಸಕಲ ಸಂಕಟಗಳಿಂದ ಜೀವನವು ತೊಂಡುತೊಳಸಾಗುವುದು ; ಆಗಲೇಬೇಕು ; ಪಾಂಡುಪುತ್ರರ ಜನನಕ್ಕೆ ಹೆಚ್ಚು ತಡವಿಲ್ಲ. ಪಾಪದ ಪ್ರತೀಕ ಗಳ ದುರ್ಯೋಧನಾದಿಗಳು ಪಾಂಡುಪುತ್ರರನ್ನು ಅಭಿಯೋಗಿಸುವಾಗ ಭೂಮಿಯ ಮೇಲೆ ವೈತರಣಿ ಹರಿಯಲಿದೆ. ಆಗ ಧರ್ಮಾಧರ್ಮಗಳನ್ನು ತುಲನೆ ಮಾಡಿ ತೋರಿಸುವ ಒಬ್ಬ ಸಮದರ್ಶಿ ಇಲ್ಲದಿದ್ದರೆ ಭೂಮಿ ಅಡಿಮೇಲಾಗುವುದಲ್ಲವೆ ? ಹಾಗೆ ಆಗದಂತೆ ನೋಡಿಕೊಳ್ಳುವುದು ಸಹ ನನ್ನ ಅಧಿಕಾರಕ್ಕೆ ಒಳಪಟ್ಟವಿಷಯ ... ಖಂಡಿತವಾಗಿಯೂ ವಿದುರನಾಗಿ ಹುಟ್ಟುತ್ತೇನೆ ಮಾಂಡವ್ಯ ! ನಿನ್ನ ಶಾಪವು ತೊದಲಾಗದು. ಶಾಪ ಕೊಡುವ ಅಧಿಕಾರ ನಿನಗಿದೆ ; ಒಪ್ಪಿಕೊಂಡೆ.

**ಮಾಂಡವ್ಯ :** ಧರ್ಮಪ್ರಭು ! ಏನಿದು ? ನನ್ನ ಶಾಪವನ್ನೂ ಸಂತೋಷದಿಂದ

ಅಂಗೀಕರಿಸಿರುವೆ !

**ಧರ್ಮ**: ನಾನು ಅಂಗೀಕರಿಸಲೂ ಇಲ್ಲ ; ತಿರಸ್ಕರಿಸಲೂ ಇಲ್ಲ. ವಿಶ್ವನಿಯಾ. ಮಕನ ಸಂಕೇತದಂತೆ ಎಲ್ಲವೂ ನಡೆಯುತ್ತಿದೆ ; ಅದನ್ನು ನೀನು ತಿಳಿದಿಲ್ಲ ; ನಾನು ತಿಳಿದಿದ್ದೇನೆ.

**ಮಾಂಡವ್ಯ**: ಯಮರಾಜ ! ಇದುವರೆಗೆ ತಿಳಿದಿರಲಿಲ್ಲ ; ಈಗ ತಾನೆ ಅರಿಕೆ.

**ಧರ್ಮ**: ಹಾಗಿದ್ದರೆ ಬ್ರಹ್ಮಸಾಕ್ಷಾತ್ಕಾರವು ನಿನ್ನದಾಗುವುದು.

**ಮಾಂಡವ್ಯ**: ಎಂದು ?

**ಧರ್ಮ**: ಈ ನಿಮಿಷದಲ್ಲಿ !

**ಮಾಂಡವ್ಯ**: ಎಲ್ಲಿ ?

**ಧರ್ಮ**: ನಿನ್ನ ಸಾತ್ವಿಕಾಹಂಕಾರದಲ್ಲಿ !

**ಮಾಂಡವ್ಯ**: ಕಾಲದೇವ ! ಮೃತ್ಯುದೇವ ! ಧರ್ಮರಾಜ ! ನನ್ನ ಅಹಂಕಾರ. ವೀಗ ಸಾತ್ವಿಕವಾಗಿದೆಯೆ ? ಇಲ್ಲವೆ ? ನೀವೇ ಹೇಳಿ ...

**ಧರ್ಮ**: ಆಗಿದೆ ಮಾಂಡವ್ಯ ! ಇದಕ್ಕೆ ಸಂದೇಹವೇ ಇಲ್ಲ.

**ಮಾಂಡವ್ಯ**: ಹಾಗಿದ್ದರೆ ನಾನೆ ಧನ್ಯನು ! ಸರ್ವಂ ಖಲ್ವಿದಂ ಬ್ರಹ್ಮ ! ಸರ್ವವೂ ಬ್ರಹ್ಮ !

[ " ಮಾಂಡವ್ಯನಿಗೆ ಜಯವಾಗಲಿ ! ಮಾಂಡವ್ಯನಿಗೆ ಜಯವಾಗಲಿ ! " ಎಂದು ನರಕವಾಸಿಗಳ ಕೂಗು ಕೇಳಿಸುವುದು. ]

**ತೆರೆ ಬೀಳುವುದು**

# ಖುಷಿ - ಮೋಹಿನೀ

( ಏಕಾಂಕ ದೃಶ್ಯ

## ಪಾತ್ರವಿವರ

೧. **ಜೈಮಿನಿ ಮಹರ್ಷಿ :** ತೇಜಸ್ವಿ. ದುಂಡು ದೇಹ. ದೊಡ್ಡ ಬೊಜ್ಜು ಹೊಟ್ಟೆ. ಅಗಲವಾದ ಮುಖ. ಅಗಲವಾದ ಕಣ್ಣು. ಬಣ್ಣ ಮಾಸಲು-ಕೆಂಪು. ನೀಳವಾದ ಬಿಳಿಯ ಗಡ್ಡ, ಬಿಳಿಯ ಮೀಸೆ, ಬಿಳಿಯ ಜಟೆ. ಹಣೆ, ಎದೆ, ಮತ್ತು ತೋಳುಗಳ ಮೇಲೆ ವಿಭೂತಿಯ ಪಟ್ಟೆಗಳು. ಶುಭ್ರವಾದ ಯಜ್ಞೋಪವೀತ. ಕತ್ತಿನಲ್ಲಿ ಭಂಗಾರದ ಕಟ್ಟುಳ್ಳ ರುದ್ರಾಕ್ಷಿಯ ಸರ. ಜರತಾರಿಯ ಅಂಚುಳ್ಳ ಕೆಂಪು ಬಣ್ಣದ ಮಗುಟವನ್ನು ಕಚ್ಚೆಹಾಕಿ ಅಂದವಾಗಿ ಉಟ್ಟಿರುವವರು. ಜರತಾರಿಯ ಅಂಚಿನ ನಿಂಬಾವಳಿ ಮಗುಟದ ಮಡಿಯ ಉತ್ತರೀಯ.

೨. **ವಿವೇಕವರೇಣ್ಯ :** ಜೈಮಿನಿ ಮಹರ್ಷಿಯ ಮುಖ್ಯ ಶಿಷ್ಯ. ವಯಸ್ಸು ಸುಮಾರು ೨೫. ಒಳ್ಳೆಯ ಮೈಕಟ್ಟು. ಸ್ಫುರದ್ರೂಪಿ. ಬ್ರಹ್ಮಚರ್ಯದ ತೇಜಸ್ಸುಳ್ಳ ಮುಖ. ಗರ್ವಿಷ್ಠ. ಕರಿಯ ಜಟೆ. ಆದರೆ ಗಡ್ಡ, ಮೀಸೆಗಳಿಲ್ಲ. ವಿಭೂತಿ. ಶುಭ್ರವಾದ ಯಜ್ಞೋಪವೀತ. ಕತ್ತಿಗೆ ರುದ್ರಾಕ್ಷಿಯ ಸರ. ಕೆಂಪು ಅಂಚಿನ ಹೊಗೆಯ ಬಣ್ಣದ ಮಗುಟವನ್ನು ಕಚ್ಚೆಹಾಕಿ ಅಂದವಾಗಿ ಉಟ್ಟಿರುವವನು. ಜರತಾರಿಯ ಸಣ್ಣ ಅಂಚಿನ ಬಿಳಿಯ ಶಲ್ಯದ ಉತ್ತರೀಯ.

೩. **ಚಿರಂಜೀವಿ ;** ಜೈಮಿನಿಯಾಶ್ರಮದಲ್ಲಿ ಇನ್ನೊಬ್ಬ ಶಿಷ್ಯ. ವಯಸ್ಸು ೧೪. ಬುದ್ಧಿಶಾಲಿ. ಜಟೆ. ಶುಭ್ರವಾದ ಯಜ್ಞೋಪವೀತ. ಹಣೆಯಲ್ಲಿ ಗೋಪೀಚಂದನದ ಅರ್ಧಶೃಂಗ ತ್ರಿಕೋನ. ಕೈಮಗ್ಗದ ಚೌಕುಳಿ ಪಂಚೆಯನ್ನು ಸುತ್ತಿಕೊಂಡಿರುವನು. ಕಚ್ಚೆ ಇಲ್ಲ, ಕೌಪೀನವುಂಟು. ರೋಜಾ ಬಣ್ಣದ ರೇಷ್ಮೆಯ ವಲ್ಲಿಯನ್ನು ಹೊದೆದಿರುವನು.

೪. **ಋಷಿಮೋಹಿನೀ ;** ಸುಂದರ ಯುವತಿ. ವಯಸ್ಸು ೧೮. ದುಂಡಾದ ಬಿಳಿಯ ಮುಖ. ಅಗಲವಾದ ಕಣ್ಣು. ತುಂಬಿದ ದೇಹ. ಮಧುರವಾದ ಕಂಠ. ಗಾನ, ನೃತ್ಯಗಳಲ್ಲಿ ಪರಿಶ್ರಮವುಂಟು. ಕೂದಲನ್ನು ಅಂದವಾಗಿ ಬಾಚಿ, ಗಂಟಿಕ್ಕಿ, ಹೂ ಮುಡಿದಿರುವಳು. ಹಣೆಗೆ ಕುಂಕುಮದ ಅರ್ಧಚಂದ್ರ, ಬೆಂಡೋಲೆ, ಮೂಗುತಿ, ಹಾರ, ಬಳೆ. ಕಾಲಿಗೆ ಬೆಳ್ಳಿಯ ಜೈನು. ಬಳ್ಳಿವರಸೆಯ ಅಂಚುಳ್ಳ ತೆಳುವಾದ ಮೇಘವರ್ಣದ ಸೀರೆಯನ್ನು ಅಂದವಾಗಿ ಉಟ್ಟಿರುವಳು. ಕುಪ್ಪುಸದ ಬದಲು ಎದೆಗೆ ಬಳ್ಳಿಯ ಅಂಚಿನ ಪಾಚೀ ಬಣ್ಣದ ಬಟ್ಟೆಯ ಕಟ್ಟು. ಸೀರೆಯ ಸೆರಗು ಎಡಭುಜದ ಮೇಲೆ ಮತ್ತು ಬಲಭುಜದ ಕೆಳಗೆ ಹಾದು ಸೊಂಟಕ್ಕೆ ಸಿಕ್ಕಿಸಲ್ಪಟ್ಟಿರುವುದು. ಎಲೆ ಹಸುರು ಬಣ್ಣದ ತೆಳುವಾದ ಮೇಲ್ಮುಸುಕು—ಮಳೆಯಲ್ಲಿ ಸ್ವಲ್ಪ ತೊಯ್ದಿರುವುದು. ಕೈಯಲ್ಲಿ ಪಯಣದ ಚೀಲ ( ಬಟ್ಟೆಯದು )

## ಸ್ಥಳ

ಜೈಮಿನಿ ಮಹರ್ಷಿಗಳ ಆಶ್ರಮದಲ್ಲಿ ಲೇಖನ ಮಂದಿರ. ರಂಗರಚನೆಗಾಗಿ ಅದರ ನಕ್ಷೆಯನ್ನು ಇಲ್ಲಿ ಕೊಡಲಾಗಿದೆ.





ಹಿನ್ನೆಲೆಯಲ್ಲಿ ಗರಿಯ ತಡಿಕೆಯ ಗೋಡೆ. ಅ, ಇ-ಪ್ರವೇಶಗಳು (ಆಶ್ರಮದ ಒಳಕ್ಕೆ)

ಉ – ಪ್ರವೇಶ (ಆಶ್ರಮದ ಹೊರಕ್ಕೆ)

ಎ – ಕೋಣೆಯ ಬಾಗಿಲು. ಗರಿಯ ತಡಿಕೆಯ ಮುಚ್ಚಳಗಳನ್ನೂ, ಒಳಗೆ ಅಗಳಿಯನ್ನೂ ಉಳ್ಳದ್ದು. ಪ್ರಾರಂಭದಲ್ಲಿ ಬಾಗಿಲು ಅರೆ ತೆರೆದಿದೆ,

ಒ – ಕಿಟಕಿ. ಬಿದಿರಿನ ಕಂಬಿಗಳನ್ನೂ, ಗರಿಯ ತಡಿಕೆಯ ಮುಚ್ಚಳವನ್ನೂ ಉಳ್ಳದ್ದು. ಪ್ರಾರಂಭದಲ್ಲಿ ಬಾಗಿಲು ಮುಚ್ಚಿದೆ.

ಕ – ಜೈಮಿನಿ ಮಹರ್ಷಿಯ ದಿವ್ಯವಾದ ಪೀಠ. ಬೆನ್ನು ಎತ್ತರವಾಗಿರುವ ಮತ್ತು ಕೈಗಳುಳ್ಳ, ಕುರ್ಚಿಯ ಆಕಾರದ್ದು. ಕಿಂಕಾಬಿನ ಒರಗು-ದಿಂಬು ಹಾಕಿದೆ.

ಜ – ಒಂದು ಪೀಠ. ಸ್ಟೂಲಿನ ಆಕಾರದ್ದು.

ಟ– ದೊಡ್ಡ ಮೇಜು. ಶುಭ್ರವಾದ ವಸ್ತ್ರ ಹೊದಿಸಿದೆ. ಅದರ ಮೇಲೆ ತಾಳೆಯ ಗರಿಯ ಓಲೆಯ ದೊಡ್ಡ ಪುಸ್ತಕವೊಂದು ಅರೆತೆರೆದಿದೆ. ಪುಸ್ತಕದ ಪಕ್ಕದಲ್ಲಿ ಒಂದು ಘಂಟವಿದೆ — ಎಂದರೆ ಥಳಥಳಿಸುವ ಹಿತ್ತಾಳೆಯ ಲೇಖನಿ; ಚೂಪಾದ ಮೊನೆಯುಳ್ಳದ್ದು. (ಇದನ್ನು ಒಂದು ಕಡ್ಡಿ ಮತ್ತು ಗುನ್ನಾಪಟ್ಟಿಯಿಂದ ರಚಿಸಿಕೊಳ್ಳಬಹುದು.) ಘಂಟವನ್ನು ಮುಷ್ಟಿಯಲ್ಲಿ ಹಿಡಿದು, ತಾಳೆಯ ಓಲೆಯ ಮೇಲೆ ಅಕ್ಷರಗಳನ್ನು ಕೊರೆಯುವರು. ಮೇಜಿನ ಕೆಳಗೆ ಪಾದಪೀಠವಿದೆ- ಪಾದಗಳನ್ನು ಇಟ್ಟುಕೊಳ್ಳುವುದಕ್ಕೆ.

ತ – ಚಿಕ್ಕ ಮೇಜು. ಶುಭ್ರವಾದ ವಸ್ತ್ರ ಹೊದಿಸಿದೆ. ಅದರ ಮೇಲೆ ಒಂದು ವ್ಯಾಸಪೀಠದಲ್ಲಿ ತಾಳೆಯ ಗರಿಯ ಪುಸ್ತಕಗಳನ್ನು ಅಡಕಮಾಡಿದೆ. ಪುಸ್ತಕಗಳಿಗೆ ಕೆಂಪು ದಾರಗಳನ್ನು ಸುತ್ತಿದೆ.

ಪ – ಚಿಕ್ಕ ಮೇಜು. ಬಿದಿರಿನದು. ಶುಭ್ರವಾದ ವಸ್ತ್ರ ಹೊದಿಸಿದೆ. ಅದರ ಮೇಲೆ ಥಳಥಳಿಸುವ ಹಿತ್ತಾಳೆಯ ಒಂದು ದೊಡ್ಡ ಕಮಂಡಲವೂ, ಎರಡಡಿ ಉದ್ದದ ಒಂದು ಕವಲುಗೋಲೂ, ಒಂದು ಕೃಷ್ಣಾಜಿನದ ಸುತ್ತೂ ಗರಿಯ ಅಥವಾ ಬಿದಿರಿನ

ಒಂದು ಬೀಸಣಿಗೆಯೂ, ಮತ್ತು ನಿರಿ ಹಿಡಿದು ಮಡಿಸಿರುವ ಒಂದು ನಾರುಮಡಿಯೂ ಇವೆ. ಮೇಜಿನ ಪಕ್ಕದಲ್ಲಿ (ಇ) ಒಳಿ ಏಳು ಅಡಿ ಉದ್ದದ ದಂಡವೊಂದನ್ನು ಗೋಡೆಗೆ ನಿಲ್ಲಿಸಿದೆ. ಮೇಜಿನ ಬಳಿ, ನೆಲದ ಮೇಲೆ, ಜೈಮಿನಿ ಮಹರ್ಷಿಯ ಪಾದುಕೆಗಳಿವೆ. (ಹಲಗೆಯಿಂದ ಮಾಡಿದವು)

ಯ - ನೂಲು-ಮಂಚ(ಅಥವಾ ಜೋಡಿಸಿದ ಎರಡು ಬೆಂಚು.)ಶುಭ್ರವಾದ ಬಿಳಿಯ ವಸ್ತ್ರಹೊದಿಸಿದೆ. (ಲ) ಅಂಚಿನಲ್ಲಿ ಒಂದು ತಲೆದಿಂಬು ಇದೆ.

ರ, ಲ, ವ, ಶ, ಷ, ಸ – ಸ್ಥಳಸಂಕೇತಗಳು.

ನೆಲಕ್ಕೆ ವ್ಯಾಘ್ರಾಜಿನವನ್ನು ಹಾಸಿದೆ.

## ತೆರೆಯ ಹಿಂದಿನ ಸಿದ್ಧತೆ

೧. ಬಿದಿರಿನ ಅಥವಾ ಹಿತ್ತಾಳೆಯ ಒಂದು ದೊಡ್ಡ ತಟ್ಟೆಯಲ್ಲಿ ಬಾಳೆ, ಕಿತ್ತಳೆ, ಬಿರಿದ ದಾಳಿಂಬೆ, ಸೀಳಿದ ಸೇಬು,ದ್ರಾಕ್ಷಿಯ ಗೊಂಚಲುಗಳು, ಅಂಜೂರ, ಚಕ್ಕೋತ ಅನಾನಸ, ಬಾದಾಮಿ, ಖರ್ಜೂರ ಒಣ-ದ್ರಾಕ್ಷಿ, ನೆಲಗಡಲೆ, ಮತ್ತು ಕೆಲವು ಗೆಣಸು ಗಡ್ಡೆಗಳು; ಅವುಗಳ ಮಧ್ಯೆ ಗೋ-ಕ್ಷೀರದ ಎರಡು ದೊಡ್ಡ ಲೋಟಗಳು.

೨. ಆತಪತ್ರ. ( ಎಂದರೆ ಗರಿಯ ಛತ್ರಿ. ಅಗಲವಾದ ಒಂದು ಗರಿಯ ಅಥವಾ ದಬ್ಬೆಯ ತಟ್ಟೆಗೆ ಮೂರು ಅಡಿ ಉದ್ದದ ಬಿದಿರಿನ ಕೋಲನ್ನು ಸಿಕ್ಕಿಸಿ ಮಾಡಿದ್ದು ನದಾ ತೆರೆದೇ ಇರುವುದು.)

೩. ಅಗ್ನಿಷ್ಟಿಕೆ. ( ಎಂದರೆ, ಹಿತ್ತಾಳೆಯ ಅಥವಾ ಕಬ್ಬಿಣದ ಒಲೆ, ಅಥವಾ ಒಂದು ಸ್ಟೂಲಿನ ಮೇಲೆ ಒಂದು ಹಿತ್ತಾಳೆಯ ತಟ್ಟೆ; ಅದರಲ್ಲಿ ಕೆಂಪು ವರ್ಣೆಯ ತಗಡಿನ ಕೆಂಡಗಳು.) ಅಗ್ನಿಷ್ಟಿಕೆಯನ್ನು ಹಿಡಿದುಕೊಳ್ಳುವುದಕ್ಕೆ ಒಂದು ಇಕ್ಕಳ ಅಥವಾ ಬಟ್ಟೆಯ ಚೌಕ.

೪. ಬಿರುಗಾಳಿ, ಗುಡುಗು, ಸಿಡಿಲು ಮತ್ತು ಮಳೆಗಳ ಶಬ್ದಗಳ ಉತ್ಪಾದನೆಗೆ ಸಿದ್ಧತೆ. (ಒಂದು ಕೋಣೆಯ ಬಾಗಿಲಿನ ಮುಚ್ಚಳಗಳನ್ನು ರಭಸದಿಂದ ಹಾಕುವುದರಿಂದ ಗುಡುಗು ಮತ್ತು ಸಿಡಿಲುಗಳ ಶಬ್ದಗಳನ್ನೂ, ಒಂದು ದೊಡ್ಡ ಬ್ರಷ್‌ಅನ್ನು ನೆಲದ ಮೇಲೆ ತಿಕ್ಕಿ ಆಡಿಸುವುದರಿಂದ ಬಿರುಗಾಳಿ ಮತ್ತು ಮಳೆಗಳ ಶಬ್ದಗಳನ್ನೂ ಹೊರಡಿಸಬಹುದು ಮಿಂಚನ್ನು ಝಳಪಿಸುವುದಕ್ಕೆ ಒಂದು ದೊಡ್ಡ ಟಾರ್ಚ.)

**ಕಾಲ: ಸಂಧ್ಯಾಕಾಲ** **ವ್ಯಾಪ್ತಿ: ಸುಮಾರು ಮುಕ್ಕಾಲು ಘಂಟೆ**

[ ವಿಧವಿಧವಾಗಿ ಪ್ರಚುರವಾಗಿರುವ ಒಂದು ಪ್ರಾಚೀನಕಥಾಸನ್ನಿವೇಶವನ್ನು ಇಲ್ಲಿ ಏಕಾಂಕನಾಟಕ ರೂಪಕ್ಕೆ ಅಳವಡಿಸಿಕೊಂಡಿದೆ. ]

## ನಾಟಕಪ್ರದರ್ಶನ

[ಜೈಮಿನಿ ಮಹರ್ಷಿಯು (ಕ) ಎಂಬ ಪೀಠದಲ್ಲಿ ಕುಳಿತು, ಘಂಟವನ್ನು ಮುಷ್ಟಿಯಲ್ಲಿ ಹಿಡಿದು, ತಾಳೆಯ ಓಲೆಯ ಪುಸ್ತಕದಲ್ಲಿ ಮಧ್ಯೆ ಒಂದು ಓಲೆಯ ಮೇಲೆ ಘಂಟವನ್ನೊತ್ತಿ ಬರೆಯುತ್ತಿರುವನು.]

[ ತೆರೆ ಏಳುವುದು ]

ಜೈಮಿನಿಮಹರ್ಷಿ : (ಒಂದು ಪಂಕ್ತಿಯನ್ನು ಬರೆದು ನಿಲ್ಲಿಸಿ , ಯೋಚಿಸುತ್ತ, ತನ್ನಲ್ಲಿ) ... ಮಾನವನ ಇಂದ್ರಿಯವ್ಯಾಪಾರವು ಎಷ್ಟು ಬಲಿಷ್ಠವಾದುದು! ಎಂಥಾ ಪ್ರಾಜ್ಞ-ನನ್ನಾದರೂ ಅಪಕರ್ಷಿಸುವುದಲ್ಲ ! ವಿಶ್ವಾಮಿತ್ರನಂಥ ಮಹರ್ಷಿಯ ಮನಸ್ಸನ್ನು ಅಪ್ಸರೆ ಮೇನಕೆಯು ಸುಲಭವಾಗಿ ಸೆಳೆದಳಲ್ಲವೆ ? ... ಇಂದ್ರಿಯ ಗ್ರಾಮಃ ಬಲ-ವಾನ್ ; ವಿದ್ವಾಂಸಮಪಿಕರ್ಷತಿ ! ... ಅಥವಾ, ವಿದ್ವಾಂಸಂ ಅಪಕರ್ಷತಿ ! ... (ಶ್ಲೋಕದ ಧಾಟಿಯಲ್ಲಿ)

ಬಲವಾನಿಂದ್ರಿಯಗ್ರಾಮೋ ।
ವಿದ್ವಾಂಸಮಪಕರ್ಷತಿ ॥

(ತಲೆದೂಗುತ್ತ) ಶ್ಲೋಕವು ಸರಿಯಾಗಿ ಹೊಂದಿತು. ಇದನ್ನು ಬರೆದಿ-ಡೋಣ ... (ಅದೇ ಶ್ಲೋಕವನ್ನು ಮತ್ತೆ, ಅಲ್ಲಲ್ಲಿಗೆ ಹೇಳಿಕೊಳ್ಳುತ್ತ ಬರೆದಿಟ್ಟು ಪುನಃ ಯೋಜಿಸತೊಡಗುವನು.)

[ಪ್ರವೇಶ (ಅ) : ಚಿರಂಜೀವಿ]

[ಚಿರಂಜೀವಿಯು ಪ್ರವೇಶಿಸಿ, ಜೈಮಿನಿ ಮಹರ್ಷಿಯ ಕಡೆ ನೋಡಿ, (ವ) ಎಂಬಲ್ಲಿ ಪ್ರೇಕ್ಷಕರಿಗೆ ಅಭಿಮುಖವಾಗಿ ನಿಲ್ಲುವನು. ಯೋಚನಾಮಗ್ನನಾಗಿರುವ ಜೈಮಿನಿ ಮಹರ್ಷಿಯು ಅವನ ಕಡೆಗೆ ನೋಡುವುದಿಲ್ಲ.]

ಚಿರಂಜೀವಿ : (ತನ್ನಲ್ಲಿ) ಗುರುವರ್ಯರಾದ ಜೈಮಿನಿ ಮಹರ್ಷಿಗಳು ತದೇಕಚಿತ್ತ ರಾಗಿ, ಹಗಲಿರುಳೆನ್ನದೆ, ಅವಿಚ್ಛಿನ್ನವಾಗಿ ಗ್ರಂಥರಚನಾಕಾರ್ಯದಲ್ಲಿ ನಿರತರಾಗಿರು ವರು. ಈ ದಿನ ಫಲಾಹಾರವನ್ನು ಸಹ ಸ್ವೀಕರಿಸಿಲ್ಲ. ಸಂಧ್ಯಾಕಾಲವು ಸಮೀಪಿಸುತ್ತ ಬಂದಿತು. ಈಗಾಗಲೇ ನಾನು ಎರಡು ಸಲ ಇಲ್ಲಿಗೆ ಬಂದು ಇವರನ್ನು ಮಾತನಾಡಿ ಸಲು ಹಿಂಜರಿದು ಹಿಂದಕ್ಕೆ ಹೋದೆ. ಮಾತನಾಡಿಸಿದರೆ ಅವರ ಯೋಚನಾಧಾರೆಗೆ ಭಂಗವುಂಟಾದೀತು ! ಕುಪಿತರಾದಾರು ! ಏನು ತಾನೆ ಮಾಡಲಿ ? ... ಅಂ (ಎಂದು ಕೆಮ್ಮುವನು.)

ಜೈಮಿನಿಮಹರ್ಷಿ : (ಮೃದುವಾಗಿ) ಯಾರದು ? ... ಚಿರಂಜೀವಿ ?

ಚಿರಂಜೀವಿ : (ವಂದಿಸುತ್ತ) ಗುರುವರ್ಯರು ಮನ್ನಿಸಬೇಕು. ನಾನು ಇಲ್ಲಿಗೆ ಬಂದಿರುವುದು ಇದು ಮೂರನೆಯ ಬಾರಿ.

ಜೈಮಿನಿಮಹರ್ಷಿ : (ಪ್ರಸನ್ನತೆಯಿಂದ) ವಿಷಯವೇನು ?

ಚಿರಂಜೀವಿ : ದಿವ್ಯಚಿತ್ತವು ಮಹಾಗ್ರಂಥರಚನೆಯಲ್ಲಿ ತೊಡಗಿರುವುದು! ಈ ದಿನ ಫಲಾಹಾರವನ್ನೂ ಉಪೇಕ್ಷಿಸಲಾಗಿದೆ. ಗೋಕ್ಷೀರವನ್ನು ಸಹ ಸೇವಿಸಿಲ್ಲ.

ಜೈಮಿನಿಮಹರ್ಷಿ : ಈಗ ಕಾಲವೆಷ್ಟಾಗಿರವುದು ?

ಚಿರಂಜೀವಿ : ಸಂಧ್ಯಾಕಾಲವು ಸಮೀಪಿಸುತ್ತಿರುವುದು.

ಜೈಮಿನಿಮಹರ್ಷಿ : ಏನು, ಸಂಧ್ಯಾಕಾಲವೆ ? ಇಷ್ಟು ಬೇಗ ? (ಎನ್ನುತ್ತ ಎದ್ದು, ಮಧ್ಯರಂಗಕ್ಕೆ ಬಂದು, (ಉ) ದ್ವಾರದ ಕಡೆಗೆ ನೋಡುವನು.)

ಚಿರಂಜೀವಿ : ಅಹುದು ಪೂಜ್ಯರೆ ! ದಿನಮಣಿಯು ದಿಗಂತವನ್ನು ಸಮೀಪಿಸುತ್ತಿರುವನು. ನೆರಳು ದೂರದವರೆಗೆ ಸಾಗಿರುವುದು. ಕಾಲದ ಗತಿಯನ್ನೂ ಲೆಕ್ಕಿಸದೆ ಕಾರ್ಯನಿರತರಾ ದ್ದೀರಿ. ಫಲಾಹಾರಮಂದಿರಕ್ಕೆ ಚಿತ್ತೈಸಬೇಕು.

ಜೈಮಿನಿಮಹರ್ಷಿ : (ಮುಗುಳುನಗೆಯಿಂದ) ಈ ಅ ಳೆಯಲ್ಲಿ ಫಲಾಹಾರವೇ ?

ಚಿರಂಜೀವಿ : ಗೋಕ್ಷೀರವನ್ನಾದರೂ ಸೇವಿಸಬಹುದಲ್ಲವೆ ?

ಜೈಮಿನಿಮಹರ್ಷಿ : ಅದೂ ಹಾಗಿರಲಿ. ನಾವೀಗ ವಿಶ್ರಾಂತಿಗೃಹಕ್ಕೆ ಹೋಗಿ, ಅಲ್ಲಿ ಸ್ವಲ್ಪ ಕಾಲ ವಿಶ್ರಮಿಸಿಕೊಂಡು ಬಂದು ಅನಂತರ ನದಿಗೆ ಹೋಗಿ ಸಾಯಂಕಾಲದ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಬರುತ್ತೇವೆ. ಆಮೇಲೆ ಫಲಾಹಾರವೋ ಗೋಕ್ಷೀರವೋ, ನೋಡೋಣ.

ಚಿರಂಜೀವಿ : ದಿವ್ಯ ಚಿತ್ತ !

ಜೈಮಿನಿಮಹರ್ಷಿ : ಚಿರಂಜೀವೀ, ನಿನ್ನ ಪಾಠ-ಪ್ರವಚನಗಳು ಸರಿಯಾಗಿ ನಡೆಯುತ್ತಿರುವುವೆ ?

ಚಿರಂಜೀವಿ : ಕ್ಷಮಿಸಬೇಕು.

ಜೈಮಿನಿಮಹರ್ಷಿ : ಎಂದರೆ ?

ಚಿರಂಜೀವಿ : ಚಿಕ್ಕ ಗುರುಗಳು ಪಾಠವನ್ನು ಇನ್ನೂ ಪ್ರಾರಂಭಿಸಿಯೇ ಇಲ್ಲ.

ಜೈಮಿನಿಮಹರ್ಷಿ : ಏನು ? ವಿವೇಕವರೇಣ್ಯನು ನಿನಗೆ ಪಾಠವನ್ನು ಇನ್ನೂ ಪ್ರಾರಂಭಿಸಿಯೇ ಇಲ್ಲವೆ ಆತನಿಗೆ ನಾವು ಆ ದಿನವೇ ಹೇಳಿದೆವಷ್ಟೆ? ...ಪುಸ್ತಕಲೇಖನ ಕಾರ್ಯದಲ್ಲೇನಾದರೂ ತೊಡಗಿರುವನೋ?

ಚಿರಂಜೀವಿ : ಹಾಗೂ ಕಾಣುವುದಿಲ್ಲ.

ಜೈಮಿನಿಮಹರ್ಷಿ : (ಯೋಚಿಸುತ್ತ) ಮತ್ತೇನು? ... ಎಲ್ಲಿ, ಆತನನ್ನಿಲ್ಲಿ ಕರೆ.

ಚಿರಂಜೀವಿ : ಮಹದಾಜ್ಞೆ ! (ಎಂದು ತಲೆಬಾಗಿ, ಓಡುತ್ತ ಹೋಗುವನು)

[ ನಿರ್ಗಮ (ಅ) : ಚಿರಂಜೀವಿ ]

ಜೈಮಿನಿಮಹರ್ಷಿ : (ತನ್ನಲ್ಲಿ) ಬಾಲ್ಯದಿಂದಲೂ ನಮಗೆ ಅತ್ಯಂತ ಪ್ರಿಯನಾದ ಶಿಷ್ಯನೆಂದರೆ, ವಿವಕವರೇಣ್ಯ! ಆದರೆ, ಇತ್ತೀಚೆಗೆ ಅವನ ವರ್ತನೆಯೇ ಅರ್ಥವಾಗುತ್ತಿಲ್ಲವಲ್ಲಾ ! ಅವನ ರೀತಿಯೇ ಬದಲಾಗಿರುವಂತಿದೆ !

[ಪ್ರವೇಶ (ಅ) : ಚಿರಂಜೀವಿ]

ಚಿರಂಜೀವಿ : (ಓಡುತ್ತ ಬಂದು) ಮಹದಾಜ್ಞೆಯನ್ನು ಚಿಕ್ಕ ಗುರುಗಳಿಗೆ ಕೃತ ಪಡಿಸಿದೆ.

ಜೈಮಿನಿಮಹರ್ಷಿ : ವಿವೇಕವರೇಣ್ಯನೇಕೆ ಬರಲಿಲ್ಲ ?

ಚಿರಂಜೀವಿ : 'ಈಗಲೇ ಬರಬೇಕೆ, ಕೇಳಿಕೊಂಡು ಬಾ' ಎಂದರು.

ಜೈಮಿನಿಮಹರ್ಷಿ : (ಆಶ್ಚರ್ಯದಿಂದ) ಏನು, ಏನು, ನಮ್ಮ ಪ್ರಿಯ ಶಿಷ್ಯನಾದ ವಿವೇಕವರೇಣ್ಯನು ನಮ್ಮ ಆಜ್ಞೆಗೆ ಪ್ರತಿಹೇಳಿದನೆ ? ಆಶ್ಚರ್ಯ, ಆಶ್ಚರ್ಯ! .... ಈಗ ಆತನೆಲ್ಲಿರುವನು ? ಯಾವ ಕಾರ್ಯದಲ್ಲಿ ತೊಡಗಿರುವನು ?

ಚಿರಂಜೀವಿ [ (ಅ) ಬಾಗಿಲಕಡೆ ಬೆರಳು ತೋರಿಸುತ್ತ] ಇಲ್ಲೇ, ಪಾಠಶಾಲೆಯಲ್ಲಿ ಕೃಷ್ಣಾಜಿನದ ಮೇಲೆ ವಿಶ್ರಾಂತರಾಗಿರುವರು .... ಅದೋ, ಅವರೇ ಬರುತ್ತಿರುವರು.

[ಪ್ರವೇಶ (ಅ) : ವಿವೇಕವರೇಣ್ಯ]

ವಿವೇಕವರೇಣ್ಯ : (ಉತ್ತರೀಯವನ್ನು ಸರಿಪಡಿಸಿಕೊಳ್ಳುತ್ತ)... ಅಪ್ಪಣೆಯಾಯಿತಂತೆ.

ಜೈಮಿನಿಮಹರ್ಷಿ : ವಿವೇಕವರೇಣ್ಯಾ, ಹೀಗೆ ಬಾ. (ವಿವೇಕವರೇಣ್ಯನು ಸಮೀಪಿಸುವನು) ... ಮಲಗಿದ್ದೆಯಾ ? ... ದೇಹಾಲಸ್ಯವೇನೂ ಇಲ್ಲವಷ್ಟೆ ?

ವಿವೇಕವರೇಣ್ಯ : ಆರೋಗ್ಯವಾಗಿರುವೆನಲ್ಲ !

ಜೈಮಿನಿಮಹರ್ಷಿ : ಸರಿ ... ಪುಸ್ತಕದ ಪುನರ್ಲೇಖನದ ಕಾರ್ಯವು ಎಲ್ಲಿಯವರೆಗೆ ಮುಂದುವರಿದಿರುವುದು ?

ವಿವೇಕವರೇಣ್ಯ : ಯಾವ ಪುಸ್ತಕ ?

ಜೈಮಿನಿಮಹರ್ಷಿ : ಹುಂ ! .... ಉಪನಿಷತ್ತುಗಳ ಪುಸ್ತಕವು ಜೀರ್ಣವಾ-ಗಿರುವುದರಿಂದ, ಅದನ್ನು ಮತ್ತೆ ಬರೆದಿಡಬೇಕೆಂದು ನಿನಗೆ ಹೇಳಿದ್ದೆವಷ್ಟೆ ?

ವಿವೇಕವರೇಣ್ಯ : ಓಹೋ, ಉಪನಿಷತ್ತುಗಳ ಪುಸ್ತಕವೋ ? .... ಅದನ್ನು ಬರೆದಿಡುವುದು ಎಷ್ಟು ಹೊತ್ತಿನ ಕೆಲಸ ಗುರುಗಳೆ ? ನನಗೆ ಉಪನಿಷತ್ತುಗಳೆಲ್ಲವೂ ವ್ಯಾಖ್ಯಾನಸಮೇತವಾಗಿ ಹೃದ್ಗತವಾಗಿರುವುವಷ್ಟೆ ? ಲೇಖನಿಯನ್ನು ತೆಗೆದುಕೊಳ್ಳುವುದೇ ತಡ, ಪುಸ್ತಕವು ಸಿದ್ಧವಾದಂತೆಯೇ !

ಜೈಮಿನಿಮಹರ್ಷಿ : ಎಂದರೆ, ಅದನ್ನಿನ್ನೂ ಪ್ರಾರಂಭಿಸಿಯೇ ಇಲ್ಲವೆಂದಾಯಿತು ! .... ಒಳ್ಳೆಯದು, ಚಿರಂಜೀವಿಗೆ ಪಾಠಪ್ರವಚನ ?

ವಿವೇಕವರೇಣ್ಯ : ಕೇವಲ ಬಾಲಪಾಠ !

ಜೈಮಿನಿಮಹರ್ಷಿ : (ತಾಳ್ಮೆಯಿಂದ) ಹಾಗೆಂದು ಬೇಸರವೋ ?

ವಿವೇಕವರೇಣ್ಯ : ಬೇಸರವೆಂದಲ್ಲ ....

ಜೈಮಿನಿಮಹರ್ಷಿ : (ಮೃದುದಾಗಿ) ಮತ್ತೇನೂ ?

ವಿವೇಕವರೇಣ್ಯ : (ಗರ್ವದಿಂದ) ಬಾಲಕನಿಗೆ ಪಾಠ ಹೇಳುವುದು ನನ್ನಂಥ ವಿದ್ಯಾಪಾರಂಗತನ ಪ್ರೌಢಿಮೆಗೆ, ಘನತೆಗೆ, ತಕ್ಕುದೇ ಎಂಬ ಅಂಶವನ್ನು ಗುರುಗಳು ಪರ್ಯಾಲೋಚಿಸಬೇಕಲ್ಲವೇ ?

ಜೈಮಿನಿಮಹರ್ಷಿ : (ಆತ್ಮಗತ) ಓಹೋ ! ತಾನೊಬ್ಬ ದೊಡ್ಡ ವಿದ್ವಾಂಸ ನೆಂಬ ಗರ್ವವು ಇವನಲ್ಲಿ ಪ್ರಬಲವಾಗಿ ಅಂಕುರಿಸಿರುವುದು ! (ತಲೆದೂಗುತ್ತ) ಇರಲಿ, (ಪ್ರಕಾಶ) ಒಳ್ಳೆಯದು, ವಿವೇಕವರೇಣ್ಯಾ, ಅದನ್ನು ಪರ್ಯಾಲೋಚಿಸೋಣ. ಚಿರಂಜೀವೀ, ನಾವೀಗ ವಿಶ್ರಾಂತಿಗೃಹಕ್ಕೆ ಹೋಗಿ ಬರುತ್ತೇವೆ. ನಾವು ಬರುವ ವೇಳೆಗೆ ನದಿಗೆ ಹೋಗುವುದಕ್ಕೆ ಸಾಮಗ್ರಿಗಳನ್ನು ಸಿದ್ಧಪಡಿಸು.

ಚಿರಂಜೀವಿ : ಮಹದಾಜ್ಞೆ (ಎಂದು ತಲೆಬಾಗುವನು)

ಜೈಮಿನಿಮಹರ್ಷಿ : [ (ಇ) ಬಾಗಿಲಿನ ವರೆಗೆ ಹೋಗಿ ನಿಂತು] ... ಚಿರಂಜೀವಿ, ಆ ಲೇಖನಸಾಮಗ್ರಿಗಳು ಅಲ್ಲಿಯೇ ಹಾಗೆಯೇ ಇರಲಿ. ಗ್ರಂಥಲೇಖನವನ್ನು ಈ ರಾತ್ರಿಯೂ ಮುಂದುವರಿಸುತ್ತೇವೆ.

ಚಿರಂಜೀವಿ : ಮಹದಾಜ್ಞೆ, (ಎಂದು ತಲೆಬಾಗುವನು)

[ನಿರ್ಗಮ (ಇ) ಜೈಮಿನಿಮಹರ್ಷಿ]

ವಿವೇಕವರೇಣ್ಯ : (ಮುಂದುಗಡೆ ಮಧ್ಯದಲ್ಲಿ ನಿಂತು) ಚಿರಂಜೀವೀ, ಗುರುಗಳು ಒಂದೇ ಸಮನಾಗಿ ಬರೆಯುತ್ತಿರುವರಲ್ಲಾ, ಅದೇನು ಬರೆದಿರುವರೋ ನೋಡೋಣ.. ಆ ಪುಸ್ತಕವನ್ನಿಲ್ಲಿ ತೆಗೆದುಕೊಂಡು ಬಾ.

ಚಿರಂಜೀವಿ : ((ವ) ಎಂಬಲ್ಲಿ ನಿಂತು,) ದಯವಿಟ್ಟು ಕ್ಷಮಿಸಬೇಕು. ಈಗ ತಾನೆ ಕೇಳಿದಿರಲ್ಲವೆ ಮಹದಾಜ್ಞೆಯನ್ನು : ಲೇಖನಸಾಮಗ್ರಿಗಳು ಅಲ್ಲಿಯೇ ಹಾಗೆಯೇ ಇರಲಿ ಎಂದು ? ಆ ಪುಸ್ತಕವನ್ನು ಮುಟ್ಟುವುದಕ್ಕೆ ಸಹ ನನಗೆ ಭಯ-ವಾಗುವುದು.

ವಿವೇಕವರೇಣ್ಯ : ಹುಂ! ನೀನಿನ್ನೂ ಬಾಲಕ — ಚಿರಂಜೀವಿ ! ಪುಸ್ತಕವನ್ನು ನಾನೇ ತೆಗೆದುಕೊಂಡು ನೋಡುತ್ತೇನೆ. (ಎಂದು (ಟ) ಮೇಜಿನ ಬಳಿಗೆ ಹೋಗುವನು)

ಚಿರಂಜೀವಿ : ಗುರುಗಳೇ, ಗುರುಗಳೇ ನೀವೂ ಸಹ ...

ವಿವೇಕವರೇಣ್ಯ : ಹುಶ್ ! ... ಅದೇನೂ ಅಂಥ ಅಪರಾಧವಲ್ಲ. ಪುಸ್ತಕ ವನ್ನು ನೋಡುವುದೂ ಒಂದು ಅಪರಾಧವಾದರೆ ಹೇಗೆ ? (ಎನ್ನುತ್ತ ಪುಸ್ತಕವನ್ನು ತೆಗೆದುಕೊಂಡು, (ಶ) ಎಂಬಲ್ಲಿ ನಿಂತು ಓದಿಕೊಳ್ಳುವನು) ... ಇದೇನು, ಹೀಗೆ ಬರೆದಿರು-ವರು ! (ಓದುವನು).

ಬಲವಾನಿಂದ್ರಿಯಗ್ರಾಮೋ ।
ವಿದ್ವಾಂಸಮಪಕರ್ಷತಿ ॥

....ಅಹ್ಹಹ್ಹಹ್ಹ! ಚನ್ನಾಯಿತು! ಈ ವಾಕ್ಯವನ್ನು ನೀನು ಒಪ್ಪುವೆಯಾ ಚಿರಂಜೀವೀ?

ಚಿರಂಜೀವಿ : ನನಗೆ ಅದು ಅರ್ಥವೇ ಆಗುವುದಿಲ್ಲವಲ್ಲಾ !

ವಿವೇಕವರೇಣ್ಯ : ಅರ್ಥವನ್ನು ಹೇಳುತ್ತೇನೆ ಕೇಳು : 'ಇಂದ್ರಿಯಸಮುದಾಯವು ಬಲಿಷ್ಠವಾದುದು; ವಿದ್ವಾಂಸನನ್ನು ಹಿಂದಕ್ಕೆ ಸೆಳೆಯುತ್ತದೆ!' .... ಇದಕ್ಕೆ ನಿನ್ನ ಅಭಿಪ್ರಾಯವೇನು ?

ಚಿರಂಜೀವಿ : ಅದು ಮಹಾವಾಕ್ಯ ! ಅದನ್ನು ಕುರಿತು ನನ್ನಂಥ ಪಾಮರನು ಅಭಿಪ್ರಾಯವನ್ನು ಕೊಡುವುದೆಂದರೇನು ?

ವಿವೇಕವರೇಣ್ಯ : ಈ ವಾಕ್ಯವನ್ನು ನಾನು ಸರ್ವಥಾ ಒಪ್ಪುವುದಿಲ್ಲ. ಇಂದ್ರಿಯಗಳು ವಿದ್ವಾಂಸನನ್ನು ಅಪಕರ್ಷಿಸುತ್ತವೆಯಂತೆ! ಇದು ಅಸಂಬದ್ಧವಾದ ಮಾತು! ಹಾಗೆ ಇಂದ್ರಿಯಗಳಿಂದ ಅಪಕರ್ಷಿಸಲ್ಪಟ್ಟವನನ್ನು ವಿದ್ವಾಂಸನೆಂದು ಕರೆಯುವುದಾದರೂ ಹೇಗೆ? .... ಅಷ್ಟೇಕೆ ? ನಾನೇ ಇರುವೆನಲ್ಲ, ನಿದರ್ಶನವಾಗಿ ! ನಾನೆಷ್ಟು ಮಹಾವಿದ್ವಾಂಸನಷ್ಟೆ? ಎಲ್ಲಿ, ಇಂದ್ರಿಯಗಳು ನನ್ನನ್ನಪಕರ್ಷಿಸಲಿ, ನೋಡೋಣ ! ಎಂದಿಗೂ ಸಾಧ್ಯವಲ್ಲ !

ಚಿರಂಜೀವಿ : ಆದರೆ ಜೈಮಿನಿಮಹರ್ಷಿಗಳು ತಮಗಿಂತಲೂ ಅಧಿಕರಲ್ಲವೆ ? ಅವರ ಅನುಭವವು ತಮಗಿರುವುದೆ? ಅವರ ವಾಕ್ಯವು ತಮಗೆ ಸರಿಯಾದ ರೀತಿಯಲ್ಲಿ ಅರ್ಥವಾಗಿರುವುದೆ ? ಅದರ ಸನ್ನಿವೇಶವೇನಿರಬಹುದೋ !

ವಿವೇಕವರೇಣ್ಯ : ನಾನು ಜೈಮಿನಿಮಹರ್ಷಿಗಳಿಗಿಂತ ಕಡಿಮೆಯೆಂದು ಭಾವಿಸಿರುವೆಯಾ ?

ಚಿರಂಜೀವಿ : ನೀವು ಅವರ ಶಿಷ್ಯರಲ್ಲವೆ ?

ವಿವೇಕವರೇಣ್ಯ : ಕಾಲಕ್ರಮದಲ್ಲಿ ಶಿಷ್ಯನು ಗುರುವಿಗೆ ಸಮನಾಗಬಹುದು. ಗುರುವಿಗಿಂತ ಅಧಿಕನೂ ಆಗಬಹುದು !

ಚಿರಂಜೀವಿ : ತಮ್ಮ ವಿದ್ವತ್ತನ್ನು ತುಲನ ಮಾಡುವ ಸಾಮರ್ಥ್ಯವು ನನಗಿಲ್ಲವಾದರೂ, ತಮ್ಮ ಈ ಭಾವನೆಯು ಸಾಧುವೆಂದು ನನಗೆ ತೋರುವುದಿಲ್ಲ.

ವಿವೇಕವರೇಣ್ಯ : ನೀನು ನನ್ನನ್ನು ಆಕ್ಷೇಪಿಸುವುದು ಸಾಧುವಾದರೆ, ನಾನು ಅವರನ್ನು ಆಕ್ಷೇಪಿಸುವುದೂ ಸಾಧುವೇ ! ... ಈಗ. ಮುಖ್ಯವಾಗಿ ಈ ಶ್ಲೋಕವನ್ನು ಸರಿಪಡಿಸಬೇಕು. 'ವಿದ್ವಾಂಸಮುಪಕರ್ಷತಿ' ಎಂಬ ಮಾತನ್ನು 'ವಿದ್ವಾಂಸಂ ನಾಪಕರ್ಷತಿ' ಎಂದು ತಿದ್ದಬೇಕು.

ಚಿರಂಜೀವಿ : ಹಾಗೆ 'ನ'ಕಾರವನ್ನು ಸೇರಿಸಿದರೆ, 'ಸೆಳೆಯುತ್ತದೆ ಎಂಬ ಬದಲು, 'ಸೆಳೆಯುವುದಿಲ್ಲ' ಎಂದು ಅರ್ಥವಾಗುವುದಲ್ಲವೇ ?

ವಿವೇಕವರೇಣ್ಯ : ಅಹುದು.

ಚಿರಂಜೀವಿ : ಅಲ್ಲಿಗೆ ನಿಮ್ಮ ತಿದ್ದುಪಡಿಯು ಮೂಲಕ್ಕೆ ಸಂಪೂರ್ಣವಾಗಿ ವ್ಯತಿರಿಕ್ತವಾಗುವುದಲ್ಲ !

ವಿವೇಕವರೇಣ್ಯ : ಅದಕ್ಕೆ ನಾನೇನು ಮಾಡಲಿ ? ತಪ್ಪು ಬರವಣಿಗೆಯನ್ನು ತಿದ್ದದೆ ವಿಧಿಯಿಲ್ಲ. [ಎಂದು (ಕ) ಪೀಠದಲ್ಲಿ ಕುಳಿತು, ಘಂಟವನ್ನು ಕೈಗೆ ತೆಗೆದುಕೊಳ್ಳುವನು.]

ಚಿರಂಜೀವಿ : ಇನ್ನೇನು ಗತಿ ! ಬೇಡಿ, ಬೇಡಿ, ನೀವು ಅದನ್ನು ತಿದ್ದಬೇಡಿ. (ಎನ್ನುತ್ತ ಸಮೀಪಿಸಿ) ನಿಮ್ಮ ಅಭಿಪ್ರಾಯವು ಅಷ್ಟು ಪ್ರಬಲವಾಗಿದ್ದರೆ, ಅವರೊಡನೆ ಚರ್ಚಿಸಿ ಅವರನ್ನೊಪ್ಪಿಸಿ.

ವಿವೇಕವರೇಣ್ಯ : ನನ್ನನ್ನು ತಡೆಯುವುದಕ್ಕೆ ನಿನಗೆ ಅಧಿಕಾರವಿಲ್ಲ. ಈಗ ಈ ವಾಕ್ಯವನ್ನು ತಿದ್ದುತ್ತೇನೆ. ಆಮೇಲೆ ಅವಶ್ಯಕವಾದರೆ, ಅವರೊಡನೆ ವಾದಕ್ಕೂ ಸಿದ್ಧ ! ... (ಪಂಕ್ತಿಯ ಮೇಲೆ ಗೀಟಿಟ್ಟು, ತಿದ್ದಿ ಬರೆಯುವನು.)

ಚಿರಂಜೀವಿ : ಪ್ರಮಾದ ! ಪ್ರಮಾದ !!

ವಿವೇಕವರೇಣ್ಯ : 'ನ' ಕಾರವನ್ನು ದೊಡ್ಡದಾಗಿ ಬರೆದಿರುವೆನು. 'ವಿದ್ವಾಂಸಂ ನಾಪಕರ್ಷತಿ' – ಇದೀಗ ಸರಿ! ... (ಎದ್ದು ಚಿರಂಜೀವಿಯ ಬಳಿಗೆ ಬಂದು.) ಅವರು ಬಂದು ಕೇಳಿದರೆ, ನಾನು ತಿದ್ದಿದೆನೆಂದು ಹೇಳು. ತಿಳಿಯಿತೋ ? ... (ಗರ್ವದಿಂದ ತಲೆತಿರುಗಿಸಿ ಹೊರಟು ಹೋಗುವನು.)

[ನಿರ್ಗಮ (ಅ) · ವಿವೇಕವರೇಣ್ಯ]

ಚಿರಂಜೀವಿ : ( ಅಸಮಾಧಾನಚಿತ್ತನಾಗಿ, ಮಧ್ಯರಂಗಕ್ಕೆ ಬಂದು ನಿಂತು ತನ್ನಲ್ಲಿ) ತಪೋಧನರ ಬರವಣಿಗೆಯನ್ನು ತಿದ್ದುವುದೆಂದರೆ ಅರ್ಥವೇನು ? ಅಲ್ಲದೆ, ಅವರು ಕುಪಿತರಾದರೆ ಏನು ಗತಿ ? ಇದರ ಪರಿಣಾಮವೇನಾಗುವುದೋ ಏನೋ ... ಈಗ, ಅವರು ವಿಶ್ರಾಂತಿಗೃಹದಿಂದ ಬರುವ ವೇಳೆಗೆ, ನದಿಗೆ ಹೋಗುವದಕ್ಕೆ ಸಾಮಗ್ರಿಗಳನ್ನು ಸಿದ್ಧಪಡಿಸಬೇಕಲ್ಲವೆ ? ...... (ಕಮಂಡಲ, ಕೃಷ್ಣಾಜಿನದ ಸುತ್ತು ಮತ್ತು ನಾರುಮಡಿಗಳನ್ನು (ಪ) ಮೇಜಿನಿಂದ (ಟ) ಮೇಜಿಗೆ ವರ್ಗಾಯಿಸುವನು. ಆಮೇಲೆ, (ಇ) ಬಾಗಿಲಿನ ಬಳಿ ಇರುವ ದಂಡವನ್ನು ತೆಗೆದುಕೊಂಡು ಹೋಗಿ (ಸ) ಎಂಬಲ್ಲಿ ಗೋಡೆಗೆ ಒರಗಿಸಿಡುವನು. ತರುವಾಯ (ಪ) ಮೇಜಿನ ಬಳಿ ಇರುವ ಪಾದುಕೆಗಳನ್ನು ಕೈಗಳಿಂದ ಎತ್ತಿಕೊಂಡು ಹೋಗಿ (ಉ) ಬಾಗಿಲ ಬಳಿ ಇಟ್ಟು, (ವ) ಎಂಬಲ್ಲಿ ನಿಲ್ಲುವನು.)

[ಪ್ರವೇಶ (ಇ) : ಜೈಮಿನಿಮಹರ್ಷಿ]

ಜೈಮಿನಿಮಹರ್ಷಿ : (ಮಧ್ಯರಂಗಕ್ಕೆ ಬಂದು) ಚಿರಂಜೀವಿ, ನದಿಗೆ ಹೋಗುವದಕ್ಕೆ ಸಾಮಗ್ರಿಗಳನ್ನು ಸಿದ್ಧಪಡಿಸಿರುವಿಯಾ ?

ಚಿರಂಜೀವಿ : ಸಿದ್ಧಪಡಿಸಿರುವೆನು.

ಜೈಮಿನಿಮಹರ್ಷಿ : ಸರಿ ... (ಎನ್ನುತ್ತ (ಕ) ಪೀಠದ ಮುಂದಕ್ಕೆ ಹೋಗಿ, ಪುಸ್ತಕವನ್ನು ಕೈಗೆ ತೆಗೆದುಕೊಂಡು, ತಿದ್ದುಪಡಿಯನ್ನು ನೋಡಿ, ಹುಬ್ಬುಗಂಟಿಟ್ಟು, ಗಡುಸಾಗಿ) ಇದೇನು ? (ಓದುತ್ತ) ' ವಿದ್ವಾಂಸಂ ನಾಪಕರ್ಷತಿ ' ! ... ಇದನ್ನು ತಿದ್ದಿದವರು ಯಾರು ?

ಚಿರಂಜೀವಿ : ಬೇಡವೆಂದು ಎಷ್ಟು ಹೇಳಿದರೂ ಚಿಕ್ಕ ಗುರುಗಳು ಕೇಳಲಿಲ್ಲ. ಆ ತಿದ್ದುಪಡಿಗೆ ಅವರೇ ನಿದರ್ಶನವಂತೆ! ಇಂದ್ರಿಯಗಳು ಅಪರಂಥ ವಿದ್ವಾಂಸರನ್ನು ಸೆಳೆಯಲಾರವಂತೆ! ಬೇಕಾದರೆ, ಈ ವಿಚಾರವಾಗಿ ಅವರು ನಿಮ್ಮೊಡನೆ ವಾದಕ್ಕೂ ಸಿದ್ಧವಂತೆ.

ಜೈಮಿನಿಮಹರ್ಷಿ : (ಆಶ್ಚರ್ಯದಿಂದ) ವಿವೇಕವರೇಣ್ಯನು ನನ್ನ ಬರವಣಿಗೆಯನ್ನು ತಿದ್ದುವಷ್ಟುಮಟ್ಟಿಗಾದನೆ? ಇಲ್ಲಿಗೆ ಅವನ ಔದ್ಧತ್ಯವು ಮಿತಿಮೀರಿತು!... (ತಲೆದೂಗುತ್ತ) ಒಳ್ಳೆಯದು ಇರಲಿ... (ಯೋಚಿಸುತ್ತ ನಿಧಾನವಾಗಿ (ಉ) ಬಾಗಿಲಿನ ಬಳಿಗೆ ಹೋಗಿ, ಕಮಂಡಲ ಮತ್ತು ನಾರುಮಡಿಗಳನ್ನು ಎಡಗೈಗೆ ತೆಗೆದುಕೊಂಡು, ಕೃಷ್ಣಾಜಿನದ ಸುತ್ತನ್ನು ಎಡ ಕಂಕುಳಲ್ಲಿಟ್ಟುಕೊಂಡು, ದಂಡವನ್ನು ಬಲಗೈಯಲ್ಲಿ ಹಿಡಿದು, ಪಾದುಕೆಗಳನ್ನು ಮೆಟ್ಟಿಕೊಳ್ಳುವರು.) ... ಚಿರಂಜೀವೀ, ಈ ದಿನ ನಾವು ನದಿಯಿಂದ ಬರುವುದು ಸ್ವಲ್ಪ ತಡವಾಗಬಹುದು. ನೀನು ಆಶ್ರಮದಲ್ಲೇ ಇರು. ನಾನೊಬ್ಬನೇ ಹೋಗಿಬರುತ್ತೇನೆ.

ಚಿರಂಜೀವಿ : ಮಹದಾಜ್ಞೆ. (ಎಂದು ತಲೆಬಾಗುವನು)

[ ನಿರ್ಗಮ (ಉ) : ಜೈಮಿನಿ ಮಹರ್ಷಿ ]

ಚಿರಂಜೀವಿ : (ತನ್ನಲ್ಲಿ) ಗುರುವರ್ಯರು ಕೋಪವನ್ನು ನುಂಗಿಕೊಂಡು ಹೊರಟುಹೋದರು. ಚಿಕ್ಕ ಗುರುಗಳಿಗೆ ತಕ್ಕ ಪ್ರಾಯಶ್ಚಿತ್ತವಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

[ಪ್ರವೇಶ (ಅ) : ವಿವೇಕವರೇಣ್ಯ]

ವಿವೇಕವರೇಣ್ಯ : (ಮಧ್ಯ ರಂಗಕ್ಕೆ ಬಂದು) ಚಿರಂಜೀವಿ, ಗುರುಗಳ ಜೊತೆಯಲ್ಲಿ ನೀನೂ ನದಿಗೆ ಹೋಗಲಿಲ್ಲವೇಕೆ ?

ಚಿರಂಜೀವಿ : ಈ ದಿನ ಅವರು ನದಿಯಿಂದ ಬರುವುದು ಸ್ವಲ್ಪ ತಡವಾಗಬಹುದೆಂದೂ, ನಾನು ಆಶ್ರಮದಲ್ಲೇ ಇರಬೇಕೆಂದೂ ಮಹದಾಜ್ಞೆಯಾಗಿರುವುದು.

ವಿವೇಕವರೇಣ್ಯ : ಆಯಿತು .... ಅವರು ಆ ತಿದ್ದುಪಡಿಯನ್ನು ನೋಡಿದರೆ ?

ಚಿರಂಜೀವಿ : ನೋಡಿದರು. ತಿದ್ದಿದವರಾರೆಂದು ಕೇಳಿದರು. ತಿಳಿಸಿದೆ. ಅವರು ಹೆಚ್ಚಾಗಿ ಏನನ್ನೂ ಹೇಳಲಿಲ್ಲ.

ವಿವೇಕವರೇಣ್ಯ : ಹೇಳುವುದಿನ್ನೆಲ್ಲಿ ಬಂತು ? ತಪ್ಪುಮಾಡಿದವರು ಒಪ್ಪಿಕೊಳ್ಳಲೇಬೇಕಷ್ಟೆ ?

ಚಿರಂಜೀವಿ : ಅದೀಗ ನಿಜವಾದ ಮಾತು ! ಯಾರು ತಪ್ಪು ಮಾಡಿರುವರೋ ಅವರು ಒಪ್ಪಿಕೊಳ್ಳಲೇಬೇಕು ! ಅದು ಅವರಿಗೆ ಎಂದಿಗೂ ತಪ್ಪಿದ್ದಲ್ಲ !

[ತೆರೆಯಲ್ಲಿ ಬಿರುಗಾಳಿ, ಗುಡುಗು, ಸಿಡಿಲು, ಮಿಂಚು]

ವಿವೇಕವರೇಣ್ಯ : [(ಉ) ಬಾಗಿಲ ಕಡೆಗೆ ನೋಡಿ] ಇದೇನು ! ಇದ್ದಕ್ಕಿದ್ದಂತೆ ಬಿರುಗಾಳಿ, ಗುಡುಗು, ಸಿಡಿಲು, ಮಿಂಚು ! ಈ ದಿನ ಮಳೆ ಬರುವ ಸೂಚನೆಯೇ ಇರಲಿಲ್ಲವಲ್ಲಾ ! ಇದು ಮಳೆಗಾಲವೂ ಅಲ್ಲ ! ... [(ಉ)ಬಾಗಿಲ ಬಳಿಗೆ ಹೋಗಿ ಹೊರಗಡೆಗೆ ನೋಡುತ್ತ] ಆಗಸವು ಕಾರ್ಮೋಡಗಳಿಂದ ಆಚ್ಛಾದಿತವಾಗಿರುವುದು ! (ತೆರೆಯಲ್ಲಿ ಮಳೆಯ ಶಬ್ದ) ... ಅದೋ ಮಳೆಯು ಜೋರಾಗಿಯೇ ಪ್ರಾರಂಭವಾಯಿತು.

ಚಿರಂಜೀವಿ : [(ಉ) ಬಾಗಿಲ ಬಳಿಗೆ ಹೋಗಿ ಹೊರಗಡೆಗೆ ನೋಡುತ್ತ] ಅಬ್ಬ ! ಎಷ್ಟು ದೊಡ್ಡ ಹನಿಗಳು ! ಎಷ್ಟು ರಭಸದಿಂದ ಬೀಳುತ್ತವೆ ! ... ನದಿಯ ಮಾರ್ಗದಲ್ಲಿ ಗುರುಗಳು ಮಳೆಗೆ ಸಿಕ್ಕಿರುವರೋ ಏನೋ ! ಅವರ ಬಳಿ ಆತಪತ್ರವೂ ಇಲ್ಲ!

ವಿವೇಕವರೇಣ್ಯ : ಪ್ರಾಯಶಃ ಅವರು ಮಾರ್ಗದಲ್ಲಿರುವ ಆ ದೇವಾಲಯದಲ್ಲಿ ತಂಗಿರುತ್ತಾರೆ ... ಕತ್ತಲೆಯಾಗುತ್ತ ಬಂತು. ಪಕ್ಕದ ದೀಪಸ್ತಂಭದಲ್ಲಿ ದೀವಿಗೆಯನ್ನು ಹಚ್ಚಿ ಬಾ !

ಚಿರಂಜೀವಿ : ಹಾಗೆಯೇ ಆಗಲಿ.

[ನಿರ್ಗಮ (ಅ) : ಚಿರಂಜೀವಿ]

ವಿವೇಕವರೇಣ್ಯ : (ತನ್ನಲ್ಲಿ) ಈ ಮಳೆಯು ಬೇಗ ನಿಲ್ಲುವಂತೆ ಕಾಣುವುದಿಲ್ಲ. (ಎಂದು ಹೋಗಿ (ಚ) ಪೀಠದಲ್ಲಿ ಪ್ರೇಕ್ಷಕರಿಗೆ ಅಭಿಮುಖವಾಗಿ ಕುಳಿತುಕೊಳ್ಳುವನು.)

[ಪ್ರವೇಶ (ಅ) : ಚಿರಂಜೀವಿ]

ಚಿರಂಜೀವಿ : ((ವ) ಎಂಬಲ್ಲಿ ನಿಂತು) ದೀವಿಗೆಯನ್ನು ಹಚ್ಚಿರುವೆನು.

ವಿವೇಕವರೇಣ್ಯ : ಸರಿ. .... ಚಿರಂಜೀವೀ, ಹುಲ್ಲುಗಾವಲಿಗೆ ಹೋಗಿರುವ ಆಶ್ರಮದ ಗೋವುಗಳ ಪಾಡೇನಾಗಿರುವುದೋ ಏನೋ, ಈ ಮಳೆಯಲ್ಲಿ !

ಚಿರಂಜೀವಿ : ಆಶ್ರಮದ ಗೋವುಗಳು ಈ ದಿನ ಸಂಜೆಗೆ ಮುಂಚಿತವಾಗಿಯೇ ಆಶ್ರಮಕ್ಕೆ ಬಂದವು. ಗೋಶಾಲೆಯಲ್ಲಿ ಸುರಕ್ಷಿತವಾಗಿರುವುವು.

ವಿವೇಕವರೇಣ್ಯ : ಸರಿ.

[ತೆರೆಯಲ್ಲಿ (ಉ) ಬಳಿ : ಋಷಿಮೋಹಿನೀ : (ಆರ್ತಧ್ವನಿಯಲ್ಲಿ ಸ್ಪಷ್ಟವಾಗಿ) ಜಗದ್ರಕ್ಷಕಾ, ... ಭಯಂಕರವಾದ ಈ ನಿಶಿಯಲ್ಲಿ ನನ್ನನ್ನು ರಕ್ಷಿಸು, ರಕ್ಷಿಸು !]

ವಿವೇಕವರೇಣ್ಯ : (ಆಲಿಸಿ,) ... ಅದು ಓರ್ವ ಮಹಿಳೆಯ ಆರ್ತಧ್ವನಿಯಂತೆ ಇರುವುದಲ್ಲವೆ ?

ಚಿರಂಜೀವಿ : ಅಹುದು. ಮಾರ್ಗದಲ್ಲಿ ಯಾರೋ ಮಹಿಳೆ, ಮಳೆಗೆ ಸಿಕ್ಕಿರುವಂತೆ ಕಾಣುತ್ತದೆ.

[ತೆರೆಯಲ್ಲಿ ಮತ್ತೆ ಋಷಿಮೋಹಿನೀ : (ನಿಧಾನವಾಗಿ) ನಿಶಿಯಲ್ಲಿ ಮಳೆಗೆ ಸಿಕ್ಕಿ-ರುವ, ಏಕಾಂಗಿಯಾದ, ಈ ಅಬಲೆಯನ್ನು, ರಕ್ಷಿಸಬಲ್ಲ ಪುಣ್ಯಾತ್ಮರು ಯಾರೂ ಇಲ್ಲವಲ್ಲಾ !]

ವಿವೇಕವರೇಣ್ಯ : (ಎದ್ದು ಮುಂದೆ ಬಂದು) ನಿಶಿಯಲ್ಲಿ, ಮಳೆಗೆ ಸಿಕ್ಕಿರುವ, ಏಕಾಂಗಿಯಾದ, ಅಬಲೆ! ... ಆ ಆತಪತ್ರವನ್ನಿಲ್ಲಿ ಕೊಡು. ಹೋಗಿ ನೋಡಿಕೊಂಡು ಬರುವೆನು ... ಬೇಗ.

ಚಿರಂಜೀವಿ : ಇದೋ ಬಂದೆ.

[ನಿರ್ಗಮ (ಅ) ಚಿರಂಜೀವಿ]

ವಿವೇಕವರೇಣ್ಯ : (ತನ್ನಲ್ಲಿ) ನಿಶಿಯಲ್ಲಿ ... ಮಳೆಗೆ ಸಿಕ್ಕಿರುವ ... ಏಕಾಂಗಿಯಾದ --- ಅಬಲೆ ! --- ಯಾರೋ, ಏನೋ, ಪಾಪ !

[ಪ್ರವೇಶ (ಅ) ; ಚಿರಂಜೀವಿ]

ಚಿರಂಜೀವಿ : (ಛತ್ರಿಯೊಡನೆ ಪ್ರವೇಶಿಸಿ) ಇದೋ ಆತಪತ್ರ.

ವಿವೇಕವರೇಣ್ಯ : ಇಲ್ಲಿ ಕೊಡು. (ಎಂದು, ಛತ್ರಿಯನ್ನು ತೆಗೆದುಕೊಂಡು, ಪಂಚೆಯ ನಿರಿಯನ್ನು ಸ್ವಲ್ಪ ಮೇಲಕ್ಕೆ ಹಿಡಿದುಕೊಂಡು ಹೋಗುವನು.) .

[ನಿರ್ಗಮ (ಉ) : ವಿವೇಕವರೇಣ್ಯ]

ಚಿರಂಜೀವಿ : (ತನ್ನಲ್ಲಿ) ಋಷ್ಯಾಶ್ರಮದ ಬಳಿ, ಈ ಅವೇಳೆಯಲ್ಲಿ, ಸ್ತ್ರೀಧ್ವನಿಯು ಕೇಳಿಬರುತ್ತಿರುವುದು ತುಂಬಾ ಆಶ್ಚರ್ಯಕರವಾಗಿರುವುದಲ್ಲ! ... ಯಾರಿರಬಹುದು? [(ಉ) ಬಾಗಿಲ ಕಡೆ ನೋಡಿ,] ಅದೋ ಬಂದರಲ್ಲ !

[ಪ್ರವೇಶ (ಉ) : ವಿವೇಕವರೇಣ್ಯ ಮತ್ತು ಋಷಿಮೋಹಿನೀ]

[ವಿವೇಕವರೇಣ್ಯನು ಋಷಿಮೋಹಿನಿಗೆ, ಆಕೆಯ ಎಡಪಕ್ಕದಲ್ಲಿ, ಸ್ವಲ್ಪ ದೂರದಿಂದ, ಛತ್ರಿಯನ್ನು ಹಿಡಿದಿರುವನು. ಋಷಿಮೋಹಿನಿಯ ಬಲಗೈಯಲ್ಲಿ ಕೈಚೀಲವಿರುವುದು. ಋಷಿಮೋಹಿನಿಯು ಎರಡು ಹೆಜ್ಜೆ ಮುಂದೆ ಬಂದು, ಮಳೆಯಲ್ಲಿ ಸ್ವಲ್ಪ ತೊಯ್ದಿರುವ ಮೇಲ್ಮುಸುಕನ್ನು ತೆಗೆದು ಎಡಗೈಯಲ್ಲಿ ಹಿಡಿದುಕೊಂಡು, ಸುತ್ತಲೂ ನೋಡುವಳು. ಮೇಲ್ಮುಸುಕಿನಿಂದ ನೀರು ತೊಟ್ಟಿಕ್ಕುವುದು. ವಿವೇಕವರೇಣ್ಯನು ಛತ್ರಿಯನ್ನು (ಸ) ಎಂಬಲ್ಲಿಟ್ಟು, (ಉ) ಬಾಗಿಲ ಬಳಿಯೇ ನಿಲ್ಲುವನು. ಋಷಿಮೋಹಿನಿಯು ನೇರವಾಗಿ (ಯ) ಮಂಚದ ಬಳಿಗೆ ಹೋಗಿ, ಕೈಚೀಲವನ್ನೂ ಮೇಲ್ಮುಸುಕನ್ನೂ ಮಂಚದ ಮೇಲೆ (ಲ) ಅಂಚಿನಲ್ಲಿಟ್ಟು, ಮಂಚದ (ರ) ಎಂಬಲ್ಲಿ ಪ್ರೇಕ್ಷಕರಿಗೆ ಅಭಿಮುಖವಾಗಿ ಕುಳಿತು, ಚಳಿ ಮತ್ತು ಮಾರ್ಗಾಯಾಸಗಳನ್ನು ನಟಿಸುವಳು ಆಮೇಲೆ, ಮಂಚದ ಮೇಲೆ ಎಡ ಮಗ್ಗುಲಲ್ಲಿ ಹೊರಳಿಕೊಂಡು ಕಣ್ಣು ಮುಚ್ಚಿಕೊಳ್ಳುವಳು. ಅವಳ ತಲೆಯು (ಲ) ಕಡೆಗೆ ಇರುವುದು, ಮತ್ತು ಮುಖವು ಪ್ರೇಕ್ಷಕರ ಕಡೆಗೆ ಇರುವುದು. ಎಡತೋಳನ್ನು ತಲೆಯ ಕೆಳಕ್ಕೆ ಕೊಟ್ಟಿರುವಳು. ವಿವೇಕವರೇಣ್ಯನು (ಷ) ಎಂಬಲ್ಲೂ, ಚಿರಂಜೀವಿಯು (ವ) ಎಂಬಲ್ಲೂ ನಿಂತು ಅವಳನ್ನೇ ನೋಡುತ್ತಿರುವರು.]

ವಿವೇಕವರೇಣ್ಯ : (ಋಷಿಮೋಹಿನಿಯು ಹೊರಳಿಕೊಂಡುದನ್ನು ನೋಡಿ)ಚಿರಂಜೀವೀ, ಈಕೆಯು ಮಾರ್ಗಾಯಾಸದಿಂದಲೂ, ಶೈತ್ಯದಿಂದಲೂ ಬಳಲಿರುವಳು. ಅಗ್ಗಿಷ್ಟಿಕೆಯನ್ನು ತೆಗೆದುಕೊಂಡು ಬಾ. .... ಜಾಗ್ರತೆ.

ಚಿರಂಜೀವಿ : ಒಂದು ಕ್ಷಣದಲ್ಲಿ ತರುವೆನು. ಒಳಿಗೆ ಹೋಮಕುಂಡದಲ್ಲಿ ಅಗ್ನಿಯು ಇನ್ನೂ ಪ್ರಜ್ವಲಿಸುತ್ತಿರುವುದು.

[ನಿರ್ಗಮ (ಅ) ಚಿರಂಜೀವಿ]

ವಿವೇಕವರೇಣ್ಯ : [(ಷ) ಎಂಬಲ್ಲೀ ನಿಂತು ಅವಳನ್ನು ಮತ್ತೆ ಮತ್ತೆ ಈಕ್ಷಿಸುತ್ತ, ತನ್ನಲ್ಲಿ) ಪಾಪ ! ಬಳಲಿರುವಳು ! ಮಳೆಯಲ್ಲಿ ತೊಯ್ದಿರುವ ಸೆರಗು ಎದೆಗೆ ಅಂಟಿಕೊಂಡಿರುವುದು ! ... ಏನು ಕೋಮಲ ಕಾಯ ! ... ಹೊಳೆವ ಹೊಸ ಪ್ರಾಯ ! ... ರತಿಯನ್ನು ಧಿಕ್ಕರಿಸುವ ಸೌಂದರ್ಯ .. ಧರೆಗಿಳಿದ ಸುರನಾರಿಯಂತಿರುವ ಈ ಕರ್ಷಿಣಿ ಯಾರಿರಬಹುದು ?

[ಪ್ರವೇಶ (ಇ) : ಚಿರಂಜೀವಿ]

ಚಿರಂಜೀವಿ : (ಇಕ್ಕಳ ಅಥವಾ ಬಟ್ಟೆಯ ಚೌಕದಿಂದ ಅಗ್ಗಿಷ್ಟಿಕೆಯನ್ನು ಹಿಡಿದುಕೊಂಡು) ಇದೋ, ಅಗ್ಗಿಷ್ಟಿಕೆ.

ವಿವೇಕವರೇಣ್ಯ : ಅದನ್ನು ಮಂಚದ ಪಕ್ಕದಲ್ಲಿಟ್ಟು, ಅಗ್ನಿಯನ್ನು ಪ್ರಜ್ವಲಿಸು (ಚಿರಂಜೀವಿಯು ಅಗ್ಗಿಷ್ಟಿಕೆಯನ್ನು ಮಂಚದ ಪಕ್ಕದಲ್ಲಿಟ್ಟು, ಅದರ ಬಳಿ ನೆಲದ ಮೇಲೆ ಕುಳಿತುಕೊಳ್ಳುವನು) ... ಅಥವಾ ಅಗ್ನಿಯನ್ನು ನಾನೇ ಪ್ರಜ್ವಲಿಸುವೆನು ... (ಎಂದ ವಿವೇಕವರೇಣ್ಯನು ಅಗ್ಗಿಷ್ಟಿಕೆಯ ಬಳಿಗೆ ಹೋಗಿ· ನೆಲದ ಮೇಲೆ, (ಲ) ಬಳಿ, (ಇ) ಬಾಗಿಲಿಗೆ ಅಭಿಮುಖವಾಗಿ ಕುಕ್ಕುಟಾಸನದಲ್ಲಿ ಕುಳಿತು) ... ಆ ವ್ಯಜನವನ್ನಿಲ್ಲಿ ಕೊಡು ...

[ಚಿರಂಜೀವಿಯು ಎದ್ದು (ಪ) ಮೇಜಿನ ಮೇಲಿರುವ ಬೀಸಣಿಕೆಯನ್ನು ಕೊಟ್ಟು, (ಪ) ಮೇಜಿನ ಬಳಿ ನಿಲ್ಲುವನು. ವಿವೇಕವರೇಣ್ಯನು ಬೀಸಣಿಗೆಯಿಂದ ಅಗ್ನಿಯನ್ನು ಪ್ರಜ್ವಲಿಸುತ್ತ, ಮತ್ತೆ ಮತ್ತೆ ಅವಳ ಕಡೆ ನೋಡುವನು.

ಋಷಿಮೋಹಿನಿಯು ಎದ್ದು ಕುಳಿತುಕೊಳ್ಳುವಳು. ವಿವೇಕವರೇಣ್ಯ ಮತ್ತು ಚಿರಂಜೀವಿ ಇಬ್ಬರೂ ಥಟ್ಟನೆ ದೂರ ಸರಿದು, (ಅ) ಬಾಗಿಲ ಬಳಿ (ವ) ಎಂಬಲ್ಲಿ ನಿಲ್ಲುವರು.]

ವಿವೇಕವರೇಣ್ಯ : ಚಿರಂಜೀವೀ, ಅಗ್ಗಿಷ್ಟಿಕೆಯು ಇನ್ನು ಸಾಕು. ಅದನ್ನು ಒಳಗಿಟ್ಟು, ಸುಖೋಷ್ಣವಾದ ಗೋಕ್ಷೀರವನ್ನು ತೆಗೆದುಕೊಂಡು ಬಾ ... ಹಾಗೆಯೇ ಫಲಗಳನ್ನೂ ತಂದಿಡು.

ಚಿರಂಜೀವಿ : (ಇಕ್ಕಳ ಅಥವಾ ಬಟ್ಟೆಯ ಚೌಕದಿಂದ ಅಗ್ಗಿಷ್ಟಿಗೆಯನ್ನು ತೆಗೆದುಕೊಂಡು ಹೋಗುವನು.)

[ನಿರ್ಗಮ (ಇ) : ಚಿರಂಜೀವಿ]

[ಋಷಿಮೋಹಿನಿಯು ಎದ್ದು ನಿಂತು, ಸೆರಗನ್ನೂ ನಿರಿಗೆಗಳನ್ನು ಸರಿಪಡಿಸಿಕೊಂಡು, ಮೆಲ್ಲನೆ ಹೆಜ್ಜೆಯಿಡುತ್ತ, ಮಧ್ಯರಂಗಕ್ಕೆ ಬಂದು ನಿಲ್ಲುವಳು. (ಶ). ಎದೆಯ ಮೇಲೆ ಕೈಗಳನ್ನು ಬಿಗಿದುಕೊಂಡು (ವ) ಎಂಬಲ್ಲಿ ನಿಂತಿರುವ ವಿವೇಕವರೇಣ್ಯನು ಅವಳನ್ನೇ ನೋಡುತ್ತಿರುವನು.

ಇಲ್ಲಿಂದ ಮುಂದೆ ಚಿರಂಜೀವಿಯ ಪ್ರವೇಶದ ವರೆಗಿನ ಸಂಭಾಷಣೆಯಲ್ಲಿ ಋಷಿಮೋಹಿನೀ ಮತ್ತು ವಿವೇಕವರೇಣ್ಯರು ಪರಸ್ಪರ ಮುಖಗಳನ್ನು ನೋಡದೆ, ಪ್ರೇಕ್ಷಕರನ್ನು ಸಂಭೋಧಿಸುವಂತೆ ಮಾತನಾಡುವರು]

ಋಷಿಮೋಹಿನೀ : ಈಗ ನಾನೆಲ್ಲಿರುವೆನು ?

ವಿವೇಕವರೇಣ್ಯ : ಸುರಕ್ಷಿತವಾದ ಸ್ಥಳದಲ್ಲಿ.

ಋಷಿಮೋಹಿನೀ : ನಿಶಿಯಲ್ಲಿ ಮಾರ್ಗವನ್ನು ಕಳೆದುಕೊಂಡು, ಮಳೆಗೆ ಸಿಕ್ಕಿದ್ದ ನನ್ನನ್ನು, ಈ ಸುರಕ್ಷಿತವಾದ ಸ್ಥಳಕ್ಕೆ ಕರೆತಂದ ತಮ್ಮ ಉಪಕಾರವು ಚಿರಸ್ಮರಣೀಯವಾದುದು.

ವಿವೇಕವರೇಣ್ಯ : ಅದನ್ನು ಉಪಕಾರವೆಂದು ಕರೆಯುವುದಕ್ಕಿಂತ ಕೇವಲ ಮಾನುಷಧರ್ಮವೆಂದು ಕರೆಯಬಹುದಲ್ಲವೆ ? ... ಆದರೆ ಈಗ ನಾನು ಮಾತನಾಡುತ್ತಿರುವುದು ಯಾರೊಂದಿಗೆ ?

ಋಷಿಮೋಹಿನೀ : ನನ್ನ ಸ್ಥಳವು ಇಂದ್ರಪ್ರಸ್ಥನಗರ. ನನ್ನ ಹೆಸರು ಋಷಿಮೋಹಿನೀ. ಇಂದ್ರಪ್ರಸ್ಥ ನಗರದಲ್ಲಿ ನನ್ನ ತಂದೆ ಒಬ್ಬ ದೊಡ್ಡ ವಿದ್ವಾಂಸರು. ಅವರು ನನಗೆ ವಿದ್ಯೆಯನ್ನು ಕಲಿಸಿದರು. ಆದರೆ ಅವರು ನನಗಿಷ್ಟವಿಲ್ಲದ ವರನೊಬ್ಬನನ್ನು ಗೊತ್ತುಮಾಡಿದ್ದರಿಂದ, ನಾನು ವಿವಾಹಕ್ಕೊಪ್ಪದೆ, ತಂದೆಯ ಮನೆಯನ್ನು ಬಿಟ್ಟು ಹೊರಟು ಬಂದಿರುವೆನು. ದಾರಿಯಲ್ಲಿ ಅಲ್ಲಿಂದಲ್ಲಿಗೆ ಪ್ರಯಾಣಿಕರ ಜೊತೆ ಸಿಕ್ಕಿತ್ತು.

ವಿವೇಕವರೇಣ್ಯ : ಸರಿ ... ತಮ್ಮ ಪಯಣದ ಧ್ಯೇಯ ?

ಋಷಿಮೋಹಿನೀ : ನನ್ನ ಪಯಣದ ಧ್ಯೇಯವು ಜೈಮಿನಿ ಮಹರ್ಷಿಗಳ ಆಶ್ರಮ.

ವಿವೇಕವರೇಣ್ಯ : ಓಹೋ ! ಜೈಮಿನಿಮಹರ್ಷಿಗಳ ಆಶ್ರಮವೆ ?

ಋಷಿಮೋಹಿನೀ : ಅಹುದು. ಈ ಸಂಜೆ ಆ ವಟವೃಕ್ಷದ ಬಳಿ, ನನ್ನ ಜೊತೆಯ ಪ್ರಯಾಣಿಕರು ಜೈಮಿನಿ ಆಶ್ರಮವು ನಾತಿದೂರದಲ್ಲೇ ಇರುವುದೆಂದೂ, ನಾನು ದಕ್ಷಿಣ ದಿಕ್ಕಿನ ಶಾಖಾಮಾರ್ಗದಲ್ಲಿ ಸ್ವಲ್ಪ ದೂರ ಹೋಗಬೇಕೆಂದೂ ಸೂಚಿಸಿ, ನನ್ನನ್ನು ಅಲ್ಲಿ ಬಿಟ್ಟು ಮುಂದಕ್ಕೆ ಪ್ರಯಾಣಮಾಡಿದರು. ನಾನು ದಕ್ಷಿಣಕ್ಕೆ ತಿರುಗಿ, ಶಾಖಾಮಾರ್ಗದಲ್ಲಿ ಸ್ವಲ್ಪ ದೂರ ಬರುವಷ್ಟರಲ್ಲೇ ಬಿರುಗಾಳಿಯೆದ್ದಿತು. ಕಾರ್ಮೋಡಗಳು ಕವಿದವು. ಗುಡುಗು ಮಿಂಚಿನ ಮಳೆಯು ಪ್ರಾರಂಭವಾಯಿತು. ಆಗ ನೀವು ನನಗೆ ಸಿಕ್ಕದಿದ್ದರೆ, ನನ್ನ ಗತಿ ಏನಾಗುತ್ತಿತ್ತೋ ?

ವಿವೇಕವರೇಣ್ಯ : ಜೈಮಿನಿ ಆಶ್ರಮದಲ್ಲಿ ತಮ್ಮ ಕಾರ್ಯಾರ್ಥ ?

ಋಷಿಮೋಹಿನೀ : ಜೈಮಿನಿ ಆಶ್ರಮದಲ್ಲಿ ವಿವೇಕವರೇಣ್ಯರೆಂಬ ಒಬ್ಬ ಘನ-ವಿದ್ವಾಂಸರಿರುವರಂತೆ.

ವಿವೇಕವರೇಣ್ಯ : ಯಾರು ?

ಋಷಿಮೋಹಿನೀ : ಅವರ ಹೆಸರು ವಿವೇಕವರೇಣ್ಯ. ಅವರ ವಿದ್ವತ್ತು ಜೈಮಿನಿ ಮಹರ್ಷಿಗಳ ವಿದ್ವತ್ತಿಗಿಂತಲೂ ಅತಿಶಯವಾದುದೆಂಬುದಾಗಿ ಅವರ ಯಶಸ್ಸು ದಿಗಂತ ವಿಶ್ರಾಂತವಾಗಿರುವುದು. ಅವರ ಯಶಸ್ಸಿನಿಂದ ಆಕರ್ಷಿತಳಾಗಿ, ಅವರ ಸಂದರ್ಶನಾರ್ಥವಾಗಿ ಹೋಗುತ್ತಿರುವೆನು. ಆದರೆ, ಈಗ ನಾನೆಲ್ಲಿಗೆ ಬಂದಿರುವೆನು?

ವಿವೇಕವರೇಣ್ಯ : ನೀವು ಎಲ್ಲಿಗೆ ಹೋಗಬೇಕೆಂದಿರುವಿರೋ, ಅಲ್ಲಿಗೇ ಬಂದಿರುವಿರಿ ! ಮತ್ತು ಯಾರನ್ನು ಉದ್ದೇಶಿಸಿ ಬಂದಿರುವಿರೋ, ಅವರೊಡನೆಯೇ ಸಂಭಾಷಿಸುತ್ತಿರುವಿರಿ !

ಋಷಿಮೋಹಿನೀ : ( ಆಶ್ಚರ್ಯದಿಂದ ) ಹಾಗಾದರೆ ಇದು ಜೈಮಿನಿಮಹರ್ಷಿಗಳ ಆಶ್ರಮವೆ ?

ವಿವೇಕವರೇಣ್ಯ : ಅಹುದು.

ಋಷಿಮೋಹಿನೀ : ತಾವು ವಿದ್ವಾನ್ ವಿವೇಕವರೇಣ್ಯರೆ ?

ವಿವೇಕವರೇಣ್ಯ : ಅಹುದು.

ಋಷಿಮೋಹಿನೀ : ಇದೇ ಸುದಿನ.

[ಪ್ರವೇಶ (ಅ) : ಚಿರಂಜೀವಿ]

ಚಿರಂಜೀವಿ : (ಫಲಗಳನ್ನೂ ಗೋಕ್ಷೀರದ ಲೋಟಗಳನ್ನೂ ಉಳ್ಳ ತಟ್ಟೆಯೊಡನೆ ಪ್ರವೇಶಿಸಿ,) ಇದೋ ಫಲಗಳು ಮತ್ತು ಗೋಕ್ಷೀರ.

ವಿವೇಕವರೇಣ್ಯ : ಅಲ್ಲಿಡು. (ಎಂದು (ಪ) ಮೇಜನ್ನು ತೋರಿಸುವನು. ಚಿರಂಜೀವಿಯು ತಟ್ಟೆಯನ್ನು (ಪ) ಮೇಜಿನ ಮೇಲಿಡುವನು.) ... ಚಿರಂಜೀವಿ, ಈಗ ನೀನು ಪ್ರಾರ್ಥನಾಲಯಕ್ಕೆ ಹೋಗಿ, ಆಶ್ರಮದ ಇತರ ಶಿಷ್ಯರೊಂದಿಗೆ ಸಾಯಂ ಪ್ರಾರ್ಥನೆಯನ್ನು ಮಾಡು. ಆಮೇಲೆ ಗೋಶಾಲೆಗೆ ಹೋಗಿ, ಗೋವುಗಳಿಗೆ ಮೇವನ್ನು ಹಾಕು.

ಚಿರಂಜೀವಿ : ಆಗಬಹುದು.

[ನಿರ್ಗಮ (ಅ) : ಚಿರಂಜೀವಿ]

[ಋಷಿಮೋಹಿನಿಯು ಎರಡು ಹೆಜ್ಜೆ ಮುಂದಕ್ಕೆ ಬರುವಳು.]

ವಿವೇಕವರೇಣ್ಯ : ವಿದುಷೀ, ...

ಋಷಿಮೋಹಿನೀ : ನನ್ನನ್ನು ವಿದುಷಿಯೆಂದೇಕೆ ಸಂಬೋಧಿಸುತ್ತೀರಿ ? (ಮುಗುಳುನಗೆಯಿಂದ) ನೀವು ನನ್ನನ್ನು ಹೆಸರು ಹಿಡಿದೇ ಸಂಬೋಧಿಸಬಹುದು.

ವಿವೇಕವರೇಣ್ಯ : (ಅವಳನ್ನು ಸಮೀಪಿಸಿ, ಮುಗುಳುನಗೆಯಿಂದ) ಋಷಿಮೋಹಿನೀ,

ಋಷಿಮೋಹಿನೀ : (ಮುಗುಳುನಗೆಯಿಂದ) ಹುಂ ?

ವಿವೇಕವರೇಣ್ಯ : ಅಪಾರವಾದ ವಿದ್ಯಾಪ್ರೇಮಲ್ಲವೆ ನಿಮ್ಮನ್ನಿಲ್ಲಿಗೆ ಕರೆತಂದಿರುವುದು ?

ಋಷಿಮೋಹಿನೀ : ಅದೇನೋ ... ಅಂತು, ವಿದ್ವಾಂಸರೊಂದಿಗೆ ಸಂಭಾಷಣೆ, ವಿದ್ವಾಂಸರ ಸಹವಾಸ, ಅವರ ಸತ್ಸಂಗ, ಸಂಪರ್ಕ ಎಂದರೆ ನನಗೆ ತುಂಬ ಆಸೆ ! ವಿದ್ಯಾಪ್ರೇಮದಿಂದ ತಮ್ಮಲ್ಲಿಗೆ ಪ್ರೇಮಭಿಕ್ಷೆಗಾಗಿ ಬಂದಿರುವೆನು.

ವಿವೇಕವರೇಣ್ಯ : (ಆತ್ಮಗತ) ಶ್ರುತಂ ಶ್ರೋತವ್ಯಂ ! ... ಈ ಮನೋಹರೆಯನ್ನು ನೋಡಿದಾಗಿನಿಂದ ನಾನು ಯಾವ ಮಾತುಗಳನ್ನು ಈಕೆಗೆ ಹೇಳಬೇಕೆಂದಿದ್ದೆನೋ, ಮತ್ತು ಯಾವ ಮಾತುಗಳನ್ನು ಈಕೆಯ ಬಾಯಿಂದ ಕೇಳಬೇಕೆಂದಿದ್ದೆನೋ ಆ ಮಾತುಗಳನ್ನು ಈಕೆಯು ತಾನಾಗಿಯೇ ಆಡುತ್ತಿರುವಳು! ಇದಲ್ಲವೆ ಸಹಜವಾದ ಪ್ರೇಮದ ಲಕ್ಷಣ ! ... (ಪ್ರಕಾಶ) ಋಷಿಮೋಹಿನೀ, ಅದೆಷ್ಟು ಸರಳವಾದ ಮನಸ್ಸು ನಿಮ್ಮದು ! ... ಬನ್ನಿ, ಸುಖೋಷ್ಣವಾದ ಗೋಕ್ಷೀರವು ಆರಿ ಹೋಗುತ್ತಿರುವುದು. ಈ ಫಲಾಹಾರವನ್ನು ಸೇವಿಸುತ್ತ ಮಾತನಾಡೋಣ.

ಋಷಿಮೋಹಿನೀ : ತಾವು ಹೇಗೆ ಹೇಳಿದರೆ ಹಾಗೆ ನಡೆದುಕೊಳ್ಳುವುದಕ್ಕೆ ಸಿದ್ಧಳಾಗಿರುವೆನು. ... ತಾಳಿ, ಫಲಗಳನ್ನು ಅಣಿಮಾಡುವೆನು ... (ಎಂದು ಫಲಗಳನ್ನು (ವ) ಮೇಜಿನಿಂದ (ಟ) ಮೇಜಿಗೆ ವರ್ಗಾಯಿಸುತ್ತ, ಅವುಗಳನ್ನು (ಟ) ಮೇಜಿನ ಮೇಲೆ ಸರಿಯಾಗಿ ಇಡುತ್ತ, ಮತ್ತು ಅವುಗಳನ್ನು ಅರೆವಾಸಿ ಸುಲಿದಿಡುತ್ತ, ಈ ಕೆಳಗಿನ ಸ್ವರಗಳನು ತ್ರಿಕಾಲಗಳಲ್ಲಿ ಮೆಲುದನಿಯಲ್ಲಿ ಮಧುರವಾಗಿ ಹಾಡುವಳು. ('ಶೃಂಗಾರಲಹರೀ' ಎಂಬ ಕೃತಿಯ ಈ ಕೆಳಗಿನ ಸ್ವರಗಳನ್ನು ಮಾತ್ರ: )

ಸಾ । ರಿಸನಿಪ, ಸನಿಪಮ, ಗಮಪಾ,
ಗಮ ಪಸನಿಪ, ಗಮಪನಿ,
ಸರಿಸನಿ, ಸನಿಪಮ, ಪನಿಪಮ,
ಪಮಗಮ, ರಿಗಮ ರಿಗರಿ ಪಾಮಾ,
ಗಾಮಪನಿ, ಸಸನಿಪ, ನಿನಿಪಮ,
ಪಪಮಗ, ಮಮಗಸ, ಮಗ, ಪಮ,
ನಿಪ, ಸನಿಪಮ, ಗಮಪನಿಧನಿಧನಿ,
ಪಪಮಗಸಾ ನಿಪಮಗಸಾ,
ಸನಿಪಮಗಸಾ, ರಿಸನಿಪಮಗಾಮಪನಿ, ॥ಸಾ–॥

[ ವಿವೇಕವರೇಣ್ಯನು (ವ) ಎಂಬಲ್ಲಿ ನಿಂತು, ತಲೆದೂಗುತ್ತ ಆಲಿಸುತ್ತಿರುವನು. ಋಷಿಮೋಹಿನಿಯು ಫಲಗಳನ್ನು ಅಣಿಮಾಡುವ ಕಾರ್ಯವನ್ನು ಗಾನವು ಮುಗಿಯುವುದರೊಳಗಾಗಿಯೇ ಪೂರೈಸಿ, ಮಧ್ಯರಂಗದಲ್ಲಿ ನಿಂತು, ಗಾನವನ್ನು ಮುಗಿಸುವಳು. ತರುವಾಯ ಅದೇ ಸ್ವರಗಳನ್ನು ಮತ್ತೆ ತ್ರಿಕಾಲಗಳಲ್ಲಿ ಹಾಡಿಕೊಂಡು ನರ್ತನ ಮಾಡುವಳು. ವಿವೇಕವರೇಣ್ಯನು ಆನಂದಪರವಶನಾಗುವನು. ನರ್ತನವು ಮುಗಿದ ನಂತರ ಋಷಿ–

ಮೋಹಿನಿಯು ಮಧ್ಯರಂಗದಲ್ಲಿ ನಿಂತು, ಸಂತೋಷದ ಆಧಿಕ್ಯದಿಂದ ಕುಲುಕುಲು ನಗುವಳು.]

ವಿವೇಕವರೇಣ್ಯ : ಮನೋಹರವಾದ ಗಾನ ! ಅಮೋಘವಾದ ನೃತ್ಯ ! ಋಷಿಮೋಹಿನೀ ಎಂಬ ಹೆಸರು ನಿಮಗೆ ಅನ್ವರ್ಥವಾಗಿರುವುದು !

ಋಷಿಮೋಹಿನೀ : (ಅವನ ಮುಖವನ್ನೇ ನೋಡುತ್ತ) ಅದು ಪ್ರಿಯವಾದ ವಸ್ತುವಿನ ಸಾಮೀಪ್ಯದ ಮಹಿಮೆ ! ... ಬನ್ನಿ ಫಲಾಹಾರವು ಸಿದ್ಧವಾಗಿರುವುದು।

(ಋಷಿಮೋಹಿನಿಯು (ಕ) ಎಂಬ ಪೀಠದಲ್ಲೂ, ವಿವೇಕವರೇಣ್ಯನು (ಚ) ಎಂಬ ಪೀಠದಲ್ಲೂ ಕುಳಿತುಕೊಳ ವರು

ವಿವೇಕವರೇಣ್ಯ : ನಿಮಗೆ ಅತ್ಯಂತ ಪ್ರಿಯವಾದ ಫಲವಾವುದು ?

ಋಷಿಮೋಹಿನೀ : ನನ್ನ ಮನೋರಥವೊಂದು ಫಲಿಸುವುದಾದರೆ, ಆ ಫಲಕ್ಕಿಂತ ಹೆಚ್ಚಿನ ಫಲವಿನ್ನಾವುದಿರುವುದು ? ... (ಎಂದು ನಗುತ್ತ, ದ್ರಾಕ್ಷಿಯ ಒಂದು ಗೊಂಚಲನ್ನು ಅವನ ಕೈಗೆ ಕೊಟ್ಟು, ತಾನು ಇನ್ನೊಂದು ಗೊಂಚಲನ್ನು ಕೈಯಲ್ಲಿ ಹಿಡಿದು, ಮೇಜಿನ ಅಂಚಿನಲ್ಲಿ ಅರೆತೆರೆದಿಟ್ಟಿರುವ ತಾಳೆಯ ಓಲೆಯ ಪುಸ್ತಕವನ್ನು ನೋಡುವಳು.) ಓಹೋ ! ಇದೇನು ? ... ಗ್ರಂಥರಚನೆಯೋ ?

ವಿವೇಕವರೇಣ್ಯ : ಅಹುದು. ಅದನ್ನು ಜೈಮಿನಿಮಹರ್ಷಿಗಳು ಬರೆಯುತ್ತಿರುವರು.

ಋಷಿಮೋಹಿನೀ : (ಪುಸ್ತಕವನ್ನು ಕೈಗೆ ತೆಗೆದುಕೊಂಡು ಓದುವಳು.) 'ಬಲವಾನಿಂದ್ರಿಯಗ್ರಾಮೋ। ವಿದ್ವಾಂಸಂ ...' ಏನಿದು ? ... 'ಅಪಕರ್ಷತಿ' ಎಂದು ಬರೆದು, ಆಮೇಲೆ ಅದನ್ನು 'ನಾಪಕರ್ಷತಿ' ಎಂದು ತಿದ್ದಲಾಗಿರುವುದಲ್ಲ !

ವಿವೇಕವರೇಣ್ಯ : (ಚಕಿತನಾಗಿ, ಕೈಯಲ್ಲಿರುವ ದ್ರಾಕ್ಷಿಯ ಗೊಂಚಲನ್ನು ಥಟ್ಟನೆ ಮೇಜಿನ ಮೇಲಕ್ಕೆ ಕೈಬಿಟ್ಟು, ಎದ್ದು ದೂರ ಸರಿದು ನಿಂತು, ಯೋಚಿಸುತ್ತ.) ಅದನ್ನು ತಿದ್ದಿದವನು ನಾನು.

ಋಷಿಮೋಹಿನೀ : (ಎದ್ದು, ಅಲ್ಲಿಯೇ ನಿಂತು, ಅವನನ್ನು ಆಶ್ಚರ್ಯದಿಂದ ನೋಡುತ್ತ.) ... ಏನು ? ಇದನ್ನು ತಿದ್ದಿದವರು ನೀವೆ ?

ವಿವೇಕವರೇಣ್ಯ ! (ಯೋಚಿಸುತ್ತ.) ... ಅಹುದು.

ಋಷಿಮೋಹಿನೀ : ಈ ತಿದ್ದುಪಡಿಗೆ ಕಾರಣವೇನಿತ್ತು ? ಆಧಾರವಾದರೂ ಏನು ? ಜೈಮಿನಿಮಹರ್ಷಿಗಳು ಆ ರೀತಿ ಬರೆದಾಗ ಪ್ರಾಯಶಃ ಅವರ ಮನಸ್ಸಿನಲ್ಲಿ ವಿಶ್ವಾಮಿತ್ರಮಹರ್ಷಿಯ ಮನಸ್ಸನ್ನು ಅಪ್ಸರೆ ಮೇನಕೆಯು ಅಪಕರ್ಷಿಸಿದ ಚಿತ್ರವಿದ್ದಿರಬೇಕು. ನೀವು ಅದನ್ನು ತಿದ್ದಿದಾಗ ನಿಮ್ಮ ಮನಸ್ಸಿನಲ್ಲಿ ಯಾರ ಚಿತ್ರವಿತ್ತು?

ವಿವೇಕವರೇಣ್ಯ : (ಯೋಚನಾಮಗ್ನನಾಗಿ) ... ನನ್ನ ಸ್ವಂತ ಚಿತ್ರ.

ಋಷಿಮೋಹಿನೀ : ಸ್ವಂತ ಚಿತ್ರ ! ... ಎಂದರೆ, ಈ ತಿದ್ದುಪಡಿಗೆ ಸಾಕ್ಷಾತ್ತಾಗಿ ನೀವೇ ನಿದರ್ಶನವೆಂದಾಯಿತು ! ... ಇದೀಗ ನನ್ನ ದುರದೃಷ್ಟ !

ವಿವೇಕವರೇಣ್ಯ : (ಗಾಬರಿಯಿಂದ) ಏಕೆ ? ಏನಾಯಿತು ?

ಋಷಿಮೋಹಿನೀ : (ಉದ್ವೇಗದಿಂದ) ಆಗುವುದಿನ್ನೇನು ? ನನ್ನ ಮನೋರಥವು ಭಗ್ನವಾಯಿತು ! ... (ಸಿಟ್ಟಿನಿಂದ ಪುಸ್ತಕವನ್ನು ಮೇಜಿನ ಮೇಲೆ ಹಾಕಿ, ವಿವೇಕವರೇಣ್ಯನ ಬಳಿಗೆ ಓಡಿ, ಮಿಂಚುವ ಕಂಗಳಿಂದ) ... ನಾನು ಬಯಸಿ ಬಂದುದು ಚಂದ್ರಮನನ್ನು, ಚಂಡಭಾಸ್ಕರನನ್ನಲ್ಲ ! ತೋರಮಾಣಿಕವನ್ನು, ಭೂರಿಕೆಂಡವನ್ನಲ್ಲ ! ಮೃದುವಾದ ಪುಷ್ಪವನ್ನು, ಕಠೋರವಾದ ವಜ್ರವನ್ನಲ್ಲ ! ರಸಿಕನಾದ ವಿದ್ವಾಂಸನನ್ನು, ಉಗ್ರನಾದ ಜಿತೇಂದ್ರಿಯನನ್ನಲ್ಲ ! ... (ದುಃಖದಿಂದ) ಅಕಟಾ ! ನಿಮಗೆ ಜಿತೇಂದ್ರಿಯತ್ವದ ಧ್ಯೇಯವಿರುವುದೆಂದು ನನಗೆ ಮೊದಲೇ ಗೊತ್ತಾಗಲಿಲ್ಲವಲ್ಲಾ ! ಅದು ಗೊತ್ತಾಗಿದ್ದರೆ, ನಾನು ಇಂದ್ರಪ್ರಸ್ಥನಗರದಿಂದ ಇಲ್ಲಿಗೆ ಬರುತ್ತಲೇ ಇರಲಿಲ್ಲ ! ಅಂಥ ಉಚ್ಚವಾದ ಧ್ಯೇಯದಿಂದ ನಿಮ್ಮನ್ನು ಅಪಕರ್ಷಿಸಿ, ನಾನು ಯಾವ ಪಾಪಕ್ಕೆ ಹೋಗಲಿ ? ... (ದುಃಖಿಸುವಳು)

ವಿವೇಕವರೇಣ್ಯ : (ಏನೂ ತೋಚದೆ,) ಋಷಿಮೋಹಿನೀ, ...

ಋಷಿಮೋಹಿನೀ: ನೀವು ನನ್ನನ್ನು ಮಾತನಾಡಿಸಬೇಡಿ. ... ನಾನಿಲ್ಲಿ ಇನ್ನೊಂದು ಕ್ಷಣವೂ ಇರಲಾರೆ. ... (ಎಂದು, ಕೈಚೀಲ ಮತ್ತು ಮೇಲ್ಮುಸುಕುಗಳನ್ನು ತೆಗೆದುಕೊಂಡು ಸರ್ರನೆ (ಉ) ಬಾಗಿಲ ಬಳಿಗೆ ಹೋಗಿ, ಹೊರಗೆ ನೋಡಿ,) ... ಹೊರಗೆ ಗಾಢಾಂಧಕಾರ, ಭೋರ್ಗರೆಯುವ ಮಳೆ ! ... ಏನು ತಾನೆ ಮಾಡಲಿ ? ... ((ಎ) ಬಾಗಿಲಿನ ಕಡೆ ನೋಡಿ ) ಈ ರಾತ್ರಿಯನ್ನು ಆ ಕೋಣೆಯಲ್ಲಿ ಕಳೆಯದೆ ವಿಧಿಯಿಲ್ಲ. (ಎಂದು ಸರ್ರನೆ, (ಎ) ಬಾಗಿಲ ಬಳಿಗೆ ಹೋಗುವಳು.)

ವಿವೇಕವರೇಣ್ಯ : ( ಉದ್ವೇಗದಿಂದ ) ಋಷಿಮೋಹಿನೀ, ಋಷಿಮೋಹಿನೀ, (ಎನ್ನುತ್ತ ಅವಳನ್ನು ಸಮೀಪಿಸುವನು.)

ಋಷಿಮೋಹಿನೀ : (ಅಣಕಿಸುವಂತೆ) ' ವಿದ್ವಾಂಸಂ ನಾಪಕರ್ಷತಿ! ' (ಎಂದು ವ್ಯಾಖ್ಯಾಯಿಸುವಂತೆ ಕೋಣೆಯನ್ನು ಪ್ರವೇಶಿಸಿ, ಬಾಗಿಲನ್ನು ಧಡ್ ಎಂದು ಮುಚ್ಚಿಕೊಂಡು, ಅಗಳಿಯನ್ನು ಹಾಕಿಕೊಳ್ಳುವಳು.)

ವಿವೇಕವರೇಣ್ಯ : (ಕೋಣೆಯ ಬಾಗಿಲನ್ನು ನೂಕುವನು. ಆದರೆ ಅದು ಭದ್ರಪಡಿಸಲ್ಪಟ್ಟಿರುವುದು. ಹತಾಶನಾಗಿ,(ಚ)ಪೀಠದಲ್ಲಿ ಪ್ರೇಕ್ಷಕರಿಗೆ ಅಭಿಮುಖವಾಗಿ ಕುಳಿತು, ಹಣೆಯ ಮೇಲೆ ಅಂಗೈ ಇಟ್ಟುಕೊಂಡು, ತಲೆ ಕೊಡಹುವನು. ಆಮೇಲೆ ಎದ್ದು, (ವ) ಮತ್ತು (ಷ) ಗಳ ಮಧ್ಯೆ ನಿಧಾನವಾಗಿ ಓಡಾಡುತ್ತ, ತನ್ನಲ್ಲಿ ) ... ನನ್ನ ಮನಸ್ಸು ಸ್ತ್ರೀವ್ಯಾಮೋಹಕ್ಕೆ ಇಷ್ಟು ಸುಲಭವಾಗಿ ವಶವಾಗುವುದೆಂದು ನಾನು ಎಣಿಸಿರಲಿಲ್ಲ ! ... ಗುರುವರ್ಯರು ಬರೆದ ವಾಕ್ಯವೇ ಸರಿಯೆಂದು ತೋರುತ್ತದೆ. ... ಆದರೆ, ಈಗಲಾದರೂ ಈಕೆಯ ಧ್ಯಾಸವನ್ನು ಬಿಟ್ಟು, ನನ್ನ ಮನಸ್ಸನ್ನು ನನ್ನ ಸ್ವಾಧೀನದಲ್ಲಿಟ್ಟುಕೊಳ್ಳಬಾರದೇಕೆ ? ವಿದ್ವಾಂಸನಾದ ನನಗೆ ಅದು ಸಾಧ್ಯವಾಗಬೇಕಷ್ಟೇ ? ... ನಾನು ಮಾಡಿರುವ ತಿದ್ದುಪಡಿಯನ್ನು ನಾನೇ ರದ್ದುಪಡಿಸುವುದೇ ? ... ಆಗದು, ಆಗದು. ಆ ಬದಲು ನಾನು ಅದನ್ನು ಸಮರ್ಥಿಸಬೇಕು, ಸಾರ್ಥಕಗೊಳಿಸಬೇಕು. ಆದ್ದರಿಂದ ಇನ

ಋಷಿಮೋಹಿನಿಯ ಯೋಚನೆ ಬೇಡ ... [(ಅ) ಬಾಗಿಲ ಕಡೆ ನೋಡಿ,] ಯಾರದು? ಚಿರಂಜೀವಿ ?

[ ಪ್ರವೇಶ ] ( ಅ ) : ಚಿರಂಜೀವಿ ]

ಚಿರಂಜೀವಿ : ಅಹುದು, ನಾನೇ .... ಸಾಯಂಪ್ರಾರ್ಥನೆಯಾಯಿತು. ಗೋವುಗಳಿಗೆ ಬಾಲತೃಣವನ್ನು ಹಾಕಿರುವೆನು .... ಬಂದಿರುವ ಅತಿಥಿಗೆ ಬಿಡಾರವನ್ನೆಲ್ಲಿ ಮಾಡಬೇಕು ?

ವಿವೇಕವರೇಣ್ಯ : ಆಕೆ ಈ ಕೋಣೆಯಲ್ಲಿರುವಳು. ಅಲ್ಲಿಯೇ ಇರಲಿ.

ಚಿರಂಜೀವಿ : ಸರಿ .... ಫಲಾಹಾರಮಂದಿರದಲ್ಲಿ ಗುರುಗಳಿಗೆ ಎಲ್ಲವನ್ನೂ ಅಣಿಮಾಡಿರುವೆನು. ಆದರೆ ಅವರು ನದೀತೀರದಿಂದ ಇನ್ನೂ ಬರಲೇ ಇಲ್ಲವಲ್ಲಾ ! ಆತಪತ್ರವನ್ನು ತೆಗೆದುಕೊಂಡು ನಾನು ಹೊರಗೆ ಹೋಗಿ ನೋಡಿಕೊಂಡು ಬರಲೆ?

ವಿವೇಕವರೇಣ್ಯ : ಹಾಗೆಯೇ ಮಾಡು.

[ ಚಿರಂಜೀವಿ : ( ಉ ) ಬಾಗಿಲ ಬಳಿ ಇರುವ ಆತ ಪತ್ರವನ್ನು ತೆಗೆದುಕೊಂಡು] ನದಿಯ ಮಾರ್ಗದಲ್ಲಿ ನೋಡಿಕೊಂಡು ಬರುವೆನು.

ವಿವೇಕವರೇಣ್ಯ : [(ಎ) ಬಾಗಿಲ ಕಡೆಗೆ ಒಂದು ಸಲ ತಿರುಗಿ ನೋಡಿ, (ಉ) ಬಾಗಿಲ ಬಳಿ ಇರುವ ಚಿರಂಜೀವಿಯ ಬಳಿಗೆ ಬಂದು,] ... ಚಿರಂಜೀವೀ, ಗುರುಗಳು ಸಿಕ್ಕಿದರೆ, ಅವರನ್ನು ನೇರವಾಗಿ ಫಲಾಹಾರಮಂದಿರಕ್ಕೆ ಕರೆದುಕೊಂಡು ಹೋಗು; ಮತ್ತು ಅವರನ್ನು ಅಲ್ಲಿ ಬಿಟ್ಟು, ಕೂಡಲೆ ಇಲ್ಲಿಗೆ ಬಂದು, ಅವರು ಬಂದ ಸಂಗತಿಯನ್ನು ನನಗೆ ತಿಳಿಸು.

ಚಿರಂಜೀವಿ : ಹಾಗೆಯೇ ಆಗಲಿ.

[ ನಿರ್ಗಮ (ಉ) : ಚಿರಂಜೀವಿ ]

ವಿವೇಕವರೇಣ್ಯ : (ಅವಸರದಿಂದ, ತನ್ನಲ್ಲಿ) ಇನ್ನೇನು, ಗುರುಗಳು ಬರುವ ಸಮಯ ! ಅವರು ಬಂದ ಮೇಲೆ ಸನ್ನಿವೇಶವು ಬದಲಾಗುವುದು. ಅಷ್ಟರೊಳಗಾಗಿ ನಾನು ಈ ಅವಕಾಶವನ್ನು ಉಪಯೋಗಿಸಿಕೊಳ್ಳಬೇಕಲ್ಲವೆ ? ಇಲ್ಲದಿದ್ದರೆ, ಕೈಗೆ ಸಿಕ್ಕಿರುವ ಹಕ್ಕಿಯನ್ನು ಕೈಬಿಟ್ಟಂತೆಯೇ ! ಅದು ಮತ್ತೆ ಸಿಗುವುದೆ ? ... ಕೂಡದು, ಈ ಹಕ್ಕಿಯನ್ನು ಕೈಬಿಡಕೂಡದು. ಕಾಲವು ಕಳೆಯತಕ್ಕದ್ದಲ್ಲ. ( ಎಂದು ಉದ್ವೇಗದಿಂದ ( ಎ ) ಬಾಗಿಲ ಬಳಿಗೆ ಹೋಗಿ,) ಋಷಿಮೋಹಿನೀ, ಬೇಗ ಬಾಗಿಲು ತೆರೆ. ನನ್ನೊಡನೆ ಈ ಫಲಗಳನ್ನು ಸ್ವೀಕರಿಸು ಬಾ.

ಋಷಿಮೋಹಿನೀ : [ (ಒ) ಕಿಟಕಿಯ ಬಾಗಿಲನ್ನು ತೆರೆಯುವಳು. ವಿವೇಕವರೇಣ್ಯನು (ಶ) ಎಂಬಲ್ಲಿ ನಿಂತು ನೋಡುತ್ತಿರಲು, ಕಿಟಕಿಯಲ್ಲಿ ಮುಖವನ್ನಿಟ್ಟು, ಅಣಕಿಸುವ ಧ್ವನಿಯಲ್ಲಿ, ಸ್ಪಷ್ಟವಾಗಿ; ) ' ವಿದ್ವಾಂಸಂ ನಾಪಕರ್ಷತಿ ' ... (ಎಂದು ಮರೆಯಾಗುವಳು. ಕಿಟಕಿಯ ಬಾಗಿಲು ತೆರೆದೇ ಇರುವುದು.)

ವಿವೇಕವರೇಣ್ಯ : (ಕಿಟಕಿಯ ಬಳಿಗೆ ಹೋಗಿ,) ಆ ತಿದ್ದುಪಡಿಯು ಸರಿಯಲ್ಲ. ನನ್ನ ಮನಸ್ಸು ಅಪಕರ್ಷಿತವಾಗಿ, ಒಳಗೆ ನಿನ್ನ ಜೊತೆಯಲ್ಲಿರುವುದು. ನನ್ನ ದೇಹವು ಮಾತ್ರ, ಈ ಬಾಗಿಲಿನ ಕಾರಣದಿಂದ ಇಲ್ಲಿ ಹೊರಗಡೆ ಇರುವುದು. ನೀನು ನನಗಾಗಿ ಬಂದವಳೆಂದು ಹೇಳಿದೆಯಲ್ಲವೇ ? ಹಾಗಾದರೆ ಬಾಗಿಲನ್ನೇಕೆ ಭದ್ರಪಡಿಸಿರುವೆ ? ತೆರೆ, ಬೇಗ ಬಾಗಿಲು ತೆರೆ.

ಋಷಿಮೋಹಿನೀ : (ಮತ್ತೆ ಕಿಟಕಿಯಲ್ಲಿ ಮುಖವನ್ನಿಟ್ಟು, ತಲೆಯನ್ನಲ್ಲಾಡಿಸುತ್ತ ಸ್ಪಷ್ಟವಾಗಿ:) 'ವಿದ್ವಾಂಸಂ ನಾಪಕರ್ಷತಿ.' (ಎಂದು, ಮತ್ತೆ ಮರೆಯಾಗುವಳು. ಕಿಟಕಿಯ ಬಾಗಿಲು ತೆರೆದೇ ಇರುವುದು.)

ವಿವೇಕವರೇಣ್ಯ : (ಕಿಟಕಿಯ ಬಳಿಯಲ್ಲೇ ನಿಂತು,) ನನ್ನನ್ನೇಕೆ ಅಪಹಾಸ್ಯಮಾಡುತ್ತಿರುವೆ ? ಆ ವಾಕ್ಯವು ಸರಿಯಲ್ಲವೆಂದು ಒಪ್ಪಿಕೊಂಡಿರುವೆನಲ್ಲ. ಬೇಕಾದರೆ ಅದನ್ನು ತಿದ್ದಿ ಮೊದಲಿನಂತೆ ಬರೆಯಲೂ ಸಿದ್ಧನಾಗಿರುವೆನು ... ಈಗಲೇ ತಿದ್ದುವೆನು ... (ಎಂದು ಹೋಗಿ (ಕ) ಪೀಠದಲ್ಲಿ ಕುಳಿತು ಪುಸ್ತಕದಲ್ಲಿ ಶ್ಲೋಕವನ್ನು ತಿದ್ದತೊಡಗುವನು.)

[ಪ್ರವೇಶ ( ಉ ) : ಚಿರಂಜೀವಿ ]

ಚಿರಂಜೀವಿ : [ಛತ್ರಿಯ ಸಮೇತ ಪ್ರವೇಶಿಸಿ, (ಉ) ಬಾಗಿಲಲ್ಲೇ ನಿಂತು,] ಮಳೆಯೇನೋ ಕಡಿಮೆಯಾಗುತ್ತಿರುವುದು. ಆದರೆ ಗುರುವರ್ಯರು ಎಲ್ಲೂ ಕಾಣಿಸಲಿಲ್ಲವಲ್ಲಾ ! (ಎನ್ನುತ್ತ ಛತ್ರಿಯನ್ನು (ಸ) ಎಂಬಲ್ಲಿಟ್ಟು, ಪುಸ್ತಕದಲ್ಲಿ ಶ್ಲೋಕವನ್ನು ತಿದ್ದುತ್ತಿರುವ ವಿವೇಕವರೇಣ್ಯನ ಕಡೆ ನೋಡಿ, ತನ್ನಲ್ಲಿ ) .... ಚಿಕ್ಕ ಗುರುಗಳು ತದೇಕಚಿತ್ತರಾಗಿ ಏನನ್ನೋ ಬರೆಯುತ್ತಿರುವರು ! ನಾನು ಬಂದಿರುವುದನ್ನು ಸಹ ಅವರು ಗಮನಿಸುವಂತಿಲ್ಲ ! .... (ಎಂದು ಶಬ್ದವಾಗದಂತೆ ಮೆಲ್ಲನೆ (ವ) ಎಂಬಲ್ಲಿಗೆ ಬಂದು ನಿಲ್ಲುವನು )

ವಿವೇಕವರೇಣ್ಯ : (ಚಿರಂಜೀವಿಯು ಬಂದಿರುವುದನ್ನರಿಯದೆ, ಪುಸ್ತಕವನ್ನು ಕಿಟಕಿಯ ಬಳಿಗೆ ತೆಗೆದುಕೊಂಡು ಹೋಗಿ,) ... ಋಷಿಮೋಹಿನೀ, ಇದೋ ನೋಡು. 'ಅಪಕರ್ಷತಿ' ಎಂದು ಮೊದಲಿನಂತೆ ತಿದ್ದಿರುವೆನು.

ಋಷಿಮೋಹಿನೀ : (ಕಿಟಕಿಯಿಂದ ಪುಸ್ತಕದಲ್ಲಿನ ತಿದ್ದುಪಡಿಯನ್ನು ನೋಡಿ,) ಅದೀಗ ಸರಿ ! ಅಹ್ಹಹ್ಹಹ್ಹ ! (ಎಂದು ಗಟ್ಟಿಯಾಗಿ ನಕ್ಕು ಕಿಟಕಿಯನ್ನು ಮುಚ್ಚುವಳು.)

ವಿವೇಕವರೇಣ್ಯ : ಸಮಾಧಾನವಾಯಿತಷ್ಟೆ ? ... (ಎನ್ನುತ್ತ ಪುಸ್ತಕವನ್ನು (ಟ) ಮೇಜಿನ ಮೇಲಿಟ್ಟು, ಸರ್ರನೆ (ಎ) ಬಾಗಿಲ ಬಳಿಗೆ ಹೋಗಿ,) ..... ಇನ್ನು ತಡವೇಕೆ ? ಗುರುಗಳು ಬರುವ ವೇಳೆಯಾಯಿತು ! ಸಮಯವು ಮಿಂಚಿ ಹೋಗುವುದು ! ಬೇಗ ಬಾಗಿಲು ತೆರೆ ! ... ತೆರೆಯುವುದಿಲ್ಲವೆ ? ... ಇದೇನು ಮೌನ ? ... ಋಷಿಮೋಹಿನೀ, ... (ಎಂದು ಗಟ್ಟಿಯಾಗಿ ಕೂಗುತ್ತ ಬಾಗಿಲನ್ನು ಒದೆಯುವನು.)

[ಬಾಗಿಲು ತೆರೆದುಕೊಳ್ಳುವುದು. ಒಳಗೆ ಎದುರಿಗೆ ಹಸನ್ಮುಖಿಗಳಾದ ಜೈಮಿನಿಮಹರ್ಷಿಗಳು ದಂಡ, ಕಮಂಡಲ, ಕೃಷ್ಣಾಜಿನ, ಮತ್ತು ಪಾದುಕೆಗಳಿಂದ ಭೂಷಿತರಾಗಿ ನಿಂತಿರು

ವರು. ಅವರನ್ನು ನೋಡಿ ಚಕಿತನಾಗಿ, ವಿವೇಕವರೇಣ್ಯನು ಒಂದು ಹೆಜ್ಜೆ ಹಿಂದಕ್ಕಿಟ್ಟು ಮಂಚದ ಪಕ್ಕಕ್ಕೆ ಸರಿದು, ಮುಖವನ್ನು ಹಸ್ತಗಳಿಂದ ಮುಚ್ಚಿಕೊಂಡು, ಪ್ರೇಕ್ಷಕರಿಗೆ ಅಭಿಮುಖವಾಗಿ ನಿಲ್ಲುವನು.]

**ಚಿರಂಜೀವಿ :** (ತನ್ನಲ್ಲಿ) ಇದೇನಾಶ್ಚರ್ಯ ? ಗುರುವರ್ಯರು ಇಲ್ಲಿರುವರು ಮಹಿಳೆ ಏನಾದಳು ?

**ಜೈಮಿನಿಮಹರ್ಷಿ :** (ಗಾಂಭೀರ್ಯದಿಂದ (ಏ) ಬಾಗಿಲನ್ನು ದಾಟಿ ಬಂದು, ಕಮಂಡಲ ಮತ್ತು ಕೃಷ್ಣಾಜಿನಗಳನ್ನು (ಕ) ಮೇಜಿನ ಮೇಲಿಟ್ಟು, ದಂಡವನ್ನು ಅದರ ಬಳಿಗೆ ಗೋಡೆಗೊರಗಿಸಿ, ವಿವೇಕವರೇಣ್ಯನನ್ನು ಕಿವಿ ಹಿಡಿದು ಮಧ್ಯರಂಗಕ್ಕೆ ಕರೆತಂದು,ಮುಗುಳುನಗೆಯಿಂದ) ವಿವೇಕವರೇಣ್ಯ, ... ಋಷಿಮೋಹಿನಿಯನ್ನು ಬಯಸಿದೆಯಲ್ಲವೆ — ಋಷಿಮೋಹಿನಿಯನ್ನು ? ಆದರೆ, ಆ ಹೆಸರಿನಲ್ಲಿ ಪೂರ್ವಾರ್ಧವು ಮಾತ್ರವೇ ಸತ್ಯ ! ಉತ್ತರಾರ್ಧವು ಮಿಥ್ಯೆ !

**ವಿವೇಕವರೇಣ್ಯ :** ಮಹಾಪರಾಧವಾಯಿತು. ಕ್ಷಮಿಸಬೇಕು. (ಎಂದು ಸಾಷ್ಟಾಂಗ ನಮಸ್ಕಾರ ಮಾಡುವನು.)

**ಚಿರಂಜೀವಿ :** (ಬೇಗ ಕೋಣೆಯೊಳಕ್ಕೆ ಹೋಗಿ ಬಂದು (ವ) ಎಂಬಲ್ಲಿ ನಿಂತು ತನ್ನಲ್ಲಿ) ಒಳಗೆ ಮಹಿಳೆಯಿಲ್ಲ. ಯಾರೂ ಇಲ್ಲ ... ನನಗೆ ಈಗ ಎಲ್ಲವೂ ಅರ್ಥವಾಗುತ್ತಿದೆ! ಋಷಿವರ್ಯರೇ ಮೋಹಿನೀ ರೂಪದಲ್ಲಿ ಬಂದಿದ್ದವರು ! ಋಷಿಮೋಹಿನೀ ಎಂಬ ಹೆಸರಿನಲ್ಲಿ ಮೊದಲನೆಯ ಅರ್ಥವಾದ ಋಷಿಯೇ ಸತ್ಯ ! ಎರಡನೆಯ ಅರ್ಥವಾದ ಮೋಹಿನಿಯು ಮಿಥ್ಯ ! ಇದನ್ನರಿಯದೆ ನಾನು ಗುರುಗಳನ್ನು ಎಲ್ಲೆಲ್ಲೋ ಹುಡುಕಿದೆ ! ... ಅಂತು ಚಿಕ್ಕ ಗುರುವಿಗೆ ತಕ್ಕ ಪ್ರಾಯಶ್ಚಿತ್ತವಾಯಿತು !

**ವಿವೇಕವರೇಣ್ಯ :** ಮಹಾಗುರುವೇ, ನಾನು ವಿವೇಕವರೇಣ್ಯನಲ್ಲ, ಅವಿವೇಕ ವರೇಣ್ಯ !

**ಜೈಮಿನಿಮಹರ್ಷಿ :** (ತಲೆದೂಗುತ್ತ,)ಇದು ವರೆಗೆ ನೀನು ಅವಿವೇಕವರೇಣ್ಯನೇ ಆಗಿದ್ದೆ ! ಇನ್ನು ಮುಂದೆ ವಿವೇಕವರೇಣ್ಯನಾಗು !

**ವಿವೇಕವರೇಣ್ಯ :** (ಕೈ ಜೋಡಿಸಿಕೊಂಡು) ಗುರು ಮಹಿಮೆಯು ಗೊತ್ತಾಗಲಿಲ್ಲ! ಬಾಲ್ಯದಿಂದ ಇದುವರೆಗೆ ನಾನು ಗುರುಸಾನ್ನಿಧ್ಯದಲ್ಲಿ ಎಷ್ಟೋ ಪಾಠಗಳನ್ನು ಕಲಿತಿರುವೆನು. ಆದರೆ ಇಂದು ನೀವು ಕಲಿಸಿರುವ ಪಾಠವನ್ನು ಎಂದಿಗೂ ಮರೆಯುವಂತಿಲ್ಲ ! ಬುದ್ಧಿ ಬಂತು ! (ಎಂದು ಬೆರಳುಗಳಿಂದ ತನ್ನ ಕೆನ್ನೆಗಳನ್ನು ಮೆಲ್ಲನೆ ಹೊಡೆದುಕೊಳ್ಳುವನು.)

**ಜೈಮಿನಿಮಹರ್ಷಿ :** ಶ್ಲೋಕದ ಧಾಟಿಯಲ್ಲಿ :) ಬಲವಾನಿಂದ್ರಿಯ ಗ್ರಾಮೋ ! ...

**ವಿವೇಕವರೇಣ್ಯ :** (ಶ್ಲೋಕದ ಧಾಟಿಯಲ್ಲಿ) ವಿದ್ವಾಂಸಮಪಕರ್ಷತಿ ॥

**ಜೈಮಿನಿಮಹರ್ಷಿ :** (ಗಾಂಭೀರ್ಯದಿಂದ) ವಿವೇಕೋದಯವಾದುದಕ್ಕೆ ತುಂಬ ಹರ್ಷಿಸುತ್ತೇವೆ.

[ಜೈಮಿನಿಮಹರ್ಷಿಗಳು ಕಣ್ಣುಗಳನ್ನು ಅರೆಮುಚ್ಚಿಕೊಂಡು, ಧ್ಯಾನದಲ್ಲಿ ನಿಲ್ಲುವರು. ಸ್ವಲ್ಪ ಮುಂದೆ, ಅವರ ಬಲಪಕ್ಕದಲ್ಲಿ ವಿವೇಕವರೇಣ್ಯನೂ, ಎಡಪಕ್ಕದಲ್ಲಿ ಚಿರಂಜೀವಿಯೂ, ಕೈ ಜೋಡಿಸಿಕೊಂಡು ನಿಲ್ಲುವರು.]

**ವಿವೇಕವರೇಣ್ಯ ಮತ್ತು ಚಿರಂಜೀವಿ :**

(ಶ್ಲೋಕದ ಧಾಟಿಯಲ್ಲಿ)

ಗುರುರ್ಬ್ರಹ್ಮಾ ಗುರುರ್ವಿಷ್ಣುಃ
ಗುರುರ್ದೇವ ಮಹೇಶ್ವರಃ ।
ಗುರುಸಾಕ್ಷಾತ್ ಪರಬ್ರಹ್ಮಾ
ತಸ್ಮೈಃ ಶ್ರೀಗುರವೇ ನಮಃ ॥

[ಶಿಷ್ಯರು ಈ ಶ್ಲೋಕವನ್ನು ಹೇಳುತ್ತಿರುವಾಗ, ಜೈಮಿನಿಮಹರ್ಷಿಗಳು ಆಶೀರ್ವಾದಪೂರ್ವಕವಾಗಿ ಎರಡು ಕೈಗಳನ್ನೂ ಅವರ ನೆತ್ತಿಗಳ ಮೇಲಕ್ಕೆ ಚಾಚಿರುವರು.]

[ ತೆರೆ ಬೀಳುತ್ತದೆ ]

# ಸಾವಿರ ಕುದುರೆಯ ಸರದಾರ

( ಸಾಮಾಜಿಕ ಏಕಾಂಕ )

## ಪಾತ್ರವರ್ಗ

**ಗಜಾನನರಾಯ** — ವಕೀಲ. ವಯಸ್ಸು ೫೩ರ ಸನಿಯ. ವೇಷ: ಪಾರ್ಶೀಕೋಟು, ಪಗಡಿ, ಬೂಟು, ಪ್ಯಾಂಟು, ಶರ್ಟು, ಧೋತರ.

**ಸರಸ್ವತೀಬಾಯಿ** — ವಕೀಲರ ಹೆಂಡತಿ. ವಯಸ್ಸು ೪೮.

**ನಂದ** — ಅವರ ಹಿರಿಯ ಮಗ.

**ಅಂತಪ್ಪ** — ಕಾರಕೂನ.

**ಡೈರೆಕ್ಟರ ಸಾಹೇಬರು** — ಅವರೊಡನೆ ಬೀಗತನ ಬಯಸುವ ಹೆಣ್ಣಿನ ತಂದೆ.

**ಗಿಟ್ಟಪ್ಪನವರು** — ಗಾಯೀಮಾಮಾ ಮಂದಿರದ ಸಂಚಾಲಕರು, ಪೆನ್ಶನರ.

**ಜಯರಾಮಾಚಾರ್ಯ** — ಆರೇ-ರಾಮಮಂದಿರದ ಸಂಚಾಲಕರು. ವಯಸ್ಸು ೪೦ರ ಸುಮಾರು. ವೇಷ : ಉಟ್ಟ ಧೋತರ ಒಂದು, ಮೈಮೇಲೆ ಒಂದು. ಹಣೆಗೆ ನಾಮ, ಗಂಟುಕಟ್ಟಿ ಬಿಟ್ಟ ಚಂಡಿಕೆ.

**ಸೆಕ್ರೆಟರಿ** — ಆರಾಮ-ಮಂದಿರದ ಕಾರ್ಯದರ್ಶಿ. ವೇಷ : ಆಧುನಿಕ.

**ಮ್ಯಾನೇಜರ** — ಶ್ರೀಕೃಷ್ಣ-ಮಂದಿರದವ. ವೇಷ : ಆಧುನಿಕ.

**ಹುಡುಗರು** — ವಾಸು, ಬಲರಾಮ, ಯೇಸು, ಪಾರಿ; ಇದಲ್ಲದೆ ೮–೧೦ ನೆರೆಹೊರೆಯ ಹುಡುಗರು ಹೆಣ್ಣೂ - ಗಂಡೂ. ಅವರ ವಯ ೭–೮ ರಿಂದ ೧೪–೧೫ ರ ವರೆಗೆ.

[ ದೃಶ್ಯ : ೧ ]

[ ಗಜಾನನರಾಯರ ಮನೆಯ ಪಡಸಾಲೆ. ಸದ್ಯಕ್ಕೆ ಫರ್ನಿಚರ ಏನೂ ಇಲ್ಲ. ಹುಡುಗರು ಹಿರಿಯರ ಆಟ ಆಡುತ್ತಿದ್ದಾರೆ. ಒಂದು ಮೂಲೆಯಲ್ಲಿ ದೇವದ್ವಾರದ ಒಂದು ಖಾಲೀ ಪೆಟ್ಟಿಗೆಯನ್ನಿಟ್ಟು, ಅದರ ಮೇಲೆ ಯಾವದೊ ಒಂದು ಚಿತ್ರಪಟವನ್ನು ನಿಲ್ಲಿಸಿ ಅದಕ್ಕೆ ಪೂಜೆ ಮಾಡಿ — ಪರದೆ ಮೇಲೆತ್ತಿದಾಗ — ಆರತಿ ಹಚ್ಚಿ ವಾಸು ಎದ್ದು ನಿಂತಿದ್ದಾನೆ. ಅವನ ಮಗ್ಗಲಿಗೆ ಸಾಲಾಗಿ ಇನ್ನೂ ಕೆಲ ಹುಡುಗರು ನಿಂತಿದ್ದಾರೆ. ಅವನ ಎದುರಿಗೆ ಇನ್ನೊಂದು ಸಾಲಾಗಿ ಹೆಣ್ಣು ಹುಡುಗರು ನಿಂತಿದ್ದಾರೆ. ಅವರಲ್ಲೇ ಯೇಸೂ ಒಬ್ಬಳು. ಗಂಡುಹುಡುಗರಷ್ಟೆ ಆರತಿ-ಹಾಡು ಅನ್ನುತ್ತಾರೆ. ಹಾಡು ಮುಗಿದ ನಂತರ ಮಂತ್ರಪುಷ್ಪ ಪ್ರಾರಂಭವಾಗುತ್ತದೆ. ಇದನ್ನು ವಾಸು, ಬಲರಾಮ ಕೂಡಿಯೇ ಅನ್ನುತ್ತಾರೆ. ]

ವಾಸು : ಜಯದೇವ ಜಯದೇವ ಜಯ ಅಬ್ರಹ್ಮಣ್ಯಾ ।
ಪುಣ್ಯದ ರಾಶಿಯು ತುಳಿದು ಎತ್ತಿಹೆ ಚಿನ್ನದ ನಾಣ್ಯಾ ॥
॥ ಜಯದೇವ ಜಯದೇವ ॥ ॥ ಪಲ್ಲ ॥

ಊರಿಗೆ ಊರೇ ಸುಟ್ಟರೂ ಹೊರಗೇ ಹನುಮಂತಾ ।
ಕೇರಿಗೆ ಕೇರೀ ಸುಲಿದು ಆಗಿಹೆ ಧನವಂತಾ ... ಜಯ ॥ ೧ ॥

ಅನ್ನದ ರಾಶಿಯು ಬಚ್ಚಿಟ್ಟೇರಿಸಿ ಧಾರಣಿಯಾ ।
ಚಿನ್ನದ ಬಲದಿಂ ನೀನು ಆಳುವೆ ಧಾರುಣಿಯಾ ... ಜಯ ॥ ೨ ॥

ಭತ್ತದ ಕಣಜವ ಸುಟ್ಟು ಗಳಿಸಿಹೆ ರೂಪಾಯಿ ।
ನೆತ್ತರ ಕಾರುತ ಬಳಲುವ ನಿತ್ಯವು ಬಡಪಾಯಿ ... ಜಯ ॥ ೩ ॥

ಪಾರಿ : ( ಎಡಬದಿಯಿಂದ ಪ್ರವೇಶಿಸಿ ), ಭಟ್ಟರ, ಸಾಕುಮಾಡಿರಿನ್ನ ನಿಮ್ಮ ಪೂಜಿ-ಪುನಸ್ಕಾರ. ಏನು, ಹೊತ್ತು ವ್ಯಾಳ್ಯಾ ಏನರೆ ಅದನೋ ಇಲ್ಲೋ ? ಹಿಂಗs ನೀವು ಬೆಳಸಿಕೋತ ಕೂತರ ನಮ್ಮ ಮುಂದಿನ ಕೆಲಸೆಲ್ಲಾ ಯಾವಾಗಾಗಬೇಕು ? ನೀವೇನು ಗಂಡಸರು, ಉಂಡು ಕೈತೊಳಕೊಂಡವರೇ ಹೊರಬೀಳತೀರಿ. ಹೆಂಗಸರದು ಇಲ್ಲಿ ಬವಣೆ ನಿಮಗೇನು ಗೊತ್ತು !

ಬಲರಾಮ : ಬಾಯೀಸಾಹೇಬ, ಹಾಂಗೆಲ್ಲಾ ಹ್ಯಾಂಗ ನಡೆದೀತು ! ಎಲ್ಲಾ ಯಥಾವಿಧಿ ಆಗಬೇಕು.

ಯೇಸೂ : ಆದರಾಗs ಒಂದಿಷ್ಟು ಸೊನ್ನಿ-ಸೂಕ್ಷ್ಮ ತಿಳಕೊಂಡು ಸಂಕ್ಷೇಪ ಮಾಡಬೇಕರೆಪಾ. ನೀವು, ಏನು ಹಾರಿಸಿದಿರಿ, ಎಲ್ಲಿ ಹಾರಿಸಿದಿರಿ ಕೇಳೋವರ್ಯಾರು ? ಯಜಮಾನತಿ ಹೇಳಿದ್ಹಂಗ ಮಾಡಬೇಕ ಮತ್ತ.

ವಾಸು : ಅದೆಲ್ಲಾ ಆಗದು. ಆರತಿ, ಮಂತ್ರಪುಷ್ಪ, ಪ್ರಾರ್ಥನಾ ಆದ ಹೊರತು ಪಙ್ತಿಗೆ ಕೂಡೋ ಹಾಂಗಿಲ್ಲ.

ಪಾರಿ : ಹೀಂಗೆಲ್ಲಾ ಮಾಡತೀರಂತೇ ನಿಮ್ಮನ್ನ ಕರೆಯೋದು ಬಿಡತಾರ

ಮಂದಿ. ಕಾಲ ಏನೂ, ನೋಡಿಕೊಂಡು ಮಂದಿನ್ನ ಹೊಂದಿಕೊಂಡು ಹೋಗೋ ಜಾತೀನ ಅಲ್ಲ ಇವರದು.

ವಾಸು: ನೋಡಿರೀ, ಕರೆಯೋತನಕ ನಿಮ್ಮ ಕೈಯಾಗಿನ ಮಾತು. ಒಮ್ಮೆ ಕರದ ಮ್ಯಾಲೆ ನಾವು ಹೇಳಿದ್ದು ನೀವು ಕೇಳಲಿಕ್ಕೆಬೇಕು. ಪುರೋಹಿತರು ನಿಲ್ಲಂದರ ನಿಲ್ಲು, ಕೂಡು ಅಂದರ ಕೂಡು. ನೀರು ಚೆಲ್ಲಂದರ ಚೆಲ್ಲು, ಕುಡಿ ಅಂದರ ಕುಡಿ, ಬಗ್ಗಂದರ ಬಗ್ಗು, ಉಣ್ಣಂದಾಗ ಉಣ್ಣು. ನಮ್ಮ ಮನೀಗೆ ಕರೀಲಿಕ್ಕೆ ನೀವs ಬಂದಿದ್ದಿರಲ್ಲs ಇದು ಬೇಕಾಗಿ. ಸಂಕ್ಷೇಪ ಅಂತ ಸಂಕ್ಷೇಪ ! ಇದರೊಳಗ ಸಂಕ್ಷೇಪ ತಂದರ ನಮ್ಮ ಆಯುಷ್ಯದ ಸಂಕ್ಷೇಪನs ! ತಿಳೀತs !

ಬಲರಾಮ: ಮದವೀ ಕೆಲಸ ಅಂದ ಮ್ಯಾಲೆ ತುಸು ತಡಾ ಆಗೋದs !

ಪಾರಿ: ದೊಡ್ಡ ದೊಡ್ಡ ಹಾಪೀಸರ್ನ ಊಟಕ್ಕ ಕರದಿರತದ. ಅವರ್ನ ಹೀಂಗ ಖೊಳಂಬಸೋದು ಚಂದ ಅಲ್ಲ, ವ್ಯವಹಾರ ಅಲ್ಲ.

ವಾಸು: ಮದಿವೆಂಬೋದು ವ್ಯವಹಾರ ಅಲ್ಲ — ಅದು ಸಂಸ್ಕಾರ. ಧರ್ಮ-ಸಂಸ್ಕಾರ ಅಂದಮ್ಯಾಲೆ ಶಾಸ್ತ್ರೋಕ್ತ, ಎಲ್ಲಾ ಯಥಾವಿಧಿ ಆಗಲಿಕ್ಕೆಬೇಕು. ನಿಮ್ಮ ಗಡಿಬಿಡಿ ನಮಗ ಹಚ್ಚಬ್ಯಾಡಿರಿ.

ಪಾರಿ: ನಿಮ್ಮ ಈ ಗುಣಕ್ಕs ಮತ್ತ ಈಗೆಲ್ಲಾ ಮಂದಿ, ಈ ಭಾನಗಡಿಗೆ ಬೀಳದ ರಜಿಸ್ಟರ ಮಾಡಿಕೋಳಿಕ್ಕೆ ಹತ್ಯಾರ.

ವಾಸು: ನಮ್ಮದೇನsನದಕ್ಕ ಅಂಬೋಣಿಲ್ಲ. ಅದನ್ನ ಬಿಟ್ಟು ಹಾಂಗs ಕೂಡಿದ್ದರೂ ಸೈ. ಅದಕ್ಕೇನಂಬೋದು ಜನಾ ಅಂತದ.

ಯೇಸು: (ನಡುವೆ ಬಂದು) ಬಿಡs ! ಇವರ ಕೂಡ ಯಾರು ವಾದಿಸ್ಯಾರು ?

ಬಲರಾಮ: ನೋಡಿರಿ, ಇಷ್ಟು ವಾದ ಹಾಕೋದರಾಗ ಮಂತ್ರಪುಷ್ಪ ಆಗಿ ಹೋಗತಿತ್ತು. ಸುಮ್ಮನಿದ್ದರಾಗತಿದ್ದಿಲ್ಲs ?

ಪಾರಿ: (ರೌಸಿನಿಂದ ಕೈಮಾಡುತ್ತ, ಅಂದರ ಈ ಮಂತ್ರಪುಷ್ಪ ನಮಗೆಲ್ಲಿ ಕೇಳಲಿಕ್ಕೆ ಸಿಗತಿತ್ತು !

ಯೇಸು: ನೀ ಒಳಗ ಹೋಗು ಸುಮ್ಮನ. ಅವರೇನು ತಮ್ಮ ಹಟ ಬಿಟ್ಟಪ್ಪ ಅಲ್ಲ. (ಜುಲುಮೆಯಿಂದ ಆವಳನ್ನು ಒಳದೂಡಿ) ಭಟ್ಟರ, ಸುರುವಾಗಲಿ ಮಂತ್ರಪುಷ್ಪ.

ವಾಸು: ಈಗ ಹ್ಯಾಂಗ ಬಂದಿರಿ ಹಾದಿಗೆ. ಹೂಂ. (ಎಂದು ಬಲರಾಮನಿಗೆ ಸನ್ನೆ ಮಾಡುವನು)

ಓಂ ರಾಜಾಧಿರಾಜಾನಧಿಗಮ್ಯ ಸಾಧಿನೇ
ನಮೋ ವಯಂ ವೈದ್ರವಿಣಾಯ ಕುರ್ಮಹೇ ॥
ಸ ಮೆ ಕಾಮಾನ್ಯೊಹ್ಯಕಾಮೋಯ ಮೈಕ್ಕೆ
(ಯೋ ಹಿ ಅಕಾಮಃ ಆಯಮ್ ಐಕ್ ಐಸೆನ್ ಹಾವರ) ಸ್ಯೆಂಹಾವರೋಮೇ ದ್ರವಿಣಂ ದದಾತು ॥
ಕುಬೇರಾಯ ವೈ ಟಾಟಾಯಾ

ದಲ್ಮಿಯಾ ಚಿರಲಾಯು ಚ ॥
ಸ್ವಸ್ತಿ ಓಂ. ರಾಮರಾಜ್ಯಮಪಿ ಸಾಮ್ರಾಜ್ಯಂ ವೈರಾಜ್ಯಂ ಪ್ರಜಾ
(ಏರುದನಿಯಲ್ಲಿ) ರಾಜ್ಯಮಾಧಿಪತ್ಯಮಿದಂ ಸಮುದ್ರಪರ್ಯಂತಾಯಾಂ
ಪೃಥಿವ್ಯಾಮೇಕ ಶಾಸನಂ ॥
(ಅದಕ್ಕೂ ಏರು) ತದಪ್ಯೇಷಶ್ಲೋಕೋಽಽ
ಭಿಗೀತಃ ॥

ಸರಸ್ವತೀಬಾಯಿ : (ಒಳಗಿನಿಂದ ಪ್ರವೇಶಿಸಿ) ಎಲಾ, ಏನು ಗೊಂದಲರ್ರ್ಯೋ ಅದು ! ಜಗಳಾಡತೀರೆಷ್ಟು ! ಒದರಾಡತೀರೆಷ್ಟು ! ನಡೀರಿಲ್ಲಿಂದ ಹಿಂದಿನ ಚೌಸೊಪ್ಪ್ಯಾಗ ಆಡಿರಿ.. (ಹುಡುಗರು ಆಟದ ಸಾಹಿತ್ಯ ತೊಗೊಂಡು ಹೋಗತೊಡಗುವರು.] ಏನೋ ಹುಡುಗರು ಆಡತಾವ ಆಡಲಿ ಅಂದರ ನಿಮ್ಮದೂ ಭಾರೀ ಆತು. ಮನೀಗ ಮಂದಿ ಬಂದವರು ಇದನ್ನ ನೋಡಿ ಏನಂದಾರು ?

ಅಂತಪ್ಪ: ಏನಂತಾರ! ಮಕ್ಕಳೊಂದಿಗರ ಮನೀ, ಸಂಪನ್ನರ ಮನೀ ಅಂತಾರ.

ಸರಸ್ವತೀಬಾಯಿ : ಹಾಂಗಲ್ಲ ಅಂತಪ್ಪಾ, ಇವತ್ತ ಬೀಗರು ಬರೋವರಿದ್ದಾರ. ಬಂದವರು ಇದೆಲ್ಲಾ ರಂದಿ ನೋಡಿ ಬಂದ ಕಾಲಿಲೆ ತಿರುಗಿ ಹೋದಾರೂ ಅಂತ.

ಅಂತಪ್ಪ : ಹೋದರ ಹೋಗವಲ್ಲರು. ಅವರ ಬಿಸಾತು ಏನ ಹಚ್ಚೀರಿ ! ಇವರನ ನಿವಾಳಿಸಿ ಚಲ್ಲೋ ಅಂತಹ ಮನೀ ಹೆಣ್ಣ ತಗೀತೇವಿ. ನಮ್ಮ ಮಾಲು ಚೊಕ್ಕ ಚಿನ್ನ ಅಂದಮ್ಯಾಲೆ ಮಂದೀ ಮುರವತ್ತು ಯಾಕ ? ಪ್ರಸಿದ್ಧ ವಕೀಲರ ಮಗ, ಫರ್ಸ್ಟ್‌ಕ್ಲಾಸ ಗೋಲ್ಡ ಮೆಡಲ್, ಡಾಕ್ಟರ ಪರೀಕ್ಷಾದಾಗ.

ಸರಸ್ವತೀಬಾಯಿ : ಆದರೂ ನೋಡು ಅಂತಪ್ಪಾ, ಈಗ ನಡೆದುಬಂದಂತಹ ಮನೆತನದ ಸಂಬಂಧ ಹಾಂಗೇನರೆ ಹಾರಿಸಿ ಹಾಕೋ ಹಾಂಗಿಲ್ಲ. ಡಿಪಾರ್ಟಮೆಂಟಿಗೆ ಹೆಡ್ ಇದ್ದಾರಿವರು ಇಡೀ ರಾಜ್ಯಕ್ಕ. ಏನೋ ಇವರು ಹದಿನೆಂಟು ಸಂಸ್ಥಾದಾಗ, ಎಲ್ಲಿ ಡೈರೆಕ್ಟರ, ಎಲ್ಲಿ ಸೆಕ್ರೆಟರಿ, ಎಲ್ಲಿ ಚೇರಮನ್, ಎಲ್ಲಿ ಪ್ರೆಸಿಡೆಂಟ — ಅಂತ ಕೆಲಸಾ ಮಾಡತಾರಲ್ಲಾ ಆ ತಪಶ್ಚರ್ಯದ ಫಲ — ಇದು — ಇವರದು ಗುರ್ತ, ಋಣಾನುಬಂಧ ಬೆಳೆದದ್ದು. ಗಂಡಿನವರು ಅಂದಾಕ್ಷಣಕ್ಕ, ಅಷ್ಟು ಮುಗಿಲಿಗೇರೋದೇನು ಚಲೋ ಏನು ?

ಅಂತಪ್ಪ : ನಿಮ್ಮ ಈ ಗುಣಾ ನೋಡಿ ನನ್ನ ತಲಿ ತಾನೇ ಬಾಗತದ. ಇಷ್ಟು ತಿಳವಳಿಕಿ, ಇಷ್ಟು ವ್ಯವಹಾರ ಇದ್ದವರೆಷ್ಟು ಮಂದ್ಯೋ, ನನಗ ಶಂಕಾ ? ಸುಮ್ಮನ ಅಲ್ಲ, ಹೆಸರಿನ್ಹಾಂಗ ಸಾಕ್ಷಾತ್ ಸರಸ್ವತಿ ಇದ್ದೀರಿ.

ಸರಸ್ವತಿ : ಸರಸ್ವತೀನ್ ಯಾರು ಕೇಳತಾರ ಅಂತಪ್ಪಾ, ಈಗ ! ಲಕ್ಷ್ಮೀ ಚಲ್ಲಾಟ ನಡದಾಗ ! ಮನೀಗೆ ಬರೋ ಮಂದಿಗೆ ಎಲ್ಲಾ ಚಂದ ಕಾಣೋ ಹಾಂಗ ನಡಕೋಳ್ಳಿಕ್ಕಂತೂ ಬೇಕೋ ಬ್ಯಾಡೊ – ಹೆಸರಿಡದ ಹಾಂಗ, ಅಸ್ಮೈಇಷ್ಟಪಟ್ಟ ಕೊಳ್ಳದ ಹಾಂಗ ಮನೇಯಾದರು ಸ್ವಚ್ಛ, ಫನೀಚರರು; ಮಕ್ಕಳ ಮೈಮ್ಯಾಲಿನ

ಅರಿವಿ, ಇವು ಒಂದಿಷ್ಟು ವ್ಯವಸ್ಥಿತ ಇರಲಿಕ್ಕೆ ಬ್ಯಾಡs ? ಒಂದಾಕಿ, ಮನೀ ರೀತೀ ನೋಡಿ ' ನಾ ಒಲ್ಲೆ ಈ ಮನೀ ' ಅಂತ ಹೇಳಬಾರದು ತಮ್ಮ ಅಪ್ಪಗ.

ಅಂತಪ್ಪ : ಮನೀ ರೀತಿ ಇದ್ದಹಾಂಗ ಮನೆಗೆ ಬಂದ ಸೊಸಿ ನಡೀಬೇಕು. ಮೇಲಾಗಿ ಈಗಿನ ಕಾಲದಾಗ ಮನೀ ಹಿರೇರು ಅಂಬೋದು ಹೆಸರಿಗೆ ಆಗೇದ. ತಮ್ಮ ಪುರತೆ ರಾಜಾರಾಣಿ — ಉಳಿದವರ ಸಂಬಂಧ ಬರೋದೂ ಅಷ್ಟರಾಗs ಅದ ಅಂತಾರ. ಅಷ್ಟರ ಪೂರ್ತೆ ಹಿರೇರ ಕಡಿಂದ ಹೂಂ ಅನಿಸಿಕೊಂಬೋತನಕಾ — ' ಪಾನೀ ತೇರಾ ರಂಗ ಕೈಸಾ, ಜಿಸಮೆ ಮಿಲಾವೇ ವೈಸಾ '. ಹಿರೇರು ಸನಾತನೀ. ಅಂದರ ದೊಡ್ಡ ಕುಂಕುಮ, ಇಳಕಲ್ಲ ಸೀರಿ, ಜುಗಡೀ ಅಂಚಿನ ಖಣದ ಕುಬಸ. ಮಾಡರ್ನ್ ಇದ್ದರ ಐದು ವಾರೀ ವಾಯಿಲ್, ಸ್ಲೀವಲೆಸ್ ಬ್ಲೌಜ, ರಿಸ್ಟವಾಚ್ ಹೀಂಗ ವೇಷಾಂತರ ತಯಾರಿರತದ.

ಸರಸ್ವತಿ : ಅದೆಂತೋ ಏನೋ ನಾ ಕಾಣೆ. ನಮ್ಮ ಮ್ಯಾಲೆ ಹಾಕಿದ ಜವಾ- ಬ್ದಾರೀ ನಾವು ಪಾರುಗಾಣಿಸಲಿಕ್ಕೆ ಬೇಕು. ಸಂಸಾರದ ಹೊಳ್ಯಾಗ ಹೂಡಿ ನೋಡಿದ ಹಳೇ ಎತ್ತು ಅಂತ ನಮಗ ಸಂಸಾರದ ಹೊಸ್ತಿಲದಾಗ ಕಾಲಿಡೋವರು, ' ಹೊಸ ದನ ನೊಗಕ್ಕ ಹ್ಯಾಂಗ ' ಪರೀಕ್ಷಾ ಮಾಡಲಿ ಅಂತ ನಮ್ಮನ್ನೊಂದು ಮಾತು ಕೇಳ ತಾರ. ಇಲ್ಲದಿದ್ರ ಏನದ ಹೇಳಿರಿ ನೋಡೋಣ. ಮೊದಲಿನ ದಿವಸ ಉಳಿದಿಲ್ಲ. ಪರಭಾರೆ ಗೊತ್ತುಮಾಡಿಕೊಂಡು ಅಕ್ಕೀಕಾಳಿಗೆ ಬರ್ರಿ ಅನ್ನೋರು ಕೆಲವರು, ಮನೀಗೆ ದುತ್ ಅಂತ ಬಂದು, ಆಶೀರ್ವಾದ ಕೊಡಿರಿ ಅಂತ ಅನ್ನುವರು ಕೆಲವರು.

ಅಂತಪ್ಪ : ಹಾಂಗ ನಡದದ ಖರೆ ! ಆದರ ನಮ್ಮ ನಂದರಾಯ ಹಾಂಗೆಲ್ಲಾ ಮಾಡೋವರ ಪೈಕಿ ಅಲ್ಲಾ.

ಸರಸ್ವತಿ : ಮಾಡಿದರೂ ತಪ್ಪಿಲ್ಲ. ಸಂಸಾರದಾಗ ಸುಖಪಡಲಿಕ್ಕೆ, ಗಂಡಗ ಸುಖ ಕೊಡಲಿಕ್ಕೆ, ಒಂದು ದೊಡ್ಡ ಮನಸ್ಸು, ನಾಕು ಮಂದೀ ಮಕ್ಕಳನ್ನ ಸಾಕೋ ಬುದ್ಧಿ, ಬಂದದ್ದ ತಡಕೊಂಡು, ನುಂಗಿಕೊಂಡು ನಕ್ಕೋತ ಇರೋ ಅಂಥಾ ಒಂದು ಬಗೀ ಬೇಕು. ಮುಖ್ಯ ಅದೃಷ್ಟ. ಗಳಿಗ್ಯಾಗ ನಮ್ಮ ಮುಂದ ಕೂತಾಗ ನಮಗ ತಿಳಿ ಯೋದೇನು, ಬಳಿಯೋದೇನು. ಆದರೂ ನಾಟಕಾ ಅಂದ ಮ್ಯಾಲೆ ಕೊಟ್ಟ ಪಾರ್ಟ ಮಾಡಲಿಕ್ಕೆ ಬೇಕಲ್ಲ ! ನೀವು ಮೋಟರು ತಗೊಂಡು ಹೋಗಿ ಕರಕೊಂಡು ಬರ್ರಿ ಆ ಹುಡಗಿನ್ನ. ಇವರೇನೋ ಆಕಿ ತಂದೇನೋ ಬ್ಯಾರೆ ಕೆಲಸ ತೀರಿಸಿಕೊಂಡು ಕ್ಲಬ್ಬಿಗೆ ಹೋಗೆ ಬರತಾರಂತ. ನಾನಿಲ್ಲೀದೆಲ್ಲಾ ಒಂದಿಷ್ಟು ಠಾಕಠೀಕಾಗಿ ಇಟ್ಟು, ರಂದೀ ತಗದು ತಯಾರೀ ಮಾಡತೇನಿ.

[ ಅಂತಪ್ಪ ಹೋಗುವನು ]

ಪಾರಿ : (ಪ್ರವೇಶಿಸಿ) ಅವ್ವಾ, ಅಣ್ಣನ ಮದಿವ್ಯಾಗ ನಾ ಕಳಸಗಿತ್ತಿ ಅಲ್ಲೇನವ್ವಾ.

ಸರಸ್ವತಿ : ಹೌದವ್ವಾ, ನೀನs ಆಗುವಂತೀ.

ಪಾರಿ : ಈ ವಾಶ್ಯಾ ಹ್ಯಾಂಗ ಛೇಡಿಸಲಿಕ್ಕ ಹತ್ತ್ಯಾನ ನೋಡು.

ಸರಸ್ವತಿ : ಏನಂತಾನ ?

ಪಾರಿ : {ಕಳಸಗಿತ್ತೀ ಲೆಕ್ಕ—ಪಾತರಗಿತ್ತೀ ಪಕ್ಕ—ಬುರ್‌ರ್‌ರ್ ಅಂತಾನ.

ಸರಸ್ವತಿ : ವಾಸೂ, ಹಾಂಗೆಲ್ಲಾ ಚಿಕ್ಕವರನ ಕಾಡಬಾರದಪ್ಪಾ. ಜಗಳಾಡದ ಆಡು ಹೋಗ್ರಿ. ( ತೆರೆಯಲ್ಲಿ ಫಟ್ ಅಂತ ಸದ್ದು ಕೇಳಿ) ಏನರೀ ಅದು ?

[ ಐದು ವರ್ಷದ ಒಂದು ಮಗು ಧಾರ ಕಟ್ಟಿದ ಒಡೆದ 'ರಬ್ಬರ್ ಬಲೂನ್'ನ್ನು ಹಿಡ ಕೊಂಡು ಅಳುತ್ತ ಬರುತ್ತದೆ. ]

ಮಗೂ : ಈ ಹೇಸಿ, ಯೇಸಿ, ನೋಡ, ಇದಕ್ಕ ಬೇಕಂತ ಸೂಜಿ ಚುಚ್ಚಿ ಒಡೆದ್ಲು.

ಸರಸ್ವತಿ : ಸುಡಗಾಡು ರಬ್ಬರಿನವು, ಸೂಜೀ ತಾಕಿದರ ಒಡೆದು ಹೋಗೋದ ಅದರ ಹಣೇಬರಹ. ಹೋಗಲಿ. ಇಂಥ ಜೀನಸು ಕಾಸಿಗೊಂದು ಸಿಗತಾವ. ಒಳಗ ನಡಿ. ಪೆಟಿಗ್ಯಾಗ ಹತ್ತ ಅವ ಇನ್ನೂ. ಮತ್ತೊಂದು ಕೊಡತೇನಿ ನಡೆ. ಅಳಬ್ಯಾಡ.

[ ಆ ಮಗುವನ್ನು ಎತ್ತಿಕೊಂಡು ಮುದ್ದು ಕೊಟ್ಟು ಸಮಾಧಾನಪಡಿಸುತ್ತ ಒಳಗೆ ಹೊರಡುವಳು ]

## [ ದೃಶ್ಯ : ೨ ]

[ ದೃಶ್ಯ ಮೊದಲಿನಂತೆಯೇ. ಆದರೆ ಮೊದಲಿಗಿಲ್ಲದ ಫರ್ನಿಚರ ಈಗ ಇವೆ. ಒಂದು ಮಗ್ಗಲಿಗೆ ಆಫೀಸ್ ಟೇಬಲ್, ಖುರ್ಚಿ ಇವೆ. ಟೇಬಲ್ಲಿಗೆ ಕಾಟಕೋನವಾಗಿ ಎರಡೂ ಬದಿಗೂ ಮೂರು ನಾಲ್ಕು ಖುರ್ಚಿಗಳು ಎದುರುಬದರಾಗಿ ಕುಳಿತಿವೆ. ಮರುದಿನ ರಾತ್ರಿ ಒಂಬತ್ತರ ಸುಮಾರು. ವಕೀಲ ಗಜಾನನರಾಯರು ಮತ್ತು ಗಿಟ್ಟಪ್ಪನವರು ಖುರ್ಚಿ ಗಳಲ್ಲಿ ಬದಿಬದಿಗೆ ಕುಳಿತಿದ್ದಾರೆ. ]

ಗಿಟ್ಟಪ್ಪ : ವಕೀಲಸಾಹೇಬ, ಏನು ಬೇಕಾದ್ದು ಮಾಡಿರಿ. ಆ ಪಾಪಾಚಾರೀ ಸೊಕ್ಕು ಮುರೀರಿ. ಮಗ ಅರ್ಜಿ ಕೊಡತಾನ. ತನಗ ತಿನ್ನಲಿಕ್ಕೆ ಸಿಗವಲ್ಲದು ಅಂತ್ಹೇಳಿ ಚಾಡೀ ಮಾಡತಾನ.

ಗಜಾನನ : ಅರ್ಜೀ ಯಾಕಾದರೂ ಮಾಡಿರಲಿ. ದಖಲ ತೊಗೊಂಡು ಕೆಲಸ ನಡೀತದ. ಅವರು ಬೇಡೋದು ಏನು ? ಲೆಕ್ಕಪತ್ರ ಇಡಿರಿ : ಯಾವ ಬಾಬಿನಿಂದ ಎಷ್ಟು ಬಂತು, ಎಲ್ಲಿ ಖರ್ಚಾತು, ಇದೆಲ್ಲರಿಗೂ ತಿಳೀಲಿ ಅಂತ. ಅದಕ್ಕ ಹ್ಯಾಂಗ 'ಇಲ್ಲಾ' ಅನ್ನಲಿಕ್ಕೆ ಬಂದೀತು ?

ಗಿಟ್ಟಪ್ಪ : ಅದಕ್ಕ ನಾ ಬ್ಯಾಡ ಅಂಬೂದಿಲ್ಲರಿ. ಸ್ವತಃ ಸಾಹೇಬರಿಗೆ ಎಲ್ಲಾ ಲೆಕ್ಕ ತೋರಸತೇನಿ. ನೋಡಿರಿ, ನಾವು ಚೊಕ್ಕ ಇದ್ದ ಮ್ಯಾಲೆ ನಮಗ್ಯಾತರ ಅಂಜಿಕಿ ?

ಆದರ ಈ ಮಗ ಏನೇನೋ ಬೊಗಳಿ ‘ ಇವ ಮಾಡಿದ ಅಂತ ಇದು ಆತು ’ ಅಂತ ಅನ್ನೋದು ಬ್ಯಾಡ. ಇವ ಮೂಗು ಮ್ಯಾಲೆ ಮಾಡಿಕೊಂಡು ಮೆರಿಯದ ಹಾಂಗ ಮಾಡಿರಿ. ಲೆಕ್ಕ ಇಡಲಿಕ್ಕ ಕಬೂಲ.

ಗಜಾನನ : ಹಾಂಗಾದ್ರ, ಕಬೂಲಿ ಕೊಟ್ಟುಬಿಡೋಣ. ಇನ್ನು ಮುಂದೆ ಎಲ್ಲಾ ಲೆಕ್ಕ ಹಾಜರಮಾಡಬೇಕು. ಹಿಂದಿನ ರಾಡಿ ತೆಗೀಯದ ಹಾಂಗ ಅಷ್ಟು ಮಾಡಸೋದು ನನ್ನ ಕೂಡಿತು.

ಗಿಟ್ಟಪ್ಪ : ಹಾಂಗಲ್ಲ. ವಕೀಲಸಾಹೇಬ, ಲೆಕ್ಕಾ ಲೆಕ್ಕಾ ಅನ್ನಲಿಕ್ಕೇನದ ? ಜಮಾ : ಭಕ್ತರು ಕೊಟ್ಟಿದ್ದು; ಧರ್ಮಕಾರ್ಯಕ್ಕ ಖರ್ಚು. ನಮಗ ಅದರಾಗ ತಿನ್ನೋದೇನೂ ಇಚ್ಛಾ ಇಲ್ಲ. ದೇವರ ದಯದಿಂದ ನಂದ ನನಗ ಸಾಕಷ್ಟು ಅದ. ಆದರ ಈ ಅದಾವತಿ, ಈ ಖೊಟ್ಟಿ ಆರೋಪ ಇದಕೆ ಸಿಟ್ಟು ಬರತದ. ಹ್ಯಾಂವದ ಮಾತು ಇದು. ‘ ಹ್ಯಾಂಗಾತು ! ಹ್ಯಾಂಗ ಮಾಡಿದೆ ! ’ ಅಂತ ಈ ಪಾಪ್ಯಾ ಜಂಬ ಕೊಚ್ಚೋಹಾಂಗ ಆಗಬಾರದು.

ಗಜಾನನ : ಹೌದಲ್ಲೋ ? ಹಾಂಗಾದರ ಒಂದು ಹಾದೀ ತೋರಿಸತೇನಿ ... ಫೀ ಮಾತ್ರ ಐನೂರು ರೂಪಾಯಿ ಬಿದ್ದೀತು.

ಗಿಟ್ಟಪ್ಪ : ಏನು ರಾಯರ, ವರ್ಷಾ ಇನ್ನೂರರ ಜಮಾಖರ್ಚು ಇಲ್ಲ. ಅದೂ ಪೂಜಿ, ಉತ್ಸವ ಅಂಬೋದಕ್ಕ. ಇಂಥದರಾಗ ಐನೂರು ಫೀ ತೂಗಬೇಕರೇ ಹ್ಯಾಂಗ ? ಮಂದಿಗೆ ವಾಜಮೀ ಕಾಣೋ ಹಾಂಗ ಮಾಡಬೇಕು.

ಗಜಾನನ : ಇದನ್ನ ಸಂಸ್ಥಾದ ಮ್ಯಾಲೆ ಯಾಕ ಹಾಕತೀರಿ ? ಇದು ನಿಮ್ಮ ಹ್ಯಾಂವದ ಮಾತಲ್ಲ ? ನಿಮ್ಮ ಮನಸಿನಂತೆ ಮಾಡಿಕೊಡತೇನಿ. ನೀವು ಸ್ವತಃ ಕೊಡಿರಿ. ಇಲ್ಲದಿದ್ದರ ಅರ್ಜೀಮ್ಯಾಲೆ ಹುಕುಂ ಆತಂತ ತಿಳೀರಿ. ಈಗಾದರೂ ಏನು ? ವಜನ ಖರ್ಚುಮಾಡಿ ಒಂದು ಮುದ್ದತ ತೊಗೋಬೇಕು. ಆ ಮುದ್ದತಿ ನೊಳಗ ಎಲ್ಲಾ ವ್ಯವಸ್ಥಿತ ಮಾಡಿಡೋದು. ಸಾರ್ವಜನಿಕ ಅಂತ ತೋರಿಕೆಗೆ. ಕಾಯದೇಶೀರ ಅದರಾಗೊಂದು ಬೆಣಿ ಜಡದು, ಉಳಿದವರಿಗೆ ಮಿಸುಕಾಡಲಿಕ್ಕೆ ಅವಕಾಶ ಸಿಕ್ಕಿರಬಾರದು ಹಾಂಗ ಮಾಡೋದು.

ಗಿಟ್ಟಪ್ಪ : ಅದು ಎಂತರೆಪಾ ?

ಗಜಾನನ : ಅದನ್ನೆಲ್ಲ ತೊಗೊಂಡು ನೀವೇನು ಮಾಡತೀರಿ. ನಿಮಗೊಂದು ಮಾಡಿಕೊಟ್ಟರಾತು.

ಗಿಟ್ಟಪ್ಪ : ಅಂದರೂ ಒಂದು ಮಾತಿಲೆ ನಮಗೆ ತಿಳಿದಿರಬೇಕು, ಎಂತು, ಏನು ಮಾಡೋದು ಅಂಬೋದು.

ಗಜಾನನ : ಬೇಶ ಲೆಕ್ಕ. ಅಂದರ ನಮ್ಮ ಗತ್ತು ರೊಕ್ಕ ಕೊಡದ ತಿಳಕೊಂಡು ಮತ್ತೊಬ್ಬರ ಕಡಿಂದ ಅಗ್ಗದಾಗ ಮಾಡಿಸಿಕೊಳ್ಳಿಕ್ಕೆ ! ಅದೇನಿಲ್ಲ. ನಮ್ಮಮ್ಯಾಲೆ ವಿಶ್ವಾಸ, ಐನೂರು ರುಪಾಯಿ, ಇಷ್ಟು ಇಡಿರಿ. ಅಂದರಾತು.

ಗಿಟ್ಟಪ್ಪ: ಆಗಲಿ, ಆಗಲಿ. ಹಿಡೀರಿ. (ಎಂದು ಐದು ನೂರರ ನೋಟಗಳನ್ನು ಕೊಡು ವನು.) ಇನ್ನಾದರೂ ಹೇಳೀರಾ ?

ಗಜಾನನ : ಗಾಯೀ-ಭಕ್ತಮಂಡಲ ಅಂತ ಒಂದು ಸ್ಥಾಪನ ಮಾಡೋದು. ಮೂರು ಮಂದಿ ಆಜೀವ ಸಭಾಸದರು, ವಿಶ್ವಸ್ಥರು. ಭಕ್ತ ಅಂಬೋದರ ವ್ಯಾಖ್ಯಾ ಹೀಂಗ ಮಾಡೋದು: ನಮಗ ಬ್ಯಾಡಾದವರಿಗೆ ಒಳಗ ಬರಲಿಕ್ಕೆ ಮಾರ್ಗನ ಇಲ್ಲ. ಇಂಥಾದರ ಉಸಾಬರಿ ಮಾಡೋವರೇ ಕಡಿಮಿ. ಪುರಸತ್ತು ಅದ ಯಾರಿಗೆ? ಕೇವಲ ನಿಮ್ಮವರು ಅಂಬೋ ಇಬ್ಬರಿದ್ದಾರಿಲ್ಲೋ ? ಸೈ, ಘಟನಾ ರಜಿಸ್ಟರ ಮಾಡಸೋದು 'Public charity Trust' ಅಂತ. ಬೇಕಾದ್ದ ಕಾರಭಾರಮಾಡಲಿಕ್ಕೆ ಮೋಕಳೀಕ.

ಗಿಟ್ಟಪ್ಪ : ( ಹಲ್ಲು ಕಟಿದು ) ಹಾರ್‍ಯಾಡತಾನ ಆ ಪಾಪ್ಯಾ, ತೋರಸತೇನಿ ಒಂದು ಕೈ. ನಮ್ಮ ಗಾಯೀಮಾಮಾ ಮಂದಿರದ ಕಡೆಗೆ ಸುಳಿದಿರಬಾರದು ಅವ.

ಗಜಾನನ : ಛೇ ! ಛೇ !, ಹಾಂಗ ಮಾಡಲಿಕ್ಕೆ ಬರಲಾರದು.

ಗಿಟ್ಟಪ್ಪ : ಮತ್ತೇನರಿ ? ನೀವು ಕೇಳಿದಷ್ಟು ದುಡ್ಡು ಸುರುವಿದರೂ ಇಷ್ಟನ ಅಂದರೇನಿದು ?

ಗಜಾನನ : ಹಾಂಗಲ್ಲ. ಸಾರ್ವಜನಿಕರಿಗೆ, ಭಕ್ತರಿಗೆ ಮಂದಿರಕ್ಕ ಬರಲಿಕ್ಕೆ ಬಂದೀ ಹ್ಯಾಂಗ ಮಾಡಲಿಕ್ಕ ಬಂದೀತು, ನೀವs ಹೇಳಿರಿ ? ಅದೇನು ನಿಮ್ಮ ಮನೀ ಅಲ್ಲ.

ಗಿಟ್ಟಪ್ಪ : ಹಾಂಗೆಲ್ಲಿ ಅಂತೇನಿ ನಾನು ? ಬರಲಿ. ದರ್ಶನಕ್ಕ, ಪ್ರಸಾದಕ್ಕ ಬೇಕಾದ ಹಾಂಗ ಬರಲಿ. ಹೆಚ್ಚಿನ ಕಾರಭಾರ ಮಾಡಬಾರದು.

ಗಜಾನನ : ಅಷ್ಟು ನಾ ಮಾಡಿಕೊಡತೇನಿ. ಏನರೆ ಬಂದರ ನಾ ನೋಡಿಕೋ ತೇನಿ. ( ಜಯರಾಮಾಚಾರ್‍ಯರು ಪ್ರವೇಶಿಸಿ, ನಮಸ್ಕಾರ ಮಾಡಿ ಕುಳಿತುಕೊಳ್ಳುವರು. ) ಕೂಡಿರಿ, ಆಚಾರ. ( ಗಿಟ್ಟಪ್ಪನವರ ಕಡೆಗೆ ತಿರುಗಿ ) ಇವರದೂ ಒಂದು ಅಂಥಾದs ಕೇಸು ಅದ ನೋಡಿರಿ.

ಗಿಟ್ಟಪ್ಪ : ಯಾಕ ಆಚಾರ್‍ರ ನಿಮಗ ಯಾರು ಗಂಟುಬಿದ್ದರು.

ಜಯರಾಮಾಚಾರ್ಯ : ನಮಗs? ನಮಗ ಸರಕಾರನs ಗಂಟುಬಿದ್ದದ. ಇದು ನಿಮ್ಮ ನಿಧರ್ಮೀ ಸರಕಾರಲ್ಲs ? ಧರ್ಮಾ ಅಂತ ನಡೀಗೊಡೋ ಹಾಂಗಿಲ್ಲಾಂತ ನಿಶ್ಚಯಮಾಡಿದ ಹಾಂಗ ಕಾಣಸತದ. ಗಾಂಜೀ, ಅಫೂದ ಅಂಗಡೀಗೆ ಲೆಕ್ಕಾ ಕೇಳಿದ ಹಾಂಗ, ತಪಾಸಣಿ ಇಟ್ಟಹಾಂಗ ನಮಗೂ ಮಾಡಬೇಕು ಅಂತಾರ. ಏನು ಬಂತ ರೆಪಾ ಕಾಲ ! 'ಕಾಲಾಯ ತಸ್ಮೈ ನಮಃ.'

ಗಜಾನನ : ಸರಕಾರದ ಕೆಲಸ ದೇವರ ಕೆಲಸ. ಧರ್ಮ ಅಂಬೋದು ಒಂದು ತರ್‍ಹದ ಅಫೂ ಇದ್ದಹಾಂಗ ಅನ್ನೋವರೂ ಇದ್ದಾರ.

ಜಯರಾಮಾಚಾರ್ಯ : ದೊಡ್ಡ ನಮಸ್ಕಾರ, ಮುಗದೇಹೋತಲ್ಲ. ಮ್ಲೇಂಛರು

ರಾಜ್ಯ ಮಾಡಿದರೂ ನಮ್ಮ ಧರ್ಮ, ಪೂಜಿ, ಉತ್ಸವ, ಅನುಷ್ಠಾನ ಇಂಥದರಾಗ ಕೈಹಾಕಲಿಲ್ಲ. ಇವರು ನಮ್ಮವರು ಅಂತ ಅಂದರ ಹೀಂಗ ಮಾಡಲಿಕ್ಕೆ ಹತ್ತ್ಯಾರ. ಕಾಯಿ ಕಪ್ಪರ, ಹೆಣ್ಣುಮಕ್ಕಳು ತಂದು ಹಾಕಿದ ಅಕ್ಕಿ, ಇವನ್ನ ಕಿಮ್ಮತ್ತು ಕಟ್ಟಿ ಲೆಕ್ಕ ಇಡಬೇಕಂತ. ಅದೂ ನಯಾ ಪೈಸಾದಾಗ. ಪದವಿ ಬಂತೂ ಅಂದರ ಇಷ್ಟು ಏರಬೇಕು ಅಗದೀ? 'ಉತ್ತಮೇ ಶಿಖರೇ ಜಾತೇ ಭೂಮ್ಯಾಂ ಪರ್ವತ ಮೂರ್ಧನಿ ?'

ಗಿಟ್ಟಪ್ಪ : ಇಡಬೇಕು, ಇಡಬೇಕು. ಹತ್ತೆಂಟು ಜನದ ಕಡಿಂದ ಕೂಡತದ ಅಂದರ ಲೆಕ್ಕ ಇಡಬೇಕು.

ಜಯರಾಮಾಚಾರ್ಯ : ಏನರಿ, ಏನು ತಲೀ ಇಡತಾರ ! ಒಂದು ಪುರಾಣ-ಮಂಗಳ ಆಗತದ. ಎಲ್ಲಾರು ತಮತಮಗ ನೀಗಿದ್ದು ತರತಾರ. ಸ್ವತಃ ನಿಂತು ಜೇಯಿಸಿ ಪ್ರಸಾದ ತಗೊಂಡು ಹೋಗತಾರ. ನಾಳೆ ಪಙ್ಕ್ತಿ ಮಾಡೋವರಿಗೂ ತಾವು ತಂದ ರೊಟ್ಟಿ, ಪಲ್ಲೇದ ಹೋಳಿನ ಲೆಕ್ಕ ಇಡಿರಿ ಅಂದೀರಿ. ಅಲ್ಲೇನರಿ ?

" ಯಸ್ಯೈಕಸ್ಯತರೋರ್ಮೂಲೇ ಯೇನಕೇನಾಪಿ ಪಾಚಿತಂ
ಯಸ್ಮೈಕಸ್ಮೈಪ್ರದಾತವ್ಯಂ ಭೋಕ್ತವ್ಯಂ ಯೇನ ಕೇನ ಚ ॥ "

ಗಜಾನನ : ಅಲ್ಲರಿ, ನಿಮ್ಮ ಮಂದಿರದಾಗ ರೊಕ್ಕ-ರುಜಿ, ವಸ್ತ್ರ ಇಂಥದೆಲ್ಲ ತಂದು ಕೊಡತಾರೋ ಇಲ್ಲೋ ?

ಜಯರಾಮಾಚಾರ್ಯ : ಇಲ್ಲಂತ ಯಾರು ಅಂತಾರ, ಸೀಧಾದ ಅನುಕೂಲತೆ ಇಲ್ಲದವರು ರೋಖ ರೊಕ್ಕ ಕೊಡತಾರ. ಅದೇನರಿ ? 'ಶಾಕಾಯ ವಾಸ್ಯಾಲ್ಲವ-ಣಾಯ ವಾಸ್ಯಾತ್.'

ಗಿಟ್ಟಪ್ಪ : ರೊಕ್ಕ ಬಂತೂ ಅಂದರ ಲೆಕ್ಕ ಬಂತು. ಹತ್ತು ಮಂದೀ ಕಡಿಂದ ಕೂಡತದ ಅಂದರ ಸರಕಾರದ ಚೆಕಿಂಗ ಬಂತು.

ಜಯರಾಮಾಚಾರ್ಯ: ಮಾಡಲಿ. ಆದರ ದೊಡ್ಡದೊಡ್ಡ ಕಾಳಾಬಾಜಾರದವರನ್ನ, ಸರಕಾರದ ಕರ ತಪ್ಪಿಸೋವರನ್ನ ಬಿಡತೀರಿ. ನಮ್ಮಂಥ ಬಡಮುಂಡೇಮಕ್ಕಳನ ಕಾಡತೀರಿ. ರಾಜಗ ಅಧಿಕಾರ ಇರೋದು ಯಾಕ? 'ಆರ್ತತ್ರಾಣಾಯ ವಃಶಸ್ತ್ರಂ ನ ಪ್ರಹರ್ತುಮನಾಗಸಿ !'

ಗಿಟ್ಟಪ್ಪ : ಅಲ್ಲರಿ, ಸುಗ್ಗೀವಳಗ ಹಳ್ಳಿಹಳ್ಳಿಗೆ ಹೋಗಿ ಕಾಳು-ಕಡಿ ಕೂಡಿಸಿ ತರತೀರಿ ಅದರ ಲೆಕ್ಕ ?

ಜಯರಾಮಾಚಾರ್ಯ: ಏನು ಮಾರಾಯಾ, ಪುಣ್ಯಾದ ಕೆಲಸ ಅಂತ ಹೇಳಿ ಒಂದು ನಾಕು ಬಡ ಸಾಲೀ ಹುಡುಗರಿಗೆ ಊಟದ ವ್ಯವಸ್ಥಾ ಮಾಡತೇನಿ. ನಮ್ಮ ವಿದ್ಯಾ ಕಲಿಯೋದಂತೂ ಹೋಗೇಹೋತು. ಎಲ್ಲಾರು ಮ್ಲೇಂಛ ವಿದ್ಯಾನ ಕಲೀಲಿಕ್ಕ ಹತ್ಯಾರ. ಕಲೀಲಿ. ಆದರೂ ಮುಂಜಾನೆ ಸಂಜೆ ಸಂಧ್ಯಾನ, ದೇವರಪೂಜೀಮಂತ್ರ, ವಾಯು ಸ್ತುತಿ, ಅಷ್ಟ ಜೂಜಾವಿ ಮಂತ್ರ-ಸ್ತೋತ್ರ ಇವನ್ನೊಂದಿಷ್ಟು ಅವರಿಗೆ ಜುಲುಮಿಂದ

ಕಲಿಸತೇನಿ, ಅನ್ನದ ಋಣದಾಗ. ಎಲ್ಲಾನೂ ಲೋಪ ಆಗಿ ಹೋಗಲಿಕ್ಕೆ ಹತ್ತೇದ, 'ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ.'

ಗಜಾನನ : 'ಸಾರ್ವಜನಕಾರ್ಯೇ ಸಮುತ್ಪನ್ನೇ ಅರ್ಧಂ ಗಿಲತಿ ಪಂಡಿತಃ' ಅಂತ ಸರಕಾರದ ಪಾಠಾಂತರ.

ಜಯರಾಮಾಚಾರ್ಯ : ಪಕ್ಕಾ ಅನುಭವದ ಪಾಠಾಂತರ ಕಾಣಸತದ. ಕೋಟಿ ಗಟ್ಟಲೆ ಕೂಡಿಸಿದ ಫಂಡು ಮಟಾಮಾಯ. ಹದಿನೆಂಟು ಖಾತೇದಾಗ ಹಾಳಾಗಿ ನಡೆದದ್ದು ಸ್ಥಾಲೀ-ಪುಲಕನ್ಯಾಯದಿಂದ ಎಲ್ಲಿರೆ ಒಂದೆರಡು ಕಡೆ ಆಡಿಟರ ರಿಪೋರ್ಟ ಮಾಡತಾನ. ಯಾರರೆ ಒಂದು ಪ್ರಶ್ನಿ ಕೇಳತಾರ. ಶ್ವಾನ ಬೊಗಳತದ ಆನಿ ಹೋಗತದ ಅನ್ನೋಹಾಂಗ ಅಧಿಕಾರಿಗಳು ರೊಕ್ಕ ತಿನ್ನೋದು, ತೂರೋದು ಯಥಾಸ್ಥಿತ ನಡದದ. ನಾವು ಆಡಕೂಡದು ಅದನ್ನ. 'ನ ಖಲು ತದ್ವಾಚ್ಯಂ ವಧೂಬಂಧುಭಿಃ.'

ಗಿಟ್ಟಪ್ಪ: ಮಂದೀ ಕಡೆಗೆ ಬೊಟ್ಟು ತೋರಿಸಿದರೆ ನಿಮ್ಮ ಹಿಂದಿನ ಶುಕ್ಲಕಾಷ್ಠ ಹ್ಯಾಂಗ ತಪ್ಪೀತು? ನಿಮ್ಮ ಪೂರ್ತಿ ಮಾತಾಡಿರಿ.

ಜಯರಾಮಾಚಾರ್ಯ : ನಮ್ಮದು ಸನಾತನ ಧರ್ಮದ ಅನುಷ್ಠಾನ. ನಿಮ್ಮ ಹಾಂಗ ಜನರನ್ನ ಯಾರದರ ಬೆನ್ನುಹಚ್ಚಿ ಭುಲಥಾಪಿ ಕೊಟ್ಟು ಅಡ್ಡಹಾದಿಗೆ ಹಚ್ಚೋವರಲ್ಲ. ನಮ್ಮದು ಸ್ವಧರ್ಮದ ಅನುಷ್ಠಾನ. ಭಗವಂತನ ಉಕ್ತೀನ ಅದೆ : "ಶ್ರೇಯಾನ್ ಸ್ವಧರ್ಮೋ ವಿಗುಣಃ" ಅಂತ.

ಗಜಾನನ : ಒಬ್ಬರ ಮ್ಯಾಲೊಬ್ಬರು ಯಾಕ ಹರಿಹಾಯಿತೀರಿ. ಇಬ್ಬರದೂ ಹುಳುಕು ಹೊರಬಿದ್ದೀತು. ಸರಕಾರ ಇಬ್ಬರನೂ ಹಿಡಿದೀತು!

ಜಯರಾಮಾಚಾರ್ಯ : ನಮ್ಮನ್ನ ಯಾಕರೀ ಹಿಡಿಯೋದು? ನಮ್ಮದು ಎಂದಿನಿಂದೋ ನಡೆದು ಬಂದ ಧರ್ಮದ ಅನುಷ್ಠಾನ.... ಎಲ್ಲಾ 'ಶ್ರುತಿಸ್ಮೃತಿ ಪುರಾಣೋಕ್ತ ಫಲಪ್ರಾಪ್ತ್ಯರ್ಥಂ.'

ಗಜಾನನ : ಹಾಂಗ ಕಚ್ಚಾಡಬ್ಯಾಡಿರಿ. ಸಾಹೇಬರು ಬರೋಹೊತ್ತಾಗೇದ. ಇನ್ನೊಂದೆರಡು ಇಂಥ ಪ್ರಕರಣ ಇದ್ದವು. ಅವೆಲ್ಲಾದರ ವಿಚಾರ ಮಾಡಬೇಕಂತ ಈ ಊರಿಗೆ ಬಂದಾರ.

ಜಯರಾಮಾಚಾರ್ಯ : ನಾ ಬ್ಯಾರೆ ಕೇಳೇನಿ ರಾಯರ. ಸಾಹೇಬರದೂ ನಿಮ್ಮದೂ ಬಿಗತನ ಆಗೋದಂತ. ಚಿಕ್ಕರಾಯರು ದೀವಳಿಗೆಗೆ ಬಂದಾಗ ಕುಂಡಲೀ ಹಾಕಿ ಹೇಳಿದ್ದೆ ಬಾಸಿಂಗಬಲ ಬಂದದ ಅಂತ. ಆಗಿ ಹೋಗಲಿ. 'ಶುಭಸ್ಯ ಶೀಘ್ರಂ.'

ಗಿಟ್ಟಪ್ಪ : ಹಾಂಗಾದರಂತೂ ಏನು ಬಿಡಿರಿ. ಕೈಹಿಡಿದು ಹುಕುಂ ಬರೆಸೋ. ಹಾಂಗ ಆತು.

ಗಜಾನನ : ಸುಮ್ಮನಿರ್ರಿ, ಎಲ್ಲಿರೆ ಅವರ ಕಿವಿಗೆ ಬಿದ್ದಾವು ನಿಮ್ಮ ಮಾತು! ಸಂಗತೀ ಮತ್ತಿಬ್ಬರು ಇದ್ದಾರ. ಇನ್ನೆರಡು ಮಂದಿರದವರು.

ಜಯರಾಮಾಚಾರ್ಯ : ಯಾವ ಗುಡಿಯ ಪೂಜಾರರವರು ?

ಗಜಾನನ : ಎಲ್ಲಿಯ ಗುಡಿ, ಒಂದು ಕ್ಲಬ್ಬು, ಒಂದು ಥೇಟರು.

ಜಯರಾಮಾಚಾರ್ಯ : ( ಚಕಿತನಾಗಿ ) ಹಾಂ ! ಮತ್ತ ಮಂದಿರ ಅಂದಿರಲ್ಲ ?

ಗಜಾನನ : ಹೂಂ. ಒಂದು ಆರಾಮಮಂದಿರ. ಮತ್ತೊಂದು ಚಿತ್ರಮಂದಿರ.

ಗಿಟ್ಟಪ್ಪ : ಇವೆಲ್ಲಾ ಈ ಧರ್ಮಾದಾವ ಖಾತೇದ ಕಡೆಗೆ ಯಾಕ ಬರತಾವ ? ವ್ಯಾಪಾರೋದ್ಯೋಗ ಬಿಟ್ಟು ?

ಗಜಾನನ : ಇವೂ ಹೊಸಯುಗದ ಸಮಾಜಕಲ್ಯಾಣಕೇಂದ್ರಗಳು. ಇಕಾ, ಬಂದರು ನೋಡಿರಿ.

[ ಡೈರೆಕ್ಟರಸಾಹೇಬರು ಇನ್ನಿಬ್ಬರೊಡನೆ ಪ್ರವೇಶಿಸುವರು. ]

[ ಕುಳಿತವರೆದ್ದು ನಿಲ್ಲುವರು. ವಕೀಲರು ಆಸನ ಬಿಟ್ಟವರು ಮುಂವಕ್ಕೆ ೪-೫ ಹೆಜ್ಜೆ ಹೋಗಿ ಕರೆತಂದು ತಾವು ಕುಳಿತ ಖುರ್ಚಿಯಲ್ಲಿ ಅವರನ್ನು ಕೂಡಿಸಿ, ಅವರ ಹತ್ತಿರವೇ ಮತ್ತೊಂದು ಖುರ್ಚಿಯನ್ನು ಎಳಕೊಂಡು ಕೂಡುವರು. ನಮಸ್ಕಾರಾದಿಗಳು ಆದ ಮೇಲೆ ಎಲ್ಲರೂ ಸ್ಥಾನಾಪನ್ನರಾಗುವರು. ]

ಡೈರೆಕ್ಟರ : ( ವಕೀಲರ ಕಡೆಗೆ ಹೊರಳಿ ) ಇವರೆಲ್ಲರು ನಿಮ್ಮ ಕುಳಗಳು. ಎಲ್ಲರನೂ ಇಲ್ಲಿಯೇ ಕಲೆಹಾಕಿ, ಅನೌಪಚಾರಿಕವಾಗಿಯೆ ಮಾತು-ಕಥೆ ಸಾಗಿಸಿ, ಈ ಕ್ಷೇತ್ರದಲ್ಲಿ ಸರಕಾರದ ಭೂಮಿಕೆ, ದೃಷ್ಟಿಕೋನ ಇವನ್ನು ನಿಮಗೆ ತಿಳಿಸಬೇಕೂಂತ ಇಲ್ಲಿ ನಿಮಗೆ ಬರಹೇಳಿದ್ದು.

ಸೆಕ್ರೆಟರಿ : ನಮ್ಮ ಆರಾಮಮಂದಿರಕ್ಕಂತೂ ಇದೇ ಭೆಟ್ಟಿ ಕೊಟ್ಟು ಬಂದಿದ್ದೀರಿ. ತನುಮನಗಳ ಆರೋಗ್ಯಕ್ಕೆ ಸಾಕಷ್ಟು ಅವಕಾಶ ಕಲ್ಪಿಸಿದ್ದಾಗಿದೆ. ಬೈಲಿನಲ್ಲಿ ಆಡುವ ಆಟ, ಒಳಗೆ ಕೂತು ಆಡುವ ಆಟ, ದೇಶೀ-ವಿದೇಶೀ ಎಲ್ಲದರ ಸೌಕರ್ಯ. ಉತ್ತಮವಾದ ಉದ್ಯಾನ. ಎಲ್ಲಾ ಆಟಕ್ಕೂ ಸಾಹಿತ್ಯ ಅಗ್ಗದಲ್ಲಿ ಪೂರೈಸತೇವಿ. ಈ ವರೆಗೆ ಕೇವಲ ಸಿರಿವಂತರಿಗೇ ಉಪಲಬ್ಧವಿದ್ದ ಆನಂದ, ಮನಸ್ಸಿನ ಪ್ರಸನ್ನತೆ ಸಾಮಾನ್ಯರಿಗೂ ಸಿಗುವಂತೆ ಮಾಡಿದ್ದೇವೆ. ಕೆಲ ಜನ ಉದಾರರು ಸಾಹಿತ್ಯ ಕೊಟ್ಟಿದ್ದಾರೆ, ಉದ್ಯಾನದ ಖರ್ಚು ಹೊತ್ತಿದ್ದಾರೆ. ಆದರೆ ಬೆಳೆಯುತ್ತಿರುವ ಸದಸ್ಯರ ಸಂಖ್ಯೆಗೆ ಸಂತೈಯಿಸುವದು ಸರಕಾರದ ಸಹಾಯವಿಲ್ಲದೆ ಅಸಾಧ್ಯ. ಸಮಾಜದಲ್ಲಿ ಸ್ವಾಸ್ಥ್ಯ ಉಳಿಯಬೇಕಾದರೆ ನಮ್ಮಂಥ ಕೇಂದ್ರಗಳು, ಮಂದಿರಗಳು ಅವಶ್ಯ. ಅದೊಂದು ಸರಕಾರ ಹೊರತಕ್ಕ ಹೊಣೆ.

ಡೈರೆಕ್ಟರು : ಇವರಿಬ್ಬರದೂ ನಮಗೆ ವಕೀಲರಿಂದ ಸಂಗತಿ ಈಗಾಗಲೇ ತಿಳಿದಿದೆ. ಉಳಿದವರು ನೀವೊಬ್ಬರು. ನಿಮ್ಮದೇನು ಹೇಳಿರಿ, ಸ್ವಲ್ಪದರಲ್ಲಿ ನೋಡೋಣ.

ಮ್ಯಾನೇಜರು : ನಮ್ಮದು ಚಿತ್ರಮಂದಿರ. ಸಮಾಜದ ಸದಭಿರುಚಿ ಬೆಳೆಯುವಂಥ ಉಚ್ಚಮಟ್ಟದ ಚಿತ್ರಗಳನ್ನೇ ಪ್ರದರ್ಶಿಸುತ್ತೇವೆ. ಖೂನ, ದರೋಡೆ, ಸ್ಟಂಟು

ಇಂಥಾ ಪಿಕ್ಚರ ಎಂದೂ ತರಿಸುವದಿಲ್ಲ. ಶಾಸ್ತ್ರೀಯ ಸಂಗೀತಕ್ಕೆ ರೇಡಿಯೋ ದ್ವಾರಾ ಹೇಗೆ ಪ್ರೋತ್ಸಾಹ ದೊರೀತದೋ ಹಾಗೆ ನಮಗೂ ನಿಮ್ಮ ದ್ವಾರಾ ದೊರೆಯಬೇಕು. ನಾವು ಪುರಾಣೋಕ್ತ ಕಥೆಗಳನ್ನೇ ಪ್ರದರ್ಶಿಸಿ, ನಮ್ಮದೆಂಬ ಸಾಹಿತ್ಯ, ಸಂಸ್ಕೃತಿ, ಪರಂಪರೆ ಇವನ್ನು ಕಾಯ್ಕೊಂಡು, ಭಾರತದ ಧ್ವಜ ಎತ್ತಿ ಹಿಡಿಯುವಂತೆ ಯತ್ನ ಮಾಡುತ್ತಿದ್ದೇವೆ. ರಾಷ್ಟ್ರಧನದಿಂದ ನಮಗೆ ಸಹಾಯಧನ ದೊರೆಯಬೇಕು ಅಂತ ನನ್ನ ಪ್ರಾರ್ಥನೆ.

ಗಿಟ್ಟಪ್ಪ : (ಬೆಪ್ಪಾಗಿ) ಅಂದರ ಒಬ್ಬರದು ಕ್ಲಬ್ಬು, ಒಬ್ಬರದು ಥೇಟರು. ಅವನ್ನ ನಡಿಸಲಿಕ್ಕೆ ಸರಕಾರ ರೊಕ್ಕಾ ಕೊಡಬೇಕs ? ಒಳ್ಳೇ ನ್ಯಾಯ !

ಜಯರಾಮಾಚಾರ್ಯ : ರಾಯರ, ಸರ್ವೋದಯ ನಡೆದದ. ಅವರಿಗೆ ಮುಟ್ಟಿ ದಿದ್ದರ ಹ್ಯಾಂಗ. 'ಸರ್ವೇ ಜನಾಃ ಸುಖಿನೋ ಭವಂತು.'

ಗಜಾನನ : ಸ್ವಲ್ಪ ತಡೀರಿ. ನಿಮ್ಮ ತಪ್ಪುತಿಳಿವಳಿಕೆ ದೂರ ಮಾಡತೇನಿ. ಕಾಯದೇದಿಂದ ಸಮಾಜಸ್ವಾಸ್ಥ್ಯರಕ್ಷಕ, ವರ್ಧಕ, ಕಲ್ಯಾಣಸಾಧಕವಾದಂಥ ಯಾವದೇ ಸಂಘಟಿತ ಚಟುವಟಿಕೆಗೆ ಸರಕಾರದ ಸಹಾಯಧನ ಕೇಳುವ ಅಧಿಕಾರ ಅದೆ. ನಾನೇ ಇವರ ಅರ್ಜಿ ತಯಾರ ಮಾಡೇನಿ. ವ್ಯಾಖ್ಯಾದೊಳಗ ಕೂಡತದ. ಅವೂ ಸಮಾಜದ ' psychological need ' ಪೂರೈಸಲು ನಿರ್ಮಿತವಾದ ಮಂದಿರ ಗಳು. ನಿಮ್ಮದು ಅರೇರಾಮ-ಮಂದಿರಾದರೆ ಇವರದು ಆರಾಮ-ಮಂದಿರ, ಇವರದು ಸಚ್ಚಿದಾನಂದ-ಮಂದಿರ.

ಜಯರಾಮಾಚಾರ್ಯ : ತೀರಿಹೋತು. ವಕೀಲರು ವಾಕ್ಪಂಡಿತರಲ್ಲs. ಇವರನೂ ನಮ್ಮನ್ನೂ ಒಂದೇ ಡಾವಣಿಯಲ್ಲಿ ಬಿಗಿದಿರಿ. 'ಶ್ವಾನಂ ಯುವಾನಂ ಮಘುವಾನನೂಹ.' ( ಸೆಕ್ರೆಟರಿಯ ಕಡೆಗೆ ತಿರುಗಿ ) ಮಂದಿರ ಅಂತೀರಿ. ಯಾವ ದೇವರ ಪೂಜಿ ನಡೀತದ ?

ಗಿಟ್ಟಪ್ಪ : ಅಲ್ಲೇ ? ಅಲ್ಲಿ ನಡೆಯೋದು ಜೋಕರ ಪೂಜಿ .... ಬಾವನ್ನ ಪಾನೀ ಗೀತಾಪಾರಾಯಣ.

ಸೆಕ್ರೆಟರಿ : ಯಾವದರೇ ಫಕೀರನ ಪೂಜೀ ಮಾಡೋದಕಿಂತ ಅದು ಒಳ್ಳೇದೂ ಅಂತೀನಿ.

ಡೈರೆಕ್ಟರ : ಹಾಂಗ ಬಡಬಡಾಡಬ್ಯಾಡರಿ. ನಿರ್ವಿಕಾರ ಮನಸಿನಿಂದ ಎಲ್ಲವನ್ನೂ ತೂಗಿ ನೋಡಿ ಶಾಸನದಲ್ಲಿ ಹೇಳಿದ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಲು ಇಲ್ಲಿ ನಾವಿದ್ದೇವೆ.

ಜಯರಾಮಾಚಾರ್ಯ : ಹಾಂಗಲ್ಲರಿ. ತಾಪ ಆಗತದ ಇದನ್ನು ಕಂಡು. ರಾಮಾ ಕೃಷ್ಣಾ ಅನ್ನೋವರನ ಕಾಡತೀರಿ; ಜಾಕೀ, ರಾಣೀ ಅನ್ನೋವರಿಗೆ ರೊಕ್ಕ ಕೊಡ-ತೀರಿ. ಕಲಿಕಾಲ ! ವರ್ಣಸಂಕರ, ಅಧರ್ಮದ ಅಭ್ಯುತ್ಥಾನ. ಎಲ್ಲಾ ಗೀತಾ-ದಾಗ ಹೇಳಿದ ಹಾಂಗ ನಡದದ. 'ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ

ವರ್ಣಸಂಕರಃ'

ಮ್ಯಾನೇಜರ : ನಾಕು ಬಾಜೀ ಪಾನು ಇದ್ದದ್ದಕ್ಕೇ ನೀವು ವರ್ಣಸಂಕರ ಅಂತೀರಾ ... ಕಿಲ್ಪಿರ ರಾಣೀ ಕುಂಬಳ ಜಾಕಿ ಹತ್ತೆರ ಇಟ್ಟಿರ ಏನು ಮಹಾಪಾತಕ ! ನಿಮಗೇನು ಘಾತಕ ? ಅಂತೇನಿ ನಾನು.

ಜಯರಾಮಾಚಾರ್ಯ : ಬರ್‍ರಿ. ಅವರ ನೆರವಿಗೆ ನೀವು ಬರದಿದ್ದರ ಹ್ಯಾಂಗ? ಕ್ಲಬ್ಬು ಫೇಟಿರು. "ಪಯಸಾ ಕಮಲಂ, ಕಮಲೇನ ಪಯಃ" ಆ ಬಾಜೀಲೆ ಸುರುವಾದದ್ದು ಮತ್ತು ನಾಕು ಬಾಜೀ ತಂದು ಬಿಡತದ. ಎಷ್ಟು ಅನೀತಿ! ಏನು ಭ್ರಷ್ಟಾಚಾರ! ಅವರ ತಾರೀಫು ನೀವೂ, ನಿಮ್ಮ ತಾರೀಫು ಇವರೂ ಮಾಡಿರಿ. 'ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ,' ಆರಾಮ ಅಂತ ಆರಾಮ. ಹರಾಮ ಅನ್ನಿರಿ, ಹಜಾಮ ಅನ್ನಿರಿ.

ಗಜಾನನ : ಆಚಾರ್ರ, ಬಾಯಿ ಬಹಳ ಹರಿಬಿಡತೀರಿ, ಕೋರ್ಟಿನ ಅಧಿಕಾರ ಅವ ಸಾಹೇಬರಿಗೆ, ಜ್ವಾಕಿ.

ಡೈರೆಕ್ಟರು : ಇರಲಿ, ಬಿಡಿರಿ. ಅನೌಪಚಾರಿಕ ಅಂತ ಮೊದಲೇ ಹೇಳಿದೆ. ಮನಸ್ಸಿನೊಳಗಿನ ಕಿಲಬಾದರೂ ಹೊರಬೀಳಲಿ. ಅದರಿಂದೇನೂ ಬಾಧೆಯಿಲ್ಲ. ಜನರಲ್ಲಿ ಇದು ನಡೆಯುವದೇ. ನಾವು ತಿಳಿದವರು ತಾಳಿಕೊಳ್ಳಬೇಕು.

ಜಯರಾಮಾಚಾರ್ಯ : ಹೌದಲ್ಲೋ ! ಸಾಹೇಬರ ನಿವಃ ನೋಡ್ರಿ. ಇಂಥಾದ್ದಕ್ಕೆಲ್ಲಾ ರಾಜಮಾನ್ಯತಾ, ಪ್ರತಿಷ್ಠಾ ದೊರೆತರೆ ಧರ್ಮ, ನೀತಿ ಅಂಬೋದೇನರಿ ಉಳಿದೀತೇನು? ಹೇಳಿರಿ. ಕಣ್ಣಾರೆ ಕಂಡದ್ದನ್ನು ಹೇಳಲಿಕ್ಕೆ ನಮಗ್ಯಾರ ಅಂಜಿಕಿ ? ನಿಃಸ್ಪೃಹಸ್ಯ ತೃಣಂ ಜಗತ್.

ಮ್ಯಾನೇಜರು : ನಿಃಸ್ಪೃಹ ಅಂತ ನಿಃಸ್ಪೃಹ ! ತಮ್ಮ ಗಿರಾಕಿ ಎರಡನೇ ಕಡೆಗೆ ಹೊರಟವೂ ಅಂತ ಹೊಟ್ಟೇಕಿಚ್ಚು. ಕ್ಲಬ್ಬು, ಸಿನೇಮಾ ಬೆಳೆದಂತೆ ಪುರಾಣ ಪುಣ್ಯಾಕಥಿ, ಹರಿಕೀರ್ತನ ಇವಕ್ಕ ಅಳಿಗಾಲ ಬಂತು. ಅವರಾದರೂ ಮಾಡಬೇಕೇನು ಪಾಪ !

ಸಕ್ರೆಟರಿ : ಮಾಡಲಿಕ್ಕೆ ಹತ್ಯಾರಲ್ಲ. ಕೀರ್ತನದೊಳಗ ಸಿನೇಮಾದ ಧಾಟೀ ಹಾಡು. ಆಚಾರ್ರ, ನಿಮ್ಮ ಪುರಾಣದ ಕಥಿಗಳನ್ನ ಹೆಚ್ಚು ರಮ್ಯ ಆಗೋಹಾಂಗ ಇವರ ಚಿತ್ರದಾಗ ಹೇಳಿರತದ. ನಿಮ್ಮ ಆಖ್ಯಾನಗಳನೆಲ್ಲ ಪರದೆಯ ಮೇಲೆ ಪ್ರತ್ಯಕ್ಷ ಕಾಣೋಹಾಂಗ ಮಾಡತಾರ. ನಿಮ್ಮ ಪಕ್ಷದವರಾರು, ನಿಮ್ಮ ಪೋಷಕರಾರು ಇಷ್ಟೂ ತಿಳಕೊಳ್ಳುವಷ್ಟು ನಿಮಗ ಬುದ್ಧಿ ಇದ್ದಹಾಂಗ ಕಾಣೂದಿಲ್ಲ. ಯಾಕರಿ ಮ್ಯಾನೇಜರ, ಮೊನ್ನಿನ ನಿಮ್ಮ ಕೃಷ್ಣಲೀಲಾ ಚಿತ್ರದ ಉದ್ಘಾಟನಕ್ಕ ಇವರಿಗೊಂದು ಆಮಂತ್ರಣ ಕಳೆಸಿದ್ದಿರೋ ಇಲ್ಲವೋ ?

ಮ್ಯಾನೇಜರ : ಹೋ ಹೋ. ಕಳಿಸಿದ್ದೆ ಬಂದು ನೋಡಿದರು !

ಜಯರಾಮಾಚಾರ್ಯ : ಏನರಿ. ಸುಡುಗಾಡದು ? ಪರಮಾತ್ಮನ ಅವತಾರ

ಆದ ಶ್ರೀಕೃಷ್ಣನ ಲೀಲಾಜಾಲ ಎತ್ತ! ಇವರು ಹಿಂಡು ರಂಡೇರನ್ನ ಕಲೆ ಹಾಕಿ, ಹಾಕಿದ ಗೊಂದಲ ಎತ್ತ! ರಾಮಾ, ಕೃಷ್ಣಾ ಇವರ ಕಥೀಗೆ ಕೈಹಾಕಬ್ಯಾಡಿರಿ. ಇವರಿಗೆ ಕೈಮುಗಿದು ಬೇಡಿಕೋತೇನಿ. ಪುರಾಣದಾಗ ಉಳಿದದ್ದು ಬೇಕಾದಷ್ಟು ಆಖ್ಯಾನ ಅವ. ಆದರ ಪ್ರತಿಭಾ ಇದ್ದರಲ್ಲ ಮಾತು. ಬಜಾರದಾಗ ನಾಕು ದುಡ್ಡು ಹೆಚ್ಚು ಸಿಗಬೇಕಂತ. ಕೃಷ್ಣ ಚರಿತ್ರಕ್ಕ ಕೈಹಾಕಾತಾರ. 'ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ.'

ಮ್ಯಾನೇಜರ: ನೋಡಿರಿ. ಅದು ಪೂರ್ಣಾವತಾರ. ಅಲ್ಲೀಯಷ್ಟು ಪ್ರಸಂಗಗಳು ಇನ್ನೆಲ್ಲಿಯೂ ಇಲ್ಲ. ಆ ಗೋಕುಲವೇನು, ಆ ಗೋಪಿಯರೇನು, ಆ ರಾಧೆಯ ಆರಾಧನೆಯೇನು, ಆ ರಾಸಕ್ರೀಡೆಯೇನು! ಆಹಾಹಾ! ಎಂದಿಗೂ ಮಾಸದ ವಿಷಯ.

ಜಯರಾಮಾಚಾರ್ಯ: ಆದರ ಭಾವಿಕರ ಭಕ್ತಿಭಾವಕ್ಕೆ ಧಕ್ಕೆ ಕೊಡತೀರಿ, ಅದರ ಗತಿಯೇನು — 'ಪಾರ್ಥೋ ವತ್ಸಃ ಸುಧೀರ್ಭೋಕ್ತಾಃ ದೋಗ್ಧಾ ಗೋಪಾಲ ನಂದನಃ ಇಂಥ ಯೋಗ್ಯತೆಯುವ. ನಿಮ್ಮ ಕೃಷ್ಣನೋ ಉಡಾಳರ ಶಿರೋಮಣಿ, ಮವಾಲಿಗಳ ಮುಕುಟಮಣಿ! ಹೀನ, ಹೀನ ಅಭಿರುಚಿ.

ಡೈರೆಕ್ಟರ: ಸಮಾಜಕ್ಕೆ ಸದಭಿರುಚಿ, ಶುಚಿಯಾದ ವಿನೋದ, ವಿಚಾರ ಮಂಥನ ಇವು ಅವಶ್ಯ. ಇವನ್ನು ಪೋಷಿಸುವ ಘಟಕಗಳೆಂದು ನಿಮ್ಮ ನಿಮ್ಮ ಮಂದಿರಗಳ ಕಡೆಗೆ ಸರಕಾರ ನೋಡುತ್ತದೆ. 'ಭಿನ್ನರುಚಿರ್ಹಿಲೋಕಃ.' ಎಲ್ಲಕ್ಕೂ ಸಮಾಜದಲ್ಲಿ ಅವಕಾಶವುಂಟು. ದುಡಿದವನಿಗೆ ದಣಿವು ಆರುವ ಹಾಗೆ, ಹೊಸ ದಿನಕ್ಕೆ ಹೊಸ ಹುರುಪು ಬರುವಂತೆ, ಉಚ್ಚಧ್ಯೇಯಗಳನ್ನು ಸಾಧಿಸುವಂತೆ, ಮಹಾ ಕಾರ್ಯಕ್ಕೆ ಜನ ಪ್ರವೃತ್ತ ಆಗುವಂತೆ ಯಾರು ತಮ್ಮ ಪರಿಯಿಂದ ಪ್ರಯತ್ನಿಸುತ್ತಾರೋ ಅವರೆಲ್ಲರೂ ರಾಜಮಾನ್ಯತೆಗೆ ಅರ್ಹರು ... ನಿಮ್ಮ ಮಂದಿರಗಳಲ್ಲಿ ನಡೆಯುವಂಥ ಕೆಲಸಗಳನ್ನು ನೋಡಿ ನಾವು ನಿರ್ಣಯ ಕೊಡುತ್ತೇವೆ. ನಿಮ್ಮೆಲ್ಲರ ದೃಷ್ಟಿಕೋನ ತಿಳಿದಂತಾಯಿತು. ಹೋಗಿರಿನ್ನು. ಹೋಗುವ ಮೊದಲು ಒಬ್ಬರಿಗೊಂದು ಮಾತು. ಜಯರಾಮಾಚಾರ್ಯ, ಜಗತ್ತು ಮುಂದೆ ಹೋಗಿದೆ. ಇಪ್ಪತ್ತನೆಯ ಶತಮಾನದ ಉತ್ತರಾರ್ಧ ನಡೆದಿದೆ. ಜನರ ಜೀವನದ ಗಡಿಯಾರ ನೀವು ಹಿಂದೆ ತಿರುವಲಾರಿರಿ. ಗಿಟ್ಟಪ್ಪನವರೇ, ಎಲ್ಲಿಯ ವರೆಗೆ ಲೋಭ, ಮೋಹ, ಮೋಸ ನಿಮ್ಮಲ್ಲಿ ಸೇರಿ ಜನರನ್ನು ಅಡ್ಡದಾರಿಗೆ ಬೀಳುವಂತೆ ಮಾಡುವದಿಲ್ಲವೋ ಅಲ್ಲಿಯ ವರೆಗೆ ನಿಮಗಾವ ಭಯವೂ ಇಲ್ಲ. (ಉಳಿದವರ ಕಡೆಗೆ ಹೊರಳಿ) ಮತ್ತ ನಿಮಗೆ—ಧರ್ಮ, ನೀತಿ ಎರಡೂ ಒಂದೇ ಅಂತ ಸಮಾಜ ನಂಬಿದೆ. ಧರ್ಮದ ಹೆಸರು ತಕ್ಕೊಳ್ಳದಿದ್ದರೂ ಸಮಾಜಧಾರಣಕ್ಕೆ ಅವಶ್ಯವಾದ ನೀತಿಯ ಕಟ್ಟುಗಳನ್ನು ಎಂದಿಗೂ ಸಡಿಲಿಸಲಿಕ್ಕಾಗದು. ಸ್ವಾತಂತ್ರ್ಯ ಸಿಕ್ಕ ಮೇಲಂತೂ ಇದರ ಕಡೆಗೆ ಕಟಾಕ್ಷ ಹೆಚ್ಚು. ಪಾನಪ್ರತಿಬಂಧ, ವೇಶ್ಯಾವ್ಯವಸಾಯನಿರೋಧ ಇವೇ ಮೊದಲಾದವನ್ನು ನೋಡಿರಿ. ಕಳೆದ ೧೦ ವರ್ಷಗಳಲ್ಲಿ ಅವಿವಾಹಿತ ಮಾತೆ

ಯರ ಸಂಖ್ಯೆ ಇಮ್ಮಡಿಯಾಗಿದೆಯೆಂದು ವರದಿಯಾಗಿದೆ. ಅದರ ಕಡೆಗೆ ಸಮಾಜದ ಹಿತ ಬಯಸುವ ಎಲ್ಲರ ಗಂಭೀರ ಲಕ್ಷ್ಯ ಹೋಗಬೇಕಾಗಿದೆ. ಆರ್ಥಿಕ ಅಸ್ಥಿರತಾ ಎಲ್ಲಾ ಅಶಾಂತಿ, ಅನಿಷ್ಟಗಳಿಗೆ ಮೂಲ... ಅದರ ಗಳಿಗಿ ಹೇಗೆ ಸರಿಯಾಗಿ ಹಾಕ-ತೇವ್ರೋ ಅದರ ಮೇಲೆ ಸ್ವಾಸ್ಥ್ಯ ಅವಲಂಬಿಸಿದೆ. ಒಳಗೆ ಕಿಡಿ ಬಿದ್ದು ಸುಡಹತ್ತಿರಲು ಮೇಲೆ ಇಸ್ತ್ರೀ ಒತ್ತಿದರೇನು ? ಸಮಾಜಕ್ಕೆ ಧಾರಕ ಮತ್ತು ತಾರಕ ಇಂಥಾದ್ದರಲ್ಲಿ ನಿಮ್ಮ ಶಕ್ತಿ ವ್ಯಯವಾಗಲಿ.

ಜಯರಾಮಾಚಾರ್ಯ : ಅದೆಲ್ಲಾ ಸರಿ. ಆದರೆ ಧರ್ಮದಾಗ ಕೈ ಹಾಕೂದಿಲ್ಲ ಅಂತ ರಾಣೀಸರಕಾರದ ಜಾಹೀರನಾಮೆದಾಗ ವಚನ ಅದ. ಅದನ್ನ ನಂತರ ಎಲ್ಲಾರೂ ನಡಿಸಿಕೋತ ಬಂದಾರ. ಅದರ ಮಾತು ಏನಿರಿ ? ಏಸು ' ಬಿಂದುಮಾತ್ರಂ ವಿಶಿಷ್ಯತೆ' ಅನಬೇಕೋ.

ಡೈರೆಕ್ಟರು : ರಾಣೀ ಮರಿಮಕ್ಕಳ ರಾಜ್ಯವೇ ಹೋಯಿತು. ಇನ್ನೂ ಅದಕ್ಕೇನು ಅಂಟಿರುವಿರಿ. ಧಾರಣಾತ್ ಧರ್ಮಃ. ನೀವೇ ನೋಡಿರಿ. ಧರ್ಮದ ಹೆಸರಿನಿಂದ ಎಷ್ಟು ಅನಾಚಾರ ನಡೆದದೆ ! ಎಷ್ಟು ಧನ, ಉತ್ಸಾಹ ಹಾಳಾಗತಿದೆ. ಮಠ ಮಂದಿರಗಳಲ್ಲಿ ನಡೆದದ್ದೇನು ? ಕ್ಷೇತ್ರಗಳಲ್ಲಿ ಎಷ್ಟು ಅನಾಚಾರ, ಜಾತ್ರೆಗಳಲ್ಲಿ ಎಷ್ಟು ಅತ್ಯಾಚಾರ. ದೇವತೆಯ ಹೆಸರಿನಲ್ಲಿ ಪ್ರಾಣಿಹಿಂಸೆ, ಮಾಂಸಭಕ್ಷಣ, ಶಾಸ್ತ್ರೋಕ್ತವಾದ ಯಜ್ಞದಲ್ಲಿಯ ಪಶುವಧೆಯನ್ನು ನೀವು ಬದಿಗಿಡಲಿಲ್ಲವೇ. ಪಿಷ್ಟ ಪಶು ಮಾಡಿ ಸಾಂಗಮಾಡುವಿರಲ್ಲವೇ. ಧರ್ಮದಲ್ಲಿ ಕೈ ಹಾಕದೇ ಆಯಿತೇ ಇದೆಲ್ಲಾ. ಮಠಮಂದಿರಗಳಲ್ಲಿ ಅಪಾರ ಧನಸಂಚಯವಾಗಿ ಮಲೆತು ನಿಂತ ನೀರಿನಂತೆ, ಕೆಲಸಕ್ಕೆ ಬಾರದಾಗಿದೆ. ಧರ್ಮದ ಭಾವನೆಯ ಕೋಡಿ ಕೆಡವದೆ ಸಾಗದು. ಮಂದಿರಗಳೀಗ ಕಳ್ಳಕಾಕರಿಗೆ ಸುಲಿಗೆಯ ಸ್ಥಳಗಳಾಗಿವೆ. ಈ ಕಾಲದಲ್ಲಿ ಹೊಸ ಕ್ಷೇತ್ರಗಳಾಗಬೇಕು. ಭಾಕ್ರಾನಾಂಗಲ್, ಕಾಕರಪಾರಾ, ಕೋಯನಾ, ಗಾಂಧೀ ವಿದ್ಯುನ್ಮಂದಿರ ಇಂಥ ನೂರು ಕ್ಷೇತ್ರ ನಿರ್ಮಾಣವಾಗಬೇಕಾಗಿದೆ. ಸಮಾಜದ ಸಂಪತ್ತೆಲ್ಲಾ ರಾಷ್ಟ್ರಸಮೃದ್ಧಿ ಕಾರ್ಯದಾಗ ತೊಡಗಿಸಬೇಕಾಗಿದೆ. ಜನ ಅಜ್ಞವಿದೆ. ನೆವ ಸಿಕ್ಕರೆ ರೊಚ್ಚಿಗೆಬ್ಬಿಸಿ ಗೊಂದಲ ಹಾಕಲಿಕ್ಕೆ ಹತ್ತೆಂಟು ಪಕ್ಷ ಇವೆ. ಅದಕ್ಕೇ ಮೆಲ್ಲಗೆ ಸಾಗಬೇಕಾಗಿದೆ. ಅದೇ ಎಲ್ಲರಿಗೂ ಇದು ತಿಳಿದು ದೇವರ ಮೈಮೇಲಿನ ಆಭರಣಗಳನ್ನು ತೆಗೆದು ರಾಷ್ಟ್ರಕ್ಕೆ ಅರ್ಪಣಮಾಡಬೇಕು. ಎಲ್ಲರೂ ಅನ್ನಿರಿ ! ಈಗ 'ಸಹ ವೀರ್ಯಂಕರವಾವಹೈ ! ಓಂ ಶಾಂತಿಃ ಶಾಂತಿಃ ಶಾಂತಿಃ.'

[ ಎಲ್ಲರೂ ಎದ್ದು ಹೋಗುವರು, ಡೈರೆಕ್ಟರ ಹಾಗೂ ಗಜಾನನರಾಯರಿಬ್ಬರೇ ಉಳಿಯಲು, ಬಾಗಿಲಿಕ್ಕಿ ಬರುತ್ತಾ ]

ಗಜಾನನ : ಬಹಳೇ ಯಶಸ್ವಿಯಾಯಿತು ನಿಮ್ಮ ಸಂಕಲ್ಪ, ಈ ಯುಗದ ಋಷಿಗಳಂತೆ ಇದ್ದೀರಿ.

ಡೈರೆಕ್ಟರ: ನೋಡಿದರೆ ಇವರೆಲ್ಲರೂ ಸಮಾಜದ ಕಲ್ಯಾಣಕ್ಕಾಗಿ ನಿಃಸ್ವಾರ್ಥ ಸೇವೆ ಸಲ್ಲಿಸುವವರಿದ್ದಾರೆ. ಒಂದೊಂದು ವ್ಯಕ್ತಿ ಒಂದು ತೆರನಾಗಿ ಇಷ್ಟೆ. ಅವರ ವ್ಯಕ್ತಿತ್ವದಲ್ಲಿ ಒಂದೊಂದು ಅಂಚು ಹೆಚ್ಚು ಹೊರಹಾದಲ್ಲಿ ಸಂಘರ್ಷ. ಅಂತೂ ಈ ನಾಲ್ಕೂ ಮಂದಿಯು ವಕೀಲಿ ಮಾಡಲಿಕ್ಕೆ ನೀವೂ ಗಟ್ಟಿಗರು.

ಗಜಾನನ: ನಮ್ಮದೇನು ಸಾಹೇಬ, ಪಕ್ಷಕಾರ ಬಯಸಿದ್ದು ಕಾಯದೇದ ಬಂಧನಗಳನ್ನು ಮುರಿಯದಂತೆ ಎಷ್ಟು ಸಾಧ್ಯವೋ ಅಷ್ಟು ಮಾಡಲಿಕ್ಕೆ ಒದ್ದಿಯುಸ್ಸು ಮಾರುವದು. ಅವರಿಬ್ಬರ ಜಗಳ ನೋಡಿ ವಾದೀ ಪ್ರತಿವಾದೇರಿಬ್ಬರ ಕಡೆಗೂ ಎಲ್ಲಿ ವಕೀಲಪತ್ರ ಹಾಜರ ಮಾಡೇನೋ ಗೊತ್ತಾಗದೇ ಅಂತ ಅನಿಸಿತು. ಎಷ್ಟು ಭಾಗಾದಿಯರ ಹಾಂಗ ಒಬ್ಬರ ಮೇಲೊಬ್ಬರು ಹರಿಹಾಯ್ದರು

ಡೈರೆಕ್ಟರ: ಹೋಗಲಿ ಬಿಡಿರಿ. ಮುಗಿಸಿದೆವಲ್ಲ ಪ್ರಕರಣ. ನಾ ಬಂದ ಕೆಲಸದ ಕಡೆಗೆ ಹೊರಳೋಣ. ಊರ ಉಸಾಬರೀ ಮಾಡೇ ಉಣದ ಕೆಟ್ಟರಂತ.

ಗಜಾನನ: ನೀವು ಊರ ಉಸಾಬರಿ ಮಾಡೇ ಉಂಡವರು, ಉಣ್ಣೋವರು. ೨೦ ವರ್ಷದ ಹಿಂದೆ 'Welfare State and the fight against communism'ದ ಮೇಲೆ ಪ್ರಬಂಧ ಬರೆದು Ph.D. ದೊರಕಿಸಿದಿರಿ. ಅದರ ಫಲಶ್ರುತಿ ಈಗ ಹತ್ತ ವರ್ಷದಿಂದ, Director of Social welfare centres. ಊರು ನಿಮ್ಮನ್ನ ಬಿಟ್ಟದ್ದಲ್ಲ.

ಡೈರೆಕ್ಟರ: ಅಂದರೂ ಪ್ರಪಂಚ ಒಂದು ಬಿಟ್ಟದ್ದಲ್ಲ. ನಮ್ಮ ನಿಮ್ಮ ಸ್ನೇಹ ಅದಕ್ಕೂ ಹೆಚ್ಚಿನ ಸಂಬಂಧದಿಂದ ಬೆಳೆಯಲಿ, ಹುಡುಗಿಯನ್ನಂತೂ ನೋಡಿದ್ದಾಯಿತು. ನಿನಂಬೋದು ಅಂಕಿ ಹೇಳಿರಿ. ದೇವರು ನಿಮಗೇನು ಕಡಿಮೆ ಮಾಡಿಲ್ಲ. ನನ್ನ ಮೇಲೂ ದಯದೋರಿದ್ದಾನೆ. ಉಳಿದ ಯಾವ ಮಾತೂ ಅಡ್ಡ ನಿಲ್ಲದಂತೆ ನೋಡತೇನೆ. ಹೆಂಗಸರ ದೃಷ್ಟಿಯಿಂದ ಮಹತ್ವದ್ದು. ಅನಸೋ ಮಾನಪಾನ, ಪಂಚಗಿತ್ತಿಯರ ಬಾಬು, ಎಲ್ಲಾ ಯಥೇಷ್ಟ. ನಮ್ಮ ಮನೆಯವರು ಬಹಳ ಉಮೇದಿಯವರು. ಮಾಡಿಸಿಕೊಂಬೋದು ಹ್ಯಾಂಗ ಹೆಣ್ಣಿನ ಕಡಿಯವರಾದಾಗ ಮಾಡಲಿಕ್ಕೆ ಬಲ್ಲರು.

ಗಜಾನನ: ನಾನೂ ನನ್ನ ಮನೆಯವರನ್ನ ಕೇಳಿದೆ. ಸೊಸೆ ಮನಸಿಗೆ ಬಂದಾಳಂತ. ಆಕೆಯ ಗುಣ ಇಷ್ಟರಲ್ಲೆ ಬಣ್ಣಿಸಲಿಕ್ಕೆ ಹತ್ತಿದರು. ಆದರೂ ಈಗಿನ ದಿವಸ ಕಾಲ. ಮಗ ಹಾಂಗ ನಮ್ಮನ್ನ ಮೀರಿ ನಡೆಯೋ ಹಾಂಗಿಲ್ಲ. ಸೂತೋವಾಚ ಮಾಡೇನಾಗಲೆ... ಆದರೂ ಕಿವಿಮ್ಯಾಲೆ ಹಾಕದ, 'ಒಂದು ಮಾತೂ ಕೇಳದ ನಿಶ್ಚಯ ಹಾಕೋ ದಿವಸ ಉಳಿದಿಲ್ಲ. ಇಂದೋ ನಾಳೆಯೋ ಬರೋವನಿದ್ದಾನ. ಮುಖ್ಯ ನಮ್ಮವರ ಮನಸಿಗೆ ಬಂದವ್ಯಾಲೆ ನಿಮ್ಮ ಕೆಲಸ ಆದಹಾಂಗ. ನೀವು ನಿಶ್ಚಿಂತ ಹೋಗಬಹುದು. ಮತ್ತ ವ್ಯವಹಾರ ಭಾಗ. ಎಲ್ಲಾ ಮಾತೂ ನೀವು ಆಡಿ ಬಿಟ್ಟೇರಿ. ಎಲ್ಲಾ ನಿಮಗೇ ಒಪ್ಪಿಸತೇನಿ ೧೫ ದಿವಸದ ನಂತರದ ೩-೪ ಮುಹೂರ್ತ ಸೂಚಿಸಿ ಪತ್ರ ಬರೀತೇನಿ. ಅದರಲ್ಲಿ ನಿಮ್ಮ ಅನುಕೂಲ ಆದದ್ದಕ್ಕೆ ನಮ್ಮ ಒಪ್ಪಿಗೆ. ಮಗ ಬರಲಿ. ಒಂದೆರಡು ದಿನದಾಗ ತಿಳಸತೇನಿ. ( ಗಡಿಯಾರದ ಕಡೆಗೆ ಗಂಟೆ ಬಡೆದದ್ದ

ಗಿಂದ ಲಕ್ಷ್ಯ ಹೋಗಿ) ಆಂ-ಎಷ್ಟು ಹೊತ್ತು ಆಯಿತಿದು ! ಅಡಿಗಿ ಆರಿ ಹೋದೀತು. ನಡ್ರೀರಿ ಊಟಕ್ಕೆ ...

[ ದೃಶ್ಯ : ೩ ]

[ ಗಜಾನನರಾಯರ ಮನೆಯ ನಡುಮನೆಯಲ್ಲಿ. ಒಂದು ಪಲ್ಲಂಗ, ಮೇಲೆ ಹಾಸಿದ ಗಾದಿ; ಅದರ ಹತ್ತಿರ ಒಂದು ಬೆತ್ತದ ಹೆಣಿಕೆಯ ಆರಾಮಖುರ್ಚಿ; ಅದರ ಮಗ್ಗುಲಿಗೇ ಒಂದು ಟೀಪಾಯಿ ಮೇಲೆ ಬೆಳ್ಳಿಯ ತಂಬಗಿ, ಥಾಲಿ. ಮೂರನೆಯ ದಿನ ರಾತ್ರಿ ಒಂಭತ್ತರ ಸುಮಾರಿಗೆ ಸರಸ್ವತೀಬಾಯಿ ಹಿರಿಯ ಮಗ ನಂದನೊಡನೆ ಮಾತನಾಡುತ್ತ ಬೆತ್ತದ ಆರಾಮಖುರ್ಚಿಯ ಮೇಲೆ ಕುಳಿತಿರುವಳು. ಗಜಾನನರಾಯರು ಪ್ರವೇಶಿಸಿದೊಡನೆ ಚಟಕ್ಕನೆ ಇಬ್ಬರೂ ಎದ್ದು ನಿಲ್ಲುವರು. ರಾಯರು ಹೋಗಿ ಆ ತೆರವಾದ ಬೆತ್ತದ ಆರಾಮ ಖುರ್ಚಿಯಲ್ಲಿ ಕೂಡುವರು. ನಂದನು ಅಲ್ಲಿರುವ ಇನ್ನೊಂದು ಖುರ್ಚಿಯ ಮೇಲೆ ಹೋಗಿ ಕೂಡುವನು. ಸರಸ್ವತೀಬಾಯಿ ಪಲ್ಲಂಗದ ಮೇಲೆ ಹೋಗಿ ರಾಯರು ಕುಳಿತ ನಂತರ ಕೂಡುವಳು. ]

ಗಜಾನನ : ಮುಂದಿನ ಹದಿನೈದು ದಿವಸದಾಗ ನಿಮ್ಮ ಅನುಕೂಲತೆ ನೋಡಿ ನೀವೇ ಒಂದು ಮುಹೂರ್ತ ತಿಳಿಸಿರಿ ಅಂತ ಬರಿಯಲಾ ? ನಂದನೂ ಒಪ್ಪಿದನೋ ಇಲ್ಲವೊ ? ಎಂಥ ಸಲಕ್ಷಣ ಹುಡಿಗಿ, ಮೇಲಾಗಿ ನಿನ್ನ ಕೈಯೊಳಗಿನ ಮಾತು.

ಸರಸ್ವತಿ : ನನ್ನ ಕೈಯೊಳಗಿನದನ್ನಲ್ಲಿಕ್ಕ ಅವನೇನಿನ್ನೂ ಕಂಕುಳದಾಗಿನ ಕೂಸೇ ? ಅವನಂತಾನ ಈ ಹೆಣ್ಣೊಲ್ಲೆ. ಅವರಿಗೆ ಬೇರೆ ಕಡೆಗೆ ನೋಡಲಿಕ್ಕೆ ಹೇಳಿರಿ.

ಗಜಾನನ : ಆಂ. ಈ ಹೆಣ್ಣೊಲ್ಲ ! ಯಾಕ ಒಲ್ಲ ? ರೂಪ, ವಿದ್ಯಾ, ಧನ ಎಲ್ಲಾ ಅದ. ಗುಣಾನೂ ನೀನು ನೋಡೀದಿ.

ಸರಸ್ವತಿ : ಯಾಕ ಒಲ್ಲ, ಶಿವನ ಬಲ್ಲ! ಅವನs ಬಲ್ಲ. ನಂದಾ, ನೀನs ಹೇಳು ಯಾಕಂಬೋದು.

ನಂದ : ಎಲ್ಲಾ ಇದ್ದರೂ ಮುಖ್ಯ ನನ್ನ ಮನಸ್ಸಿಲ್ಲ. ಅದಕ್ಕೇನು ಮಾಡೋದು?

ಗಜಾನನ : ಮನಸ್ಸಂತ ಮನಸ್ಸು. ಅದೇನು ! ತುಡುಗ ದನದಹಾಂಗ, ಮೇಯಲಿಕ್ಕೆ ಬಿಟ್ಟರೆ ಸಿಕ್ಕಲ್ಲಿ ಮೇಯುತದ. ಕೊರಳಾಗ ಗುದ್ದಿ ಕಟ್ಟಿ ಒಂದು ಠಾಂವಿಗೆ ಕಟ್ಟಿಹಾಕಿದರೆ, ಸುಮ್ಮನ ಎದುರಿಗೆ ಹಾಕಿದ್ದು ತಿನಕೋತ ನಿಲ್ಲತದ.

ನಂದ : ಕೈಗೆ ಸಿಗೋ ಮೊದಲ ಯಾರದರ ಹೊಲಾ ಮೇದಿದ್ದರ ?

ಗಜಾನನ : ಕಟ್ಟಿಹಾಕುವವರೆಗೂ ಕೊಸರಿಕೊಂಡು ಬರಲಿಕ್ಕೆ ಬರತದ. ನಾನಿಲ್ಲಿ ಮಾತು ಕೊಟ್ಟೇನಿ.

ನಂದ : ನಾನಲ್ಲಿ ಮಾತು ಕೊಟ್ಟೇನಿ.

ಗಜಾನನ : ಮಾತು ಅನ್ನೋವರೆಗೆ ಮುರೀಲಿಕ್ಕ ಬರತದ.

ನಂದ : ಒಳಿತೇ ಆಯ್ತು. ಮುರಿದುಬಿಡಿರಿ ನಿಮ್ಮ ಮಾತು. ಅಷ್ಟು ಹೇಳ್ಳಿಕ್ಕೆ ಬಂದಿದ್ದೆ. ನಾ ಹೊರಟೆ. (ಎದ್ದು ನಿಲ್ಲುವನು)

ಗಜಾನನ : (ಹೆಂಡತಿಯ ಕಡೆಗೆ ಹೊರಳಿ) ಕೇಳಿರಿ, ಕೇಳಿರಿ, ಇವನ ಮಾತು. ಹೇಳು ಇವಗಷ್ಟು ಬುದ್ಧೀ ಮಾತು. ಸೊಸೆ ಮನಸಿಗೆ ಬಂದಳು ಅಂತ ಹೇಳಿದೆ! ಆ ಮ್ಯಾಲೆ ನಾ ಮಾತು ಕೊಟ್ಟೇನಿ. ಹೆಣ್ಣು ತಗದು ಮದುವೆ ಗೊತ್ತು ಮಾಡುವರು, ಸಾಂಗಮಾಡುವರು ತಂದೆತಾಯಲ್ಲs?

ಸರಸ್ವತಿ : ನನ್ನ ಮನಸಿಗೆ ಸೊಸಿ ಬಂದಳು. ಆದರ ಸೊಸಿ ನನ್ನ ಮಗನ ಹೆಂಡತಿ, ಆದ್ದರಿಂದ ಸೊಸೀ ಅಂದಮ್ಯಾಲೆ, ಅವನಿಗೆ ಒಪ್ಪಿದ ಮಾತಿದು. ಅವನು ಒಪ್ಪಿದರ, ಹೂಂ ಅಂದ ಮೇಲೆ ಮುಂದಿನ ಮಾತು.

[ತಾಯಿಯ ಮುದ್ರೆಯ ಕಡೆಗೆ ನೋಡಿ ನಂದ ಹೋಗುವನು.]

ಗಜಾನನ : ಹಾಂಗಾರ ಹೇಳಿ ಹೂಂ ಅನಸು ನೀನು ಅವನ ಕಡಿಂದ. ನಿನ್ನ ಮಾತು ಮೀರಲಿಕ್ಕಿಲ್ಲ,

ಸರಸ್ವತಿ : ಚಿಕ್ಕವನಿದ್ದಾಗ ರಾಮಾ ಕೃಷ್ಣರ ಕಥೆ ಹೇಳಿ ಹೂಂ ಅನಿಸಿದಹಾಂಗ, ಈಗ ಹೂಂ ಅನಿಸೋದದನs ?

ಗಜಾನನ : ಬ್ಯಾರೆ ಕಥೀ ಹೇಳು. ಬೀಗರ ಕುಲ, ಶೀಲ, ಹುಡುಗಿಯ ಗುಣ, ಈವರೆಗೆ ನಮ್ಮ ಅವರ ಋಣಾನುಬಂಧ ಹ್ಯಾಂಗ ಬೆಳೀತು, ಈ ಕಥೀ ಹೇಳು. ಕುಲದ ಪ್ರತಿಷ್ಠಾ ಹ್ಯಾಂಗ ಬೆಳೀತದ, ಅವನ ಭಾಗ್ಯ ಹ್ಯಾಂಗ ಉದಯಕ್ಕ ಬರತದ, ಈ ಸಂಬಂಧದಿಂದ ಈ ಕಥೀ ಹೇಳು. ಈವರೆಗೂ ಭರದಿಂದ ಬೆಳೆದು ಬಂದ ನಮ್ಮ ಬಾಳಿನ ಗಿಡದ ಕಥೀ ಹೇಳು. ಆ ಗಿಡದ ಒಂದು ಟೊಂಗೆಯಾದ ಇವನು ಹ್ಯಾಂಗ ಬಾಗಬೇಕು, ಯಾವದರಿಂದ ಶೋಭೆ ಬೆಳದೀತು ಇದನ್ನು ತಿಳಿಸಿ ಹೇಳು. ಒಪ್ಪಿಸು.

ಸರಸ್ವತಿ : ಎಲ್ಲ ಹೇಳಿದೆ. ನಾ ಹೇಳಿದ ಕಥೀ ಕೇಳೇ ಈ ನಿರ್ಧಾರಕ್ಕ ಬಂದಾನ ಅವ. ನಮ್ಮದು ನಿಮ್ಮದು ಹೇಗೆ ಕೂಡಿತೆಂಬುದರ ಕಥೀ ಹೇಳಿದೆ. ಅದಕ ನಿಮ್ಮ ಹಾಂಗ ತನ್ನ ಮನಸಿಗೆ ಬಂದಾಕಿನ್ನ ಮಾಡಿಕೋತೇನಿ ಅಂತಾನ. ಇದರಾಗ ಮಂದೀ ಕೈ ಬ್ಯಾಡ ಅಂತಾನ.

ಗಜಾನನ : ಅಂದರ! .ಅದನ್ನೂ ಹೇಳಿಬಿಟ್ಟೆಯಾ? ಮದುವೆ ಮೊದಲು ನಾವು ಕೂಡಿ ಇದ್ದದನ್ನೂ ಹೇಳಿದಿಯಾ?

ಸರಸ್ವತಿ : ಹೆಂಗಸು ಎಷ್ಟಾದರೂ ಅದನ್ನ ಹೇಳೂದಿಲ್ಲ. ನಾ ಹೇಳಲಿಲ್ಲ. ನೀವೇ ಹೇಳಿದಿರೀಗ. ಎಲ್ಲಿ ಅವನ ಕಿವಿಗೆ ಮಾತು ಬಿದ್ದವೋ? (ಹೊರಗೆ ಹೋಗಿ ನೋಡಿ ಬಂದು)ಇಲ್ಲ. ಮುಂದಿನ ಅಟ್ಟದ ಮ್ಯಾಲೆ ಹೋಗಿ ಕೂತಾನ ಕಾಣಸತದ.

ಗಜಾನನ : ಕರೀ ಹಾಂಗಾರವನ್ನ. ನಾ ಎರಡು ಮಾತು ಹೇಳಿ ನೋಡತೇನಿ.

ಸರಸ್ವತಿ : (ಹೊಸ್ತಿಲ ಬಾಗಿಲದಲ್ಲಿಯೇ ನಿಂತು) ನಂದಾ, ಏ ನಂದಾ, ಬಾರಪಾ, ನಿನ್ನ ಹಡೆದವರು ಕರೀತಾರ. (ರಾಯರ ಕಡೆಗೆ) ನೀವು ಹೇಳೋದ ಏನೂ ಉಪಯೋಗ

ಇಲ್ಲ. ಅವನೊಪ್ಪಲಿಕ್ಕಿಲ್ಲ. ಒಪ್ಪಬಾರದು ಅಂತ ನನಗೂ ಅನಸತದ.

ಗಜಾನನ : ಅದ್ಯಾಕ? ಈಗ್ಯಾಕ ತಿರುಗಿತು ನಿನ್ನ ಮನಸ್ಸು. ಇಷ್ಟರಾಗ ನಿನಗ ಏನಾತು ?

ಸರಸ್ವತಿ : ಮತ್ತೇನಾಗಿಲ್ಲ. ನಂದ ಹೇಳಿದ ಒಂದು ಮಾತು, ಬ್ಯಾರೆಯುವರಿಂದ ಬಂದ ಒಂದು ಪತ್ರ, ಅದನ್ನೆಲ್ಲಾ ನಂತರ ಹೇಳತೀನಿ. ಇಕಾ, ಬಂದ ಕಾಣಸತದ. ನೀವs ಖರ್ಚು ಮಾಡಿರಿ ಅವನ ಮುಂದ ನಿಮ್ಮದೆಲ್ಲ ವಕೀಲಿ ಬುದ್ಧೀ. ನನ್ನ ಹೆಂಗಸಿನ ಬುದ್ಧಿ ಹೇಳತದ ಅವನ ಮನಸಿನಂತ ಆಗಲಿ ಅಂತ. ನಾ ಒಂದಿಷ್ಟು ಅಡಿಗೀ ಮನೇ ಕಡೆಗೆ ನೋಡಿಬರತೇನೀಗ. (ಹೋಗುವಳು)

ಗಜಾನನ : ಬಾ, ನಂದಾ, ಕೂಡು. ಹಾಂಗ ಫಟಕ್ಕನ ಒಂದು ಮಾತಾಡಿ ಬಿಡೋದs ಚಂದಲ್ಲ. ಶಾಂತರೀತಿಯಿಂದ ವಿಚಾರಮಾಡು. ನಾವೂ ನಿನ್ನ ಹಿತಕ್ಕಾಗೇ ಇದನ್ನು ಮಾಡಬೇಕಂತೇವಿ.

ನಂದ : ಅದನ್ನ ನಾ ಎಲ್ಲಿ ಅಲ್ಲಗಳೀತೇನಿ. ಆದರ ನನ್ನ ಹಿತ ನನಗ ತಿಳಿಯೋ ಅಷ್ಟು ಪ್ರಬುದ್ಧ ಆಗೇನಿ. ನನ್ನ ಬಾಳು ನನಗ ಬಾಳಗೊಡಿರಿ ಅಂತೇನಿ.

ಗಜಾನನ : ತಂದೆ-ತಾಯೀ ಮಾತು ಕೇಳೋದು ಮಕ್ಕಳ ಧರ್ಮ.

ನಂದ : ಕೇಳಬಾರದಂಥ ಮಾತೂ ಕೆಲವವ. ಅದರಾಗಿದೊಂದು.

ಗಜಾನನ : ಚಿಕ್ಕವರನ ದೊಡ್ಡವರನ ಮಾಡಿ ನಿಮ್ಮಂಥ ಮಕ್ಕಳಿಂದ ಸುಖ ಇದೇ ಏನು ? ನಾವು ಉಣ್ಣೋ ಭಾಗ್ಯ ಇದೇ ಏನು ?

ನಂದ : ನಿಮ್ಮ ಬಾಳಿನ ನೆರಳೇ ಕೊನೆತನಕ ಬಿದ್ದರ ಮಕ್ಕಳ ಬಾಳು ಪ್ರಾರಂಭ ಆಗೋದೆಂದು ? ಇನ್ನ ಸುಖ, ಭಾಗ್ಯದ ಮಾತs ? ಇದ್ದದ್ದನ್ನೇ ಭಾಗ್ಯ ಮಾಡಿ-ಕೊಂಡುಣಲಿಕ್ಕೂ ಒಂದು ಭಾಗ್ಯ ಬೇಕಾಗ್ತದ. ಈ ಹೆಣ್ಣೇ ನನಗೆ ಮಾಡಿ ನೀವು ಉಣ್ಣೋ ಹೆಚ್ಚಿನ ಭಾಗ್ಯ ಏನು ? ನಾನುಣ್ಣೋ ಹೆಚ್ಚಿನ ಭಾಗ್ಯವೇನು ?

ಗಜಾನನ : ಇದೆ. ಇಂಥಾ ದೊಡ್ಡ ಅಧಿಕಾರದಾಗ ಇದ್ದವರ ಕೂಡ ಸಂಬಂಧ ಅಂದರೇನು ಸಾಮಾನ್ಯ ಅಲ್ಲ. ನಮ್ಮ ಪ್ರತಿಷ್ಠೆ ಎಷ್ಟು ಬೆಳೀತದ ವಿಚಾರ ಮಾಡಿ ನೋಡು. ನಿನಗೂ lifeನಾಗ ದೊಡ್ಡ push ಸಿಗತದ.

ನಂದ : ಬೆಳಿಸಲಿಕ್ಕೆ ಬಯಸತೀರಿ. ಈಗ ಏನ ಕಡಿಮೆ ಅದ ? ನಿಮ್ಮದು ಬೆಳೀತಿದ್ದೀತು. ನನ್ನ ಪ್ರತಿಷ್ಠೆಗೆ ಅದು ಕುಂದೇ ಸೈ. 'ಶ್ವಶುರಾಖ್ಯಾತಾಶ್ಚಾಧಮಾ-ಧಮಾಃ'

ಗಜಾನನ : ಇಂಥ ದೊಡ್ಡವರು ಮನೆತನಕಾ ಕೇಳಲಿಕ್ಕೆ ಬಂದಮ್ಯಾಲೆ ಇಲ್ಲ ಅನ್ನೋದು ಅವರಿಗೆ ಅಪಮಾನ ಮಾಡಿದಹಾಂಗಲ್ಲs ?

ನಂದ : ಇದರಲ್ಲೆಲ್ಲಿ ಬಂತು ಅಪಮಾನ. ಕೇಳಿದವರಿಗೆಲ್ಲಾ ಹೂಂ ಅನ-ಬೇಕು, ಇಲ್ಲ ಮೊದಲ ಕೇಳಿದವರಿಗೆ ಹೂಂ ಅನಬೇಕು ಅಂತ ಏನು ಬಂಧನ ಇಲ್ಲ.

ಒಲ್ಲೀ ಅನ್ನಲಿಕ್ಕೆ ಗಂಡೂ ಹೆಣ್ಣೂ ಎರಡೂ ಪಕ್ಷಕ್ಕೂ ಕೊನೆಯವರೆಗೂ ಅವಕಾಶ ಅದ. ಇದರಾಗ ಮಾನಾಪಮಾನದ ಪ್ರಶ್ನೆ ಎಳ್ಳಷ್ಟೂ ಬರುವದಿಲ್ಲ.

ಗಜಾನನ : ರೂಪ, ವಿದ್ಯಾ, ಧನ, ಕುಲ ಎಲ್ಲಾ ಉತ್ತಮ ಇದ್ದು ಬ್ಯಾಡ ಅಂತ ಹೇಳಲಿಕ್ಕೆ ಕಾರಣರೇ ಬೇಕಲ್ಲ ?

ನಂದ : ಕೇವಲ ವ್ಯವಹಾರದಂಥ ಬಾಜಿನಾಗ ಯಾವದೇ ಟೆಂಡರು ಕಾರಣ ಕೊಡದೆ ಬ್ಯಾಡ ಅನಬಹುದಂತ. ಇದಂತೂ ಹೆಚ್ಚಿನದು.

ಗಜಾನನ : ಕಾರಣ, ಅವರಿಗೆ ಹೇಳಲಿಕ್ಕೆ ಅಂತ ಅಲ್ಲ ನಾ ಕೇಳಿದ್ದು ; ನನಗ ತಿಳೀಲಿ ಅಂತ ನಿನ್ನ ಮನಸಿನ್ಯಾಗಿನ ಕಾರಣ ಹೇಳು.

ನಂದ : ಹೇಳಿದೆನಲ್ಲ. ಯಾಕೋ ನನ್ನ ಮನಸ್ಸಿಲ್ಲ ಅಂತ.

ಗಜಾನನ : ಅದನ್ನ ತಿರುಗಿ ಹೇಳಿದರ ಕಾರಣ ಆಗಲಿಲ್ಲ.

ನಂದ : "ಭಿನ್ನರುಚಿರ್ಹಿ ಲೋಕಃ" ಅಂತ ಹೇಳಿದರೆ ಸಾಲದೇ. ನನಗೆ ಪ್ರೀತಿ ಇಲ್ಲದಲ್ಲಿ ಮದುವೆಯಾಗಲೊಲ್ಲೆ.

ಗಜಾನನ : ಪ್ರೀತಿ, ಪ್ರೀತಿ ಅಂದರೇನು ? ಸಹವಾಸದಿಂದ ಹುಟ್ಟತದ, ಬೆಳೀತದ. ಅದರದಿಷ್ಟು ಬಾವು ಮಾಡೋದು ಪುಸ್ತಕಿನಾಗಷ್ಟೇ ! ವ್ಯವಹಾರದಾಗ ಅಲ್ಲ. ತಂದೆ-ತಾಯಿಗಳೇ ಎಂದಿನಿಂದಲೂ ಮಕ್ಕಳ ಮದುವೆ ಗೊತ್ತುಮಾಡತ ಬಂದಿದ್ದಾರೆ. ಅದೊಂದು ಅವರು ಇಳಿಸಲೇಬೇಕಾದ ಭಾರ. ಗೊತ್ತುಮಾಡಿದವರಿಗೆ ಮಾಲಿ ಹಾಕಬೇಕು ಇದು ಪುತ್ರಧರ್ಮ.

ನಂದ : ೫೦ ವರ್ಷದ ಹಿಂದ ಇರಬಹುದು. ಈಗ ಆ ಕಾಲ ಉಳಿದಿಲ್ಲ.

ಗಜಾನನ : ತಂದೆಯ ಇಚ್ಛಾ ಪೂರೈಸಲಿಕ್ಕೆ, ತಂದೆ ಕೊಟ್ಟ ವಚನ ನಡೆಸಲಿಕ್ಕೆ ಮಕ್ಕಳು ಬದ್ಧರು. ರಾಮ ತಂದೆಯ ಮಾತ ನಡೆಸಲಿಕ್ಕೆ ಅಡವಿಗೆ ಹೋದ. ನಿನ್ನ ಅಂಥ ಸಂಕಟಕ್ಕ ಬ್ಯಾರೆ ಹಾಕಿಲ್ಲs ? ನನ್ನ ಮಾತಿಗೆ ಕಿಮ್ಮತ್ತು ಕೊಡಬಾರದ?

ನಂದ : ರಾಮಾ ಸೀತಾನ ಕೊಳ್ಳಾಗ ಮಾಲೀ ಹಾಕಿದ ಮ್ಯಾಲೆ ದಶರಥನ ಕರೆಕಳಿಸಿದ ಜನಕ. ಪುರಾಣದಾಗ ಹೊಕ್ಕರ ನಿಮಗ ಪುರಾವೇನ ಸಿಗೋಹಾಂಗಿಲ್ಲ. ಬೇಕಾದ ಕಥೀ ತಗೋಳ್ರಿ. ಕೃಷ್ಣ-ರುಕ್ಮಿಣಿ, ಅರ್ಜುನ-ಸುಭದ್ರಾ, ಉಷಾ-ಅನಿರುದ್ಧ, ಒಂದೇ ಎರಡೇ ಎಲ್ಲ 'ಹಿರಿಯರೊಂದು ಬಗೆದರೆ ಚಿಕ್ಕವರು ಬೇರೆಡೆಗೆ ನೆಗೆದರು' ಅನ್ನೋ ಗಾದಿಮಾತಿನ್ಹಾಂಗ ಅವ.

ಗಜಾನನ : ಹೋಗಲಿ. ಪಿತೃಋಣ ತೀರಿಸಲಿಕ್ಕೆ ಅಂತ ಹೇಳಿ .... ನನ್ನಿಂದ ಪಡೆದದ್ದೆಲ್ಲರ ಪ್ರತಿಯಾಗಿ ಇದೊಂದು ಮಾತು ನಡೆಸಂದರೆ ?

ನಂದ : ತಂದೆಯ ಋಣ ತೀರಿಸೋದು ಒಂದೇ ಶಾಸ್ತ್ರೋಕ್ತ ರೀತಿ ಅದ– ತಾನೂ ಮಗನನ್ನು ಪಡೆಯುವದರಿಂದ. ಬೇರೆ ಯಾವ ತರದಿಂದನೂ payment ಕೇಳಲಿಕ್ಕೆ ಹಕ್ಕಿಲ್ಲ, ಕೇಳಿದ್ದು ಕೊಟ್ಟರೂ ತೀರೂದಿಲ್ಲ. receipt ಕೂಡ valid ಅಲ್ಲ. ನೀರು ದಿಬ್ಬ ಎಂದೂ ಏರಲಾರದು. ಕೆಳಗೇ ಹರಿಯುವದು. ನಿಚ್ಚಳವಾಗಿ

ಹರಿಯುವದು. ಕೆಳಗೆ ಹೋದಹೋದಂತೆ ಹೆಚ್ಚುಸಮೃದ್ಧವಾಗಿ ಹರಿಯುವದು. ತಿರುಗಿ ಕೇಳಲಿಕ್ಕೆ ಅಧಿಕಾರ ಇಲ್ಲ ಯಾರಿಗೂ. ಮುಂದಿನ ತಲೀಗ ಕೊಡು ಅಂತ ಹೇಳ್ಳೋ ಅಧಿಕಾರ ಅಷ್ಟ ಅದ. ನನ್ನ ಮಕ್ಕಳನ್ನು ನೀವು ನನ್ನನ್ನ ಎಷ್ಟು ಪ್ರೀತಿ ಯಿಂದ ಸಾಕಿದಿರೋ ಅಷ್ಟೇ ಪ್ರೀತಿಯಿಂದ ಸಾಕತೇನಿ ಅಂತ ವಚನ ಕೊಡತೇನಿ. ಇಷ್ಟೇ ಅಲ್ಲ. ನಿಮ್ಮಂತೆ ಮಣ್ಣಿನ ಗೊಂಬಿ ತಿದ್ದಿದ ಹಾಂಗ ಕ್ಷಣ ಕ್ಷಣಕ್ಕೂ ಕೈಹಚ್ಚುತ ಇರುವದಿಲ್ಲ. ಎಲ್ ಎಲ್ ಬೀಗೆ ಹೋಗು ಅಂತ ಎಷ್ಟು ಜುಲಮಿ ಮಾಡಿದಿರಿ. ತಾಯಿ ಹ್ಯಾಂಗೋ ನನ್ನ ಮಾತು ನಡೆಯೋ ಹಾಂಗ ಮಾಡಿದಳು.

ಗಜಾನನ : ಹಂಗಲ್ಲ. ಬುದ್ಧಿ ಮತ್ತೆ ಇದ್ದವರು,ಯಾವ ಉದ್ಯೋಗದಾಗಾದರೂ ಮುಂದ ಬರತಾರ. ಪರವೂರಿಗೆ ಕಳಿಸಿ ಚಿಂತೆಮಾಡಿಕೋತ ಇರೋ ಬದಲು, ಇದ್ದೂರಾಗ ಲಾ: ಕಾಲೇಜು. ಆಗಪಾ ವಕೀಲ ಅಂದೆ. ನನ್ನ ಹೆಸರು, ದಪ್ತರು ಎರಡೂದರ ಫಾಯದೇ ನಿನಗ ಸಿಗಲಿ, ಅಂತ ನಾನು ಬಯಸಿದ್ದು .... ಉಳಿದವರು ವಸೀಲಿ ಹಚ್ಚಿ ಬೇಡಿಕೊಂಬೋದು ನಿನಗ ವಾರಸಾಹಕ್ಕಿನಿಂದ ಸಿಗತಿತ್ತು. ಪ್ರೀತಿ ಯಿಂದ ಸಿಗತಿತ್ತು. ಅದೂ ನಿನ್ನ ಮ್ಯಾಲೆ ಮಾಡಿದ ಒಂದು ಅನ್ಯಾಯ ಅಂತ ನಿನ್ನ ಎಣಿಕೆ ?

[ ಈ ಮಾತು ಮುಗಿಯುತ್ತ ಬಂದಾಗ ಸರಸ್ವತೀಬಾಯಿ ಬಂದು ಬಾಗಿಲ ಹತ್ತರ ಪ್ರೇಕ್ಷಕರಿಗೆ ಕಾಣುವಂತೆ ಆದರೆ ತಂದೆಮಕ್ಕಳಿಗೆ ಕಾಣದಂತೆ ನಿಲ್ಲಬೇಕು. ]

ನಂದ : ಅನ್ಯಾಯ, ನೀವು ಬಯಸಿದ್ದರಲ್ಲೂ ಇಲ್ಲ, ಹೇಳಿದ್ದರಲ್ಲೂ ಅಲ್ಲ. ಆದರ ನನ್ನ ಒಲವು ತಿಳಕೊಳ್ಳದ, ತಿಳಿದಮ್ಯಾಲೂ ಜುಲಿಮೀ ಮಾಡಿದ್ದರಾಗ ಅದ ಅನ್ಯಾಯ. ತಿಳಿವಳಿಕೆ ಬಂದಾಗಿನಿಂದ ನಿಮ್ಮ ಉದ್ಯೋಗದಲ್ಲಿ ತಗಲು, ಗತ್ತು, ಹತ್ತಿರ ದಿಂದ ನೋಡಿ ನೋಡಿ ಮನಸ್ಸು ಹೇಸಿಹೋಗಿತ್ತು. ನಿಮ್ಮ ಕಡೆ ಬರೋವರು ಯಾರೂ ಅಂದರ, ಕಾಳಾಬಾಜಾರದ ಖೊಟ್ಟಿ ಲೆಕ್ಕದವರು, ಅಫರಾತಫರಾ ಮಾಡಿ ದವರು, ಲಂಚ ತಿಂದವರು, ಖೂನಿ ಮಾಡಿದವರು. ವಕೀಲಿ ನಾ ಮರ್ಳ್ಯೋ ಒಲ್ಲೆ ಅಂತ ಹೇಳಿದೆ. ತಾಯಿ ತನ್ನ ವಸ್ತ ಕೊಟ್ಟು ಮುಂಬಯಿಗೆ ಕಳಿಸಿದಳು.

ಗಜಾನನ : ಹೀಂಗಿತ್ತೇನು ಒಳಗಿನ ಹಕೀಕತ್ತು ! admission ದೊರಕಿಸಿದ ಪತ್ರ ಬಂತು ಕೈಗೆ. ಆಗವಲ್ಲದ್ಯಾಕ ಅಂತ ಹೇಳಿ ದುಡ್ಡು ಕಳಿಸಿದೆ.

ನಂದ : ಆ ಎಲ್ಲಾ ಪಾಪದ ಕ್ಷಾಲನಮಾಡಬೇಕಂತೆ ನಾನೂ ನಿಶ್ಚಯ ಮಾಡೇನಿ.

ಗಜಾನನ : ಏ ಇಲ್ಲಿ ಬಾ ಲಗೂನ, ಕೇಳ ಬಾ ಇವನ ಬಾಯಿಂದ ಬರೋ ಮಾತು ಒಂದಿಷ್ಟು.

ಸರಸ್ವತಿ : (ಮುಂದಕ್ಕೆ ಬಂದು) ಏನಂತಾನ ?

ಗಜಾನನ : ವಕೀಲಿಯಿಂದ ಗಳಿಸಿದ ದುಡ್ಡು ಪಾಪದ ದುಡ್ಡು ಅಂತಾನ.

ತಗಲೂ ತಾಟು ಮಾಡಿ, ನ್ಯಾಯ ಹಚ್ಚಿ, ಬೆಳಿಸಿ ಗಳಿಸಿದ್ದೂ ಅಂತಾನ.

ಸರಸ್ವತಿ : ಲೋಕನs ಅಂತದ. ಇವನಂತೂ ಕಣ್ಣಿಲೆ ಕಂಡದ್ದು ಆಡಿ ತೋರಿಸಿದ.

ಗಜಾನನ : ಅಂದರ ನೀನೂ ಫಿತೂರಿ ಏನು ?

ಸರಸ್ವತಿ : ಸುಳ್ಳು ಗೆದೀಬೇಕಾದರ ಒಡಕೊಂಡದ್ದಕ್ಕ ಫಿತೂರಿ ಅಂತಾರ. ದಿನ ಬೆಳಗಾರ ನಾನs ಕಣ್ಣಿಲೇ ನೋಡೀನಿ. ನಿಮಗ ತಂದು ಸುರುವೋ ರೂಪಾಯಿ ಥೈಲಿ, ತುರುಕುವ ನೋಟಿನ ಪುಡಕಿ, ಖರೇ ಖರೇ ಸಿದ್ಧ ಮಾಡಲಿಕ್ಕಂತ ನೀವು ಆಣೀ ಮಾಡಿ ಹೇಳಿರಿ. ಖರೇತನಕ್ಕ ಇಷ್ಟು ಜಬರ ಫೀ ಕೊಡೋದು ಪೂರೈಸೋದೇ ಇಲ್ಲ. ಸುಳ್ಳಿನ ದುಡ್ಡು ಸುತ್ತಲೂ ಸುಳಿದಾಡತದ, ಕಾರಂಜೀ ನೀರಿನ ಹಾಂಗ ಆಡತಾ ಇರತದ.

ಗಜಾನನ : ಪೋಲೀಸರೆಲ್ಲಾ ಖೊಟ್ಟಿ ಖಟ್ಲಿ ಹಾಕಿರತಾರ, ಪಾಪ ಸಂಭಾವಿತರ ಮ್ಯಾಲೆ. ಸಂಗಟದಾಗ ಸಿಕ್ಕವರನ ಬಿಡಸೋದು ಪುಣ್ಯದ ಕೆಲಸ. ಪ್ರಸಂಗ ಬಂದಾಗ ಬಡವ ಸುದ್ದಾ ಜೀವ ಒತ್ತೀಯಿಟ್ಟು ರೊಕ್ಕ ತರತಾನ.

ಸರಸ್ವತಿ : ಸೈ. ಮತ್ತು ಹತ್ತು ವರ್ಷ ಸರಕಾರೀ ವಕೀಲ ಆದಾಗ ಆವಾಗ ಮಾತ್ರ ಎಲ್ಲಾ ಪೋಲೀಸರು ಹಾಕಿದ ಖಟ್ಲಿ ಖರೇವಿದ್ದವೇನು ? ನಡಮನ್ಯಾಗ ಕೂತಾಗ ನನಗ ಮಾತು ಕೇಳ್ಯಾವ ನೂರಾರು ಸಾರೆ.

ಗಜಾನನ : ಗುನ್ಹೇ ಮಾಡಿದ್ದರೂ ಅವರ ಬಚಾವು ಮಾಡಲಿಕ್ಕೆ ಕಾಯಿದೇ ದಿಂದ ಏನೂ ಪ್ರತಿಬಂಧ ಇಲ್ಲ; ಅದೇನು ಅಪರಾಧ ಅಲ್ಲ.

ಸರಸ್ವತಿ : ಅಂವ ಹಾಂಗೆಲ್ಲಿ ಅಂದಾ? ಪಾಪ ಅಂದ.

ನಂದ : ಸಮಾಜದ ಒಟ್ಟು ಸುಖದಾಗ ಭರತಿ ಹಾಕೋದು ಪುಣ್ಯ. ಕೊರತೀ ತರೋದು ಪಾಪ. ನಿಮ್ಮ ಆಯುಷ್ಯದ ಸಿಂಹಾವಲೋಕನ ಮಾಡಿರಿ. ಎಷ್ಟು ಮಂದಿ ಸಮಾಜಕಂಟಕರಿಗೆ ನಿಮ್ಮಿಂದ ಪುನಃ ಸ್ವಾತಂತ್ರ್ಯ ಸಿಕ್ಕು ಸಂಭಾವಿತರು ಗದಗದ ನಡುಗಿ ಅವರ ಗೊಡವಿಗೆ ಹೋಗದೆ, ಅವರು ಮಾಡೋದನ್ನು ನುಂಗಿಕೊಂಡು ಬಾಳಬೇಕಾಗೇದ. ಎಷ್ಟುಮಂದಿ ಗೋಳು ಕಟ್ಟಿಗೊಂಡಿರಿ ಅಂಬೋದನ್ನ ನೆನಸಿರಿ.

ಗಜಾನನ : ನನ್ನ ಪಕ್ಷಕಾರರು ನನ್ನ ನೆನಸಿಕೋತ ಹೋಗತಾರ. ಅಷ್ಟು ಸಾಕು.

ನಂದ : ಅವರಿಗೆ ಬೇಕಾದ್ದು ನೀವು ಮಾಡತೀರೀಂತ ನೆನಸತಾರ. ಸಮಾಜಕ್ಕ ಬೇಕಾದ್ದು, ಹಿತದ್ದು ಏನು, ಇದರ ವಿಚಾರ ಎಂದಾದರೂ ಮಾಡಿದಿರಾ ? ದುಡ್ಡಿ-ಗಾಗಿ ನಿಮ್ಮ ಬುದ್ಧೀ ದುಷ್ಕಾಳದ ಧಾರಣೀಲೆ ಮಾರಿದಿರಿ ಅಷ್ಟೇ ; ನಿಮ್ಮ ಜ್ಞಾನದ ಉಪಯೋಗ ಸಮಾಜದ ಹಿತಕ್ಕ ಮಾಡಿದಿರೇನು ?

ಸರಸ್ವತಿ : ಎಂಥಾ ಚಲೋ ಪ್ರೊಫೆಸರಕಿ ಬಂದಿತ್ತು. ಎಲ್ಲಾರಕಿಂತ ಹೆಚ್ಚು ಪಗಾರ ಕೊಡತೇವಿ ಅಂದಿದ್ದರು. ಬಿಡಿರಿ ವಕೀಲಿ ಅಂದೆ. ಅವರು ಕೊಡಮಾಡಿದ್ದು

ನ್ನ ಈಗಿನ ಗಳಿಕೆಯು ಅರ್ಧ ಆಗೂದುಲ್ಲ ಅಂತ ಹೇಳಿಬಿಟ್ಟರು. ಇವರಿಗೆ ಬುದ್ಧಿನದೊಂದು ಹುಚ್ಚು, ದೊಡ್ಡಿಸ್ತನದೊಂದು ಹುಚ್ಚು. ನಂದಾ, ಈ ಎರಡೂ ಬೀಸುಕಲ್ಲು ಥಾಳ್ಯಾಗ ಸಿಕ್ಕು ನುಚ್ಚು ಆಗೇನಿ ನಾನು ... ಇವರನ ಮಾಡಿಕೊಂಡು ಹತ್ತು ಮಕ್ಕಳನೊಂದೇ ಪಡೆದದ್ದು. ಮತ್ತೇನಾದರೂ ಸುಖ ಇದ್ದರಾಣೆ. ಹೆಂಡತೀ ಅಂದರ ಮನೀ ನೋಡಿಕೊಂಡೋ ಹೋಗೋ ಬಿನ್ ಪಗಾರಿ ಮ್ಯಾನೇಜರ ಅಂತ ಇಷ್ಟೇ ತಿಳಿದಾರ ಗಂಡಸರು. ದುಡ್ಡೊಂದು ತಂದು ಹಾಕಿದರು ಅಂದರ ತೀರಿತು; ಜಂಗೀ ತಂದು ಹಾಕಿದರನಕಾ ಹೆಚ್ಚಿನದು ಹ್ಯಾಂಗ ತಂದಿರಿ, ಅದರದೇನು ಮಾಡ-ತೀರಿ;ನೀವು ಏನೇನು ಮಾಡತೀರಿ ಅಂತ ಏನೂ ಕೇಳಬಾರದು. ಇವರ ಖಟ್ಲೆ ಇಲ್ಲದಾಗ ಇವರ ಕ್ಲಬ್ಬು, ಇಲ್ಲದಿದ್ದರ ಯಾವದರೆ ಒಂದು ಸಂಸ್ಥಾದ ಸಭಾ. ಒಂದಿನ ಬ್ಯಾಂಕಿಂದು, ಒಂದಿನ ರೇಲ್ವೆಬೋರ್ಡಿನದು, ಒಂದು ದಿನ ಆ ಸಂಘ, ಮತ್ತೊಂದು ದಿನ ಕಾಲೇಜಿಂದು, ಮಗದೊಂದಿನ ಸಾಲೀದು, ನಾಟಕಸಂಘ, ವಕೀಲರ ಸಂಘ, ಒಂದs ಎರಡs ಅದರಾಗ ಎಷ್ಟು ಖರೇನೋ ಎಷ್ಟು ಸುಳ್ಳೋ ನಮಗ ತಿಳಿಲಿಕ್ಕ ಮಾರ್ಗನೇ ಇಲ್ಲ ... ಇಷ್ಟು ಸೂಟಿ ಅಂತ ಬಂದವು. ಎಲ್ಲೆರೆ ಮನೀಯವರನೆಲ್ಲಾ ಕರಕೊಂಡು ಮೋಜಿಗೆ ಅಂತ ಮನೀ ಬಿಟ್ಟು ಹೊರಟಿದ್ದು ಗೊತ್ತಿಲ್ಲ. ಹೆಂಗಸರಿಗೂ ಗಂಡನಕಡಿಂದ ಮತ್ತೊಂದೇನಾದರೂ ಬೇಕೆಂಬ ಹಂಬಲ ಇರತದ ಅಂಬೋದು ಇವರ ಕನಸಮನಸಿನ್ಯಾಗ ಬಂದಿಲ್ಲ. ಸುಟ್ಟೊ ಸುಡಲಾರದಷ್ಟು ದುಡ್ಡು ಆತು; ವಸ್ತ ಆತು; ನೋಕರಚಾಕರ ಆತು, ಮೋಟಾರ ಆತು, ಎಲ್ಲಾ ತಗೊಂಡು ಸುಟ್ಟರ ಸೈ, ಸಂಸಾರದಾಗ ಅದೊಂದು ಗಂಡನಿಂದ ಸಿಗದಿದ್ದರ.

ನಂದ : ಸಾವಿರ ಕುದುರೀ ಸವಾರೀ ಮಾಡೋವರ ಕಾಲು ಮನ್ಯಾಗ ನಿಂತೀತೇ ಎಂದರೆ ? ಹುಚ್ಚಿ ನೀನು.

ಗಜಾನನ : ಈ ಹುಚ್ಚು ಎಂದಿನಿಂದ ಹೊಕ್ಕಿತು ನಿನ್ನ ತಲ್ಯಾಗ ? ನೋರಾನ ಸಂಚಾರ ಆಯ್ತೇನು ನಿನ್ನ ಮೈಯಾಗ ? ಸಮಾಜಕಾರ್ಯ ಮಾಡೋವರಿಗೆ ಇಷ್ಟೇ ಪುರಸತ್ತು ಮನೀ ಕಡೆ ನೋಡಲಿಕ್ಕೆ. ಅದರಾಗೇನು ಅಪಚಾರ ಮಾಡಿದ ಹಾಂಗಾತು?

ಸರಸ್ವತಿ : ಸಮಾಜ-ಕಾರ್ಯಂತ ಸಮಾಜಕಾರ್ಯ! ಎಲ್ಲಾ ಸ್ವಾರ್ಥ! ಈ ಸೋಗು ಯಾಕ ? ಮಾನದ ಸ್ಥಾನ ಇಲ್ಲದ ಸಂಸ್ಥಾದಾಗ ಎಂದರೆ ನಿರಪೇಕ್ಷಬುದ್ಧಿಯಿಂದ ಕೆಲಸಮಾಡಿದಿರಾ ? ತಮ್ಮ ತಮ್ಮ ಮಂದಿಗೆ ಉಪಕಾರ ಮಾಡಲಿಕ್ಕೆ 'ಬ್ರ' ಅಂದರ ಅವರಿಗೆ ಕೇಡು ಮಾಡಲಿಕ್ಕೆ ನೀವು ಇದೆಲ್ಲಾ ವ್ಯಾಪ ಮಾಡೋದೂ ಮೂಲ ಸ್ವಾರ್ಥದ್ದೇ ಬಾವು ಇದು. ಪ್ರತಿಷ್ಠಾ, ನಾ ಎಲ್ಲಾ ಬಲ್ಲೆ. ಎರಡು ತಿಂಗಳ ಹಿಂದೆ ಬ್ಯಾಂಕಿನ ಕಾರಕೂನಗ ಎಂಜಲಮಣೀ ಎತ್ತಲಿಕ್ಕೆ ಹೇಳಿದಿರಿ. 'ಅದು ನನ್ನ ಕೆಲಸಲ್ಲ' ಅಂತ ಸ್ವಾಭಿಮಾನದ ಉತ್ತರ ಕೊಟ್ಟರ ಬಡವನ ಹೊಟ್ಟೀಮ್ಯಾಲ ಕಾಲು ಕೊಟ್ಟರಿ. ಮರ ಮರ ಮರಗಿತು ನನ್ನ ಜೀವ. ಮೊನ್ನೆ ಮೊನ್ನೆ ಆ ಸಾಲೀ ಮಾಸ್ತರ ಮ್ಯಾನೇ

ಜಿಂಗ ಇವೀಟಿ ಹುಕುಮಿನಮ್ಯಾಲ ಅಪೀಲ ಮಾಡಿದರ ಸುಳ್ಳೊಂದು ಸೊಟ್ಟೊಂದು ಬರೆದು ಅವನ್ನ ನುಂಗಿ ನೀರು ಕುಡಿದಿರಿ. ಇದು ನೀವು ಕಟ್ಟಿಕೊಳ್ಳುವ ಪುಣ್ಯ.

ನಂದ : ನೀವು ಈವರೆಗೂ ಮಾಡಿದ್ದಂವರೆ 'get on, get honour' ಎರಡೇ. 'get honest' ಕೂಡ ಇಲ್ಲ. ಸೇವಾಬುದ್ಧಿಯಿಂದ ಮಾಡಿದರ ಅದು ಸಮಾಜಕಾರ್ಯ.

ಗಜಾನನ : ನನಗೆ ಉಪದೇಶ ಹೇಳೋ ಅಷ್ಟು ಬುದ್ಧಿ ಬಂತೇ ನಿನಗ ? ನಡೀ ಹುಚ್ಚು ಹಿಡಿದದ ನಿಮ್ಮಿಬ್ಬರಿಗೂ. ಉದ್ಧಟಾ! ನನ್ನ ಮುಂದೆ ನಿಲ್ಲಬೇಡ (ನಂದ ಹೋಗುವನು)

ಸರಸ್ವತಿ : ಹೌದು, ಹುಚ್ಚು ಹಿಡಿದದ. ನಿಮ್ಮ ಅತಿಚಾರ ನೋಡಿ ಹುಚ್ಚು ಹಿಡದದ. ಬೆಕ್ಕು ಕಣ್ಣು ಮುಚ್ಚಿ ಹಾಲು ಕುಡಿದರೆ ಮುಂದಿಗೂ ಕುರಡು ಬಡಿದಿರ ತದೋ ಏನು ? ಕೋರ್ಟಿನ ಕೆಲಸ ಲಗೂ ತೀರಿದಾಗ ಮದಲ ನಿಮ್ಮ ಮೋಟಾರ ಎಲ್ಲಿ ಹೋಗತದ ಡ್ರೈವರ್ ಹೇಳ್ಯಾನ. ಕ್ಲಬ್ಬಿಗೆ ಹೋಗೋದು ಏಳು ಗಂಟೆಕ್ಕೆ. ನಾನಂತ ಈವರೆಗೆ ತಾಳಿಕೊಂಡೆ. ಇನ್ನ ನನ್ನ ಕಡಿಂದಾಗದು. ತಲೀ ತಿರಗೇದ ನಂದು. ನಾ ಹೊರಟೆ ಮನೀ ಬಿಟ್ಟು.

ಗಜಾನನ : ಎಲ್ಲಿಗೆ ?

ಸರಸ್ವತಿ : ನನಗ ಬೇಕಾದವರ ಹತ್ತರ ಇರಲಿಕ್ಕೆ.

ಗಜಾನನ : ಹತ್ತು ಮಕ್ಕಳ ತಾಯಿಯಾಗಿ ಇನ್ನಮ್ಯಾಲ? ಜನ ಏನ ಅಂದೀತು. ಮನೆತನದ ಮಾನ ಹೋದೀತು.

ಸರಸ್ವತಿ : ಏನರ ಅನ್ನೋ ಜನರ ಬಾಯಾಗ ಹುಳಾ ಬಿದ್ದಾವು ! ನಾ ಹೋಗೋದು ನಮ್ಮ ನಂದನ ಹತ್ತರ ಇರಲಿಕ್ಕೆ. ನಡೀ ನಂದಾ, ಹೋಗೋಣ ನಾವು. ಈ ಮನ್ಯಾಗಿನ್ನ ಇರೋದು ನನ್ನಿಂದಾಗದು.

ಗಜಾನನ : ನಿಲ್ಲು, ಎಲ್ಲಿ ಹೊರಟಿ ? ಇದೇ ಏನು ನಿನ್ನ ಪತಿನಿಷ್ಠೆ ?

ಸರಸ್ವತಿ : ಗಿಡ ಬೆಳಿಯೋದು ಹಣ್ಣಿಗಾಗಿ, ಹೆಂಗಸು ಗಂಡನನ್ನು ಪಡೆಯೋದು ಮಕ್ಕಳಿಗಾಗಿ. ಸ್ತ್ರೀ ಗೃಹಿಣಿಯಾಗುವುದು ಮಾತೆಯಾಗುವದಕ್ಕಾಗಿ. ಧರ್ಮದಂತೆ ನೋಡಿದರ ಗಂಡಸು ಹೆಣ್ಣು ತರೋದು ಸಂತಾನ ಬೆಳೀಲಿ ಅಂತಾ. ಅವಳಿಗೆ ಯಾವಾಗಲೂ ಮೊದಲ ಮಾತು ಮಕ್ಕಳ ಕಲ್ಯಾಣದ್ದು; ಮುಂದಿನ ಪೀಳಿಗೆಯ ಬೆಳವಣಿಗೀದು. ಪತಿಯಲ್ಲೇ ರಮಿಸುವ ಸ್ತ್ರೀ ಅಂದರೆ ಮಲೆತು ನಿಂತ ಕೊಳಚಿ ನೀರು, ಹರಿಯೋ ನೀರು ಮುಂದೋಡತಿರತದ, ಶುಚಿಯಾಗಿರತದ, ಜೀವನ ಅನಿಸಿಗೋತದ.

ಗಜಾನನ : ಇದು ಏನು ಹೊಸ ಶಾಸ್ತ್ರ ತೆಗೆದಿ ನೀನು !

ಸರಸ್ವತಿ : ಶಾಸ್ತ್ರ-ಗೀಸ್ತ್ರ ನಾ ಏನು ಓದಿದಾಕಿ ಅಲ್ಲ. ನಾನು ಸ್ವತಃ ಕಂಡು ಉಂಡದ್ದು ಬಾಯಿ ಬಿಚ್ಚಿ ಹೇಳತೀನಿ. ಯಾರು ಅದಕ್ಕ ಏನು ಅನ್ನೋದು ಅನ್ನಲಿ. ನೀವು ಸದಾಕಾಲ ಹೊರಗಿರೋವರು ಹೆಂಗಸಿಗೆ ಸಹವಾಸದ ಹಂಬಲ ಹ್ಯಾಂಗ

ಹಿಂಗತದ ಅಂಬೋದನ್ನ ಹೆಂಗಸಿನ ಜನ್ಮ ತಾಳೀ ಕಾಣಬೇಕು. ಕೂಸು ಆಡಿಸಿಕೋತ ಕೂತರ ಸಂಜಿ ಆದದ್ದು ಗೊತ್ತಾಗತಿದ್ದಿಲ್ಲ. ಒಂದೊಂದು ದೊಡ್ಡವು ಆದ ಹಾಂಗ ಆಯಾ ವಯಸ್ಸಿಗೆ ಬೇಕಾದ್ದೆಲ್ಲಾ ಮೈ ಕೈ ಮುಟ್ಟಿಕೊಟ್ಟು ಬೆಳಿಸಿ, ಅಷ್ಟು ಮುಂದಿನ್ನ ಜಗತ್ತಿಗೆ ಕೊಡಬೇಕಾಗತದ. ಮಕ್ಕಳು ಧ್ಯೇಯ, ಗಂಡ ಸಾಧನ. ಹೊತ್ತು ಬಂದರ ಮಕ್ಕಳ ಕಡೆಗೆ ನೋಡೋಕೇ ಹೊರತು, ಗಂಡನ ಕಡೆ ಅಲ್ಲ. ಸತೀ ಕಳಿಸೋದು ಗಂಡಸರ ಸ್ವಾರ್ಥಿ ಬಲಾತ್ಕಾರ. ಚಿಕ್ಕ ಕೂಸಿನ ಬಿಟ್ಟು ಗಂಡ ಸತ್ತು ಹೋದ ವಿಧವೇರನ ಕೇಳಿರಿ, ಯಾವ ಆಸೆಯಿಂದ ಬದುಕತಾರ ಅಂಬೋದನ್ನ. ಮಾತೆ ಅಂಬೋದು ಬ್ರಹ್ಮನ ಲಲಿತಸೃಷ್ಟಿ, ಪತ್ನೀ ಅನ್ನೋದು ಮಾನವನಿರ್ಮಿತ ನಿರ್ಬಂಧ. ಎರಡಕ್ಕೂ ತಿಕ್ಕಾಟ ಬಂದರ ಹೆಂಗಸು ತಾಯಿ. ಇದೇ ಮಂಗಲ ಸತ್ಯ.

ಗಜಾನನ : ಪತಿ-ಪತ್ನೀ ಸಂಬಂಧ ಜನ್ಮ ಇರೋವರೆಗೂ ಬಿಟ್ಟದ್ದಲ್ಲ.

ಸರಸ್ವತಿ : ಹತ್ತುಮಕ್ಕಳನ ಹಡದಾಕಿ ನಾನು ನಿಮಗೂ ತಾಯಿ. ಇನ್ನೆಲ್ಲಿ ಆ ಸಂಬಂಧ.

ಗಜಾನನ : ಇವನೊಬ್ಬನ ಸಂಗಡ ಹೋದರ ಉಳಿವ ಮಕ್ಕಳ ಗತಿಯೇನು ?

ಸರಸ್ವತಿ : ಅವರನ ಸಂಗತೀನ ಕರಕೊಂಡು ಹೋಗತೇನಿ.

ಗಜಾನನ : ಅದಾಗದು. ಆ ಮಕ್ಕಳು ನನ್ನ ಹತ್ತಿರ ಇರಬೇಕು. ನಾನು ಅವರ ಪಾಲಕ.

ಸರಸ್ವತಿ : ಅಪ್ಪ ಒದಕ್ಕೈಲಿ ಇದ್ದಾನ ಅಂತ ಹೇಳಿ ಹತ್ತೆಂಟು ದಾವೆ ನೀವೆ ತರಿ ಸೀರಿ, ಆ ಮಕ್ಕಳಿಗೆ ತಾಯಿ ನಾನು, ಯೋಗ್ಯಪಾಲಕಳು ನಾನು ಅಂತ ಸಾಧಸತೇನಿ. ದುಡ್ಡು ಕೊಟ್ಟರ ನನಗೂ ಯಾರರೇ ವಕೀಲರು ಸಿಕ್ಕಾರಲ್ಲ. ಮೊದಲು ನಾನೀಗ ಕರಕೊಂಡು ಹೊಂಟೆ. ಊರಿಗೆ ಹೋಗೋಣ ನಡೀರಿ ಬೂ ಅಣ್ಣನ ಸಂಗತೀಲೆ ಅಂತ ನಾ ಅಂದರ, ನೀವು ಇಲ್ಲೇ ಇರು ಅನ್ನರಿ. ಯಾರ ಮಾತ ಕೇಳತಾವ ನೋಡಿರಿ. ಮತ್ತು ನೀವು ಕೋರ್ಟಿಗೆಳೆದರೆ ಅಲ್ಲಿಯೂ ಬರತೇನಿ, ನಡಿರೋ ವಾಸೂ, ಶೀನಾ, ಪಾರೀ, ಯೇಸೂ, ರಾತ್ರೀಗಾಡಿಗೆ ಮುಂಬಯಿಗೆ ಹೋಗೋಣ.

ಗಜಾನನ : ಸಾಕು ಬಾ ಮಾರಾಯತೀ ... ಆದಷ್ಟು ಶೋಭಾ ಸಾಕು ...

ಸರಸ್ವತಿ : ನಾನಿನ್ನು ನಿಲ್ಲಬೇಕಾರ ಒಂದೇ ಹಾದಿ. ನಂದನ ಮದುವೆ ಅವನ ಮನಸಿನಂತೆ ಆಗಬೇಕು. ನೀವು ವಕೀಲೀ ಬಿಡಬೇಕು. ಗಳಿಸೋದು ಸಾಕು ಇನ್ನ. ಮಕ್ಕಳು ಮರೀ ಸೌಖ್ಯರೆ ಕಾಣೋಣ; ನಾಲ್ಕೂರು ತಿರಗೋಣ, ಕ್ಷೇತ್ರ ತೀರ್ಥ ಹೋಗಿ ನೋಡೋಣ.

ಗಜಾನನ : (ಮೆತ್ತಗೆ) ಆಗಲಿ. ಎಲ್ಲಾ ಒಪ್ಪಿದೆ, ಆದರ ಆಗಳೇ ನಂತರ ಹೇಳ ತೀನಿ, ಅಂದಿ, ಅದು ಏನು ? ಎಂದೂ ಇಲ್ಲದ ಚಂಡಿತನಕ್ಕ ನಿನ್ನ ಹಚ್ಚಿದ್ದಾದರೂ ಏನು ? ನಂದ ಏನು ಹೇಳಿದ ? ಪತ್ರ ಯಾರದು ?

ಸರಸ್ವತಿ : ಪತ್ರ ನಂದನ ಹೆಂಡತೀದು.

ಗಜಾನನ : ಮದುವೆ ಆಗಿ ಹೋಗೇದೇನು ಆಗಲೆ ?

ಸರಸ್ವತಿ : ಇಲ್ಲ. ಆದರೂ ಇವನ ಹೆಂಡತಿ, ಇವನ ಮಕ್ಕಳ ತಾಯಿ. ಇದೇ ಮಾತು ನಂದ ಹೇಳಿದ್ದು, ಹೆಂಣಿಗೆ ಬಂದ ಸಂಕಷ್ಟ ಹೆಂಣೇ ತಿಳಿಯಬಲ್ಲಳು. ನೀನೇ ನನ್ನ ತಾಯೀ ಅಂತ ನನ್ನ ಮುಂದ ತೋಡಿಕೊಂಡಳು, ಆ ಮೊರೆ ಕೇಳಿ ಇದು ನನ್ನ ಕರ್ತವ್ಯ, ಆಕಿಗೆ ಸಲ್ಲತಕ್ಕ ನ್ಯಾಯ ಅಂತ ಇದನ್ನ ಮಾಡಲಿಕ್ಕೆ ನಿಂತೆ. ನಾಳಿನ ಶುಕ್ರವಾರ ರಜಿಸ್ಟರ ಮದುವೆ ಆಗಿ ಹೋಗಲಿ ... ಇಲ್ಲೀ ಥೇಟರದಾಗ ಆದರಾತು.

ಗಜಾನನ : ನೀ ಅಂದ ಹಾಂಗ ಆಗಲಿ. ಅದೇನೋ ಗಾದೀ ಮಾತ ಅದಲ್ಲ ? ಸಾವಿರ ಕುದರೀ ಸರದಾರ ಮನೀ ಹೆಂಡತಿಗೆ ...

# ವಿಧಿ

( ಒಂದು ಏಕಾಂಕ ನಾಟಕ )

ಪಾತ್ರಗಳು

ಮುದಿಕಿ – ಯಜಮಾನಿ – ಮುದಿಕಿಯ ಧ್ವನಿ
ಯಜಮಾನ–ಯಜಮಾನರ ಧ್ವನಿ
ಜೋಯಿಸರು
ಬಾಣಂತಿ
ತಾಯಿ
ಸಾವಿತ್ರಿ
ಹಿರಿಯ ಮಗ
ಮಗ
ಹೊರಗಿನ ಧ್ವನಿ

[ ದೃಶ್ಯ : ೧ ]

[ಹೊರಗೆ ಗುಡುಗು ಮಳೆ. ಮೂರು ದಿನಗಳಾದರೂ ಹತ್ತಿದ ಮಳೆ ಬಿಟ್ಟಿಲ್ಲ. ಈಗ ಸಮಯ ಮಧ್ಯರಾತ್ರಿ. ಹೊರಗೆ ಗಾಳಿಯ ಸಿಳ್ಳು ಭಯಾನಕವಾಗಿ ಕೇಳಬರುತ್ತಿದೆ. ಒಂದು ಹಳೆಯ ಹಾಳು-ಮನೆ. ಕಿಟಿಕಿಯ ಬಾಗಿಲುಗಳ ಬೋಲ್ಟು ಇಲ್ಲದ್ದರಿಂದ ಒಂದೇ ಸವನೆ ಪಟಪಟ ಪಕ್ಕ ಬಡೆಯುತ್ತಿವೆ. ಮಳೆಯ ಸಂತತ ಧಾರೆಯಿಂದಾಗಿ ಹಿತ್ತಲ, ಅಡುಗೆಯ ಮನೆಯ ನಡುವಿನ ದೊಡ್ಡ ಗೋಡೆ ಬಿದ್ದುಹೋಗಿದೆ. ಪಡಸಾಲೆಯ ಮನೆಯ ಮಾಳಿಗೆಯಿಂದ ನೀರು ಸೋರುತ್ತಿದೆ. ಯಾವ ಕ್ಷಣಕ್ಕೆ ಮನೆಯ ಇನ್ನಾಷ್ಟೇ ಹೊತ್ತುಕೊಂಡು ಬಿದ್ದೀತೊ ಹೇಳಲಿಕ್ಕೆ ಬರುವಂತಿಲ್ಲ. ಮನೆಯ ನೆಲವೆಲ್ಲ ಸೋರಿದ ನೀರು ಇಂಗಿ ತೇವಗೊಂಡು ಅಲ್ಲಲ್ಲಿ ನೀರು ಮಡುವುಗಟ್ಟಿಕೊಂಡಿದೆ. ಒಂದು ಅಡಿಯಷ್ಟು ಜಾಗ ಒಣವಾಗಿಲ್ಲ. ನಡುಮನೆಯ ಒಂದು ಮೂಲೆಯಲ್ಲಿ ಒಂದು ಗುಬ್ಬಿಯ ಚಿಮಣಿ ಉರಿಯುತ್ತಿದೆ. ಅದರ ಮಗ್ಗುಲಿಗೆ ಮೂರುನಾಲ್ಕು ಮಣೆಗಳನ್ನು ಹಾಕಿ ಅದರ ಮೇಲೊಂದು ಹರಕು ಚಾಪಿ ಹಾಸಿ ತಲೆಗೆ ಒಂದು 'ಪೋಳವಟ್ಟಿ' ಇಟ್ಟುಕೊಂಡು ಒಂದು ಹರಕು ಕಂಬಳಿ ಹೊದ್ದುಕೊಂಡು ಒಂದು ಮುದಿಕೆ ಗೂರುತ್ತ ಕಣ್ಣು ಮುಚ್ಚಿ-ಕೊಂಡಿದೆ. ಮಲಗಿಲ್ಲ. ಗೋಡೆ ಬಿದ್ದು ಹಿತ್ತಲು ಅಡುಗೆ-ಮನೆಯೆಲ್ಲಾ ಏಕ-ಬಯಲಾಗಿ ಉಂಟಾದ ಭಯಾನಕತೆಯನ್ನು ತಪ್ಪಿಸುವುವಕ್ಕಾಗಿ ಒಂದು ಬಿದಿರಿನ ಚಾಪಿ ನಿಲ್ಲಿಸಿ ಚಾಟ ಮಾಡಿದೆ. ಮುದಿಕೆ ಮಲಗಿದ ನಡುಮನೆಯಲ್ಲಿ ಯಜಮಾನನ ಒಂದು ದೊಡ್ಡ ಫೋಟೊ, ಹಿರಿಯ ಮಗನ ಒಂದು ದೊಡ್ಡ ಫೋಟೊ, ಹೆಣ್ಣುಮಗಳ ಒಂದು ದೊಡ್ಡ ಫೋಟೊಗಳ ಹೊರತಾಗಿ ಇನ್ನೇನೂ ಕಾಣುವುದಿಲ್ಲ. ಮನೆಯಲ್ಲಿ ಭಾಂಡಿ ಇಲ್ಲ, ಕಾಳು-ಕಡಿ ಇಲ್ಲ. ಯಾವುದೊ ಒಂದು ಮೂಲೆಗೆ ಒಂದು ಇದ್ದಲಿ-ಒಲೆ. ಮಗ್ಗುಲಿಗೆ ಒಂದು ಬಕೆಟ್ಟು, ಒಂದು ಖತಿನಟ್ಟಿ ತಾಮ್ರದ ತಂಬಿಗೆ. ಮಗ್ಗುಲಿಗಿದ್ದ ಒಂದು ಕಾಲವಾವಿನಲ್ಲಿ ಸೆರೆ ಅಕ್ಕಿ. ಆಯಿತು. ಹೊರಗೆ ಗುಡುಗು ಬಿರುಗಾಳಿಗಳ ಅಬ್ಬರಕ್ಕೆ ಪುಟಗೊಂಡಂತೆ ಮುದಿಕೆ ಕೆಮ್ಮುತ್ತದೆ, ಗೂರುತ್ತದೆ; ಕಣ್ಣು ತೆರೆಯುತ್ತದೆ, ಬಿರುಬಿರು ನೋಡುತ್ತದೆ, ಹುಚ್ಚಿಯಂತೆ. ಚೀರುತ್ತದೆ, ಅಂಜಿದಂತೆ. ಕಣ್ಣು ಮುಚ್ಚುತ್ತದೆ. ಮುಸುಕು ಎಳೆಯು-ತ್ತದೆ..... ]

ಮುದಿಕಿ : ಮಾರಾಯನಂಥಾ ಮನಿ ಸ್ಮಶಾನಧಾಂಗ ಆತು ....ಅಯ್ಯ ನನ್ನ ಅದೃಷ್ಟ! (ಹಣೆ ಹಣೆ ಗಟ್ಟಿಸಿಕೊಂಡು) ಯಾರ ಸಲುವಾಗಿ ಜೀವಾ ಹಿಡಿಲಿ ಇನ್ನ?.... ನನ್ನ ಹಿಂಗಮಾಡಿಟ್ಟು ನೀವು ನೀಗಿಹೋದಿರಿ.... (ಯಜಮಾನರ ಫೋಟೋ ನೋಡುತ್ತ) ಮಕ್ಕಳ ಸಲುವಾಗಿ ನೀನು ಬದುಕಬೇಕು ಅಂತ ಹೇಳಿ ಹೋದಿರಿ....ಮೊಮ್ಮಕ್ಕಳ ಸಲುವಾಗಿ ಬದುಕಬೇಕು ಅಂತ ಹೇಳಿದಿರಿ .... ನೋಡಿದಿರಾ ನನ್ನ ಅವಸ್ಥಿ ? .... ಎದಿಯುದ್ದ ಮಗಾ ಸತ್ತು ಹೋದಾ....ಎದಿಯುದ್ದಾ ಮಗಳು ಸತ್ತುಹೋದಳು.... ಉಳದಾವ ಒಬ್ಬಾವಾ....ಅವಾ, ನೋಡಿದಿರಾ ಕೈಗೆ ಹತ್ತಧಾಂಗ ಆಗಿ ಹೋದಾ.... ಇಂಥವರ ಮಗಾ ಅಂತ ಹೇಳಲಿಕ್ಕೆ ನಾಚಿಗಿ....ಮನೆತನದ ಮರ್ಯಾದಿ ಎಲ್ಲಾ

ಹೊಳ್ಯಾಗ ಹುಣಸೆಣ್ಣು ತೊಳಧಾಂಗ ಆತು .... ಎಲ್ಲಿ ಓಡಿ ಹೋಗ್ತ್ಯಾನೊ ಇದೇ ಪತ್ತೆ ಇಲ್ಲಾ .... ಏಳನೇ ತಲಿ ಅಂತ ! ಇವನ ತಲಿಗೇನೊ ಲಕ್ಷ್ಮೀ ಬರತಾಳಂತ.... ನಿಧಿ ಹತ್ತತದಂತ....ಎಲ್ಲ್ಯದ ನಿಧಿ ! ವಿಧಿ ಮಾತ್ರ ಕೈತೊಳಕೊಂಡು ಬೆನ್ನು ಹತ್ತೇದ ಆತು....ಯಾಕಾರ ಇಡಬೇಕು ಅಂತೀನಿ ಈ ಜೀವಾ ಇನ್ನ ! ಹಿತ್ತಲದಾಗ ಭಾವಿ.... ಎರಡ ಮಿನಿಟಿನಾಗ ಥಂ ಅನಬಹುದು....ಈ ಬಾಳಿನ ಸಂಕಟಾ ಒಮ್ಮೆ ನೀಗಿ ಹೋಗ-ಬಹುದು .... (ಮತ್ತೆ ಯಜಮಾನರ ಫೋಟೋ ನೋಡಿ) ಹೇಳ್ರಿ ಏನು ಹೇಳತೀರಿ ನನಗ !.... ಯಾರಿಲ್ಲಂತಾರ.... ಅರಮನಿಯೊಳಗಿನ ಅರಗಿಳಿ ಹಾಂಗ ನೋಡಿಕೊಂ-ಡಿರಿ ನನ್ನ....ಹಾಲು ಸಕ್ಕರ್ಯಾಗ ಕೈತೊಳಿಸಿದಿರಿ .... ಆದರ ಈಗ ? ಕಣ್ಣೀರ್ಲೆ ಕೈ ತೊಳಿತೀನಿ....ಕಣ್ಣೀರು ಹಾಕಿ ಹಾಕಿ ಅವೂ ಬತ್ತಿಹೋಗಿ ಇನ್ನ ರಕ್ತಾನ ಸುರಸ-ಬೇಕಾದೀತು ಕಣ್ಣೀರು ಅಂತ .... ಅಯ್ಯ ನನ್ನ ಅವಸ್ಥೆ .... ಸ್ಮಶಾನದಾಗಿನ ಭೂತ-ದಾಂಗ ಹೀಂಗ ಇನ್ನು ಎಷ್ಟು ದಿವಸಂತಾರ ಬದುಕಿರ್ಲಿ ? ಯಾಕಾರ ಬದುಕಿರ್ಲಿ ? (ಯಜಮಾನರ, ಹಿರಿಯ ಮಗನ, ಮಗಳ ಮೂರೂ ದೊಡ್ಡ ಫೋಟೋ ಬಿಡುಗಣ್ಣಿನಿಂದ ಬಿರಿ ಬಿರಿ ನೋಡುತ್ತ) ಹೇಳ್ರಿ ನನಗೇನ ಹೇಳ್ತೀರಿ ಹೇಳ್ರಿ ... ಕೈ ಹಿಡಿದ ಯಜಮಾನ್ರನ್ನ ಕಳಕೊಂಡು ಕೈಯಾಗಿನ ಬಳಿ ಹೋದುವು. ಕೊರಳಾಗಿನ ಮಂಗಳಸೂತ್ರ ಹೋಯಿತು....ಎದಿಯುದ್ದಾ ಮಗನ್ನ ಕಳಕೊಂಡೆ ... ಮಗಳನ ಕಳಕೊಂಡೆ. ಧರ್ಮ ರಾಯನಂಥಾ ಮಗಾ ಹೋದಾ .... ಸಾವಿತ್ರಿ ಅಂಥಾ ಮಗಳು ಹೋದಳು.... ನಕ್ಷತ್ರಕನಂಥಾ ಕಿರಿಯ ಮಗಾ ಮಾತ್ರ ಉಳದಾ .... ನನ್ನ ಗೋಳು ಹೊಯಿಸ ಲಿಕ್ಕೆ .... ಮಗಳು ಹೋದ ಮ್ಯಾಲೆ ಮೊಮ್ಮಕ್ಕಳು ಕರುಳಿನವಾದರೂ ಅಳಿಯಾ ಯಾರು ? .... ಯಾರು ನೋಡಬೇಕು ನನ್ನ .... ದುರ್ವ್ಯಸನಕ್ಕ ದಾಸಾಗಿ ಇದ್ದ ಮನಿ ಒತ್ತಿ ಹಾಕಿ ಓಡಿ ಹೋದಾ ಚಾಂಡಾಲಾ !....ನನ್ನ ಜೀವಾ ಒತ್ತಿ ಇಟ್ಟು ಇವನ್ನ ಜೋಪಾನ ಮಾಡಿದೆ....ಜೋಪಾನ ಮಾಡಿ ಏನು ಸುರಕೊಂಡೆ ? ....ಕಟ್ಟೀ ಕೆಳಗ ಇಳೀದಾಕಿ ಕಚೇರಿಕಟ್ಟೆ ಹತ್ತೂ ಪ್ರಸಂಗ ಬಂತು....ಮರ್ಯಾದಿ ಅಂಬೂದು ಮಾರ್ಕೀಟಿಗೆ ಬಂತು....ಒತ್ತಿ ಹಾಕಿದ ಮನಿ ಬರಿಸಿಕೊಂಡವರಂತೆ ಆಗಿ ಹೋತು. ನಾಳೆ ಕಬ್ಜಾ ತೊಗೊಂಬುವವರಂತ !.... ಹೇಳ್ರಿ.... ಹರಕಾನ ಇರ್ಲಿ, ಮುರಕಾನ ಇರ್ಲಿ.... ಮರ್ಯಾದೆಯಿಂದ ಬಚಾವಾಗಿದ್ದೆ....ನಾಳೆ ಪೋಲೀಸರ್ನ ಹಚ್ಚಿ ಮನೀ ತಾಬೇಕ್ಕ ತಗೋತಾರಂತ ! ಎಲ್ಲಿ ಹೋಗ್ಲಿ ನಾನು ? .... (ಫೋಟೋ ನೋಡಿ) ಏನು ಹೇಳತೀರಿ ನನಗ ? ( ಎಂದು ಚಿಟ್ಟನೇ ಚೀರಿ ಎಚ್ಚರದಪ್ಪಿ ಬಿದ್ದುಬಿಡುವಳು. ಮಗ್ಗುಲಿನ ಗುಬ್ಬಿಯ ಚಿಮಣಿ ಆರಿಹೋಗುವದು. ಕಗ್ಗತ್ತಲೆ. ಬಿರುಗಾಳಿಯ ಸಪ್ಪಳಕ್ಕೆ ಕಿಟಕಿಯ ಬಾಗಿಲುಗಳು ಪಟಪಟ ಬಡಿದುಕೊಳ್ಳುವ ಸಪ್ಪಳದ ಹೊರತಾಗಿ ಇನ್ನೇನೂ ಕೇಳುವುದಿಲ್ಲ. ಕತ್ತಲೆಯ ಹೊರತು ಇನ್ನೇನೂ ಕಾಣುವುದಿಲ್ಲ ... ಸ್ವಲ್ಪ ಹೊತ್ತಿನ ಮೇಲೆ ಫೋಟೋದೊಳಗಿನ ಚಿತ್ರವೇ ಮಾತಾಡುತ್ತಿದೆಯೋ ಏನೊ ಎಂಬಂತೆ ಯಜಮಾನರ ಧ್ವನಿ ಬರುತ್ತಿದೆ ...)

ಯ. ಧ್ವನಿ : ( ಎಲ್ಲಿಯೋ ಒಂದು ಪಾತಾಳಭಾವಿಯೊಳಗಿಂದ ಮಾತಾಡಿದಂತೆ ...) ನೀ ಕಾಳಜಿ ಮಾಡಬ್ಯಾಡಾ ಅಂತ ಹೇಳೀನಿ....ಖಂಡಿತ ಲಕ್ಷ್ಮೀ ಪ್ರಸನ್ನ ಆಗತಾಳ.

ನಮ್ಮ ಮನೀ ಒಳಗ ನಿಧಿ ಅದ. ಏಳನೇ ತಲೀಗೆ ಕೈಗೆ ಬರತದ.

ಮುದಿಕಿ : ನಾಳೆ ಪೋಲೀಸರ್ನ ಕರಕೊಂಡು ಬಂದು ಇದ್ದ ಜಿದ್ದ ಸಾಮಾನಾ ಜೀದಿಗೆ ಎಸ್ದು ನನ್ನ ಹೊರಗ ದಬ್ಬತಾರ....ಎಲ್ಲಿ ನಿಮ್ಮ ಲಕ್ಷ್ಮೀ....ವಿಧಿಲಕ್ಷ್ಮಿ....

ಯ. ಧ್ವನಿ : ತಲಿತಲೀಯಿಂದ ನಡಕೋತ ಬಂದ ತೊಳದ ಮುತ್ತಿನಂಥಾ ಮನೀ, ಮುತ್ತಿನಂಥಾ ಸಂಸಾರಾ....

ಮುದಿಕಿ : ಈಗೇನಾತು ಆ ಸಂಸಾರದ ಅವಸ್ಥಿ....

ಯ. ಧ್ವನಿ : ಏನೂ ಆಗಿಲ್ಲಾ....ನನ್ನ ದೇಹ ಬೂದಿ ಆದರೂ ಮೈಯೆಲ್ಲಾ ಕಣ್ಣಾಗಿ ನೋಡಕೋತ ಇದ್ದೀನಿ.... ನನ್ನ ಫೋಟೋದ ಬುಡಕಽನ ಅದಽ ನಿಧಿ....

ಮುದಿಕಿ: ನಿಧಿ-ನಿಕ್ಷೇಪಾ ಎಲ್ಲಾ ತಮ್ಮದ್ಧ ಅಂತ ಒತ್ತಿ ಬರಿಸಿಕೊಂಡಾರಲ್ಲಾ.... ಈ ನಿಮ್ಮ ಚಾಂಡಾಲ ಮಗಾ ಬರದುಕೊಟ್ಟಾನಲ್ಲಾ....ಇದಕ್ಕೇನು ಹೇಳತೀರಿ ?

ಯ. ಧ್ವನಿ : ಏನು ಹೇಳಬೇಕು ? ಮರತೇ ಬಿಟ್ಟೇನು. ಅವತ್ತ ಆ ಮುದಿ ಜೊಯ್ಸರು ಜಾತಕಾ, ಪಂಚಾಂಗಾ ನೋಡಿ, ಯಂತ್ರಾ ಮಂತ್ರಾ ಮಾಡಿ ನಮ್ಮ ಮನಿಯ ಪ್ರಾಚೀನ ಕಥಿ ಎಲ್ಲಾ ಹೇಳಿ....ನಿಧಿ ಸಿಕ್ಕತೀರತದ ಅಂತ ಹೇಳಿದರು....

[ಕನಸಿನೊಳಗಿನ ಸುಂದರ ದೃಶ್ಯದಂತೆ ಕತ್ತಲೆ ಮಾಯವಾಗಿ ಬೆಳಕು ಹರಿಯುತ್ತದೆ. ಅದೇ ಹಾಳುಮನೆ ಹಿಂದಿನ ಸುಂದರವಾದ ವೈಭವದಿಂದ ಝಗಝಗಿಸುವ ಮನೆಯಾಗಿದೆ. ಪ್ರಾಯದ ಯಜಮಾನರು. ಅವರ ಕೈಹಿಡಿದು ನೋಡುತ್ತಿರುವ ಮುದಿ ಜೋಯಿಸರು. ಆಚೆಗೆ ತಮ್ಮ ವಜ್ರದ ಬೆಂಡೋಲೆಗಳನ್ನು ತೊಳೆದು ರೇಶಿಮೆಯ ಬಟ್ಟೆಯಿಂದ ಒರೆಸುತ್ತ ಕುಳಿತಿರುವ ಯಜಮಾನಿ].

ಜೊಯ್ಸರು : ಆಹಾಹಾ ! ಕೈ ಅನಬೇಕು ರಾಯರದೇ ! ನೋಡಿದರೆ ಇಂಥಾ ಕೈ ನೋಡಬೇಕು. ಆಹಾಹಾ ! ಏನು ಹಸ್ತರೇಖಾಗಳು.... ಸಣ್ಣಗ ಸೂಜಿ ಯಿಂದ ಎಳೆಧಾಂಗ....ಗುಲಾಬಿವರ್ಣ!....ವಾಹವಾ! ವಾಹವಾ! ಧನರೇಖಾ ಏನು, ಆಯುಷ್ಯರೇಖಾ ಏನು, ಸಂತತಿಸಮೃದ್ಧಿ ಏನು, ವಿದ್ಯಾ, ವಿನಯಸಂಪನ್ನತಾ, ಕೀರ್ತಿ, ಮಾನ, ಸನ್ಮಾನ....

ಯಜಮಾನಿ : ಅಲ್ಲಾ ಸಂತತಿಸಮೃದ್ಧಿ ಅಂತೆಲ್ಲಾ ಹೇಳಿದಿರಿ. ನಮಗೇನು ಡಜನ್‌ಗಟ್ಲೆ ಮಕ್ಕಳು ಬ್ಯಾಡಾ. ಇದ್ದವರು ಆಯುಷ್ಯವಂತರೂ ಸಂಪನ್ನರೂ ಆದರ ಸಾಕು.

ಜೊಯ್ಸರು : ಅದಕ್ಯಾಕ ಚಿಂತಿಮಾಡತೀರಿ ತಾಯಿ ! ಇದೇ ನಿಮ್ಮ ಕಣ್ಣಿನಿಂದ ಮರಿಮಕ್ಕಳನ್ನ ಕಾಣತೀರಿ, ಇದೇ ನಿಮ್ಮ ಕೈಯಿಂದನೇ ಮರಿಮಕ್ಕಳ್ನ ಆಡಸತೀರಿ.

ಯಜಮಾನ: ಇನ್ನೊಂದು ವಿಷಯ ಕೇಳತೀನಿ ಜೊಯ್ಸರ! ನಮ್ಮ ಮನೆತನದ್ದು ಐತಿಹ್ಯ ಅದ. ನಮ್ಮ ತಾತನ ಮುತ್ತಾತ ಒಂದು ದಿವಸ ಮನೆಯ

ಉಂಗಳದೊಳಗ ಶತಪಥ ಹಾಕುತ್ತ ರಾಮಜಪ ಮಾಡತಾ ಇದ್ದರಂತ. ಆಗ ಮೂರುಸಂಜಿ ಆಗಿತ್ತಂತ. ಶುಕ್ರವಾರ ಅವೊತ್ತು. ಒಳಗಿನಿಂದ ಒಮ್ಮಿಂದೊಮ್ಮೆಲೆ ಝುಗ್ಗನೆ ಬೆಳಕೊಂದು ಹೊರಗೆ ಬಂಧಾಂಗ ಕಾಣಿಸಿತಂತ. ನಮ್ಮ ಹಿರಿಯ ಹಿರಿಯರು ಕಣ್ಣು ಬಿಟ್ಟು ನೋಡಿದರು. ಥಳಥಳಿಸುವ ಪೀತಾಂಬರ ಉಟ್ಟುಕೊಂಡು ಸಕಲಾಲಂಕೃತಳಾದ ಶ್ರೀಲಕ್ಷ್ಮೀದೇವಿಯೆ ಸಾಕ್ಷಾತ್ತು! ಮಂದಗಮನದಿಂದ ಹೆಜ್ಜೆ ಇಡುತ್ತ ನಡೆದಾಗ ನಮ್ಮ ಹಿರಿಯರು ತರುಬಿದರಂತ. 'ಇದೇನು ನನ್ನ ತಾಯಿ, ನಮ್ಮ ಮನೆಯ ಲಕ್ಷ್ಮೀದೇವಿ!' ಅಂತ ಅಂದಾಗ — 'ಹೌದು, ನಾನೀಗ ನಿಮ್ಮ ಮನೆಯಿಂದ ಹೋಗತಿದ್ದೇನಿ. ನಿಮ್ಮಲ್ಲಿ ಈಗ ಇನ್ನು ಮೇಲೆ ನಾನಿರಲಾರೆ.' ಎಂದಾಗ ಹಿರಿಯರು ಅತ್ಯಂತ ಖಿನ್ನರಾಗಿ ಡೊಗ್ಗಾಲುಮಂಡಿಯೂರಿ ಬೇಡಿಕೊಂಡರಂತ: ದಯಮಾಡಿ ಹಿಂತಿರುಗಬೇಕು ಅಂತ. ಶ್ರೀಲಕ್ಷ್ಮೀದೆವಿನ್ನ' ಮನೆ ಬಿಟ್ಟು ಹೊರಡೋದಕ್ಕ ಕಾರಣ ಕೇಳಿದರೆ ಹೇಳಲಿಲ್ಲವಂತೆ. ಯಾವ ತಲಿಗೆ ಏನು ಪಾಪದ ಕಾರ್ಯ ಆಗಿತ್ತ್ಹೋ ಏನೋ! ಆದರ ಲಕ್ಷ್ಮೀದೇವಿ ಹಿಂತಿರುಗಲಿಲ್ಲ. ಒಂದು ಸಮಾಧಾನ ಮಾತ್ರ ಹೇಳಿದಳಂತ. 'ನಾನು ಏಳನೆಯ ತಲಿಗೆ ಮತ್ತೆ ಬರತೀನಿ' ಅಂತ. 'ಯಾವ ರೂಪದೊಳಗ?' ಅಂತ ಕೇಳಿದ್ದಕ್ಕ "ನಿಧಿಯ ರೂಪದೊಳಗ" ಅಂತ ಹೇಳಿದಳಂತ. ಇಷ್ಟು ಹೇಳಿದಾಕೆಯೇ ಅಂತರ್ಧಾನವಾದಳಂತ. ಆದರ ಅಂತರ್ಧಾನವಾಗುವದಕ್ಕೆ ಮುಂಚಿತವೇ ನಮ್ಮ ಹಿರಿಯರು ಕಿಂಕರ್ತವ್ಯಮೂಢರಾಗಿ ಲಕ್ಷ್ಮೀದೇವಿಯ ಸೆರಗು ಹಿಡಿದು ಜಗ್ಗಿದರಂತ. ಆ ಸೆರಗು ಬಂಗಾರದ ಥಳಥಳಿಸುವ ತಗಡಾಗಿ ಕೈಯೊಳಗ ಬಂತಂತ. ಅದರ ಅವಶೇಷವಾಗಿಯೇ ನಮ್ಮ ದೊಡ್ಡ ದೇವರ ಸಂಪುಷ್ಟದೊಳಗ ಇಂದಿಗೂ ಐದು ತಾಳಿಯಮಣಿಗಳು ಅವ ಕುಲದೇವತೆಯ ಹೆಸರಿನಲ್ಲೆ.

ಜೊಯ್ಸರು : ಓ ಹೋ ಹೋ! ಏನು ರೋಮಾಂಚಕಾರಕ ಕಥೆ ಹೇಳಿದಿರಿ ರಾಯರ!

ಯಜಮಾನರು : ಅದರ ಬಗ್ಗೆ ಈಗ ಕೇಳೋದಿಷ್ಟೆ: ನಮ್ಮ ತಲೆಮಾರಿನಲ್ಲಿ ಲಕ್ಷ್ಮೀದೇವಿ ಹೇಳಿದ ಪ್ರಕಾರ ಏಳನೆಯ ತಲಿ ಅಂದರ ನಮ್ಮ ಚಿರಂಜೀವನ್ವ. ಅವನ ಕಾಲಕ್ಕಾದರೂ ಲಕ್ಷ್ಮೀ ಪ್ರಸನ್ನಳಾಗತಾಳೋ ಇಲ್ಲೋ ಅಂತೆ.

ಜೊಯ್ಸರು : ಸಂಶಯ ಏನು ರಾಯರ! ನಿಮ್ಮ ಚಿರಂಜೀವರ ಪೈಕಿ ಒಬ್ಬನಿಗೆ ಈ ಲಕ್ಷ್ಮೀ ಪ್ರಸನ್ನಳಾಗಲೇಬೇಕು. ಅದೂ ನಿಧಿಯ ರೂಪದಲ್ಲಿ. ಈ ನಿಧಿ ಈ ನಿಮ್ಮ ಮನೆಯಲ್ಲೇ ದೊರೀತದೆ. ಆದರ ರಾಯರ, ಅದನ್ನ ನೊದಲೇ ಪಡೆಯಬೇಕು ಅಂಬೋ ವೃಥಾ ಹವ್ಯಾಸಕ್ಕ ತಾವು ಮಾತ್ರ ಕೈಹಾಕಬಾರದು. ಭೂಮಿಯ ಗರ್ಭದಿಂದ ಸೀತಾಮಾಯಿ ಹುಟ್ಟಿ ಬಂದ ಹಾಂಗ ಈ ನಿಧಿಯು ಕೂಡಾ ತಾನಾಗಿಯೇ ನಿಮಗೆ ಪ್ರಾಪ್ತವಾಗತದ. ತಮ್ಮ ಸಂತತಿಗೇ ಇದು ಸಂಪ್ರಾಪ್ತವಾಗಬೇಕು ರಾಯರ!

ಯಜಮಾನರು : (ಅತ್ಯಂತ ಮೃದುವಾಗಿ) ಹಾಂಗಾದರೆ ಯಾವಾಗ, ಎಂಥಲ್ಲಿ ಈ ನಿಧಿ ಸಿಗಬಹುದು ಜೊಯ್ಸರ? ದಯಮಾಡಿ ಹೇಳತೀರಾ? ಆ ಸ್ಥಳ ಅಷ್ಟು ತೋರಿಸಿ ಕೊಟ್ಟರ ....

ಜೊಯ್ಸರು : ಆದರ ನಿಮ್ಮ ಕೈಗೆ ಅದು ಪ್ರಾಪ್ತವಾಗೋಣಿಲ್ಲ ರಾಯರ! ನಿಮಗೆ ಆ ವಿಷಯ ಹೇಳಿದರ ಚಪಲ ತಡೆಯಲಿಕ್ಕಾಗದೆ, ನೀವು ಅದನ್ನ ಶೋಧಿಸಿ ಸಾಧಿಸ ಹೋಗಿ ಜೀವಕ್ಕೇ ಎರವಾದೀರಿ ....

[ಒಮ್ಮೆಲೆ ಕತ್ತಲೆಯಾಗುವುದು. ಕಿಟಿಕಿಯ ಬಾಗಿಲು ಬಿರುಗಾಳಿಯ ಅಬ್ಬರಕ್ಕೆ ಫಡ ಫಡಿಸುವವು.]

ಮುದಿಕಿಯ ಧ್ವನಿ : ಹೌದು, ನಿಧಿ ಸಿಕ್ಕ ತೀರತದ ಅಂದರು. ನಿಮಗಾದರ ಆ ಚಪಲ ತಡೀಲಿಕ್ಕೆ ಆಗಲಿಲ್ಲ ... ಆ ದಿನ ಶುಕ್ರವಾರ... ನಡುರಾತ್ರಿಯೊಳಗ ಹಾರಿ ತಗೊಂಡು ಅಗೀಲಿಕ್ಕೆ ಸುರುಮಾಡಿದಿರಿ...ನನ್ನ ಎದಿಯೊಳಗ ಅಗಧಾಂಗ ಆಯಿತು... ಎದಿ ಹಾರಲಿಕ್ಕೆ ಹತ್ತಿತು ... ನಿಮ್ಮ ಮೈಯೆಲ್ಲಾ ಥರಗುಟ್ಟಿ ನಡಗಲಿಕ್ಕೆ ಹತ್ತಿತು.... ಬೆಂಕಿ, ಬೆಂಕಿ ಅಂತ ಅಂಜಿ, ಚಿಟ್ಟನೆ ಚೀರಿ, ಎಚ್ಚರ ತಪ್ಪಿ ಹಿಂದ ಬಿದ್ದುಬಿಟ್ಟಿರಿ .... ಅಯ್ಯೋ ಮರುದಿನ ಹಾಸಿಗಿ ಹಿಡಿದವರು ಮೇಲಕ್ಕೆಏಳಲಿಲ್ಲಾ .... ಹೇಳ್ರಿ ಈಗ ನನಗೇನ ಮಾಡಂತೀರಿ ... ಎಲ್ಲಿ ಅದ ನಿಮ್ಮ ಏಳನೆಯತಲಿ? ಪರಶುರಾಮನ ಹಾಂಗ ತಾಯಿಯ ಶಿರಚ್ಛೇದ ಮಾಡಲಿಲ್ಲಾ ಈ ಚಾಂಡಾಲಾ ....ಆದರೇನು, ಜೀವಂತ ಸಾಯಿ ಸತ ಇದ್ದಾನಲ್ಲ ನನ್ನ ....

ಯಜಮಾನರ ಧ್ವನಿ : ಅಂವಾ ಹೊರಗ ದುಷ್ಟನಾಗಿ ಕಂಡರೂ ಒಳಗ ಹೂವಿನ ಹಾಂಗ ಇದ್ದಾನ. ನೀನೇನೂ ಕಾಳಜಿ ಮಾಡಬ್ಯಾಡಾ. ಮನಿ ಒತ್ತಿ ಹಾಕಿದರೂ ಮನಿಯ ಲಕ್ಷ್ಮೀದೇವಿನ್ನೇನೂ ಒತ್ತಿ ಹಾಕಿಲ್ಲ. ನಿಧಿ-ನಿಕ್ಷೇಪ ಅಂತ ಕಾಗದಾ ಬರಸಿಕೊಂಡವರು ಕಾಣಿಸಿದ್ದರೂ ಅವರ ಕೈಗೆ ಸಿಗೋ ಲಕ್ಷ್ಮೀ ಅಲ್ಲ ಅದು.

ಮುದಿಕಿಯ ಧ್ವನಿ : ಲಕ್ಷ್ಮಿಯ ಶಾಪ ತಟ್ಟೀ ವಿಧಿ ನಿಮ್ಮ ತುತ್ತು ತೊಗೊಂಡಿತು. ಲಕ್ಷ್ಮೀ ಶಾಪ ತಟ್ಟಿಯೇ ಎದೆಯುದ್ದ ಮಗಳು, ಹಸೀ ಬಾಣಂತಿ, ಹಾವು ಕಡದು ಸತ್ತಳು ...

ಯಜಮಾನರ ಧ್ವನಿ : ಆಂ ? ಎಂಥಾ ಹಾವು ?

ಮುದಿಕಿಯ ಧ್ವನಿ : ಎಂಥಾ ಹಾವು ಅಂದರ ನಾಗರಹಾವು ! ಹಡೆದ ಹತ್ತನೆಯ ದಿನ.

[ಹಿಂದಿನ ವೈಭವಪೂರ್ಣ ಮನೆಯ ಪಡಸಾಲೆಯೊಳಗಿನ ಕೋಣೆ. ಕನಸಿನ ದೃಶ್ಯದಂತೆ ಅರಳಿ ಬೆಳಗುತ್ತದೆ. ಮಂಚದ ಮೇಲೆ ಬಾಣಂತಿ ಮಲಗಿದ್ದಾಳೆ.]

**ಬಾಣಂತಿ** : (ಬಡಬಡಿಸುತ್ತಿದ್ದಾಳೆ.) ಅವ್ವಾ ... ಹೋಗಿಬರತೇನಿ ಅವ್ವಾ ... ನನ್ನ ಹಣೀಮ್ಯಾಲಿನ ಕುಂಕುಮ ಅಳಿಸಧಾಂಗ ಆಶೀರ್ವಾದ ಮಾಡು ಅವ್ವ.... ವಟಸಾವಿತ್ರಿ

ಪೂಜಿ ಮಾಡೀನಿ.... ಮುತ್ತೈದಿತನದ ಸಾವು ಬರ್ಲಿ ನನಗ ... ನನ್ನ ಬತ್ತಿ! ಅಯ್ಯೋ, ನನ್ನ ಬತ್ತಿನ್ನ ಯಾರ ಉಡ್ಯಾಗ ಹಾಕಲಿ? .... ಅವ್ವಾ ನೀನೇ ಅದನ್ನ ಆರೈಕೆಮಾಡ-ಬೇಕು .... ಹೌದವ್ವ .... ಮಲತಾಯಿಯು ಪಿಸಕ ಉಡಿಯೊಳಗ ಅದನ್ನ ಹಾಕ ಬ್ಯಾಡಾ .... ಉಡಿ ಹರದು ಭೂಮಿಪಾಲು ಆದೀತು ಕೂಸು .... ಅಯ್ಯೊಽಽ .... (ಚಿಟ್ಟನೆ ಚೀರುವಳು.)

ತಾಯಿ : (ಪ್ರಾಯದ ಮುದಿಕೆ. ವಿಧವೆ. ಅಬ್ಬರಿಸಿ ಬರುತ್ತಾಳೆ.) ಸಾವಿತ್ರಿ, ಯೇ ಸಾವಿತ್ರಿ! ಹೀಂಗ್ಯಾಕ ನಮ್ಮವ್ವ ... ಏನು ಕನಸು-ಗಿನಸು ಬಿದ್ದಿತ್ತೇನು ? ಎದಿಯ ಮ್ಯಾಲೆ ಕೈ ಬಿದ್ದಿತ್ತ?

ಸಾವಿತ್ರಿ : (ಗಾಬರಿಗೊಂಡೆದ್ದು) ಅವ್ವ! ಹೌದವ್ವ, ಏನೋ ಕೆಟ್ಟ ಕನಸು ! ... (ದುಃಖಿಸಿ) ನನ್ನ ಕೂಸಿಗೆ ಪರದೇಸಿತನಾ ಬರಬಾರದವಾ ! .... ಹೆಣ್ಣು ಮಕ್ಕಳಿಗೆ ವಸ್ತ್ರಾವಡಿವಿ ಏನೂ ಇಲ್ಲದಿದ್ದರೂ ಚಿಂತಿಲ್ಲಾ, ಒಂದು ತೌರುಮನಿ ಮಾತ್ರ ಇರಬೇಕವಾ ... ನನ್ನ ಮಗಳಿಗೆ ತೌರುಮನಿಯ ಸೌಖ್ಯ ಸಿಕ್ಕೀತೇನವ್ವ ?

ತಾಯಿ : ಹತ್ತು ದಿನದ ಬತ್ತಿಯ ಸಲುವಾಗಿ ತೌರುಮನಿಯ ಚಿಂತಿ ಯಾಕವಾ? ಹೆಣ್ಣು ಮಕ್ಕಳು ಅಂದರ ಹಡದ ಮನಿಗೆ ಗೌರಿ ಇದ್ದ ಹಾಂಗ, ಕೊಟ್ಟಮನಿಗೆ ಲಕ್ಷ್ಮೀ ಇದ್ದಾಂಗ. ಅದಕ್ಕಂತ ತೌರುಮನಿಯವರೂ ಪ್ರೀತಿ ಮಾಡಬೇಕು; ಅತ್ತೀಮನಿ ಯವರೂ ಪ್ರೀತಿ ಮಾಡಬೇಕವಾ.

[ಮತ್ತೆ ಕತ್ತಲೆ]

ಮುದಿಕಿಯ ಧ್ವನಿ : ಇಷ್ಟು ಮಾತಾಡಿ ಮಮತಾ ತೋರಿಸಿದ ಮಗಳಿಗೆ ಅವೊತ್ತೇ ರಾತ್ರಿ ... ಅಯ್ಯೋ ನನ್ನ ದೇವರಽ ! ...

[ಮಂದ ಬೆಳಕಿನಲ್ಲಿ ಮತ್ತೆ ಮೇಲಿನಂತೆ ಬಾಣಂತಿಯ ಕೋಣೆಯ ದೃಶ್ಯ]

ಬಾಣಂತಿ : (ಮಲಗಿದಲ್ಲೆ ಚಿಟ್ಟನೆ ಚೀರುವಳು. ಕೈ ಮೇಲಕ್ಕೆ ಚೆಲ್ಲುವಳು.)

ಹಿರಿಯ ಮಗ : ಗಾಬರಿಗೊಂಡು ಓಡಿ ಬರುವನು) ಅಯ್ಯಯ್ಯೋ ! ಹಾವು, ಹಾವು ! (ಗಡಬಡಿಸುತ್ತ ಮೂಲೆಯೊಳಗಿನ ಒನಕಿಯನ್ನು ಹಿಡಿದುಕೊಂಡು) ಹಾವು ! ಸಾವಿತ್ರಿ, ಸಾವಿತ್ರೀಽಽ ... ಅಯ್ಯೋ ಕೂಸಿನ ಹತ್ತಿರ ಬಂತು. ನಕಿ ಎತ್ತಿ ಅದನ್ನು ಹೊಡೆಯುವನು)

ತಾಯಿ : (ದಿಕ್ಕೆಟ್ಟು ಓಡಿ ಬರುವಳು) ಅಯ್ಯೋ ಏನು ಮಾಡಿಟ್ಯೋ ಮಾರಾಯಾ ನಾಗರಹಾವಲ್ಲೋ ! ಮನೀ ಲಕ್ಷ್ಮೀದೇವಿನ್ನ ತಲಿ ಹೊಡದೆಲ್ಲೋ ! .... ಸಾವಿತ್ರೀ, ಅಯ್ಯೋ ಸಾವಿತ್ರಿ .... ಇದೇನೋ ಘಾತ ಆಯಿತಪಾ ! .... ದೇವರ ಮನೆಯ ಮಗಳು, ಮನಗೆ ಬರೋ ಲಕ್ಷ್ಮೀ ಇಬ್ಬರೂ ಹೋದರೇನೋ ನನ್ನ ಪಾಲಿಗೆ ! ... ಏನು ಬಂತಪಾ ದೇವರ ! .... ಅಯ್ಯೊ ನನ್ನ ಖೊಟ್ಟಿ ನಸೀಬ .... ಸಾವಿತ್ರೀ, ಯೇ ಸಾವಿತ್ರಿಽಽ! ಹೋದಳು. ನನ್ನ ಮನೆಯ ಗೌರಿ ಮಾಯ ಆದಳು ... ಹ್ಯಾಂಗ ನುಂಗಿ ಕೊಳ್ಳೇ ಈ ದುಃಖ ನಾನು! ... ನನ್ನ ಮುಂದ ನೀ ಹೋಗಬೇಕೇನ ನನ್ನ ಮಗಳ !

ಮುತ್ತೈದಿತನಾ ಬೇಕಂದಿ। .... ಆದರ ಈ ಪರಿಯೇನ ನಮ್ಮವ್ವಾ। .... ನನ್ನಂಥಾ ಹದ್ದಿಗೆ ಯಾಕ ಬರಬಾರದು ಸಾವು। .... ಹ್ಯಾಂಗ ನುಂಗಿಕೊಳ್ಳೆಪಾ ದೇವರ ಈ ದುಃಖಾನ ...

[ಮತ್ತೆ ಕತ್ತಲೆ]

ಮುದಿಕಿಯ ಧ್ವನಿ : (ಗಂಭೀರವಾಗಿ) ನುಂಗಿಕೊಂಡೆ. ದುಃಖಾ ನುಂಗಿ ನುಂಗೇ ಹೊಟ್ಟಿ ತುಂಬಿಸಿಕೊಂಡೆ ... ಗಂಡನ ಕಳಕೊಂಡೆ ... ದುಃಖಾ ನುಂಗಿಕೊಂಡೆ, ಮಕ್ಕಳ ಮಾರೀ ನೋಡಿ. ಮಗಳ್ನೂ ಕಳಕೊಂಡೆ, ದುಃಖಾ ನುಂಗಿಕೊಂಡೆ, ಗಂಡಸ ಮಕ್ಕಳಮಾರೀ ನೋಡಿ. ಇಲ್ಲಿಗೇ ತೀರಲಿಲ್ಲ ನನ್ನ ಕಣ್ಣೀರು ... ನನ್ನ ಖೊಟ್ಟಿ ನಸೀಬ ಇನ್ನೂ ಹೊಂಚು ಹಾಕತನ ಇತ್ತು ... ಅಯ್ಯೋ ನನ್ನ ಖೊಟ್ಟಿ ನಸೀಬ !

ಯಜಮಾನರ ಧ್ವನಿ : ಕಾಳಜಿ ಮಾಡಬ್ಯಾಡಾ, ನಿನಗ ನಿಧಿ ಸಿಕ್ಕೇ ತೀರತದ .. ಸುಖದ ನಿಧಿ.

ಮುದಿಕಿಯ ಧ್ವನಿ : ಅಯ್ಯ ನನ್ನ ನಿಧಿಯೆ ! ಅಯ್ಯ ನನ್ನ ಸುಖಾನ ! ನಿಧಿ ಅಲ್ಲಾ, ನಿಧನ ನನಗ ಸಿಗೂದು...

[ಮತ್ತೊಂದು ದೃಶ್ಯ : ಸ್ವಪ್ನಸೃಷ್ಟಿಯಂತೆ ಮೂಡಿಬರುತ್ತದೆ. ಅದೇ ಪಡಸಾಲೆ· ಅದೇ ಕೋಣೆ. ಆದರೆ ಮಲಗಿಹವರು ಹಿರಿಯ ಮಗ.]

ಮಗ : ಅವ್ವಾ ! ಬ್ಯಾಡವ್ವಾ ನಿನ್ನ ಮುಂದ ನಾ ಸಾಯೋದು ಬ್ಯಾಡಾ ... (ನರಳುವನು] ನನ್ನ ಸಾವಿನ ದುಃಖ ನಿನಗ ಎಷ್ಟಾದೀತು ಅಂಬೋ ಕಲ್ಪನಾ ನನಗ ಅದ ... ಎಷ್ಟಂತ ದುಃಖ ನುಂಗಿಕೊಳ್ಳಬೇಕವ್ವ ನೀನು ! ನಮ್ಮ ತಾಯಿ ಆದ ತಪ್ಪಿಗೆ ದುಃಖ ಸಹನಮಾಡೋದ ಒಂದು ನಿನ್ನ ಪಾಲಿನ ಕಟ್ಟಿಟ್ಟ ಬುತ್ತಿಯೇನು? ... ಅವ್ವಾ, ನನ್ನ ಉಳಿಸಿಕೋ ... ನನ್ನ ಸಾವಿನಿಂದ ಪಾರುಮಾಡು ! ... ಶಾಪಾ ! ನಾಗರಹಾವು ಕೊಂದ ಶಾಪಾ ! ... ಸುಬ್ರಹ್ಮಣ್ಯಕ್ಕ ಹೋಗಿ ಬಂದರೂ ಸವೆಯ ರಲಿಲ್ಲ ಶಾಪ ! ... ಈ ಶಾಪಾ ನನ್ನ ಬಲಿ ತಗೊಂಡೇ ಹೋಗತದೇನವ್ವಾ ! ... ಮದಿವಿ ಮಾಡಿಕೊಳ್ಳಲಿಲ್ಲಾ ಅದೇ ಒಂದು ಪುಣ್ಯ ...

ಮುದಿಕಿಯ ಧ್ವನಿ : ಹೌದಪ್ಪ, ಆದರ ಮನೀಗೆ ಲಕ್ಷ್ಮೀದೇವಿ ಅಂಥಾ ಸೊಸೆ ಬಂದು ಮನೆತನ ಉದ್ಧಾರಮಾಡಬ್ಯಾಡೇನೊ. ಏಳನೆಯ ತಲಿಗೆ, ಸೆಟಗೊಂಡು ಹೋದ ಲಕ್ಷ್ಮೀ ತಿರುಗಿ ಬರತಾಳ ಅಂದಿದ್ದರು. ಆದರೇನದ ?

ಮಗ : ಏಳನೆಯ ತಲಿ ಅಂದರ ನಾನೊಬ್ಬನೆ ಅಲ್ಲವಾ—

ಮುದಿಕಿಯ ಧ್ವನಿ : ಹೌದಪಾ. ನನಗೂ ಗೊತ್ತು. ಆದರ ಮಾರಿಗೆ ನಿಲಕದ್ದು ಮೈಕೈಗೆ ನಿಲಕೀತೇನೊ.

ಮಗ : (ಏನೋ ತೀವ್ರ ವೇದನೆಯಾದಂತಾಗಿ) ಆಯ್ಯೋ ಅವ್ವಾ ! ಮುಗೀತವಾ ನನ್ನದಿನ್ನ ! ಹ್ಯಾಂಗ ತಡೀಲಿ ಈ ವ್ಯಥಾ ... ಆದರ ಇದಕ್ಕಿಂತಾ ಹೆಚ್ಚಿನ ವ್ಯಥಾ ನಿನಗ ಕೊಟ್ಟು ಹೋಗತೀನಲ್ಲವಾ ನಾನು ... ಅವ್ವಾ ನುಂಗಿಕೋ, ಬಂದದ್ದೆಲ್ಲಾ ನುಂಗಿಕೋ !...

[ಕತ್ತಲೆ ಪಸರಿಸುವುದು. ಮತ್ತೆ ಮುದಿಕಿಯ ಗೋಡೆ ಬಿದ್ದ ತೇವ ಏರಿದ ಮನೆ. ಗುಬ್ಬಿಯ ಚಿಮಣಿ ಮತ್ತೆ ಮಿನುಗುತ್ತಲಿದೆ. ಮುದಿಕೆ ಸಾವರಿಸಿಕೊಂಡು ಎದ್ದು ಕೂಡುತ್ತಾಳೆ.]

ಮುದಿಕಿಯ ಧ್ವನಿ : ಹಯ್ಯೋ ನನ್ನ ಹಣೇಬರಹ ! ಜಗತ್ತಿನ್ಯಾಗ ಯಾರಿಗಾದರೂ ಬಂದಿತ್ತೇನ್ರೇ ಇಂಥಾ ಭವಣಿ ! ನುಂಗಿಕೋ, ನುಂಗಿಕೋ .... ಬಂದದ್ದನ್ನೆಲ್ಲಾ ನುಂಗಿಕೋ ಅಂತ ಹೇಳಿದರು .... ನುಂಗಿಕೋತೀನಿ. ಕಣ್ಣಾಗ ಕಣ್ಣೀರು ನುಂಗಿಕೋತೀನಿ. ಹೊಟ್ಟ್ಯಾಗ ದುಃಖ ನುಂಗಿಕೋತೀನಿ, ವಿಷಾ ನುಂಗಿಧಾಂಗ ನುಂಗಿಕೋತೀನಿ. ವಿಷಾ ನುಂಗಿ ಸಾಯುವವಳಲ್ಲ ನಾನು, ವಿಷಾ ಜೀರ್ಣಿಸಿಕೊಂಡು ಜೀವಿಸುವವಳು. ಸಾವನ ಜೀರ್ಣಿಸಿಗೊಂಡು ಜೀವಾ ಹಿಡಕೊಂಡು ಇದ್ದೀನಿ. ಸಂಸಾರದಾಗ ಸುಖಾ ಕಂಡುಬಿಟ್ಟೇನು ಅಂತ ಹ್ಯಾವಾ ತೊಟ್ಟು ನಿಂತೀನಿ. (ಕೈಯಲ್ಲಿ ಬದಿಗೆ ಬಿದ್ದಿರುವ ಹಾರಿ ಹಿಡಕೊಂಡು) ನಿಧಿ ಶೋಧಿಸೇ ಬಿಡಬೇಕು ಅಂತ ಹಾರೀ ಹಿಡಕೊಂಡು ನಿಂತೇನಿ. ....ಎಲಾ ಏಳಸೇ ತಲಿ ಚಂಡಾಲಾ! ಬಾರಲಾ ಎಲ್ಲಿ ಹೋಗೀದಿ. ಇಲ್ಲೆ ತೆಗ್ಗು ತಗದು, ನಿಧಿ ಹುಡುಕಿ ಅದಽ ಕುಣ್ಯಾಗ ನಿನ್ನ ಹುಗದುಬಿಡತೀನಿ ಬಾರಲಾ. ನಿಧಿ ಹೋಗಿ ಬೆಂಕಿ ಹುಟ್ಟಿದರ ಅದನ್ನ ನಿನ್ನ ಚಿತಿ ಮಾಡಿ ಅದರ ಮ್ಯಾಲೆ ಇಡತೀನಿ ನಿನ್ನ ! .... ಸತ್ತು ಕೊಟ್ಟು ಹೋದವರ ದುಃಖಾ ಹ್ಯಾಂಗಾದರೂ ನುಂಗಿಕೊಳ್ಳಬಹುದು, ನುಂಗಿಕೊಂಡೇನಿ. ಆದರ ಇದ್ದುಕೊಂಡು ಸಾವಿನ ರುಚಿ ತೋರಿಸತೀಯಲ್ಲೋ ನನಗ ! .... ಆದರ್ೇನು ತಾಯಿಯ ಕರಳು ಅಂಬೋದು ಕೆಟ್ಟದು. ನಾ ನಿನ್ನ ತಾಯಿ ಅಂಬೋದನ್ನ ನೀನು ಮರೆತರೂ ನೀನು ನನ್ನ ಮಗಾ ಅಂಬೋದನ್ನ ನಾ ಹ್ಯಾಂಗ ಮರೀಲ್ಯೊ .... ಇಷ್ಟು ನಿನ್ನ ಸ್ರಾಪಳಿಸಿದರೂ ನಿನ್ನ ಸಲುವಾಗಿ ನಿಧಿ ಹುಡಿಕಿ ಕೊಡತೀನಿ ಬಾರಲಾ ... ಮದಿವ್ಯಾಗು ... ಮನೀಗೆ ಸೊಸಿ ಬರ್ಲಿ ... ಮೊಮ್ಮಕ್ಕಳ್ನ ಕಾಣತೀನಿ ... ಮನಿ ಮೊದಲಿನ್ಹಾಂಗ ತುಂಬಿಕೊಂಡು ಬೆಳಗಲಿ .... ನಿಧಿ ! ನಿಧಿ ! .... ನಿಧಿ ಹುಡಿಕೇ ಬಿಡತೀನಿ ! ಸಂಸಾರದಾಗ ಸುಖಾ ಅಂಬೂದನ್ನ ಅಗದು ತಗೀತೀನಿ. ಬೆಂಕಿಯ ಕೊಂಡ ಆಗಿ ಬರಲಿ, ಬಂಗಾರದ ಕೊಡಾ ಆಗಿ ಬರಲಿ! ಸಿಟಗೊಂಡು ಹೋದ ಲಕ್ಷ್ಮೀನ್ನ ಸೆರಗು ಹಿಡಕೊಂಡು ಬರತೀನಿ. ಎಲ್ಲಿ ಹೋಗತಾಳ ಆಕಿ ಲಕ್ಷ್ಮೀದೇವಿ ಅಂಬಾಕಿ. ಇಲ್ಲೇ ಮೊಳಕಾಲು ಮುರಕೊಂಡು ಬಿದ್ದಿರಬೇಕು ಹಾಂಗ ಮಾಡತೀನಿ ... (ಯಜಮಾನರ ಫೋಟೋ ನೋಡಿ) ನೋಡ್ರಿ, ನೀವು ಸತ್ತರೂ ನಾನು ಬದುಕಿ ಇದ್ದೀನಿ ... ಯಾವ ಸುಖಾ, ಯಾವ ನಿಧಿ ಕಾಣಲಿಕ್ಕೆ ಹೋಗಿ ಬೆಂಕಿ ಅಂತ ಅಂಜಿ ನೀವು ಜೀವಾ ಕೊಟ್ರಿ ಆ ಸುಖಾ, ಆ ನಿಧಿ ಕಾಣಲಿಕ್ಕೆ ನಾನು ಸಿದ್ಧಳಾಗಿ ನಿಂತೀನಿ ... (ಮಗಳ ಫೋಟೋ ನೋಡಿ) ಮಗಳಽ, ನಾಗರಹಾವಿನ ದವಡ್ಯಾಗ ಸಿಕ್ಕು ಸತ್ತಿ ! ಕಾಳಜಿ ಮಾಡಬ್ಯಾಡ ನನ ಮಗಳ, ಅದೇ ನಾಗರಹಾವಿನ ಹೆಡಿಮ್ಯಾಲಿನ ಮಣಿ ತರಲಿಕ್ಕೆ ಸಿದ್ಧಳಾಗಿ ನಿಂತೀನ್ನಿ. (ಮಗನ ಫೋಟೋ ನೋಡಿ) ಅಪ್ಪಾ,

ನಾಗರಹಾವಿನ ಶಾಪದ ಪಾಪ, ಸುಬ್ರಹ್ಮಣ್ಯ ತೊಳೀಲಿಲ್ಲಾ ... ಇಕಾ ನಾನು ತೊಳೀ ಲಿಕ್ಕೆ ನಿಂತೀನಿ ನೋಡು .... ಎಣ್ಣಿಗೆ ಸೀಗಿಕಾಯಿ ನಿಂತ ಹಾಂಗ .... ನಿಧಿ ಹುಡುಕ ತೀನಿ. ಒತ್ತಿಯು ಮನಿ ಕಬ್ಜಾ ಆಗುವ ಮೊದಲು ಹುಗದು ಬಿದ್ದ ಲಕ್ಷ್ಮೀನ್ನ ಅಗದು ತಗಿತೀನಿ .... ಯಾರೂ ಕಾಣದ ಸುಖಾ ಹುಡುಕಲಿಕ್ಕೆ ಗಂಡನ ಬೂದಿ ಮೆಟ್ಟಿ, ಮಗಳ ಸಾವು ಸುಂಗಿ, ಮಗನ ಅಸ್ತಿಯೊಳಗ ಆಸ್ತಿ ಹುಡುಕಲಿಕ್ಕೆ ಹೊಂಟು ನಿಂತೀನಿ .... ಬೆಳಕು ಹರಿಯೂದರಾಗ ನೆಲಾ ಅಗೀತಿನಿ, ನಿಧಿ ತಗೀತಿನಿ. ನಾಸೊ ಬ್ಯಾಕಿ ಹಣ್ಣಹಣ್ಣ ಮುದಿಕಿ ಆದರೂ ಈ ನಿಧಿ ಅಂಬೋ ಸುಖದ ಮುಖಾ ನೋಡಿ ಕಣ್ಣು ಮುಚ್ಚಬೇಕು ಅಂತ ಜೀವಾ ಹಿಡದೀನಿ. ಚಾಂಡಾಲನ್ಹ ಆದರೂ ಮಾಗಾ ಸುಳ್ಳಲ್ಲ .... ಆ ಮಗನ ಕೈಗೆ ಲಕ್ಷ್ಮೀನ್ನ ಕೊಟ್ಟು ನಾನೂ ಕಣ್ಣುಮುಚ್ಚತೀನಿ .... ಎಲ್ಲಿದ್ದಾಳ ಆಕಿ ಲಕ್ಷ್ಮೀದೇವಿ, ನೋಡೆಬಿಡತೀನಿ ....

[ ಮೈ ತುಂಬಿದವರಂತೆ ಹಠಾತ್ತನೆ ಎದ್ದು ಸೆರಗು ಟೊಂಕಕ್ಕೆ ಬಿಗಿದುಕೊಂಡು ಕೈಯಲ್ಲಿ ಹಾರಿ ಹಿಡಿದುಕೊಂಡು ಯಜಮಾನರ ಫೋಟೋ ಬಿರುಗಣ್ಣಿನಿಂದ ಬಿರುಬಿರು ನೋಡುತ್ತ— ]

ನೋಡ್ರಿ! ನಿಮ್ಮ ಫೋಟೋದ ಬುಡಕೆ ನಿಧಿ ಅಗೀತಿನಿ ... ಸಿಗಲಿಲ್ಲಾ ಅಂದರ ಇದs ಹಾರಿಲೇನ ತಲಿ ಒಡಕೊಂಡು ಒಮ್ಮೆ ನೀಗತಿನಿ. ಇದ ತೆಗ್ಗಿನ್ಯಾಗ ತಲಿಯಿಡ ತೀನಿ. ಏನಾರ ಹೇಳೋದಿದ್ದರ ಹೇಳ್ರಿ! (ದುರುದುರು ನೋಡುವಳು.) ಅಂ? ಯಾಕ? ಯಾಕ ಮಾತಾಡವಲ್ರಿ! ... ಬಿಚ್ಚರಿ ಬಾಯಿ! ... ಎರಡು ಮಾಡ್ರಿ ತುಟಿ! ... ಸರಿ. ಸುಮ್ಮನಿದ್ದರ ಸಮ್ಮತಿ ಅಂತೀರೇನು ? .... ತೊಗೊಳ್ರಿ ಹಾಂಗಾರ! ....

[ ಧನ್, ಧನ್ ಎಂದು ಫೋಟೋದ ಕೆಳಗೇ ಗೋಡೆಯ ಅಡಿಗೆ ಅಗಿಯತೊಡಗುವಳು. ತೇಕುವಳು, ಆಯಾಸಪಡುವಳು. ನಡುನಡುವೆ ಬೆವರು ಒರಸಿಕೊಳ್ಳುವಳು. ಯಜಮಾನರ ಫೋಟೋ ನೋಡುವಳು. ಮತ್ತೆ ಧನ್ ಧನ್ ಎಂದು ಅಗಿಯತೊಡಗುವಳು ... ]

ಉಶ್ಶ್ಯ! .... ಮೂರು ದಿವಸ ಹೊಟ್ಟ್ಯಾಗ ಅಶನ ಇಲ್ಲಾ ... ಎಲ್ಲೀದ ಬಂತೋ ಆವೇಶ ... ಸುದಾಮನ ಮನಿ ಸುವರ್ಣದ್ದು ಆದಹಾಂಗ ನಮ್ಮ ಮನಿನೂ ಝಗಾ ಝಗಾ ಅನಬೇಕು .... ಇಲ್ಲದಿದ್ದರ? ಇಲ್ಲದಿದ್ದರ ಇದs ಕುಣ್ಯಾಗ ಬೀಳಬೇಕು ನನ್ನ ಘಟಾ.... ( ಯಜಮಾನರ ಫೋಟೋ ನೋಡಿ ) ಗೊತ್ತದ ಇಲ್ಲೊ — ಇದs ಹಾರಿ ಲ್ಲೇನ ತಲಿ ಒಡಕೊಂಡು ನಿಮ್ಮ ಪಾದಕ್ಕ ಬಲಿ ಒಪ್ಪಿಸತೀನಿ ...

[ಮತ್ತೆ ಅಗಿಯತೊಡಗುವಳು]

ಉಶ್ಶ್ಯ! ಇದೇನು? ಬೆಂಕೀನೂ ಇಲ್ಲಾ ಭಂಗಾರಾನೂ ಇಲ್ಲಾ ... ಅಗಧಾಂಗೆಲ್ಲಾ ಬರೇ ಮಣ್ಣು .... ಬರೇ ಮಣ್ಣು. ಎಲ್ಲಾನೂ ಕಡೀಕೊಮ್ಮೆ ಮಣ್ಣs! ....

ಅಯ್ಯೊ ! ಶುಕ್ರ ಮೂಡಿದನೊ ಏನೊ ! .... ಬೆಳಕು ಹರೀಲಿಕ್ಕೆ ತಾಸೊ ಎರಡು ತಾಸೊ .... ಅಷ್ಟರೊಳಗ ನಿಧಿ ಶೋಧಿಸಬೇಕು .... ನನ್ನ ಬಡತನ ಹರೀಬೇಕು.... ನನ್ನ ಚಾಂಡಾಲ ಮಗ್ಗ ಈ ಚಂಚಲ ಲಕ್ಷ್ಮಿನ್ನ ಒಪ್ಪಿಸಬೇಕು .... ಮನೀಗೆ ಸೊಸಿ ಬರಬೇಕು .... ಮನಿ ಎತ್ತಿ ನಿಲ್ಲಿಸಬೇಕು .... ಸುಖಾ ಕಾಣಬೇಕು .... ಮೊಮ್ಮಕ್ಕಳ್ನ ಮರಿಮಕ್ಕಳ್ನ ಕಂಡ ಕಣ್ಣು ಮುಚ್ಚಬೇಕು .... ಮನೀ ಮೊಮ್ಮಕ್ಕಳೂ ಅಂದರ ಮಗನ ಹೊಟ್ಟೀಲೇನ ಕಾಣಬೇಕು .... ಅದಕ್ಕಂತ ಖಡ್ಡಿ ಅಷ್ಟು ಜೀವಾ ಕಾಪಾಡಿಕೊಂಡು ನಿಂತೀನಿ .... ಅಯ್ಯ ಹಕ್ಕಿ ಕೂಗತಾವೊ ಏನೊ .... ಎಷ್ಟು ಹೊತ್ತು ಆತೋ ಏನೋ ಅಂತೀನಿ ....

ಮತ್ತೆ ಆವೇಶದಿಂದ ಮೈ ತುಂಬಿದವರಂತೆ ಅಗಿಯತೊಡಗುವಳು.]

ಉಶ್ಶ್ ! .... ಯೇ ಲಕ್ಷ್ಮೀದೇವೀ಼ಽ ... ಪಾತಾಳದಾಗಿದ್ದರೂ ಬಿಡೂದಿಲ್ಲ ನಿನ್ನ ಅಂತ ತಿಳಕೋ ! ನಮ್ಮ ಮನೀ ಬಿಟ್ಟು ಓಡಿ ಹೋಗಲಿಕ್ಕೆ ಆತೇನು ನಿನಗ ? ಒತ್ತಟ್ಟಿಗೆ ಇದ್ದಲ್ಲಿ ನೆಚ್ಚಿಕೊಂಡು ಇರೋದಕ್ಕ ಆಗೂದಿಲ್ಲ ನಿನಗ ? .... ಎಷ್ಟು ಚಂಚಲ ನೀನು ? .... ಹೆಂಗಸರು ಹೀಂಗ ಚಂಚಲ ಇರಬಾರದು .... ಅದಕ್ಕ ನಿನಗ ಇಷ್ಟು ಕೆಟ್ಟ ಹೆಸರು ಬಂದದ್ದು .... ಮತ್ತ ನಮ್ಮ ಮನೆತನದಾಗ ಪಾಪದ ಕೊಡಾ ತುಂಬಿ ಬಂತು ಅದಕ್ಕ ಲಕ್ಷ್ಮೀ ಹೊರಟುಹೋದ್ಲು ಅಂತಾರ .... (ಮತ್ತೆ ಟೊಂಕ ಕಟ್ಟಿ ನಿಂತು) ನಿನ್ನ ಬಿಡತೀನೆಲ್ಲೆ ? ನನ್ನ ಸೊಸಿ ಆಗಿ ಬರುವಾಕಿ ನೀನು. ಅತ್ತಿ ಕೈಗುಣಾ, ಕಾಲ್ಗುಣಾ ತೋರಿಸೇಬಿಡತೀನಿ ಬಾ. (ಮತ್ತೆ ಆವೇಶಗೊಂಡು ಅಗಿಯ ತೊಡಗುವಳು...ಆಕೆಯ ಅಗಿತದ ಶಬ್ದಕ್ಕೆ ಸರಿಜೋಡಿಯಾಗಿ ಹೊರಗಿನಿಂದ ಯಾರೋ ಬಾಗಿಲು ಗುದ್ದುತ್ತಿರುವ ಸಪ್ಪಳ.) ಅಯ್ಯ ನನ್ನ ಹಣೇಬಾರಽ ! ಮನೀ ಕಬ್ಜಾ ತಗೊಳ್ಳಿಕ್ಕಂತ ಬಂದರೇ ಏನೋ ! ಪೋಲಿಸರನ್ನ ಕರಕೊಂಡು ಬಂದಿದ್ದಾರಾದೀತೇನು ? .... (ಹುಚ್ಚಳಂತಾಗಿ) ಇಲ್ಲಾ, ನಾ ಬಾಗಿಲಾ ತಗೆಯೋದಿಲ್ಲಾ .... ಇದು ನನ್ನ ಮನಿ .... ನನ್ನ ಮಸಣಾ ! .... ನನ್ನ ಘಟಾ ಇಲ್ಲೇ ಬೀಳೋದು, ಇಲ್ಲಾ ನೆಲದಾಗಿನ ಲಕ್ಷ್ಮಿನ್ನ ಮ್ಯಾಲಕ್ಕ ತಂದು, ಇದನ್ನ ನಂದನವನಾ ಮಾಡಿ ನನ್ನ ಮೊಮ್ಮಕ್ಕಳ್ನ ಆನಿ ಆಡಿಸಿಕೋತ ಲಾಲಿ ಹಾಡೋದು ! .... (ಜೋರಿನಿಂದ ಅಗಿಯತೊಡಗುವಳು ಅದಕ್ಕೆ ಸರಿಸಮಾನವಾದ ವೇಗದಲ್ಲೇ ಹೊರಗೆ ಬಾಗಿಲು ಗುದ್ದುವ ಸಪ್ಪಳ)

**ಹೊರಗಿನ ಧ್ವನಿ :** ಅವ್ವಾಽಽ ! ಅವ್ವಾಽಽ !

**ಮುದಿಕಿ :** (ಹೌಹಾರಿ) ಅಂ? ... ಯಾರವರು ಅವ್ವಾ ಅಂತ ಕೂಗಿದವರು? ... ಯಾರೇನು. ಎಲ್ಲರೂ ಅವ್ವಾ ಅಂತ ಕೂಗೋದು. ಪೋಲೀಸರಽ ಆಗಿದ್ದಾರಾ-ದೀತು. ... ಯೇ ಲಕ್ಷ್ಮೀ ಯಾಕ ಮಣ್ಣಾಗಿ ಬಿದ್ದೀಯೆ ! ಎದ್ದು ಬರತೀಯೋ ಇಲ್ಲೋ. (ಮತ್ತೆ ಅಗಿಯತೊಡಗುವಳು.)

**ಹೊರಗಿನ ಧ್ವನಿ :** ಅವ್ವಾಽ ! ಅವ್ವಾಽಽ ! ... ಯಾರೋ ಮನೀಗೆ ಕನ್ನಾ ಹಾಕಲಿಕ್ಕೆ ಹತ್ಯಾರೋ ಏನೋ. ಅಗಿಯೋ ಸಪ್ಪಳ ! ... ಅವ್ವಾಽಽ, ಅವ್ವಾಽಽ

ತಗೀ, ಬಾಗಿಲಾ ತಗೀ. ನಾನss ಅವ್ವಾ! ನಾ ಬಂದೀನಿ ... ಇನ್ನಮ್ಯಾಲೆ ನಿನ್ನ ಗೋಳಾಡಿಸೋದಿಲ್ಲಾ. ... ಬದಲೀ ಮನಶ್ಯಾ ಆಗಿ ಬಂದೀನಿ. ಬಾಗೀಲಾ ತಗೀಯ ಅವ್ವಾss. (ಎಂದು ಶಕ್ತಿ ಮೀರಿ ಧ್ವನಿ ಮಾಡುವನು. ಅದಕ್ಕೆ ತಕ್ಕಂತೆಯೇ ಶಕ್ತಿಯನ್ನೆಲ್ಲಾ ಕಿತ್ತಿ ಕೈಯಲ್ಲಿ ಹಿಡಿದು ಹಾರಿ ಹಾಕುವ ಸಪ್ಪಳ ಹೆಚ್ಚುತ್ತದೆ.)

ಮುದಿಕಿ : ಹಾ! ... ಹಾ! ... ಹಾ! ... ಸಿಕ್ಕಿತು. ನಿಧಿ ಸಿಕ್ಕಿತು ...

[ಅತ್ಯಂತ ಆವೇಶದಿಂದ ಅಗಿಯತೊಡಗುತ್ತಿರುವಂತೆಯೇ, ಹೊರಗೆ ಅನೇಕ ಧ್ವನಿಗಳು, 'ಅವ್ವಾ, ಅವ್ವಾss' ಎಂದೂ 'ಅವ್ವಾವ್ರs' ಎಂದೂ ಕೂಗುತ್ತ ಶಕ್ತಿ ಪ್ರದರ್ಶನ ಮಾಡುತ್ತಿರುವಂತೆ ಗುದ್ದತೊಡಗಿದ ಗರ್ಜನೆ. ಕೊನೆಗೆ ಧಡಲ್ ಎಂದು ಬಾಗಿಲು ಮುರಿದು ಬೀಳುವಂತೆಯೇ, ಮುದಿಕಿ ಅಗಿಯುತ್ತಿದ್ದ ಗೋಡೆಯು ಧೊಪ್ಪೆಂದು ಕುಸಿದು ಬೀಳುತ್ತಿದೆ. ಮುದಿಕಿ ಹುಗಿದು ಹೋಗುತ್ತಾಳೆ. ನರಳುವ ಶಬ್ದ ಮಾತ್ರ ಎಲ್ಲಿಂದಲೋ ಮಂದವಾಗಿ ಕೇಳಿಬರುತ್ತದೆ.]

ಮಗ : ಅವ್ವಾss ಅಯ್ಯೋ ಅವ್ವಾss! (ಮೂರೂ ದೊಡ್ಡ ಫೋಟೋಗಳು ಕೆಳಗೆ ಬಿದ್ದು ಫಟ್ ಫಟ್ ಎಂದು ಒಡೆದು ಹೋಗುತ್ತವೆ. ಮಗನು ಅಡ್ಡಬರಸಿ ಮುಂದೆ ಬರುತ್ತಾನೆ. ಉಳಿದ ಓಣಿಯ ಜನರೂ ಓಡಿಬಂದು ಮುದಿಕೆಯ ಮೈಮೇಲೆ ಸೂರೆಸೂರೆಯಾಗಿ ಬಿದ್ದ ಕಲ್ಲು, ಹೆಂಟಿ, ಮಣ್ಣುಗಳನ್ನು ಸರಿಸುತ್ತಾರೆ. ಮಗನು ತಾಯಿಯನ್ನು ಹಿಡಿದೆತ್ತುತ್ತಾನೆ.) ಅವ್ವಾ ಅವ್ವಾss....ನೋಡವಾ ನಾ ಬಂದೀನಿ. ನಿನ್ನ ಕ್ಷಮಾ ಕೇಳಲಿಕ್ಕೆ ಬಂದೀನಿ. ನನ್ನ ಕ್ಷಮಿಸೋದಿಲ್ಲ? ನನಗ ಆಶೀರ್ವಾದ ಮಾಡೋದಿಲ್ಲ? .... ಅವ್ವಾss .... ಅವ್ವಾss (ಎಂದು ಉಸಿರು ಇದೆಯೇನೋ ಎಂದು ಅಲ್ಲಲ್ಲಿ ಮುಟ್ಟಿ ನೋಡುವನು.)

ಮುದಿಕಿ : (ಇದೀಗ ಸಾಯುವ ಸ್ಥಿತಿಯಲ್ಲಿ) ನಿ – ನಿ – ನಿ – ಧಿ .... (ಆ ಕಡೆಗೆ ಬೊಟ್ಟುಮಾಡಿ ತೋರಿಸುವಳು. ಮಗನ ತೊಡೆಯ ಮೇಲೇನೆ ಗೋಣು ಚೆಲ್ಲಿ, ಅವನನ್ನೇ ನೋಡುತ್ತ) ನನ್ನ ನಿಧಿ! .... ಸಿಕ್ಕಿತು!

ಮಗ : ಅಯ್ಯೋ ಅವ್ವಾ! .... ಕೊನೆಗೆ ಸಾವಿನಲ್ಲೇ ಸುಖಾ ಕಂಡೆಯಾ?

[ನಿಂತ ಜನರು ಮರುಗುತ್ತ ನಿಂತಿರುವಾಗ]

ತೆರೆ

ಶ್ರೀ ಸಂಗೀತ

# 'ವಿಪರ್ಯಾಸ ವಿನೋದ'ವೆಂಬ ನಾಟಕವು

( Comedy of Errors )

ಪಾತ್ರವರ್ಗ

**ನಾಯಕ** — ವಸಂತರಾವ ಸರದೇಶಪಾಂಡೆ
**ನಾಯಿಕೆ** — ಶಾರದಾ
**ವಿದೂಷಕ** — ಅನಂತರಾವ ಸರದೇಶಪಾಂಡೆ
**ನಾಯಕನ ತಾಯಿ** — ರಮಾಬಾಯಿ ಸರದೇಶಪಾಂಡೆ
**ನಾಯಕನ ಸೇವಕ** — ತಿಮ್ಮ.

[ ನಾಂದಿ : ]

[ ನಾಂದಿಯಾದ ಮೇಲೆ ದೊಡ್ಡ ತೆರೆ ಸರಿಯುತ್ತದೆ. ಅದರ ಹಿಂದೆಯೇ ಬಿಳಿಯ ತೆರೆಯೊಂದು ಇದ್ದು, ಪ್ರೇಕ್ಷಕರಿಂದ ರಂಗಸ್ಥಳದ ಸುಸಜ್ಜಿತ.ಭಾಗವನ್ನು ಮರೆಮಾಡುತ್ತದೆ. ಸೂತ್ರಧಾರನು ಪ್ರವೇಶಿಸುತ್ತಾನೆ. ಈತನು evening suit ಧರಿಸಿರುತ್ತಾನೆ. ಅಂದರೆ ಬಿಳಿಯ ಶಾರ್ಕಸ್ಕಿನ್ ಕೋಟು, ಕರಿಯ ಪ್ಯಾಂಟು, ಯಾವುದಾದರೂ ಬಣ್ಣದ ಬೋಟಾಯ್, ಕರಿಯ ಬೂಟು. ನೇಪಥ್ಯದತ್ತ ಕೈಮಾಡಿ .... ]

ಸೂತ್ರಧಾರ : ( ಹಾಡುವನು )

ಹಾಡು :

**( ರಾಗ — ಸೊಹೊನಿ ಅಥವಾ ಖಂಬಾವತಿಯಲ್ಲಿ ಹಾಡಬಹುದು )**

"ಬಾರೇ ಪ್ರಿಯೇ ; ಚತುರ ಧಿಯೇ ।
ಮಧುರಾಂಗಿ ಬಾಲೆ ; ಸಚ್ಛೀಲ ಲೀಲೆ ॥
ಸಂಸ್ಕಾರ ಸಾರೇ, ಮಧುಮಧುರೆ ಧೀರೆ.
ಇಹಪರಗಳಾಟ, ಅವೆ ನಿನ್ನ ಬೇಟೆ.
ಜನುಮಗಳ ನೆನಸು, ಅವೇ ನಿನ್ನ ಕನಸು.
ನವರಸ ವಿದಗ್ಧೆ — ಅನುಭಾವ ಮುಗ್ಧೆ.
ಇದೊ ನಮ್ಮ ನಾಟ್ಯ — ರೋಮಾಂಚದಾಟ.
ಕಂಬನಿಯ ಕೂಟ — ಹಾಸ್ಯಗಳ ತೋಟ.
ಸಭಿಕರಿಹರಿಲ್ಲೆ — ತಳುವಿದೆಯೊ ನಲ್ಲೇ.
ಬಾ ಬಾರೆ ಬೇಗ — ತುಂಬಿಸೀ ರಂಗ.

ಎಲಾ ! ನನ್ನ ಪ್ರಿಯಕರೆಯೂ ಇಂದೇಕೆ ತಳುವಿದಳು ? ಓ ! .... ಆ ಮಲ್ಲಿಗೆಯ ಹಾರವನ್ನು ಕೊರಳಲ್ಲಿ ಹಾಕಿಕೊಳ್ಳಲು ಉದ್ಯುಕ್ತಳಾದವಳು ನನ್ನ ಕರೆಯನ್ನು ಕೇಳಿದವಳೇ, ಅದನ್ನು ಕೈಯಲ್ಲಿಯೇ ಧರಿಸಿ ಇತ್ತ ಬರುತ್ತಿದ್ದಾಳೆ. ಅಹಾಹಾ! ಏನಿವಳ ಅಲೌಕಿಕ ಸೌಂದರ್ಯವು ! ರಂಗಸ್ಥಳಕ್ಕಾಗಿ ನೇಪಥ್ಯಸಿದ್ಧಳಾದ ನನ್ನ ಪ್ರಿಯತಮೆಯು ಸಾಕ್ಷಾತ್ ಭಗವತಿ ಸರಸ್ವತಿಯಂತೆ ನನಗೆ ಗೋಚರಳಾಗಿ ಪತ್ನೀತ್ವದ ಭಾವವನ್ನೇ ತೊಡೆದು, ಇದಾವ ವಿಚಿತ್ರ ಭಕ್ತಿಯನ್ನು ನನ್ನಲ್ಲಿ ಹುಟ್ಟಿಸಿದಳಲ್ಲ ! ನಾನು ಪತಿಯೆಂಬ ಕಾರಣದಿಂದ ಪ್ರಪಂಚಭಯಕ್ಕಾಗಿ ಈಕೆಗೆ ನಮಸ್ಕಾರ ಮಾಡಲಾರೆನು.

[ ನಟಿ ಪ್ರವೇಶಿಸುವಳು ]

ಬಾ, ಬಾ, ಪ್ರಿಯೇ. ಇಂದು ನಾಟ್ಯಸಭೆಯೆಂಬ ಹುಮ್ಮಸ್ಸಿನಲ್ಲಿ ಏನೇನು ನೇಪಥ್ಯರಚನೆಯಂಗೈದಿಹೆಯಲ್ಲ !

ನಟಿ : ಪ್ರಿಯರೆ, ತಳುವಿದೆನು; ಮನ್ನಿಸಿರಿ. ನಾಟಕವನ್ನು ಮಾಡದೇ ಬಹು ದಿನಗಳಾಗಿ ಹೋಗಿದ್ದ ಮೂಲಕ ನೇಪಥ್ಯರಚನೆಯ ರೂಢಿಯು ತಪ್ಪಿಹೋದಂತಾಗಿತ್ತು. ಇದ್ದಷ್ಟು ನೆನಪಿನಿಂದ ಏನೇನೋ ಸಿಂಗರಿಸಿಕೊಂಡು ಬಂದಿದ್ದೇನೆ. ಸಭಿಕರಿಗೆ ಬೇಸರವಾಗದಷ್ಟೇ ?

ಸೂತ್ರಧಾರ : ಹಾಯ್, ಹಾಯ್ ಸ್ತ್ರೀಯೇ .... ನನ್ನ ಮೋಹದಿಂದ ನೀನು ವ್ಯರ್ಥ ಕಷ್ಟಪಡಬೇಕಾಯಿತಲ್ಲ ! .... ಈ ಅಲೌಕಿಕ ನೇಪಥ್ಯವನ್ನು ನಾನೂ ಕಾಣದೆ ಹಲವಾರು ವರ್ಷಗಳಾದವು. ನನ್ನ ಕಣ್ಣ ಹಸಿವೆಯನ್ನು ತೀರಿಸಿದುದಕ್ಕೆ ನಿನಗೆ ಧನ್ಯವಾದಗಳು. ಆದರೆ ಪ್ರಿಯೆ, ಇಂದು ನಿನ್ನ ನೇಪಥ್ಯವು ವ್ಯರ್ಥವಾಯಿತು.

ನಟಿ : ಹಾಯ್, ಧಿಕ್, ಆರ್ಯಪುತ್ರ ! ನಾಟ್ಯಾರಂಭಸಮಾರಂಭದಲ್ಲಿ ಇದೇನು ಅಮಂಗಲ ನುಡಿಯುವಿರಿ ?

ಸೂತ್ರಧಾರ : ಹಾಯ್ ಪ್ರಿಯೇ, ಇತ್ತ ನೋಡು, ನನ್ನ ಪಾಶ್ಚಾತ್ಯ ವೇಷವನ್ನು. ಇದೀಗ ನಮ್ಮ ನಾಟ್ಯವನ್ನು ನೋಡಲು ಬಂದ ಮಹಾಜನರ ಮನಸ್ತೃಪ್ತಿಗಾಗಿ ನಾನು ಈ ಹೊಸಬಗೆಯ ನೇಪಥ್ಯವನ್ನು ಧರಿಸಿದ್ದೇನೆ. ಇಂದಿನ ನಾಟಕವೂ ಹೊಸಬಗೆಯದಾಗಿದೆ. ಈಗಿನ ಕಾಲದ ಮಹಾಜನರು ತಮ್ಮ ತಮ್ಮ ಬಾಳಿನ ದುಸ್ವರೂಪಿಯಾದ ದಿನದಿನದ ವ್ಯವಹಾರಗಳನ್ನೇ ಪುನಃ ನೋಡಲು ಸಭಾಗೃಹಕ್ಕೆ ಆಗಮಿಸುತ್ತಾರೆ.

ನಟಿ : ಮಹಾಜನರಲ್ಲಿ ಇಂದೆಂಥ ಬುದ್ಧಿಬೇಧ ?

ಸೂತ್ರಧಾರ : ಉಪಾಯವಿಲ್ಲ. ಪ್ರಿಯೇ, ಅದು ಅವರ ತಪ್ಪಲ್ಲ. ಜೀವನಕ್ಕೆ ಜೀವನವೇ ಕುರೂಪಿಯಾದಾಗ ವಿಚಾರಗಳೂ, ಸೌಂದರ್ಯದೃಷ್ಟಿಯೂ ಕುರೂಪಿಯಾದಲ್ಲಿ ಆಶ್ಚರ್ಯವೇನು ? ಈಗಿನ ಕಾಲದ ಮಹಾಜನರು ಸೌಂದರ್ಯದ ಉಪಾಸನೆಗಾಗಿ, ರಸಭುಕ್ತಿಗಾಗಿ ಸಭೆಗೆ ಬರುವದೇ ಇಲ್ಲ. ಹಿಂದಿನಂತೆ ನಾಟ್ಯವು ನವರಸೋತ್ಸವವಾಗಿ ಆಗುವದೇ ಇಲ್ಲ.

ನಟಿ : ಹಾಗಾದರೆ ಈಗಿನ ಮಹಾಜನರಿಗೆ ಪ್ರಿಯವಾದ ರಸವಾವುದು ?

ಸೂತ್ರಧಾರ : ಅವರು ಹಾಸ್ಯರಸವನ್ನು ಬಹಳಷ್ಟು ಪ್ರೀತಿಸುವರು. ಇದಕ್ಕೊಂದು ಇತಿಹಾಸವಿದೆ, ಕೇಳು. ಕಾಲಕಾಲಕ್ಕೆ ದೇವತೆಗಳು ಮಾನುಷಯೋನಿಯ ಸುಂದರಿಯರ ಸೌಂದರ್ಯಕ್ಕೆ ಮನಸೋತು ಅವರಲ್ಲಿ ರಮಮಾಣರಾದರು. ಆ ದೇವ-ಮಾನುಷ ಸಂಯೋಗದಿಂದ ಎಂಟು ಭಾವಗಳು ಹುಟ್ಟಿದವು. ಆದರೆ ಓರ್ವ ತಾಮಸೀಬುದ್ಧಿಯ ದೇವತೆಯು ಓರ್ವ ಆಸುರ-ಯೋನಿಯ ಕನ್ನಿಕೆಯನ್ನು ಮೋಹಿಸಿ 'ಹಾಸ್ಯ'ವೆಂಬ ಹೆಸರಿನ ಭಾವವನ್ನು ಪಡೆದನು. ಇಂತು 'ನವಭಾವ'ಗಳ ಜನನವಾಯಿತು. ಈ ನವಭಾವಗಳು ತಮ್ಮ ತ್ರಿಗುಣಾತ್ಮಕ ಬಲದಿಂದ ಲೋಕಗಳನ್ನೆಲ್ಲ ತಲ್ಲಣಗೊಳಿಸಿದವು. ಆಗ ದೇವತೆಗಳೆಲ್ಲ ಸರ್ವಸಾಕ್ಷಿಯಾದ ಸರ್ವೇಂದ್ರಿಯ ಪ್ರಭುವಾದ ಭಗವಾನ್ ಶಂಕರನ್ ಬಳಿ ಹೋಗಿ ದೂರು ಹೇಳಿದರು. ಪರಶಿವನು

ತನ್ನ ಯೋಗಮಾಯೆಯಿಂದ ಈ ನವಭಾವಗಳನ್ನು ಸೃಷ್ಟಿಸಿದನು. ಅವನಿಗೆ ಗೋಚರವಾದದ್ದೇನೆಂದರೆ, ದೇವಾಸುರ ಸಂಯೋಗದಿಂದ ಜನಿಸಿದ 'ಹಾಸ್ಯ'ನು ತನ್ನ ಅಸುರಬಲದಿಂದ ನವಭಾವಗಳಿಲ್ಲಿಯು ತಾಮಸೀ ಗುಣವನ್ನೇ ಹೆಚ್ಚು ಪ್ರಚೋದಿಸಿ, ಜಗತ್ತನ್ನು ಆಸುರಮಾರ್ಗದತ್ತ ಎಳೆಯುತ್ತಿದ್ದಾನೆ. ಅಹಾಹಾ! ಎಂಥ ಘೋರ ಚಿತ್ರವದು! ತಕ್ಷಣವೇ ಭಗವಂತನು ತನ್ನ ಆಜಾನುಬಾಹುವನ್ನು ಚಾಚಿ ನವಭಾವಗಳೊಳಗಿಂದ 'ಹಾಸ್ಯ'ನನ್ನು ವಿಂಗಡಿಸಿ, ಅವನನ್ನು ಕೈಸೆರೆಗೊಳಿಸಿದನು. ತಮ್ಮ ಮುಂದಾಳುವಾದ 'ಹಾಸ್ಯ'ನು ಹೋದೊಡನೆ ಉಳಿದ ಎಂಟು ಭಾವಗಳು ನಮ್ರವಾಗಿ ಪರಶಿವನಿಗೆ ನಮಸ್ಕರಿಸಿ ಧನ್ಯವಾದವು. ಶಂಕರನ ಕೃಪಾದೃಷ್ಟಿಯಿಂದ ಅವು ಪರಿಪಾಕಗೊಂಡು, ಸತ್ವಗುಣವೃದ್ಧಿಯಿಂದ ಅಷ್ಟರಸಗಳಾದವು. 'ಹಾಸ್ಯ'ನನ್ನು ಶಿವನು ಒಂದು ಗುಹೆಯಲ್ಲಿ ಹಾಕಿ ದೊಡ್ಡ ಬಂಡೆಯಿಂದ ಮುಚ್ಚಿಬಿಟ್ಟನು. 'ಹಾಸ್ಯ'ನು ಒಳಗಿಂದ ಒಳಗೆ ಒಂದು ಸಹಸ್ರವರ್ಷ ತಪಗೈದನು. ಅವನ ತಪಸ್ಸಿಗೆ ಮೆಚ್ಚಿದ ಭೋಲಾಶಂಕರನು ಅವನನ್ನು ಹೊರಕ್ಕೆ ತೆಗೆದು ತನ್ನ ಗಣಗಳಲ್ಲಿ ಒಂದಾದ 'ಕೋಡಂಗಿ'ಯನ್ನಾಗಿ ನಿಯಮಿಸಿದನು. ಮುಂದೆ ಕೋಡಂಗಿಯೇ ವಿದೂಷಕನಾಗಿ ಜನರನ್ನು ರಂಜಿಸುವ ಶಿವಸೇವೆಯನ್ನು ಮಾಡುತ್ತಿದ್ದನು. ಇಂತು, 'ಹಾಸ್ಯ'ನೂ 'ನವರಸ'ಗಳಲ್ಲಿ ಒಂದಾಗಿ ಮೆರೆಯತೊಡಗಿದನು. ಆದರೆ ದಿನಗಳೆದಂತೆ ಜನಪ್ರಿಯತೆಯ ಅಹಂಕಾರದಿಂದ 'ಹಾಸ್ಯ'ನು ನಾಟ್ಯದ ನಾಯಕತ್ವವನ್ನು ಬಯಸತೊಡಗಿದನು. ಇದೇ ಸಮಯಕ್ಕೆ ಕೃಷ್ಣಪಕ್ಷವೂ ಬಂದ ಮೂಲಕ ಭಗವಾನ್ ಚಂದ್ರಮೌಳಿಯು ಸಮಾಧಿಸ್ಥನಾದನು. ಈ ಸುಸಂಧಿಯನ್ನು ನೋಡಿ ಆಸುರಯೋನಿಯವನಾದ 'ಹಾಸ್ಯ'ನು ತನ್ನ ಶಿವಗಣತ್ವವನ್ನು ಮರೆತು ಜನ-ಮನದ ಮೇಲೆ ಪ್ರಭಾವವನ್ನು ಬೀರತೊಡಗಿದ್ದಾನೆ.

ನಟಿ : ಅವ್ವಯ್ಯಾ, ಹಾಗಾದರೆ ಹಾಸ್ಯನು ರಾಕ್ಷಸಯೋನಿಯವನೇನು ?

ಸೂತ್ರಧಾರ : ಅಹುದು ಪ್ರಿಯೇ ; ಹಾಸ್ಯನು ಕೋಡಂಗಿಯಾಗಿ ಹಾಸ್ಯವನ್ನೇ ಹಾಸ್ಯಾಸ್ಪದಗೊಳಿಸುವಾಗ ಅತನು ಶಿವಗಣನಾಗಿ ಪೂಜ್ಯನಾಗುವನು. ಆದರೆ ಅವನೇ ಜೀವನವನ್ನು ಅಣಗಿಸಿ, ಜೀವನೋತ್ಸಾಹವನ್ನೇ ಮುರಿಯಲು ಬಯಸುವಾಗ, ಅವನ ರಾಕ್ಷಸ ಸ್ವಭಾವವು ಪ್ರಬಲಗೊಂಡಿರುತ್ತದೆ. ಇಂದಿನ ಕಾಲದ ಹಾಸ್ಯವೆಂದರೆ ಕುರೂಪ ಜೀವನವು ಕುರೂಪ-ಬುದ್ಧಿಯಿಂದ ತನ್ನ ಕುರೂಪವನ್ನೇ ಕನ್ನಡಿಯಲ್ಲಿ ಕಂಡು ಪಡುವ ವಿಪರೀತ-ಹರ್ಷವು. ಕೃಷ್ಣಪಕ್ಷದ ಆಗಮನದಿಂದಲೂ, ಕರಿಕಾಲದ ಮಹಿಮೆಯಿಂದಲೂ, ವಿಕಟತೆಯೇ ನಾಯಕತ್ವವನ್ನು ವಹಿಸಿದೆ.

ನಟಿ : ಹಾಗಾದರೆ ಇಂದಿನ ನಾಟಕವಾವುದು ?

ಸೂತ್ರಧಾರ : ದ್ವಿಕುಲೋತ್ಪನ್ನನಾದ ಶಂಕರಕವಿಯೆಂಬೋರ್ವನು ಸತ್ಕುಲೋದ್ಭವನೂ, ಅವಾಚಾಲನೂ ಆಗಿದ್ದು, ಅವನು ಬಾಲಭಾವದಿಂದ ನಗೆಗಾಗಿಯೇ 'ವಿಪರ್ಯಾಸ ವಿನೋದ'ವೆಂಬ ನಾಟಕವನ್ನು ಬರೆದಿರುವನು.

ನಟ : ಇವನಾವ ನೂತನ ಕವಿಯು ? ಹೆಸರೇ ಕೇಳಿಲ್ಲವಲ್ಲ !

ಸೂತ್ರಧಾರ : ಹಾಸ್ಯರಸವೇ ಎಂದ ಮೇಲೆ ಯಾವ ಕವಿಯು ರಚಿಸಿದ ನಾಟಕ ವಾದರೇನಂತೆ ? ನಗೆಯನ್ನು ಬೇಡುವ ಮಹಾಜನರಿಗೆ ನಗೆಯೊಂದು ದೊರಕಿದರಾ ಯಿತು. ಪ್ರಿಯೇ, ಕರ್ಣಾಟಕ ಭಾಷೆಯಲ್ಲಿ ಹಾಸ್ಯರಸೋತ್ಕಟ ಮಹಾಕೃತಿಗಳನ್ನು ರಚಿಸಿದ ಹಿರಿಯ ಪೂಜ್ಯಕವಿಗಳು ಅನೇಕರಿರುವರು. ಕೆಲವರು ನಕ್ಕು ಜನರ ಹೃದಯವನ್ನು ತಿದ್ದಿದರು. ಹಲವರು ನಗೆಯಲ್ಲಿಯೇ ದುಃಖದ ದಾರುಣವನ್ನು ಬೆರೆ ಸಿದರು. ಮತ್ತೆ ಕೆಲವರು ಮೊದಲು ನಗಹಚ್ಚಿ ನಂತರ ಆವಿದ್ಧಮಾರ್ಗದತ್ತ ಒಯ್ದರು. ಅವರೆಲ್ಲರೂ ಮಹಾಪುರುಷರೇ ಸರಿ. ಆದರೆ ಪ್ರಿಯೇ, ನನಗೇಕೋ ನಗೆ ಯೆಂದರೆಯೇ ಬೇಸರ. ಪ್ರಾಚೀನ ರಂಗಸ್ಥಲದ ಲೋಕಸುಭಗವೂ ಸಂಸ್ಕಾರ ಮನೋಹರವೂ ಪರಮಾರ್ಥರಮ್ಯವೂ ಆದ ನಾಟ್ಯದ ಗರಡಿಯಲ್ಲಿ ಬೆಳೆದ ನನಗೆ ಹಾಸ್ಯರಸಪ್ರಧಾನತೆಯೇ ಮಹಾಜನರ ಮಹಾಜನತ್ವಕ್ಕೆ ಕಳಂಕಪ್ರಾಯವೆಂದಾಗಿ ಅನಿಸುತ್ತದೆ. ಆದ್ದರಿಂದ ಯಾವ ಕವಿಯೇನು ; ನಗೆಯು ನಗೆಯೇ, ಎಂಬ ಬೇಸರ ದಿಂದ ಅಪರಿಚಿತನಾದ ಈ ಕವಿಯ ವ್ಯರ್ಥವಿನೋದಿಯಾದ ಈ ನಾಟಕವನ್ನು ಆರಿಸಿದ್ದೇನೆ.

ನಟ : ಹಾಗಾದರೆ ಪ್ರಿಯರೆ, ನನಗೆ ಈ ನೇಪಥ್ಯರಚನೆಯನ್ನು ಮಾಡಿಕೊಳ್ಳಲು ತಾವು ಕೊಟ್ಟ ಆಣತಿಯ ಅರ್ಥವೇನು ? ಅಜ್ಞಳನ್ನು ಹಾಸ್ಯಕ್ಕೆ ಈಡುಮಾಡ ಬೇಕೆಂದಷ್ಟೇ ?

ಸೂತ್ರಧಾರ : ಪ್ರಿಯೇ, ಮುನಿಸುಗೊಳ್ಳದಿರು. ದೇವಿ, ವಿಕಟ ಆನಂದದ ಹುಮ್ಮಸ್ಸಿನಲ್ಲಿ ನೆರೆದ ಮಹಾಜನರು ನಿನ್ನ ಅಲೌಕಿಕ ಸೌಂದರ್ಯವನ್ನು ಕಂಡು, ಪ್ರಾಚೀನ ಬಗೆಯ ನಾಟಕವೊಂದನ್ನು ಕಾಣಲು ಉತ್ಸಾಹಗೊಂಡರೆ, ಎಷ್ಟೋ ಕೆಲಸವಾಯಿತು. ಬಹು ಕಷ್ಟಪಟ್ಟು ಕಲಿತ ಕಲೆಯನ್ನು ಇನ್ನೊಮ್ಮೆ ಮಹಾಜನರಿಗೆ ಪ್ರೀತ್ಯಾಸ್ಪದವಾಗಿ ಮಾಡಬೇಕಾಗಿದೆ.

ನಟ : ಹಾಗಾದರೆ, ಈ ಹೊಸಬಗೆಯ ನಾಟಕದ ಬಗ್ಗೆ ನನಗೆ ಅಧೈರ್ಯ ವಾಗುತ್ತದೆಯಲ್ಲ ?

ಸೂತ್ರಧಾರ : ದೇವಿ, ಅಧೈರ್ಯವೆಲ್ಲಿಂದ ಬಂತು ? ಈ ನಾಟಕದ ಕವಿಯು ಬಲು ಪುಕ್ಕನು. ನನ್ನ ಒಂದೇ ಮಾತಿಗೆ ಒಪ್ಪಿಕೊಂಡು ನನ್ನ ಅನುಭವಕ್ಕೆ ಸರಿ ಯಾಗುವಂತೆ ನಾಟಕವನ್ನು ಮಾಡಿಕೊಳ್ಳಬೇಕೆಂದು ಹೇಳಿಕೊಂಡನು. ಪಾಶ್ಚಾತ್ಯ ಭಾಷೆಗಳಲ್ಲಿ ಇರುವ ನಾಟ್ಯಪದ್ಧತಿಯೊಂದರ ಅನುಕರಣರೂಪವಾಗಿ ಈ ನಾಟಕ ವನ್ನು ಬರೆದಿದ್ದಾನೆ. ಕನ್ನಡದಲ್ಲಿ ಸ್ವತಂತ್ರ ವಿಪರ್ಯಾಸ ನಾಟಕವನ್ನು ಬರೆದೆ ನೆಂಬ ಹೆಮ್ಮೆ ಅವನಿಗಿತ್ತು. ಆದರೆ ಇಂಥ ನಾಟಕಗಳ ಮೂಲಭೂತ ಕುರೂಪ ವನ್ನು ನಾನು ಅವನಿಗೆ ಹೇಳಿದೊಡನೆ, ಅವನು ಶರಣಾಗತನಾದನು. ಇದರ ನಾಯ ಕನು ಧೀರೋದಾತ್ತನಲ್ಲ. ನಾಯಿಕೆಯು ಸುಂದರಿಯಲ್ಲ. ವಿದೂಷಕನು ಸರ್ವಾ-

ಲಂಕಾರ ವಿಭೂಷಿತನಾದ ಕೋಡಂಗಿಯು. ನಟನಟಿಯರಿಗೆ ನೇಪಥ್ಯದ ಅವಶ್ಯಕತೆ ಇಲ್ಲ. ರಂಗಶೋಭೆ, ತಳಿರು-ತೋರಣಗಳ ಕಾರಣವಿಲ್ಲ. ರಂಗಸ್ಥಳದ ಮೇಲೆ ಯಾವ ಅತಿಪ್ರಸಂಗಿಗಳು ಬಂದು ಭಂಡತನದ ಮಾತು ಆಡಿಹೋದರೂ ನಡೆಯುತ್ತದೆ. ಒಟ್ಟಿನ ಮೇಲೆ ಜೀವನದ ಬೇಸರವೇ ಹೆಪ್ಪುಗಟ್ಟಿ ನಾಟಕರೂಪವಾಗಿದೆ. ಇಂಥ ನಾಟಕಗಳು ಜೀವನದ್ವೇಷದ ಪ್ರತೀಕಗಳು. ಇವುಗಳಲ್ಲಿಯ ನಗೆಯು ಜೀವನದ್ವೇಷವನ್ನು ಕ್ಷಣಿಕವಾಗಿ ಮರೆಮಾಜುವ ಮದ್ಯದಂತೆ ಇದೆ. ಈ ಹಾಸ್ಯವು ಜೀವನೋತ್ಸಾಹವನ್ನು ತರುವದಕ್ಕೆ ಅಸಮರ್ಥವಾದದ್ದು. ಬೇಸರವನ್ನು ಮುಚ್ಚುವದಕ್ಕಾಗಿ ಬೇಸರವೇ ನಗೆಯ ಸೋಗು ಹಾಕಿದಂತಿದೆ ಈ ನಾಟಕ. ನಮ್ಮ ಕಾಲಕ್ಕೆ ಜೀವನೋತ್ಸಾಹವೇ ತನ್ನ ವಿಧವಿಧ ವಿಲಾಸಗಳನ್ನು ತಳಿರು-ತೋರಣಗಳಿಂದಲೂ, ಭಕ್ತಿ-ನಯಗಳಿಂದಲೂ, ಇಹಪರಶ್ರದ್ಧೆಯಿಂದಲೂ ಶೃಂಗಾರಗೊಳಿಸಿ ಜೀವನ ರಂಗವಾಗಿ, ನಾಟಕವಾಗಿ ಎದ್ದು ಬರುತ್ತಿತ್ತು. ರಂಗಭೂಮಿಯ ಉತ್ಸಾಹವನ್ನು ಮಹಾಜನರು ತಮ್ಮ ತಮ್ಮ ಜೀವನದಲ್ಲಿ ಎತ್ತಿಕೊಂಡು ಹೃದಯಸಂಸ್ಕಾರವನ್ನಾಗಿ ಮಾಡಿಕೊಳ್ಳುತ್ತಿದ್ದರು. ಸಮಾಜಕ್ಕೆ ಸಮಾಜವೇ ಧೀರೋದಾತ್ತ ಕನಸನ್ನು ಕಂಡು ಧನ್ಯವಾಗುತ್ತಿತ್ತು. ದೇವಿ, ಜೀವನವು ಬದಲಾಗಿದೆ. ರಂಗವೂ ಬದಲಾಗಬೇಕಾಗಿದೆ. ಆದರೆ ನನ್ನಂಥ ಕಲಾವಿದನೂ ನಿನ್ನಂಥ ಸುಂದರಿಯೂ ನಮ್ಮ ನಮ್ಮ ಕಲೆಯನ್ನೇ ಪಣಕ್ಕೆ ಹಚ್ಚಿ ಈ ಕುರೂಪ-ಜೀವನವನ್ನು ಗೆಲ್ಲಬೇಕಾಗಿದೆ. ಗೆಲ್ಲಬೇಕಾದರೆ ಮೊದಲು ಸೋಲೋಣ. ಮಹಾಜನರು ಬೇಡಿದ ಕುರೂಪವನ್ನೇ ಅವರಿಗೆ ನೀಡಿ ಅವರ ಹೃದಯವನ್ನು ಗೆಲ್ಲೋಣ. ಅವರು ಬೇಡುವಂಥ ನಾಯಕ-ನಾಯಿಕೆಯರನ್ನು ಪ್ರದರ್ಶಿಸೋಣ. ಮಹಾಜನರು ಸಾಮಾನ್ಯರೇ? ಹಾಸ್ಯವು ವಿಕಟಹಾಸ್ಯವಾದೊಡನೆ ಅವರು ಹಾಸ್ಯವನ್ನೇ ಮೂದಲಿಸಿಬಿಡುತ್ತಾರೆ. ಅದೇ ನಮ್ಮ ಮೊದಲನೆಯ ಗೆಲುವು. ಹಾಸ್ಯದ ಹಾಸ್ಯಾಸ್ಪದತ್ವವನ್ನು ಮೊದಲು ಬಯಲಿಗೆ ಎಳೆದರೆ, ಚತುರರಾದ ಮಹಾಜನರು ಮುಂದಿನ ಬಾರಿ ಚೆಂದವಾದ ರಂಗವನ್ನೂ, ಸುಂದರಿಯಾದ ನಾಯಿಕೆಯನ್ನೂ, ಧೀರನಾಯಕನನ್ನೂ, ಹೊಟ್ಟೆಹುಣ್ಣಾಗಿಸುವಂತೆ ನಗಿಸಿ ನಗೆಯನ್ನು ನಗೆಗೀಡು ಮಾಡುವ ಕೋಡಂಗಿಯನ್ನೂ ಬೇಡಲಾರರೇ ? .... ಪ್ರಿಯೇ, ಯಾವ ಸಂಕೋಚವಿಲ್ಲದೇ ಇಂದಿನ ವಿಕಟ-ನಾಟಕಕ್ಕೆ ಯೋಗ್ಯವಾದ ಕರಿಮಣಿ ಹಸಿರು ಬಳೆಗಳ ನೇಪಥ್ಯಕ್ಕೆ ಉದ್ಯುಕ್ತಳಾಗು. ಅಷ್ಟೊತ್ತಿನ ವರೆಗೆ ಮಹಾಜನರ ಸಂತೋಷಕ್ಕಾಗಿ ಒಂದು ವಿಕಟ ಗಾಯನವನ್ನು ಮಾಡುವೆನು.

ನಟಿ : ಆರ್ಯಪುತ್ರನ ಇಚ್ಛೆ.

[ ನಟಿಯು ಹೋಗುವಳು. ಸೂತ್ರಧಾರನು ' ರಾ;ಕ್ ಆ್ಯಂಡ್ ರೋಲ್ ' ಪದ್ಧತಿಯ ಹಾಡು ಹಾಡುವನು. ನಡುನಡುವೆ ಚಪ್ಪಾಳೆ ತಟ್ಟುತ್ತ ಕುಣಿಯುವನು. ]

ಸೂತ್ರಧಾರ : ಹ ಹ್ಹಾ ! ಹ ಹ್ಹ ಹ್ಹಾ !
ನಗು ನಗು ನಗು

ತೆಗೆ ಮೂವತ್ತೆರಡೂಽಽ ॥ ಅನುಪಲ್ಲ ॥

ಕಬ್ಬಿನ ಗಣಿಕಿ ಡುಬ್ಬದ ಮ್ಯಾಗ ಸಾತಿರಯ್ಯಾಽ
ಹ್ಹ ಹ್ಹ ಹ್ಹಾಽ...
ನಗು ನಗು ನಗು
ಬಿದ್ದು ಬಿದ್ದು ನಗು
ಕದ್ದು ಕದ್ದು ನಗು
ಮುಂದೀನ್ನ ನೋಡಿ, ಹಂದೀನ ನೋಡಿ ನಿನ್ನ ನೋಡಿ ನಗೋ
ಸಾತಿರಯ್ಯಾಽಽ ॥ ಸಾತಿರಾಯ್ ಸಾತಿರಾಯ್ ಸಾತಿರಯ್ಯಾ
ಕಟ್ಟುಗುಳೀ
ಹುಚ್ಚುಗುಳೀ
ಕಿಚ್ಚುಗುಳೀ ಮುಚ್ಚಲಿಕ್ಕೆ ಮೆಚ್ಚಿ ನಗೋಽ

ಹ್ಹ ಹ್ಹ ಹ್ಹಾಽ ಇತ್ಯಾದಿ . . . .

[ ಸೂತ್ರಧಾರನು ಹೋಗುವನು ]

ನಾಂದಿ : [ ರಾಗ : ಯಮುನಕಲ್ಯಾಣ....' ಪಿಯಾಕೆ ನಜರಿಯಾ ' ಎಂಬಂತೆ ]

ವಿಕಟಾಸುರ ಮರ್ದಿನಿ । ದೇವಿ ॥
ಪರಿಹಾಸಶೀಲೆ । ಅಪಹಾಸಶೂಲೆ ।

[ ಬಿಳಿಯ ಪರದೆಯು ಸರಿದು ರಂಗಸ್ಥಲವು ಗೋಚರವಾಗುವದು. ]

[ ರಂಗಸ್ಥಲವೆಂದರೆ ಸರದೇಶಪಾಂಡೆ ರಮಾಬಾಯಿಯ ದೊಡ್ಡಮನೆಯ ಪಡಸಾಲೆ. ಹತ್ತೊಂಬತ್ತು ಇಪ್ಪತ್ತು ಶತಮಾನಗಳ ಮಿಶ್ರಣದ ಪ್ರತಿರೂಪ. ಕಡಿಮೆ ಎತ್ತರದ ಗೋಡೆಗಳು, ದಪ್ಪ ಕಂಬಗಳು, ಒಂದೆಡೆಗೆ ಒಟ್ಟಿದ ಧಾನ್ಯದ ಚೀಲಗಳು, ಗೋಡೆಗಳ ಮೇಲೆ ರವಿವರ್ಮನ ಕಲಾಕೃತಿಗಳು, ಒಂದು ಕಡೆಗೆ ರೇಲ್ವೆ ಇಂಜನ್ನಿನ ಫೋಟೋ, ಮಧ್ಯದಲ್ಲಿ ರಮಾಬಾಯಿ ಹಾಗೂ ಅವಳ ಮಯತ ಯಜಮಾನರ ದೊಡ್ಡ ಫೋಟೋ-ಗಳು, ಹಳೆಯ ಬಗೆಯ ಗಡಿಯಾರ, ದಪ್ಪನೆ ಗೂಟಗಳು, ಇವೆಲ್ಲ ೧೯ನೆಯ ಶತಮಾನಕ್ಕೆ ಹೊಂದಿಕೆಯಾಗುವಂಥವು. ಆದರೆ ಟೇಬಲ್ ಕುರ್ಚಿಗಳ ಆಧುನಿಕ ರೂಪವು ಪಡಸಾಲೆಗೆ ಹೊಸ ಕಳೆಯ ಮೆರುಗನ್ನು ತಂದು, ವೈಚಿತ್ರ್ಯವನ್ನು ಇಮ್ಮಡಿಗೊಳಿಸಿವೆ. ಮೂರು ಕುರ್ಚಿಗಳು, ಒಂದು ಟೇಬಲ್ — ರಂಗಸ್ಥಳ ಚಿಕ್ಕದಾಗಿದ್ದರೆ ಇವು ಕಡಿಮೆ ಇದ್ದರೂ ನಡೆದೀತು

ತೆರೆ ಎದ್ದಾಗ ರಂಗಸ್ಥಲದಲ್ಲಿ ಯಾರೂ ಇಲ್ಲ. ಅರೆನಿಮಿಷದಲ್ಲಿ ರಮಾಬಾಯಿ ಕೈಯ್ಯಲ್ಲಿಯ ವರ್ತಮಾನಪತ್ರವೊಂದರಲ್ಲಿ ಕಣ್ಣುಗಳನ್ನು ಸೆಕ್ಕಿಸಿಕೊಂಡು ಪ್ರವೇಶಿಸುವಳು. ]

**ರಮಾಬಾಯಿ :** ಶಾರದಾ, ಶಾರದಾ, ... ಶಾರದಾ ...

ಶಾರದಾ ( ಪ್ರವೇಶಿಸಿ ) ಯಾಕವ್ವ ... ಮಾಮಿಾ.

ರಮಾಬಾಯಿ : ( ವರ್ತಮಾನಪತ್ರ ತೋರಿಸುತ್ತ ) ... ಇನ್ನೊಮ್ಮೆ ನನಗ ಓದಿ ಹೇಳವ್ವ ...

ಶಾರದಾ : ರಮಾಮಾಮಿಾ, ನಿನಗ ಇನ್ನ ಆ ವರ್ತಮಾನಪತ್ರದ್ದವ್ವ ಹುಚ್ಚು ಹಿಡೀತದ ... ಈಗ ಹತ್ತು ಸರೇ ಅದನ್ನ ಓದಿ ಹೇಳಿದೆ, ಇನ್ನೂ ನಿನಗ ಸಮಾಧಾನ ಇಲ್ಲ

ರಮಾಬಾಯಿ: ಇದೊಂದವ್ವ ಸರೇನವ್ವ ...

ಶಾರದಾ : ( ಬೇಸರದಿಂದ ಓದುತ್ತ ) "ಶ್ರೀಯುತ ಅನಂತರಾವ ಸರದೇಶಪಾಂಡೆಯವರು ಕಳೆದ ಮೂರು ವರ್ಷ ಇಂಗ್ಲಂಡದಲ್ಲಿ ಶಿಕ್ಷಣ ಹೊಂದಿ, ಬಾರ್-ಎಟ್-ಲಾ: ಪದವಿಯನ್ನು ಉತ್ತಮ ಶ್ರೇಣಿಯಲ್ಲಿ ಗಳಿಸಿದ್ದಾರೆ. ಇವರು ಕನ್ನಡಿಗರಾಗಿದ್ದು, ಧಾರವಾಡದ ಹನುಮಂತರಾವ ಸರದೇಶಪಾಂಡೆಯವರ ಹಿರಿಯ ಮಕ್ಕಳಾಗಿದ್ದಾರೆ. ಅವರು ನಿನ್ನೆ 'ಇರೀನ' ಹಡಗದಿಂದ ಮುಂಬೈಗೆ ಬಂದಿಳಿದರು. ಫೋಟೋದಲ್ಲಿ, ಮುಂಬೈಯ ಗವ್ಹರ್ನರರು ಅವರ ಪರಿಚಯ ಮಾಡಿಕೊಳ್ಳುತ್ತಿದ್ದದ್ದು ಕಂಡುಬರುತ್ತದೆ. ಅವರಿಗೆ ಕೂಡಲೇ ಮುಂಬೈಯ ಸೆಶನ್ಸಕೋರ್ಟಿನಲ್ಲಿ 'ಜಜ್' ಎಂದು ನೇಮಣೂಕ ಆಗಿರುತ್ತದೆ." ... ಆತ್ಯವ್ವ ? ... ಏನು ಇನ್ನೊಮ್ಮೆ ಓದಲ್ಯಾ ?

ರಮಾಬಾಯಿ : ಶಾರದಾ, ಇವತ್ತ ನನಗ ಬಹಳ ಸಂತೋಷ ಆಗೇದ ! ... ಏನು ಹೇಳಲಿ ? ... ಒಂದು ಕೆಲಸಾನೂ ಸುಚಾಯಿಸಲೊಲ್ಲದು ! ... ತಿರಗಾ ಮುರಗೀ ಈ ವರ್ತಮಾನಪತ್ರ ಕೈಯಾಗ ಹಿಡೀತೇನಿ, ಹುಚ್ಚೀಹಂಗ ನೋಡಿಕೋತವ್ವ ಅಡ್ಡ್ಯಾಡತೇನಿ !

ಶಾರದಾ : ಆಗದವ್ವ ಏನವ್ವಾ ? ... ಮಗಾ ಮುಂದ ಬಂದದ್ದು ನೋಡಿ ಯಾರಿಗೆ ಸಂತೋಷ ಆಗಲಿಕ್ಕಿಲ್ಲಾ ? ... ಇಷ್ಟ್ಯಾಕ ಆ ಫೋಟೋ ನೋಡತೀ ? ಇನ್ನೊಂದು ಅರ್ಧಾ ತಾಸು ತಾಸಿಗೆ ಅವರವ್ವ ಇಲ್ಲಿ ಬರತಾರಲ್ಲ !

ರಮಾಬಾಯಿ : ಅಂತಣ್ಣನ ಆ ತಾರು ಬಂದತೊಟ್ಟು, ನನ್ನ ಕೈಯಿಂದ ಒಂದು ಕೆಲಸ ಆಗವಲ್ಲವು ! ಕೆಲಸ ಎಲ್ಲಾ ಇಗ್ಗೆಲಸ ಆಗ್ಯಾವ! .... ಆಗಳೇ ಆ ಕುಡಿಯೋ ನೀರಿನ ಹಂಡೇದಾಗ ಪಡಿ ಉಪ್ಪು ಸುರುವಿ ಬಂದೆ ! .... ಯಾಕೋ ಏನೋ ? .... ಖೋಡಿ ಉಪ್ಪು ಅಕ್ಕೀ ಹಂಗ ಕಾಣಿಸಿತು.

ಶಾರದಾ : ಮೂರು ವರ್ಷದ ಮೇಲೆ ಪ್ರೀತಿಯ ಮಗನ ಭೆಟ್ಟಿ ಆಂದ ಮೇಲೆ ಹಂಗ ಆಗೋದೇ !

ರಮಾಬಾಯಿ : ಅಲ್ಲವ್ವ ಶಾರದಾ, ನನಗ ಅಂಜಿಕಿ ಏನೂ ಅಂದರ, ಅನಂತ ಬಂದು ಕೈಕಾಲು ತೊಳಕೊಂಡು .... ಅಥವಾ, ವಿಲಾಯತಿಗೆ ಹೋಗಿ ಬಂದವರು ಕಾಲು ತೊಳಕೋತಾರೊ ಇಲ್ಲೋ ?

ಶಾರದಾ : ಅಂ

ರಮಾಬಾಯಿ : ಅನಂತ ಊಟಕ್ಕ ಕೂತನಂದರ, ನಾನು ಅರವುಮರವಿನ್ಯಾಗ ಕುಡೀಲಿಕ್ಕೆ ಆ ಹಂಡೇದಾಗಿನ ನೀರು ಕೊಟ್ಟಗಿಟ್ಟೆನಲ್ಲಾ ಅಂತ ನನಗ ಗಾಬರಿ !.... ಇಕಾ ಕೈ ಹೆಂಗ ನಡೆಗತಾವ ನೋಡು .... ಹಂಗೇನಾದರೂ ಆದರ ನೆನಪು ಮಾಡು ಅಂ .... ಅಥವಾ ಕುಡೀಲಿಕ್ಕೆ ನೀರು ನೀನss ಇಡು ! .... ಮತ್ತ ಬಡಸಬೇಕಾದರ ತುಪ್ಪಾ ಅಂತ ತಿಳಿದು ಎಣ್ಣೀ ಬಡಿಸಿಗಿಡಿಸೀ ಮತ್ತ !.... ಅಥವಾ ಆ ಹಂಡೇದಾಗಿನ ನೀರು ಚೆಲ್ಲಿಬಿಡಲ್ಯೋ ?

ಶಾರದಾ : ಇರಲಿ ರಮಾಮಾವಿೞ, ಕೈಗೆ ಕಾಲಿಗೆ ಆಗತಾವ.

ರಮಾಬಾಯಿ : ಮತ್ತ ಶಾರದಾ, ನೀ ಇಲ್ಲಿ ಯಾಕ ಬಂದಿ ?

ಶಾರದಾ : ನೀನss ಕರದಿ ಅಂತ.

ರಮಾಬಾಯಿ : ಅದss, ಅಂದರ, ನಾ ಯಾಕ ಕರೆದೇ ?

ಶಾರದಾ : ಅದು ನನಗ ಹೆಂಗ ಗೊತ್ತಾಗಬೇಕು ?

ರಮಾಬಾಯಿ : ನಾ ಕರದಾಗ ನೀ ಏನು ಮಾಡತಿದ್ದೀ ?

ಶಾರದಾ : ನಾ ಹೆರಳು ಹಕ್ಕೋತಿದ್ದೆ.

ರಮಾಬಾಯಿ : ಹಾಂ... ಹಾಂ... ಅದಕ್ಕss ನಾ ಕರೆದದ್ದು.

ಶಾರದಾ : ಮಾವಿೞ, ಇವತ್ತ ನೀ ಹಿಂಗ್ಯಾಕ ಮಾಡಲಿಕ್ಕೆ ಹತ್ತೀ ?

ರಮಾಬಾಯಿ : ಯಾಕss ಖೋಡಿ ; ಅಂತಣ್ಣ ಬರತಾನss ಅಂದರ ನಿನಗ ಏನೂ ಅನಿಸsವಲ್ಲದೇನು ? .... ತಿರಿಗಿ ಕೇಳಿದರ ನಿನ್ನ ಯಜಮಾನ ಆಗೋಆತ !

ಶಾರದಾ : ಬಿಡು ಮಾವಿೞ, ನಿನಗ ಹುಚ್ಚು ಹಿಡದsದ. ವಿಲಾಯತಿಗೆ ಹೋಗಿ ಬಂದಾತ ಅನಂತಮಾಮಾ ! .... ನನ್ನ ಏನು ಮಾಡಿಕೊಂಡಾನು ? .... ಇನ್ನೂ ಅಲ್ಲಿಂದನss ಒಬ್ಬ ಲೇಡಿನ್ನ ತಂದಿರದಿದ್ದರ ನಿನ್ನ ನಸೀಬಾ !

ರಮಾಬಾಯಿ : ಛೀ ಹುಚ್ಚಿ. ನಾ ಎಂಥಾಕಿ ಹುಲೀ ಅಂಥಾಕಿ ಇದ್ದೇನಿ. ನನ್ನ ಕಮಾಯಿಾ ನೋಡಿಬಿಡು. ನನ್ನ ಪ್ರೀತಿಯ ಅತಿಗಿ ತುಂಗಕ್ಕ ಸಾಯ್ತ ಹೇಳಿ ಹೋಗ್ಯಾಳ: ನನ್ನ ಮಗಳನ್ನ ನಿನ್ನ ಇಬ್ಬರು ಮಕ್ಕಳ ಪೈಕಿ ಯಾರಿಗಾದರೂ ತೊಗೊಳ್ಳವಾ ಅಂತ. ನನ್ನ ಕಡೆಯಿಂದ ವಚನಾ ತೊಗೊಂಡಾಳ. ವಾಶ್ಯಾ ಅಂತೂ ಉಡಾಳ ಆಗಿ ಮನಿ ಬಿಟ್ಟು ಓಡಿಹೋದ. ಅವನss ಇದ್ದರ, ಅವನ ಕೂಡ ನಿನ್ನ ಲಗ್ನ ಆಗಿ ಹೋಗತಿತ್ತು. ಖೋಡಿ, ಅದರ ನಶೀಬ ಇಲ್ಲ ... ಇನ್ನ ಅನಂತನss ನನ್ನ ಮಾತು ನಡೆಸಬೇಕು.

ಶಾರದಾ : ಮಾವಿೞ, ವಸಂತಮಾಮಾಂದು ಇತ್ತಿತ್ತಲಾಗ ಏನಾದರೂ ಸುದ್ದಿ ?

ರಮಾಬಾಯಿ : ಆ ಖೋಡೀ ಮಾತು ಎತ್ತಬ್ಯಾಡಾ ! ... ಯಾವಾಗ ನಾಕು ವರ್ಷದ ಹಿಂದ ನನ್ನ ಕೈಯ್ಯಾಗಿನ ಬಂಗಾರದ ಪಾಟ್ಲಿ ಕದ್ದುಕೊಂಡು ಓಡಿಹೋದಾ, ಇಂದಿಗೂ ಸುದ್ದಿ ಇಲ್ಲ. ಒಂದು ಪತ್ರ ಸುದ್ಧಾ ಇಲ್ಲ. ಅವನ ಹೊಟ್ಟಿಬ್ಯಾನೀ ಹಚ್ಚಿ ಕೊಂಡು, ಇವರೂ ನನ್ನ ಕೈಬಿಟ್ಟು ಹೋದರು ! ...ನೀಚ... ಅವನ ನೆನಪು ಸುದ್ಧಾ

ನನ್ನೆದುರು ತಗೀಬ್ಯಾಡಾ ... !

ಶಾರದಾ : ಆದರ ಮಾಮಿೂ, ಅನಂತಮಾಮಾ ಬಂದನಂದರ, ನಿನಗ ವಸಂತ ನದೂ ನೆನಪು ಆಗಲಿಕ್ಕೇಬೇಕು ! ... ಒಬ್ಬರ ತದ್ರೂಪ ಇನ್ನೊಬ್ಬ. ಅವಳೀ. ಜವಳೀಕಿಂತ ಹೆಚ್ಚು ! ... ಮನೀ ಮಂದಿ ಸುದ್ಧಾ ಒಬ್ಬರನ ಕಂಡು ಇನ್ನೊಬ್ಬರು ಅಂತ ತಿಳುಕೋತಿದ್ದರಲ್ಲಽ ?

ರಮಾಬಾಯಿ : ( ವರ್ತಮಾನಪತ್ರ ನೋಡುತ್ತ ) ... ವಿಲಾಯತ್ಯಾಗ ಅಂತಣ್ಣ ಮೀಶಿ ಬಿಟ್ಟುಕೊಂಡು ಬಂದಾನ. ಈಗ ಮೊದಲಿನಕಿಂತ ಎಷ್ಟೋ ಬದಲು ಕಾಣ ತಾನ !... ಇರಲಿ ನಡಿ. ನಿನಗ ಹೆರಳು ಹಾಕತೇನಿ ... ನೀನಷ್ಟು ಜಾಂಬಳೀ ಪತ್ತಲಾ ಉಟುಗೊ .... ಮಾರಿಗೆ ಅಷ್ಟು ಬೂದಿ ಬಡಕೋ .... ತುಪ್ಪಾ ಉಪ್ಪು ನೀನ್ಹ ಬಡಸು ಇವತ್ತ ... ಮತ್ತ ಮರೆತು ಆ ಹಂಡೇದಾಗಿನ ನೀರು ಕುಡೀಲಿಕ್ಕೆ ಇಟ್ಟಗಿಟ್ಟೀ ! ...

[ ತಿಮ್ಮ ಪ್ರವೇಶಿಸಿ ಒಳಗೆ ಹೊರಡುವನು. ]

ಯಾಕೋ ತಿಮ್ಮ .... ಸ್ಟೇಶನ್ನಿಗೆ ಹೋಗಲಿಲ್ಲೇನು ?

ತಿಮ್ಮ : ಬಾಯರ, ಗಾಡಿ ತಾಸು ಲೇಟ್ ಐತ್ರಿ... ಅಲ್ಲೇ ಕುಂತು ಏನ್ಮಾಡೂ ದ್ಯೆತಿ ಅಂದು ಹೊಳ್ಳಿ ಬಂದಿನ್ರಿ.

ರಮಾಬಾಯಿ: ಇಕಾ, ಇಲ್ಲಿ ಎರಡು ಕಾಗದದ ಚೂರು ಬಿಟ್ಟೀ. ಇವನ್ನ ಯಾರು ತಗೀಬೇಕು ? ಈ ಖುರ್ಚೀದ ಬಲಗ್ಗೆ ಮುಂದಿನ ತುದೀಮ್ಯಾಲ ಬಟ್ಟೆನಷ್ಟು ಧೂಳ ಹಂಗಽ ಉಳದದಽದ. ಇದನ್ನು ನೋಡಿ ಅಂತ ... ಅಲ್ಲಲ್ಲ, ಜಜ್ಜ್ ಸಾಹೇಬರು ಏನು ಅಂದಾರು !

ತಿಮ್ಮ : ( ತೆಗೆಯುತ್ತ ) ಮತ್ತ ಹೋದ ಸರೆ, ಅಂತಣ್ಣೋರು ಭಾಳ್ ಅರಿಷ್ಟರೀ ಸಾಹೇಬರು ಅಂತ ಅಂದಿದ್ದಿರ್ರೀ ನೀವು ?

ಶಾರದಾ : ಭಾಳ ಅರಿಷ್ಟ ಅಲ್ಲೋ ! .... ಬ್ಯಾರಿಸಟ್ರೀ ಸಾಹೇಬರು.

ರಮಾಬಾಯಿ : ( ಸಿಟ್ಟಿನಿಂದ ) ಬಾ ಶಾರದಾ ; ಈ ಮೂರ್ಖಗ ಎಷ್ಟು ಹೇಳಿ ಏನು ? ... ಹೆರಳು ಹಕ್ಕೋ ಬಾ ...

[ ನಿಷ್ಕ್ರಮ: ಎಡಕ್ಕೆ. ]

ತಿಮ್ಮ : ( ಕುರ್ಚಿ ಜಾಡಿಸುತ್ತ ) ಅಲಲಲಲ ... ಬರತಾನಪಾ ಜಜ್ ಸಾಹೇಬ ... ನನ್ನ ತೆಲಿ ಜಿಜ್ಜೋ ಸಾಹೇಬ ! ಕೋಟ ತೆಗಿಯಾಕ ಹೋದರ ಗುದ್ದ ತಾನು. ಬೂಟ ತೆಗಿಯ ಹೋದರ ಒದೀತಾನು. ಒಂದು ಮಾತು ಹೆಚ್ಚು ಆಗ ಬಾರ್ದ ; ಒಂದು ಮಾತು ಕಮ್ ಆಗಬಾರ್ದ. ಏನಿಲ್ದ ಇಷ್ಟು ಉರದಾಡೂಆತ ಇಲಾಯತಿಗೆ ಹೋಗಿ ಬಂದು ಏನೇನು ಮಾಡತಾನೋ ? ಮೂರು ನಾಕು ವರ್ಷ ಆಟ್ಟ ಆರಾಮ ಇದ್ದೆ ... ಮತ್ತ ಬರತಾನಲ್ಲ ಜಿಕೇರೀಸಾಹೇಬ ! .... ಇರಲಿ.

ಬ್ಯಾಯರ ಸಂತೋಸಾ ನೋಡಿ ನಾವೂ ಹಿಗ್ಗಬೇಕು .... ನಾನೂ ಹಿಗ್ಗತಿದ್ದೆ .... ಇವನ ತಮ್ಮ ವಸಂತರಾಯ ಬಂದಿದ್ದರ ! .... ಅನಬೇಕು ರಾಜಮನಶ್ಯಾ ಅಂತ ವಸಂತರಾಯಗs! ಒಂದಾರ ಜಿಕೇರಿ ?.... ಕೇಳಬಾರ್ದು. ತಾ ಒಂದು ಚುಟ್ಟಾ ಸೇದ ತಿದ್ನೊ ಇಲ್ಲೋ, ತಿಮ್ಯಾ ಹಿಡೀಲೆ ಚುಟ್ಟಾ, ಅಂತ ನನಗೂ ಒಂದು ಒಗದ್ನ ! .... ಅಣ್ಣಾ ತಮ್ಮಾ ನೋಡಲಿಕ್ಕೆ ಒಬ್ಬರ ಹಾಂಗ ಒಬ್ಬರು. ಅರವಿ ಅಂಚಡೀ ತೊಟಿ ಕೊಂಬೋದೂ ಒಬ್ಬರ ಹಂಗ ಒಬ್ಬರು. ಮನಸು ಮಾತ್ರ, ಒಂದು ಮುಗಿಲು ಒಂದು ಬಾವಿ. ಎಲ್ಲಾ ವಿಚಿತ್ರ .... ( ಕಾಗದ ಎತ್ತಿ ಹೊರಟಿರುವನು. ಅಷ್ಟರಲ್ಲಿ ... )

[ ಪ್ರವೇಶ : ವಸಂತ. ಮೀಶೆ ಇಲ್ಲ ]

ವಸಂತ : ( ಕಳ್ಳದನಿಯಲ್ಲಿ ) ತಿಮ್ಮಾ .... ತಿಮ್ಮಾ ....

ತಿಮ್ಮ : ( ನೋಡಿ, ಕೈಯಲ್ಲಿಯ ಸೂಟ್‌ಕೇಸು ಕಸಿದುಕೊಂಡು ) ಹ .... ಹ .... ಹ .... ಅನಂತ ಭಾಳ ಅರಿಷ್ಟರೀ ಸಾಹೇಬರು .... ಬಾಯರs .... ಬಾಯರs .... ( ಒಳಗೆ ಓಡುವನು. )

ವಸಂತ : ( ಸ್ವಗತ ) ಎಲಾ ! .... ನಾನು ಅನಂತs ಅಂತ ತಿಮ್ಮ ತಿಳಕೊಂಡ ನಲ್ಲಾ .... ಹಂಗಾದರ ಅವ್ವನೂ ನಾನು ಅನಂತನs ಅಂತ ತಿಳಕೊಂಡರ, ಒಂದು ರೀತಿ ಅನುಕೂಲನೇ ಆತು ! .... ಶಾರದಾನಾದರೂ ನಾನು ವಸಂತ ಅಂತ ಗುರ್ತು ಹಿಡಿಯುವಳೋ, ನೋಡಬೇಕು ! .... ಇರಲಿ ಯಾರೂ ಗುರ್ತು ಹಿಡಿಯದಿದ್ದರ ನಾನೇ ಜಜ್‌ಸಾಹೇಬರು ಆಗಿಬಿಟ್ಟರೆ ಆಯಿತು. ಶಾರದಾಂದೂ ಭೆಟ್ಟಿ ಆಗ್ತದ; ನನ್ನ ಕೆಲಸಾನೂ ಕೈಗೂಡತದ.

[ ಪ್ರವೇಶ : ರಮಾಬಾಯಿ, ಶಾರದಾ, ತಿಮ್ಮ .. ]

ರಮಾಬಾಯಿ : ಬರ್ರಿ... ಬರ್ರಿ... ಬ್ಯಾರಿಸ್ಟರ್ ಜಜ್‌ಸಾಹೇಬರು ... ಅನಂತಾ, ಅಂತಣ್ಣಾ ... ಎಷ್ಟು ದಿನಾ ನನ್ನ ಒಂಟಿ ಬಿಟ್ಟು ಹೋದ್ಯೊ .., ( ಅಪ್ಪಿಗೊಳ್ಳುತ್ತ ) ಆತ್ಯು ಬಿಡು, ಇಷ್ಟು ಅನುಭೋಗಿಸಿದ್ದಕ್ಕೂ... ಒಂದು ಚೀಜ ಆತು !... ಶಾರದಾ, ನಮಸ್ಕಾರ ಮಾಡs ಖೋಡಿ ! ( ಶಾರದಾ ನಮಸ್ಕರಿಸುವಳು )

ವಸಂತ : ವಿಲಾಯತ್ಯಾಗ ನಮಸ್ಕಾರ ಮಾಡೋದು ಹಂಗಲ್ಲ ಶಾರದಾ. ( ಕೈ ಚಾಚುವನು. )

ರಮಾಬಾಯಿ : ( ನಾಚಿ ನಿಂತ ಶಾರದೆಯ ಕೈ ಎಳೆದು ) ಅಯ್ಯ, ನಾಚತೀ ಯಾಕ ? ನಾಳೆ ನಿನ್ನ ಯಜಮಾನ ಆಗೋಅತ ( ಕೈಕೂಡಿಸಿ ) ಇದೇ ಖರೇ ಆಗಲೆಪ್ಪಾ ಅನಂತಾ.

ವಸಂತ : ಅವ್ವಾ, ನಿನ್ನ ಇಚ್ಛಾ ಇಷ್ಟು ಅದ ಅಂದಮ್ಯಾಲೆ, ನಾನು ಯಾಕ ಒಲ್ಲೆ ಅನ್ನಲಿ ?

ರಮಾಬಾಯಿ : ಅಯ್ಯ, ವಿಲಾಯತಿಗೆ ಹೋಗಿ ಬಂದು ಎಷ್ಟು ಒಳ್ಳೆಯವ ಆಗೀಯೋ ? ... ಮೊದಲು ಈಕಿನ್ನ ಲಗ್ನ ಮಾಡಿಕೋ ಅಂದರ ಎಷ್ಟು ಅರ್ಭಾಟಾ ಮಾಡತಿದ್ದಿ ?

ವಸಂತ : ಇರಲಿ ; ತಿಮ್ಮಾ, ನನಗಿಷ್ಟು ನೀರು ಕೊಡೋ ಕುಡೀಲಿಕ್ಕೆ.

ರಮಾಬಾಯಿ : ( ಗಾಬರಿಯಾಗಿ ) .... ತಿಮ್ಮಾ, ಹಂಡೆ ...

ತಿಮ್ಮ : ( ಏನೂ ತಿಳಿಯದೆ ) ... ಹಂಡೇವಾಗಿಂದs ತರತೇನ್ರಿ ಬಾಯರ.

ರಮಾಬಾಯಿ : ಥೂ ಖೋಡಿ, ... ನೀನs ಹೋಗs ಶಾರದಾ.

[ ನಿಷ್ಕ್ರಮ : ಬಲಗಡೆ, ಶಾರದಾ ]

ತಿಮ್ಮಾ, ಒಳಗ ಹೋಗಿ ಅಡಗೀ ಸುಬ್ಬಕ್ಕಗ ಚಹಾಕ್ಕ ಇಡಲಿಕ್ಕೆಹೇಳು ... ( ತಿಮ್ಮ ಹೊರಡುವನು ) ... ಮತ್ತ, ಚಹಾಕ್ಕ ಆ ಹಂಡೇದಾಗಿನ ನೀರು ...

ತಿಮ್ಮ : ತೊಗೊಡ್ರಿ ಅಂತ ಹೇಳತೇನ್ರಿ.

ರಮಾಬಾಯಿ : ಖೋಡೀ, ತೊಗೋಬ್ಯಾಡಾ ಅಂತ ಹೇಳು.

[ ನಿಷ್ಕ್ರಮ : ತಿಮ್ಮ ]

ವಸಂತ : ಅವ್ವಾ, ಎಲ್ಲಾರೂ ಅರಾಮ ಇದ್ದೀರಾ ?

ರಮಾಬಾಯಿ : ಅಂತಣ್ಣಾ, ಎಲ್ಲಾರೂ ಅಂದರ ಯಾರಪಾ, ( ಸದ್ಗದಿತಳಾಗಿ ) ನೀನs ಒಬ್ಬಾವಾ ನಮಗ.

ವಸಂತ : ಮತ್ತ ವಸಂತನದು ಏನಾದರೂ ಸುದ್ದಿ ?

ರಮಾಬಾಯಿ : ಛೇ, ಆ ನೀಚನ ಹೆಸರು ತಗೀಬ್ಯಾಡಾ. ನನ್ನ ಹೊಟ್ಟೀಲೆ ಹುಟ್ಯಾನs ಅಂತ ಅವಗ ನನ್ನ ಮಗಾ ಅನಬೇಕು ...

ವಸಂತ: ಯಾಕs ಅವ್ವಾ, ಅವ ಮನೀ ಬಿಟ್ಟು ಹೋದ ಅಂತ ತೀರ ನೀಚನs ಆದನೇನು ?

ರಮಾಬಾಯಿ : ಹೋಗತs ನನ್ನ ಎಡಗೈ ಪಾಟ್ಲಿ ಕದೀಬೇಕೇನೋ ಅಂತಣ್ಣ ? ... ಮುಂದ ಅವನ ಹೊಟ್ಟೆಬ್ಯಾನಿಲೇ ಇವರು ಸತ್ತರು, ಆರು ತಿಂಗಳದಾಗs ! ... ಆ ಪಾಟ್ಲಿಗೆ ಹೊಟ್ಟೆಬ್ಯಾನೀ ಹಚ್ಚಿಕೊಂಡು ನಾನೂ ಒಂದು ದಿನಾ ... ಸಾಯತೇನಿ ! ...

ವಸಂತ : ಅವ್ವಾ, ಅವ ಹೋಗೋದಕ್ಕ ಅಪ್ಪ ಸಾಯೋದಕ್ಕ ಇಲ್ಲದ ಸಂಬಂಧ ಹಚ್ಚಬ್ಯಾಡಾ.

ರಮಾಬಾಯಿ : ಅವ್ವಯ್ಯಾ, ತಮ್ಮನದಶಿಂದ ಎಷ್ಟು ಕಕಲಾತಿನೋ ? .... ವಿಲಾಯತಿಗೆ ಹೋಗಿ ಬಂದು ಬಹಳ ಬದಲು ಆದಿ ಬಿಡಪಾ ! ಮೊದಲು ತಮ್ಮನ್ನ ಕಂಡರ ಹೊಡೀತಿನಿ, ಬಡೀತೀನಿ ಅಂತಿದ್ದಿ ! (ಶಾರದಾ ನೀರಿನೊಡನೆ ಪ್ರವೇಶಿಸಿ, ವಸಂತನ ಬಳಿಗೆ ಕೊಡಲು ಹೋಗುವಳು) .... ಶಾರದಾ, ಆ ಹಂಡೆ .... ಆ ತಂಬಿಗಿ ತಾ ನನಗ ....

(ಇಸಿದುಕೊಂಡು ಸ್ವಲ್ಪ ಕುಡಿದು ಸಮಾಧಾನಗೊಂಡು) ತೊಗೊಳ್ಳಪಾ .... ಶಾರದಾ, ಚಹಾ ಫರಾಳ ಆಗೇದೇನು ನೋಡು.

ವಸಂತ : ಅವ್ವಾ, ನಾ ಫರಾಳ ಒಲ್ಲೆ! ಹಸಿವೇನೂ ಇಲ್ಲ. ಬರೇ ಚಹಾ ಮಾತ್ರ ತೊಗೋತೀನಿ.

[ನಿಷ್ಕ್ರಮ: ಶಾರದಾ]

ರಮಾಬಾಯಿ : ಮತ್ತ, ನಿನಗ ಈ ಎಡಗಡೆ ಕೋಣಿ ಸುಜ್ಜು ಮಾಡಿ ಇಟ್ಟದಪಾ!

ವಸಂತ : ಯಾಕ, ಅದು ವಸಂತನ ಕೋಣಿ ಅಲ್ಲೇನು? .... ನನಗ ನನ್ನ ಕೋಣೇನ ಬೇಕು.

ರಮಾಬಾಯಿ : ವಸಂತನ ಕೋಣೆಯ ಕಿಡಿಕ್ಯಾಗಿಂದ ತೋಟ ಕಾಣಿಸ್ತದ, ಅಂತ ಇಲ್ಲೇ ಕಾಟ ಹಾಕಿಸಿದ್ದೆ .... ಈಗರ ಏನಾತು? ನಿನಗ ನಿನ್ನ ಬಲಕ್ಕಿನ ಕೋಣೇನ ಸಜ್ಜು ಮಾಡಿ ಬರತೇನಿ, ಎಷ್ಟೊತ್ತು. ತಿಮ್ಮಾ. ಸಾಹೇಬರ ಬೂಟು ಉಚ್ಚಬಾರೋ

ಮ: ರಮಾ ಎಡಕ್ಕೆ]

ವಸಂತ : (ಸ್ವಗತ) .... ಅಂತೂ ನಾನು ವಸಂತಾ ಅನ್ನೋದು ಯಾರಿಗೂ ತಿಳೀಲಿಲ್ಲ ಅಂಥಂಗ ಆತು!.... ಅವ್ವನದೂ ನನ್ನದಸಿಂದ ಕೆಟ್ಟ ಅಭಿಪ್ರಾಯ ಇನ್ನೂ ಹೋಗಿಲ್ಲ. ಆ ತನಕ ನಾನು ಅನಂತನೇ ಆಗಿಬಿಟ್ಟರ ಆಯಿತು. ಶಾರದಾನ ಕಡೆಯಿಂದ ಲಗ್ನದ ವಚನಾ ಒಂದು ತೊಗೊಂಡರೆ ಅರ್ಧಾ ಕೆಲಸ ಆದಂತಾಯಿತು

[ಪ್ರವೇಶ: ತಿಮ್ಮ ಬಲಗಡೆ]

ತಿಮ್ಮ : ರಾವಸಾಬ್ ಬೂಟ ಉಚ್ಚಲ್ರೇ ?

ವಸಂತ : (ಕುರ್ಚಿಯ ಮೇಲೆ ಕೂಡುತ್ತಾ) ... ನಾನು ಉಚಿಗೋತೀನಿ ಏಳು ... ಯಾಕೋ ತಿಮ್ಮ, ನನ್ನ ನೋಡಿ ಅಂಜತಿಯೋ ಏನೊ? ... ದೂರ ಏನು ನಿಂತೀ ?... ಬೆವತೀಯೇನು ? .... ಇತ್ತತ್ತ ಬಾರೋ ! ... ಬೀಡಿ ಸೇದತೀಯೇನು ?

ತಿಮ್ಮ : ರಾವಸಾಬ್

ವಸಂತ : ತೊಗೊ ತೊಗೊ ... ( ತೆಗೆದು ಕೊಡುತ್ತ ) ಎಲಾ, ಹಿಂಗ್ಯಾಕ ಘಾಬರಿ ಆಗತೀ ? ... ಯಾಕೋ ... ಹೇಳೋ !

ತಿಮ್ಮ : ಇಲಾಯತ್ಯಾಗೂ ನಮ್ಮ 'ಸಿನ್ನರಭಾಪ' ಬೀಡೀನ ಇರತಾವೇನ್ರಿ ?

ವಸಂತ : (ನಗುತ್ತ) ವಿಲಾಯತ್ಯಾಗ ನಮ್ಮಂಥಾ 'ಸಿನರ' ಜನರಿಗೆ ಬೇಕಲ್ಲಪಾ ಬೀಡಿ.

ತಿಮ್ಮ : ರಾವಸಾಬ್, ... ಇಲಾಯತಿಗೆ ಹೋಗಿ ನೀವು ಬಾಳ ಬದಲಾಗಿ ಬಂದಿರಿ ಬಿಡ್ರಿ .... ಅದಕ್ಕ ಅಂತಿನಿ .... ಮುಂಬೈಯಿಂದ ಧಾರೋಡಕ್ಕ ಬರುವಕ್ಕ

ಟರಾಗsು ಇಷ್ಟು ಬದಲು ಆಗೇತಿ .... ಅಂದವ್ಯಾಗ ವಿಲಾಯತಿಗೆ ಹೋಗಿ ಬಂದರ ಏಟು ಆದೀತರಿ ?

ವಸಂತ : ಮುಂಬಯಿಯಿಂದ ಧಾರವಾಡ ? .... ಏನಂತಿಯೋ ?

ತಿಮ್ಮ : ನಿನ್ನೆ ಆ ವರ್ತಮಾಂಪತ್ತರದಾಗ ನಿಂ ಫೊಟೋ ಮೂಡಿಸಿದ್ದಿರ್ರೀ?... ಗವನರಸಾಯಬ್ರ ಜತಿ ನಿಂತಿದ್ರಿ.

ವಸಂತ : ಹೌದು ... ಹೌದು ... ! ಮುಂದ ... ?

ತಿಮ್ಮ : ಮತ್ತ ಆ ಫೋಟೋದಾಗ ನಿಮಗ ನನ್ಹಂತಾ ಜೊಂಡಮಿಶಿ ಮೂಡಿದ್ದುವಲ್ರೀ !

ವಸಂತ : ಆಂ ... ಆಂ ... ಽಽ (ಗೊಂದಲಕ್ಕಿಟ್ಟುಕೊಂಡಾಗ)

[ಪ್ರವೇಶ : ಶಾರದಾ]

ಶಾರದಾ : ತಿಮ್ಮಾ , ನಡುಮನ್ಯಾಗಿನ ಕನ್ನಡಿ, ಸಾಹೇಬರ ಕೋಣೆಯೊಳಗ ಇಟ್ಟು ಬಾ, ಹೋಗು; ಮತ್ತ ಕಾಟ್ ಒಂದು ಬಲಗಡೇ ಕೋಣೆಗೆ ಒಯ್ಯಿ ! ... ಚಹಾ ಇಲ್ಲಿಯೇ ತೊಗೋತೀರೋ, ಕೋಣೆ-ಯೊಳಗೊ ? ...

[ನಿಷ್ಕ್ರಮ : ತಿಮ್ಮ ಬಲಗಡೆಗೆ]

ವಸಂತ : ಎಲ್ಲಿಯಾದರೇನು? ... ನಮಗ ನಿನ್ನ ಕೈ ಚಹಾ ಆದರ ಆತ್ಯು.

ಶಾರದಾ : ನನ್ನ ಕೈ ಯಾಕ ? ನಾಯೇನು ವಿಲಾಯತೀ ಮಡ್ಡಮ್ಮ ಽ ?

ವಸಂತ : ಛೇ, ನೀ ಧಾರವಾಡದ ಧಡ್ಡಮ್ಮ ! ಧಡೇ ಬೆಲ್ಲದಕಿಂತಾ ...

ಶಾರದಾ : ಛೀ,

ವಸಂತ : (ಗಡಿಬಿಡಿಯಲ್ಲಿ ತಲೆಯ ಮೇಲಿನ ಟೊಪ್ಪಿಗೆಯನ್ನು ಕೈಯಲ್ಲಿ ತಿರುವುತ ಅಲ್ಲಽ ಶಾರದಾ, ನನ್ನ ಕೂಡ ನಿನ್ನ ಲಗ್ನಕ್ಕ ನಿನ್ನ ಒಪ್ಪಿಗಿ ... ಅಂದರೇನು ?... ನಿನ್ನ ಕೂಡ ನನ್ನ ಲಗ್ನಕ್ಕ ನನ್ನ ... ಅಂದರ ನಿನ್ನ ಒಪ್ಪಿಗಿ ... ಅಂದರ ನನ್ನದೂ ನಿನ್ನದೂ ಲಗ್ನಕ್ಕ ನಿನ್ನ ... ಅಂದರ ನನ್ನ ಒಪ್ಪಿಗಿ ಅಂದರೇನು ? ಒಟ್ಟಿನ ಮೇಲೆ, ನಮ್ಮಿಬ್ಬರ ಲಗ್ನಕ್ಕ, ನನ್ನ ... ಅಲ್ಲಲ್ಲ, ನಿನ್ನ ಒಪ್ಪಿಗಿ ಅದನೋ ಇಲ್ಲೊ ?

ಶಾರದಾ : ಒಪ್ಪಿಗ್ಯೊ ? ಏನು ಟೊಪ್ಪಿಗ್ಯೊ ?

ವಸಂತ : (ಗೊಂದಲದಿಂದ) ... ಆಂ ... ಅಂದರ ಟೊಪ್ಪಿಗಿ. (ತಲೆಯ ಮೇಲೆ ಹಾಕುತ್ತ) ಅಲ್ಲಲ್ಲ ನಿನ್ನ ಒಪ್ಪಿಗಿ ...

ಶಾರದಾ : ಈ ಗಂಡಸರ ಮನಸ್ಸು· ಅಂದರ, ಅವರು ಹೊತ್ತ ಮೀಶೀಕಿಂತಾ ಚಂಚಲ ಅನ್ನೋದು ಸುಳ್ಳಲ್ಲ ! ಇವತ್ತ ಇತ್ತು, ನಾಳೆ ಇಲ್ಲ ! ... ಮುಂಬೈಯಾಗ ಇತ್ತು, ಧಾರವಾಡ ಅನ್ನೋ ಅಷ್ಟರಾಗ ಮಟಾಮಾಯ ! ...

ವಸಂತ : ಹ ... ಹ ... ನೋಡು ಶಾರದಾ, ಆ ಗವ್ಹರ್ನರಸಾಹೇಬರು ಮೀಶೀ ಮೇಲೆ ಪ್ರೀತಿ ಬಹಳಾ ... ಅಲ್ಲಲ್ಲ ... ಅಂದ್ರ ನೋಡು ... ನಾನು ಜಜ್

ಆದೆನಲ್ಲಾ... ಜಜ್ ಜನರು ತಲೆಯ ಮೇಲೆ ಸುಳ್ಳು ಕೂದಲಾ ಇಟಗೊಂಡಿರತಾರ ನೋಡು ... ಅದರ ಪೈಕೀನs ಆ ಮೀಶಿ ... ಅದು ಜಜ್ಜರ ಹುದ್ದೇದ ಲಕ್ಷಣ... ಏನಾತ್ಯೇಳು. ಮೀಶಿ ಇದ್ದರೇನು, ಮೀಶಿ ಇರದಿದ್ದರೇನು, ನಾನು ಇದ್ದೇನಲ್ಲಾ !

ಶಾರದಾ : ನಿಮಕಿಂತ ನಿಮ್ಮ ಫೋಟೋನ ಚಲೋ ಇತ್ತು.

ವಸಂತ : ಎಲಾ ! ಹಂಗಾರ, ನನ್ನ ಬಿಟ್ಟು ನನ್ನ ಫೋಟೋದ ಕೂಡ ಲಗ್ನಾ ಮಾಡಿಕೋತಿಯೇನು ? .. ಆತ್ಯು, ನಿನಗ ಛಲೋ ಅನಿಸಿದರ, ನಾನs ಮೀಶಿ ಇದ್ದ ಜಜ್‌ನೇ ಆಗತೇನಿ.

ಶಾರದಾ : ಅಲ್ರೀ, ವಿಲಾಯತಿಗೆ ಹೋಗೂಕಿಂತ ಮುಂಚೆ ನನ್ನ ಕಂಡರ ಕೆಂಡಾ ಕಾರತಿದ್ದಿರೆಲಾ ...

ವಸಂತ : ಛೇ, ಛೇ, ಅವೆಲ್ಲಾ ಹೃದಯವೇದಿಕೆಯ ಮೇಲೆ ಸುಡುತ್ತಿದ್ದ ಪ್ರೇಮಾಗ್ನಿಯ ಕಿಡಿಗಳು ! :.. ನಿನಗ ಕೆಂಡದಂಗ ಕಂಡಿರಬೇಕು.

ಶಾರದಾ : ಸುಮ್ಮನೆ ಅದರ ಮ್ಯಾಲs ಚಹಾ ಎಸರ ಇಡತಿದ್ದೆನಲ್ಲಾ !

ವಸಂತ : ಪ್ರಿಯೇ, ನನ್ನ ಭಾವನೆಗಳನ್ನು ಹಾಸ್ಯಮಾಡಬೇಡ.

ಶಾರದಾ : ಸಾಕು, ನಿಮ್ಮ ಬಣ್ಣದ ಮಾತು ! ಆವಾಗ ನೀವು ಆಡಿದ ಒಂದೊಂದು ಮಾತೂ ನನ್ನ ಎದೆಯೊಳಗ ನಟ್ಟಂತೆ ಅವ. ಅವನ್ನ ನಾ ಹ್ಯಾಂಗ ಮರೀಲಿ? ... ಇನ್ನೂ ವಸಂತಮಾಮಾನs ನನ್ನ ಕೂಡ ಒಂದೆರಡು ಒಳ್ಳೆಯ ಮಾತು ಆಡತಿದ್ದರು.

ವಸಂತ : ಆಂ ... ಶಾರದಾ, ಅಂತೂ ನಿನಗ ವಸಂತನs ಒಳ್ಳೆಯವ ಅಂತ ಅನಿಸ್ತದs...ಏನೂಅಡ್ಡಿ ಇಲ್ಲ! ನಾನೂ ನಿನ್ನಕೂಡ ವಸಂತನಂತೇ, ನಡದರ ಆಯಿ ತಲ್ಲ! ನಾನೇ ವಸಂತ ಅಂತ ತಿಳಕೊಂಡಬಿಡು ... ಇಗೋ ಪ್ರತಿಜ್ಞೆಮಾಡುವೆ. ಇಂದಿನಿಂದ ನಾನು ವಸಂತನೇ ಆಗುವೆನು ... ಶಾರದಾ, ಹಾಗಾದರೆ, ನಾನು ನಿನ್ನನ್ನೇ ಮದುವೆ ಆಗುವೆನೆಂದು ವಚನ ಕೊಡು !

ಶಾರದಾ : (ಮೌನ)

ವಸಂತ : ನಿನಗೆ ನಾಚಿಕೆಯಾಗುತ್ತಿದ್ದರೆ ನಾನೇ ಪ್ರತಿಜ್ಞೆ ಹೇಳುವೆ. ನೀನು ನನ್ನ ಕೈಮೇಲೆ ಕೈ ಹಾಕು ...ಸರ್ವವ್ಯಾಪಿ ಪರಮಾತ್ಮನ ಸಾಕ್ಷಿಯಾಗಿ, ಶ್ರೀಮಧ್ವ-ಭೀಮ-ಹನುಮರ ಸಾಕ್ಷಿಯಾಗಿ, ಕುಲದೇವರಾದ ಗುಡ್ಡದ ಯಲ್ಲವ್ವ, ತುಳಜಾ ಪುರದ ಅಂಬಾಬಾಯಿ, ತಿರುಪತಿ ಬಾಲಯ್ಯ, ಯಮನೂರ ಮುಲ್ಲಾ ಸಾಬ, ತೊರವಿ ವೆಂಕಪ್ಪ ಇವರ ಸಾಕ್ಷಿಯಾಗಿ, ಕುಮಾರೀ ಶಾರದಾ ದೇಶಪಾಂಡೆ ಈಕೆಯು ಶ್ರೀಯುತ ವಸಂತರಾವ ಸರದೇಶಪಾಂಡೆ ಇವರನ್ನೇ ಲಗ್ನವಾಗುವದನ್ನು ನಿಶ್ಚಯಿಸಿ ದ್ದಾಳೆ ... ಕೈ ಹಾಕು.

ಶಾರದಾ : ( ಗೊಂದಲದಲ್ಲಿ ಕೈಹಾಕುವಳು, ಅಷ್ಟರಲ್ಲಿ ಏನೋ ಹೊಳೆದು ) ಅಯ್ಯ ತಪ್ಪು ಆತ್ಯು ... ಅನಂತರಾಯರು ಅನಬೇಕಾಗಿತ್ತು !

ವಸಂತ : ಹೋಗಲಿ ಬಿಡು ! ... ಇನ್ನು ಮುಂದೆ ನಾನು ನಿನಗೆ ವಸಂತನೇ ಅಲ್ಲವೇ ?

[ಪ್ರವೇಶ : ತಿಮ್ಮ ಎಡಗಡೆ ]

ತಿಮ್ಮ : ನಿಮ್ಮನ್ನು ಬಾಯರು ಕರೀತಾರ್ರಿ !

ಶಾರದಾ : ನಾ ಹೋಗತೀನಿ ... ಮತ್ತ, ನಿನ್ನೆ ನಿಮ್ಮ ಫೋಟೋ ಚಲೋ ಬಂದಿತ್ತು ... ಅಂದರ ಆ ಮೀಶಿ ... ಜಜ್‌ಸಾಹೇಬರ ಮೀಶಿ ... ಅಂದ್ರ, ... ನಿನ್ನಿನ ಫೋಟೋ ಬಹಾಳ ಛಲೋ ಬಂದಿತ್ತು, ಅಂದೆ ...

[ನಿಷ್ಕ್ರಮ : ಶಾರದಾ ಎಡಗಡೆಗೆ]

ವಸಂತ : ತಿಮ್ಮಾ,

ತಿಮ್ಮ : ರಾವಸಾಬ್.

ವಸಂತ : ಆ ನಿನ್ನಿನ ವರ್ತಮಾನಪತ್ರಾ ತೊಗೊಂಡು ಬಾ; ನನ್ನ ಫೋಟೋ ಬಂದದ್ದು ...

ತಿಮ್ಮ : ತರತೀನ್ರಿ ದ್ಯಾವ್ರು

[ನಿಷ್ಕ್ರಮ : ತಿಮ್ಮ]

ವಸಂತ : (ಸ್ವಗತ) ... ಉಶ್ ... ಅಂತೂ ಶಾರದಾನಿಂದ ವಚನ ಪಡೆದಂತೆ ಆಯಿತು ! ಇನ್ನು ಅನಂತ ಬಂದರೂ ಅಡ್ಡಿ ಇಲ್ಲ ! ... ಅವ್ವನ ಮನಸ್ಸು ಮಾತ್ರ ನನ್ನ ವಿಷಯಕ್ಕೆ ಹಾಗೇ ಇದೆ ! ... ಅವಳ ಮನಸ್ಸು ಬದಲಾಗುವವರೆಗೆ ನಾನು ಅನಂತನೆಂದೇ ನಡೆದರಾಯಿತು !

ತಿಮ್ಮ : (ಪ್ರವೇಶಿಸಿ) ... ಇಕಾ ದ್ಯಾವ್ರು ...

ವಸಂತ :(ನೋಡುತ್ತ) .. ಅನಂತರಾವ ಸರದೇಶಪಾಂಡೆ .. ಭಲೆರೆ ಮೀಶೀನ್ಯ! ಮುಂಬೈಯ ಗವ್ವರ್ನರರು ಅವರ ಪರಿಚಯ ಮಾಡಿಕೊಳ್ಳುತ್ತಿದ್ದದ್ದು . . ಹಾ ಹಾ ಹಾ ಜೊಂಡಮೀಶೀನ್ಯ ! .... (ತಿಮ್ಮನ ಕಡೆಗೆ ನೋಡುತ್ತ) ತಿಮ್ಮಾ,

ತಿಮ್ಮ : ದ್ಯಾವ್ರು ...

ವಸಂತ : ಈ ಫೋಟೋದಾಗ ನನ್ನ ಮೀಶಿ ನಿನ್ನ ಮೀಶೀ ಹಂಗ್ಯ ಕಾಣಿಸ್ತಾವ ಅಲ್ಲೋ !

ತಿಮ್ಮ : ಛೀ ದ್ಯಾವ್ರು ... ತಾವು ಎಲ್ಲಿ ... ನಾವು ಎಲ್ಲಿ ? ನಾವು ತಮ್ಮ ಕಾಲಾಗಿನ ಕಸ ! ತಂ ಮೀಶೀ ಹಂಗ ನಮ್ಮದು ಹೆಂಗಾಗಬೇಕು !

ವಸಂತ : ತಿಮ್ಮಾ, ಮೀಶೀ ವಿಷಯಕ್ಕ ನಾನು ಸೋಶಾಲಿಸ್ಟ ಇದ್ದೇನಿ. ನನಗ ನಿನ್ನ ಮೀಶೀ ಕಡಾ ಕೊಡಬೇಕು.

ತಿಮ್ಮ : (ಗಾಬರಿಯಾಗಿ) ... ರಾವಸಾಬ್ ...

ವಸಂತ : ಅವನ್ನ ಕತ್ತರಿಸಿ ನನಗ ಹಚ್ಚಬೇಕು.

ತಿಮ್ಮ : ಅದು ಹೆಂಗ ಆದೀತು ರಾವಸಾಬ್.

ವಸಂತ : ನಿನಗ ಹದಿನೈದು ರೂಪಾಯಿ ಇನಾಮು !

ತಿಮ್ಮ : ನಂ ಮನಿಯಾಕಿಗೆ ನನ್ನ ಮೀಶೀ ಮ್ಯಾಗ ಪ್ರೀತಿ ಭಾಳ ದ್ಯಾವ್ರು !

ವಂಸತ : ತಿಮ್ಮಾ, ತಿಮ್ಮಾ, ನನ್ನ ಕಡೆಗೆ ಸೆಟ್ಟಗೆ ನೋಡೋ ! ... ನಾನು ಯಾರು ? ... ಗುರುತು ಹತ್ತತದ ಏನು ? ... ಎಲ್ಲಾರೂ ನಾನು ಅನಂತ ಅಂತ ತಿಳಿದಾರ, ಆದರ ...

ತಿಮ್ಮ : ಎಲಾ ಇದರ ... ಏನು ಮೋಜಪಾ ! ... ಹಂಗಾರ ನನ್ನ ಸಂಶೀ ಕರೇ ಆತ್ಯು ಅನಬಾರ್ದ ? ... ನೀವು ನಮ್ ವಸಂತಪ್ಪನೋರ ಅಲ್ರೇ ?

ವಸಂತ : (ಹರ್ಷದಿಂದ) ಹೌದೋ ! ... ಹೌದೋ !

ತಿಮ್ಮ : ನೀವು ಬೀಡೀ ಸೇದಾಕ ಕೊಟ್ರಿಲ್ಲಾ, ಆಗs ನನಗ ಸಂಶೀ ಬಂತರೀ. ಅಂತಪ್ಪನೋರು ಹಿಂಗ ಆಳಮನಶ್ಯಾರ ಕೂಡ ಸಲಿಗೀ ಮಾಡ್ಯಾರ್ರೀ ?

ವಸಂತ : ಶ್,ಶ್, ಒದರಬೇಡ! ಈ ನಾಟಕ ಇನ್ನೂ ತುಸು ಹೊತ್ತುನಡೆಯ ಬೇಕಾಗಿದೆ. ನೋಡು, ನನಗಾಗಿ ನಿನ್ನ ಮೀಶಿ ...

ತಿಮ್ಮ : ಯಪಾ ದ್ಯಾವ್ರು — ನಿಂ ದಶಿಂದ ನಮ್ಮ ಚರ್ಮಾನಾರೂ ಸುಲದ ಕೊಟ್ಟೇವು !

ವಸಂತ : ಹಂಗಾದರ ಈ ವರ್ತಮಾನಪತ್ರ ತೊಗೊಂಡು, ಆ ಹುಣಿಸೀ ಗಿಡದ ಕೆಳಗಿನ 'ರಾಯಲ ಹೇರ್ ಕಟಿಂಗ್ ಸಲೂನಿ'ಗೆ ಹೋಗಿ ಕುಳಿತಿರು...ಕೇಳಿದರೆ ನಾಟಕಕ್ಕಾಗಿ ನನ್ನ ಮೀಶಿ ಇನ್ನೊಬ್ಬರಿಗೆ ಹಚ್ಚಬೇಕಾಗಿದೆ ಎಂದು ಹೇಳು. ಅವರು ಕೇಳಿದಷ್ಟು ರೊಕ್ಕಕ್ಕೆ ಒಪ್ಪಿಕೊಳ್ಳು. ಇಷ್ಟರಲ್ಲಿ ನಾನು ಅಲ್ಲಿ ಬರುವೆ ... ಹೋಗು ಅವ್ವ ಬಂದಳು ...

[ನಿಷ್ಕ್ರಮ : ತಿಮ್ಮ ಎದುರಿಗೆ]

[ಪ್ರವೇಶ : ರಮಾಬಾಯಿ]

ರಮಾಬಾಯಿ : ಅಂತಣ್ಣಾ, ನಿನ್ನ ಕೋಣಿ ಸಜ್ಜು ಮಾಡೂತನಕಾ ನನ್ನ ಕೈ ಸೋತು ಹೋದವು. ಕೋಣಿಯೊಳಗ ಫರಾಳ ಮಾಡತೀಯೋ ? ... ಏನು ಇಲ್ಲೇನೊ ? ....

ವಸಂತ : ಅವ್ವಾ, ನಾ ಈಗ ಫರಾಳ ಏನೂ ಒಲ್ಲೆ. ಚಹಾ ಅಷ್ಟs ಇಲ್ಲೇ ತೊಗೋತೇನಿ. ಅಲ್ಲೆ ಇಲ್ಲೆ ಫರಾಳ ನಿನ್ನೆ ಬಹಳ ಆಗಿ, ಇಂದ ಯಾಕೋ ಹೊಟ್ಟೆ ನಿಬ್ರ ಆಗೇದ. ಚಹಾ ತಗೊಂಡು, ಸ್ವಲ್ಪ ಹೊರಗೆ ಅಡ್ಡಾಡಿಬರತೇನೆ.

ರಮಾಬಾಯಿ : ಒಳಗೆ ಹೋಗಿ ನಿನ್ನ ಕೋಣೆಯನ್ನಾದರೂ ನೋಡಿ ಬಾರಲ್ಲ ! ಎಲ್ಲಾ ತಯಾರಾಗೇದ. ಎಲ್ಲಾ ಈ ಕೋಣಿಯೊಳಗಿಂದು ಆ ಕೋಣಿಗೆ ಹಾಕಬೇ

ಕಾಯಿತು. ಸಂಜೆಗೆ ಅಗಸರಾವ ಮಚ್ಚರದಾನಿ ತಂದನಂತರ, ನಿನ್ನ ಪಲಂಗಕ್ಕ ಕಟ್ಟಿಬಿಡತೇನಿ. ನೋಡಿ ಬಾ ಹೋಗು.

[ನಿಷ್ಕ್ರಮ : ವಸಂತ ಎಡಕ್ಕೆ]

[ಪ್ರವೇಶ : ಶಾರದಾ ಚಹಾದೊಡನೆ, ಬಲಕ್ಕೆ]

ಶಾರದಾ : ಎಲ್ಲಿ ಹೋದರು ?

ರಮಾಬಾಯಿ : ತನ್ನ ಕೋಣಿ ನೋಡಲಿಕ್ಕೆ ಹೋಗ್ಯಾನ; ನೋಡು ಶಾರದಾ, ಈ ಸಾರೆ ಅನಂತ ನಿನ್ನ ಕೈ ಹಿಡಿಯಲಿಕ್ಕೆ ಹೂಂ ಅಂದದ್ದs ಹೆಚ್ಚು! ... ಆತ ಲಹರೀಮನಶ್ಯಾ, ಇಲಾಯತಿಗೆ ಹೋಗಿ ಬಂದಾತಾ. ಗಂಡಸರ ಮನಸ್ಸು ಹೀಂಗs ಅಂತ ಹೇಳ್ಲಿಕ್ಕೆ ಬರೂದಿಲ್ಲ ... ನೋಡು; ಹೆರಳು ಹಕ್ಕೊಳದೇ ಅಡ್ಡಾಡಬ್ಯಾಡಾ. ನಿನ್ನ ಆ ಜಾಂಬಳೀಬಣ್ಣದ ಸೀರೀನs ಉಟ್ಟುಗೋ ಇವತ್ತ. ಇನ್ನಷ್ಟು ನಿನ್ನ ಪಾವಡರ ಬೂದೀನ್ನ ಹಚ್ಚಿಕೋ. ಆತ ಒಬ್ಬನs ಇದ್ದಾಗ, ಹೋಗಿ ಮಾತಾಡಿಸು. ಆತ ತಿರುಗಾಟಕ್ಕ ಕರೆದರೆ ಒಲ್ಲೆ ಅನಬ್ಯಾಡಾ. ಆತ ಕುಡೀಲಿಕ್ಕೆ ನೀರು ಬೇಡಿದರ, ಆ ಹಂಡೇದಾಗಿನ ನೀರು ಕೊಡಬ್ಯಾಡಾ ... ತೀಳೀತs ...

ವಸಂತ : (ಪ್ರವೇಶಿಸಿ) ಅವ್ವಾ, ಅವ್ವಾ, ನನ್ನ ಕೋಣಿ 'excellent' ಆಗೇದ! Thanks! (ಅವ್ವನ ಕೂಡ ಕೈ ಕುಲುಕುತ್ತ) ... ಮತ್ತ, ಶಾರದಾ, ಆ ಟೇಬಲ್ ಮ್ಯಾಲಿನ ಫ್ಲಾವರಪಾಟ್ ನೀನs ತುಂಬೀ ಅಲ್ಲ?

ಶಾರದಾ : ನಾನಲ್ಲ, ತಿ ...

ರಮಾಬಾಯಿ : (ಅವಳನ್ನು ತಡೆದು) ... ಹೌದು. ಹೌದು ಶಾರದಾನs, ಶಾರದಾನs ಅದನ್ನ ತುಂಬಿದಾಕಿ. ನಂ ಶಾರದಾಗ ಅದು ಭಾಳ ಚಲೋ ಸಾಧಿಸೇದ .... ಶಾರದಾ, ಚಹಾ ಕೊಡು.

[ವಸಂತ ಚಹಾ ಕುಡಿಯತೊಡಗುವನು]

ರಮಾಬಾಯಿ : ಅಲ್ಲೋ ಅಂತಣ್ಣ, ನೀ ಚಹಾ ಕುಡಿಯೋದು ನೋಡಿ ನನಗ ನೆನಪಾತು: ನಿನ್ನೆ ಫೋಟೋದೊಳಗ ಎಂಥೆಂಥ ಮೀಶೀ ಬಿಟ್ಟಿದ್ದ್ಯಲ್ಲ! ಎಷ್ಟು ಅಸ್ಯಂ ಕಾಣಿಸ್ತಿದ್ದಿ !

ಶಾರದಾ : ಅದ್ಯಾಕ ಮಾಮಿ, ಅದs ಚಲೋ ಕಾಣಿಸತಿತ್ತು !

ರಮಾಬಾಯಿ: ಛೀ, ನಮ್ಮ ತಿಮ್ಮನ ಕಳೆ ನಿನ್ನ ಮುಖದ ಮ್ಯಾಲೆ ಸುರೀತಿತ್ತು! ನಾ ನಿನ್ನೆ ಅಂದೆ: ಚಹಾ ಕುಡೀಬೇಕಾದರ ನಿನ್ನ ಮೀಶೀ ಎತ್ತಿ ಹಿಡೀಲಿಕ್ಕೆ ಎರಡು ಆಳು ಹಾರೀಕೋಲು ಹಾಕಿ ನಿಲ್ಲಬೇಕು, ಅಂತ! ... ಅಥವಾ, ನಿನಗ ಚಹಾ ಸೋಶಿ ಕೊಡೋ ಕಾರಣಾನs ಇಲ್ಲ! ... ಅಂತೂ ಅವನ್ನ ತಗದಿ ಬೇಶಿ ಆತು.

ವಸಂತ : ಅವ್ವಾ, ಜಜ್ ಆದಮ್ಯಾಲೆ, ಮೀಶಿ ಹಚ್ಚಿಕೋಬೇಕಾಗ್ತದ.

ರಮಾಬಾಯಿ : ಅಂದರೇನೋ ?

ಶಾರದಾ : ಅದು ಅವರ ಸರಕಾರೀ ಹುದ್ದೇದ ಲಕ್ಷಣ ಮಾವಿಽ. ಸುಳ್ಳು ಮಿಶೀನರ ಕಟ್ಟಿಕೋಬೇಕಾಗ್ತದಂತ.

ರಮಾಬಾಯಿ : ಮತ್ತ ಹಂಗಾರ ನಮ್ಮ ಕುರ್ತಕೋಟೀರಾಯರು ...

ವಸಂತ : ನಿಮ್ಮೂರ ಸಬ್‌ಜಜ್‌ರೂ, ವಿಲಾಯಿತಿಯಿಂದ ಬಂದವರೂ ಒಂದಽ ಏನು ?

ರಮಾಬಾಯಿ : ನಿನ್ನ ಕೋರ್ಟಿನ್ಯಾಗ ನೀ ಏನಾರ ಮಾಡಿಕೊ ! ... ಮನ್ಯಾಗ ಮಾತ್ರ ಅವನ್ನ ತರಬ್ಯಾಡಪಾ ನಮ್ಮಪ್ಪಾ !

ವಸಂತ : (ಏಳುತ್ತ) ಅವ್ವಾ, ನಾನು ಸ್ವಲ್ಪ ಅಡ್ಡಾಡಿ ಬರತೇನಿ. ಇನ್ನೊಂದು ಅರ್ಧಾ ತಾಸಿಗೆ ಬರತೇನಿ.

ಶಾರದಾ : ಮತ್ತ ಫರಾಳ ... ?

ವಸಂತ : ನನಗ ಹಸಿವಿ ಇಲ್ಲ !

[ನಿಷ್ಕ್ರಮ : ವಸಂತ ಎದುರಿಗೆ]

ರಮಾಬಾಯಿ : ತಿಮ್ಯಾನರಽ ಎಲ್ಲಿ ಹೋತ್ಯಽ ಖೋಡಿ ! ... ಶಾರದಾ, ನಾ ಖರೇ ಹೇಳತೀನಿ, ನಮ್ಮ ಅನಂತಗ ಮೀಶಿ ಇಲ್ಲದ್ದಽ ಡೌಲ ಕಾಣಿಸ್ತದ. ನಿನ್ನಿನ ವರ್ತ-ಮಾನ ಪತ್ರದಾಗ ನೋಡಿದರ ಹುಚ್ ನಂ ತಿಮ್ಯಾನ ಕಳೇ ಸುರೀತಿತ್ತು. ದರಿದ್ರ ಕಳೆ !

ಶಾರದಾ : ಅದ್ಯಾಕಽ ಮಾವಿಽ, ಈಗಽ ಅಸ್ಟೆಂ ಆಗೇದ. ಹೆಣ್ಣುಕಳೇ ಮಾರೀಮ್ಯಾಲೆ ಸುರೀತದ.

ರಮಾಬಾಯಿ : ಥೀ ಹುಚ್ಚೀ, ಏನು ಹಳ್ಳೀ ಊರವರ ಹಂಗ ಮೀಶಿ ಬಿಟ್ಟರ...

ಶಾರದಾ : ಹಂಗಾದರ ಇನ್ನೊಮ್ಮೆ ಆ ವರ್ತಮಾನಪತ್ರ ನೋಡೋಣ. ಇನ್ನೊಮ್ಮೆ ವಿಚಾರಮಾಡು.

ರಮಾಬಾಯಿ : ಎಲ್ಲಿ ಅದಽ ಅದು?..(ಒಂದೆರಡು ನಿಮಿಷ ಅವರು ಹುಡುಕುವಷ್ಟರಲ್ಲಿ)

[ಪ್ರವೇಶ: ಅನಂತ ಹಾಗೂ ಒಬ್ಬ ಹಮಾಲ, ಅವನ ಸೂಟ್‌ಕೇಸಿನೊಡನೆ.]

ಶಾರದಾ : ಇಕಾ, ಅವರಽ ಬಂದುಬಿಟ್ಟರಲ್ಲಾ !

ರಮಾಬಾಯಿ : ಎಷ್ಟು ಲಗೂ ಬಂದ್ಯೋ ಅಂತಣ್ಣ ! ಅರ್ಧಾತಾಸು ಅಂದಿ-ದ್ದ್ಯಲ್ಲಾ !

ಅನಂತ: ಲಗೂ ಅಂದ್ರ ! ಟ್ರೇನು ಲೇಟು ಆತ್ಯು ಅಂತ ನಾ ಬಡಕೋತೀನಿ! ಮತ್ತ ಆ ತಿಮ್ಮ ಎಲ್ಲಿ ಇದ್ದಾನ ? ... ನಾ ಬೇರೆ ಹಮಾಲನ್ನ ಮಾಡಿಕೊಂಡು ಬರಬೇಕಾತು !

ರಮಾಬಾಯಿ: ನೀನಽ ಕರಕೊಂಡು ಹೋಗಬೇಕಾಗಿತ್ತು! ನನಗೇನು ಗೊತ್ತು?

ಅನಂತ : ನಾನಽ ... ? ನೀವು ಏನು ಮಾತಾಡತೀರೋ ನನಗ ತಿಳಿಧಂಗ ಆಗೇದ. (ಹಮಾಲನಿಗೆ ರೊಕ್ಕ ಕೊಡುವನು)

್ರಮ: ಹಮಾಲ ಎಡಕ್ಕೆ]

ಅಂತೂ ಎಲ್ಲಾರು ಅರಾಮ ಇದ್ದೀರಾ ?

ರಮಾಬಾಯಿ : ಇದೇನು ಅಸ್ಯೆಂಸೋ ಅಂತಣ್ಣಾ ?

ಶಾರದಾ : ಅಂಸ್ಯೆ ? ಯಾಕ ? ... ಛಲೋ !

ಅನಂತ : ಅಸ್ಯೆಂ ಏನು ? ...

ರಮಾಬಾಯಿ : (ತನ್ನ ತುಟಿಯ ಮೇಲಿ ಕೈ ಎಳೆದು ಮೀಸೆಯೆಂದು ಸೂಚಿಸುವಳು)

ಅನಂತ : ಹೂಂ ... ಯಾಕ ? ಏನು ತಪ್ಪಾತು ?

ರಮಾಬಾಯಿ : ನಿನ್ನ ಮೀಶಿ ನಂ ತಿಮ್ಮನ ಮೀಶೀ ಹಂಗs ಆಗ್ಯಾವಲ್ಲೋ ? ಹಂಗಾರ, ವಿಲಾಯತಿಗೆ ಹೋಗಿ ಬಂದ ನಿನಗ, ಮತ್ತ ಹಳ್ಳೀ ಊರ ತಿಮ್ಮಗ ಫರಕು ಏನು ?

ಅನಂತ : ಆಂ ... ಹಂಗಾರ ತಿಮ್ಮಗ ಮೀಶೀ ತಗದಬಿಡಲಿಕ್ಕೆ ಹೇಳತೀನಿ. ಎಷ್ಟಾದರೂ ಮಾಲಕ ಮಾಲಕನs ! ಆಳು ಆಳs !

ಶಾರದಾ : ಇರಲ್ಯಾs ಮಾವಿ. ಛಲೋನs ಕಾಣಿಸತಾವ.

ರಮಾಬಾಯಿ : ಬಿಡs ಶಾರದಾ ! ಅಂತಣ್ಣಾ, ನೀ ಜಜ್ ಆದರ ನಿನ್ನ ಕೋರ್ಟಿನ್ಯಾಗ ಇದ್ದಾಗ ಆದಿ! ಈಗೇನು ಇವು ಅಸ್ಯೆಂ, ಚವರೀಕೂದಲದ ಮೀಶಿ?... ವರಾಹ ಕೇಶರ ಆಗ್ಯಾವ ! ... ಹೀಂಗ ಮನ್ಯಾಗ ಹಚ್ಚಿಕೊಂಡು ಬರಬ್ಯಾಡಪಾ ! ನೆರೆಮನೀ ಸಣ್ಣ ಹುಡುಗರು ಕತ್ತಲೀ ಹೊತ್ತಿನ್ಯಾಗ ಅಂಜಿ-ಗಿಂಜ್ಯಾವು !

ಶಾರದಾ : ಅದ್ಯಾಕs ಮಾವಿ.

ರಮಾಬಾಯಿ : (ಅವಳ ಮೇಲಿ ಹರಿಹಾಯ್ದು) ಯಾಕs ಖೋಡಿ !... ನಾನಂತೂ ಕೇಳೋ ಅಕಿ ಅಲ್ಲ ! ನೀ ಎಲ್ಲಾ ಕೋರ್ಟಿನ್ಯಾಗ ಜಜ್ ಆದಿ ... ಮನ್ಯಾಗ ನನ್ನ ಮಗನs !(ಹಾರಿ ಹೋಗಿ ಅವನ ಮೀಶೆ ಎಳೆಯುವಳು.)

ಅನಂತ : (ರೇಗಿಗೆದ್ದು ಅವಳನ್ನು ದೂಡಿ) What is this ? ,.. ಏನು ನಡದsದ ಇದು ! ... ಮನ್ಯಾಗ ಎಲ್ಲಾರಿಗೂ ಹುಚ್ಚು ಹಿಡದದೋ ಏನೋ ? .... ಎಲ್ಲಾರಿಗೂ ನನ್ನ ವ್ಹಿಸ್ಕರ್ಸ ನೋಡಿ ತಲೀ ತಿರುಗತದೋ ಏನೋ ? .... ಅವ್ವಾ, ನೀ ನನಗ ಅವ್ವ ಆದಿ ! ... ಆದರ I have every right for a thick mustache. ಇವನ್ನ ನೀ ಬ್ಯಾರೇ ನನಗ ಕೊಟ್ಟಿಲ್ಲs ? ... motherಗ ವಯಸ್ಕ sonನ insult ಮಾಡಲಿಕ್ಕೆ ಏನೂ ಅಧಿಕಾರ ಇಲ್ಲ ! ...

ರಮಾಬಾಯಿ : ತೀರ, ಚವರೀಕೂದಲ ...

ಅನಂತ : ಯಾವಾಗ ಮುಂಬೈಗೆ ಕಾಲು ಇಟ್ಟೇನಿ ಅವಾಗಿನಿಂದ ಒಂದಿಲ್ಲ ಒಂದು ಅಪಶಕುನ ಗಂಟs ಬಿದ್ದಾವ ! ... India ಅಂದರ ತಾಯಿನಾಡು ಅಂತಿದ್ದೆ ! ... ತಾಯಿನಾಡಿನಿಂದ ಹಿಡಕೊಂಡು ತಾಯೀ ತನಕಾ ಎಲ್ಲಾರೂ ನನ್ನ insult ಮಾಡೋಅವರು ಆಗ್ಯಾರ !

ರಮಾಬಾಯಿ : ಯಾಕ ಅಂತಣ್ಣಾ ? ಅಂಥಾದ್ದೇನು ಆತ್ಯು ? ...

ಅನಂತ : ಏನು ಆಗೋದು ಎಲ್ಲಾನೂ ಅಪಸವ್ಯನs ಮುಂಬೈಯಾಗ ಕಾಲು ಇಡತೀನ್ಸೋ ಇಲ್ಲೊ, ಗವರ್ನರರ ಭೆಟ್ಟಿ ಆತ್ಯು ... ಅದರ ಸುದ್ದಿಯೊಳಗ ನಮ್ಮ ಕನ್ನಡ ವರ್ತಮಾನಪತ್ರಾ ಎಲ್ಲಾ ಖಾನೇಸುಮಾರಿ ಮಾಡೋಅವರ ಹಾಂಗ ನಾನು ಕನ್ನಡ ಮನಿಸ್ಯಾ ಅಂತ ಪ್ರಕಟಮಾಡಿಬಿಟ್ಟರು ! ... ನನ್ನ feelingsಗೆ ಕಿಮ್ಮತ್ತs ಇಲ್ಲ. ನನ್ನ ಪೋಝಿಶನ್ ಏನು, ಪ್ರಾಸ್‌ಪೆಕ್ಟ್ಸ ಏನು, ಯಾರಿಗಾದರೂ ವಿಚಾರ ? ....ನಾ ಕನ್ನಡಿಗ ಅಂತ ಊರ ತುಂಬ ಡಂಗುರಾ ಹೊಡದರ, ನನ್ನ ಅಪ ಮಾನ ಎಷ್ಟು ಆಗಬ್ಯಾಡಾ ? .... ನನ್ನ ಮೇಲಿನ ಹುದ್ದೇದಾರರಿಗೆ ನಾ ಕಾನಡಿ ಅಪ್ಪಾ ಅಂತ ಗೊತ್ತಾದರ ನನಗ ಮೇಲಿನ ಕೆಲಸ ಕೊಟ್ಟಾರು ಹೆಂಗ ? ಅದಕ್ಕs ನಾ ಧಾರವಾಡಕ್ಕ ಬರೋ ಸುದ್ದಿ ಒಬ್ಬರ ಮುಂದೂ ಹೇಳಲಿಲ್ಲ ....

ರಮಾಬಾಯಿ : ಈಗಂತೂ ಬಂದ್ಯಲ್ಲಾ ....

ಅನಂತ : ಬರಬೇಕಂತ ಹೊರಟರ, ಹಿಂದುಸ್ಥಾನದೊಳಗ ಮೇಲ್ ಸುದ್ಧಾ ಒಂದು ತಾಸು ಲೇಟ! ತಾಸಿಗೇ ಅಂದರ ಕಿಮ್ಮತ್ತ ಇಲ್ಲ ನಮ್ ಜನಕ್ಕ! ... ಇರಲಿ; ಸಾಮಾನು ಒಯ್ಯಲಿಕ್ಕೆ ಮನೀ ಆಳು ಇಲ್ಲ ! ... ಮನ್ಯಾಗಿನ ಮಂದಿ ಮೀಶಿ ಹಿಡಿದು ಜಗ್ಗತಾರ ! ... ಅದs ಏನು ಇವೆಲ್ಲಾ ! ... ಕಾಲಿಟ್ಟಲ್ಲೆಲ್ಲಾ ಜಾರಕಿ. what is this thing called India ?

ರಮಾಬಾಯಿ : ತಪ್ಪಾತ್ಯಪಾ ಅಂತಣ್ಣಾ, ನೀ ಇಷ್ಟು ಸಿಟ್ಟಿಗೇಳತೀ ಅಂತ ಗೊತ್ತು ಇದ್ದರ ....

ಅನಂತ : ಇಕಾ, ಇಕಾ, here is India. ಹಿಂಗ ಅಂದರ ನನ್ನ ಸಿಟ್ಟು ಏನಾರ ಕಡಿಮೆ ಆದೀತs? ... ಬದಲೀ ಹೆಚ್ಚು ಆಗತದ. ಅದರಾಗ ರಮಿಸಿಧಾಂಗ ಮಾಡಿ ಸಿಟ್ಟಿಗೆಬ್ಬಿಸೋ ವಿದ್ಯಾ ನಮ್ಮ ಕನ್ನಡ ಹೆಂಗಸರಿಗೆ ಸಾಧಿಸಿದಷ್ಟು ಇನ್ಯಾರಿಗೂ ಸಾಧಿಸಿಲ್ಲ ! ಇರಲಿ, ತಿಮ್ಯಾ ಎಲ್ಲಿದ್ದಾನ ?

ರಮಾಬಾಯಿ : ತಿಮ್ಮಾ, ತಿಮ್ಮಾ, ಎಲ್ಲಿದ್ದಾನs ಶಾರದಾ ?

ಅನಂತ : ಇಕಾ ; ಒಬ್ಬರಿಗೆ ಕೇಳಿದರ ಇನ್ನೊಬ್ಬರನ ಕೇಳತಾರ ... ತಂ ತಂ responsibilityಯು ಅರಿವೇ ಇಲ್ಲ. ನನ್ನ ಕಾಲಾಗಿನ ಬೂಟು ನಾನs ಉಚಕೋ-ಬೇಕೋ ಹೆಂಗ ?

ರಮಾಬಾಯಿ : ತಿಮ್ಯಾ, ಖೋಡಿ, ಎಲ್ಯೋ ಹೋಗೇದಪಾ ! ಶಾರದಾ ನೀನs ಉಚ್ಚು.

ಅನಂತ : ಬ್ಯಾಡಾ, ಯಾರೂ ಬ್ಯಾಡಾ ... ನಾನs ಉಚಿಕೋತೇನಿ ! ... ಮತ್ತ India ಕ್ಕ ಬಂದಮ್ಯಾಲ, ನಾಳೆ ಆ ಗಾಂಧೀತತ್ವದ ಪ್ರಕಾರ ಪಾಲಿಶ್ ಸುದ್ಧಾ ನಾನs ಮಾಡಿಕೋಬೇಕಲ್ಲ ! ... ಸರಿ, ಮತ್ತ ನನ್ನ ಹೊಟ್ಟೇದೇನಾರ ವ್ಯವಸ್ಥಾ ಮಾಡೋ ಹಂಚಿಕಿ ಅದsನೋ ? ... ಯಾವಾಗ ನಿನ್ನೆ ಮಧ್ಯಾನ್ಹಕ್ಕ ಉಂಡೇನಿ ...

ಇಲ್ಲೀ ತನಕ ಬರೇ ಬ್ರೆಡ್ಡು, ಬಿಸ್ಕೀಟು, ಟೋಸ್ಟು, ಚಹಾ, ಇದರ ಮೇಲೆ ಬಾಳ್ವೆ ನಡೆದsದ ... ಹಾದ್ಯಾಗ ಒಂದು ಡೀಸೆಂಟ ಹಾಟೆಲ್ಲೂ ಇಲ್ಲ. ನಾ ಏನು ಗಾಳಿ ತಿಂದು ಬದುಕೋ ಹಾವು ಅಂತ ತಿಳಿದೀರೋ ಏನು ? ... (ಬೂಟು ತೆಗಿದಿಡುವನು)

ರಮಾಬಾಯಿ : ಮತ್ತ ನೀನsು ಒಲ್ಲೆ ಅಂದ್ಯಪಾ !

ಅನಂತ : ಸುಮ್ಮನ ನನ್ನ ಸಿಟ್ಟಿಗೆಬ್ಬಿಸಬ್ಯಾಡಿರಿ.

ರಮಾಬಾಯಿ : ಶಾರದಾ, ಶಾರದಾ ನೀ ಇಲ್ಲೇ ಇರವ್ವಾ! ನಾ ಅನ್ನಕ್ಕ ಎಸರು ಇಟ್ಟು ಬರತೇನಿ; ಅಡಗೀ ಸುಬ್ಬವ್ವನೂ ಮನಿಗೆ ಹೋದಳು.

[ನಿಷ್ಕ್ರಮ : ರಮಾಬಾಯಿ ಎಡಕ್ಕೆ ]

ಶಾರದಾ : ಮಾವಿಾ ತುಸು ಹಳೇ ಪದ್ಧತಿಯಾಕಿ .... ಸರಕಾರೀ ಹುದೇ ಯಾವದೂ ತಿಳೀದೇ ಸುಮ್ಮನ ನೀಮ್ ಮೀಶಿಗೆ ಕೈ ಹಾಕಲಿಕ್ಕೆ ಹೋದಳು.

ಅನಂತ : ಹೂಂ.

ಶಾರದಾ : ನನ್ನ ಕೇಳಿದರ, ಮೀಶಿ ಇದ್ದಾಗ ಬೇಶಿ ಅನಸ್ತದ.

ಅನಂತ : ನಿಮ್ಮ ಸಲುವಾಗಿ ನಾವು ಮೀಶಿ ಬಿಡಲಿಲ್ಲ.

ಶಾರದಾ : ಅದs — ಅದನ್ನ ನಾ ಹೇಳಿದ್ದು ! ಸರಕಾರೀ ಹುದ್ದೇ !... ಆದರೂ ಮಾವಿೂ ಮಗನ್ನ ನೋಡಿ ಸಂತೋಷಬಡೋದರಾಗ ಹುದ್ದೇಗಿದ್ದೆ ಎಲ್ಲಾ ಮರೆತುಬಿಡತಾಳ. ಅದನ್ನ ನೀವು ಮನಸ್ಸಿಗೆ ಹಿಡೀಬೇಡಿರಿ.

ವಸಂತ : ಹೂಂ .... ಒಳ್ಳೇ ಉಪದೇಶ !

ಶಾರದಾ : ವಿಲಾಯತಿಗೆ ಹೋಗಿ ಬಂದು, ನೀವು ಎಷ್ಟು ಬದಲಾಗೀರಿ ಅಂತ ಅಂದಕೋತಿದ್ದೆ. ಅಕಿ ಮೀಶಿ ಮುಟ್ಟಿದ ಕೂಡಲೆ, ನಿಮ್ಮ ಮಾತು ರೀತಿ ಎಲ್ಲಾ ಬದಲಾಗಿಹೋದುವಲ್ಲ ! ಮತ್ತ ಯಥಾಪ್ರಕಾರ ಮುಂಚಿನಂತೆ ಆದಿರಿ.

ಅನಂತ : ಅಂದರs....

ಶಾರದಾ : ಅದs ಶೀಡಕಸ್ವಭಾವ, ಅದs ಒರಟು-ಮಾತು, ....

ಅನಂತ : ನನ್ನ ಸಿಟ್ಟಿಗೆಬ್ಬಿಸಬೇಡಿರೀಂತ ನಾ ಆಗಳೇನs ಹೇಳಲಿಲ್ಲs?

ಶಾರದಾ : ಹಂ, ಹಂ. ಇದಕ್ಕs ಶೀಡಕತನ ಅನ್ನೋದು ....

ಅನಂತ : (ಸಿಟ್ಟಿನಿಂದ) ಬಾಯಿ ಮುಚ್ಚು!

ಶಾರದಾ : ಇಷ್ಟು ಸಿಟ್ಟಗೇಳೂಅವರು ನನಗ ಕೊಟ್ಟ ವಚನಾ ಏನು ನೆನಸ ತೀರಿ? ನನ್ನ ಕೂಡ ಲಗ್ನಾ ಏನು ಮಾಡಿಕೋತಿರಿ?

ಅನಂತ : ನಿನ್ನ ಕೂಡ ಲಗ್ನs ....

ಶಾರದಾ (ಅಂಜಿ) ಆಂ ....

ಅನಂತ : ಅವ್ವನ ಹುಚ್ಚು ಹರಟೆ ಖರೇ ಅಂತ ತಿಳುಕೊಂಡು ಮನಸಿನ್ಯಾಗ ಮಂಡಿಗೀ ತಿನಬ್ಯಾಡ್ರಿ ! .... ಗೋದೀ ಲೆಖ್ಖಾ ನಾಳೆ ಯಾರು ಕೊಡಬೇಕು ? ....

ಚಿಕ್ಕವರಿದ್ರ ಕೂಡಿ ಆಡಿದವರು ಅಂತ ಅಳದಕ್ಕೀ ಹಚ್ಚಬ್ಯಾಡ್ರಿ.. ಅಕ್ಕಿ ಲೆಖ್ಖಾನೂ ಯಾರೂ ಕೊಡೂದಿಲ್ಲ. ನಾ ಇಂಗ್ಲಂಡಕ್ಕ ಹೋಗೂ ಮುಂಚೆ ಈ ಮಾತು ಸ್ವಚ್ಛ ತಿಳಿಸಿ ಹೇಳಿದ್ದೆ — ಅದೇ ಖರೇ ಅಂತ ತಿಳುಕೊಳ್ರಿ. ಉಳಿದದ್ದೆಲ್ಲಾ ಸುಳ್ಳು. (ಶಾರದಾ ಬಿಕ್ಕಿ ಬಿಕ್ಕಿ ಅಳುತೊಡಗುವಳು) .... ಹಿಂಗ್ಯಾಕ ನನ್ನ ಕಡೇ ನೋಡತೀರಿ ? ನನ್ನ ಮೋರೆಯು ಮೇಲೆ ಯಾವ ಹುಚ್ಚು ಕುಣೀತದs ?

ಶಾರದಾ : (ಬಿಕ್ಕುತ್ತ) ಹಂಗs ಆಗಲಿ ! ಬ್ಯಾಡs ಬ್ಯಾಡಾ !

ಅನಂತ : ಸುಮ್ಮನs ಬಿಕ್ಕಿ ಬಿಕ್ಕಿ ಅತ್ತರ ಏನೂ ಉಪಯೋಗ ಇಲ್ಲಾ. ನನ್ನ ವಿಚಾರ ಸ್ಪಷ್ಟ ತಿಳಕೊಳ್ರಿ. ಲಗ್ನ ಅಂದರ ನೀವು ಏನಂತ ತಿಳದೀರಿ?.... ಲಗ್ನಂದರ ತುಳಸೀ ಲಗ್ನಾನೂ ಅಲ್ಲ, ನರೀ ಲಗ್ನಾನೂ ಅಲ್ಲ. ಅದು ಎರಡು ಜೀವಿಗಳು ... ಅಂದರ, ಎರಡು ಬುದ್ಧಿ-ಜೀವಿಗಳು, ತಮ್ಮ ಹೊಣೆ ... ಎಂಥಾ ಹೊಣೆ ? .... ತಮ್ಮ ವೈವಾಹಿಕಜೀವನದ ಹೊಣೆ. ಅದನ್ನ ತಿಳಿದುಕೊಂಡು, ಸ್ಪಷ್ಟವಾಗಿ ತಿಳಿದುಕೊಂಡು, ಪ್ರೇಮದಿಂದ ಉದ್ಯುಕ್ತರಾಗಿ ... ಎಂಥಾ ಪ್ರೇಮ? ... ಪರಸ್ಪರ ಪ್ರೇಮ. mutual and intellectual love ಅದರಿಂದ ಉದ್ಯುಕ್ತರಾಗಿ, ಸ್ವೀಕರಿಸಬೇಕಾದಂಥ, ಅದೂ voluntarily ಬಂಧನ, .... ಎಂಥಾ ಬಂಧನ? .... ಸಾಮಾಜಿಕ ಬಂಧನ. ತಿಲಕಾಷ್ಟಮಹಿಷಬಂಧನ ಅಲ್ಲ ! .... ನಾನು ಇಷ್ಟು ಹೇಳಿದ್ದರೊಳಗ ಒಂದು ಅಕ್ಷರ ಅರs ನಿಮಗ ಅರ್ಥ ಆತ್ಯs ? ನಿಮ್ಮ ಕುಲದೇವರ ಆಣಿ ಮಾಡಿ ಹೇಳರಿ ! .... ನನ್ನ ಶಿಕ್ಷಣ ಎಲ್ಲೇ, ನನ್ನ ಸ್ವಭಾವ ಎಲ್ಲೇ, ನನ್ನ ಸ್ಥಾನಮಾನ ಎಲ್ಲಿ ? .... ನೀವಾರs ಒಂದು ಮೂಲ್ಕೀಪರೀಕ್ಷಾ ಎರಡು ಸರೇ ಕಟ್ಟಿ ನಪಾಸ ಆದವರು ! .... ಲಗ್ನಾಮಾಡಿಕೊಂಡು ಎಲ್ಲಿ ಕಳಿಸಬೇಕಂತ ಮಾಡೀರಿ ?

ಶಾರದಾ : ಇಲ್ಲಾ, ಇಲ್ಲಾ ! ... ನೀವು ಸುಖದಿಂದ ಇರ್ರಿ ! ... ನನಗ ಯಾವುದೂ ಆಶಾ ಇಲ್ಲ ! ... ನೀವು ಸ್ವಲ್ಪ ಸಿಟ್ಟಿಗೆದ್ದೀರಿ ಅಂತ ತಿಳಿದಿದ್ದೆ ... ಎಲ್ಲಾ ಸುಳ್ಳು. ಹುಟ್ಟುಗುಣಾ ಎಲ್ಲಿ ಹೋಗಬೇಕು ? ... ಈ ಲಗ್ನನ ಬೇಡ ಅಂತ ನಾನೂ ಪ್ರತಿಜ್ಞೆ ಮಾಡತೇನಿ. ನಾನs ಯಾವದಾದರೂ ಹೊಂಡಾ ಬೀಳತೇನಿ ( ಒಳಗೆ ಓಡುವಳು )

ಅನಂತ : ( ಸ್ವಗತ) ನಾನೂ ಒಂದು ಪ್ರತಿಜ್ಞಾ ಮಾಡಬೇಕಾಗೇದ ... ಕನ್ನಡ ಹುಡುಗೀರ್ನ ಲಗ್ನಾಮಾಡಿಕೊಳ್ಳೋ ಹಂಗಿಲ್ಲಾಂತ ! ... ಈ ಕನ್ನಡ ವರ್ತಮಾನ ಪತ್ರಗಳು ನಾ ಕನ್ನಡಿಗ, ಅಚ್ಚಗನ್ನಡಿಗ ಅಂತ ಸಾರತಾವಲ್ಲಾ ... ಸಾರಲಿ ! ... ನಾನಂತೂ ಬ್ಯಾರೇ ಪ್ರಾಂತದ ಒಬ್ಬ ಹುಡಿಗೀನ್ನ ಲಗ್ನ ಮಾಡಿಕೋತೇನಿ. ಜನ್ಮ ದಿಂದ ನಾ ಕನ್ನಡಿಗ ಆದರೂ, ಲಗ್ನದಿಂದ ನಾ ಬೇರೆ ಪ್ರಾಂತದವ ಅಂತ ಇಡೀ ಜಗತ್ತಿಗೇ, ಇಷ್ಟs ಯಾಕ, ನನ್ನ ಮೇಲಿನ ಅಧಿಕಾರಿಗಳಿಗೆ ಸುದ್ಧಾ, ಸಿದ್ಧ ಮಾಡಿ ತೋರಿಸತೇನಿ.

[ ಕೊನೆಯ ವಾಕ್ಯ ಅನ್ನುವಾಗ ಪ್ರವೇಶ : ಬಲಗಡೆ; ತಿಮ್ಮ ಹಾಗೂ ವಸಂತ. ತಿಮ್ಮನ ಮೀಶೆ ವಸಂತನಿಗೆ ಬಂದಿವೆ. ಅನಂತನನ್ನು ನೋಡಿ ವಸಂತನು ಮತ್ತೆ ಹೊರಗೆ ಓಡಿ ಹೋಗುತ್ತಾನೆ. ]

ತಿಮ್ಮ : ( ಖೇಕರಿಸಿ ) ರಾವಸಾಬ್ ...

ಅನಂತ : ( ಹೊರಳಿ ನೋಡಿ ) ತಿಮ್ಯಾ, ಕತ್ತೇ, ಎಲ್ಲಿ ಹೋಗಿದ್ದಿ ಇಷ್ಟು ಹೊತ್ತಿನ ತನಕಾ ? ಏನು, ಹಜಾಮತಿ ಮಾಡಿಸಲಿಕ್ಕೆ ಹೋಗಿದ್ದ್ಯ ?

ತಿಮ್ಮ : ಹೌದು ದ್ಯಾವ್ರು.

ಅನಂತ : ಏಸಂದೀ ?

ತಿಮ್ಮ : ( ತುಟಿಯ ಮೇಲೆ ಬೆರಳು ಎಳೆಯುವನು. )

ಅನಂತ : ಓ, ಹೋ ಹೋ ! ತಿಮ್ಮಾ , ನಿನ್ನ ಮೀಶೀ ತಗಸಿದ್ಯಾ ? ... ಶಾಬಾಶ್ ! ಇದಕ್ಕ ಅನಬೇಕು ಮುಂಧೋರಣ ! . . ನಾನss ನಿನಗ ' ತಗೀ ' ಅಂತ ಹೇಳೂಅವ ಇದ್ದೆ. ತಿಮ್ಮ , ಮಾಲಕ ಇರೋ ಹಂಗ ಮಾಲಕ ಇರಬೇಕು, ಆಳು ಇರೋ ಹಂಗ ಆಳು ಇರಬೇಕು, ... ಯಾಕೋ ?

ತಿಮ್ಮ : ಹೌದು ದ್ಯಾವ್ರು. ತಮ್ಮ ಉಪ್ಪು ಉಂಡು, ತಮ್ಮಂಥಾ ಮೀಶಿ ಇಟುಗೊಂಡ್ರ ಆ ಪರಶಿವನಾರ ನಮಗ ಹೌದ ಅಂದಾನ್ರೇ ?

ಅನಂತ : ಶಾಬಾಶ್ ... ಇರಲಿ. ಇನ್ನ, ಈ ಬೂಟು ಒರಸಿ ಇಡು. ನಾನು ಸ್ನಾನಾ ಮಾಡಿಕೊಂಡು ಬಂದು ನನ್ನ ಕೋಣಿಯೊಳಗ ಮಲಗತೇನಿ ... ಹಾಸಿಗೀನೂ ಹಾಸಿ ಇಟ್ಟಿರು. ಮತ್ತ ಈ ಸೂಟ್‌ಕೇಸೂ ನನ್ನ ಕೋಣೆಯೊಳಗ ಒಯ್ಯಿ ...

[ ನಿಷ್ಕ್ರಮ : ಅನಂತ ಬಲಕ್ಕೆ ]

ತಿಮ್ಮ : ( ಹೊರಗೆ ಇಣಿಕಿ ) ಬರ್ರಿ ದ್ಯಾವ್ರು ... ಯಾರೂ ಇಲ್ಲ !

[ ಪ್ರವೇಶ ವಸಂತ ]

ವಸಂತ : ತಿಮ್ಮ , ಇದೇನು ಬಂತೋ ?

ತಿಮ್ಮ : ದ್ಯಾವ್ರು, ನಿಂ ಟ್ರಂಕು ತಂದು ಕೊಡಲ್ರೇ ?

ವಸಂತ : ಬ್ಯಾಡ ತಿಮ್ಮಾ ! ನಾನು ಈ ರಾತ್ರಿ ಒಂದು ಇಲ್ಲೇ ಉಳೀತೇನಿ. ಶಾರದಾಗ ಎಲ್ಲಾನೂ ಬಿಚ್ಚಿ ಹೇಳಿ, ನನ್ನ ಕೂಡ ಬರಲಿಕ್ಕೆ ಕೇಳತೇನಿ. ಅಕೀನ್ನ ಕರಕೊಂಡು, ಇಂದು ರಾತ್ರಿ ಹೈದರಾಬಾದ ಗಾಡೀ ಹಿಡೀತೇನಿ ... ಆ ವರೆಗೆ ನಾನು ಇಲ್ಲೇ ಇರಬೇಕು. ಎಲ್ಲಿರಲಿ ?

ತಿಮ್ಮ : ದ್ಯಾವ್ರು, ಈ ಎಡಗಡೇ ಕ್ವಾಣಿ ಮೊದಲಿನಿಂದಲೂ ನಿಮ್ಮದೇ ! ... ಈಗ ಅದಕ್ಕ ಕೀಲ ಐತಿ. ಅಲ್ಲಿಂದ ಎಲ್ಲಾ ಸಾಮಾನ ಬಲಗಡೇ ಕ್ವಾಣಿಗೆ ಸಾಗಿಸಿದ ಮ್ಯಾಗ ಬಾಯೀಸಾಹೇಬರು ನನಗ ಕೀಲಿ ಹಾಕಲಿಕ್ಕೆ ಹೇಳಿದ್ರು. ಅದರ ಕೀಲೀಕೈ ನನ್ನ ಕಡೇನss ಐತಿ. ನಿಮ್ಮನ್ನ ಒಳಗ ಹಾಕಿ ಕೀಲಿ ಹಾಕತೇನು.

ವಸಂತ : ಹಂಗಾದರ, ಬೇಕಾದಾಗ ಹೊರಗೆ ಬಂದು ಶಾರದಾನ್ನ ಭೆಟ್ಟಿ ಹೆಂಗ ಆಗಲಿಕ್ಕೆ ಬಂದೀತು ?

ತಿಮ್ಮ : ಅದಕೇನು ಚಿಂತಿ ದ್ಯಾವ್ರು. ಅಟ್ಟದ ಕೆಳಗಡಿ ಕ್ವಾಣೀ ಬಾಗಿಲ ಇಲ್ಲೇ ಐತ್ಯಲ್ಲ. ಅದಕ್ಕ ಒಳಗಿಂದ ಚಿಲಕ ಐತಿ. ಬೇಕಾದಾಗ ಚಿಲಕಾ ತಗದು, ಎರಡು ಹಾರಿಕ್ಯಾಗ ಪಡಸಾಲಿಗೆ ಬರಾಕ ಬರತೈತಿ. ಯಾರೂ ಇಲ್ಲದ್ದು ನೋಡಿ ಹೊರಗ ಬರಬೇಕು. ನಡಮನ್ಯಾಗ ಭಾಳ ಹೊತ್ತು ನಿಲ್ಲಬಾರದು. ಈಗ ನಾ ಕೀಲೀ ತೆಗಿಯೋ ಸಪ್ಪಳ ಕೇಳಿಸಿದ ಕೂಡಲೇ ಒಳಗ ಬಂದುಬಿಡಿರಿ. ನಿಮ್ಮ ಟ್ರಂಕೂ ನಿಮ್ಮ ಕ್ವಾಣ್ಯಾಗ ಇಟ್ಟಬಿಡತೇನು.

[ ನಿಷ್ಕ್ರಮ: ತಿಮ್ಮ ಎಡಕ್ಕೆ ]

[ ವಸಂತ ಅತ್ತಿತ್ತ ಅಡ್ಡಾಡುವಷ್ಟರಲ್ಲಿ, ಪ್ರವೇಶ: ಶಾರದಾ ಬಲದಿಂದ ]

ವಸಂತ : ಶಾರದಾ ... ಶಾರದಾ ...

ಶಾರದಾ : ಕ್ಷಮಾ ಮಾಡಿರಿ ... ನೀವು ಇಲ್ಲಿದ್ದೀರಂತ ನನಗ ಗೊತ್ತಿದ್ದಿಲ್ಲ.

[ ನಿಷ್ಕ್ರಮ: ಶಾರದಾ ಬಲಕ್ಕೆ ]

[ ಕ್ಷಣಹೊತ್ತು ವಸಂತ ಗೊಂದಲಗೊಂಡು, ನಂತರ ಒಂದು ಚೀಟಿ ಬರೆದು ಇಟ್ಟು-ಕೊಳ್ಳುತ್ತಾನೆ ]

[ ಪ್ರವೇಶ: ಎಡದಿಂದ; ರಮಾಬಾಯಿ ಅಳುತ್ತ ]

ವಸಂತ : ಅವ್ವಾ, ಅವ್ವಾ, ಅಳತೀಯಾಕ ?

ರಮಾಬಾಯಿ : ಅಂತಣ್ಣಾ ತಪ್ಪು ಆತ್ಯಪಾ ! ನನ್ನ ಸರ್ವಸ್ವೀ ತಪ್ಪು ಆತ್ಯ !

ವಸಂತ : ಅವ್ವಾ, ಏನು ? ಯಾತರ ತಪ್ಪು ?

ರಮಾಬಾಯಿ : ನೀ ಏನೋ, ನಿನ್ನ ಹುದ್ದೆ ಏನೋ ? ... ತಿಳೀದಽ ನನ್ನ ಕೈಲೆ ಆತ್ಯಪಾ !

ವಸಂತ : ಆದದ್ದ ಆರಽ ಏನು ? ... ಅವ್ವಾ, ನೀ ಏನು ಮಾಡಿದ್ದರೂ ನಾ ಮನಸ್ಸಿನೊಳಗ ಹಿಡಿಯೂದಿಲ್ಲ. ಆಗೇದ ಏನು ?

ರಮಾಬಾಯಿ : ಅಯ್ಯ ... ಏನು ಕೇಳತೀಯಪಾ ?

ವಸಂತ : ಹೇಳ್ಯಾರ ಹೇಳು !

ರಮಾಬಾಯಿ : ನಿನ್ನ ಮೀಶಿ ...

ವಸಂತ : ಹ ಹ್ ಹ್ ... ನನ್ನ ಮೀಶ್ಯಽ ? ... ಹುದ್ದೇದ ಲಕ್ಷಣ ...

ರಮಾಬಾಯಿ : ಅವನ್ನ ಜಗ್ಗಿದ್ದಕ್ಕ ನನ್ನ ಮ್ಯಾಲ ಬಹಾಳ ಸಿಟ್ಟಿಗೆದ್ದೀಯಲ್ಲಽ?

ವಸಂತ : ಆಂ ... ನೀನಽ ? ... ಅಂಥಂಗ ನೀ ಮೀಶೀ ಜಗ್ಗಿದ್ಯಲ್ಲಽ ? ನಾ ಮರತಽ ಬಿಟ್ಟಿದ್ದೆ ! ... ತಾಯಿ ಮಾಡಿದ್ದು ಮಗನ ಮನಸ್ಸಿನಾಗ ಹೆಂಗ ಉಳದೀತು,

ಹೇಳು ? ... ಆತು. ಇನ್ನೊಮ್ಮೆ ಮಾಡಬ್ಯಾಡಾ ...

**ರಮಾಬಾಯಿ :** ಅಂತಣ್ಣಾ, ಮತ್ತ ಅನ್ನ ಆಗೇದ.

**ವಸಂತ :** ಅವ್ವಾ, ನನಗ ಹಸಿವಿ ಇಲ್ಲಲ್ಲ !

**ರಮಾಬಾಯಿ :** ಅಯ್ಯ, ಇದೇನೋ ... ಇಷ್ಟರಾಗ ಹಸಿವೀ ಅಂತಿದ್ದಿ ... ಈಗ ಇಲ್ಲಾ ಅಂತೀಯಲ್ಲ ?

**ವಸಂತ :** ಅವ್ವಾ, ನೀ ಅಳೋದು ನೋಡಿ, ಆದ ಹಸಿವಿ ಹಿಂಗಿಹೋತು !

**ರಮಾಬಾಯಿ :** ಅಂತಣ್ಣಾ, ಅಂತಣ್ಣಾ, ಏನು ಪ್ರೀತ್ಯೋ ನಿನ್ನದು !... ಇದ್ದ ಖರೇ ಆದರ ಶಾರದಾನ ಕೈ ಹಿಡಿದಬಿಡಪಾ !

**ವಸಂತ :** ನಾ ಎಲ್ಲಿ ಒಲ್ಲೆ ಅಂದೇನಿ ಅವ್ವಾ ! ... ಎಲ್ಲಾ .. ನಿನ್ನ ಇಚ್ಛಾ ಅಂತ ಹೇಳಿಲ್ಲೇನ ! ನೀ ಆಕೀಗೇ ಇಷ್ಟು ಬುದ್ಧೀ ಹೇಳು ! ... ಈಗಳೆ ನನ್ನ ಕೂಡ ಒಂದು ಮಾತು ಸುದ್ಧಾ ಆಡದೇ ಹೋದಳು.

**ರಮಾಬಾಯಿ :** ನಿಲ್ಲು, ಆಕೀನ್ನ ಕರಕೊಂಡು ಬರತೇನಿ

[ ನಿಷ್ಕ್ರಮ : ರಮಾಬಾಯಿ ಬಲಕ್ಕೆ ]

[ ಪ್ರವೇಶ : ತಿಮ್ಮ ಎಡದಿಂದ ]

**ತಿಮ್ಮ :** ದ್ಯಾವ್ರು, ಇನ್ನೊಂದು ಎಳೀ ಆಗಿದ್ದರ ಅಂತಪ್ಪನೋರು ಇಲ್ಲೇ ಬಂದುಬಿಡತಿದ್ದರಲ್ರಿ ... ಬರ್‍ರಿ, ಕ್ವಾಣಿ ಕೀಲಿ ತಗದೇನಿ.

**ವಸಂತ :** ನಿಂದರೋ ತಿಮ್ಮಾ, ಈಗ ಅವ್ವಾ ಮತ್ತ ಶಾರದಾ ಬರತಾರ ... ಒಂದು ಮಹತ್ವದ ಮಾತು ...

**ತಿಮ್ಮ :** ಚೀ ಏಳ್ರೀ ನಿಮ ... ಅಂತಪ್ಪನೋರು ಜಳಕಾ ಮುಗಿಸಿಕೊಂಡು ಗಂಜೀ ಬನಿಯನ್ ಹುಡುಕಾಕ ಹತ್ಯಾರು ! ... ಈಗ ಬರತಾರ ಪಡಸಾಲಿಗೆ ... ಇಕಾ ಹೆಜ್ಜಿ ಕೇಳಸತಾವ ... ನಡ್ರಿ.

**ವಸಂತ :** ಹಂಗಾದರ ಈ ಚೀಟಿ ಶಾರದಾಗ ಕೊಡು, ಒಬ್ಬಾಕೀನ ಇದ್ದಾಗ.... (ಚೀಟಿ ಕೊಡುವನು.)

[ಇಬ್ಬರು ನಿಷ್ಕ್ರಮ : ಎಡಕ್ಕೆ]

[ ಪ್ರವೇಶ : ಅನಂತ; ಬಲದಿಂದ ]

**ಅನಂತ :** ( ಕೈಯಲ್ಲಿ ವರ್ತಮಾನಪತ್ರವಿದೆ ) this is India, this is ಕರ್ನಾಟಕ ... " ಇವರು ಅಚ್ಚ ಕನ್ನಡಿಗರಾಗಿದ್ದು ... ! " ಹಂ ! ಇದೊಂದು ಶಬ್ದಾ ಬರೀದೇ ಇದ್ದರ, ನನ್ನ ಮೇಲೆ ಎಷ್ಟು ಉಪಕಾರ ಆಗತಿತ್ತು ! ... ಇಂಥಾ ವೀರ ಕನ್ನಡಿಗರು ಕೂಡಿ ನಮ್ಮ ಬಡತಿ, ಪ್ರಾಸ್‌ಪೆಕ್ಟ್ಸ ! ಹಾಳ ಮಾಡಿ ಇಡತಾರ ! ... ಇರಲಿ, ಇವರಿಗೂ ನನ್ನ ಕೈ ತೋರಿಸತೇನಿ. ನನ್ನ ಹೇಣ್ತಿ ಗುಜರಾಥದಾಗಿನ ಒಂದು ತುಪ್ಪದ ಪಿಪೇನರ ಆಗಲಿ, ಅಥವಾ ಮಹಾರಾಷ್ಟ್ರದಾಗಿನ ಒಂದು ಟಿ. ಬಿ.

ಪೇಶಂಟ್ಸ ಆಗಲಿ, ಅಡ್ಡಿ ಇಲ್ಲ. ಆದರ ಈ ಕನ್ನಡಿತಿಯರ ಸಂಗತಿ ಬ್ಯಾಡ.

[ ಪ್ರವೇಶ: ಬಲದಿಂದ ಶಾರಾದಾ ಹಾಗೂ ರಮಾಬಾಯಿ ]

ರಮಾಬಾಯಿ : ಅಂತಣ್ಣಾ, ಇಕಾ ಶಾರದಾ ತನ್ನ ತಪ್ಪು ಒಪ್ಪಿಗೋತಾಳ. (ಎಂದು ಶಾರದಾನಿಗೆ ಚಿವುಟುವಳು.)

ಶಾರದಾ : ಆಗಳೇ ನಾ ಮಾತಾಡದೇ ಹೋದದ್ದು ನನ್ನ ತಪ್ಪು ಆತು. ( ಕಾಲು ಬೀಳುವಳು )

ಅನಂತ : ( ರೇಗಿ ) ಅವ್ವಾ, ನಿನಗ ಬುದ್ಧಿ ಅದsನೋ ಇಲ್ಲೊ ? ... ಹಸಿದು ಕಂಗಾಲ ಆಗೇನಿ ನಾನು! ಈ ವ್ಯಾಳ್ಯಾಕ್ಕ ಇದೇನು ಹಂದರಾ ಹೂಡಲಿಕ್ಕೆ ಹತ್ತೀರಿ ? ದಿಂತರಿಕೀ ಉಳ್ಳತೀರೇನು ? ಈ ನಮಸ್ಕಾರ-ಚಮತ್ಕಾರದಿಂದ ನನ್ನ ಹೊಟ್ಟಿ ತುಂಬೂದಿಲ್ಲಾ ! ... ಈ ಹುಡಿಗೀನ್ನ ನಾ ತಿನಬೇಕs ? ನಾ ಏನು ಹುಲೀನs ? ... ನಮ್ಮ ಕನ್ನಡ ರಮಣಿಯರು ಅಂದರ ಹುಲಿಗೆ ನುಡ್ಡಾ ಒರ್ಪಣ ಅಂತ !

ರಮಾಬಾಯಿ : ಅಯ್ಯ, ನಮ್ಮಪ್ಪಾ ! ಇದೇನ ಮಾತೋ ? ಒಮ್ಮೆ ಹಸಿವಿ ಅಂತಿ, ಒಮ್ಮೆ ಇಲ್ಲಾ ಅಂತಿ ! ... ಒಮ್ಮೆ ಫಟ್ಟ್ರಾಗಿ ಹೇಳಿಬಿಡು.

ಅನಂತ : what is this ? ... this is monstrous ! get out ! get out ! ನಾ ನಿಮ್ಮ ಊಟಾನs ಒಲ್ಲೆ ! ಖಾನಾವಳಿಯಿಂದ ತಾಟು ತರಸ್ತೇನಿ !

ರಮಾಬಾಯಿ : ಬ್ಯಾಡೋ ನಮ್ಮಪ್ಪಾ ! ಇಕಾ ನಡಿ, ಅಡಿಗಿ ಆಗಿ ತಿರಿಗಿ ಆದು ಅಂಗಾರ ಆಗೋ ಹೊತ್ತು ಬಂತು ! ನಡಿ .... ನಡಿ .... ( ಅವನನ್ನು ತಬ್ಬಿಕೊಂಡು ಹೋಗುವಳು )

[ ನಿಷ್ಕ್ರಮ : ರಮಾಬಾಯಿ ಮತ್ತು ಅನಂತ. ಬಲಗಡೆ ]

ಶಾರದಾ : ( ಸ್ವಗತ ) ಇದು ಏನು ನಡದ್ವದ? .... ನನಗ ಕನಸು ಬಿದ್ದsದೊ, ಅನಂತಗ ಹುಚ್ಚು ಹಿಡದsದೋ ? .... ಅಥವಾ ಈ ಮನ್ಯಾಗs ಭೂತಸಂಚಾರ ಆಗೇದೋ .... ?

[ ಪ್ರವೇಶ : ತಿಮ್ಮ. ಎಡದಿಂದ ]

ತಿಮ್ಮ : ಅವ್ವನವರs ....

ಶಾರದಾ : ( ಹೊರಳಿ ನೋಡಿ ) ಇದೇನ್ನೋ ತಿಮ್ಮಾ ?

ತಿಮ್ಮ : ಯಾವದರೀ ಅವ್ವನವರs ?

ಶಾರದಾ : ನೀ ತಿಮ್ಮ ಹೌದೋ ಅಲ್ಲೊ ?

ತಿಮ್ಮ : ಹಹಹ ನನ್ನ ಮರೀಶಿಗಂತಿರ್ಯಾ ? ... ಹೋದವರೀ ಅವು.

ಶಾರದಾ : ಎಲ್ಲಿ ಹೋದವ್ರೋ ?

ತಿಮ್ಮ : ಅಂತಣ್ಣೋರು ಅವನ್ನ ತೆಗ್ಯಾಕ ಹೇಳಿದರ್ರಿ !

ಶಾರದಾ : ಅವರ್ಯಾಕ ಹೇಳಿದರು ?

ತಿಮ್ಮ : ಮಾಲಿಕರು ಮಾಲಿಕರಂಗ ಇರಬೇಕು ಯವ್ವಾ, ಆಳುಮಕ್ಕಳು ಆಳುಮಕ್ಕಳಂಗ ಇರಬೇಕು. ಅಂತಣ್ಣೋರು ಈ ಚೀಟಿ ನಿಮಗ ಕೊಡಲಾಕ !

ಶಾರದಾ : ಅಂತಣ್ಣೋರs ? ಯಾವಾಗ ಕೊಟ್ಟರೋ ?

ತಿಮ್ಮ : ಅಂ .... ಅಂ .... ಕೊಟ್ಟು ಈಗ ಒಂದು ಅರ್ಧ ತಾಸು ಆತ್ಯಲ್ಲರೀ.

ಶಾರದಾ : ತಾ ಇಲ್ಲೆ .... ನೀ ಹೋಗು ....

[ ನಿಷ್ಕ್ರಮ : ತಿಮ್ಮ. ಎಡಕ್ಕೆ ]

(ಓದುತ್ತ) "ನನ್ನ ಅರಗಿಣಿ ಶಾರದಾ, ನಿನಗೆ ಈ ವರೆಗೆ ಆದ ಘಟನೆಗಳು ಆಶ್ಚರ್ಯವನ್ನೂ ಸಂದೇಹವನ್ನೂ ಉಂಟುಮಾಡಿರಬಹುದು. ನೀನು ಸರಿಯಾಗಿ ನಾಲ್ಕು ಗಂಟೆಗೆ ಪಡಸಾಲೆಗೆ ಬಾ, ಪಡಸಾಲೆಯಲ್ಲಿ ಯಾರಾದರೂ ಇದ್ದರೆ, ಎಡಬದಿಯ ತೋಟಕ್ಕೆ ಬಾ. ಸರಿಯಾಗಿ ನಾಲ್ಕು ಗಂಟೆಗೆ. ಆಗ ಕೆಲವು ಸಂಗತಿಗಳನ್ನು ನಿನಗೆ ಹೇಳುವೆ. ಅಂದರೆ ಎಲ್ಲ ಸ್ಪಷ್ಟವಾಗಿ ಸಂದೇಹವು ದೂರಾಗುವದು. ಬಾರದಿದ್ದರೆ ನನಗೆ ದೇವರೇ ಗತಿ — ನಿನ್ನವನೇ."

ಕೆಳಗೆ ಸಹಿ ಸುದ್ಧಾ ಮಾಡಿಲ್ಲ .... ಇದನ್ನು ನಂಬಲಿಯೋ ಬೇಡವೋ ? ... (ಟಾಯಿಮ್‌ಪೀಸ ನೋಡಿ) ನಾಕಕ್ಕ ಈಗ ಐದs ಮಿನಿಟು. ಅನಂತಮಾಮಾ ಈಗ ಊಟಕ್ಕ ಕೂತಾನ. ಊಟಾ ಬಿಟ್ಟು ಎದ್ದು ಬರತಾನೋ ಏನೋ ? ... ಏನೇ ಇದ್ದರೂ ಇದೊಂದು ಬಾರಿ ನಂಬಿ ನೋಡುತ್ತೇನೆ. ಇಷ್ಟs ಅಪಮಾನ ಆಗ್ಯಾವ, ಇನ್ನೊಂದಕ್ಕ ಯಾಕ ನಾಚಬೇಕು ? ... ಅಥವಾ ಐದು ಮಿನಿಟಿನ್ಯಾಗ ಹಿಕ್ಕಿಕೊಂಡು ಬರಲ್ಯಾ ? .... ಈಗಂತೂ ಪಡಸಾಲ್ಯಾಗ ಯಾರೂ ಇಲ್ಲ. ಬಂದರ ತಿಮ್ಮನ್ನs ಬರಬೇಕು. ಅವನ್ನs ಯಾವದಾದರೂ ಕೆಲಸಕ್ಕ ಓಡಿಸಬೇಕು! .... ತಿಮ್ಮಾ ತಿಮ್ಮಾ ....

[ ಪ್ರವೇಶ : ತಿಮ್ಮ ಎಡದಿಂದ ]

ತಿಮ್ಮ : ಬಾಯರ‍್ರs.

ಶಾರದಾ : ತಿಮ್ಮಾ, ಅನಂತರಾಯರಿಗೆ ಮುಂಚೀಕಡೇ ಪ್ಯಾರಲಗಿಡದಾಗಿಂದ ಒಂದು ಹತ್ತಿಪ್ಪತ್ತು ಹಣ್ಣು ಹರದು ಇಡು. ಮತ್ತ ಅವನ್ನ ಹೆಚ್ಚಿ, ಉಪ್ಪು ಹಾಕಿ ಒಂದೊಂದು ಬಶೀಒಳಗ ಹನ್ನೆರಡು ಹನ್ನೆರಡು ಹೋಳಕೀ ಹಾಕಿ ಇಡು. ಇಂಥಾ ಆರು ಬಶೀ ತುಂಬಿ, ಮ್ಯಾಲ ಇನ್ನೊಂದು ಬಶೀ ಡಬ್ಬುಹಾಕು. ಅದರ ಮ್ಯಾಲ ಉಳಿದದ್ದರ ಪೈಕಿ ಒಂದೊಂದು ಹಣ್ಣು ಇಡು. ಜತಿಗೆ ಒಂದೊಂದು ಚಂಡು-ಹೂ. ತಿಳೀತs .... ಮತ್ತ ಅವನ್ನ ಪಡಸಾಲ್ಯಾಗ ತರಬ್ಯಾಡ ಮತ್ತ! ಹಿತ್ತಲ ಪಡಸಾಲ್ಯಾಗ ಇಡು .... ಮತ್ತ ಆ ಹಣ್ಣು ಹೊರಗ ಹಳದೀ ಒಳಗ ಕೆಂಪು ಇರಬೇಕು ! ಈ ಕೆಲಸ ಇನ್ನು ಹತ್ತು ಮಿನಿಟಿನ್ಯಾಗ ಆಗಬೇಕು ನೋಡು.

ತಿಮ್ಮ : ಹೂನ್ರಿ ಅವ್ವಾ ಅವರ.

[ ನಿಷ್ಕ್ರಮ : ಶಾರದಾ. ಬಲಕ್ಕೆ ]

ತಿಮ್ಮ : (ಎಡ ವಿಂಗಿನಲ್ಲಿ ಇಣಿಕಿ ಬಾಗಿಲು ಬಡಿದು ) ದ್ಯಾವ್ರು, ದ್ಯಾವ್ರು, ಯಾರೂ ಇಲ್ಲ.ಬರ್ರಿ. ಈಗ ಬರತಾರ ಅವ್ವಾ ಅವರು.

[ ಪ್ರವೇಶ : ವಸಂತ. ಎಡದಿಂದ ]

ವಸಂತ : ತಿಮ್ಮಾ, ಚೀಟೀ ತೋರಿಸಿದ್ಯಾ ?

ತಿಮ್ಮ : ದ್ಯಾವ್ರು, ಇದs ಕೊಟ್ಟೆನ್ರಿ ... ಅವರು ಇಷ್ಟೊತ್ತನಾ ಒಬ್ಬರ್ಡs ಸಿಗs ಲಿಲ್ಲರಿ.

ವಸಂತ : ಏನು ಅಂದಳು ?

ತಿಮ್ಮ : ನನಗೊಂದು ಕೆಲಸಾ ಕೊಟ್ಟಾರ ಏಳ್ರಿ !

ವಸಂತ : ಯಾವ ಕೆಲಸೋ ?

ತಿಮ್ಮ : ಅಂತಪ್ಪನೋರಿಗೆ ಪ್ಯಾರಲಹಣ್ಣು ತಿನಸೋದೇಳ್ರಿ ! .... ಮ್ಯಾಲೆ ಚಂಡು-ಹೂ ಮೂಗ್ಗೆ ಹಿಡೀಬೇಕಂತರಿ.

ವಸಂತ : ತಿಮ್ಮಾ, ನಾ ಮಾಡಲಿಕ್ಕೆ ಹೋದ ನಾಟಕ ಒಂದು ಹೋಗಿ ಇನ್ನೊಂದು ಆಗಲಿಕ್ಕೆ ಹತ್ತೇದ ! ಇನ್ನೊಂದು ಸ್ವಲ್ಪು ಆದರ, ,ಇನ್ನ ಭಸ್ಮಾಸುರ ಶಿವನ ಮ್ಯಾಲs ತಿರಗತಾನ ... ಈ ಸರೇ ಶಾರದಾಗ ನಾ ಯಾರು ಏನು ಎಲ್ಲಾ ಹೇಳಿ ಬಿಡತೇನಿ. ಕಾಲು ಬಿದ್ದು ಕೇಳಿಕೋತೇನಿ... ನಾ ಮೊದಲಿನ ಉಡಾಳ ವಸಂತ ಉಳಿದಿಲ್ಲ ... ನಾನೂ ಹೈದರಾಬಾದ ಇನ್ಶೂರಂಸ ಕಂಪನೀ ಮ್ಯಾನೇಜರ ಆಗೇನಿ. ನನ್ನ ಕಾಲಮ್ಯಾಲ ನಿಲ್ಲೋ ತ್ರಾಣ ನನಗೂ ಬಂದದ. ಈ ರಾತ್ರೀನs ನನ್ನ ಕೂಡ ಹೈದರಾಬಾದಕ್ಕ ನಡೀ, ನನಗ ವಚನಾ ಕೊಟ್ಟೀ ಅಂತ ಹೇಳಿಕೋತೇನಿ.

ತಿಮ್ಮ : ಎಲಾ, ಕಾಲ ಹೆಜ್ಜೆ. ( ಬಲ ವಿಂಗಿನಲ್ಲಿ ಹಣಿಕಿ ಹಾಕುವನು )

ವಸಂತ : ಶಾರದಾ ಬಂದಳs ?

ತಿಮ್ಮ ! ದ್ಯಾವ್ರು, ಅನಂತಪ್ಪನೋರು ! ... ಒಳಗ ನಡೀರಿ ...

ವಸಂತ : ಅಯ್ಯ್ಯಯ್ಯಪ್ಪಾ ... ( ವಸಂತ ಎಡವಿಂಗಿನಲ್ಲಿ ಓಡುವನು)

ಅನಂತ : ( ಪ್ರವೇಶಿಸಿ ಬಲದಿಂದ ) Brutes ! ... Brutes ! ... it is filthy ? .... ಥೂ ! ... ತಿಮ್ಮಾ ... ಓಡು ... ಹೋಗು ... ಒಂದು ಫಸ್ಟಕ್ಲಾಸ ಖಾನಾ ವಳಿಗೆ ಹೋಗಿ, ಒಂದು ಫಸ್ಟಕ್ಲಾಸ ತಾಟು ಬಡಿಸಿಕೊಂಡು ಬಾ, ಹೋಗು ... ಲಗೂ ತೊಗೊಂಡು ಬಾ. (ಅನಂತ ಬ್ರೂಟ್ಸ ಬ್ರೂಟ್ಸ ಅನ್ನುತ್ತ ಖುರ್ಚಿಯ ಮೇಲೆ ಕೂಡುವನು.)

[ನಿಷ್ಕ್ರಮ : ತಿಮ್ಮ. ಬಲಕ್ಕೆ]

[ಪ್ರವೇಶ : ಶಾರದಾ. ಎಡದಿಂದ]

ಶಾರದಾ : ನಾ ಬಂದೇನಿ.

ಅನಂತ : ಬಂದಿರ್ರ್ಯಾ ? ... ಬರ್ರಿ ... ಒಳೇ ಕರಿಸಿಕೊಂಡು ಬಂದವರ ಹಂಗ ಬಂದಿರಿ ... ಅಂಥಂಗ ಆ ಕೂದಲಾ ನಿಮ್ಮದ್ದು ಕಾಣಿಸ್ತದ.

ಶಾರದಾ : ಯಾ ಕೂದಲ ?

ಅನಂತ : ಯಾ ಕೂದಲ ? ... ಇದೇ ಈಗ ನನ್ನ ತಾಟಿನೊಳಗ ಅನ್ನದ ಸಂದ್ಯಾಗ ಬೆಂದು ಬಂದದ್ದು ! ... ಇನ್ನೊಂದು ಸ್ವಲ್ಪ ಆಗಿದ್ದರ ನನ್ನ ಗಂಟಲದಾಗ ಇಳಿಯೋ ಹಂಚಿಕ್ಯಾಗ ಇತ್ತಲ್ಲಾ ! ನಿಮ್ಮದಲ್ಲದ್ದು ಮತ್ತ ಯಾರದು ? ... ಕರೇ ಕೂದಲ, ಅಂದಮ್ಯಾಲ ಅವ್ವನದಂತೂ ಅಲ್ಲ! ... ನಿಮ್ಮದ್ದು ! ಅಂತೂ, ಮದವಿ ಮಾಡಿಕೋ ಅಂತ ಹೇಳಲಿಕ್ಕೆ ಚಲೋ ಗತ್ತು ತಗದೀರಲಾ ! ಏನಿಲ್ದ್ದು ಅನ್ನದಾಗ ಕೂದಲಾ ಈಸಬಿಡೋವರು, ನಾಳೆ ಲಗ್ನ ಆದಮ್ಯಾಲ ಸಾರಿನ್ಯಾಗ ಸೀಗೀಕಾಯಿ, ಚಪಾತ್ಯಾಗ ಇರಿಬಿ, ಅಡಿಕ್ಯಾಗ ಹುಲಗಲೀಬೀಜ ಹಾಕಿಡಲಿಕ್ಕೆ ಹಿಂದಮುಂದ ನೋಡೋವರು ನೀವು ... ಕನ್ನಡಿತಿಯರು ?

ಶಾರದಾ : ಅದು ನನ್ನ ತಲಿಗೂದಲ ಅಲ್ಲ. ಇದ್ದರ, ನಿಮ್ಮ ಅಂಟು ಹಚ್ಚಿಗೊಂಡ ಮೀಶ್ಯಾಗಿನದು ಉಚ್ಚಿ ಬಿದ್ದಿದ್ದೀತು !

ಅನಂತ : ಹಂ ... ನನ್ನ ಮೀಶಿ ಅಂಟು ಹಚ್ಚಿ ಹಚ್ಚಿದ್ದ .... ? ಯಾಕ್ಕ ?... ಬೇಕಾಧಂಗ ನಾಲಿಗೀ ಹರಿಬಿಡತೀರಿ ? ಕಿತ್ತಬರ್ರಿ ನೋಡೋಣ ನನ್ನ ಮೀಶೀನ್ನ ! ಸ್ವಲ್ಪ ಬುದ್ಧೀ ಖರ್ಚುಮಾಡಿ ಮಾತಾಡ್ರಿ! ... ಹೀಂಗ ಸಿಕ್ಕಸಿಕ್ಕವರಿಗೆ ಏನಾದರೂ ಅಂದರ, ನಾವು ಹೋಗ್ಲಿ, ಒಬ್ಬ ಕೆಲಸದ ಹುಡಗನೂ ನಿಮ್ಮನ್ನ ಲಗ್ನಾಮಾಡಿ ಕೋಳಿಕ್ಕಿಲ್ಲ ! ಹುಚ್ಚರ ಆಸ್‌ಪತ್ರಿಗೆ ಹೋಗಬೇಕಾದೀತು.

ಶಾರದಾ : ಹೋಗಬೇಕು ಯಾಕ? ... ಈಗ ಇದ್ದದ್ದೂ ಹುಚ್ಚರ ಆಸ್ಪತ್ರ್ಯಾ!

[ ಪ್ರವೇಶ : ರಮಾಬಾಯಿ. ಬಲದಿಂದ ]

ರಮಾಬಾಯಿ : ಅಂತಣ್ಣಾ, ಅಂತಣ್ಣಾ ? ... ಯಾಕೋ ? ನೋಡವ್ವಾ ಶಾರದಾ ! ಅನ್ನಾ-ಸಾರು ಬಡಿಸಿದೇ ... 'ನನಗ ಹಸೀ ಟಮಾಟೋ ಬೇಕು' ಅಂದಾ. ತ್ವಾಟದಾಗಿಂದ ಒಂದೆರಡು ಹರಕೊಂಡು ಬರೋಅಷ್ಟ್ರಾಗ ಊಟಾ ಬಿಟ್ಟು ಎದ್ದಾನ ! ... ಅನ್ನಾನೂ ಹಂಗ್ಸ ಬಿಟ್ಟು ಎದ್ದೀಯಲ್ಲೋ ಅಂತಣ್ಣಾ ! ... ನನಗೂ ಅನಿಸಿತ್ತು. ನನಗ ಹಸಿವಿ ಇಲ್ಲಾಂತ ಅಂದಿದ್ದಿ ... ಏನೋ ನಿಪ್ಪಹಸಿವಿ ಆಧಂಗ ಆಗಿರಬೇಕು ....

ಅನಂತ : ( ರೇಗಿ ) is she mad ... ? ಇಂದ ಎಲ್ಲಾನೂ ಹಿಂಗೇನು ಆಗೇದ ? .... ಖರೇನಸ ಹುಚ್ಚರ ಆಸ್ಪತ್ರಿ ಆಗೇದಲ್ಲ .... ಇನ್ನ ಖಾನಾವಳಿಯೊಳಗಿಂದ ಊಟ ಬರೂತನಕಾ ನಾನು ನನ್ನ ಕೋಣಿಯೊಳಗ ಮಲಗಿರತೇನಿ ! ನೀವು ಯಾರೂ ನನ್ನ ಕೋಣಿ ಹತ್ತರ ಬರೋಹಂಗಿಲ್ಲ. ಬಂದರೂ ಒಳಗ ಬರೋ ಹಂಗಿಲ್ಲ. ಒಳಗ ಬಂದರೂ ಮಾತು ಆಡತಕ್ಕದ್ದಲ್ಲ · ಆಡಿದರೂ ಊಟದ ಮಾತು

ಎತ್ತತಕ್ಕದ್ದಲ್ಲಾ— ಏನಾದರೂ ನನ್ನ ಮೀಶೀದಶಿಂದಂತೂ ಚಕಾರ ಶಬ್ದ ಇಲ್ಲ...

ರಮಾಬಾಯಿ : ಖಾನಾವಳೀ ಊಟ್ಸ...

ಅನಂತ : ಹೌದು, ಹೌದು, ಖಾನಾವಳೀ ಊಟ ! ನನಗ ಹಸಿವಿ ಆಗಿಲ್ಲಾ, ಆಗಿಲ್ಲಾ, ಅಂತ ಹೇಳಿ ಉಪವಾಸ ಕೆಡವಬೇಕೆಂದು ಸಂಚು ಹೂಡಿರುವ ನನ್ನ ಪೂಜ್ಯ ಮಾತೋಶ್ರೀಯವರೇ, ಖಾನಾವಳಿಯ ತಾಟು ಬಂದಮೇಲೆ ಸ್ವಲ್ಪ ಬಂದು ನೋಡಿ ಹೋಗಿರಿ. ನನಗೆ ಹಸಿವೆಯಾಗಿದೆಯೋ ಇಲ್ಲವೋ ಎಂಬುದನ್ನು ...

[ ನಿಷ್ಕ್ರಮ : ಅನಂತ. ಬಲಕ್ಕೆ ]

ರಮಾಬಾಯಿ : ಶಾರದಾ ... ?

ಶಾರದಾ : ಅವರ ಅನ್ನದಾಗ ಕೂದಲ ಎಳೀ ಬಂದಿತ್ತಂತ ! ಅದು ಕಪ್ಪು ಇತ್ತಂತ ! ನನ್ನದ್ಸ ಅಂತ ಇಷ್ಟೊತ್ತನಕಾ ಆಡಿಸ್ಯಾಡಿದರು.

ರಮಾಬಾಯಿ : ಶಾರದಾ, ಇದೇನು ಆತ್ಯ ? ... ಹಿಂಗಾದರ ನಿನ್ನ ಲಗ್ನ . .

ಶಾರದಾ : ಮಾವಿಾ, ನನಗ ಯಾಕೋ ಸಂಶಯ ಬರತದ ! ... ಇದೇ ಈಗ ಈ ಎಡಗಡೆ ಕೋಣೆಯೊಳಗ ಯಾರಾದರೂ ಇದ್ದರೇನು ?

ರಮಾಬಾಯಿ : ಎಲ್ಲಿ ? ವಸಂತನ ಕೋಣೆಯೊಳಗ್ಸ ... ? ಅಲ್ಲಾ್ಯರು ಬರ ಬೇಕು ? ಕೀಲಿ ಹಾಕೇದ.

ಶಾರದಾ : ಆಗಳೇ ನಾ ಬರತ ಒಂದೆರಡು ಬುಕ್ಕು ಧಡಾ ಧಡಾ ಬಿದ್ದ ಸಪ್ಪಳ ಕೇಳಿಸಿತು. ಬಾಗಿಲ ಸಂದ್ಯಾಗಿಂದ ನೋಡಿದೆ. ಯಾರೂ ಕಾಣಿಸಲಿಲ್ಲ.

ರಮಾಬಾಯಿ : ಅತ್ತಲಾಗಿಂದ ಬಂದು ಕಿಡಿಕ್ಯಾಗ ನೋಡಬೇಕಾಗಿತ್ತು !

ಶಾರದಾ : ಇಲ್ಲೆ ಅನಂತಮಾಮಾನ ಕಡೆಗೆ ಬಂದೆ. ಅಷ್ಟೆಲ್ಲಾ ಸುಚಾಯಿಸಲಿಲ್ಲ ನನಗ.

ರಮಾಬಾಯಿ : ತಿಮ್ಮ ಎಲ್ಲಿದ್ದಾನ್ಸ ?

ಶಾರದಾ : ಅವ ಖಾನಾವಳಿಗೆ ಹೋಗಿರಬೇಕು ... ಮಾವಿಾ, ಅವನ ಮೀಶಿ ಹೋಗ್ಯಾವ. ನೋಡಿದ್ಯಾ ... ನನಗ ಯಾಕೋ ಒಂದು ಹುಚ್ಚು ಸಂಶಯ ಬರಲಿಕ್ಕೆ ಹತ್ತೇದ.

ರಮಾಬಾಯಿ : ಯಾತರ ಸಂಶಯನ್ಸ ?

ಶಾರದಾ : ಮಾವಿಾ, ನಾನು ಈಗೊಂದು ಮೋಜು ಮಾಡತೇನಿ. ನೀ ಅದ ನ್ನೆಲ್ಲಾ ಈ ಬಾಗಿಲ ಮರೀಗೆ ನಿಂತುಕೊಂಡು ನೋಡು ! ಗಾಬರಿ ಆಗಬ್ಯಾಡಾ. ಪಿಟ್ಟಂತ ಮಾತು ಆಡಬ್ಯಾಡಾ. ನನ್ನ ಸಂಶಯ ಖರೇ ಇದ್ದರ ಎಲ್ಲಾನೂ ತಾನ್ಸ ಹೊರಬೀಳತದ. ( ಎಂದು ರಮಾಬಾಯಿಯನ್ನು ಎಡಕ್ಕೆ ಮುಂದಿನ ವಿಂಗಿನ ಹಿಂದೆ ದೂಡು ವಳು. ತಾನು ರಂಗಮಧ್ಯಕ್ಕೆ ಬಂದು ಕೆಟ್ಟ ಸ್ವರದಲ್ಲಿ ) ಅಯ್ಯಯ್ಯೋ .... ಸತ್ತೇ .... ಮಾವಿಾ .... ತಿಮ್ಮಾ .... ಕಳ್ಳರು .... ಕಳ್ಳರು .... ನನ್ನ ಬಳೀ ... ಅಯ್ಯ -

ರಮಾಮಾಮಿೂ ... ಕಳ್ಳರು ... ಕಳ್ಳರು (ಎಂದು, ತಾನೂ ರಮಾಬಾಯಿಯ ಬಳಿಗೆ ಬಂದು ಅಡಗುವಳು.)

[ಕ್ಷಣಹೊತ್ತು ರಂಗದ ಮೇಲೆ ಯಾರೂ ಇಲ್ಲ. ಸ್ವಲ್ಪ ಹೊತ್ತಿನಲ್ಲಿ ವಸಂತ ಕೈಯಲ್ಲಿ, ದೊಣ್ಣೆಯೊಡನೆ ಎಡದಿಂದ ಪ್ರವೇಶಿಸಿ ಅತ್ತಿತ್ತ ನೋಡುತ್ತ, ಬಲಪ್ರವೇಶದ ಕಡೆಗೆ ಬೆನ್ನುಮಾಡಿ ನಿಂತಿರುವನು.]

[ಪ್ರವೇಶ: ಬಲದಿಂದ. ಅನಂತ ಕೈಯಲ್ಲೊಂದು ಸ್ಟೂಲು. ವಿಚಿತ್ರವೇಷ, ಬನಿಯನ್ನು ಪ್ಯಾಂಟು, ಹುಬ್ಬಿನವರೆಗೆ night cap. ಅನಂತ ವಸಂತನನ್ನು ನೋಡಿ, ಅವನನ್ನು ಹಿಂದಿನಿಂದ ಹಿಡಿಯ ಹೋಗುವನು. ವಸಂತ ತಪ್ಪಿಸಿಕೊಳ್ಳುವನು.]

**ವಸಂತ :** ಕಳ್ಳಾ ...

**ಅನಂತ :** ಕಳ್ಳಾ ... ಸುಮ್ಮನೇ ನಿಲ್ಲು ... by my authority as judge I arrest you. ನಿನ್ನ ಬಡಿಗೆ ಒಗೆ ... ಪೋಲೀಸ ... ಪೋಲೀಸ ... (ಎನ್ನುತ್ತ ವಸಂತನ ಬಡಿಗೆಯ ಹೊಡೆತವನ್ನು ಸ್ಟೂಲಿನ ಮೇಲೆ ತಕ್ಕೊಳ್ಳುತ್ತ ನುಗ್ಗುವನು. ಇಬ್ಬರ ಜಗಳದಲ್ಲಿ ಅನಂತನ ಟೊಪ್ಪಿಗೆ ಬೀಳುವದು. ವಸಂತನ ಮೀಸೆ ಬೀಳುವವು. ಗುರುತು ಹತ್ತಿ)

**ಅನಂತ :** ವಸಂತಾ ...

**ವಸಂತ :** ಅಣ್ಣಾ ...

**ಅನಂತ :** ಇದೇನು ನೀನು ಇಲ್ಲಿ !

**ವಸಂತ :** ಇದೇನು ವಿಚಿತ್ರವೇಷ ? ಗುರತೇ ಸಿಗಲಿಲ್ಲ.

[ಪ್ರವೇಶ : ರಮಾಬಾಯಿ ಮತ್ತು ಶಾರದಾ]

**ಶಾರದಾ :** ನಮಗ ಮಾತ್ರ ನಿಮ್ಮದು ಗುರುತು ಸಿಕ್ಕಿತು.

**ರಮಾಬಾಯಿ :** ವಸಂತಾ, ವಾಸಣ್ಣಾ ... (ಅಪ್ಪಿಕೊಳ್ಳುವಳು. ವಸಂತ ನಮಸ್ಕರಿಸುವನು)

**ಅನಂತ :** ನನಗ ಒಂದೂ ತಿಳೀವಲ್ಲದು ? ... ಇದೆಲ್ಲಾ ನನ್ನ ವಿರುದ್ಧ ಸಂಚು ನಡೆದಂತೆ ಕಾಣಿಸ್ತದ ... ನಾಕು ವರ್ಷದ ಹಿಂದೆ ಓಡಿಹೋದ ತಮ್ಮ, ಇಂದು ಮೀಶಿ ಹಚ್ಚಿಕೊಂಡು ಕಳವುಮಾಡಲಿಕ್ಕೆ ಬಂದರ, ಅವ್ವ ಅವನ್ನ ಅಪ್ಪಿಗೋತಾಳ. ಏನದು ಇದು ?

[ಎಲ್ಲರೂ ನಗುವರು]

**ಅನಂತ :** ನನಗ ಎಲ್ಲಾನೂ ತಿಳೀದ ಹೊರತು ನಾ ನಗಲಾರೆ.

**ವಸಂತ :** ನಾನು ಎಲ್ಲಾನೂ ಹೇಳತೇನಿ.

**ತಿಮ್ಮ :** (ತಾಟಿನೊಡನೆ ಪ್ರವೇಶಿಸಿ) ದ್ಯಾವ್ರು, ಊಟ ...

**ಅನಂತ :** ಥೂ, ಮೊದಲು ವಸಂತ ಮಾತಾಡಲಿ, ಆಮೇಲೆ ಊಟದ ಚಿಂತೆ !

ಶಾರದಾ : ನನಗೂ ಎಲ್ಲಾನೂ ಗೊತ್ತಿಲ್ಲ.

ವಸಂತ : ನಾನು ಎಲ್ಲಾ ಸಾದ್ಯಂತ ಹೇಳಿದರ ಆತ್ಯೊ ಇಲ್ಲೊ ?... ಇಕಾ, ಎಲ್ಲಕ್ಕೂ ಮೊದಲು ನೀವು ನನ್ನ ವಿಷಯಕ್ಕ ನಿಮಗ ಇದ್ದ ಅಭಿಪ್ರಾಯ ಬದಲು ಮಾಡಲಿಕ್ಕೆಬೇಕು ! ನಾಲ್ಕು ವರ್ಷದ ಹಿಂದೆ ಯಾವುದೋ ಹುಡುಗ-ಬುದ್ಧಿಯಿಂದ ನಾನು ಮನೆ ಬಿಟ್ಟು ಹೋದೆ, ಹೋಗುವಾಗ ಸ್ವಲ್ಪ ಕಳವು ಮಾಡಿಕೊಂಡೆ ಹೋದೆ. ಇದರ ವಿಷಯಕ್ಕ ನನಗೂ ನಾಚಿಕಿ ಅನಿಸ್ತದ.

ರಮಾಬಾಯಿ: ಕದ್ದರೂ ನನ್ನ ಪಾಟ್ಲಿ ಕದೀಬಾರದಾಗಿತ್ತಪಾ !

ವಸಂತ : ಅವ್ವಾ, ನಿನ್ನ ಪಾಟ್ಲಿ ಶುಭಾ ಇತ್ತು ! ಯಾಕಂತಂದರ, ನಾನು ಈಗ ಹೈದರಾಬಾದ ಇನ್‌ಶೂರನ್ಸ ಕಂಪನಿಯ ಮ್ಯಾನೇಜರನಿದ್ದೇನೆ. ತಿಂಗಳಾ ೫೦೦ ರೂ ಪಗಾರ !

ರಮಾಬಾಯಿ : ಹೌದs ... ಹೌದs ... ನನ್ನಪ್ಪಾ !

ವಸಂತ : ನಾನು ಮೊದಲು ಆ ಕಂಪನಿ ಸೇರಿದಾಗ ಅದು ಒಳ್ಳೆಯ ಸ್ಥಿತಿ ಯಲ್ಲಿರಲಿಲ್ಲ. ಏನೋ ಅದೂ ಬೆಳೆಯತೊಡಗುವದಕ್ಕೂ ನಾನು ಚೆನ್ನಾಗಿ ಕೆಲಸ ಮಾಡೋದಕ್ಕೂ ಗಂಟುಬಿದ್ದು ನಾ ಏರಿಕೋತ ಹೋಗಿ ಮ್ಯಾನೇಜರ ಆದೆ. ಈಗ ನನ್ನ ಜವಾಬುದಾರೀ ನನಗ ತಿಳಿದsದ. ಹಿಂದಾಗಡೆ, ನಾನು ತಿರುಗಿ ಒಮ್ಮೆ ಮನೆಗ ಹೋಗಿ ಅವ್ವನ ಕೂಡ ಮಾತಾಡಿ ಆಕೆಗೆ ಸಮಾಧಾನ ಮಾಡಬೇಕು ಅಂತ ನನ್ನ ಇಚ್ಛಾ ಆತು. ಅದs ಪ್ರಕಾರ, ಶಾರದಾನ ಕೂಡ ಲಗ್ನ ಮಾಡಿಕೋಬೇಕೂಂತ ನನ್ನ ಚಿಕ್ಕಂದಿನ ಆಶಾ ಇತ್ತು.

ಅನಂತ : ಮಹಾರಾಯಾ, ದೇವರು ನಿನಗ ಕಲ್ಯಾಣಮಾಡಲಿ ! .... ಅಷ್ಟು ಮಾಡಿದೀ ಅಂದರ ನನ್ನ ಮೇಲೆ ಉಪಕಾರ ಮಾಡಿಧಾಂಗ ಆಗತದ.

ವಸಂತ : ಓಹೋ, ನಮ್ಮ ನಿಶ್ಚಯ ಆಗೇದ. ಇಷ್ಟs ಅಲ್ಲ, ಆಕಿಯಿಂದ ನನಗ ವಚನನೂ ಸಿಕ್ಕದ. ಇರಲಿ ; ಅನಂತಾ, ನಿನಗ ನಮ್ಮ ಅವ್ವನ ಸ್ವಭಾವ ತಿಳದsದೋ ಇಲ್ಲೊ, ನನಗ ಮಾತ್ರ ತಿಳಿದದ. ಅವ್ವನದು ನಿನ್ನ ಮೇಲೆ ಬಹಳ ಪ್ರೀತಿ. ಆ ಪ್ರೀತಿ ಆಕೀನ್ನ ಕುರುಡುಮಾಡಿ ಜಗತ್ತಿನ ಕಡೆ ಆಕೀ ದೃಷ್ಟೀನ ಮುಂದ ಮಾಡೇದ. ನೀನು ಆ ಪ್ರೀತಿ ತಿರಸ್ಕರಿಸಬಹುದು. ಆದರ ಅದು ಅದs. ಆಕೀ ಸ್ವಭಾವ ಸ್ವಲ್ಪ ವಿಚಿತ್ರ. ಸಾಧಾರಣ ಎಲ್ಲಾ ದೇಸಾಯಿ-ದೇಶಪಾಂಡೆ ಮನೆತನದ ಹೆಂಗಸರು ಅರ್ಧಾ ವಯಸ್ಸಿಗೆ ಬಂದರಂದರ ಇದs ಅವರ ಮನಸ್ಸು ಆಗತಿರ್ತ ದೇನೋ ಅಂತ ನನ್ನ ತರ್ಕ !... ಕ್ಷಣಿಕ ಸಿಟ್ಟಿನ ಭರದಾಗ ಆಕಿ ಏನು ಬೇಕಾದದ್ದನ್ನ ಆಡಿಬಿಡತಾಳ ! ... ಆಡಿದ ಮೇಲೆ ಅದೇ ಖರೇ ಅಂತ ಸಾಧಿಸುವ ಹಟಾನೂ ಅದ ಆಕೀ ಒಳಗ ! ಅದಕ್ಕ, ಮೊದಲಿನ ಕ್ಷಣಕ್ಕ ಆಕೀ ಮ್ಯಾಲೆ ಒಳ್ಳೇ ಪರಿಣಾಮ ಮಾಡಬೇಕಾಗ್ತದ ... ಈಗ ನಾನು ಆಕೀ ಬಂಗಾರದ ಪಾಟ್ಲಿ ಒಯ್ದಿದ್ದರ ಸಿಟ್ಟು, ಇನ್ನೂ ಆಕಿಯ ಮನಸ್ಸಿನ್ಯಾಗ ಅದ.

ರಮಾಬಾಯಿ : ವಸಂತಾ, ನನ್ನ ಭಂಗಾರಾ, ನಿನಕಿಂತಾ ಹೆಚ್ಚಿನ ಭಂಗಾರಾ....

ವಸಂತ : ಅವ್ವಾ, ನಾ ಈಗ ನಿನಗ ಭಂಗಾರ ಆದೆ. ಮೊದಲಿಗೇ ನಾ ವಸಂತ ಅಂತ ಹೇಳಿ ಭೆಟ್ಟಿ ಆಗಿದ್ದರ, ನೀನು 'ನನಗ ಮಾರಿ ತೋರಿಸಬೇಡ' ಅಂತ ಹೇಳಿ ಬಿಡತಿದ್ದಿ! ... ಒಮ್ಮೆ ಅಷ್ಟು ಅಂದಿದ್ದೀ ಅಂದ್ರ, ಸಾಕ್ಷಾತ್ ಬ್ರಹ್ಮ ಬಂದು ನಿನಗ ಸಮಾಧಾನ ಹೇಳಿದ್ದರೂ ಕೇಳತಿದ್ದಿಲ್ಲ! ...

ಶಾರದಾ : ಅದರ ದಶಿಂದ ನೀವು ಅನಂತರಾಯರ ವೇಷದಾಗ ಬಂದಿರ್‍ಯಾ!

ವಸಂತ : ಹೇಳತೀನಿ. ಅನಂತ ಇಂಗ್ಲಂಡದಿಂದ ಮುಂಬೈಗೆ ಬಂದದ್ದನ್ನು ನಾನು ವರ್ತಮಾನಪತ್ರದಾಗ ನೋಡಿದೆ. ಓದಿದ ಕೂಡಲೇ, ಒಮ್ಮೆಲೇ ಧಾರ. ವಾಡಕ್ಕ ಬರಬೇಕೂ ಅಂತ ನನಗ ಸ್ಫೂರ್ತಿ ಆತು! ... ಮೊದಲನೇ ಕಾರಣ, ಒಮ್ಮೆ ಅನಂತ ನನಕಿಂತ ಮೊದಲು ಅವ್ವಗ ಭೆಟ್ಟಿ ಆದಾ ಅಂದರ, ಮುಂದ ಅವ್ವಗ ಇಡೀ ಜಗತ್ತs ಬ್ಯಾಡಾಗತಿತ್ತು; ನಾನೂ ಬ್ಯಾಡಾಗತಿದ್ದೆ! ನನ್ನ ಹಿಂದಿನ ತಪ್ಪು ಎಲ್ಲಾ ಅಕೀ ಕಣ್ಣೊಳಗ ಒತ್ತತಿದ್ದವು! ಅದಕ್ಕ ಅನಂತನಕಿಂತಾ ಮೊದಲು ಬಂದು ಭೆಟ್ಟಿ ಆಗಿ ಪ್ರಯತ್ನಮಾಡೋದು ಅಂತ ನಿರ್ಧಾರಮಾಡಿದೆ! . . ಎರಡನೇ ಕಾರಣಾ ಅಂದ್ರ, ಶಾರದಾ! ... ಅನಂತಗ ಶಾರದಾ ಆಗ ಬ್ಯಾಡಾಗಿದ್ದಳು. ಈಗ ಹೆಂಗೋ ಏನೋ ಅಂತ ನನಗ ಸಂಶಯ ಇತ್ತು. ಚಿಕ್ಕಂದಿನ ಮಾತಿಗೂ ಹರೇದ ಮಾತಿಗೂ ಬಿಡತದ ಅನ್ನೋದು ನಿಮಗ ಗೊತ್ತು ಅದ. ಅಕಸ್ಮಾತ್ ಆತ, ಶಾರದಾನ್ನ 'ನಾ ಲಗ್ನ ಆಗತೇನಿ' ಅಂತ ಅಂದಿದ್ರ, ನನ್ನ ಆಶಾ ಎಲ್ಲಾ ಮಣ್ಣಾಗಿ ಹೋಗತಿದ್ದವು. ಶಾರದಾ ಇನ್ನೂ ಚಿಕ್ಕಾಕಿ. ಆಕೀಗೆ ಅನಂತ ಏನು, ವಸಂತ ಏನು, ತಾನು ತಂದೆ-ತಾಯಿ ಇಲ್ಲದ ಹುಡಿಗಿ, ಲಗ್ನ ಆದರ ಸಾಕು, ಅನ್ನೋ ವಿಚಾರದಾಕಿ. ಬಹಳ ಕಲತಾಕೀನೂ ಅಲ್ಲ! ... ಇಂಥವನs ಗಂಡ ಬೇಕೂ ಅನ್ನೋ ಅಂಥಾ ಶಿಕ್ಷಣನೂ ಅಕೀಗೆ ಸಿಕ್ಕಿಲ್ಲ. ಹಳೇ ಹೊಸಾದರ ಹೊಸ್ತಿಲಮೇಲೆ ನಿಂತಾಕಿ ಆಕಿ ಒಲ್ಲೆ ಅನ್ನೋದು ಅಸಾಧ್ಯನs ಇತ್ತು!

ಶಾರದಾ : ಆದರ ನೀವು ಅನಂತರಾಯರು ಅಂತ ಹೇಳಿದ್ದು ಯಾಕೆ?

ವಸಂತ : ಮೊದಲು ಮನೆಗೆ ಬಂದಾಗ, ನನಗೂ ಆ ವಿಚಾರ ಇದ್ದಿದ್ದಿಲ್ಲ. ಆದರ ತಿಮ್ಮ, ನಾನು ಅನಂತನs ಅಂತ ತಿಳಕೊಂಡ. ಅಂದ ಕೂಡಲೇ, ನಾನೂ ಅಂದೆ... ಸದ್ಯಕ್ಕ ನಾ ಅನಂತನs ಇದ್ದಂಗ ಇರಬೇಕು! ... ನನ್ನ ಸಲುವಾಗಿ ನಿಮ್ಮ ಇಬ್ಬರ ಅಭಿಪ್ರಾಯ ಏನದs ಅನ್ನೋದನ್ನ ತಿಳಕೊಂಡಮ್ಯಾಲ, ಯೋಗ್ಯ ಕ್ಷಣ ದೊಳಗ ನಾ ಯಾರು ಅನ್ನೋದನ್ನ ಹೇಳಬೇಕು, ಅಂತ! ... ನನ್ನದಶಿಂದ ನಿಮ್ಮ ಅಭಿಪ್ರಾಯ ಕೆಟ್ಟ ಇದ್ದರ, ನಾನು ಇನ್ಸೂರನ್ಸ ಕಂಪನೀ ಮ್ಯಾನೇಜರ ಅನ್ನೋದನ್ನ ನೀವು ನಂಬತಿದ್ದಿಲ್ಲ. ಅವ್ವನಂತೂ, ನಾ ಇನ್ನೊಂದು ಪಾಟ್ಲಿ ಕದೀಲಿಕ್ಕೆ ಬಂದೇನಿ. ಅಂತ ತಿಳಕೋತಿದ್ದಳು. ಅದಕ್ಕ ನಿಮ್ಮ ಮನಸ್ಸು ಶುದ್ಧ ಮಾಡಿ, ಆಮೇಲೆ ದೇವ್ವನಂತೆ ಪ್ರಕಟ ಆಗೋ ವಿಚಾರ ನನ್ನದಿತ್ತು.

ಅನಂತ : ವಸಂತಾ ಮತ್ತೂ ವಿಶೇಷ ... ವಿ ...

ವಸಂತ : ಅಣ್ಣಾ, ಸ್ವಲ್ಪ, ಪೂರ್ಣ ಕೇಳು ... ನನ್ನ ಯೋಜನೆ ಪೂರ್ಣ ಯಶಸ್ವಿ ಆಗದ್ದಕ್ಕ ...

ರಮಾಬಾಯಿ : ಅದಕ್ಕ ತೀರ ವಿಶೇಷ ಹಚ್ಚಿಕೊಳ್ಳಬೇಕೇನಪಾ ?

ವಸಂತ : ಅದೆಲ್ಲಾ ಶಾರದಾಗ ಬೇಕಾಗಿತ್ತು ಅಂತ ! ಅಂತ ಹೇಳಿ ತಿಮ್ಮನ ಕಡಿಂದ ಕೈಗಡಾ ಇಸಕೊಂಡೆ !

ಅನಂತ : ಎಲಾ ತಿಮ್ಮಾ ...

ತಿಮ್ಮ : ದ್ಯಾವ್ರು ...

ವಸಂತ : ಅಣ್ಣಾ, ಸ್ವಲ್ಪ ಪೂರ್ಣ ಕೇಳು. ನನ್ನ ಯೋಜನೆ ಪೂರ್ತಿಯಾಗ ದ್ದಕ್ಕೆ ಕಾರಣ ಅಂದರ, ನಿನ್ನ ಆಗಮನ ... ನೀನು ಇನ್ನೂ ನಾಲ್ಕು ದಿನ ಮುಂಬೈ ಯಲ್ಲಿ ಇದ್ದು ಬರುವಿ ಎಂದು ನಾನು ತಿಳಿದಿದ್ದೆ ... ನೀನು ಇತ್ತ ಬರುವದರ ಬಗ್ಗೆ ವರ್ತಮಾನಪತ್ರಗಳಲ್ಲಿ ಒಂದು ಶಬ್ದವೂ ಇರಲಿಲ್ಲವಲ್ಲ !

ಅನಂತ : ಮಾಹಾರಾಯಾ, ಏನಿಲ್ಲದ ನಾ ಕನ್ನಡಮನಶ್ಯಾ ಅಂತ ಪ್ರಕಟ ಮಾಡಿ ಫೋಟೊ ಹಾಕ್ಯಾರ ; ಬರುವದು ಅಷ್ಟೊಂದು ತಿಳಿದಿದ್ದರ, ಊರ ತುಂಬ ಸಭಾ ಮಾಡಿ, ಮೆರವಣಗೀ ಮಾಡತಿದ್ದರು ! ಮುಂದ ನಮ್ಮ prospects ಎಲ್ಲಾ ಬಾದ ! ... ಅದಿರಲಿ, ನಾ ಬಂದಮ್ಯಾಲ ಆದರೂ, ನೀನು ಬೈಲಿಗೆ ಬಂದು ಎಲ್ಲಾ ಹೇಳಬೇಕಾಗಿತ್ತು !

ವಸಂತ : ಮಾಹಾರಾಯಾ, ಅಷ್ಟು ಮಾಡಿದ್ದರ, ಅವ್ವಾ ನಾನು ಇನ್ನೊಂದು ಪಾಟ್ಲಿಗೇ ಬಂದೇನೀ ಅಂತ ...

ರಮಾಬಾಯಿ : ವಾಸಣ್ಣಾ, ನನಗ ಹಂಗಿಸಬ್ಯಾಡೋ ! ನನ್ನ ಬಂಗಾರಾ ಎಲ್ಲಾ ಲಗ್ನದಾಗ ನಿನಗss ಆಗಲೆಪ್ಪಾ.

ವಸಂತ : ಅಣ್ಣಾ, ಇದss ಅವ್ವನ ಸ್ವಭಾವ ! ಒಮ್ಮೆ ನಾ ಬೇಕು ಅಂದಾಳ. ಕಡೆತನಕ ಹಂಗss ಸಾಧಿಸತಾಳ. ಅಂತೂ, all is well that ends well .... ಅಣ್ಣಾ, ನೀನು ಶಾರದೆಯನ್ನು ' ಕನ್ನಡಿತಿ ' ಅಂತ ಚಾಷ್ಟಿ ಮಾಡತಿದ್ದಿ. ಆದರ ಕಡೀಕೆ, ಆಕೀನss ನಮ್ಮೆಲ್ಲರಕ್ಕಿಂತ ಜಾಣತನ ತೋರಿಸಿದಳು.

ಅನಂತ : ಅಂದರ ?

ವಸಂತ : ನಮ್ಮ ಮನೆಗೆ ಕಳ್ಳರು ಬಂದದ್ದು ...

ಅನಂತ : ಅಂದ ಹಂಗss, ಆ ಕಳ್ಳರು ಎಲ್ಲಿ ಹೋದರು ? ... ಈ ಮನಿಗೆ ಫೋನ ಕನೆಕ್ಶನ್ ಇದ್ದಹಂಗ ಕಾಣಿಸೂದಿಲ್ಲ ! ... ಇಷ್ಟೊತ್ತಿಗೆ ಅವರು ಫರಾರಿ ಆಗಿರಬಹುದು. ಮಾತಿನ ಭರದಾಗ ನಾವೆಲ್ಲರೂ ಮರೆತೇ ಬಿಟ್ಟೆವಲ್ಲ ... !

ವಸಂತ : ಇದು ವಿಲಾಯತಿಯಿಂದ ಪಡೆದು ಬಂದು, ಮುಂಬೈಯೊಳಗ ಬೆಳೆಯಬೇಕಾದ ನಿನ್ನ ಬುದ್ಧಿ ! ... ಅಣ್ಣಾ, ಕಳ್ಳಾ, ಕಳ್ಳಾ, ಅಂತ ಒದರಿ, ಶಾರದಾ

ನನ್ನ ನಾಟಕಾನ್ನ ಬೈಲಿಗೆಳೆದಳು. ಆಕೆ ಕಳ್ಳರ ಕೈಯಲ್ಲಿ ಸಿಕ್ಕಮೇಲೆ ನಾನು ಬಿಡಿಸಲಿಕ್ಕೆ ಬರದೇ ಇರುತ್ತಿದ್ದನೇ ? ... ನೀನಂತೂ ಶುದ್ಧ ಹುಂಬ ... !

**ಅನಂತ :** ( ಗೊಂದಲಗೊಂಡು ) ಹಂಗಾರ ಕಳ್ಳರು ಬಂದದ್ದು ಸುಳ್ಳು ... ಹೌದಲ್ಲೊ !

[ ಎಲ್ಲರೂ ನಗುವರು ]

**ರಮಾಬಾಯಿ :** ವಸಂತಾ, ಶಾರದಾ, ಎಷ್ಟು ಶಾಣ್ಯಾವs ನನ್ನ ಮುದ್ದು ಹುಡುಗರು !

**ವಸಂತ :** ಅಣ್ಣಾ, ಇಗೋ ಇದು ನಿನ್ನ ಸೋಲು. ನಮ್ಮ ಅವ್ವನ ಮಾತು ಅಂದರ ಥರ್ಮಾಮಿಟರದೊಳಗಿನ ಪಾರಜದ ಪಾತಳಿ ಇದ್ದಹಂಗ. ಇದು ನನ್ನ ಹಾಗೂ ಶಾರದಾನ ಗೆಲುವು, ಅಂದರೆ ಭಾರತೀಯ ಬುದ್ಧಿಯ ಗೆಲುವೇ ಸರಿ. ಶಾರದಾ, ಆ ಭಾರತಾಂಬೆಯ ಹಾಡು ಹೇಳು. ಅದೇ ನಮ್ಮ ವಿವಾಹದ ನಾಂದಿ ಯಾಗಲಿ.

[ ಶಾರದಾ ' ಝುಂಡಾ ಊಂಚಾ ' ಹಾಡು ಹೇಳುವಳು. ಈ ಸಮಯಕ್ಕೆ ಹಾಡಿನ ಶಬ್ದಕ್ಕೆ ಉಚಿತವಾಗಿ ಅನಂತನು ವಿದೂಷಕನಂತೆ, ಹೆದರಿದಂತೆ, ಓಡಿದಂತೆ ಹಾಸ್ಯಪೂರಿತ ಅಣಕಾಟ ಮಾಡಬಹುದು. ಹಾಡು ಮುಗಿದೊಡನೆ ತೆರೆ ಇಳಿಯುದು ]

ತೆರೆ



ಎಚ್. ಕೆ. ರಂಗನಾಥ



ಎ. ಕೆ. ರಾಮಾನುಜನ್



ಕೆ. ವಿ. ಸುಬ್ಬಣ್ಣ



ಎಸ್. ಎನ್. ಶಿವಸ್ವಾಮಿ



ಕೆ. ವಿ. ಅಯ್ಯರ್

# ಪ್ರಸಾರ ನಾಟಕ

## ( ಇತಿಹಾಸ ಪ್ರಬಂಧ )

### ಪ್ರಾರಂಭ

ಅಮೇರಿಕಾದ ಕವಿ ನಾಟಕಕಾರ ಆರ್ಚಿಬಾಲ್ಡ್ ಮ್ಯಾಕ್‌ಲೀಷ್, ತಾನು ರೇಡಿಯೋಗಾಗಿ ರಚಿಸಿದ “ The fall of the city ” ಎಂಬ ನಾಟಕವನ್ನು ೧೯೩೭ ರಲ್ಲಿ ಪ್ರಸಾರ ಮಾಡಿದಂದು, ಪಾಶ್ಚಾತ್ಯ-ಪ್ರಸಾರ-ನಾಟಕದ ಇತಿಹಾಸ ನಿಜವಾಗಿ ಪ್ರಾರಂಭವಾಯಿತೆನ್ನುತ್ತಾರೆ. ಆ ನಾಟಕ ರೂಪಿಸಿದ ತಂತ್ರದಿಂದಾಗಿ, ಪ್ರಸಾರ ನಾಟಕ ತನ್ನ ಮುನ್ನಡೆಯಲ್ಲಿ ಮೈಲುಗಲ್ಲೊಂದನ್ನು ಮುಟ್ಟಿದಂತಾಯಿತು. ಹೀಗೆಂದರೆ, ಅದಕ್ಕೆ ಹಿಂದೆ ಪ್ರಸಾರಕ್ಕಾಗಿ ನಾಟಕಗಳನ್ನು ಬರೆದಿರಲಿಲ್ಲ — ರೇಡಿಯೋ ನಾಟಕಗಳಾಗುತ್ತಿರಲಿಲ್ಲ ಎನ್ನುವ ಅರ್ಥವಲ್ಲ. ಷೇಕ್ಸ್‌ಪೀಯರ್ ಒಳಗೊಂಡು ಪಾಶ್ಚಾತ್ಯ ನಾಟಕಕಾರರ ಹೆಸರಾಂತ ರಂಗ-ನಾಟಕಗಳೆಲ್ಲದರ ರೇಡಿಯೊ ರೂಪಗಳು ಆಗಲೇ ಪ್ರಸಾರವಾಗಿದ್ದವು. ಮಾತಿನ ಜಾಣ್ಮೆಯೇ ಪ್ರಸಾರ-ನಾಟಕದ ವೈಶಿಷ್ಟ್ಯವೆಂಬ ಭಾವನೆಯಿಂದ ರಚನೆಗೊಂಡಿದ್ದ ಅನೇಕ ನಾಟಕಗಳು ಅಲೆಯಲ್ಲಿ ತೇಲಿಹೋಗಿದ್ದವು. ರಂಗದ ಮೇಲೆ ಪ್ರದರ್ಶಿಸಲು ಅಸಾಧ್ಯವಾದ — ಆದರೆ ಪ್ರಸಾರದಲ್ಲಿ ಮಾತ್ರ ಫಲ ಕೊಡಬಲ್ಲವಾಗಿದ್ದ ಹಲವಾರು ಪ್ರಯೋಗಗಳೂ ನಡೆದಿದ್ದವು. ಆದರೆ ಮ್ಯಾಕ್‌ಲೀಷನ ನಾಟಕ, ತನ್ನ ತಂತ್ರದಿಂದಾಗಿ ರೇಡಿಯೋ-ನಾಟಕದ ಬೆಳವಣಿಗೆಯಲ್ಲಿ ಹೊಸ ಹಾದಿ ತೋರಿತು.

“The fall of the city”, ಒಂದು ಊರಿನ ದಿಗ್ಭ್ರಾಂತ ಜನತೆಯ ಮನೋರಂಗದ ಒತ್ತಡ, ವೈವಿಧ್ಯವನ್ನು ಚಿತ್ರಿಸುವ ಭಾವುಕ ನಾಟಕ. ಅದರಲ್ಲಿ ಸರ್ವಸ್ವತಂತ್ರವಾಗಿದ್ದ ಒಂದು ಜನತೆ ತಾನೇ ಕಲ್ಪಿಸಿದ ಬಾಹ್ಯಶಕ್ತಿಯೊಂದಕ್ಕೆ ಬಲಿಯಾಗಿ ಹೋಗುತ್ತದೆ. ಪ್ರತ್ಯಕ್ಷದರ್ಶಿಯಾದ ಒಬ್ಬ announcer, ನಾಟಕವನ್ನು ನಡೆಯಿಸುತ್ತಾನೆ. ನಾಲ್ಕು ದಿನಗಳ ಹಿಂದೆ ಸತ್ತು ಹುಗಿದಿದ್ದ ಹೆಣ್ಣುಮಗಳೊಬ್ಬಳ ರೂಪು, ಕಳೆದ ಮೂರು ದಿನಗಳಿಂದ, ಮಧ್ಯಾಹ್ನ ೧೨ ಗಂಟೆಗೆ ಸರಿಯಾಗಿ ಗೋರಿಯ ಮೇಲೆ ಮೂಡಿ ನಿಂತು ಮಾತನಾಡುತ್ತಿದೆ. ಊರಿನಲ್ಲಿ ಅಪಶಕುನಗಳಾಗಿವೆ. ತಮಗೆ ಯಾವ ಅನಿಷ್ಟ ಕಾದಿದೆಯೋ ಎಂದು ಜನ ಹೆದರಿ ಕಂಗಾಲಾಗಿದ್ದಾರೆ. ಈ ಹಿನ್ನೆಲೆಯಲ್ಲಿ ನಾಟಕ ಪ್ರಾರಂಭವಾಗುತ್ತದೆ. ನಾಟಕ ಪ್ರಾರಂಭವಾಗುವುದು ಹೀಗೆ: ಪ್ರಸಾರ ಕೇಂದ್ರದಿಂದ ನಿರ್ದೇಶಕ ಮೊದಲು ಮಾತನಾಡುತ್ತಾನೆ — “ ಸೋದರ ಸೋದರಿಯರೇ, ನೀವು ತಿಳಿದಿರುವಂತೆ, ಕಳೆದ ಮೂರು ದಿನಗಳಲ್ಲಿ ಈ ನಮ್ಮ ಪುಟ್ಟ ನಗರ ಪ್ರಪಂಚದ ಗಮನವನ್ನೇ ಸೆಳೆದುಕೊಂಡಿದೆ. ಸತ್ತು, ಹುಗಿದ ಹೆಣ್ಣುಮಗಳ ರೂಪ ಪ್ರತಿದಿನ ಕಾಣಿಸಿಕೊಂಡು ಊರಿನ ಬಗೆಗೆ ಭವಿಷ್ಯ ನುಡಿಯುತ್ತಿದೆ. ಊರಿನ ಜನ

ಹೆದರಿದ್ದಾರೆ. ಈಗ ನಡು-ಮಧ್ಯಾಹ್ನದ ಸಮಯ. ಇಂದೇನು ನಡೆಯುವುದೋ ಪ್ರತ್ಯಕ್ಷವಾಗಿ ತಿಳಿಯುವ ಸಲುವಾಗಿ ನಿಮ್ಮನ್ನೀಗ ನಗರದ 'ಗ್ರೇಟ್ ಸ್ಕ್ವೇರ್' ಬಳಿಗೆ ಕರೆದೊಯ್ಯುತ್ತೇವೆ ..." ಎನ್ನುತ್ತಾನೆ. ಹೀಗೆಂದ ಮೇಲೆ, ಸ್ಥಾನ ಬದಲಾಗಿ ಜನತಾಸಮ್ಮರ್ದದ ಮೌನನಾದ ಸಾವಕಾಶವಾಗಿ ಮೂಡಿ ಬಂದು, ಆ ಆವರಣದ ಚಿತ್ರ ಶ್ರೋತೃವಿನ ಮನೋರಂಗದ ಮೇಲೆ ಮೂಡುತ್ತದೆ. ಅಲ್ಲಿಂದ, ಜನಗಳ ಮಧ್ಯೆ ಎಲ್ಲಿಯೋ ಕಂಬ ಹತ್ತಿ ಕುಳಿತವನಂತೆ ತೋರುವ "announcer", ಪಿಸುಮಾತ ನಾಡುತ್ತಾನೆ — "... ಗ್ರೇಟ್ ಸ್ಕ್ವೇರ್‌ನಿಂದ ಮಾತನಾಡುತ್ತಿದೇನೆ. ದೂರದಲ್ಲಿ ಆ ಹೆಣ್ಣುಮಗಳ ಸಮಾಧಿ ಕಾಣುತ್ತಿದೆ. ಆದರೆ ಎಲ್ಲೆಲ್ಲೂ ಜನ – ಜನ. ಗಂಡಸರು, ಹೆಂಗಸರು, ಮಕ್ಕಳು — ಹತ್ತು ಸಾವಿರಕ್ಕೂ ಮೇಲ್ಪಟ್ಟು ಈ ಜನಸಮ್ಮರ್ದ, ಮಹಾ ಘಟನೆಯೊಂದನ್ನು ಪ್ರತೀಕ್ಷಿಸುತ್ತಾ ಮೌನವಾಗಿ ನಿಂತಿದೆ. ಇದೀಗ ... ೧೨ ಗಂಟೆಗೆ ಇನ್ನೂ ಎರಡು ನಿಮಿಷಗಳಿವೆ ..." ಮನಸ್ಸನ್ನು ತಲ್ಲಣಗೊಳಿಸು. ವಂತಹ ಮುಂದಿನ ಘಟನಾವಳಿಗಳ ಒತ್ತಡ, ನಾಟಕದ ಸಂಪೂರ್ಣ ಅನುಭವ, ಶ್ರೋತೃವಿಗೆ ಮುಖ್ಯವಾಗಿ ಆ ಪ್ರತ್ಯಕ್ಷ ವೀಕ್ಷಕನ ವಿವರಣೆಯಿಂದ ಆಗುತ್ತದೆ. ಆತ ನೋಡಿದುದನ್ನೆಲ್ಲ ವರ್ಣಿಸುವಾಗ, ಮಧ್ಯ ಮಧ್ಯ, ಅನುಭವವನ್ನು ಹೆಪ್ಪುಗಟ್ಟಿಸು ವಂತಹ ಸೂಕ್ತ ಶಬ್ದವಿಶೇಷಗಳೂ, ಜನನಾಯಕೆ, ಪಾದ್ರಿಗಳ ಘೋಷಗಳೂ, ಬೇಹುಗಾರನ ನಿರೂಪಣೆಯೂ ಬೆರೆತು ನಾಟಕದ ಪೂರ್ಣ ರಸಾನುಭವವಾಗುತ್ತದೆ. ಮೂವತ್ತು ನಿಮಿಷಗಳ ಅವಧಿಯ ಈ ಸರಳ-ರಗಳೆಯಲ್ಲಿನ ನಾಟಕ, ತನ್ನ ಸತ್ವ ಶಕ್ತಿಗಳಿಂದಾಗಿ, ವಿಶಿಷ್ಟ ತಂತ್ರದಿಂದಾಗಿ, ಪಾಶ್ಚಾತ್ಯ ಪ್ರಸಾರ-ನಾಟಕವನ್ನು ರೂಪಿಸಿ ಬೆಳೆಸಲು ದಾರಿ-ದೀವಿಗೆಯಾದುದಲ್ಲದೆ ಪ್ರಸಾರ-ನಾಟಕಕ್ಕೂ ರಂಗ-ನಾಟಕಕ್ಕೂ ಇರುವ ಭೇದವನ್ನು ನಿಚ್ಚಳವಾಗಿ ತೋರಿತು.

ಈ ಇಪ್ಪತ್ತು ಮೂವತ್ತು ವರ್ಷಗಳ ಅವಧಿಯಲ್ಲಿ, ಮುಖ್ಯವಾಗಿ, ಪಾಶ್ಚಾತ್ಯ ದೇಶಗಳಲ್ಲಿ ಪ್ರಸಾರ-ನಾಟಕ ಸಮೃದ್ಧವಾಗಿ ಬೆಳೆದಿದೆ. ತನ್ನ ವಿಶಿಷ್ಟ ವ್ಯಕ್ತಿತ್ವವನ್ನು ಸ್ಥಾಪಿಸಿಕೊಂಡು ದೇಶದ ಸಾಹಿತ್ಯದಲ್ಲಿ ತನ್ನ ಸ್ಥಾನವನ್ನು ಸಂಪಾದಿಸಿಕೊಂಡಿದೆ. "ಲೂಯಿಮ್ಯಾಕ್‌ನೀಸ್" ಮತ್ತು "ನಾರ್ಮನ್ ಕಾರ್ವಿನ್", ಪ್ರಸಾರ-ನಾಟಕದ ಅತಿ ಪ್ರತಿಭಾವಂತ ಪ್ರವರ್ತಕರೆಂದು ಹೆಸರುಗೊಂಡಿದ್ದಾರೆ "ಆರ್ಸನ್ ವೆಲ್ಲಿಸ್", "ಫೆಲಿಕ್ಸ್ ಫೆಲ್ಟನ್", "ವಾಲ್ ಗೀಲ್‌ಗಡ್", ಡಿ. ಜಿ. ಬ್ರಿಡ್‌ಸನ್", ಮೊದಲಾದ ಪ್ರತಿಭಾವಂತ ನಿರ್ದೇಶಕರು, "ಮ್ಯಾಕ್ಸ್‌ವೆಲ್ ಆಂಡರ್‌ಸನ್", "ಓ ನೀಲ್", "ಮಾ:ಮ್", "ಪ್ರೀಸ್ಟ್ಲಿ", "ಟೆನಿಸೆ ವಿಲಿಯಂಸ್", ಸಾರ್‌ತ್‌ರ್", "ಜಾನ್ ಆಸ್ಬ್ಬರ್ನ್" ಮೊದಲಾದವರ ಹೆಸರಾಂತ ರಂಗ-ನಾಟಕಗಳನ್ನು ಪ್ರಸಾರಕ್ಕಾಗಿ ಅಳವಡಿಸಿ, ಎರಡೂ ರೂಪಗಳಲ್ಲಿನ ಅಗಾಧ ವ್ಯತ್ಯಾಸವನ್ನು ತೋರಿದ್ದಾರೆ. "ನರ್ಸ್ ಹೆನ್ರಿಯಟ್ಟ" ಅಂತಹ —ಏಕಪಾತ್ರ ತಂತ್ರದಲ್ಲಿ — ಅದ್ಭುತ ಪ್ರಸಾರರೂಪಕವನ್ನು ಬರೆದಹರ್ಮನ್ ಕೆಸ್ಸರ್, "ದಿ ಸೈಲೆಂಟ್ ಸಿಟಿ"ಯಂತಹ ಹೃದಯವಿದ್ರಾವಕ ಪ್ರಸಾರ ಚಿತ್ರವನ್ನು ರಚಿಸಿದ 'ನಿಕಲ್ ಓಬಿ', "ಗ್ರಾಂಡ್ ಸ್ಲಾಮ್" ನಂತಹ ದುರಂತ ಪ್ರಸಾರ ನಾಟಕವನ್ನು ಮೂಡಿಸಿದ 'ಅಗಾಥ ಮೆಲ್ಲ', "ದಿ ಪಪೆಟ್ ಮಾಸ್ಟರ್" ನಂತಹ ಮನೋ-ವಿಶ್ಲೇಷಣ ಪ್ರಸಾರ-ಚಿತ್ರವನ್ನು ರಚಿಸಿದ ಎಮೆರಿ ಬಾ:ನೆಟ್, "ಸ್ಪಿನ್ನಿ

ಅಂಡರ್ ದಿ ರೇನ್" ನಂತಹ ಅದ್ಭುತ "fantasy" ಯನ್ನು ಬರೆದ ಆಸ್ಟ್ರೇಲಿಯಾದ "ಟ್ರೆವ್ಹರ್ ಹೀತ್" ಮೊದಲಾದ ಹತ್ತಾರು ನಾಟಕಕಾರರು ಪ್ರಸಾರ-ನಾಟಕದ ತಂತ್ರವೈವಿಧ್ಯವನ್ನೂ ಈ ಬಗೆಯ ನಾಟಕಗಳಲ್ಲಿ ಹುದುಗಿಕೊಂಡಿದ್ದ ಪ್ರಚಂಡ ಶಕ್ತಿಯನ್ನೂ ಬಿಡಿಸಿ ತೋರಿಸಿದ್ದಾರೆ. ಮೇಲೆ ಹೇಳಿದ ಯಾವುದೊಂದೂ ನಾಟಕ ರಂಗದ ಮೇಲೆ ಫಲ ಕೊಡಲಾರದು. ಪ್ರಸಾರದಲ್ಲಿಯೇ ಅದರ ಶಕ್ತಿ — ಅದರ ಶ್ರೇಯಸ್ಸು. ಈ ಮಾಲಿಕೆಯಲ್ಲಿಯೇ ಬರಬೇಕಾದ ಮತ್ತೊಂದು ನಾಟಕವೆಂದರೆ 'ಟೈರಾನ್ ಗಥ್ರೀ' ಯವರು ಬರೆದು ಬಿ. ಬಿ. ಸಿ. ನಿಲಯದಿಂದ ಪ್ರಸಾರಗೊಂಡ "ದಿ ಫ್ಲವರ್ಸ್ ಆರ್ ನಾಟ್ ಫರ್ ಯು ಟು ಪಿಕ್" ಎಂಬ ನಿಷ್ಕೃಷ್ಟ ಪ್ರಸಾರ-ನಾಟಕ.

ಪಾಶ್ಚಾತ್ಯರಲ್ಲಿರುವ ಒಂದು (ಮೂಢ) ನಂಬಿಕೆಯ ಮೇಲೆ ಈ ನಾಟಕ ರಚಿತವಾಗಿದೆ. ನೀರಿನಲ್ಲಿ ಬಿದ್ದು ಪ್ರಾಣ ಕಳೆದುಕೊಳ್ಳುವವನ ಮನೋರಂಗದಲ್ಲಿ, ಆತ ನೀರಿಗೆ ಬಿದ್ದಾಗಿನಿಂದ ಪ್ರಾಣ ಹೋಗುವ ಅವಧಿಯಲ್ಲಿ — ಎಂದರೆ ಸುಮಾರು ಎರಡು ನಿಮಿಷಗಳಲ್ಲಿ — ಆತನ ಜೀವನದ ಮುಖ್ಯ ಘಟನೆಗಳೂ ಅನುಭವಗಳೂ ಮೆರವಣಿಗೆಯಾಗಿ ಹಾದುಹೋಗುವುವಂತೆ. ಗಥ್ರೀಯವರ ನಾಟಕದ ನಾಯಕ, ಜೀವನದಲ್ಲಿ ಜಿಗುಪ್ಸೆಗೊಂಡ ಒಬ್ಬ ತರುಣ. ಭೋರ್ಗರೆವ ಸಾಗರದಲ್ಲಿ ಆತ ನೌಕೆಯಿಂದ ಹಾರಿ, ನೀರು ಕುಡಿದು ಉಮ್ಮಳಿಸಿ ಕೈಕಾಲು ಕೆಟ್ಟಾಗ — ಎಳೆತನದಿಂದ ಅಂದಿನವರೆಗೆ, ತನ್ನ ಬರಡುಜೀವನದ ಕೆಲವೊಂದು ಕಹಿ ಅನುಭವಗಳು ಸಾಲು ಸಾಲಾಗಿ ಆತನ ಮನೋಪಟಲದ ಮೇಲೆ ಮಿಂಚಿ ಹೋದವು. ಎಳೆತನದ ಅನಾರೋಗ್ಯದಿಂದಾಗಿ ಸೊರಗಿಹೋದ ದೇಹ, ವಿಕೃತವಲ್ಲದಿದ್ದರೂ ಸುಂದರವೂ ಅಲ್ಲದ ನಿಸ್ತೇಜವಾದ ಮುಖ, ದಪ್ಪ ಚಾಳೀಸಿನ ಹಿಂದಿನ ಕಿರಿದಾದ ಕಣ್ಣುಗಳು — ಈ ಬಾಹ್ಯರೂಪ, ಆತನ ಚುರುಕುಬುದ್ಧಿ ಹಾಗೂ ಭಾವುಕತೆಯ ಭವ್ಯತೆಯನ್ನು ಜನದ ಕಣ್ಣಿನಿಂದ ಮರೆಸಿಬಿಟ್ಟಿದ್ದವು. ಬಾಳಿನ ಮೆರವಣಿಗೆಯಲ್ಲಿ ಮೆಟ್ಟಿಲಿನಿಂದ ಮೆಟ್ಟಿಲಿಗೆ, ಆತ ತನ್ನ ತಂದೆಯಿಂದ, ಉಪಾಧ್ಯಾಯರಿಂದ, ಪ್ರೇಯಸಿಯಿಂದ, ಸುತ್ತಮುತ್ತಣ ಜನದಿಂದ, ಅಧಿಕಾರಿಯಿಂದ ಶೀತಲವಾದ ತಿರಸ್ಕಾರ ಹಾಗೂ ಪ್ರಕಟಿತ ಕಟು ಹಾಸ್ಯದ ಪೆಟ್ಟು ತಿಂದು, ಕಡೆಗೆ ಬಾಳನ್ನು ನೀಗಿಸಿಕೊಳ್ಳುತ್ತಾನೆ. ನೀರಿಗೆ ಬಿದ್ದವನ ಮನೋರಂಗದಲ್ಲಿ ಹಿಂದಿನ ಜೀವನದ ಘಟ್ಟಘಟ್ಟಗಳು ಮಿಂಚಿಹೋಗುವುದನ್ನು ಈ ನಾಟಕ ಚಿತ್ರಿಸುತ್ತದೆ. ಭಾವುಕನಾದ ಆತನ ಅಂತರಂಗದ ಸುಂದರ ಪ್ರವೃತ್ತಿಯನ್ನೂ, ನಿರಾಶೆಯ ಕೂಪಕ್ಕೆ ಅವನನ್ನು ತುಳಿದ ಸನ್ನಿವೇಶಗಳನ್ನೂ ತಿಳಿತಿಳಿದಂತೆ, ಶ್ರೋತೃವಿನ ಹೃದಯ ಮಿಡಿಯುತ್ತದೆ. ನತದೃಷ್ಟನಾದ ಆತ ಆತ್ಮಹತ್ಯೆ ಮಾಡಿಕೊಂಡುದು ನ್ಯಾಯವೇ ಏನೋ ಎನಿಸುತ್ತದೆ.

ಪ್ರಯೋಗದ ದೃಷ್ಟಿಯಿಂದ, ಈ ನಾಟಕದ ಆವರಣವನ್ನು ನೋಡೋಣ. ಭೋರ್ಗರೆವ ಸಾಗರದ ಗಂಭೀರ ನಾದದೊಂದಿಗೆ ಪ್ರಾರಂಭವಾದ ನಾಟಕ ಅದೇ ನಿಸರ್ಗ ನಾದದಲ್ಲಿಯೇ ಮುಗಿದು ಆತನ ಜೀವ ಅದರಲ್ಲಿ ಲೀನವಾಗಿ ಹೋದಾಗ "ನಾಟಕ ಪ್ರಾರಂಭವಾಗಿ ಇನ್ನೂ ಎರಡೇ ನಿಮಿಷವಾಯಿತೇನೋ" ಎನಿಸುತ್ತದೆ. ಆತ ನೀರಿಗೆ ಬಿದ್ದ ಮೇಲೆ ಮಡಿಯುವ ವರೆಗಿನ ಆ ಎರಡು ನಿಮಿಷವೆಂದು ಭಾಸವಾಗುವ ಅವಧಿಯಲ್ಲಿ ಮೂವತ್ತು ನಿಮಿಷಗಳು ಕಳೆದುಹೋಗಿರುತ್ತವೆ. ಇದು

ಒಂದು ಉತ್ಕೃಷ್ಟವಾದ **ಪ್ರಸಾರ**-ನಾಟಕ. ಏಕೆಂದರೆ, ಅದರ ಸಂಪೂರ್ಣ ಅನು ಭವ — ಒತ್ತಡ, ನಾಟಕವನ್ನು ಓದಿದರೆ ಅಥವಾ ನಿಷ್ಣಾತನಾದ ನಿರ್ದೇಶಕನ ಕೈಯಲ್ಲಿ ಸಿಕ್ಕಿ ಪ್ರಸಾರಗೊಂಡಾಗ, ರೇಡಿಯೋ ಮೂಲಕ **ಕೇಳಿದರೆ** ಮಾತ್ರ ಆಗುತ್ತದೆ. ಹೊಡೆವ ತೆರೆಗಳಿಂದ ಅಪ್ಪಳಿಸಿಕೊಂಡು, ನೀರು ಕುಡಿದು, ಉಸಿರು ಸಿಕ್ಕಿ ಉಬ್ಬಳಿಸುತ್ತಿರುವ ಆತನ ಚಿತ್ರ, ಅದರಲ್ಲೂ ಅವನ ಮನೋರಂಗದ ತೆರೆ-ತೆರೆ ಗಳ ಚಿತ್ರವನ್ನು ರಂಗದ ಮೇಲೆ ತರುವುದೆಂದೂ ಸಾಧ್ಯವಿಲ್ಲ. ಸಿನಿಮಾ ತೆರೆಯ ಮೇಲೆ ಅತ್ಯಂತ ಎಚ್ಚರಿಕೆಯಿಂದ ನಿರ್ದೇಶಿಸಿ ಒಂದು ವೇಳೆ ತರಬಹುದಾದರೂ, ನಾಟಕದ ಸಂಪೂರ್ಣ ರಸಾನುಭವ ಮಾಡಿಕೊಳ್ಳಲು, ನೋಟದ ಕಟ್ಟಿಗೆ ಸಿಕ್ಕಿದ ಚಿತ್ರಕ್ಕಿಂತ, ಕೇಳ್ಮೆಯಿಂದ ಮಾಡಿದ ಕಲ್ಪನಾಚಿತ್ರವೇ ಹೆಚ್ಚು ಸಹಾಯಕವಾಗು ತ್ತದೆ. ಇದೊಂದು " ಶ್ರವ್ಯನಾಟಕ. "

ಪ್ರಸಾರ-ನಾಟಕವೆಂದರೆ ಶ್ರವ್ಯನಾಟಕ. ವಿಜ್ಞಾನದ ಫಲವಾಗಿ, ರೇಡಿಯೋ medium-ಬಂದ-ಮೇಲೆ, ನಮ್ಮ ನಾಟಕ, ಅದಕ್ಕೆ ಹೊಂದಿಕೊಳ್ಳುವಂತೆ, ರಂಗ ದಿಂದ ಕವಲೊಡೆದು ಹೊಸದೊಂದು ರೂಪವನ್ನೇ ತಾಳಬೇಕಾಯಿತು. ರಂಗಸ್ಥಳದ ಸಾಧ್ಯತೆಗಳನ್ನು ಮೀರಿದ ಚಿತ್ರಗಳನ್ನು ರೇಡಿಯೋ ಮೂಲಕ ಬಿಂಬಿಸಲು ಸಾಧ್ಯ ವಿದೆ. ಈ ಸಾಧ್ಯತೆಯನ್ನು ಸಾಧಿಸಿಕೊಳ್ಳುವ ಸಲುವಾಗಿ ಹೊಸ ಹೊಸ ತಂತ್ರ ಗಳನ್ನು ನಾಟಕಕಾರ ರೂಪಿಸಬೇಕಾಯಿತು. ಕೇಳುಗನ ಕಲ್ಪನಾಶಕ್ತಿಗೆ ಪ್ರಚೋ- ದಕವಾಗುವಂತಹ ಮನೋ-ಚಿತ್ರಗಳನ್ನು ನಿರ್ಮಿಸುವ ಸಲುವಾಗಿ ಹೊಸ ಹೊಸ ವಸ್ತು-ವಿಷಯಗಳನ್ನು ಬಳಸಿಕೊಳ್ಳಬೇಕಾಯಿತು .... ರಚನಾ-ವಿಧಾನ-ವೈವಿಧ್ಯಕ್ಕೆ ಹೆಚ್ಚಿನ ಗಮನ ಕೊಡಬೇಕಾಯಿತು. ಈ ನಡೆಯಲ್ಲಿ ಇಪ್ಪತ್ತು-ಮೂವತ್ತು ವರ್ಷ- ಗಳ ಕಾಲ ಕೃಷಿ ನಡೆದ ಮೇಲೆ ಇಂದು ಪ್ರಸಾರ-ನಾಟಕ, ಒಂದು ಭಾಷೆಯ ಸಾಹಿತ್ಯ ದಲ್ಲಿ ತನ್ನದೇ ನಿಶ್ಚಿತ ಸ್ಥಾನವನ್ನು ಗಳಿಸಿಕೊಳ್ಳಲು ಸಾಧ್ಯವಾಗಿದೆ.

### ವಸ್ತು-ರಚನೆ :

ರೇಡಿಯೋ-ನಾಟಕದ ವಸ್ತು ಯಾವುದೊ ಇದ್ದೀತು. ಅಸಾಮಾನ್ಯವಾದ ಘಟನೆಗಳ ಚಿತ್ರಣ ಪ್ರಸಾರಕ್ಕೆ ಹೆಚ್ಚು ಅಳವಡುವುದಾದರೂ, ನಾಟಕದ ವಸ್ತು— ಪೌರಾಣಿಕ, ಐತಿಹಾಸಿಕ ಇಲ್ಲವೆ ಜನಜೀವನ, ಕುಟುಂಬ-ಜೀವನ ಅಥವಾ ವ್ಯಕ್ತಿ ಜೀವನದ ಘಟನೆಯೊಂದನ್ನು ಅವಲಂಬಿಸಿದ್ದರೂ ನಡೆಯುತ್ತಿದೆ. ಆದರೆ ಅಂತಹ ವಸ್ತುವಿನ ರಚನೆಯ ರೀತಿ, ಎಂದರೆ ಚಿತ್ರಣದ ತಂತ್ರವೇ ಪ್ರಸಾರ-ನಾಟಕ ಹಾಗೂ ರಂಗ-ನಾಟಕಗಳ ನಡುವಿನ ಭೇದವನ್ನು ಕಲ್ಪಿಸುತ್ತದೆ. ಅದರಿಂದಾಗಿ ಅನೇಕವೇಳೆ, ಪ್ರಸಾರ-ತಂತ್ರಕ್ಕೆ ಹೊಂದಿಕೊಳ್ಳುವಂತಹ ಕಥಾವಸ್ತುಗಳನ್ನು ನಾಟಕಕಾರರು ಆಯ್ದುಕೊಳ್ಳುವುದನ್ನೂ ಕಾಣುತ್ತೇವೆ. ಪ್ರಸಾರ-ತಂತ್ರವನ್ನು ಅರಿತು ಯಶಸ್ವಿಯಾಗಿ ಬಳಸುವುದರಿಂದಲೇ ರಂಗದ ಮೇಲೆ ಮೂಡಿಸಲು **ಅಸಾಧ್ಯ**ವಾದಂತಹ ಚಿತ್ರ ಗಳನ್ನು ರೇಡಿಯೋ ಮೂಲಕ ನಂಬುವಂತೆ ಬಿಂಬಿಸಬಹುದಾಗಿದೆ. ಇಂತಹ ತಂತ್ರ ಗಳನ್ನು ಕುರಿತು ನಮ್ಮಲ್ಲಿನ ಕೆಲವೊಂದು ಪ್ರಸಾರ-ನಾಟಕಗಳ ಉದಾಹರಣೆಗಳನ್ನು ಇಲ್ಲಿ ಕೊಡಬಹುದು.

Flash-back :

ಘಟನೆಯೊಂದನ್ನು ಪ್ರಕೃತವಾಗಿಟ್ಟುಕೊಂಡು ಅದರ ಹಿನ್ನೆಲೆಯನ್ನು ಎಳೆ ಎಳೆಯಾಗಿ ಹೆಣೆದು ಜೋಡಿಸುವುದು ಒಂದು ತಂತ್ರವಾಗಿ, ರೇಡಿಯೋ-ನಾಟಕದ ಲಕ್ಷಣವೆನಿಸಿಕೊಂಡಿತು. ಶ್ರೀರಂಗರು ಬರೆದ "ಪ್ರಾರಬ್ಧ" ಎಂಬ ಬಾನುಲಿ-ನಾಟಕ ದಲ್ಲಿಯೂ, ಪಿ ಜನಾರ್ದನ ಮೆನನ್ ಅವರು ಬರೆದು, ಬಾನುಲಿನಾಟಕ ಸ್ಪರ್ಧೆಯಲ್ಲಿ ಬಹುಮಾನ ಗಳಿಸಿದ "ಪ್ರೀತಿಸಿದ ಹೆಣ್ಣು" ಎಂಬ ಮಲಯಾಳಿ ನಾಟಕದಲ್ಲಿಯೂ ಎಸ್. ಪಿ. ಕುಲಕರ್ಣಿಯವರು ಬರೆದ "ಟಿಕ್ ಟಿಕ್ ಗೆಳೆಯ" ಎಂಬ ಬಾನುಲಿ ನಾಟಕದಲ್ಲಿಯೂ ಈ flash-back ತಂತ್ರದ ಸಾಫಲ್ಯವನ್ನು ಕಾಣಬಹುದು. ಆದರೆ ಇದು ಅತಿ ಸಾಮಾನ್ಯವಾದ ಒಂದು ತಂತ್ರ. ಈಗಾಗಲೇ ಅದು ತುಂಬ ಹಳ ತೆನಿಸಿ ಬೇಸರ ತರುತ್ತದೆ. ಪಾಶ್ಚಾತ್ಯ ನಾಟಕಕಾರರು ತಾವು ಬಾನುಲಿಗಾಗಿ ರಚಿಸಿದ ಈಚಿನ ನಾಟಕಗಳಲ್ಲಿ ತಪ್ಪಿ ಕೂಡ ಈ ತಂತ್ರವನ್ನು ಬಳಸುವುದು ಕಾಣಸಿಗುವುದಿಲ್ಲ.

ನಿಸರ್ಗ-ಚಿತ್ರಣ :

ರಂಗದ ಮೇಲೆ ಪ್ರಯೋಗಿಸಲು ಅಸಾಧ್ಯವೆನಿಸಿ, ಅಥವಾ ಪ್ರಯೋಗಿಸಿದಾಗ ಅಸಹಜವಾಗಿ ತೋರಿ, ಪ್ರಸಾರ-ನಾಟಕಕ್ಕೆ ಮಾತ್ರ ಸಮೃದ್ಧವಾದ ಕಳೆಯನ್ನು ಕೊಡಬಹುದಾದ ಮತ್ತೊಂದು ತಂತ್ರವೆಂದರೆ ನಾಟಕದಲ್ಲಿ ನಿಸರ್ಗದ ಚಿತ್ರಣ. ನಿಸರ್ಗವೇ ನಾಟಕದಲ್ಲಿ ನಿಕಟವಾದ ಪಾತ್ರವಹಿಸಿದರಂತೂ ಅದು ಪ್ರಸಾರ-ನಾಟಕದ ಒಂದು ನಿಷ್ಕೃಷ್ಟವಾದ ಲಕ್ಷಣವೇ ಆಗುತ್ತದೆ. ಜ್ವಾಲಾಮುಖಿ, ಸಿಡಿಲು, ಗುಡುಗು, ಮಳೆ, ಮಹಾಪೂರ, ಬಿರುಗಾಳಿ ಅಥವಾ ಭೂಕಂಪ, ಕಥಾವಸ್ತುವಿಗೆ ಕಾರಣವಾದಾಗ ಅಥವಾ ಅದರ ಪ್ರಮುಖ ಅಂಗವಾದಾಗ, ಇಲ್ಲವೇ ಅವಶ್ಯ ವಾದ ಹಿನ್ನೆಲೆಯಾದಾಗ ಅದು ರೇಡಿಯೋ ನಾಟಕದ ಒಂದು ಲಕ್ಷಣವಾಗು ತ್ತದೆ. ರವೀಂದ್ರನಾಥ ಪಿಂಗೆ ಅವರು ರಚಿಸಿದ "ಮಹಾಪೂರ" ಎಂಬನಾಟಕ ದಲ್ಲಿ, ಗಂಗಾನದಿ ಮಹಾಪೂರದಿಂದ ಮೈಯುಬ್ಬಿ ಮಹಾಶಕ್ತಿಯಾಗಿ ಬಡಕುಟುಂಬ ವೊಂದನ್ನು ಕಬಳಿಸಿದ ಚಿತ್ರಣವಿದೆ. ರಂಗದ ಮೇಲೆ ಪ್ರದರ್ಶಿಸಲು ಅಸಾಧ್ಯ ವಾದ ಈ ನಾಟಕ ಪ್ರಸಾರದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ, ನಿರೀಕ್ಷಿಸಿದ ಫಲ ಕೊಡಬಲ್ಲುದು. ಸಂಪೂರ್ಣವಾಗಿಯಲ್ಲದಿದ್ದರೂ, ಆಂಶಿಕವಾಗಿಯಾದರೂ ನಿಸರ್ಗ ದೊಡನೆ ನಿಕಟ ಸಂಪರ್ಕ ಹೊಂದಿದ ಕಥಾವಸ್ತುಗಳು ರಂಗಕ್ಕಿಂತ ರೇಡಿಯೋ ದಲ್ಲಿ ಹೆಚ್ಚು ಪ್ರಭಾವಶಾಲಿಯಾಗಬಲ್ಲವು.

ಸಮರದ ಸನ್ನಿವೇಶಗಳು :

ಮೊದಲನೆ ಮಹಾಯುದ್ಧವೇ ಪ್ರಸಾರ-ನಾಟಕದಲ್ಲಿ ಅನೇಕ ಹೊಸ ರೀತಿಯ ಪ್ರಯೋಗಗಳಿಗೂ ಕಥಾವಸ್ತುವಿಗೂ ಎಡೆಮಾಡಿಕೊಟ್ಟಿತು. ಎರಡನೆಯ ಜಾಗ ತಿಕ ಸಮರವಾದ ಮೇಲಂತೂ ಪಾಶ್ಚಾತ್ಯ ಪ್ರಸಾರ-ನಾಟಕ-ಸಾಹಿತ್ಯದಲ್ಲಿ ಯುದ್ಧ ಹಿನ್ನೆಲೆಯಾಯಿತು. ಸೈನಿಕಜೀವನ—ಸಾವು, ಮೈನಿಮಿರೇಳಿಸುವಂತಹ ಕಥಾ

ವಸ್ತುಗಳನ್ನು ಒದಗಿಸಿತು. ತತ್ವಗಳ ಘರ್ಷಣೆಗಳು ಸಾಂಕೇತಿಕ ರೂಪಧಾರಣೆ ಮಾಡಿ ಯುದ್ಧದ ಹಿನ್ನೆಲೆ ಹೊಂದಿ ಪ್ರಸಾರದಲ್ಲಿ ಹೊಸ ಪ್ರಯೋಗಗಳನ್ನು ಸಾಧ್ಯ ಮಾಡಿದವು. ಷೆರ್‌ವುಡ್ಡ, ಸಾರ್‌ತರ್, ಅಂತಹ ನಾಟಕಕಾರರ ರಂಗ-ನಾಟಕಗಳಲ್ಲಿ ಕೂಡ ಭೀಕರ ಸಮರ ಹಿನ್ನೆಲೆಯಾಗಿ ಪಾತ್ರವಹಿಸಿತು. ಧ್ವನಿ-ವಿಶೇಷಗಳು ಬಳ ಸಲ್ಪಟ್ಟವು. ಷೆರ್‌ವುಡ್ಡನ "ಈಡಿಯಟ್ಸ್ ಡಿಲೈಟ್" ನಂತಹ ಹಳೆಯ ರಂಗ-ನಾಟ. ಕದ ಕಥಾಕ್ಷೇತ್ರ — ವಿಮಾನ ನಿಲ್ದಾಣದ ಬದಿಯಲ್ಲಿದ್ದ ಒಂದು ವಸತಿ ಗೃಹ. ಬೇರೆ ಬೇರೆ ಕಡೆಗಳಿಂದ ಅಲ್ಲಿ ಬಂದು ತಂಗಿದವರ ಚಿತ್ರವಿದೆ ಅಲ್ಲಿ. ಯುದ್ಧವನ್ನು ಬಯ ಸುವವರ — ಹೇಸುವವರ ಭಾವನೆಗಳ ತಿಕ್ಕಾಟವಿದೆ. ಅಲ್ಲಿ ಕಲೆತ ಹಳೆಯ ಪ್ರೇಮಿಗಳು, ಶತ್ರುಗಳು ಬಾಂಬುಗಳನ್ನು ಸುರಿದು ಬಳಿಯ ನಿಲ್ದಾಣದೊಡನೆ ವಸತಿ ಗೃಹವನ್ನೂ ಧ್ವಂಸ ಮಾಡಿದಾಗಲೂ — ಅಗಲದೆ ಉಳಿದಿರುತ್ತಾರೆ. ರಂಗದ ಮೇಲೆಯೇ ಇಂತಹ ಪ್ರಯೋಗಗಳನ್ನು ಸಾಧ್ಯಮಾಡಿದಾಗ, ರಂಗದ ಕಟ್ಟು-ನಿಟ್ಟು ಗಳನ್ನು ಒಂದು ದೃಷ್ಟಿಯಿಂದ ಮೀರಿ, ಫಲ ಕೊಡಬಲ್ಲ ಪ್ರಸಾರ-ನಾಟಕದ ಕಥಾ ವಸ್ತುಗಳಿಗೆ ಕೊರತೆಯಾಗಲಿಲ್ಲ.

### ಪ್ರಯಾಣ-ಪ್ರಸಂಗಗಳು :

ಮೂರನೆಯದಾಗಿ, ಪ್ರಯಾಣದ ಪ್ರಸಂಗಗಳು ನಾಟಕದಲ್ಲಿನ ಮುಖ್ಯ ಭಾಗ ಗಳಾದಾಗ, ಅಂಥ ಸಂದರ್ಭಗಳನ್ನು ವಿವೇಕದಿಂದ ಪ್ರಯೋಗಿಸಿದಾಗ, ಕಳೆಗೊಂಡು ಪ್ರಸಾರ-ನಾಟಕದ ಲಕ್ಷಣವೆನಿಸಿಕೊಳ್ಳುತ್ತವೆ. ನಾಟಕೀಯವಾದ ಅನೇಕ ಪ್ರಸಂಗ ಗಳು, ಪಾತ್ರಗಳು ಹಾದಿಯಲ್ಲಿ ನಡೆಯುತ್ತಿದ್ದಾಗ ಅಥವಾ ವಾಹನಗಳಲ್ಲಿ — ಎತ್ತಿನ ಗಾಡಿ, ಮೋಟಾರು, ರೈಲು ಇಲ್ಲವೇ ಏರೋಪ್ಲೇನುಗಳಲ್ಲಿ — ಪ್ರಯಾಣ ಮಾಡುತ್ತಿ ದ್ದಾಗ ನಡೆಯಬಹುದು. ವಿಜಯ ತೆಂಡೂಲ್‌ಕರರು ಬರೆದ "ರಾತ್ರ" ಎಂಬ ಬಹು ಮಾನಿತ ಮರಾಠೀ ಪ್ರಸಾರನಾಟಕದಲ್ಲಿನ ಎರಡೇ ಪಾತ್ರಗಳಾದ ಒಂದು ಗಂಡು – ಒಂದು ಹೆಣ್ಣಿನ ನಡುವೆ – ಸುಮಾರು ಇಪ್ಪತ್ತು ನಿಮಿಷಗಳ ಸಂಭಾಷಣೆ, ಅವರು, ಕಲ್ಲುಹಾಸಿದ ಉದ್ದವಾದ ಕಿರಿಹಾದಿಯಲ್ಲಿ **ನಡೆದು** ಹೋಗುವಾಗ ಜರಗುತ್ತದೆ. ಅಂತಹ ರಾತ್ರಿಯಲ್ಲಿ ಆ ಪರಿಚಿತ ವ್ಯಕ್ತಿಗಳು, ಆ ಮಾತುಗಳನ್ನು ಎಂದೂ ಒಂದೆಡೆಗೆ ಕುಳಿತು ಆಡುವಂತಿಲ್ಲ. ಕಲ್ಲುಹಾಸಿದ ಆ ಕತ್ತಲಹಾದಿಯಲ್ಲಿ, ಆತನ ಕೈಕೋಲು ಕುಟ್ಟಿ ಮಾಡುವ ಶಬ್ದವಿಶೇಷ ನಾಟಕದ ನಡೆಯಲ್ಲಿ ಒಂದು ಮುಖ್ಯ ಸಂಕೇತ- ವಾಗಿದೆ. ಇಂತಹ ನಾಟಕ ರಂಗದ ಅಳತೆಯನ್ನು ಮೀರಿ ಪ್ರಸಾರದಲ್ಲಿ ಫಲ ಕೊಡುತ್ತದೆ.

### ಕನಸು ಪವಾಡಗಳ ಚಿತ್ರಣ :

ಕನಸು, ಅರೆಗನಸುಗಳ ಚಿತ್ರಗಳನ್ನೂ, ಭೂತ-ಭೇತಾಳಗಳೊಡನೆ ಮಾನ- ವನ ಸಂಬಂಧ ಕಲ್ಪಿಸುವ ಸನ್ನಿವೇಶಗಳನ್ನೂ, ಒಂದು ವ್ಯಕ್ತಿ ತನ್ನದೇ ಅಂತರಂಗ ದೊಡನೆ ತುಮುಲಮಾಡುವ ಸಂದರ್ಭಗಳನ್ನೂ ಕಥಾವಸ್ತುವಿನಲ್ಲಿ ಹಾಸುಹೊಕ್ಕಾಗಿ

ಬಳಸುವುದೂ ಪ್ರಸಾರ-ನಾಟಕದ ಒಂದು ತಂತ್ರವಾಗಿದೆ. ಡಾ|| ಕೆ. ಕೃಷ್ಣಮೂರ್ತಿಯವರು ತಮ್ಮ "ಊರ್ಮಿಳಾಸ್ವಪ್ನ" ಎಂಬ ಬಾನುಲಿ-ನಾಟಕದಲ್ಲಿ ಸ್ವಪ್ನಪ್ರಯೋಗವನ್ನು ಯಶಸ್ವಿಯಾಗಿ ಮಾಡಿದ್ದಾರೆ. ಈ ನಡೆಯಲ್ಲಿ ಒಂದು ಹೆಜ್ಜೆ ಮುಂದೆ ಹೋಗಿ ರಾಮಚಂದ್ರಶರ್ಮರು "ಸೆರಗಿನ ಕೆಂಡ"ದಲ್ಲಿ ತನ್ನ ಹಿಂದಿನ ಪಾಪದ ಕಹಿ ಫಲವನ್ನುಣ್ಣುತ್ತಿರುವ ಹೆಣ್ಣಿನೊಡನೆ ಅಂತರ್ಯುದ್ಧಮಾಡಲು ಆ ಹೆಣ್ಣಿನ ಆತ್ಮಕ್ಕೊಂದು ಮೂರ್ತಿಮಂತ ವಾಣಿಯನ್ನು ಕೊಟ್ಟು ಹೆಜ್ಜೆಹೆಜ್ಜೆಗೂ ಅದನ್ನು ಮಾತನಾಡಿಸುತ್ತಾರೆ. ತನ್ನದೇ ದೇಹದೊಡನೆ ಮಾತನಾಡುವ ಆತ್ಮವನ್ನು ರಂಗದ ಮೇಲೆ ಹೇಗೆ ತರಬಹುದು ? ತೆರೆಯ ಹಿಂದಿನಿಂದ ಧ್ವನಿವರ್ಧಕದ ಮೂಲಕ ಆ "ಆತ್ಮ" ಮಾತನಾಡುತ್ತದೆ ಎಂದರೂ ಪಾತ್ರ–ಆತ್ಮಗಳ ಮಾತಿನಲ್ಲಿ ತೂಕ ತಪ್ಪಿಹೋಗಬಹುದು. ರೇಡಿಯೋದಲ್ಲಿ ಮಾತ್ರ ಅಂತಹ ಸನ್ನಿವೇಶ ವಿಶಿಷ್ಟವಾದ ಒಂದು ಲಕ್ಷಣವೆನಿಸಿ ಶ್ರೋತೃವಿಗೆ ಹೃದಯ ಮುಟ್ಟುವಂತಹ ಅನುಭವ ಕೊಡುತ್ತದೆ. "ಗ್ರಾಂಡ್ ಸ್ಲಾಮ್" ನಾಟಕದ ನಾಯಕಿ ಎಡಿತ್‌ಳ ಅಂತರ್ವಾಣಿಯೊಂದೇ ಕಟ್ಟಿದ, ಉಸಿರು ಸಿಕ್ಕಿಸುವಂತಹ ಒತ್ತಡದಿಂದಾಗಿ, ಆ ನಾಟಕ ಪ್ರಸಿದ್ಧವಾಗಿದೆ. ಹೀಗೆ ಕಣ್ಣಿನ ಅಳತೆ ಮೀರಿ, ಕೇಳ್ಮೆಯಿಂದಲೇ ಶ್ರೋತೃವಿನ ಮನೋರಂಗದಲ್ಲಿ ಭವ್ಯ ಚಿತ್ರವನ್ನು ಬಿಂಬಿಸಬಲ್ಲ ಇಂತಹ ದ್ವಿಚ್ಛೇದ ವ್ಯಕ್ತಿತ್ವಗಳು ಪ್ರಸಾರ-ನಾಟಕದ ನೆಲೆಗಟ್ಟಾಗುತ್ತವೆ.

### ಪ್ರದರ್ಶಿಸಲಾಗದ ಘಟನೆ :

ರಂಗದ ಮೇಲೆ ಪ್ರಯೋಗಿಸಲು ಅಸಾಧ್ಯವಾದ ಕೆಲವೊಂದು ಘಟನೆಗಳನ್ನು ಜೋಡಿಸುವುದೂ ಪ್ರಸಾರ-ನಾಟಕದ ಒಂದು ತಂತ್ರವಾಗಿದೆ — ಎಂದರೆ ಅಂತಹ ಘಟನೆಗಳು ನಾಟಕದ ಅಂಗಗಳಾಗಿರಬೇಕು. ಶ್ರೀರಂಗರು ಬರೆದ "ಪ್ರಾರಬ್ಧ"ದಲ್ಲಿನ ಟ್ರಾಂ ಅನಾಹುತ ಅಂತಹುದೊಂದು ಘಟನೆ. ಅದು ಆ ನಾಟಕದ ಒಂದು ಮೈಲುಗಲ್ಲು. ಹೀಗೆಯೇ, "ಸೆರಗಿನ ಕೆಂಡ" ದಲ್ಲಿ, ನೆನಪು ಮರುಕಳಿಸಿ ಮೈಮರೆತ ಆ ನಾಯಕಿ, ಹಳೆಯದೆಲ್ಲ ಹಾಳುಸುರಿಯುವಂತಿರುವ ಆ ಮಳೆಯ ರಾತ್ರಿಯಲ್ಲಿ ರಸ್ತೆಯ ಅಂಚು ತಪ್ಪಿ ನಡೆಯುತ್ತಿದ್ದಾಗ ಹಿಂದಿನಿಂದ ಬಂದ ಮೋಟಾರು "ಭೂಂ" ಎನ್ನುವುದೂ ಡ್ರೈವರನ ಆ ಎಚ್ಚರಿಕೆಯ ನುಡಿಗಳೂ ನಾಟಕದಲ್ಲಿ ಅತಿ ಶಕ್ತಿಯುತವಾದ ಭಾಗಗಳು. ಹಿಂದೆ ಹೇಳಿದ ಜನಾರ್ಧನ ಮೆನೆನ್ ಅವರ ನಾಟಕದಲ್ಲಿನ ಒಂದು ಶಿಖರವೆಂದರೆ — ನಾಟಕದ ನಾಯಕ "ರಿಲೇ ರೇಸ್" ಗೆಲ್ಲುವ ಸನ್ನಿವೇಶ. ಡಾಕ್ಟರ ಎ. ಸಿ. ಮಹಾಂತಿಯವರ "ಛಾಕಿ-ಕುಂಥಿಯ" ಎಂಬ ಬಹುಮಾನಿತ ಒರಿಯಾ ನಾಟಕದಲ್ಲಿನ ನಾಯಕನು, ರಾಜಕುಮಾರನನ್ನು ತನ್ನ ಕುದುರೆಯ ಮೇಲೆ ಕೂಡಿಸಿಕೊಂಡು ದೌಡಾಯಿಸಿ, ಸುರಿಯುತ್ತಿರುವ ಮಳೆಯಲ್ಲಿ, ನೀರ ಝರಿಯನ್ನು ಲಂಘಿಸಿ ಪಾರಾಗುವುದೂ, ಮುಂದೆ ಆತ ಝಾನ್ಸಿ ರಾಣಿ ಲಕ್ಷ್ಮೀಬಾಯಿಯ ಸಮ್ಮುಖದಲ್ಲಿ ದೇಗುಲದ ಮೇಲ್ಛಾವಣಿಯಿಂದ ಕೆಳಗಿನ ಆಳದ ಪುರಷ್ಕರಣಿಗೆ ಹಾರಿಕೊಂಡು — ಅಲ್ಲಿಂದಲೇ ಕೂಗಿ ಮಾತನಾಡಿ ಎದೆಯ ಅದಟನ್ನು ಪ್ರದರ್ಶಿಸುವುದೂ ಪ್ರಸಾರ ನಾಟಕದ ಕಳೆ ಹೆಚ್ಚಿಸುವ ರುಚಿಕಟ್ಟಾದ ಪ್ರಸಂಗಗಳು. ಹೀಗೆಯೇ, ಜಾತ್ರೆ, —

ಜನಸಂದಣಿ, ಕಾಳಗ-ಕದನ, ಸಭೆ-ಮೆರವಣಿಗೆ, ಉತ್ಸವ-ಸಮಾರಂಭಗಳು ನಾಟಕದ ಅವಶ್ಯವಾದ ಹಿನ್ನೆಲೆಯಾಗಿ ನಿಂತರೆ ಆ ಅನುಭವ ಪ್ರಸಾರದಲ್ಲಿ ಪ್ರಭಾವಶಾಲಿಯಾಗಿ ಮೂಡುತ್ತದೆ.

## ರಚನೆಯಲ್ಲಿ ನವ್ಯತೆ :

ಹಳೆಯದೇ ಕಥಾವಸ್ತುವನ್ನು ಬಳಸಿಕೊಂಡು, ಹಳೆಯದೇ ಪಾತ್ರಗಳನ್ನು ಸಂಯೋಜಿಸಿದರೂ, ರಚನಾವಿಧಾನದ ನವ್ಯತೆಯಿಂದಾಗಿ ಉತ್ಕೃಷ್ಟವಾದ ಪ್ರಸಾರ-ನಾಟಕ ಮೈತಳೆಯುತ್ತದೆ. ಇಂತಹ ಹೊಸದೊಂದು ರಚನಾರೀತಿಯ ಕಾರಣದಿಂದಾಗಿ ಎಸ್. ಎನ್. ಶಿವಸ್ವಾಮಿಯವರು ರಚಿಸಿದ 'ಹೃದಯಾಂತರಾಳ' ಅತ್ಯುತ್ತಮವಾದ ಒಂದು ಪ್ರಸಾರನಾಟಕವೆನಿಸಿಕೊಂಡಿದೆ. ನಾಟಕದ ನಾಯಕ, ರಾಮು. ಅವನ ತಂದೆ, ತಾಯಿ ಇಬ್ಬರೂ, ಒಬ್ಬ ಯಕ್ಷಿಣಿಯವನ ಪ್ರಭಾವದಿಂದಾಗಿ, ತಮಗೆ ತಿಳಿಯದಂತೆಯೇ, ತಮ್ಮ ಪ್ರೀತಿಯ ಮಗನ ದೇಹದೊಳಕ್ಕೆ ನುಸುಳಿಬಿಡುತ್ತಾರೆ, ಆತನ ಧಮನಿಗಳಲ್ಲಿ ರಭಸದಿಂದ ನುಗ್ಗಿ ಹೋಗುತ್ತಿರುವ ರಕ್ತಪ್ರವಾಹದ ಅಂಚಿನಲ್ಲಿ. ಅದೊಂದು ಕಣದ ಮೇಲೆ ಅಂಜಿ ಕುಳಿತಿದ್ದ ಅವರನ್ನು, ಮಾರ್ಗದರ್ಶಕನೊಬ್ಬ, ತಾನು ಕುಳಿತ ರಕ್ತಗೋಳದ ( ಕಾರ್ಪಸಲ್ ) ದೋಣಿಯೊಳಕ್ಕೆ ಕರೆದುಕೊಂಡು ಪ್ರವಾಹದ ಗುಂಟ ಸುತ್ತೆಲ್ಲ ತಿರುಗಾಡಿಸಿ ರಾಮುವಿನ ಹೃದಯದ ಬಳಿಗೆ ಕರೆದೊಯ್ಯುತ್ತಾನೆ. ಅಲ್ಲಿ, ರಾಮುವಿನ ಹೃದಯ ತಂತಿ ಮಿಡಿದು ಲೌಡ್‌ಸ್ಪೀಕರ್ ಹಚ್ಚಿ, ರಾಮುವಿನ ಹೃದಯಾಂತರಾಳದಲ್ಲಿ ಆತನ ಮದುವೆಯ ಬಗೆಗೆ ನಡೆಯುತ್ತಿರುವ ಅಂತರ್ಯುದ್ಧಕ್ಕೆ ಮೂರ್ತಸ್ವರೂಪವನ್ನು ಕೊಡುತ್ತಾನೆ. ಹೌಹಾರಿದ ಆ ತಾಯಿ, ತಂದೆ, ತಮ್ಮ ಮಗನ ಮೇಲೆ — ಆತನ ಮದುವೆಯ ವಿಷಯದಲ್ಲಿ — ತಮ್ಮ ಒತ್ತಾಯವನ್ನು ಹೇರಿದುದಕ್ಕಾಗಿ ಪಶ್ಚಾತ್ತಾಪ ಪಟ್ಟು ಮನಸ್ಸು ಬದಲಾಯಿಸುತ್ತಾರೆ. ಹೀಗೆ ಮಗನ ಹೃದಯದ ಅಂತರಾಳದಲ್ಲಿ ನಡೆಯುತ್ತಿರುವ ತುಮುಲವನ್ನು ಕಿವಿಯಾರೆ ಕೇಳಿದುದರಿಂದ, ಹಳೆಯ ಕಾಲದ ಆ ತಂದೆ-ತಾಯಿಯರ ಮನಸ್ಸು ಬದಲಾಯಿತು. ಮಗನ ಮದುವೆಯ ಪ್ರಶ್ನೆಯಂತಹ ಸಾಮಾನ್ಯ ಸಮಸ್ಯೆಯೊಂದನ್ನು, ಈ ನಾಟಕದಲ್ಲಿ ವಿಶಿಷ್ಟವಾದ ಪ್ರಸಾರ-ತಂತ್ರದಿಂದ ಬಿಡಿಸಲಾಗಿದೆ. ಹದವರಿತು ಎಷ್ಟು ಬಗೆಯ ಧ್ವನಿವಿಶೇಷಗಳನ್ನು ಇದರಲ್ಲಿ ಬಳಸಿಕೊಳ್ಳಬಹುದು ! ರಂಗದಲ್ಲಿ ಎಂದೆಂದೂ ಪ್ರಯೋಗಿಸಲಾಗದಂತಹ ಈ ನಾಟಕ, ಪ್ರಸಾರವಾದಾಗ ಮಾತ್ರ ಶ್ರೋತೃವಿಗೆ ಹೊಸದೊಂದು ಅನುಭವವನ್ನೇ ಕೊಡುತ್ತದೆ.

## ಮಾತಿನಿಂದ ಮೂಡಿಸಿದ ಚಿತ್ರ :

ಹೀಗೆ ಕಥಾವಸ್ತು, ರಚನಾತಂತ್ರಗಳನ್ನು ಕುರಿತು ಎರಡು ಮಾತಾಡಿದ ಮೇಲೆ ಪ್ರಸಾರ-ನಾಟಕದ ನಟನ ಬಗೆಗೆ ವಿವೇಚಿಸಬೇಕಾಗುತ್ತದೆ. ರಂಗ-ನಟ – ಪ್ರಸಾರ-ನಟ – ಇವರ ನಡುವೆ ಇರುವ ಭೇದ, ಆ ಎರಡು ಬಗೆಯ ನಾಟಕಗಳಲ್ಲಿಯೂ ಇರುವ ವ್ಯತ್ಯಾಸಗಳನ್ನು ಎತ್ತಿ ತೋರಿಸುತ್ತದೆ. ಪ್ರಸಾರ-ನಾಟಕ, ಮೊದಲೇ

ಹೇಳಿದಂತೆ ಶ್ರವ್ಯನಾಟಕ ಎಂದರೆ ಧ್ವನಿಯು ಕಟ್ಟಿದ ಚಿತ್ರ. ರಂಗದಲ್ಲಿನ ಬಾಹ್ಯೋಪ ಕರಣಗಳ ಉಪಯೋಗವೇ ಇದರಲ್ಲಿಲ್ಲ. "ಹೀಗೆ ಮಾಡುವನು — ಹಾಗೆ ಮಾಡುವನು" ಎಂಬ ರಂಗನಿರ್ದೇಶನಗಳಿಗೆ ಇದರಲ್ಲಿ ಅರ್ಥವಿಲ್ಲ. ರಂಗದಲ್ಲಿ **ಮಾಡಿ** ತೋರಿಸುವುದನ್ನೆಲ್ಲ ಇಲ್ಲಿ **ಆಡಿ** ತೋರಿಸಬೇಕಾಗುತ್ತದೆ. ಪ್ರತಿಯೊಂದು ಕೃತಿಯನ್ನೂ ಎಚ್ಚರಿಕೆಯಿಂದ ಪಾತ್ರದ ಮಾತಿನಲ್ಲಿಯೇ ಮೂಡಿಸಬೇಕು. ಅಥವಾ ಸಾಧ್ಯವಾದರೆ ಸೂಚ್ಯವಾದ ಶಬ್ದವಿಶೇಷಗಳಿಂದ ಸಂಕೇತಿಸಬೇಕು. ಕೆಲವೊಂದು ಘಟನೆಗಳನ್ನಂತೂ — ಪಾತ್ರಗಳ ಮಾತಿನ ನೆರವಿಲ್ಲದೆ, ಅಸ್ವಾಭಾವಿಕ **ಎನಿಸದ** ರೀತಿಯಲ್ಲಿ ಶಬ್ದವಿಶೇಷಗಳಿಂದಲೇ ಮೂಡಿಸಬೇಕಾಗುತ್ತದೆ. ಇನ್ನು ಇಲ್ಲಿನ ಕಲೆಗಾರನೂ ರಂಗನಟನಿಗಿಂತ ಬೇರೆಯ ರೀತಿಯ ಕಲಾವಂತನೇ ಇರಬೇಕು.

ರಂಗ-ನಾಟಕದಲ್ಲಿ, ನಟನನ್ನು ನೇರವಾಗಿ ನೋಡಿ ಮೆಚ್ಚುವ ಮಂದಿ ಇದ್ದಾರೆ. ಅವರ ಉತ್ತೇಜನದಿಂದ ಹುರುಪುಗೊಂಡ ರಂಗ-ನಟ ನೇರವಾಗಿ ಅವರ ಬಗೆಯ ಮೇಲೆ ಪಾತ್ರವನ್ನು ಚಿತ್ರಿಸುತ್ತಾನೆ. ನಟ – ನೋಟಕರ ನಡುವಿನ ಈ ಸರಸ ಬಾಂಧವ್ಯ ರೇಡಿಯೋ ಕಲೆಗಾರ ಕಂಡರಿಯ. ಇಲ್ಲಿನ ಕಲೆಗಾರನೂ ಶ್ರೋತೃಗಳೂ ಪರಸ್ಪರ ಅಪರಿಚಿತರು. ಕುರುಡರ ಮುಂದೆ ನಾಟಕವಾಡಿದಂತೆ ಅವನಿಗೆ ಭಾಸವಾಗುತ್ತದೆ. ಹಾಗಾದರೂ ಅವನು ಪಾತ್ರದ ಸಂಪೂರ್ಣ ಚಿತ್ರವನ್ನು ತನ್ನ ಧ್ವನಿ ಹಾಗೂ ಮಾತಿನ ಧಾಟಿಯಿಂದಲೇ ಕೇಳುಗನ ಮನಸ್ಸಿನಲ್ಲಿ ಕಟ್ಟಬೇಕು. ಕೇಳುವವನಿಗೂ ಕೊರತೆಗಳಿವೆ. ಕೇಳುವುದೊಂದರಿಂದಲೇ ಮನಸ್ಸಿನಲ್ಲಿ ಆತ ಚಿತ್ರಕಟ್ಟಿ ರಸಾನುಭವ ಮಾಡಿಕೊಳ್ಳಬೇಕು. ಮನಸ್ಸಿನ ಪಕ್ವತೆಗೆ ಅನುಸಾರವಾದ ಚಿತ್ರದ ಕಲ್ಪನೆ ಆತನ ಮನಸ್ಸಿನಲ್ಲಿ ಮೂಡುತ್ತದೆ. ತಾನು ಭಾವಿಸಿಕೊಂಡಂತೆ ತಾನು ನಿರ್ವಹಿಸಿದ ಪಾತ್ರ-ಚಿತ್ರಣ ಕೇಳುಗನ ಮನಸ್ಸಿನಲ್ಲಿಯೂ ಮೂಡಿಸುವಂತಾಗಬೇಕಾದರೆ, ರೇಡಿಯೋ ನಟ ತನ್ನ ಧ್ವನಿ ಹಾಗೂ ಮಾತುಗಾರಿಕೆಯ ಬಳಕೆಯಲ್ಲಿ ಬಲು ಎಚ್ಚರಿಕೆಯಿಂದಿರಬೇಕು. ರಂಗದಲ್ಲಿರುವಂತೆ ಅವನಿಗೆ ಇತರ ಸಾಧನಗಳ ನೆರವಿಲ್ಲ. ಮನೋಹರವಾದ ಮುಖ, ವಜ್ರಕಾಯ, ಒಪ್ಪುವ ಪೋಷಾಕು, ಮುಖವನ್ನೇ ಮಾರ್ಪಡಿಸಿ ಪಾತ್ರದ ಜಾಡಿಗೆ ಹಚ್ಚುವ ರಂಗು, ಮೇಣಗಳು – ಇವು ಯಾವುವೂ ಪ್ರಸಾರ ನಾಟಕದ ಕಲೆಗಾರನಿಗೆ ಆಸರೆಯಾಗಲಾರವು. ಕೈಯಾಟ, ಕುಣಿತ, ಮುಖಭಾವದ ಬದಲಾವಣೆ ಇದಾವುದೂ ಅವನಿಗೆ ನೆರವಾಗಲಾರದು. ರೇಡಿಯೋ-ಕಂಸ ನೋಟಕ್ಕೆ ನೀಕಲು ಕಡ್ಡಿಯಾಗಿರಬಹುದು. ಆದರೆ ಧ್ವನಿಯಲ್ಲಿ ಕಂಚಿನ ಶಕ್ತಿಯೂ, ಮಾತಿನಲ್ಲಿ ಗಾಂಭೀರ್ಯವೂ, ಭಾವವುಕ್ಕಿಸಲು ಮಾತನ್ನು ತೂಗಿ ಆಡುವ ಕಲೆಯೂ ಇದ್ದಲ್ಲಿ, ಅವನು ಪ್ರಭಾವಶಾಲಿಯಾದ ಕಂಸನೇ. ಧ್ವನಿಯೊಂದೇ ರೇಡಿಯೋ ನಟನ ಸಂಪತ್ತು. ವಿವಿಧ ಭಾವಗಳನ್ನು ಶುದ್ಧವಾಗಿ ಮೂಡಿಸಲು ಧ್ವನಿಯ ಬದಲಾವಣೆ, ಪ್ರಭಾವಯುಕ್ತವಾದ ಉಚ್ಚಾರಣೆ, ಅವನ ಏಕೈಕ ಸಾಧನ. ಒಂದೇ ಧಾಟಿಯಲ್ಲಿ ನಾಲ್ಕು ಮಾತುಗಳನ್ನಾಡಿದರೆ ಕೇಳುವವನಿಗೆ ಬೇಸರವಾಗುತ್ತದೆ ನಿತ್ಯಜೀವನದಲ್ಲಿಯೂ ನಮ್ಮ ಧ್ವನಿ, ಮಾತಿನ ರೀತಿ, ಭಾವಕ್ಕೆ ಹೊಂದಿಕೊಂಡು ತಾನೇತಾನಾಗಿ ಮಾರ್ಪಡುತ್ತಿರುತ್ತದೆ. ರೇಡಿಯೋ ನಟ — ತನ್ನ ಮಾತು ಮಾತನ್ನೂ ತೂಗಿ, ಧ್ವನಿ, ಅದರ ಉತ್ಕಟತೆ, ಎತ್ತರ, ರೀತಿಗಳನ್ನು ಮೊದಲೇ ಖಚಿತವಾಗಿ ನಿರ್ಣಯಿಸಿ ಆಡಬೇಕಾ-

ಗುತ್ತದೆ. ಒಂದೇ ಮಾತನ್ನು — ಏಕೆ — ಒಂದೇ ಶಬ್ದವನ್ನು ಕೂಡ ಅನೇಕ ಬಗೆ. ಯಲ್ಲಿ ಆಡಬಹುದು. ಬೇರೆ ಬೇರೆ ಭಾವ ಬರುವಂತೆ ಹೇಳಬಹುದು. ತನ್ನ ಧ್ವನಿಯ ಮೇಲೆ ಪ್ರಭುತ್ವವನ್ನು ಸ್ಥಾಪಿಸಿ ಅದನ್ನು ದುಡಿಸಿಕೊಳ್ಳುವ ಕಲೆ ಕರಗತವಾದಾ. ಗಲೇ, ಒಬ್ಬ ಕಲೆಗಾರ ಯಶಸ್ವಿಯಾದ ರೇಡಿಯೋ ನಟನಾಗುತ್ತಾನೆ. ಶ್ರೀ. ಮೂರ್ತಿ ರಾಯರು ರೇಡಿಯೋ ಕಲೆಗಾರನನ್ನು ರಂಗ-ನಟನೊಡನೆ ಹೋಲಿಸುತ್ತಾ ಹೇಳಿ ದಂತೆ —

"ನಮ್ಮ ದನಿಯನ್ನು ಏರಿಸುವುದು, ಇಳಿಸುವುದು, ಅದರ ಲಯವನ್ನೂ ಸಮ. ಯೋಚಿತವಾಗಿ ಬದಲಾಯಿಸುವುದು, ನಮ್ಮ ಮನೋಭಾವದ ಏರುಪೇರುಗಳನ್ನೂ ಓರೆಕೋರೆಗಳನ್ನೂ ಮಾತಿನ ಲಯದಲ್ಲಿಯೂ ದನಿಯ ಸ್ಥಾಯಿಯಲ್ಲೂ ವ್ಯಕ್ತ. ಪಡಿಸುವುದು — ಇದೇ ಒಂದು ದೊಡ್ಡ ಶಾಸ್ತ್ರ. ನಮ್ಮ ರಂಗಸ್ಥಳದ ನಟರು ಇದ ರಲ್ಲಿ ನುರಿತವರಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಅವರ ಮಾತಿನ ವೈಖರಿ ಯಲ್ಲಿ ಅನೇಕ ವೇಳೆ ಅಸಹ್ಯವಾದ ಮತ್ತು ಅಸ್ವಾಭಾವಿಕವಾದ "ನಾಟಕೀಯತೆ" ಕಾಣಬರುತ್ತದೆ. ನಮ್ಮ ರಂಗಸ್ಥಳದ ಗಾಂಭೀರ್ಯ ನಿಸ್ಸಂಶಯವಾಗಿ ಕೃತಕಗಾಂಭೀರ್ಯ, ನಗು ಕೃತಕ ನಗು, ಅಳುವೋ — ಪ್ರೇಕ್ಷಕರನ್ನು ನಗಿಸುತ್ತದೆ. ರಂಗಸ್ಥಳದ ನಟನೆ ಯೆಲ್ಲ ಕೃತಕವೇ ನಿಜ. ಆದರೆ ಕಲಾವಿದನು ಆ ಕೃತಕತೆಯನ್ನು ಮರೆಸಬೇಕು. ರೇಡಿಯೋ-ನಟರಂತೂ ಇದನ್ನು ಕಲಿಯದಿದ್ದರೆ ಬದುಕಲಾರರು. ರೇಡಿಯೋ ನಾಟಕದಿಂದ ಈ ಶಾಸ್ತ್ರಕ್ಕೆ ಹೆಚ್ಚು ಉತ್ತೇಜನ ದೊರೆಯುವುದು ಖಂಡಿತ. ಈ ದೃಷ್ಟಿಯಿಂದ ರೇಡಿಯೋ ನಾಟಕವು ರಂಗಸ್ಥಳಕ್ಕೂ ಸಹ ಉಪಕಾರಿಯಾಗಿ ಪರಿಣಮಿಸುತ್ತದೆ."

ಶಬ್ದ ವಿಶೇಷಗಳು :

ನುಡಿ, ಶಬ್ದವಿಶೇಷ ಹಾಗೂ ನೀರವತೆ. ಇವು ಮೂರೂ ಕೂಡಿ ಪ್ರಸಾರ ನಾಟಕದ ನೆಲಗಟ್ಟನ್ನು ನಿರ್ಮಿಸಿವೆ. ನುಡಿ ಎಂದರೆ ಭಟ್ಟಿ ಇಳಿಸಿದಂತೆ ಪಾಕವಿಟ್ಟ ಮಾತು. ಕಾಲನಿಯಮಕ್ಕೆ ಕಟ್ಟುಬಿದ್ದ ಪ್ರಸಾರ-ನಾಟಕದಲ್ಲಿ ಮಾತು ಹರಹಿ ಹೋಗ ಬಾರದು. ತೂಗಿ ಹಾಕಿದ ಮಾತು, ಮನಸ್ಸಿನಲ್ಲಿಯೇ ಮಥನಮಾಡಿ ರಚಿಸಿದ ವಾಕ್ಯ — ನಾಟಕವನ್ನು ಪ್ರತಿಕ್ಷಣಕ್ಕೂ ಮುಂದು ಮುಂದಕ್ಕೆ ತಳ್ಳುತ್ತಿರಬೇಕು. ಒಂದು ವಾಕ್ಯ ತೆಗೆದರೂ ಒಂದು ಮಾತನ್ನು ಮುಗ್ಗು ಮಾಡಿದರೂ ನಾಟಕದ ನಡೆಗೇ ಧಕ್ಕೆ ಬರುವಂತಿದ್ದಾಗಲೇ, ನಾಟಕದಲ್ಲಿ ಮಾತಿನ ರಚನೆ ಉತ್ತಮವಾಗಿದೆ ಯೆಂದಂತಾಯಿತು. ಇನ್ನು ಶಬ್ದವಿಶೇಷಗಳು. ಅವು ಸೂಚ್ಯವಾಗಿ — ಸಾಂಕೇತಿಕ ವಾಗಿರುವಂತೆ ಅತಿ ಹೆಚ್ಚಿನ ಎಚ್ಚರಿಕೆಯನ್ನು ಪಾಶ್ಚಾತ್ಯ ನಿರ್ದೇಶಕರು ತೆಗೆದುಕೊಳ್ಳು ತ್ತಿದ್ದಾರೆ. ಅತ್ಯಂತ ಅವಶ್ಯಕವಾದಷ್ಟಕ್ಕಿಂತ ಲವಲೇಶವಾದರೂ ಹೆಚ್ಚಾಗದಂತೆ ಶಬ್ದವಿಶೇಷಗಳನ್ನೂ ಹತೋಟಿಯಲ್ಲಿ ಇಡುತ್ತಾರೆ. ಒಂದು ಆವರಣವನ್ನು ಕಲ್ಪಿಸುವ ಸಲುವಾಗಿ ಎರಡು-ಮೂರು ಬೇರೆ ಬೇರೆ ಬಗೆಯ ಶಬ್ದವಿಶೇಷಗಳನ್ನು ಹದವರಿತು ಬೆರೆಸಿ ಹಿನ್ನೆಲೆಯಲ್ಲಿ ಇಟ್ಟುಕೊಳ್ಳುವುದು ವಾಡಿಕೆ. ಪಾಶ್ಚಾತ್ಯ ಪ್ರಸಾರಕೇಂದ್ರ ಗಳಲ್ಲಿ ಎಚ್ಚರಿಕೆಯಿಂದ ಕೂಡಿಟ್ಟು — ಬೇಕೆನಿಸಿದ-ಧ್ವನಿ-ವಿಶೇಷ ಕ್ಷಣಮಾತ್ರದಲ್ಲಿ

ಕೈಗೆ ನಿಲುಕುವಂತೆ ನಿರ್ದೇಶಿಸಿ ಕೊಡಿಟ್ಟು— sound effects library ಗಳಿವೆ. ನಾಟಕದ ಪೂರ್ವಭಾವಿಯಾಗಿ, ಶಬ್ದವಿಶೇಷಗಳ ನಿರ್ದೇಶಕ ನಾಟಕಕ್ಕೆ ಬೇಕಾದ ಧ್ವನಿವಿಶೇಷಣಗಳನ್ನೆಲ್ಲ ಸಂಗ್ರಹಿಸಿ, ಇಲ್ಲದವುಗಳನ್ನು ಹೊಸದಾಗಿ ಸಿದ್ಧಪಡಿಸಿ ಇಟ್ಟು ಕೊಳ್ಳುತ್ತಾನೆ. ಸಮರದ ಎಲ್ಲ ಬಗೆಯ ಶಬ್ದವಿಶೇಷಗಳು—ವಿವಿಧ ಏರೋಪ್ಲೇನ್, ಟ್ಯಾಂಕ್, ಮೆಷಿನ್‌ಗನ್, ಬಾಂಬುಸಿಡಿತ — ಮತ್ತೆ ಬೇರೆ ಬೇರೆ ವಾಹನಗಳು — ತಿರುವಿನಲ್ಲಿ, ತಿಟ್ಟಿನಲ್ಲಿ, ಇಳಿಜಾರಿನಲ್ಲಿ ಧ್ವನಿಮುದ್ರಿಸಿದವು, ನಿಸರ್ಗನಾದಗಳು — ಬೇರೆ ಬೇರೆ ರೀತಿಯ ಮಳೆ, ಸೋನೆ, ಬಿರುಗಾಳಿ, ಬರಸಿಡಿಲು, ಗುಡುಗು, ಸಾಗರ, ನದಿ, ಝರಿ, ಹಕ್ಕಿಪಕ್ಷಿಗಳು, ಪ್ರಾಣಿಗಳು, ಮೃಗಗಳು ಈ ಎಲ್ಲವುಗಳ ಧ್ವನಿವಿಶೇಷ ಗಳು ಮೊದಲೇ ಧ್ವನಿಮುದ್ರಿತವಾಗಿದ್ದರೂ ಪ್ರತಿಯೊಂದು ನಾಟಕಕ್ಕೂ ಅದರ ಅವಶ್ಯಕತೆಗಳನ್ನು ಎಚ್ಚರಿಕೆಯಿಂದ ಅನುಲಕ್ಷಿಸಿ ಹೊಸ ಹೊಸ ಶಬ್ದವಿಶೇಷಗಳನ್ನು ಯಾವಾಗಲೂ ಸಿದ್ಧಮಾಡಿಕೊಳ್ಳಬೇಕಾಗುತ್ತದೆ. ಕೊಲಂಬಿಯಾ ಪ್ರಸಾರಮಂದಿರದ effects library ಯಲ್ಲಿ ಬೇರೆ ಬೇರೆ ಬಗೆಯ — ಬೇರೆ ಬೇರೆ ಲೋಹಗಳ – ಗಾತ್ರದ, ನಾದದ ನೂರಾರು ಗಂಟೆಗಳೇ ಇವೆಯೆಂದು ನೋಡಿದವರು ಹೇಳಿದ ಮಾತು. ಆದರೆ ಇದೆಯೆಂಬ ಕಾರಣದಿಂದ ಶಬ್ದಗಳನ್ನು ಅನವರತವೂ ನಾಟಕದಲ್ಲಿ ತುಂಬುವು ದಿಲ್ಲ. ಆದರೆ ಬೇಕಾದಂತಹ ಶಬ್ದವಿಶೇಷಗಳನ್ನೂ ಮತ್ತೆ ಮತ್ತೆ ಪ್ರಯೋಗ ಮಾಡಿ ಸಿದ್ಧಪಡಿಸಿಕೊಳ್ಳದೇ ಎಂದಿಗೂ ಇರುವುದಿಲ್ಲ. ನಾರ್ಮನ್ ಕಾರ್ವಿನ್ನನ ಪತ್ತೇದಾರಿ ನಾಟಕ ಒಂದರಲ್ಲಿ, ಹೆಣ್ಣುಮಗಳೊಬ್ಬಳನ್ನು ಮನೆಯ ಹಿಂದಿನ ಗೋಮಾಳದಲ್ಲಿ ಕೊಲೆ ಮಾಡಿ ಆಕೆಯ ಕೊರಳಲ್ಲಿದ್ದ ಚಿನ್ನದ ಹಾರವನ್ನು ಮುರಿದು ಕಿತ್ತುಕೊಂಡು ಹೋದ ಪ್ರಸಂಗ ಬರುತ್ತದೆ. ಚಿನ್ನದ ಹಾರವನ್ನು ಹರಿದಂತೆ ಭಾಸವಾಗುವ ಹಾಗೆ ಶಬ್ದವಿಶೇಷವನ್ನು ಸಿದ್ಧಪಡಿಸಲು ವಿಪರೀತ ಹೆಣಗಿದರಂತೆ. ನಿಜವಾಗಿ ಚಿನ್ನದ ಹಾರ ವನ್ನೇ ಹರಿದಾಗಲೂ — ಬೇಕೆನಿಸಿದಂತಹ ಶಬ್ದ ಬರಲಿಲ್ಲ. ಸರಿ ಅವ್ಯಾಹತವಾಗಿ ಪ್ರಯತ್ನ-ಪ್ರಯೋಗಗಳು ನಡೆದವು. ಕಡೆಗೊಮ್ಮೆ ಸತ್ತ ಸಣ್ಣ ಬೆಕ್ಕಿನ ಕುತ್ತಿಗೆಯ ಎಳೆಸಾದ ಮೂಳೆಯನ್ನು ಮೈಕ್ರೊಫೋನ್ ಮುಂದೆ ಮುರಿದಾಗ, ಒಪ್ಪಿಗೆಯಾಗು ವಂತಹ ಶಬ್ದವಿಶೇಷ ಸಿದ್ಧವಾಯಿತು. ಕನ್ನಡ ಪ್ರಸಾರ-ನಾಟಕವೊಂದರಲ್ಲಿ ಪಾರಿ- ವಾಳಗಳು ದಿಕ್ಕೆಟ್ಟು ಹಾರಾಡುವ ಶಬ್ದವನ್ನು ಕಲ್ಪಿಸಬೇಕಾಯಿತು. ಏನೆಲ್ಲ ಮಾಡಿ, ಕಡೆಗೆ ಎರಡು ಬೀಸಣಿಗೆಗಳನ್ನು ನಿಲ್ಲಿಸಿ, ನಿಲ್ಲಿಸಿ ಪಟಪಟನೆ ಹೊಡೆಯುತ್ತ ಮೈಕ್ರೋ ಫೋನಿನಿಂದ ದೂರಕ್ಕೆ ಹತ್ತಿರಕ್ಕೆ ಓಡಿಯಾಡಿದಾಗ, ಪ್ರಯೋಗ ಯಶಸ್ವಿಯಾಯಿತು. ಕಪ್ಪೆಗಳ ವಟರಧ್ವನಿಯನ್ನು ಮೂಡಿಸಲು ಕಪ್ಪೆಗಳಿಂದಲೇ ಧ್ವನಿ ಮುದ್ರಿಸಿಕೊಂಡ ರೆಕಾರ್ಡ ಹಚ್ಚಿದಾಗ ಕೂಡ ಕಪ್ಪೆಗಳ ಧ್ವನಿಯಂತೆ ಕೇಳಲಿಲ್ಲ. ಹರಿಯುವ ನೀರಿನ ಹಿನ್ನೆಲೆಯಲ್ಲಿ ಬಾಚಣಿಗೆಗಳನ್ನು ಮೈಕ್ರೋಫೋನಿನ ಹತ್ತಿರ ಹಿಡಿದು ಉಗುರುಗಳಿಂದ ಗೀರಿದಾಗ ಕಪ್ಪೆಗಳೇ ಮಾಡಿದ ಸಮೂಹ ಗಾನಕ್ಕಿಂತ ಹೆಚ್ಚು ಒಪ್ಪುವಂತೆ ಪ್ರಯೋಗ ಯಶಸ್ವಿಯಾಯಿತು. ನೀರ್ಗೊಳದ ಹಿನ್ನೆಲೆ ಕಲ್ಪಿಸಲು ಅಲ್ಲಲ್ಲಿ ನೀರಿನ ಪಾತ್ರೆಗಳನ್ನಿಟ್ಟು ಫುಳ್, ಫುಳ್, ಎಂದು ಗಾಳಿಯೂದಿದೆವು. ನೃತ್ಯದ ಗೆಜ್ಜೆ, ತಾಳಕ್ಕೆ ಹೊಂದುವಂತೆ ತಬಲದವರ ಕೈಗೇ ಗೆಜ್ಜೆ ಕಟ್ಟಿದೆವು. ಹೀಗೆಯೇ ಪಟ್ಟಿಕೊಡ- ಬಹುದು.

ಆದರೆ ನಾಟಕದ ಒಂದು ಸಂದರ್ಭದಲ್ಲಿ ಶಬ್ದವಿಶೇಷವೊಂದು ಅತ್ಯವಶ್ಯಕ. ವೆಂದು ನಿರ್ಣಯಿಸಿದ ಮೇಲೆ, ಯಾವ ರೀತಿಯ ಶಬ್ದ — ಎಷ್ಟು ಕಾಲ ಇರ. ತಕ್ಕದ್ದು — ಯಾವ ಪ್ರಮಾಣದಲ್ಲಿ — ಎಂಬೆಲ್ಲ ವಿಷಯವನ್ನೂ ಎಚ್ಚರಿಕೆಯಿಂದ ಪರಿಶೀಲಿಸಬೇಕಾಗುತ್ತದೆ. ಎಷ್ಟೋ ವೇಳೆ ಶಬ್ದವಿಶೇಷಕ್ಕಿಂತ — ವಿವೇಚಿಸಿ ನಿರ್ಣಯಿಸಿದ ನೀರವತೆಯೇ ಹೆಚ್ಚಿನ ಪರಿಣಾಮಕಾರಿಯಾಗುತ್ತದೆ. ಅದಕ್ಕೆಂದೇ ಈಚಿನ ಅನೇಕ ಪಾಶ್ಚಾತ್ಯ ಪ್ರಸಾರ-ನಾಟಕಗಳಲ್ಲಿ ಶಬ್ದವಿಶೇಷಗಳನ್ನು ಬಳಸದೆಯೇ ಘಟನೆಗಳನ್ನು ಮೂಡಿಸುವ ಪ್ರಯತ್ನ, ಪ್ರಯೋಗ ನಡೆದಿದೆ.

## ವಾದ್ಯಗಳ ಹಿನ್ನೆಲೆ :

ಪ್ರಸಾರ-ನಾಟಕದಲ್ಲಿ ದೃಶ್ಯಾವಳಿಯ ರಂಗ-ಸಜ್ಜಿಕೆಯಿಲ್ಲ. ರಂಗದಲ್ಲಿ, ಔರಂಗ ಜೇಬ ಪಾತ್ರಧಾರಿಯ ಮಾತುಗಾರಿಕೆ ಸಪ್ಪೆಯೆನಿಸಿದರೂ, ರಂಗಸಜ್ಜಿಕೆಯ ವೈಭವ ದಿಂದ, ಅರಮನೆಯ ಸೊಗಸು, ಕೋರೈಸುವ ಬೆಳಕು, ಹೊಳೆಹೊಳೆವ ಪೋಷಾಕು, ನೆರೆದ ಸಭೆ — ಇಂತಹ ಆವರಣದ ಗಾಂಭೀರ್ಯದಿಂದಾಗಿ ಕಳೆ ತುಂಬಿ ಒಂದು ದೃಶ್ಯ ಯಶಸ್ವಿಯಾಗಬಹುದು. ತಪಸ್ಸಿಗಾಗಿ ಕುಳಿತ ಧ್ರುವನಿಗೆ ಹಿನ್ನೆಲೆಯಾಗಿ ಕಾಡಿನ ದೃಶ್ಯದ ಪರದೆಗಳಿರುತ್ತವೆ. ದೃಶ್ಯವನ್ನು ಇನ್ನೂ ಪರಿಣಾಮಕಾರಿಯಾಗಿ ಮಾಡಬೇಕೆಂಬ ಮಹೋದ್ದೇಶದಿಂದ ಪಳಗಿದ ಹುಲಿ ಚಿರತೆಗಳನ್ನೂ ರಂಗದ ಮೇಲೆ ಬಿಡಬಹುದು. ಇಂತಹ ಹಿನ್ನೆಲೆಯನ್ನು ಪ್ರಸಾರ-ನಾಟಕದಲ್ಲಿ ಸಂಗೀತ ವಾದ್ಯಗಳ ಸಹಾಯದಿಂದ, ಶಬ್ದವಿಶೇಷಗಳ ನೆರವಿನಿಂದ ಮೂಡಿಸಬೇಕಾಗುತ್ತದೆ. ರಾಜಾಸ್ಥಾನ ವೆಂದು ನಂಬಿಸಲು — ದೂರದ ಶಹನಾಯಿ ವಾದನವನ್ನು ತೆಳ್ಳಗೆ ತೇಲಿ ಬಿಟ್ಟು ಒಮ್ಮೊಮ್ಮೆ ಪರಾಕ್ ಕೂಗಿಸಬೇಕಾಗಬಹುದು. ಸೂರ್ಯೋದಯ ಸಮಯದಲ್ಲಿ ನಿಸರ್ಗ ನಾದವನ್ನು ಸೂಚಿಸಲು ವಿಲಂಬಿತವಾಗಿ ಉದಯರಾಗವನ್ನು ವಾದ್ಯಗಳಿಂದ ಮೂಡಿಸಿ ಹಕ್ಕಿಗಳ ಚಿಲಿಪಿಲಿಯನ್ನು ಹಿತ ಮಿತವಾಗಿ ಬೆರೆಸಬಹುದು. ನಟ ಪ್ರದರ್ಶಿಸುವ ಯಾವುದೊಂದು ಭಾವಕ್ಕೂ ಪೋಷಕವಾಗಿ ಎಚ್ಚರಿಕೆಯಿಂದ, ಸಂಗೀತ ವಾದ್ಯಗಳ ಮೂಲಕ ತಕ್ಕ ಹಿನ್ನೆಲೆಯನ್ನು ಕಲ್ಪಿಸುವುದು ಸಾಧ್ಯ. ವಾದ್ಯಗಳ ನೆರವಿನಿಂದ ಕನಸನ್ನು ಮೂಡಿಸಬೇಕೆಂದು ಒಮ್ಮೆ ಚೆಲೋ ತಂತಿಗಳನ್ನು ಮೃದುವಾಗಿ ಬಡಿಯುತ್ತಾ, ಗಿಟಾರ್‌ನಲ್ಲಿ ಮೂರು ಸ್ಥಾಯಿಗಳನ್ನು ಒಂದೇ ಆರೋಹಣ-ಅವರೋಹಣದಲ್ಲಿ ತೇಲಿಸುತ್ತ, ಆ ಹಿಮ್ಮೇಳಕ್ಕೆ ಹೊಂದಿಸಿಕೊಂಡು, ಪಾತ್ರಧಾರಿ, ಬಿರುಕುಗೊಂಡ ಮೆಲ್ಲನೆಯ ಧ್ವನಿಯಲ್ಲಿ ಕನಸಿನ ಪಾತ್ರಗಳೊಡನೆ ಮಾತನಾಡಿದಾಗ ತುಂಬ ಯಶಸ್ವಿಯೆನಿಸಿದ ಪ್ರಯೋಗವಾಯಿತು. ಆದರೆ ಇಂಥ ಚಿತ್ರಗಳನ್ನು ಮೊದಲೇ ಸಂಪೂರ್ಣವಾಗಿ ಅಭ್ಯಾಸ ಮಾಡಿ — ಇಲ್ಲಿ ಈ ಮಾತನಾಡಬೇಕು, ಅಲ್ಲಿ ಉಸಿರೆಳೆದುಕೊಳ್ಳಬೇಕು — ಎಂಬಷ್ಟು ಖಚಿತ ಮಾಡಿಕೊಂಡರೆ ಮಾತ್ರ ಕಟ್ಟಿದ ಚಿತ್ರ ಯಶಸ್ವಿಯಾಗುತ್ತದೆ. ಆದರೆ ಅನುದಿನದ ಸಾಮಾಜಿಕ ಚಿತ್ರವನ್ನು ಪ್ರಸಾರ ಮಾಡುವಾಗ ವಾದ್ಯಗಳ ಬಳಕೆಯೇಕೋ ತಿಳಿಯದಾಗಿದೆ. ಯಾರಿಗೆ ನಿಜ ಜೀವನದಲ್ಲಿ ಎಂಥ ದುಃಖ ಎರಗಿ ಬಂದಾಗಲೂ ಹಿನ್ನೆಲೆಯಲ್ಲಿ ಪಿಟೀಲು ನುಡಿಸುವ

ದಿಲ್ಲ. ಎಂದ ಮೇಲೆ ನಾಟಕದಲ್ಲಿ ಏಕೆ? ನಟ ತನ್ನ ಅಂತರ್ಭಾವನೆಗಳನ್ನು ಕೇಳಿದವನು ನಂಬುವಂತೆ ಮೂಡಿಸಲು **ಅಸಮರ್ಥನೆನಿಸಿದರೆ ಮಾತ್ರ** – ಕಳೆದುದನ್ನು ತುಂಬಿಕೊಳ್ಳಲು ವಾದ್ಯಗಳ ಆಸರೆ ಬೇಕಾಗುತ್ತದೆ. ನಟ ಸಮರ್ಥನಾದರೆ ಎಂತಹ ದುರ್ಭರವಾದ ಭಾವವನ್ನಾದರೂ ಧ್ವನಿಯ ಏಳಿಕೆ— ಮಾತಿನ ರೀತಿಯಿಂದಾಗಿ ಶ್ರೋತೃವಿನ ಎದೆ ಹೊಗುವಂತೆ ಬಿಂಬಿಸಬಲ್ಲವನಾದರೆ, ವಾದ್ಯಗಳ ಹಿನ್ನೆಲೆ ಅನಾವಶ್ಯಕವಲ್ಲದೆ ಹಾಸ್ಯಾಸ್ಪದವೂ ಆದೀತು.

## ಕನ್ನಡದಲ್ಲಿ ಪ್ರಸಾರನಾಟಕಗಳು :

ಕನ್ನಡ ಪ್ರಸಾರ-ಕೇಂದ್ರ ಹುಟ್ಟಿ ಮೊದಲಾಗಿ, ಡಾ. ಎಂ. ವಿ. ಗೋಪಾಲಸ್ವಾಮಿಯವರ ಉತ್ಸಾಹ, ಶ್ರಮಗಳ ಫಲವಾಗಿ ಮೈಸೂರಿನ ಅವರ ಮನೆಯಲ್ಲಿ ೧೯೩೫ರಲ್ಲಿ ಪ್ರಾರಂಭವಾಯಿತು. ಅಲ್ಲಿಂದ ಪ್ರಸಾರವಾದ ಮೊದಲ ಕನ್ನಡ ನಾಟಕ ಇಬ್ಸನ್ನನ "ಡಾಲ್ಸ್‌ಹೌಸ್" ನಾಟಕದ ಆಧಾರದ ಮೇಲೆ ಶ್ರೀ. ಎಸ್. ಜಿ. ಶಾಸ್ತ್ರಿಯವರು ರಚಿಸಿದ "ಬೊಂಬೆಯ ಮನೆ". ೧೯೩೭ರ ಸುಮಾರಿಗೆ ಪ್ರಸಾರಗೊಂಡ ಆ ನಾಟಕದಲ್ಲಿ ನಾಯಕಿ ನೋರಾ ಪಾತ್ರವನ್ನು ನಾನೇ ನಿರ್ವಹಿಸಿದ್ದೆ. ಪುಣ್ಯಕ್ಕೆ ಧ್ವನಿ ಇನ್ನೂ ಒಡೆದಿರಲಿಲ್ಲ. ಇಪ್ಪತ್ತು ವರ್ಷಗಳ ಹಿಂದೆ ಪ್ರಸಾರ-ಕೇಂದ್ರಕ್ಕೆ ಕೂಡ ನಾಟಕದಲ್ಲಿ ಪಾತ್ರವಹಿಸಲು ಹೆಣ್ಣುಮಕ್ಕಳು ಬರುತ್ತಿರಲಿಲ್ಲವೆಂದರೆ ಇಂದು ಸ್ವಲ್ಪ ಅಚ್ಚರಿಯೆನಿಸುತ್ತದೆ.

ಕನ್ನಡದಲ್ಲಿ ಪ್ರಸಾರ-ಚಿತ್ರಗಳು ರೂಪುಗೊಂಡುದು ೧೯೪೦ರ ನಂತರ. ಮೈಸೂರು ಸರಕಾರ, ಶ್ರೀ. ಗೋಪಾಲಸ್ವಾಮಿಯವರಿಂದ ಪ್ರಸಾರ-ಕೇಂದ್ರವನ್ನು ವಹಿಸಿಕೊಂಡು ತನ್ನ ಆಡಳಿತವನ್ನು ಪ್ರಾರಂಭಿಸಿತು. ಶ್ರೀ. ನಾ. ಕಸ್ತೂರಿಯವರು ಕೇಂದ್ರದ ಅಸಿಸ್ಟೆಂಟ್ ಡೈರೆಕ್ಟರಾಗಿ ನೇಮಕಗೊಂಡ ಮೇಲೆ ರಸಭರಿತವಾದ ಅನೇಕ ಪ್ರಸಾರ-ಚಿತ್ರಗಳನ್ನು ರಚಿಸಿ ನಿರ್ದೇಶಿಸಿದರು. ಅವರ ನೇತೃತ್ವದಲ್ಲಿ ಪ್ರತಿದಿನ ಪ್ರಸಾರವಾಗುತ್ತಿದ್ದ ' topical news ' ಕಾರ್ಯಕ್ರಮ, ನಾವೇ ಸ್ಟೂಡಿಯೋದಲ್ಲಿ ಅತಿಬುದ್ಧಿ ಉಪಯೋಗಿಸಿ ಸಿದ್ಧಪಡಿಸಿದ ಶಬ್ದವಿಶೇಷಗಳೊಂದಿಗೆ ಬೆರೆತು ಪ್ರಸಾರವಾದಾಗ ಮೈಸೂರಿನ ಜನತೆ ಕೇಳಲು ಮುಗಿಬಿದ್ದಿತು. ೧೯೪೪ರಿಂದ ಈಚೆಗಂತೂ ಎರಡನೆಯ ಜಾಗತಿಕ ಯುದ್ಧದ ವಿವರಗಳನ್ನು— ಅಂತಹ ವಾತಾವರಣವನ್ನೇ ಕೃತಕವಾಗಿ ಸೃಷ್ಟಿಸಿ— ಅದರ ಮೂಲಕ ಒದಗಿಸಿದಾಗ ಜನತೆಗೆ ಪ್ರಸಾರ-ಚಿತ್ರ, ಪ್ರಸಾರ-ರೂಪಕಗಳ ವ್ಯಾಪ್ತಿ, ಒತ್ತಡಗಳ ಅರಿವಾಯಿತು. ಶ್ರೀ. ಕಸ್ತೂರಿಯವರ ನೇತೃತ್ವದಲ್ಲಿ— ಆನಂತರ ಪ್ರಸಾರ-ಕೇಂದ್ರದ ಅಧಿಕಾರಿಗಳಾಗಿ ಬಂದ ಶ್ರೀ. ಎ. ಎನ್. ಮೂರ್ತಿರಾಯರ ನೇತೃತ್ವದಲ್ಲಿ ಕನ್ನಡದಲ್ಲಿನ ಒಳಿತಾದ ಎಲ್ಲ ರಂಗ-ನಾಟಕಗಳ ಪ್ರಸಾರ-ರೂಪಗಳು ಬಾನುಲಿಯಲ್ಲಿ ತೇಲಿಹೋದವು. ಆದರೂ ಇನ್ನೂ ನಿಷ್ಕೃಷ್ಟವಾದ ಒಂದೂ ಪ್ರಸಾರ-ನಾಟಕ ಕನ್ನಡದಲ್ಲಿ ಬಂದಿರಲಿಲ್ಲ.

ಆಗ ಪ್ರಸಾರವಾದುದೆಲ್ಲ, ಮೇಲೆ ಹೇಳಿದಂತೆ, ರಂಗ-ನಾಟಕವನ್ನೇ ಅಲ್ಲಿ ಇಲ್ಲಿ ಅಲ್ಪ ಸ್ವಲ್ಪ ಮಾರ್ಪಡಿಸಿ, ಮಾತುಗಳನ್ನು ತುಂಡರಿಸಿ, ವಾಕ್ಯಗಳನ್ನು ಕತ್ತರಿಸಿ ಸಿದ್ಧ

ಪಡಿಸಿದ ಅದರ ಪ್ರಸಾರರೂಪ. ೧೯೫೩ ರ ವರೆಗೆ ಸಾಮಾನ್ಯವಾಗಿ ಬಿ. ಎಂ. ಶ್ರೀಯವರ, ಕುವೆಂಪು ಅವರ, ಕೈಲಾಸಂ ಹಾಗೂ ಮಾಸ್ತಿಯವರ ನಾಟಕಗಳು ಪ್ರಸಾರಗೊಂಡಿದ್ದವು. ಶ್ರೀನಿವಾಸಮೂರ್ತಿಯವರ ' ಜಲಗಾರ ' ಕಾರಂತರ ' ಕಿಸಾಗೋತಮಿ ' ಮೂರ್ತಿಯವರ ' ಆಷಾಢಭೂತಿ ' ಇವನ್ನು ಬದಲಿಸದೆ ಪ್ರಸಾರ ಮಾಡಲಾಗಿತ್ತು ಪ್ರಸಾರಕ್ಕಾಗಿ ನಾಟಕಗಳನ್ನು ಬರೆದು — ಅವು ಸ್ವೀಕೃತವಾದರೆ ಸೂಕ್ತ ಸಂಭಾವನೆ ದೊರೆಯುತ್ತದೆ ಎಂಬ ವಿಷಯವನ್ನು ೧೯೫೩ ರ ನಂತರ ಸಾರಿದ ಮೇಲೆ — ಅನೇಕರು ಪ್ರಸಾರಕ್ಕಾಗಿ ನಾಟಕಗಳನ್ನು ಬರೆದರು ಅವೂ ಎಲ್ಲ ಅರ್ಧ ಬೆಂದ ರಂಗ-ನಾಟಕಗಳೇ.

ಪ್ರಸಾರ-ನಾಟಕದ ವಸ್ತು-ರಚನೆಯನ್ನು ಕುರಿತು ವಿವೇಚಿಸಿದಾಗ ಹಿಂದೆಯೇ ಆನುಷಂಗಿಕವಾಗಿ, ಕನ್ನಡದಲ್ಲಿನ ಕೆಲವೊಂದು ಪ್ರಸಾರಾರ್ಹ ನಾಟಕಗಳ ಮಾತು ಬಂದಿದೆ. ನನಗೆ ತಿಳಿದಂತೆ, ಮೊಟ್ಟಮೊದಲನೆಯ ಪ್ರಸಾರ-ನಾಟಕವನ್ನು ಕನ್ನಡದಲ್ಲಿ ರಚಿಸಿದ ಕೀರ್ತಿ, ಖ್ಯಾತ ಕಾದಂಬರಿಕಾರರಾದ ಶ್ರೀ. ಆರ್. ಕೆ. ನಾರಾಯಣ್ ಹಾಗೂ ಮೈಸೂರಿನ ವಿಕಟಕವಿಗಳಾದ ಶ್ರೀ. ವ್ಹಿ. ಕೆ. ಶ್ರೀನಿವಾಸನ್ ಅವರದು. ನಾರಾಯಣ್ ಅವರ Watchman of the Lake' ಎಂಬ ಕತೆಯನ್ನು ಕನ್ನಡ ಬಾನುಲಿ ರೂಪಕ್ಕೆ ಅತ್ಯಂತ ಯಶಸ್ವಿಯಾಗಿ ಅಳವಡಿಸಿದವರು ಶ್ರೀನಿವಾಸನ್‌ನಾಟಕದ ಹೆಸರು " ನೀರಗಂಟಿಮಾರಂ " ರಸ್ತೆಯಲ್ಲಿ ಕಲ್ಲು ಹರವಿಕೊಂಡು ರಿಪೇರಿ ಮಾಡುತ್ತಿದ್ದವರ ಹಾಸ್ಯ — ಅವಹೇಳನಕ್ಕೆ ಕೂಡ ಪಾತ್ರನಾದ ಪೆದ್ದ ಮಾರ, ಒಮ್ಮೆ ಹೆಚ್ಚಿನ ಮಳೆಯಿಂದಾಗಿ, ನೀರುಬ್ಬಿ ಹರಿದಾಗ ತನ್ನನ್ನೇ ತೆತ್ತು ಊರನ್ನು ರಕ್ಷಿಸಿದ ಕಥಾವಸ್ತುವಿನ ಸುತ್ತ ಹೆಣೆದ ನಾಟಕ ಅದು. ರಸ್ತೆ ರಿಪೇರಿ, ರೋಡ್ ಇಂಜನ್, ಮಳೆ, ಕೊಚ್ಚಿಕೊಂಡುಹೊರಟ ಮಹಾಪೂರ ಇಂಥ ಧ್ವನಿವಿಶೇಷಗಳೆಲ್ಲ ಪಾತ್ರ ವಹಿಸಿದ ಆ ನಾಟಕವನ್ನು ಎಚ್ಚರಿಕೆಯಿಂದ ಪ್ರಯೋಗಿಸಿದಾಗ ಮೈಸೂರ ಶ್ರೋತೃಗಳಿಗೆ ಮೊದಲ ಬಾರಿಗೆ ನಿಜವಾದ ಪ್ರಸಾರ-ನಾಟಕವನ್ನು ಕೇಳಿದ ಹೊಸ ಅನುಭವವಾಯಿತು.

ಅನಂತರ "ಚದುರಂಗ"ರು "ಶವದ ಮನೆ"ಯನ್ನು ಪ್ರಸಾರಕ್ಕಾಗಿ ರಚಿಸಿ ಯಶಸ್ವಿಯಾದರು. ರಾ. ವೆಂ. ಶ್ರೀನಿವಾಸರು ಬಾನುಲಿಗಾಗಿ ಬರೆದ "ಪುನರ್ಜನ್ಮ" ಭೂಲೋಕದಿಂದ ಯಮಲೋಕಕ್ಕೆ ಸೇತುವೆ ಕಟ್ಟಿ, ಪ್ರಸಾರದಲ್ಲಿ ಯಶಸ್ವಿಯಾಯಿತು. "ಕ್ಷೀರಸಾಗರ"ರ "ನಮ್ಮೂರಿನ ಪಶ್ಚಿಮಕ್ಕೆ" ಪ್ರಸಾರದಲ್ಲಿ, ಗಂಭೀರವಾದ ಕತ್ತಲರಾತ್ರಿಯ ಶೂನ್ಯ ನಾದವನ್ನೇ ಸೃಷ್ಟಿಸಿ ಕಳೆಗೊಂಡಿತು. ರಂಗನಾಥ ರಚಿಸಿದ ಮೊದಲ ಐತಿಹಾಸಿಕ ನಾಟಕಗಳಲ್ಲಿ ಹಾಗೂ ಈಚಿನ 'ಉಷಾಸ್ವಪ್ನ' 'ಸ್ಸುಮುಹೂರ್ತಾಸ್ಸಾವಧಾನ' ಮೊದಲಾದ ಸಾಮಾಜಿಕ ಚಿತ್ರಗಳಲ್ಲಿ ಪ್ರಸಾರ-ನಾಟಕದ ವಿಶಿಷ್ಟ ಲಕ್ಷಣಗಳು ಕಂಡುಬಂದವು. ಎ. ಕೆ. ರಾಮಾನುಜನ್, ಮಾನವನನ್ನು ಕಪ್ಪೆಗಳ ಸಾಮ್ರಾಜ್ಯಕ್ಕೆ ತಳ್ಳಿ ಸೃಷ್ಟಿಸಿದ ಉತ್ಕೃಷ್ಟ ಕಲ್ಪನಾಚಿತ್ರ — " ನಾದಬಿಂದು", ರೇಡಿಯೋದಲ್ಲಿ ಹೊಸ ರೀತಿಯ ಪ್ರಯೋಗಕ್ಕೆ ಪ್ರಚೋದನೆ ಕೊಟ್ಟಿತು. ಅವರ ಈಚಿನ "ಬಡಫಾಯಿ ಬ್ರಹ್ಮರಾಕ್ಷಸ" ಪಾಪ, ಓಲಗದ ಅಪಸ್ವರಗಳಿಗೆ ಸಿಕ್ಕಿ, ಮೈಥಳಿ ಹಿಡಿದು, ತಾನು ಏರಿದ್ದ ಮರವನ್ನೇ ಬುಡಸಹಿತ ಅಲ್ಲಾಡಿಸಿ ಓಡಿಹೋಗುವಂತಹ

ಸಂದರ್ಭಗಳನ್ನು ಚಿತ್ರಿಸಿದುದರಿಂದ ಪ್ರಸಾರಾರ್ಹವಾಯಿತು. ಪರ್ವತವಾಣಿಯವರ "ಇಷ್ಟಾರ್ಥ" ರಂಗಕ್ಕಿಂತ ರೇಡಿಯೋದಲ್ಲಿ ನಿರೀಕ್ಷಿಸಿದ ಫಲ ಕೊಟ್ಟಿತು. ಶಿವಸ್ವಾಮಿ, ಬೀಚಿ ಹಾಗೂ ಎಸ್ಕೆಯವರು ರಚಿಸಿದ ಬಾನುಲಿ-ನಾಟಕಗಳು, ಶ್ರೀರಂಗರು ಬರೆದ "ಪ್ರಾರಬ್ಧ" ವಸಂತ ಕವಲಿಯವರ "ಅಲಂಕಾರ" ರಾಮಚಂದ್ರಶರ್ಮರು ಬಾನುಲಿ-ನಾಟಕ-ಸ್ಪರ್ಧೆಗಾಗಿ ರಚಿಸಿದ "ಸೆರಗಿನ ಕೆಂಡ", ನಿರಂಜನರು ಈಚೆಗೆ ಪ್ರಸಾರಕ್ಕಾಗಿ ರಚಿಸಿದ "ಪ್ರಥಮಾನುರಾಗ" ಹಾಗೂ "ಸೂತ್ರ ಕಿತ್ತ ಪಟ", ತೆರಳಿ ಹೋದ ನಲ್ಲೆಯ ಗಾನದ ಗುಂಗಿನಲ್ಲಿ ತಿರ್ರನೆ ತಿರುಗಿ ಆಕೆಯ ಗೆಜ್ಜೆಯ ಹೆಜ್ಜೆಗೆ ತಲೆ ಕೊಟ್ಟು ನಶಿಸಿ ಹೋದ ನಲ್ಲನೊಬ್ಬನನ್ನು ಕುರಿತು ಡಾ. ಕೆ ಎ. ಕುಲಕರ್ಣಿ ಚಿತ್ರಿಸಿದ "ಸ್ವಪ್ನಸಖಿ" ರಘುನಾಥರಾಯ ನಾಡಗೀರರು ರಚಿಸಿದ ಪ್ರಸಾರತಂತ್ರಬದ್ಧವಾದ ಉತ್ಕೃಷ್ಟ ಹಾಸ್ಯನಾಟಕ "ಆಕಾಶಯಾನ" ಇವೆಲ್ಲ ಇಂದಿನ ಕನ್ನಡ ಪ್ರಸಾರ ನಾಟಕ ಸಾಹಿತ್ಯದಲ್ಲಿನ ಮುತ್ತುಗಳು ಇಂಥ ನಾಟಕಗಳನ್ನು ಕೇಳಿ ಸ್ಫೂರ್ತಿಗೊಂಡ ಅನೇಕರು ಬಾನುಲಿಗಾಗಿ ಈಗ ಬರೆಯುತ್ತಿದ್ದಾರೆ. ಪ್ರಸಾರ-ತಂತ್ರವನ್ನು ಅರಿತು ಕೊಳ್ಳುವ, ಅರಿತು ಬಳಿಸಿಕೊಳ್ಳುವ ಲವಲವಿಕೆ ಈಗ ಹಿಂದಿಲ್ಲದಷ್ಟು ಹೆಚ್ಚಾಗಿದೆ. ಇದರಿಂದಾಗಿ, ಇನ್ನುಮೇಲಾದರೂ, ನಿಷ್ಕೃಷ್ಟವಾದ ಪ್ರಸಾರ-ನಾಟಕಗಳು ಹೆಚ್ಚಿನ ಸಂಖ್ಯೆಯಲ್ಲಿ ರಚನೆಗೊಳ್ಳ ಬಹುದೆಂಬ ನಿರೀಕ್ಷೆ ಬಲಗೊಳ್ಳುವಂತಾಗಿದೆ. ನಮ್ಮಲ್ಲಿನ ಈ ನಾಟಕಗಳು ಭಾರತದಇತರ ಭಾಷೆಗಳಿಗೆ ಪರಿವರ್ತನೆಗೊಳ್ಳಲು ಅರ್ಹವಾದುವು.

## ನವೀನ ಪ್ರಯೋಗಗಳು:

ಯಾವ ದೇಶದ ರಂಗ-ನಾಟಕವಾದರೂ ಪ್ರೇಕ್ಷಕರ ಒಲವನ್ನು ಅನುಸರಿಸಿಯೇ ಬದುಕಬೇಕಾಗುತ್ತದೆ. ವಿಲಾಸೀ ರಂಗಭೂಮಿಗೆ ಸ್ವಲ್ಪ ಹೆಚ್ಚಿನ ಸ್ವಾತಂತ್ರ್ಯ-ನವೀನ ಪ್ರಯೋಗಗಳಿಗೆ ಸ್ವಲ್ಪ ಹೆಚ್ಚಿನ ಆಸ್ಪದಗಳಿವೆ – ನಿಜ. ಆದರೂ ಅಲ್ಲಿ ಕೂಡ, ಪ್ರೇಕ್ಷಕರಿಂದ ಕಿಂಚಿತ್ತಾದರೂ ಪ್ರತಿಫಲನನ್ನು ಬಯಸಿದ್ದರೆ, ಅವರ ಬೇಕು-ಬೇಡಗಳನ್ನು ನಿರ್ಲಕ್ಷಿಸಿ ಬದುಕುವುದು ಅಸಾಧ್ಯವಾಗುತ್ತದೆ. ಅಂತೆಯೇ, ರಂಗ-ನಾಟಕ ಪ್ರೇಕ್ಷಕರ ಒಲವನ್ನು ಎಡಕ್ಕೆ ಹಾಕಿಕೊಳ್ಳದೆ ಅವರು ಬೇಡಿದ್ದನ್ನೇ ಕೊಡುತ್ತ ಬಂದಿದೆ. ಈ ನಿಟ್ಟಿನಿಂದ ನೋಡಿದರೆ, ಪ್ರಸಾರ-ನಾಟಕಕ್ಕೆ ಹೆಚ್ಚಿನ ಸ್ವಾತಂತ್ರ್ಯವುಂಟು. ಶ್ರೋತೃಗಳ ಒಲವನ್ನು ಅದಾದರೂ, ಸಂಪೂರ್ಣವಾಗಿ ಕಡೆಗಣಿಸಲಾರದಾದರೂ, ನವೀನವಾದ ಕಥಾವಸ್ತುಗಳನ್ನು ಕೈಗೆತ್ತಿಕೊಂಡು ಪ್ರಸಾರದಲ್ಲಿ ಹೊಸ ಪ್ರಯೋಗಗಳನ್ನು ನಡೆಸಲು ಬೇಕಾದಷ್ಟು ಅನುವು ಇದೆ. ಶ್ರೋತೃಗಳಿಂದ ಯಾವ ಪ್ರತಿಫಲವನ್ನು ನಿರೀಕ್ಷಿಸದ ಕಾರಣದಿಂದಾಗಿ ರೇಡಿಯೋ ನಾಟಕಕ್ಕೆ ಇಂತಹ ಸ್ವಾತಂತ್ರ್ಯ. ಪ್ರಸಾರ-ನಾಟಕದ ಕರ್ತೃ, ತನ್ನ ಕೃತಿಯನ್ನು ಶುದ್ಧವಾದ ಅಂತಃಕರಣದಿಂದ ರಚಿಸಿದ್ದರೆ, ಅದರ ನಿರ್ದೇಶಕ ತನ್ನ ಕಲೆಯಲ್ಲಿ ಪರಿಣತನಾಗಿದ್ದರೆ, ಆ ನಾಟಕ ಎಂತಹ ಕಥಾವಸ್ತುವನ್ನು — ಬರಿಗಣ್ಣಿಗೆ ಅಶ್ಲೀಲವೆಂದು ತೋರಬಹುದಾದಂತಹ ಕಥಾವಸ್ತುವನ್ನು ಕೂಡ — ಕುರಿತು ಕಟ್ಟಿದ್ದರೂ ಅದರ ಪ್ರಯೋಗ ಶ್ರೋತೃವಿನಿಂದ ಮೆಚ್ಚುಗೆಗೊಳ್ಳುತ್ತದೆ. ಎಷ್ಟೆಂದರೂ ಶ್ರೋತೃವೂ

ಪ್ರಸಾರ-ನಾಟಕದಲ್ಲಿ ಹೊಸತನವನ್ನು ನಿರೀಕ್ಷಿಸುತ್ತಾನೆ. ಅಲ್ಲದೆ, ಇಂಥ **ಹೊಸತನ** ವನ್ನು ಪ್ರಯೋಗಿಸುವುದರಲ್ಲಿಯೇ ಪ್ರಸಾರ-ತಂತ್ರದ ಸಾಫಲ್ಯವೂ ಇದೆ. ಇಷ್ಟಾದರೂ ಒಟ್ಟಾರೆ, ಶ್ರೋತೃವಿನ ಒಲವನ್ನು, ಅನುಸರಿಸದಿದ್ದರೂ ಅನುಲಕ್ಷಿಸಿ, ಪ್ರಸಾರ ನಿರ್ದೇಶಕ ತನ್ನ ಸ್ವಾತಂತ್ರ್ಯವನ್ನು ಕುಗ್ಗಿಸಿಕೊಳ್ಳಬೇಕಾಗುತ್ತದೆ. 'Man from the mars' ಎಂಬ ಅದ್ಭುತ 'Fantasy' ಯೊಂದನ್ನು ಅಮೇರಿಕೆಯ ಹೆಸರಾಂತ ಕಲಾವಿದ 'ಆರ್ಸನ್ ವೆಲಿಸ್' ಎಂಟು ಹತ್ತು ವರ್ಷಗಳ ಹಿಂದೆ ಪ್ರಯೋಗಿಸಿದ. ಮಾರ್ಸ್ ಗ್ರಹದಿಂದ ಭೂಮಿಗೆ ಇಳಿದು ಬಂದ, ಪ್ರಚಂಡ ಬಲಯುತವಾದ, ವಿಚಿತ್ರ ಪ್ರಾಣಿಯೊಂದು, ಅಮೇರಿಕಾದ ಹಳ್ಳಿಯೊಂದರ ಜನಜೀವನವನ್ನು ಅಲ್ಲೋಲ ಕಲ್ಲೋಲವೆಬ್ಬಿಸಿದ ಕಥಾವಸ್ತುವಿನ ಮೇಲೆ ಕಟ್ಟಿದ ನಾಟಕ ಅದು. 'ಪ್ರತ್ಯಕ್ಷ ವೀಕ್ಷಕ ತಂತ್ರ'ದಿಂದ ಅದನ್ನು ಪ್ರಯೋಗಿಸಿದಾಗ, ಕಾರ್ಯಕ್ರಮವನ್ನು ಕೇಳಿದ ಜನ, ಅಂಥ ಪ್ರಾಣಿ ನಿಜವಾಗಿ ಬಂದಿದೆಯೆಂದು ನಂಬಿ ಹೆದರಿ ಹೌಹಾರಿಬಿದ್ದರು. ಅನಂತರ, ಅದೊಂದು ಕಲ್ಪನಾಚಿತ್ರ — ಪ್ರಸಾರ-ಚಿತ್ರ ಎಂದು ತಿಳಿದಾಗ, ರೊಚ್ಚಿಗೆದ್ದು, ಆ ಕಾರ್ಯಕ್ರಮವನ್ನು ಪ್ರಸಾರ ಮಾಡಿದ ಬಾನುಲಿ-ಕೇಂದ್ರವನ್ನೇ ಸುಟ್ಟುಹಾಕಿದರು. ಒಂದು ಕೇಂದ್ರ ಸುಟ್ಟು ಹೋಗಲು ಕಾರಣವಾದರೂ, ಆ ಕಾರ್ಯಕ್ರಮ, ನಿರ್ದೇಶಕ ಆರ್ಸನ್ ವೆಲಿಸನ ಹೆಸರು ಪ್ರಪಂಚದ ಮೂಲೆ ಮೂಲೆಯಲ್ಲೂ ಮೊಳಗುವಂತೆ ಮಾಡಿತು.

ಕನ್ನಡ ಪ್ರಸಾರದಲ್ಲಿಯೂ ಅನೇಕ ನವ್ಯಪ್ರಯೋಗಗಳು ನಡೆದಿವೆ. ರೇಡಿಯೋ ನಾಟಕಕಾರ, ಹಾಗೂ ನಿರ್ದೇಶಕ, ತಮ್ಮ ಸ್ವಾತಂತ್ರ್ಯವನ್ನು ಉಪಯೋಗಿಸಿ ಶ್ರೋತೃಗಳ ಮೆಚ್ಚುಗೆಯನ್ನು ಪಡೆದಿದ್ದಾರೆ. 'ಚದುರಂಗ'ರ "ಶವದ ಮನೆ" ಅಂಥ ದೊಂದು ಹೊಸಪ್ರಯೋಗ. ನಿಜವಾಗಿ ಇನ್ನೂ ಸಾಯದವನೊಬ್ಬನನ್ನು ಸತ್ತನೆಂದೇ ಭಾವಿಸಿ ಆಸ್ಪತ್ರೆಯ 'ಶವದ ಮನೆ'ಗೆ ಸಾಗಿಸಲಾಗಿದೆ. ಅಲ್ಲಿ ಆ ಮೇಲೆ ಎಚ್ಚರ ಬಂದ ಮೇಲೆ,ಆತನ ಅನುಭವಗಳನ್ನು ಚಿತ್ರಿಸಲಾಗಿದೆ. ನಾಟಕಪ್ರಯೋಗದಲ್ಲಿ ಬುದ್ಧಿ ಉಪ ಯೋಗಿಸಲು ಯಥೇಚ್ಛವಾದ ಅವಕಾಶವಿದೆ. ಕೇಳಿದ ಕತೆಯೊಂದನ್ನು ಅನುಸರಿಸಿ ನಾನು ಕಟ್ಟಿದ 'ದೆವ್ವದ ಕೆರೆ' ೧೯೪೬ ರಲ್ಲಿ ಬಿತ್ತರಗೊಂಡಾಗ, ಅಂಥ ಭಯಾನಕ ಚಿತ್ರಗಳನ್ನು ರಾತ್ರಿಯ ಹೊತ್ತು ಪ್ರಸಾರ ಮಾಡಬಾರದೆಂದು ಬೇಡಿ ಪತ್ರಗಳು ಬಂದಿದ್ದವು. ತನ್ನದೇ ನೋವಿನ ಜೀವನವನ್ನು ವಿವರಿಸಿ ಕಡೆಗೆ ತನ್ನದೇ ಸಾವಿನ ಸುದ್ದಿಯನ್ನೂ ಹೇಳಿ, ಕೇಳುತ್ತಿದ್ದ ಮುಗ್ಧನೊಬ್ಬನ ಎದೆಯೊಡೆದು ಹಾರಿಹೋದ ಒಂದು 'ದೆವ್ವ'ದ ಚಿತ್ರವಿದೆ ಅದರಲ್ಲಿ. ಡಾ. ಎಚ್. ವ್ಹಿ. ಕಶ್ಯಪರು 'ಮಧ್ಯ ಯುಗ'ದ ಮಹಾಪ್ರಾಣಿಗಳ ಜೀವನ ಚಿತ್ರವನ್ನು ನಾಟಕದ ಚೌಕಟ್ಟಿನಲ್ಲಿ ಮನನಡು ವಂತೆ ಕಲ್ಪಿಸಿದರು. ಶ್ರೀ. ವ್ಹಿ. ಎಂ. ಇನಾಮದಾರರು ಇಂದಿನ ಯುವಕನೊಬ್ಬನ ಉದಾತ್ತ ಪ್ರೇಮಜೀವನವನ್ನು — ನಾಟಕದ ಎರಡನೆಯ ಭಾಗದಲ್ಲಿ ಕನಸೆಂದು ಕಟ್ಟಿದ — ಋರುಪ್ರಮದ್ವತಿಯರ ಪ್ರೇಮಜೀವನದ ಚಿತ್ರಕ್ಕೆ ಹೋಲಿಸಿ ರಚಿಸಿದ 'ಅಪ್ಸರಾ,' ಒಂದು ಹೊಸ ಪ್ರಯೋಗ. ಇದೇ ರೀತಿ, ಶ್ರೀ. ಎಸ್. ಎಸ್. ಚುಳಕಿ ಯವರು ಬರೆದ "ರೇಡಿಯೋ ನಾಟಕ," ಸ್ವಾದಿಯವರು ರಚಿಸಿದ "ನಾವು – ಅವರು"

ಎ. ಕೆ. ರಾಮಾನುಜನ್ ಅವರ "ಮನೆಯಲ್ಲೂ ಮಹಾಭಾರತ?" ಪಾಸ್ತೆಯವರ "ಭೂತದ ಭಾವಿ" ಇವೆಲ್ಲ ಕನ್ನಡ ಬಾನುಲಿ-ನಾಟಕದಲ್ಲಿನ ನವ್ಯಪ್ರಯೋಗಗಳು.

ಶಬ್ದ-ಚಿತ್ರಗಳು : (Features)

ಚಲನಚಿತ್ರಪ್ರಪಂಚದಲ್ಲಿನ documentaryಗಳಂತೆ ಮತ್ತು cartoon ಚಿತ್ರಗಳಂತೆ, ಪ್ರಸಾರಸಾಹಿತ್ಯದಲ್ಲಿನ ಶಬ್ದ-ಚಿತ್ರ ಅಥವ ಧ್ವನಿ-ಚಿತ್ರಗಳು — ಪ್ರಸಾರ ನಾಟಕಗಳಿಗಿಂತ ತೀರ ಭಿನ್ನವಾದವು. ಎರಡರಲ್ಲಿನ ಕಥಾವಸ್ತು ಹಾಗೂ ರಚನಾತಂತ್ರಗಳಲ್ಲಿ ತುಂಬ ಭೇದವಿದೆ. ಸ್ಥೂಲವಾಗಿ, ಧ್ವನಿಚಿತ್ರದಲ್ಲಿ ಕಥೆಗಿಂತ, ಕಲ್ಪನೆಗಿಂತ, ಸತ್ಯಸಂಗತಿಗೆ ಹೆಚ್ಚಿನ ಪ್ರಾಧಾನ್ಯವಿದೆ. ಒಂದು ವಿಷಯ ಅಥವ ಸಮಸ್ಯೆ, ಒಂದು ವ್ಯಕ್ತಿ ಅಥವ ವಸ್ತು, ಕಡೆಗೆ ಒಂದು ಭಾವನೆ ಅಥವ ಅನುಭವವನ್ನು ಕುರಿತು ಬುದ್ಧಿಶಾಲಿಯಾದ ನಿರ್ದೇಶಕನೊಬ್ಬ ವೈಯ್ಯಕ್ತಿಕ ದೃಷ್ಟಿ ಬೀರಿ, ಸೂತ್ರಬದ್ಧವಾಗಿ ರಚಿಸಿದ ಕೃತಿಕೆಯೇ ಶಬ್ದಚಿತ್ರ ಅಥವ ಧ್ವನಿಚಿತ್ರವೆನಿಸಿಕೊಳ್ಳುತ್ತಿದೆ. ಧ್ವನಿ-ಚಿತ್ರಗಳು, ನಾಟಕರಂಗದ, ಏಕೆ, ಚಲನಚಿತ್ರದ ಸಾಧ್ಯತೆ, ಮೇರೆಗಳನ್ನೂ ಮೀರುವುದರಿಂದ ಹಾಗೂ ಅದರ ಯಶಸ್ಸು ಸಂಪೂರ್ಣವಾಗಿ ರೇಡಿಯೋವನ್ನೇ ಅವಲಂಬಿಸಿರುವುದರಿಂದ, ಅವು ರೇಡಿಯೋವಿನ ಒಂದು ಅಪೂರ್ವ ಕೊಡುಗೆಯೆನಿಸಿಕೊಂಡಿವೆ. ಒಂದು ವಿಷಯದ ಬಗೆಗೆ ಕಲೆಹಾಕಿದ ವಿವರಣೆಯನ್ನು ಮನರಂಜಿಸುವ ರೀತಿಯಲ್ಲಿ ಪ್ರತಿಪಾದಿಸುವುದೇ ಧ್ವನಿಚಿತ್ರದ ಧ್ಯೇಯ. ಪ್ರಸಾರ-ಸಾಹಿತ್ಯದಲ್ಲಿ ಅದು 'most creative and most imaginative form' ಎನಿಸಿಕೊಂಡಿದೆ.

ಯಾವುದಾದರೊಂದು ಸತ್ಯಸಂಗತಿ, ಅದರ ಬಗೆಗೆ ಸಂಪೂರ್ಣ ಸಂಶೋದನೆ, ವಿಚಾರ ಕೆರಳಿಸುವಂತಿದ್ದರೂ ಮನರಂಜಿಸುವ ರೀತಿಯಲ್ಲಿ ರಚಿಸಿದ ಕೃತಿ, ಹಾಗೂ ನಿಷ್ಣಾತ ನಿರ್ದೇಶನ ಈ ಎಲ್ಲದರ ಸಮರಸದಿಂದಾಗಿ, ಸಫಲವೆನಿಸಿಕೊಳ್ಳುವ ಧ್ವನಿ-ಚಿತ್ರ ಮೂಡಿಬರುತ್ತದೆ. ವಿಚಾರಶಕ್ತಿಯನ್ನೊಳಗೊಂಡ ಸಂಶೋಧನಾತ್ಮಕ ಪ್ರಸಾರ ಭಾಷಣ ಹಾಗೂ ಪ್ರತಿಭಾನ್ವಿತ ಪ್ರಸಾರನಾಟಕ ಇವುಗಳ ಅಂಗಸಂಗಮವೇ ಧ್ವನಿಚಿತ್ರದ ಹುಟ್ಟಿಗೆ ಕಾರಣವಾಗುತ್ತದೆ. ಧ್ವನಿಚಿತ್ರವನ್ನು ಸ್ಥೂಲವಾಗಿ, ಸಂಶೋಧನಾತ್ಮಕ (documentary), ಊಹಾಪರ (imaginative) ಸಾಹಿತ್ಯಕ (literary) ಮತ್ತು ನಾದಪ್ರಾಧಾನ್ಯ(musical) ಎಂದು ವಿಭಾಗಿಸುತ್ತಾರೆ. ಹಾಗೆ ನಿಷ್ಕೃಷ್ಟವಾಗಿ ನೋಡಿದರೆ ನಿಜವಾದ ಒಂದು ಧ್ವನಿಚಿತ್ರದಲ್ಲಿ ಈ ಎಲ್ಲ ವಿಭಾಗಗಳ ಮುಖ್ಯ ಲಕ್ಷಣಗಳೂ ಕಂಡುಬರಲೇಬೇಕು.

Documentary ಅಥವಾ ಸಂಶೋಧನಾತ್ಮಕ ಧ್ವನಿ-ಚಿತ್ರವು, ಒಂದು ಸಂಗತಿ, ಘಟನೆ, ವೈಜ್ಞಾನಿಕ ವಿಷಯ, ಅಥವಾ ವ್ಯಕ್ತಿಜೀವನದ ಬಗೆಗೆ ವಿಶೇಷ ಸಂಶೋಧನೆ ನಡೆಸಿ ಅದರ ವಿವಿಧ ಮುಖಗಳನ್ನು ಮೂಡಿಸುತ್ತದೆ. ಅದರಲ್ಲಿ ವಿವರಣೆ, ಸೂಕ್ತ ಸಂದರ್ಶನಗಳು, ವಿಷಯಕ್ಕೆ ಸಂಬಂಧಿಸಿದ "ನೈಜವಾದ" ಧ್ವನಿವಿಶೇಷಗಳು ಒಳಗೊಂಡಿರುತ್ತವೆ. ಉದಾಹರಣೆಗಾಗಿ ಹೇಳುವುದಾದರೆ, "ಮುಸೋಲಿನಿಯ ಕಡೆಯ ದಿನ"ಗಳ ಬಗೆಗೆ ಬ್ರಿಡ್‌ಸನ್, "ಹಿಟ್ಲರನ ಅಂತ್ಯ"ವನ್ನು ಕುರಿತು ಟ್ರೆವರ್

ರೋಪರ್, ಸುಪ್ರಸಿದ್ಧವಾದ "ಬೆಲ್‌ಸನ್ ಶಿಬಿರ" ದ ಬಗೆಗೆ ಕಾಟ್ರೆಲ್ ಇವರು ಯುರೋಪಿನಲ್ಲಿ ನಾಲ್ಕಾರು ತಿಂಗಳ ಕಾಲ ಶ್ರಮ ವಹಿಸಿ ಸಂಶೋಧನೆ ನಡೆಸಿ, ಸಂಬಂಧ ಪಟ್ಟ ಕ್ಷೇತ್ರಗಳನ್ನೆಲ್ಲ ಸಂದರ್ಶಿಸಿ ಅಲೆದಾಡಿ, ತಿಳಿದವರನ್ನೆಲ್ಲ ಹುಡುಕಿ ಹಿಡಿದು, ಚರ್ಚೆ ಮಾಡಿ ಧ್ವನಿಮುದಿಸಿಕೊಂಡು ಒಪ್ಪಾರೆ ಕಟ್ಟಿ ಬಿ. ಬಿ. ಸಿ. ಯಿಂದ ಸಾದರ ಪಡಿಸಿದ ಧ್ವನಿಚಿತ್ರಗಳು ಪ್ರಖ್ಯಾತವಾಗಿವೆ. "ಮೊದಲ ನೋಟದಲ್ಲಿ ಭಾರತ" ಎಂಬ ಶೀರ್ಷಿಕೆಯಲ್ಲಿ, ಲೂಯಿ ಮ್ಯಾಕ್‌ನೀಸ್, ಭಾರತದ ಮುಖ್ಯ ಪಟ್ಟಣಗಳನ್ನು ಸಂದರ್ಶಿಸಿ ತನ್ನ ನೋಟವನ್ನು ಧ್ವನಿಚಿತ್ರಗಳಲ್ಲಿ ಮೂಡಿಸಿದ್ದಾನೆ. ಮೊನ್ನೆ ಮೊನ್ನೆ, ಗಾಂಧಿಜಿಯವರ ಬಗೆಗೆ ಬಿ. ಬಿ. ಸಿ ನಿಲಯವು ಮೂರು ಭಾಗಗಳಲ್ಲಿ ಸಿದ್ಧ ಗೊಳಿಸಿದ ಧ್ವನಿಚಿತ್ರ, ಗಾಂಧಿಜಿಯವರೊಡನೆ ನಿಕಟ ಸಂಪರ್ಕ ಹೊಂದಿದ್ದ ಅವರ ಸಹಪಾಠಿಗಳು, ಸಹಕಾರ್ಯಕರ್ತರು, ಸಂಬಂಧಿಗಳು, ವಿರೋಧಿಗಳು — ಈ ಎಲ್ಲವರು ಗಾಂಧಿಜಿಯವರ ಬಗೆಗೆ ಹೇಳಿದ ವಿಚಾರಗಳನ್ನೊಳಗೊಂಡು ಅವರೆಲ್ಲರ ಧ್ವನಿಗಳ ಮಾಲಿಕೆಯಾಗಿ ವೈಶಿಷ್ಟ್ಯಪೂರ್ಣವಾಯಿತು. ಇಂತಹ ಒಂದು ಕಾರ್ಯಕ್ರಮವನ್ನು ಸಿದ್ಧಗೊಳಿಸಲು ಇಬ್ಬರು ನಿರ್ದೇಶಕರು ನಾಲ್ಕಾರು ತಿಂಗಳು ಭಾರತದಲ್ಲಿ ಉಳಿದು— ಮೈಲು ಮೈಲುಗಳುದ್ದ — ಹತ್ತಾರು ಗಂಟೆಗಳಷ್ಟು ಕಾಲ, ಟೇಪುಗಳಲ್ಲಿ ಧ್ವನಿ ಮುದ್ರಿಸಿಕೊಂಡು ಬಿ. ಬಿ ಸಿ. ನಿಲಯದಲ್ಲಿ ಮತ್ತೆ ಮೂರು ತಿಂಗಳ ಕಾಲ ಶ್ರಮಿಸಿ, ಧ್ವನಿ ಮುದ್ರಿಸಿದುದನ್ನು ಕೂಲಂಕಷವಾಗಿ ಎರಡು, ಮೂರು, ನಾಲ್ಕು ಬಾರಿ ಕೇಳಿ ವಾಕ್ಯ ವಾಕ್ಯಗಳನ್ನು ಆರಿಸಿ ಕಡೆಗೊಂದು ಚಿತ್ರ ಕಟ್ಟಿದರು. ಕನ್ನಡದಲ್ಲಿಯೂ ಹಲವಾರು ಸಂಶೋಧನಾತ್ಮಕ ಧ್ವನಿಚಿತ್ರಗಳು ಪ್ರಸಾರಗೊಂಡಿವೆ. ಹಂಪಿ, ಬಿಜಾಪುರಗಳಂತಹ "ಐತಿಹಾಸಿಕ ನಗರ" ಗಳನ್ನು ಕುರಿತು ಕಟ್ಟಿದ ಧ್ವನಿಚಿತ್ರಗಳು, ನೇತಾಜಿ, ತಿಲಕ್, ಪಟೇಲರಂತಹ "ರಾಷ್ಟ್ರವೀರರನ್ನು" ಕುರಿತು ಕಟ್ಟಿದ ಧ್ವನಿ ಚಿತ್ರಗಳು, "ಕನ್ನಡನಾಡಿನಲ್ಲಿ ೧೮೫೭ ರ ಸ್ವಾತಂತ್ರ್ಯಸಂಗ್ರಾಮ" ದ ವಿವಿಧ ಮುಖಗಳನ್ನು ತೋರಿಸಲು ಕಟ್ಟಿದ ಧ್ವನಿಚಿತ್ರಗಳು, ತುಂಗಭದ್ರಾ-ಯೋಜನೆ ಯಂತಹ "ರಾಷ್ಟ್ರೀಯ ಯೋಜನೆ" ಗಳನ್ನು ಕುರಿತು ಕಟ್ಟಿದ ಚಿತ್ರಗಳು, ಕುಮಾರ ವ್ಯಾಸನಂತಹ ಕವಿಯ "ಜೀವನ ಹಾಗೂ ಕೃತಿ" ಗಳ ಬಗೆಗೆ ಕಟ್ಟಿದ ಚಿತ್ರಗಳು ಹೆಸರಿಸುವಂತವು.

ಎರಡನೆಯದಾಗಿ, imaginative ಎಂದರೆ ಊಹಾಪರ ಅಥವಾ ಕಲ್ಪನಾ ಧ್ವನಿ-ಚಿತ್ರಗಳು ಸಂಶೋಧನೆಗಿಂತ ಕಲ್ಪನಾವಿಲಾಸಕ್ಕೆ ಹೆಚ್ಚಿನ ಪ್ರಾಧಾನ್ಯವನ್ನು ಕೊಡುತ್ತವೆ. ಹಬ್ಬಹುಣ್ಣಿಮೆಗಳ ಬಗೆಗೆ ಪ್ರಚಲಿತವಾಗಿರುವ ದಂತಕಥೆಗಳನ್ನು ಬಳಸಿಕೊಂಡು ಕಟ್ಟಿದ ಧ್ವನಿಚಿತ್ರಗಳನ್ನು ಇಲ್ಲಿ ಉದಾಹರಿಸಬಹುದು. ನದಿಗಳು, ಋತುಗಳು, ಮುಂಜಾವು, ಸಂಜೆ, ಒಂದು ಶಿಲ್ಪ, ಒಂದು ಚಿತ್ರ, ಒಂದು ಗೀತೆ, ಏನೆಲ್ಲ ಈ ಕಲ್ಪನಾಚಿತ್ರಗಳ ವಸ್ತುವಾಗಬಹುದು. ಅವುಗಳ ಬಗೆಗೆ ತಿಳಿದ ಅಂಶ ಗಳನ್ನೆಲ್ಲ ಕಲೆಹಾಕಿ, ತಿಳಿಯದ ಭಾಗಗಳನ್ನು ಕಲ್ಪನೆಯಿಂದ ತುಂಬಿ ಮನರಂಜಿಸುವ ರೀತಿಯಲ್ಲಿ ಪ್ರಸಾರಗೊಂಡ ಧ್ವನಿಚಿತ್ರಗಳಲ್ಲಿ ಪಂಡಿತ ಕವಲಿಯವರು ರಚಿಸಿದ "ವಸಂತವಿಲಾಸ", ಬೆಟಗೇರಿಯವರ "ಕಾರಹುಣ್ಣಿವೆ" ಮತ್ತು ಕಸ್ತೂರಿಯವರ "ಯುಗಾದಿ" ಮೊದಲಾದವು ಮರೆಯದಂತಹವು.

ಮೂರನೆಯದಾಗಿ ಸಾಹಿತ್ಯಕ ಧ್ವನಿ-ಚಿತ್ರಗಳು, ಸಾಹಿತಿಯೊಬ್ಬನ ಅಥವಾ ಸಾಹಿತ್ಯ ಮುಖದ ಪರಿಚಯಮಾಡಿಕೊಡುತ್ತವೆ. ಎಸ್ಕೆಯವರು "ಕುಮಾರವ್ಯಾಸ"ನ ಬಗೆಗೆ ರಚಿಸಿದ ಧ್ವನಿ-ಚಿತ್ರವನ್ನು ಉದಾಹರಣೆಗಾಗಿ ತೆಗೆದುಕೊಳ್ಳಬಹುದು. ಮೊದಲು ಕವಿಯ ಕಾಲ, ಮನೆತನ, ಕಾವ್ಯದ ಬಗೆಗೆ ಪ್ರಕಟವಾದುದನ್ನೂ ಅಪ್ರಕಟಿತಗಳನ್ನೂ ಓದಿ ಅಲ್ಲಿಂದ ಅಂಶಗಳನ್ನು ಆರಿಸಿಕೊಂಡು, ಗೂಢಾರ್ಥಗಳ ಹಾಗೂ ಸಂಶಯಗಳ ಬಗೆಗೆ ನಾಡಿನ ಪಂಡಿತರಿಗೆ ಪತ್ರ ಬರೆದು, ಬಂದ ಉತ್ತರಗಳಿಂದ ಅಂಶಗಳನ್ನು ಆರಿಸಿಕೊಂಡು, ಕವಿಯ ಕಾವ್ಯವನ್ನು ಮಥನಮಾಡಿ, ಅಲ್ಲಿಂದ ಭಾಗಗಳನ್ನು ಆಯ್ದುಕೊಂಡು ಅನಂತರ ಕವಿಯ ಹುಟ್ಟೂರಿಗೆ ಹೋಗಿ ಆತನ ಸಂಬಂಧಿಕರೊಡನೆ ಸಂದರ್ಶನಗಳನ್ನು ಧ್ವನಿಮುದ್ರಿಸಿ, ಕಾವ್ಯದ ಕೃಷಿಕ್ಷೇತ್ರವಾದ ಗದಗಿಗೆ ಹೋಗಿ ವೀರನಾರಾಯಣನ ದೇಗುಲದಲ್ಲಿ ಧ್ವನಿವಿಶೇಷಗಳನ್ನೂ ಧ್ವನಿಮುದ್ರಿಸಿ, ಕವಿಯ ಬಗೆಗೆ ಪ್ರಚಲಿತವಾಗಿರುವ ದಂತಕಥೆಗಳನ್ನೂ ಗೀತೆಗಳನ್ನೂ ಸಂಗ್ರಹಿಸಿ ತಂದು ನಿಲಯದಲ್ಲಿ ಕುಳಿತು ತಂದೆಲ್ಲ ಸಾಹಿತ್ಯವನ್ನು ಹರಡಿಕೊಂಡು ಆರಿಸಿ ಆರಿಸಿ ಕಡೆಗೆ ಕೃತಿ ಕಟ್ಟಿ, ಸೂಕ್ತವಾದ ಧ್ವನಿಗಳನ್ನೂ, ಗಮಕಿಗಳನ್ನೂ ತರಬೇತುಗೊಳಿಸಿ ನಿರ್ದೇಶಿಸಿದ ಫಲವಾಗಿ ಹೌದೆನ್ನುವಂತಹ ಒಂದು ಸಂಶೋಧನಾತ್ಮಕ ಧ್ವನಿಚಿತ್ರ ಸಿದ್ಧವಾಯಿತು. ಕನ್ನಡಸಾಹಿತ್ಯಪರಂಪರೆಯ ಹಕ್ಕಿ-ನೋಟವನ್ನು ಮೂಡಿಸುವ ದೃಷ್ಟಿಯಿಂದ ಬೇಂದ್ರೆಯವರು ರಚಿಸಿದ "ಪಾವನಪರಂಪರೆ", ಶ್ರೀರಂಗರ "ರಸಗಂಗಾ", ಕನ್ನಡ ಸಾಹಿತ್ಯದಲ್ಲಿ ಚಿತ್ರಿತವಾದ "ವನ್ಯಪಶು-ಪಕ್ಷಿ-ಸಂಕುಲ"ವನ್ನು ಕುರಿತು ಬೆಟಗೇರಿಯವರ ಕೃತಿ, ಮಳಗಿಯವರು ಬರೆದ "ಅಹಿಂಸ" ಹಾಗೂ ಕನ್ನಡ ಸಾಹಿತ್ಯದಲ್ಲಿ "ವಿನೋದ ವಿಲಾಸ" ಇವೆಲ್ಲ ಶ್ರೋತೃಗಳಿಗೆ ಮನರಂಜಿಸುವ ರೀತಿಯಲ್ಲಿ ಸಂಶೋಧಿತ ಸಂಗತಿಗಳನ್ನು ನಿರೂಪಿಸಿದ ಧ್ವನಿಚಿತ್ರಗಳು.

ಕಡೆಯದಾಗಿ "ನಾದ-ಚಿತ್ರಗಳು" ಅಥವಾ "ಗಾನ-ಚಿತ್ರಗಳು" ಸಂಗೀತ ಶಾಸ್ತ್ರದಲ್ಲಿನ ಸಂಶೋಧಿತ ಸಂಗತಿಯನ್ನು ನಿರೂಪಿಸಬಹುದು, ಸಮಾನ ರಾಗಗಳನ್ನು ತುಲನೆ ಮಾಡಬಹುದು, ಒಂದು ವಾದ್ಯದ ವೃತ್ತವಾಗಬಹುದು. ಇಲ್ಲವೆ ಒಬ್ಬ ಕಲೆಗಾರನ ಜೀವನವನ್ನು ಕುರಿತು ಕಟ್ಟಾದ ಚಿತ್ರವಾಗಿರಬಹುದು. ಆದರೆ ನಿಜವಾದ ನಾದ-ಚಿತ್ರವೆಂದರೆ, ಕೇವಲ ಸಂಗೀತವಾದ್ಯಗಳ ನೆರವಿನಿಂದ, ಆಡುವ ಮಾತುಗಳನ್ನು ಬಳಸದೆ, ವಿವಿಧ ಸ್ವರ-ಸಂಯೋಜನೆಗಳನ್ನು ಕಲ್ಪಿಸಿ ಆ ಮೂಲಕ ಕಟ್ಟುವ ಚಿತ್ರವಾಗಬೇಕು. ಇಂತಹ ನಾದ-ಚಿತ್ರಗಳು ಕೇಳುಗನ ಕಲ್ಪನೆಗೂ ಪ್ರಚೋದನೆ ಕೊಡುತ್ತವೆ. ಭಾವವಿನ್ಯಾಸದಿಂದ, ನೃತ್ಯಗತಿಯಿಂದ ರಂಗದ ಮೇಲಿನ ನರ್ತಕ, ವಿಷಯ ಒಂದನ್ನು ನೋಟಕನೆದುರಿಗೆ, ಮೋಹಕವಾದ ಮೋಡಿಯ ರೀತಿಯಲ್ಲಿ ಕಟ್ಟುವಂತೆ, ಪ್ರಸಾರದ ನಾದ-ಚಿತ್ರ, ವಾದ್ಯಗಳೇ ಮೂಡಿಸುವ ಮೋಡಿಯಿಂದ ಶ್ರೋತೃವಿನ ಮನಸ್ಸಿನಲ್ಲಿ ಚಿತ್ರ ಕಟ್ಟುತ್ತದೆ. ಕೇವಲ ಪಿಟೀಲು-ವಾದ್ಯ ಒಂದರಿಂದಲೇ ನಗೆ, ಅಳು, ಸೀಟಿ, ವಿವಿಧಪಕ್ಷಿಗಳ ಧ್ವನಿಗಳು, ಕೆಲವೊಂದು ಪ್ರಾಣಿಗಳ ಕೂಗು ಇವೆಲ್ಲವನ್ನೂ ಮೂಡಿಸಬಲ್ಲ ನಿಷ್ಣಾತ ಕಲೆಗಾರರನ್ನು ಕಂಡಿದ್ದೇನೆ. ಇಂತಹ ವಾದ್ಯಗಳ ಅಂತಸ್ಸತ್ವವನ್ನು ಅರಿತು, ನಾದ-ಚಿತ್ರದಲ್ಲಿ ಉಪಯೋಗಿಸಿಕೊಂಡು, ಸಾಂಕೇತಿಕವಾಗಿ ಕಥೆಯೊಂದನ್ನು ಕಟ್ಟುವ ಕಲೆಯಲ್ಲಿ, ನಿರ್ದೇಶಕ ಜಾಣನಾಗಿರಬೇಕಾಗು

ತ್ತದೆ. ಎಸ್. ರಾಜಾರಾವ್ ಈ ರೀತಿ, ನಿಲಯದ ವಾದ್ಯಗಳನ್ನೇ ಬಳಸಿಕೊಂಡು, ಸ್ವರಗಳನ್ನೂ ಧ್ವನಿವಿಶೇಷಗಳನ್ನೂ ಸಂಯೋಜಿಸಿ 'ಕಾಮದಹನ'ದ ಪೂರ್ಣಕಥೆಯನ್ನು ಎಳೆ ಎಳೆಯಾಗಿ ಮೂಡಿಸಿದರು. 'ಭೃಂಗವಿಲಾಸ'ವನ್ನು ಎಸ್. ಕೃಷ್ಣಮೂರ್ತಿಯವರು ನಾದ-ಚಿತ್ರದಲ್ಲಿ ಮೂಡಿಸಿದರು. ಅತ್ತೆಯ ಕಾಟ ಸಹಿಸುತ್ತಿದ್ದ ಸೊಸೆಯೊಬ್ಬಳ ಬಿಡುಗಡೆಯ ಕನಸನ್ನು ಸಂಗೀತವಾದ್ಯಗಳ ಸಹಾಯದಿಂದಲೇ ಕಲ್ಪಿಸಿ ಯಶಸ್ವಿಯಾದ ನಾದ-ಚಿತ್ರವನ್ನೂ ಕೃಷ್ಣಮೂರ್ತಿ ರಚಿಸಿದ್ದಾರೆ. ಈ ದಿಶೆಯಲ್ಲಿ ಧಾರವಾಡದಿಂದ ಈಚೆಗೆ ಶ್ರೀ. ಎಂ. ಆರ್. ಗೌತಮ ಅವರು ಕಲ್ಪಿಸಿ ಪ್ರಸಾರಗೊಂಡ ಅನೇಕ ನಾದ-ಚಿತ್ರಗಳು ಶ್ರೋತೃಗಳಿಂದ ಮೆಚ್ಚುಗೆ ಪಡೆದಿವೆ.

ಸಂಗೀತ-ನಾಟಕ :

ರೇಡಿಯೋ-ನಾಟಕದ ಇನ್ನೊಂದು ಮುಖವಾಗಿ, ಈಚೆಗೆ ತುಂಬ ಜನಪ್ರಿಯವಾಗುತ್ತಿರುವ ಸಂಗೀತ-ನಾಟಕಗಳ ಬಗೆಗೆ ಎರಡು ಮಾತು ಹೇಳಿ ಈ ಲೇಖನವನ್ನು ಮುಗಿಸಬಹುದಾಗಿದೆ. ಆಡುಮಾತಿಗಿಂತ ಹಾಡು ಹೃದಯವನ್ನು ನೇರವಾಗಿ ಮುಟ್ಟುತ್ತದೆ. ಅದರಲ್ಲೂ ಕಥಾವಸ್ತು ತುಂಬ ಭಾವನಾತ್ಮಕವಾಗಿದ್ದರೆ, ಗೀತ-ಮುಖವಾಗಿ ಪ್ರಸಾರ ಮಾಡಿದಾಗ ಹೆಚ್ಚಿನ ಪ್ರಭಾವವನ್ನು ಬೀರುತ್ತದೆ. ಈ ಮಾತನ್ನು ಪಾಶ್ಚಾತ್ಯದೇಶಗಳಲ್ಲಿ ಸಂಗೀತ-ರೂಪವಾದ ನಾಟಕ (opera) ಅತಿಶ್ರೇಷ್ಠವಾದ ಮನರಂಜನೆಯೆಂಬ ಹೆಚ್ಚಳಿಕೆಯ ಸ್ಥಾನವನ್ನು ಗಳಿಸಿದೆ. ನಮ್ಮಲ್ಲಿ ಆ ಕಲೆಯನ್ನು ಹೆಚ್ಚಾಗಿ ಬೆಳಸಿಕೊಂಡಿಲ್ಲವೆಂಬ ಮಾತು ನಿಜವಾದರೂ, ಆ ಕಲೆಯೇ ಇಲ್ಲವೆಂದಿಲ್ಲ ... ಆದರೆ ಪಾಶ್ಚಾತ್ಯ operaಗಳ ಅವಿಭಾಜ ಅಂಗವಾದ ನೃತ್ಯ ನಮ್ಮ ಸಂಗೀತ-ನಾಟಕಗಳಲ್ಲಿ ಇಲ್ಲ ಕವಿಗೆ ಸಂಗೀತ-ಕಲೆಯೂ ಕರಗತವಾದಾಗಲೇ ಸಂಗೀತ-ನಾಟಕದ ಬೆಳವಣಿಗೆಯಿದೆ. ಆದರೂ ಈಗಾಗಲೇ ನಡೆದ ಕೆಲವು ಪ್ರಯೋಗಗಳಿಂದಾಗಿ, ಸಂಗೀತ-ನಾಟಕಕ್ಕೆ ನಮ್ಮ ಪ್ರಸಾರದಲ್ಲಿಯೂ ದೊಡ್ಡ ಭವಿಷ್ಯವಿದೆ ಎನಿಸುತ್ತದೆ. ಕಾರಂತರ "ಗೀತ-ನಾಟಕಗಳು" ಪು.ತಿ.ನ ಅವರ ಗೀತ-ನಾಟಕಗಳು ಪ್ರಸಾರದಲ್ಲಿಯೂ ಪ್ರಸಿದ್ಧವಾಗಿವೆ. ಕೈಕಿಣಿಯವರ, ಜಿ. ಆರ್. ಪಾಂಡೇಶ್ವರರ ಮತ್ತು ಕೀರ್ತಿನಾಥ ಕುರ್ತಕೋಟಿಯವರ ಗೀತ-ನಾಟಕಗಳಲ್ಲಿ ಕಾವ್ಯಶಕ್ತಿ, ಗೀತ-ಶಕ್ತಿಗಿಂತ ಹೆಚ್ಚಾಗಿದ್ದರೂ ಭೀಮಸೇನ ಜೋಷಿಯವರಂತಹ ಪವಾಡಗಾರನ ಕೈಯಲ್ಲಿ ಸಿಲುಕಿತೆಂದರೆ ಉತ್ಕೃಷ್ಟವಾದ ಗೀತ-ನಾಟಕವಾಗಿ ಅಳಿಸಿಹೋಗಲಾರದಂತಹ ದಿವ್ಯಾನುಭವವನ್ನು ಕೊಟ್ಟಿವೆ.

ಎಂತೂ ಕನ್ನಡದ ಪ್ರಸಾರ-ನಾಟಕ ಈಚೆಗೆ ಈ ಇಪ್ಪತ್ತು ವರ್ಷಗಳಲ್ಲಿ ಬೆಳೆದು ಬಂದುದು. ಮೊದಲ ವರ್ಷಗಳಲ್ಲಿ ಪ್ರಸಾರವಾದ ಪ್ರತಿ ನೂರು ನಾಟಕಗಳಲ್ಲಿ ತೊಂಭತ್ತೈದರಷ್ಟು ರಂಗ-ನಾಟಕಗಳ ಪ್ರಸಾರ-ರೂಪವಲ್ಲದೆ, ನಿಷ್ಕೃಷ್ಟವಾದ ಪ್ರಸಾರ ನಾಟಕಗಳೆಂದಿಗೂ ಅಲ್ಲ ಎಂಬ ಮಾತು ನಿಜವಾದರೂ, ಈ ಕಳೆದ ಎಂಟು ಹತ್ತು ವರ್ಷಗಳಲ್ಲಿ ಕನ್ನಡ ಪ್ರಸಾರ-ನಾಟಕ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿದೆ. ಅದರ ಹೆಚ್ಚಳಿಕೆಯನ್ನೂ ಶಕ್ತಿಯನ್ನೂ ಜನ ಅರಿತುಕೊಂಡಿದಾರೆ. ಅದಕ್ಕೆ ಬಹು ದೊಡ್ಡ ಭವಿಷ್ಯವಿದೆಯೆಂಬ ಮಾತನ್ನು ಮನಗಂಡಿದ್ದಾರೆ. ಶ್ರೋತೃವಿನ ಕಲ್ಪನಾ ಶಕ್ತಿಗೆ ಪ್ರೋತ್ಸಾಹ ಕೊಟ್ಟು ಅದನ್ನು ಬೆಳೆಸುತ್ತಿದೆಂಬ ದೃಷ್ಟಿಯಿಂದ, ನಾಟಕ

ದಲ್ಲಿ ಸಂಭಾಷಣೆಯ ಸ್ವಾರಸ್ಯವನ್ನು ಹೆಚ್ಚಿಸುತ್ತಿದೆಂಬ ದೃಷ್ಟಿಯಿಂದ, ನಟರ ಕಂಠ ಸ್ವರವನ್ನು ತಿದ್ದಿ ಅದರ ಮೇಲೆ ಸ್ವಾವಸ್ಯವನ್ನು ಕೊಟ್ಟು ಮಾತಿನ ಕಲೆಯನ್ನು ಬೆಳೆಸುತ್ತದೆಂಬ ದೃಷ್ಟಿಯಿಂದ, ನಾಟಕ.ರಂಗದ ಸಾಧ್ಯತೆಯನ್ನು ಮೀರಿದ ಮಹಾ ಚಿತ್ರಗಳನ್ನು ನಿರ್ಮಿಸಬಲ್ಲದೆಂಬ ಕಾರಣದಿಂದ, ಎಲ್ಲಕ್ಕಿಂತ ಹೆಚ್ಚಾಗಿ, ಹೆಚ್ಚು ವೆಚ್ಚ ವಿಲ್ಲದೆ, ಮನೆ ಮನೆಗಳಲ್ಲಿಯೇ ಸಾಹಿತ್ಯ ಮತ್ತು ಕಲೆಯ ಅನುಭವ ಮಾಡಿ ಕೊಟ್ಟು ಜನದ ಅಭಿರುಚಿಯನ್ನು ತಿದ್ದುತ್ತದೆಯೆನ್ನುವ ದೃಷ್ಟಿಯಿಂದ ಪ್ರಸಾರ-ನಾಟಕಕ್ಕೆ ಸಲ್ಲುವ ಗೌರವದ ಸ್ಥಾನದಲ್ಲಿ ಕನ್ನಡ ಪ್ರಸಾರ-ನಾಟಕವೂ ಪಾಲುಗೊಳ್ಳುತ್ತಿದೆ.

# ನಾದಬಿಂದು

( ಒಂದು ಕಲ್ಪನಾಚಿತ್ರ. )

ಪಾತ್ರಗಳು :

ರಾಮಚಂದ್ರ
ಕಪ್ಪೆಗಳು
ಪರಾಕು
ಮಂತ್ರಿ
ರಾಜ
ಶಬ್ದಾಧಿಕಾರಿ
ನಾದಬಿಂದು
ಸಭೆ

[ಹಾಸಿಗೆಯ ಮೇಲೆ ನಿದ್ದೆಯಿಲ್ಲದೆ ಒದ್ದಾಡುತ್ತಿರುವ ವ್ಯಕ್ತಿವಿಶೇಷ, ನಮ್ಮ ರಾಮಚಂದ್ರ. ಮೈಸೂರಿನ ಕನ್ನಡಾಂಗ್ಲೊ ಭಾಷೆಯಲ್ಲಿ ಸ್ವಗತ.] .

ರಾಮ : ನಮ್ಮ primary school madam ಹೇಳಿಕೊಟ್ಟ ಕಾಗುಣಿತವನ್ನೆಲ್ಲ ತಿರುವಿ ಹಾಕಿದೆ. ಗುಳಿಗೆ ತಿಂದೆ, ನೀರು ಕುಡಿದೆ — ಇನ್ನೂ ನಿದ್ರೆ ಬರಬೇಡವೆ? (ಎಲ್ಲೋ ದೂರದಲ್ಲಿ ೪ ಗಂಟೆ ಹೊಡೆಯಿತು) ಒಂದು, ಎರಡು, ಮೂರು, ನಾಲ್ಕು! ಅಂದರೆ, ಈಗ ಸರಿಯಾಗಿ ೫ ಗಂಟೆ ಇರಬೇಕು ... ಈ clock-towerನಿ ಹೀಗೆ (ತನ್ನ jokeಗೆ ತಾನೇ ನಕ್ಕು) ... ಅದಿರ್ಲೋದು, ಈಗ ಇಷ್ಟ ಗಂಟೆ ಅಂತ ಹೇಳೋಕ್ಕಲ್ಲ, ಈಗ ಇಷ್ಟು ಗಂಟೆ ಖಂಡಿತ ಅಲ್ಲ ಅಂತ ಹೇಳೋಕ್ಕೆ ... (ನೆನಸಿಕೊಂಡು) joke ಹೇಳಿದರೆ ಚುಚ್ಚಿದರೂ ನಗಒಲ್ಲ serious ಸೀನಿ! ಅಲ್ಲ, ಸೀನಿ ಮಾತು ಕೇಳಿ ಸಾಯಂಕಾಲ ೬ ಗಂಟ್ಗೇಲಿ ನಿದ್ದೆ ಬಂತು — ಈಗೇನಪ್ಪ ಅಂದರೆ! ಹಾಳು ಈಚೆಗೆ ಸ್ವಲ್ಪ ಒಳ್ಳೆ writer ಬಂದು ಬಿಟ್ಟು, ಸಾಹಿತ್ಯಕ್ಕಿದ್ದ ಒಂದು ಮಹಾ ಉಪಯೋಗಾನೇ ಇಲ್ಲ ಅನಿಸಿಬಿಟ್ಟ ದಾರೆ — ಕಾದಂಬರಿ ತೊಗೊಂಡರೆ mild ಆಗಿ bore ಆಗತ್ತೆ, 50 page ಓದಿದ್ಮೇಲೂ ನಿದ್ದೆ ಮಾತ್ರ ಸೊನ್ನೆ! (ವಿಧಿಯನ್ನು ಒಪ್ಪಿಕೊಂಡವನಂತೆ) 'Our little life is rounded with a sleep' ಆಗದೇ ಹೋದರೆ ಏನು ಗತಿ? ಒಂದು ದಿನ ನಿದ್ದೆ ಬರದಿದ್ದರೆ ಇಷ್ಟು ಒದ್ದಾಟವಾಗುತ್ತಲ್ಲ ... (ತಿರುಗಿ) ಸರೋಜ ಚೆನ್ನಾಗಿ ನಿದ್ದೆಮಾಡ್ತಾ ಇದಾಳೆ ... ತಲೇಲೇನಾದರೂ ಇದ್ದರೆ ತಾನೇ ... ಸ್ವಲ್ಪ ಹೊತ್ತು ಬರೀತಲೇ ಇರೋಣ.

[ಹೊರಗಡೆ ದೂರದಲ್ಲೊಂದು ಕಾರು, ಮೆಲ್ಲನೆ ಗಾಳಿಯ ಸುಯ್ಯಲು, ಎಲ್ಲವನ್ನೂ ಎತ್ತಿಸೆದು ಕಪ್ಪೆಗಳ "ವಟವಟ" — ಸಂಗೀತಸಾಧನೆ ಹೆಚ್ಚಾಗುತ್ತದೆ.] ಇದೇನು ವಿರಹಗೀತೆನಪ್ಪ, ಎದೆ ಒಡೆದುಕೊಂಡು! ಬೆಳಗ್ಗೆ ಆದರೆ ಸರೋಜನ ಸಂಗೀತ, ರಾತ್ರಿ ಆದರೆ ಈ ಕಪ್ಪೆಗಳ full-time ಕಚೇರಿ! ಅಬ್ಬಬ್ಬ, ನಿದ್ದೆ ಹೇಗೆ ತಾನೇ ಬರುತ್ತೋ, ಈ ಕೊಳದ ಹತ್ತಿರ ಮನೆ ಯಾಕೆ ಕಟ್ಟಿಸ್ಯಾರೋ ಕಾಣೆ (ಕಪ್ಪೆಗಳ ಕಚೇರಿ) ಮುಂಜಾನೆ ಒಂದು ಗಂಟೆ ನಿದ್ದೆ ಕೂಡ ಬೇಡವೆ?... ಪ್ರಕೃತಿ ಪ್ರಕೃತಿ ಅಂತ ಕವಿಗಳು ಬಡಕೊಳ್ಳೋದು — ಪ್ರಕೃತಿಸಂಗೀತ ಅಂದರೆ ಹೀಗೆ! ಇದಕ್ಕೇನೂ ದೂರೆಯೇ ಇಲ್ಲವೇ, ಯಾವ international court ಇದೆ ಇದಕ್ಕೆ? ಮನುಷ್ಯ ಅಣು ಬಿಚ್ಚಿ ರಾಜ್ಯಗಳನ್ನೇ ನಿಶ್ಶಬ್ದವಾಗಿ ಅಡಗಿಸಿದವನು, ಈ ಕಪ್ಪೆಗಳ ಮುಂದೆ ನಿಸ್ಸಹಾಯ! (ಆಕಳಿಸಿ) ಮೆಲ್ಲಗೆ ಒಂದು walk ಆದರೂ ಹೋಗೋಣವೇ ... (ಹಾಗೇ ನಿದ್ರಿಸುವನು — ಮೆಲ್ಲನೆ ಗೊರಕೆ. ಮೃದುವಾಗಿ ಆರಂಭಿಸಿದ ಹಿಮ್ಮೇಳ ಸಂಗೀತ, ಉಚ್ಛ್ವಸ್ಥಾಯಿಗೇರಿ, ದೂರದಲ್ಲಿ ಮರೆದು, ಮೆರವಣಿಗೆಯ ಶೈಲಿಯಲ್ಲಿ ಹಿಂದಿರುಗುತ್ತದೆ — ಜತೆಗೆ ಕಪ್ಪೆಗಳ ಸದ್ದು).

ಕಪ್ಪೆಗಳು : ಮಹಾರಾಜರು . ಮಹಾರಾಜರು ! ಸದ್ದು ....
ಪರಾಕು : ಜಲಜರಾಜ ಮಹಾರಾಜ ಮಂಡೂಕ ಪ್ರತಾಪನೀ
ಸರೋವರ ಭೂಷಣ ಜೀಜೀ
ಸಲಿಲ ಪ್ರಪಂಚ ಸ್ವರ್ಣಧ್ವನೀ
ಅಖಂಡನಾದ ಬ್ರಹ್ಮಾಧಿಕಾರೀ
ವರುಣೇಂದ್ರಪ್ರಿಯ ಸಕಲ ಜಲಜೀವ ಶಿಕ್ಷಾದ್ವಿತೀಯಾ
ಜೀಯಾ
ಪರಾಕು !

[ ನಿಶ್ಶಬ್ದ ]

ರಾಮಚಂದ್ರ : (ನಿಶ್ಶಬ್ದವನ್ನು ಭೇದಿಸಿ) ಅರೆ, ಈ ಕಪ್ಪೆಗಳ ರಾಜ್ಯದಲ್ಲೂ ನಿಶ್ಶಬ್ದ ಸಾಧ್ಯವೇ ? ಪರವಾಗಿಲ್ಲ ಅಂದೆ ! (ಕಪ್ಪೆಯೊಂದು ಗೊಗ್ಗರದನಿಯಲ್ಲಿ "ಉಶ್" ಎನ್ನುವುದು)
ಮಂತ್ರಿ : ಮಹಾಸ್ವಾಮಿಯವರು ಮಂಡಿಸಿದರು ಎಲ್ಲರೂ ಕುಳಿತುಕೊಳ್ಳುವಂತೆ ಆಜ್ಞೆ. ( ಗಾಂಭೀರ್ಯ ಮರೆತು, ರೇಗಿ) ಏ ಗೋದ ಪೊಟ್ಟೆ, ಕೂತುಕೋಬಾರದೇ, ಏನ್ ಬಂದಿದೆ ರೋಗ ! .... (ದೈನ್ಯ) ಆಹಹ, ಮಹಾಪರಾಧವನ್ನು ಮನ್ನಿಸ ಬೇಕು ಮಹಾಸ್ವಾಮಿ, .... ಮರೆವು ವಯಸ್ಸಾಯಿತು ...
ರಾಜ : (ಕರುಣೆಯಿಂದ) ಅಮಾತ್ಯ, ನಿಮಗೆ ಮೂರು ವರ್ಷದ ಮುದಿ ಬಂದಿದೆ, ನಿಮಗೆ ಮರೆವು ಸಹಜವೇ, ಮನ್ನಿಸಿದ್ದೇವೆ.
ಮಂತ್ರಿ : ಪ್ರಭುಗಳ ಕರುಣೆ ಸಾಗರವಿಶಾಲ. (ಕೈಕಟ್ಟಿ) ಹಾಡು !

[ನಾಲ್ಕು ಕಪ್ಪೆಗಳು ಮುಂದೆ ಬಂದು ಕುಣಿದು ಹಾಡುತ್ತವೆ; ಕೋಲಾಟದ ಕುಣಿತ-ವನ್ನಿಲ್ಲಿ ಅಳವಡಿಸಿಕೊಳ್ಳಬಹುದು.]

ಹಾಡು : ಮುಂದೆ ಬಂದು ಏರಿ ಎದ್ದು
ಕಂಠವೆತ್ತಿ ಹಾಡಿರಿ !
ದೇವನಲ್ಲಿ ಮೊರೆಯನಿಟ್ಟು
ಜೀವದಾಸೆ ಮರೆತು ಬಿಟ್ಟು
ಹಾಡಿನಲ್ಲೆ ತೇಲಿರಿ !

[ಆದರೆ ಸಭೆಯಲ್ಲೇಕೋ ಗುಜು ಗುಜು ಅಶಾಂತಿ]

ರಾಜ : (ಸಭೆಯ ಗಲಿಬಿಲಿಯನ್ನು ಗಮನಿಸಿ) ನಮ್ಮ ರಾಜ್ಯದಲ್ಲಿ ಈಚೆಗೇಕೋ ಸಂಗೀತ ಕಲೆಯಲ್ಲಿರಬೇಕಾದ ಆಸಕ್ತಿ, ಅದರಲ್ಲಿ ನೆಮ್ಮದಿ ಕಾಣುವ ಅಭಿರುಚಿ ಹೋಗಿ ಬಿಟ್ಟಿದೆ. ಅದೋ ಅಲ್ಲಿ ನೋಡಿ, ಶಬ್ದಾಚಲರಾಯರೇ !

ಮಂತ್ರಿ : (ಆಕ್ರೋಶದಿಂದ) ಶುದ್ಧ, ಮನುಷ್ಯರ ಹಾಗೆ, ಇಂಪೇ ಇಲ್ಲದೆ ವಟಗುಟ್ಟು ತ್ತಾರೆ. (ಕರೆದು) ಏ ಶಬ್ದಾಧಿಕಾರಿ, ಅದೇನು ಸಭೆಯಲ್ಲಿ ಗದ್ದಲ, ನೋಡು. ಅಡಗಿಸು.ಅವರಿಗಿಂತ ನಿನ್ನ ಸದ್ದೇ ಹೆಚ್ಚಾಗದಿರಲಿ.(ತಿರುಗಿ) ಪ್ರಭುಗಳ ಕರುಣೆ ದೊಡ್ಡದು, ಆದರೆ ನಮ್ಮ ಪುರಾತನ ಕಲೆಗಾಗುತ್ತಿರುವ ಅವಮಾನವನ್ನು ಸಹಿಸಲಾರದು, ನಾ ಒಲ್ಲೆ, (ಥಟ್ಟನೆ ಏನೋ ಕಂಡು) ಓ, ನಮ್ಮ ರಾಜ್ಯಕ್ಕೆ ಅಪರಿಚಿತ ಮಾನವನೊಬ್ಬ ಕಾಲಿಟ್ಟಿರುವ ಹಾಗಿದೆ. (ಹೆದರಿ) ಇನ್ನೇನು ಅನಾಹುತವೋ ; ಆತ ಇದ್ದಲ್ಲಿದ್ದಾಗಲೇ ಸಾಕಷ್ಟಾಗಿದೆ.

ರಾಜ : ಮೈ ಪರಚಿಕೊಳ್ಳದೆ ಸುಮ್ಮನಿರಬಾರದೇ ಮಂತ್ರಿವರ್ಯ ! ಸಭೆಯಲ್ಲೇ, ಮೊನ್ನೆ ತಾನೇ ಮೇಲುನಾಡಿನಿಂದ ಮಾನವಶಾಸ್ತ್ರದ ಕಲಿಕೆ ಮುಗಿಸಿಬಂದ ನಮ್ಮ ನಾದಬಿಂದು ಇದ್ದಾರೆ. ಅವರನ್ನು ಮುಂದಿಟ್ಟು ವಿಚಾರಿಸೋಣ .... (ಕೆಚ್ಚಿನಿಂದ) ಮಿತಿ ಮೀರಿದರೆ ನಮ್ಮ ಜನಾಂಗವೇ ನಮ್ಮ ಹಿಂದಿಲ್ಲವೇ, ತೋಳ್‌ಬಲದ ಕಂಠಶಕ್ತಿಯ ನೆಮ್ಮುಗೆ ನಮಗಿರಲಿ. ಆಗಾಗ ಆಸ್ಥಾನ ಹೀಗೆ ಸ್ವಾರಸ್ಯವಾಗಿರಬೇಕು.

ಮಂತ್ರಿ : ಪ್ರಭುಗಳ ಕರುಣೆ ಅನಂತ — ಆದರೆ ಮಾನವ ಜಂತುವನ್ನು ಮನ್ನಿಸುವವರೆಗಿರಬಾರದು . . ನನಗೇನೋ ಈ ಜಾತಿಯನ್ನು ನೆನಸಿಕೊಂಡರೇ ಎದೆ ಉರಿಯುತ್ತದೆ, ಸದ್ದಡಗುತ್ತದೆ.

ಶಬ್ದಾಧಿಕಾರಿ : (ಮುಂದೆ ಬಂದು) ಮಹಾಸ್ವಾಮಿ, ಅಪರಾಧಿ !

ರಾಮಚಂದ್ರ : (ಕಕ್ಕಾಬಿಕ್ಕಿಯಾಗಿ, ಬಿಡಿಸಿಕೊಳ್ಳಲೆತ್ನಿಸುತ್ತ) ಎಲ್ಲೋ ಬಂದು, ಎಲ್ಲೋ ಸಿಕ್ಕೊಂಡೆನಲ್ಲಪ್ಪ ಈ ಭಾರಿ ಮಂಡೂಕಗಳ ಹತ್ತಿರ! ... ಬಿಡಯ್ಯ ಕೈಯಿ... walkಊಂತ ಹೊರಟವನು ಈ ಕಷ್ಟಕ್ಕೆ walk ಮಾಡಿಬಿಟ್ಟೆನಲ್ಲ ?

ರಾಜ : (ಗಂಭೀರವಾಗಿ) ಶಬ್ದಾಧಿಕಾರಿ, ಅಪರಿಚಿತರನ್ನು ಅಪರಾಧಿಗಳೆಂದು ಎಣಿಸುವ ವಾಡಿಕೆ ನಮ್ಮಲ್ಲಿಲ್ಲ. ಕೈಬಿಟ್ಟು ನಿಲ್ಲು ...... ಮಾನವಶ್ರೇಷ್ಠರೇ, ತಮ್ಮನ್ನು ಮೇಲುನಾಡಿನ ಅನಧಿಕೃತ ರಾಯಭಾರಿಯೆಂದು ನಾವೆಣಿಸುತ್ತೇವೆ. ತಮಗೆ ನಮ್ಮ ತುಂಬುಕಂಠದ ಸ್ವಾಗತವಿದೆ. ತಮ್ಮದೇನು ಅರಿಕೆ ಇದ್ದರೂ ಆಲಿಸಲು ಸಿದ್ಧರಿದ್ದೇವೆ. ತಮ್ಮ ನಾಡಿನಲ್ಲಿ ನಮ್ಮ ಬಗ್ಗೆ ಇರುವ ಕುತೂಹಲ, ಜ್ಞಾನ ಎಷ್ಟೆಂದು, (ನಕ್ಕು) — ಆಗಾಗ, ನಮ್ಮ ರಾಜ್ಯದಿಂದ ನೀವುಗಳು ಅಪಹರಿಸಿ ಒಯ್ಯುವ ಹುತಾತ್ಮರ ಸಂಖ್ಯೆ, ಹೇಳುತ್ತದೆ. (ಸಭೆ: ಅಸಮಾಧಾನದ ಗುಜುಗುಜು. ಮಂತ್ರಿ : ಸದ್ದು !) ಇದೇ ಸಭೆಯಲ್ಲೇ ಇರುವ ಹತ್ತೆಂಟು ಮಂದಿ — ನಿಮ್ಮ ಜತೆ ನಾಡಿಗರ ಕೈಗೆ ಸಿಕ್ಕಿಬಿದ್ದು, ತಲೆಯುಳಿಸಿಕೊಂಡು ತಪ್ಪಿ ಬಂದ ಅನುಭವವನ್ನು— ಕಣ್ಣಿಗೆ ಕಟ್ಟುವಂತೆ ಬಣ್ಣಿಸಬಲ್ಲರು. ನಮ್ಮ ವಿಷಯದಲ್ಲಿ ತಮಗೆ ಆದರವಿಲ್ಲದಿದ್ದರೂ ಆಸಕ್ತಿ ಇದೆ ಎನ್ನುವುದು ಸ್ವಲ್ಪ ಸಂತೋಷದ ಸಂಗತಿ ... ಮನುಷ್ಯರ ನಡುವೆ ಸಿಕ್ಕಿಬಿದ್ದರೂ ಹೆದರದೆ,

ಅನೇಕ ಕಾಲು, ಕತ್ತಿಗಳಿಂದ ಪಾರಾಗಿ, ಮಾನವರಲ್ಲೇ ಕೆಲವರನ್ನು ತಮ್ಮ ಚಾತುರಿಯಿಂದಲೂ ವಾಗ್ವೈಖರಿಯಿಂದಲೂ ಸ್ನೇಹಕ್ಕೆ ಸೆಳೆದು, ಇಡೀ ಮಾನವಶಾಸ್ತ್ರವನ್ನು ದಡದಿಂದ ದಡದವರೆಗೆ ಕಡೆದು, ಕಲಿತು ಹಿಂದಿರುಗಿರುವ ನಮ್ಮ ಹೆಮ್ಮೆಯ ಪ್ರಜೆ — **ನಾದಬಿಂದು,** ನಿಮ್ಮೆಲ್ಲ ಮಾತಿಗೂ ಸಮರ್ಪಕವಾದ ಪ್ರತ್ಯುತ್ತರ ಹೇಳಬಲ್ಲರು. (ಸಭೆ : ಚಪ್ಪಾಳೆ)

ನಾದಬಿಂದು : (ಮುಂದೆ ಬಂದು) ತಮ್ಮ ಕೃಪೆ ಮಹಾರಾಜರೇ.

ರಾಜ : ಇರಲಿ. ಇಂದಿನ ಓಲಗ ಸ್ವಾರಸ್ಯವಾಗಿರುವಂತಿದೆ. ಮೊದಲು ರಾಯಭಾರಿಗೆ ಸ್ವಾಗತಗೀತೆ ಒಂದಾಗಲಿ, ತರುವಾಯ ವಿಚಾರವಿಮರ್ಶೆ ತೊಡಗಲಿ.

[ಮತ್ತೆ ಕಪ್ಪೆಗಳ ಮೇಳವೊಂದು ಕುಪ್ಪಳಿಸಿ ಹಾಡತೊಡಗುತ್ತದೆ, ಮೊದಲಿಗಿಂತ ಕರ್ಕಶವಾಗಿ.]

(ಒಂಟಿದನಿ)

ದನಿಗಳ ಬೀಡಿದು ನಮ್ಮೂರು,
ಚಂದ್ರನ ತಾಗುವ ದನಿಗಳದು !
(ಹಿಮ್ಮೇಳ) – ಗಳದು, — ಗಳದು, ದನಿಗಳದು !

[ಇದನ್ನೇ ಮತ್ತೆ ಮತ್ತೆ ಕಿವಿಯೊಡಯುವ ಹಾಗೆ, ಅನ್ನುತ್ತಿರುವಾಗ]

ರಾಮಚಂದ್ರ : (ಕೂಗಿ ಹಾಡನ್ನು ಮುರಿದು) Mister! ಅಲ್ಲ, ಮಹಾಸ್ವಾಮಿ, ದಯವಿಟ್ಟು, ದಯವಿಟ್ಟು, ಇ .... ಈ ಹಾಡನ್ನು ನಿಲ್ಲಿಸೋಣವಾಗಲಿ! Please.... ಅಲ್ಲ, ಕೃಪೆ ಮಾಡಿ ....

ರಾಜ : ಏನು, ಹಾಡನ್ನು ನಿಲ್ಲಿಸಬೇಕೇ ? ಅಂತೆಯೇ ಆಗಲಿ (ಮಂತ್ರಿ "ಹಾಡು ನಿಲ್ಲಲಿ" ಎನ್ನುವನು, ಮೇಳದವರು ಹೋಗುವರು) .... ಆದರೆ, ಈ ಕೋರಿಕೆಯ ಹಿಂದಿನ ಅರ್ಥವೇನು ?

ರಾಮ : (ಹೇಳಲಾರದೆ) ಹೇಗಪ್ಪ ಹೇಳಲಿ ? ....ಏನಿಲ್ಲ .... ಕಿವಿ ... ಅಲ್ಲ (ಕನ್ನಡ ಮಾತುಗಳು ಬಾಯಿ ತುಂಬಾ ಬರಲು, ಲೀಲಾಜಾಲವಾಗಿ) ಅ ... ತಮ್ಮಂಥವರ ಕಂಠಶ್ರೀಯ ಮುಂದೆ ಸಂಗೀತದ ಅಟ್ಟಹಾಸವೇ, ಎನಿಸಿತು, Rather ... ನನಗೆ ತಮ್ಮ ಇನಿಮಾತನ್ನು ಕೇಳುವ ಆಸೆ ...

ನಾದಬಿಂದು : (ತಲೆಹಾಕಿ)ಸ್ವಾಮಿ, ಇದ್ದದ್ದನ್ನು ಅದುಮಿ, ಇಲ್ಲದ್ದನ್ನು ಉಚ್ಚರಿಸುವುದಕ್ಕಿದು ಮಾನವರ ಮೇಲುನಾಡಲ್ಲ. ಮರೆಮಾಚುವುದು ಮಾನವ ಸಹಜವಾದರೂ, — ನೀವೇ ಹೇಳುವಂತೆ, 'ರಾಮೇಶ್ವರಕ್ಕೆ ಹೋದರೂ ಶನೀಶ್ವರ ಬಿಡ' ಎಂದು – ತಮ್ಮ ಕುಟಿಲ ಬುದ್ಧಿಯನ್ನು ನಮ್ಮ ಮಹಾಸ್ವಾಮಿಯವರ

ಸ್ವಚ್ಛವರ್ಚಸ್ಸಿನವರೆಗೂ ಎಳೆದು ತಂದಿರುವುದು ತರವಲ್ಲ. (ರಾಜನ ಕಡೆಗೆ ತಿರುಗಿ ದೈನ್ಯದಿಂದ) ಮಹಾಸ್ವಾಮಿ, ನನ್ನ ದುಡುಕನ್ನು ಮನ್ನಿಸಿ.

ರಾಜ : (ಮೆಚ್ಚಿ) ಭೇಷ್, ನಾದಬಿಂದು. ಸ್ವಾರಸ್ಯದ ಮುಂದೆ ಸಹನೆ ದೊಡ್ಡದಲ್ಲ.

ನಾದಬಿಂದು : ಇನ್ನು ನನಗೆ ನೆಮ್ಮದಿ. (ತಿರುಗಿ) ಮಾನವರಾಯರೇ, ಭೇಕರಾಜ್ಯದಲ್ಲಿ, ನೀರಿಗಿಳಿದ ಗಾಳಿಯಂತೆ, ಸುಳ್ಳು ತಾನೇ ಸಿಕ್ಕಿಕೊಂಡು ತಪಿಸುತ್ತದೆ.

ರಾಮು : (ಅವರಂತೆಯೇ ಕನ್ನಡ ಮಾತನಾಡಲು ಪ್ರಯತ್ನಿಸಿ) ನಿಜ ಹೇಳೋದಾದರೆ ... ತಮ್ಮ ಗೀತಕಲೆ ಉತ್ಕೃಷ್ಟವಾದದ್ದು. ಆದರೆ ... ಏಕೊ, ನನ್ನ ದೇಹದಲ್ಲಿ ಕೆಲವು ಕಂಪನಗಳೆದ್ದು ... ರಕ್ತಸಂಚಾರ ಅಲ್ಲೋಲಗೊಂಡಿದೆ. ನನ್ನ ನಿಶ್ಶಕ್ತಿಯನ್ನು ತಿಳಿದು .. ಕನಿಕರಿಸಬೇಕಾಗಿ ಕೇಳಿಕೊಳ್ಳುತ್ತೇನೆ.

ನಾದಬಿಂದು : (ಬಿಗಿಯಾಗಿ) ಅಡಗಿ ನುಡಿಯುವ, ತೊದಲಿ ತಡವಿ ಅಡಗಿಸುವ, ತಿಳಿಗೇಡಿತನ ನಮ್ಮಲ್ಲಿ ಬೇಡ. ಕಪಟವಿಲ್ಲ ನೀರಿಗೆ ಬಿದ್ದ ಬೆಂಕಿ.

ರಾಮು : (ಸ್ವಲ್ಪ ರೇಗಿ) ತಿಳಿಗೇಡೀನಂತೆ ತಿಳಿಗೇಡಿ ! ಮುಚ್ಚುಮರೆ ಏನು ಬಂತು, ನಿಮ್ಹತ್ರ ? ಹೇಳೇ ಬಿಡ್ತೀನಿ ಕೇಳ್ರಿ! courtesy ನೋಡಿದರೆ ಕೆನ್ನೇಗೆ ಹೊಡೀತಾರೆ ... (ಅಚ್ಚ ಕನ್ನಡದಲ್ಲಿ ಅಣಗಿಸುವಂತೆ, ರೇಗಿ) ಕೇಳಿ 'ನಿಮ್ಮ' ಸಂಗೀತ 'ನಮ್ಮ' ಕಿವಿಗಳಿಗೆ ಕಠೋರ, ಕರ್ಕಶ, ನಮ್ಮ ಮನಶ್ಶಾಂತಿಗೆ ಪರಮ ಶತ್ರು, ನಿದ್ದೆಗೆ ಕುತ್ತು, ಕರ್ಣರೋಗಗಳನೇಕಕ್ಕೆ ಬಿತ್ತು ! ಸಾಕೆ ?

ಮಂತ್ರಿ : ಪ್ರಭು, ಕಲೆಪಾತಕನಿವನು ! (ಸಭೆಯಲ್ಲಿ ಗದ್ದಲಕ್ಕಾರಂಭ)

ರಾಜ : (ಅರ್ಥವಾಗದೆ) ಇದು ಸಾಧ್ಯವೆ ? ನಮ್ಮ ಇಂದ್ರಸ್ತೋತ್ರಗಳು, ಇಂಪಾದ ವಿರಹಗೀತೆಗಳು, ಹಾಲುಜೇನಿನಂತಹ ಒಲವುಗಬ್ಬಗಳು — "ಕಠೋರ," "ಕರ್ಕಶ" ! ಹೃದಯಸಂಜೀವಿನಿ, "ಪರಮಶತ್ರು" ! ನಿದ್ದೆಯನ್ನಲ್ಲದೆ ಇನಿದಾದ ಹೊಂಗನಸುಗಳನ್ನೂ ತಂದೂಡುವ ದಿವ್ಯ ಸಂಗೀತ ಕಲೆ "ಕುತ್ತು"! ಅಸಾಧ್ಯ, ಈತನಿಗೇನೋ ಮನೋರೋಗವಿರಬೇಕು.

ಮಂತ್ರಿ : (ರಾಜನಿಗೆ ಪಿಸುಗುಟ್ಟಿ) ತಮ್ಮ ರಾಣಿವಾಸ, ಬೆದರಿ, ಓಲಗದಿಂದ ಮೆಲ್ಲಗೆ ಕಾಲ್ದೆಗೆಯುತ್ತಿದಾರೆ.

ರಾಜ : (ಪ್ರೀತಿಯಿಂದ) ಪಾಪ, ಆಕೆಯ ಮೆದುಹೃದಯ ಇಂತಹ ಒರಟುಮಾತಿನಿಂದ ಬಹು ನೊಂದಿರಬೇಕು. ಆಮೇಲೆ ಸಂತೈಸುತ್ತೇನೆ.

[ಸಭೆಯಲ್ಲಿ ಗದ್ದಲ — "ಕಡಿ ! ಬಡಿ !" ಇತ್ಯಾದಿ ಕೂಗು]

ನಾದಬಿಂದು: (ಮುಂದೆ ಬಂದು, ಪರಿಸ್ಥಿತಿಯನ್ನು ತಹಬಂದಿಗೆ ತಂದು) ಸದ್ದು ! ... ಮಹಾಸ್ವಾಮಿ, ನೊಂದುಕೊಳ್ಳಬಾರದು. ಇಂತಹ ಮಾತಿಗೆ ಅಚ್ಚರಿಪಡಬೇಕಾದ್ದಿಲ್ಲ. (ಕಟಕಿ) ಮಾನವರಿಗೆ ಎಂಥದೂ ಸಾಧ್ಯ.

ರಾಜ : (ಗಂಭೀರ) ಹೌದು, ಹೌದು, ಆ ಜಾತಿಗೇ ರಸಿಕತನ ಕಡಿಮೆ ಎಂದು ಕೇಳಿದ್ದೇನೆ.

ನಾದಬಿಂದು : (ಸಭೆಯನ್ನು ಕುರಿತು) ಮಹಾಜನರೆ, ಇಂತಹ ಬಿರುನುಡಿಗಳಿಗೆ ನಾವು ನೊಂದುಕೊಳ್ಳಬೇಕಾದ ಪ್ರಮೇಯವೇನಿಲ್ಲ. "ಲೋಕೋಭಿನ್ನರುಚಿಃ" ಎನ್ನುವುದು ಅವರಲ್ಲೊಂದು ಗಾದೆ-ಮಾತು. ಎಂತಹ ಮತಿಹೀನ ಆಸೆಗಳನ್ನೂ ಅವರು ಆ ಮಾತಿನಿಂದ ಸರಿ ಎನಿಸಿಕೊಳ್ಳುತ್ತಾರೆ.

ರಾಮ : (ಪೂರ್ತಿ ರೇಗಿ) ಅಲ್ರೀ, ಕಪ್ಪೆ-ರಾಯರೇ, ಇಲ್ಲಿ ಕೇಳಿಬಿಡಿ ... ನಿಮ್ಮ ಜಾತಿಯನ್ನೇ ನಾನು ಆರೋಪಿಸುತ್ತೇನೆ; ನಿಮ್ಮ ಸಂಗೀತ, ನಮ್ಮ ಸಂಕಟ. ನಿಮ್ಮ ಪ್ರೇಮಸಲ್ಲಾಪ, ನಮ್ಮ ಜೀವವೇದನೆ ... ಮಳೆಯಿಲ್ಲದೆ ನಮ್ಮ ಬೆಳೆಯಿಲ್ಲ; ಅಂತಹ ಮಳೆಯನ್ನೂ ಕೂಡ ನಿಮ್ಮಿಂದಾಗಿ ನಾವು ಶಪಿಸುವಂತಾಗಿದೆ. ಈ ಗಳಿಗೆಯಲ್ಲಿ — ನನ್ನಂತಹ ಎಷ್ಟು ಸಾವಿರ ಮನುಷ್ಯರು ನಿಮ್ಮ ಆಲಾಪನೆಗಳಿಗೆ ಕಿವಿಗೊಟ್ಟು, ನಿದ್ದೆಯನ್ನೂ ನೆಮ್ಮದಿಯನ್ನೂ ತೊರೆದು, ತಂತಮ್ಮ ಹಾಸಿಗೆಗಳಲ್ಲಿ ನರಳಾಡುತ್ತಿದ್ದಾರೆ, ಗೊತ್ತೆ ? ಇಂಥವರು ನೆನ್ನೆ ಎಷ್ಟೋ ನಾಳೆ ಎಷ್ಟೋ ? ... (ಸಭೆ ಅವಾಕ್ಕಾಗುತ್ತದೆ. ಮೆಲ್ಲನೆ ಗುಜುಗುಜು),

ಮಂತ್ರಿ : (ಕೋಪದಿಂದ) ಈ ಧೂರ್ತನನ್ನು, ಈ ದರ್ದುರ ವೈರಿಯನ್ನು, ಈ ಕಲೆ ಪಾತಕನನ್ನು, ಈಗಲೇ ಶಿಕ್ಷೆಗೆ ಗುರಿಮಾಡದಿದ್ದರೆ ನಿಮ್ಮ ಮಾನ ಉಳಿಯುವುದಿಲ್ಲ, ಆಜ್ಞೆಯಾಗಲಿ !

ರಾಜ : (ಶಾಂತನಾಗಿ) ಮಂತ್ರಿ, ಕೋಪದಲ್ಲಿ ಕೊಯ್ದ ಬಾಲ ಶಾಂತಿಯಲ್ಲಿ ಬಂದೀತೇ ? ಈತನ ಬಿರುಮಾತಿನ ಹಿಂದೆಯೂ ಸತ್ಯದ ಧ್ವನಿ ಕೇಳಿಬರುವಂತಿದೆ.

ಮಂತ್ರಿ : (ನೊಂದು) ಓ, ತಮ್ಮ ಕರುಣೆ ಅಪಾರ — ಆದರೆ ರಾಜ್ಯಕ್ಕೇ ವಿಪತ್ತು ಬಂದೀತು (ಗೊಣಗುವನು)

ರಾಜ : (ತಿರುಗಿ) ನಾದಬಿಂದುರಾಯರೇ, ಈ ಆರೋಪಕ್ಕೇನು ಸಮಾಧಾನ ? (ಗಹನವಾಗಿ) ಕಂಡದ್ದನ್ನು ಕಾಣದಿರುವ ಕುರುಡರು ಕೆಲವರು, ಕಾಣದ್ದನ್ನೂ ಕಾಣುವ ಕನಸಿಗರು ಕೆಲವರು. ಕಣ್ಣಮುಂದೆ ಕಾಣುವುದನ್ನೇ ಕಾಣುವ ಪ್ರಯತ್ನ ನಮ್ಮದಾಗಲಿ. ಈ ವಿಷಯದ ವಿಚಾರಣೆ, ಈ ಅಮೃತಮಂಥನ, ಆರಂಭವಾಗಲಿ.

ನಾದಬಿಂದು : ದೊಡ್ಡಮಾತು. ನನ್ನ ಪಾಂಡಿತ್ಯವೆಲ್ಲ ತಮ್ಮ ಅಡಿಯಾಳು. (ತಿರುಗಿ) ಮಾನವರಾಯರೇ, ತಮ್ಮ ಆರೋಪವನ್ನು, ಅಖಂಡ ನಾದಬ್ರಹ್ಮಾಂಡದ ಅಧಿಕಾರಿಗಳಾದ ನಮ್ಮ ಮಂಡೂಕ-ಪ್ರತಾಪ ಮಹಾರಾಜರು ಅನಂತ ಕನಿಕರದಿಂದ ಆಲಿಸಿ, ಅದನ್ನು ವಿಚಾರಿಸಲು ಅಪ್ಪಣೆ ಇತ್ತಿದ್ದಾರೆ. ನಿಮ್ಮ ಒಳ ಹೊರಗುಗಳನ್ನೆಲ್ಲ ಎತ್ತಿ ಹಾಕಿ ನ್ಯಾಯದ ತಕ್ಕಡಿಯಲ್ಲಿ ತೂಗಿ, 'ಅಪರಾಧ

ಯಾರದು, ಆರೋಪ ಯಾರದು' ಎಂದು ಸೂಕ್ಷ್ಮವಾಗಿ ವಿಮರ್ಶಿಸೋಣ... ಮೊದಲನೆಯದಾಗಿ : ನಮ್ಮ ಭವ್ಯವಾದ ಪುರಾತನ ಕಲೆಯ ಮೇಲೆ ಮಹ-ತ್ತರ ಆರೋಪ ತಮ್ಮದಾಗಿದೆ. ನ್ಯಾಯವಾದಿಗಳಾದ ನಾವು, ಅದನ್ನು ಒಪ್ಪಿ ಕೊಳ್ಳುತ್ತೇವೆ.

(ಸಭೆ : ಏನು ? ಏನು ? ಛೆ, ಉಂಟೆ ? ಏನನ್ಯಾಯ, ಅಪಮಾನ ! ಇತ್ಯಾದಿ)

ಶಬ್ದಾಧಿಕಾರಿ : (ಗಗ್ಗರಿಸಿ) ಸದ್ದು !

ನಾದಬಿಂದು : (ನಿಧಾನವಾಗಿ) ಆದರೆ ... (ಸಭೆ ನಿಶ್ಶಬ್ದವಾಗುವುದು) ನಾನು ನಿಮ್ಮಲ್ಲಿದ್ದಾಗ, — ನಮ್ಮಿಂದ ತಾವು ನರುಳುವುದಕ್ಕಿಂತ ಹೆಚ್ಚಾಗಿ ನಿಮ್ಮಿಂದ ನೀವೇ ಸಂಕಟಕ್ಕೊಳಗಾಗುವುದನ್ನು — ನಾನು ಕಂಡಿದ್ದೇನೆ. ನಮ್ಮ ಮಾತಿನಿಂದ ಹಾಡಿನಿಂದ ಕೆಲವರಿಗೆ ನಿದ್ದೆ ಕೆಟ್ಟಿರಬಹುದು, ನಿಮ್ಮ ಮಾತಿನಿಂದ ನಿದ್ದೆ ಬಂದಿರಬಹುದು ; ಆದರೂ ಒಟ್ಟಿನಲ್ಲಿ ನನ್ನ ಅನುಭವ ಕಂಡ ಹಾಗೆ, ನೀವು ನಮ್ಮನ್ನು ಅಷ್ಟು ಬಿರುಸಾಗಿ ದೂರುವ ಕಾರಣವಿಲ್ಲ.

ರಾಮು : ಹಾಗಾದ್ರೆ, ನನಗೆ ನಿದ್ದೆ ಬರದೇ ಇರೋದು ಸುಳ್ಳೆ ? ನಮ್ಮ ಮಾತಿನಲ್ಲಿ ಮಾತಾಗಿ, 'ಕಪ್ಪೇ ಹಾಗೆ ಅರಚಿಕೊಳ್ಳಬೇಡವೋ' ಎನ್ನುವ idiamಉ, ನುಡಿಗಟ್ಟು — ಸುಳ್ಳೆ ? ... ನಿಮ್ಮ ಜತೇಗೆ, ಪ್ರಾಸಕ್ಕೋಸ್ಕರ, 'ಕಾಗೆ, ಕತ್ತೆ' ಮುಂತಾದ ಶ್ರೀಕಂಠರನ್ನೂ ಸೇರಿಸ್ತೇವೆ, ನಿಜ ; ಆದರೂ, (ನಸು ನಕ್ಕು) 'ನಿಮ್ಮ' ಸಾಧನೆ, ಬಿಡುವೇ ಇಲ್ಲದ ಭಗೀರತಪ್ರಯತ್ನ 'ಅವಕ್ಕೆ' ಸಾಧ್ಯವಿಲ್ಲ !

ನಾದಬಿಂದು : (ಮುಖ ಮುರಿಯುತ್ತ) ನಿಮ್ಮ ನುಡಿ-ಜಾಣ್ಮೆ ಮೆಚ್ಚತಕ್ಕದ್ದೇ ಸರಿ. ಆದರೆ, ಈಗ ಈ ಗಂಭೀರ ಮಂಡೂಕಮಾನರಕ್ಷಣೆಯಲ್ಲಿ ಉಪಹಾಸಕ್ಕೆ ನಾವು ಸಿದ್ಧರಿಲ್ಲ... ನಿಮ್ಮಂತೆಯೇ ನಮಗೂ ಹಕ್ಕುಗಳುಂಟೆಂಬುದನ್ನು ಮರೆಯಬೇಡಿರಿ. ವರ್ಷದಲ್ಲಿ ನಾಲ್ಕು ತಿಂಗಳು, ಅದೂ ರಾತ್ರಿಯ ತಂಪು ಹೊತ್ತಿನಲ್ಲಿ ಹಾಡಿ ಕೊಳ್ಳುವುದು ನಮ್ಮ ಹಕ್ಕು. ಅಂತಹ ಕಾಲದಲ್ಲೂ, ನಮ್ಮ ವಿಶ್ರಾಂತಿಯ ವಿಹಾರದಲ್ಲೂ ನಿಮ್ಮಿಂದ ನಮಗಾಗುವ ತೊಂದರೆ, ನಮ್ಮಿಂದ ನಿಮಗಾದೀತೆ?

ರಾಮು : (ಹಾಸ್ಯಮಾಡುತ್ತ) ಏನೂ ? ತುಳೀತೀವೀಂತ್ಲೊ ? ನಾವು, ಆನೆಗಳ ಕಾಲಿಗೆ ಸಿಕ್ಕದೆ, ಜೋಪಾನವಾಗಿ ನಡೆಯೋದಿಲ್ಲವೆ ? ಹಾಗೇ, ನೀವೂ, ಸ್ವಲ್ಪ ಹುಷಾರಾಗೀ —

ನಾದಬಿಂದು : ನೀವು ಆನೆಗಳಷ್ಟು ವಿಶಾಲಮನಸ್ಸಿನವರೂ ಮಂದಗಮನರೂ ಅಲ್ಲ. ಆ ಮಾತಿಗೆ ಮುಂದೆ ಬರುತ್ತೇನೆ, ಇದೇ ನಮ್ಮ ನಿಮ್ಮ ಕಂಡ ಪ್ರಶ್ನೆಗೆ ಬಂದರೆ, ನಾವು ನಿದ್ದೆಮಾಡುವಾಗ ನಿಶ್ಶಬ್ದವಾಗಿ ನಿದ್ದೆ ಮಾಡುತ್ತೇವೆ; ನಿಮ್ಮ ಹಾಗೆ

ಎಚ್ಚರವಿರಲಿ, ಇಲ್ಲದಿರಲಿ, ಶಬ್ದ ಮಾಡುವುದಿಲ್ಲ. (ರಾಜರಿಗೆ ತಿಳಿಸುತ್ತ) ಇವರು ನಿದ್ದೆಯಲ್ಲಿ ಮಾಡುವ ಹೃದಯದ್ರಾವಕ ಸದ್ದಿಗೆ "ಗೊ—ರ—ಕೆ" ಎನ್ನುತ್ತಾರೆ, ಮಹಾಪ್ರಭು !

ಸಭೆ : 'ಗೊ—ರ—ಕೆ', 'ಗೊ—ರ—ಕೆ' ! ನಮ್ಮ ನಾದಬಿಂದುರಾಯರದು ಏನು ಪಾಂಡಿತ್ಯ !

ನಾದಬಿಂದು : (ನಕ್ಕು) ಕೆಲವೊಮ್ಮೆ ನಿದ್ದೆಯಲ್ಲಿವರು ಮಾತನ್ನೂ ಆಡುತ್ತಾರೆ!... (ಸಭೆಯಲ್ಲಿ ಕೆಲವರ ನಗು: ಗಂಭೀರವಾಗಿ) ಎಷ್ಟು ಸಾರಿ ಬೆಳದಿಂಗಳಿನ ಹಾಲು ಹೊತ್ತಿನಲ್ಲಿ, ಈ 'ಗೊರಕೆಯ ಕರ್ಕಶಧ್ವನಿ, ಸಪ್ತಸ್ವರವನ್ನು ಎಳೆದೆಳೆದು, ಎಲ್ಲವನ್ನೂ ಹೊಕ್ಕು, ಹರಡಿ, — ನಮ್ಮ ಮೃದುವಿಲಾಸಿನಿಯರ ಹೃದಯ-ಗಳಲ್ಲಿ ಕ್ರೂರಭಯಗಳನ್ನು ನಟ್ಟು ನಮ್ಮ ವಿಲಾಸದ ಗಳಿಗೆಯನ್ನು ವಿಕಾರ ಗೊಳಿಸಿಲ್ಲ ? (ಗಂಭೀರ ಮೌನ

ರಾಜ : ಮಾನವರಾಯರೇನನ್ನುತ್ತಾರೆ ?

ರಾಮ : ಅ ...ಅಂದರೆ...ನಮ್ಮ ಹಾಗೇ ನೀವೂನು? "ಎಲ್ಲರ ಮನೇ ದೋಸೇನೂ ತೂತು" ಅಂತ ನಮ್ಮಲ್ಲಿ ಹೇಳೋದುಂಟು.

ನಾದಬಿಂದು : ಅಂತಹ ವಕ್ರಮಾತುಗಳು ನಿಮ್ಮಲ್ಲಿ ನೂರೆಂಟಿವೆ, ಇರಲಿ. ಇನ್ನು ಇವರ ಸಂಗೀತದ ವಿಷಯಕ್ಕೇ ಬರೋಣ. ನಾವು ಸಂಗೀತಕ್ಕೇ ಹುಟ್ಟಿ ಬಂದವರು — ಇವರು ಹಾಗಲ್ಲ. ಇವರ ಮಕ್ಕಳು ಹುಟ್ಟಿದಾಗ, ಮತ್ತು ಬಹಳ ವರುಷವಾಗುವವರೆಗೆ, ಒಂದು ರೀತಿಯಾಗಿ ಗೋಳಿಡುತ್ತವೆ, ಇದನ್ನು ಅವರು. 'ಅ—ಳು' ಎನ್ನುತ್ತಾರೆ. ಒಂದು ರೀತಿಯಾಗಿ ಕೇಕೆ ಹಾಕುತ್ತವೆ. ಅದನ್ನು ನಗು ಎನ್ನುತ್ತಾರೆ. (ಸಭೆ : 'ಅಳು', 'ಅ—ಳು , 'ನಗು' ! ಆಹಾ ಏನು ಪಾಂಡಿತ್ಯ) ಇವರ 'ಅಳು'ವಿನಲ್ಲಾಗಲಿ, 'ನಗು'ವಿನಲ್ಲಾಗಲಿ ನಮ್ಮ ಕುಲಕ್ಕೆ ಸಹಜವಾದ ಇಂಪಿಲ್ಲ ಎನ್ನುವುದು ಸರ್ವವೇದ್ಯ. ಅಷ್ಟೇ ಅಲ್ಲ. ಇವರು ಸಂಗೀತವನ್ನು ಕಲಿಯುತ್ತಾರೆ ! (ಸಭೆಯಲ್ಲಿ ನಗು) ಜತೆಗೆ ಮರದ ಪೆಟ್ಟಿಗೆ ಗಳನ್ನೂ ಊದು-ಕೊಳವೆಗಳನ್ನೂ ಉದ್ದನೆಯ ದಿಂಡುಗಳನ್ನು ತಿರುಚಿ, ಅದುಮಿ,ಊದಿ ತಮ್ಮೊಡನೆ ಕಿರುಲಿಸುತ್ತಾರೆ.ಇಷ್ಟಾದರೂ ಇವರ ಸಂಗೀತಕ್ಕೆ ನಮ್ಮ ಪ್ರಕೃತಿಸಹಜವಾದ ಸ್ಫೂರ್ತಿ, ಸೌಂದರ್ಯ ಇಲ್ಲ ಎಂದರೆ ತಪ್ಪಾಗ ಲಾರದು.

ರಾಮ : (ಮೆಲ್ಲಗೆ) ನಮ್ಮ ಸರೋಜನ್ನ ನೆನಸಿಕೊಂಡರೆ ಒಪ್ಪಿಕೊಳ್ಳತಕ್ಕ ಮಾತು.. ಅವಳೇ ಇಲ್ಲಿದ್ದಿದ್ದರೆ ನಾನಿಷ್ಟುಹೊತ್ತಿಗೆ ತಪ್ಪಿಸಿಕೊಳ್ತಾ ಇದ್ದೆ — ಒಂದು ಹಾಡು ಹಾಡಿಸಿದ್ದರೆ ಸಾಕಾಗಿತ್ತು !

ನಾದಬಿಂದು : ( ಮುಂದುವರಿಸುತ್ತ ) ಅಷ್ಟೇ ಅಲ್ಲ. ಹಾಡುವವರೇ ಹೀಗೆ ಮುಲುಕಿ ನರಳಿ ಕಷ್ಟಪಡುತ್ತಾರೆಂದ ಮೇಲೆ, ಕೇಳುವವರ ಮಾತೇನು ? — ಇಲ್ಲಿ ನಮ್ಮ ಜನಕ್ಕೊಂದು ಮಾತು : ಇವರ ಸಂಗೀತ-ಪದ್ಧತಿಯನ್ನು ನಮ್ಮ ತರುಣ ತರುಣಿಯರಲ್ಲಿ ಕೆಲವರು ಗುಟ್ಟಾಗಿ ಅನುಕರಿಸುವಂತೆ ನನಗೆ ಆಗಾಗ ಕೇಳಿಬಂದಿದೆ; ಶೋಚನೀಯವಾದ ವಿಷಯ. (ಸಭೆ : ತ್ಸು ತ್ಸು - ಛೀ ಛೀ !) (ಇವರ ವಿಲಕ್ಷಣ ಸಂಗೀತದ ವಿಚಿತ್ರ ವೇದನೆಗಳ ಅರಿವು, ಹಿಂದೆ, ನಾವೇ ನಾವಾಗಿದ್ದಾಗ ನಮಗೆ ಇಷ್ಟಿರಲಿಲ್ಲ)(ವ್ಯಂಗ್ಯ) ಇವರ ಮಾತೂ, ಸಂಗೀತವೂ(ಸಭೆಯಲ್ಲಿ)ಎಲ್ಲರಿಗೂ ಕೇಳಿಸುವದಿಲ್ಲವಂತೆ, ಅದಕ್ಕಾಗಿ ಧ್ವನಿಶಕ್ತಿ ಹೆಚ್ಚುಮಾಡುವ ರಾಕ್ಷಸ ಯಂತ್ರ ಗಳನ್ನೂ ದೊಡ್ಡ ಮನೆಗಳನ್ನೂ ಇವರೀಗ ಕಲ್ಪಿಸಿ ಕಟ್ಟಿಕೊಂಡಿರುವುದು ನಮಗೆ ಮಾತ್ರವಲ್ಲ, ಪ್ರಾಣಿವರ್ಗಕ್ಕೆಲ್ಲ ದುಃಖಕರವಾದ ವಿಷಯ.

ರಾಮು : ನಮಗೂ ದುಃಖವೇ ಸ್ವಾಮಿ ? radio ತಾನೇ ನೀವು ಹೇಳ್ತಿರೋದು ?

ನಾದಬಿಂದು : ನೋಡಿ, ಅಪರಾಧಿಯೇ ಒಪ್ಪಿಕೊಳ್ಳುತ್ತಿದ್ದಾರೆ, ಮತ್ತೇನು ? ಮಾನವನ ದೂರು ನಮ್ಮ ಮೇಲೆ ಬಂದಿದ್ದರೆ, ನಮ್ಮ ಆರೋಪಗಳ ಸರ ಮೈಲಿಯುದ್ದವಿದೆ. ಉದಾಹರಣೆಗೆ, ಒಮ್ಮೆ ಮನುಷ್ಯಮರಿಗಳು 'ಪಟಾಕಿ' ಎಂಬ ಬೆಂಕಿಯ ಬಾಣವನ್ನು ಎಸೆದ ಸದ್ದಿಗೆ, ಒಂದೇ ಏಟಿಗೆ ನಲವತ್ತು ಕಪ್ಪೆಗಳು ಕಿವುಡಾಗಿ ಹೋದುವು. ಒಂದಲ್ಲ, ಎರಡಲ್ಲ, ನಲವತ್ತು ! ( ಸಭೆ ತ್ಸು ತ್ಸು ) ಈಚೆಗೆ ಆಟಕ್ಕೆಂದು 'ಬಾಂಬಗಳೆಂಬ ಪಟಾಕಿ'ಗಳನ್ನೂ ಸೃಷ್ಟಿಸಿದ್ದಾರಂತೆ—ಅದರಲ್ಲೆಷ್ಟು ಕಿವಿಗೆ ಸಂಚಕಾರವೋ ?

ರಾಮು : Bomb ಹಾಕಿದರೆ, ಕಿವಿ ಏನು, ಸ್ವಾಮಿ, ಈ ಕಪ್ಪೆರಾಜ್ಯಾನೇ ಕೈಲಾಸಕ್ಕೆ ಹೋಗುತ್ತೆ ! ತಿಳೀತೇ ?

ನಾದಬಿಂದು : ಸುಳ್ಳು ಸುಳ್ಳು ಜಂಬಾ ಕೊಚ್ಚಬೇಡಿ, ಮಾನವರಾಯರೇ. ನಮ್ಮ ರಾಜ್ಯಾನೇ ಕೈಲಾಸಕ್ಕೆ — ? ಕನಸು ! ... (ಮುಂದುವರಿಸಿ) ಕಡೆಯದಾಗಿ ಸುಬ್ಬರಾಯನ ಕೆರೆಯ ಪ್ರಕರಣ ...

ಸಭೆ : ಹೌದು, ಹೌದು — ಹೇಳಿ, ಹೇಳಿ !

ರಾಮು : ಅಂದರೆ — ?

ನಾದಬಿಂದು : ಅದು, ಮಾನವಕುಲ ನಮ್ಮ ಮೇಲೆ ನಡಿಸಿದ, ನಡೆಸುತ್ತಿರುವ, ದಬ್ಬಾಳಿಕೆಗೆ ಅವರ ಸ್ವಾರ್ಥಕ್ಕೆ, ಮಹಾಸಾಕ್ಷಿ; ಅವರ ಕ್ರೌರ್ಯದ ಧ್ವಜ !

ಸಭೆ : ಧಿಕ್ಕಾರವಿರಲಿ ! ಅನ್ಯಾಯಕ್ಕೆ ಧಿಕ್ಕಾರವಿರಲಿ !

ನಾದಬಿಂದು : ಮಹಾಪ್ರಭುಗಳಿಗೂ ಇದರ ಅರಿವಿಲ್ಲದಿರುವಂತಿದೆ. ನಮ್ಮ ವಯೋವೃದ್ಧ ಮಂತ್ರಿಗಳಿಗೆ ಅದರ ಅನುಭವ ಚೆನ್ನಾಗುಂಟು (ಚರಿತ್ರೆ ಹೇಳುವಂತೆ) ಸುಮಾರು ಮೂರು ವರುಷದ ಹಿಂದೆ ; ಆಳಿದ ಮಹಾಸ್ವಾಮಿಗಳವರ ಕಾಲ. ಸುಬ್ಬರಾಯನ ಕೆರೆ ನಮ್ಮ ಚಕ್ರಾಧಿಪತ್ಯಕ್ಕೆ ಸೇರಿತ್ತು.

ರಾಮು : (ಥಟ್ಟನೆ ಅರ್ಥವಾಗಿ) ಓ ... ಹೌದು (ನಕ್ಕು) ಆ ಕೆರೇಲಿ ಆಗ ನೀರಿತ್ತು ...

ನಾದಬಿಂದು : (ಗತಕಾಲದ ವೈಭವವನ್ನು ವರ್ಣಿಸುತ್ತ) ಹುಲುಸಾದ ಹುಲ್ಲುಮರಗಳ ಕಾಡಿನ ನಡುವೆ, ಆ ಸವಿನೀರಿನಲ್ಲಿ ಚೆಲ್ಲಾಟವಾಡುತ್ತ, – ಸಿಹಿಯಾದ ದೊಡ್ಡ ಮಾದರಿಯ ಸೊಳ್ಳೆಗಳನ್ನೂ ಬಣ್ಣ ಬಣ್ಣದ ಚೇಟೆಯನ್ನೂ ಹಿಡಿದು ಮೆಲ್ಲುತ್ತ ಸ್ವಪ್ನದಲ್ಲಿದ್ದಂತೆ ನಮ್ಮ ಕುಲವಿತ್ತು.

ಮಂತ್ರಿ : (ಗದ್ಗದನಾಗಿ) ಅಂತಹ ರಾಜ್ಯವನ್ನು ಮಣ್ಣುಗೂಡಿಸಿದ ಮಾನವನಿಗಿಂತಲೂ ರಾಕ್ಷಸರುಂಟೆ ? ನೆನಸಿಕೊಂಡರೆ, ಸ್ವರ್ಗವೇ ಬಿಲವಾದಷ್ಟು ದುಃಖವಾಗುತ್ತದೆ.

ರಾಜ : ಆಮೇಲೇನಾಯಿತು ? ತೀರ್ಥರೂಪರೊಮ್ಮೆ ಅದರ ಬಗ್ಗೆ ದುಃಖಪಟ್ಟಿದ್ದರು. ನನಗೆ ಆಗಿನ್ನೂ ಬಾಲ ಬಿದ್ದಿರಲಿಲ್ಲ — ಬಾಲ್ಯಾವಸ್ಥೆ ... ನೀವು ತಿಳಿಸಿ ಹೇಳಿ, ಏನಾಯಿತು ?

ನಾದಬಿಂದು : ಆಗುವುದೇನು ? ಮನುಷ್ಯನ ಸ್ವಾರ್ಥದಿಂದಲೂ, ದೇವತೆಗಳ ಅಸೂಯೆಯಿಂದಲೂ ನಮಗೆ ಆಪತ್ತು ಬಂದಿತು; ನಮ್ಮ ಆಧಾರವಾಗಿದ್ದ ಜಲರಾಶಿಯನ್ನೂ ಈ ಮಾನವರು ರಕ್ಕಸಮಾಯೆಯಿಂದ ಬತ್ತಿಸಿಬಿಟ್ಟರು. ಕಾರಣ ನಾವೇ ಅಂತೆ; ಪಾಪ, ಆ ಸವಿಮೈಯ ಬಡಸೊಳ್ಳೆಗಳಂತೆ ! ಆ ಬೇಸಗೆಯಲ್ಲಿ ಮಂತ್ರಿವರ್ಯರೊಮ್ಮೆ ನನಗೆ ಹೇಳಿದರು — ಅರ್ಧಕಾಲ ಭೂಮಿಯೊಳಗೆ ಬೆಂದು, ಗತರಾಜ್ಯದ ಒಡೆದ ಕನಸಿನಲ್ಲಿ ಬಸವಳಿದು ಹೋಯಿತು. ವಂಶಕ್ಕೇ ಆಪತ್ತಾಗಿ ಹೋಯಿತು ... ಅದೋ, ಅದೋ, ಮಂತ್ರಿಗಳು ಮೂರ್ಛೆಯಾಗುತ್ತಿದ್ದಾರೆ ... (ಸಭೆ: ತುಂಬ ಕೋಲಾಹಲ)

ರಾಮು : (ಪೆಚ್ಚಾಗಿ) ಇನ್ನೇನಪ್ಪ ಗತಿ, ನನಗೆ ? ಈ political crimeಗೆ ನಾನೇ ಹೊಣೆಯೆ ? (ಕನಿಕರ) ಇದ್ದರೂ, ಅನ್ಯಾಯನಪ್ಪ !

ನಾದಬಿಂದು : ನಮಗೆ ನೆಲ, ನೀರು ಎರಡರಲ್ಲೂ ಬಾಳುವ ಶಕ್ತಿ ಕೊಟ್ಟ ದೇವರು ದೊಡ್ಡವನು, ಬದುಕಿಕೊಂಡೆವು ... ಈಗ, ಅದೇ ಕೆರೆಯಿದ್ದ ಜಾಗದಲ್ಲಿ, ನಮ್ಮ ಗತರಾಜ್ಯದ ಗೋರಿಯ ಮೇಲೆ, ನಮ್ಮ ಗಂಟಲಿಗಿಂತಲೂ ಸಾವಿರ ಪಾಲು ಕಠೋರವಾದ ಧ್ವನಿಮಂದಿರ — ' ರಾ – ಡಿ – ಯೋ '— ಸ್ಥಾಪಿತವಾಗಿದೆ. ಆಗಾಗ ಅಲ್ಲಿ ಮನುಷ್ಯರೂ ಸೇರಿ ' ಆಟ 'ವೆಂಬ ಹೆಸರಿನ ಒಂದು ರೀತಿಯ ಜಗಳವಾಡುತ್ತಾರೆ, ಚರ್ಮದ ಉಂಡೆಯನ್ನು ಒದ್ದು ಚಿತ್ರಹಿಂಸೆ ಮಾಡುತ್ತಾರೆ ... ಮಾನವರಾಯರೇ, ನಮ್ಮ ಆರೋಪ ಇನ್ನೂ ಮುಗಿದಿಲ್ಲ. ಹೇಳಲು ನಾಲಗೆ ನಡುಗುತ್ತದೆ, ಮಹಾಪ್ರಭು.

ರಾಜ : ನಾವಿದ್ದೇವೆ, ನಾದಬಿಂದು. ಧೈರ್ಯ ತಂದುಕೋ.

ನಾದಬಿಂದು : ಧೈರ್ಯ ಬಂದಿತು, ಪ್ರಭು. ಈ ಮಾನವರ ಮೇಲುನಾಡಿನಲ್ಲಾಗುವ ಅಕ್ರಮ, ಅತ್ಯಾಚಾರ, ಕ್ರೌರ್ಯಗಳನ್ನು ಬಣ್ಣಿಸಲು ಬಾಯಿ ಸಾಲದು. ಈ ಜನ

ರಲ್ಲಿ ಈಸಪ (Aesop) ನೆಂಬಾತನೊಬ್ಬನಿದ್ದ; ಅವನು ಮಾತ್ರ ನಮ್ಮ ಚರಿತ್ರೆಯ ಕೆಲವು ಅಂಶಗಳನ್ನು ಸೊಗಸಾಗಿ ಸ್ನೇಹದಿಂದ ಬಣ್ಣಿಸಿದ್ದಾನೆ. ಅವನಂತಹ ಒಬ್ಬಿಬ್ಬರನ್ನು ಬಿಟ್ಟರೆ, ಇಡೀ ಮಾನವಕೋಟಿಯೇ ಮಂಡೂಕದ್ವೇಷಿ. ಮಾನವ ಮರಿಗಳು ನಮ್ಮನ್ನು ಹಿಡಿದೊಯ್ದು ಕಾರಾಗೃಹಕ್ಕೆ ದೂಡುತ್ತವೆ, ಕೈಕಾಲು ಕಟ್ಟಿ ಹಾಕುತ್ತವೆ. ನಗುತ್ತವೆ, ಕಲ್ಲೆಸೆದು ಓಡಿ ಹೋಗುತ್ತವೆ, ಕೆಲವೊಮ್ಮೆ, ದೊಡ್ಡ ದೊಡ್ಡ ಮಾನವರೇ ನಮ್ಮನ್ನು ಕದ್ದೊಯ್ದು ... ಅದರ ಬಗ್ಗೆ ಮಹಾಸ್ವಾಮಿಯವರಿಗೆ ತಿಳಿದಿದೆ, ಆದರೆ ಮುಂದಿನ ರಕ್ತತರ್ಪಣದ ಕತೆ ನಿಮಗೆ ತಿಳಿಯದು — ಅವರು ನಮ್ಮನ್ನು ಕದ್ದೊಯ್ದು, ತಿಳಿಯಾದ ಗಟ್ಟಿ ಗಾಜಿನ ಸೌಧಗಳಲ್ಲಿ, ಅನ್ನ ನೀರಿಲ್ಲದೆ, ಕೂಡಿಹಾಕುತ್ತಾರೆ. ನಾನೂ ಒಮ್ಮೆ ಹಾಗೆ ಸಿಕ್ಕುಬಿದ್ದು ಆ ಯಮಗಂಡದಿಂದ ತಪ್ಪಿಸಿಕೊಳ್ಳಲು ಬಲು ಕಷ್ಟವಾಯಿತು. ಮುಂದೆ — ಹೇಳುವುದಕ್ಕೇ ಭಯಂಕರವಾಗಿದೆ — ನಮ್ಮನ್ನು ಆಗಾಗ ಒಯ್ದು, ಕೈಕಾಲಿಗೆ ಮೊಳೆಹೊಡೆದು, ಶಿಲುಬೆಗೇರಿಸಿ ನಮ್ಮ ದೇಹಗಳನ್ನು ಹಿರಿದು, ಕರುಳನ್ನು ಬಿಡಿಸಿ ... (ಭಾವಪರವಶನಾಗಿ) ಮುಂದೆ ಹೇಳಲಾರೆ ಪ್ರಭು ! ಅದರಿಂದ ಈ ರಕ್ಕಸರಿಗೇನು ಲಾಭವೋ ಸುಖವೋ ಕಾಣೆ. (ಕೆಂಗಣ್ಣನಾಗಿ) ಮಾನವ ! ಅಪರಾಧ ಯಾರದು ? ಆರೋಪ ಯಾರದು ?

ರಾಮು : (ಮುಂದುಗಾಣದೆ) ಮಹಾಸ್ವಾಮೀ ತಮ್ಮ ಕರುಣೆ ದೊಡ್ಡದು. ನಾನು ಮಾನವನಾಗಿ ಹುಟ್ಟಿದ್ದು ತಪ್ಪಲ್ಲ. ಅದೂ ಅಲ್ಲದೆ, ನಿಮ್ಮ ಆರೋಪಗಳನ್ನೆಲ್ಲಾ ಒಪ್ಪಿಕೊಂಡರೂ, '**ನಾನು**' ಅಪರಾಧಿಯಲ್ಲ ! ( ಕೂಗುತ್ತ ) ನಾನು ಚರಿತ್ರೆ ವಿದ್ಯಾರ್ಥಿ, biology ನನ್ನ subject ಅಲ್ಲ ನನ್ನದು artsಉ, science ಅಲ್ಲ.

ರಾಜ : (ನಿಧಾನವಾಗಿ ನಿಶ್ಚಯದಿಂದ) ನಿನಗೆ ದಂಡನೆ ತಪ್ಪದು ... (ಚಿಂತನೆಯ ಗುಂಗಿನಲ್ಲಿ) ನಮ್ಮ ರಾಜ್ಯದಲ್ಲಿ ಎಷ್ಟು ದುಃಖವಿದೆ ! ಇಂತಹ ಕಾಲದಲ್ಲಿ, ವರುಷಕ್ಕೆ ನಾಲ್ಕು ಗಳಿಗೆ ಮೈಮರೆತು ಒಲವಿನಲ್ಲೂ ಗೀತದಲ್ಲೂ (ಕನಸಿನ ಜೇನಿನಲ್ಲಿ) ಮುಳುಗಿ ವಿಲಾಸಿಸಿದರೆ, ಅಷ್ಟಕ್ಕೇ ಮಾನವನಿಗೆ ಹೊಟ್ಟೆಕಿಚ್ಚೇ ?

ನಾದಬಿಂದು : (ಮುಂದುವರಿಸಿ ಭಾಷಣವನ್ನು ಮುಗಿಸುತ್ತ) ಇವೆಲ್ಲದರಿಂದ, ಪ್ರಭು ನಮ್ಮ ಜನಾಂಗದ ಮನೋಭಾವದಲ್ಲೇ ಒಂದು ಆಳವಾದ ನಿರಾಸೆ, ವಿಧಿವಾದ, ನಾಟಿ ನಿಂತಿದೆ. ಅದಕ್ಕೇ ನಮ್ಮ ಎಲ್ಲ ಕಲೆಯಲ್ಲೂ, ಎಂತಹ ಸಗ್ಗದ ಒಲವಿನಲ್ಲೂ ಕಣ್ಣೀರಿನ ಕಡಲಿನ ಅಲೆಬಡಿತದ ಮೊರೆ ! (ನಾದಬಿಂದುವಿನ ವಾಗ್ವೈಖರಿಗೆ ಆಸ್ಥಾನ ಮಾರ್ದನಿಸುತ್ತದೆ,)

ರಾಜ : (ಸ್ವಲ್ಪ ನೀರವನಾಗಿದ್ದು) ಈ ಮಾನವನನ್ನು ಅವನ ಕುಲದ ಹೆಸರಿನಲ್ಲಿ ದಂಡಿಸುವುದೇ .... ಸರಿ.

ರಾಮು : ಸ್ವಾಮಿ .... (ಅಂಗಲಾಚಿ) ದಯವಿಟ್ಟು ಮನ್ನಿಸಿ, ನಾನು ನಿರಪರಾಧಿ ಸಾಧು ! ನಮ್ಮ ನಾಡಿನಲ್ಲಿ ನಿಮ್ಮ ಪರವಾಗಿ ಚಳುವಳಿ ಹೂಡುತ್ತೇನೆ.

[ಸಭೆ ನಿಶ್ಶಬ್ದವಾಗಿದ್ದದ್ದು, ವಿಪರೀತ ಗದ್ದಲ ಮಾಡುತ್ತದೆ. — ಹಾಹಾಕಾರ]

ರಾಜ : ಇದೇನು ಹಾಹಾಕಾರ ? ಏನು ಹೊಸ ಆಪತ್ತು ?

ಶಬ್ದಾಧಿಕಾರಿ : (ಓಡಿ ಬಂದು) ಸ್ವಾಮೀ, ರಾಜ್ಯದ ಪಡುವಲ ಮೂಲೆಯಲ್ಲಿ ಯಾರೋ ಮನುಷ್ಯರು ವಿಷ ಹಾಕಿರುವಂತಿದೆ. ಅಲ್ಲಿನವರೆಲ್ಲ, ಮೈ ಕಣ್ಣು ಮೂಗೆಲ್ಲ ಉರಿ, ಉರಿ, ಎಂದು ಪೇಚಾಡುತ್ತಿದ್ದಾರೆ.

ರಾಮು : ಗಾಬರಿ) ಇದೇನಪ್ಪ ಬಂತು ! ಸರೋಜ ಸಾರು-ಗೀರು ತಂದು ಸುರಿದಿದಾಳೋ ಏನೋ? .... ಎಲ್ಲ ನನ್ನ ತಲೇಗೇ ಬಂತಲ್ಲಪ್ಪ what the devil ! ತಪ್ಪಿಸಿಕೊಂಡರೆ ಖಂಡಿತ ಚಳುವಳಿ, ' ಕಪ್ಪೆ ಸಹಾಯಸಂಘ ' ....

ರಾಜ : (ಪೂರ್ತಿ ರೇಗಿ) ದುರದೃಷ್ಟದ ಮಾನವ ! ನಮ್ಮ ತೀರ್ಪನ್ನು ಕೇಳು. ನಮ್ಮ ಕುಲಕ್ಕೆ, ನಿನ್ನ ಮಾತು ಸಂಗೀತ ಕರ್ಕಶ; ನಿನ್ನ ಇರವು ನಮ್ಮ ನೆಮ್ಮದಿಗೇ ಕುತ್ತು ! ಇಂದಲ್ಲದಿದ್ದರೆ ನಾಳೆ ಯುದ್ಧ ಸಿದ್ಧ. ಅದಕ್ಕೆ ಕುರುಹಾಗಿ ನಿನಗೆ ನಮ್ಮ ಶಬ್ದಯಂತ್ರದಲ್ಲಿ ಮರಣದಂಡನೆ ವಿಧಿಸಿದ್ದೇನೆ. ಈ ರಾಕ್ಷಸಮಾದರಿಯನ್ನು ಓಲಗದಿಂದ ತೊಲಗಿಸಿ ....

# ಎರಡು ಗುಹೆಗಳು

( ಕಾಲ್ಪನಿಕ ಖಂಡರೂಪಕ )

ಪಾತ್ರಗಳು

೧. ಸುತನುಕಾ — ( ಸುಮಾರು ೨೩ ವರ್ಷ )

೨. ಸುಸಂಗತಾ — ( ಸುಮಾರು ೨೦ ವರ್ಷ )

೩. ಕುಟ್ಟಿನಿ — ( ಸುಮಾರು ೬೦ ವರ್ಷ )

೪. ಚಂದ್ರಕೀರ್ತಿ — ( ಸುಮಾರು ೩೨ ವರ್ಷ )

೫. ಆಚಾರ್ಯ ಗರ್ಗದೇವ — ( ಸುಮಾರು ೭೦ ವರ್ಷ )

ಕಾಲ: ಕ್ರಿ. ಪೂ. ೨೫೦ರ ಸುಮಾರು.

ಸ್ಥಳ: ಮಗಧದಲ್ಲಿನ ಒಂದು ನಗರ.

ಸೂಚನೆಗಳು : ಪ್ರಸಾರವನ್ನು ದೃಷ್ಟಿಯಲ್ಲಿಟ್ಟುಕೊಂಡಿದೆ.

## ೧. ಸ್ಥಾಪನೆ

ಪ್ರಸಾರಕಿ : ... ನೀವು ಕೇಳುತ್ತಿರುವುದು ಸಾಯಂಕಾಲದ ವಾರ್ತಾಪ್ರಸಾರ... ಮಧ್ಯಪ್ರದೇಶದ ಸುರಜ್ ಜಿಲ್ಲೆಯ ರಾಮಘರ್ ಬೆಟ್ಟದಲ್ಲಿ ನಡೆದ ಸಂಶೋಧನೆಯೊಂದರ ವಿವರಗಳು ಈಗ ಹೊರಬಿದ್ದಿವೆ. ಈ ಸಂಶೋಧನೆಯಲ್ಲಿ ಅತ್ಯಂತ ಪ್ರಾಚೀನವಾದ ಭಾರತೀಯ ನಾಟ್ಯಗೃಹವೊಂದರ ಹಾಗೂ ವರ್ಣ-ರಂಜಿತ ಭಿತ್ತಿಚಿತ್ರಗಳಿಂದ ತುಂಬಿರುವ ಚಿತ್ರಗೃಹವೊಂದರ ಅವಶೇಷಗಳು ದೊರೆತು, ಪುರಾತನ ಭಾರತೀಯ ನಾಟ್ಯ ಹಾಗೂ ಚಿತ್ರಕಲೆಗಳ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲಿದಂತಾಗಿದೆ. ಈ ಸಂಶೋಧನೆಗಳನ್ನು ನಡೆಸಿದವರು ಡಾ. ಬ್ಲಾಕ್ ಎಂಬ ಪಾಶ್ಚಾತ್ಯ ವಿದ್ವಾಂಸರು.

ರಾಮಘರ್ ಬೆಟ್ಟದಲ್ಲಿ ಬಹು ಪುರಾತನವಾದ ದೇವಾಲಯಗಳೂ ಗುಹೆಗಳೂ ಅನೇಕವಿವೆ. ಅವುಗಳಲ್ಲಿ, ಅಲ್ಲಿನ ಜನ 'ಸೀತಾಬೆಂಗ' ಎಂದು ಕರೆಯುವ ಒಂದು ಗುಹೆಯನ್ನು ಪರೀಕ್ಷಿಸಿದಾಗ ಅದು ಪ್ರಾಚೀನಕಾಲದ ನಾಟ್ಯಗೃಹವೊಂದರ ಅವಶೇಷವೆಂದು ತಿಳಿದುಬಂದಿತು. ಅದರ ಆಯ-ಆಕಾರಗಳು ಹಾಗೂ ಪೀಠವೇದಿಕೆಗಳು ಭರತಮುನಿಯ 'ನಾಟ್ಯಶಾಸ್ತ್ರ'ದಲ್ಲಿ ವರ್ಣಿತವಾಗಿರುವ ರಂಗಮಂಟಪದ ಮಾದರಿಯನ್ನು ಸಂಪೂರ್ಣವಾಗಿ ಹೋಲುತ್ತವೆ.

ಗುಹೆಯ ಹಜಾರಕ್ಕೆ ಏರಿಹೋಗುವ ಮೆಟ್ಟಿಲುಗಳ ಬದಿಯಲ್ಲಿ ಒಂದು ಜೀರ್ಣಶಾಸನವೂ ದೊರೆತಿದೆ. ಶೌರಸೇನಿಗೆ ಸಮೀಪವಾದ ಪ್ರಾಕೃತಭಾಷೆಯ ಪದ್ಯಶಾಸನ ಅದು. ಶಾಸನದಲ್ಲಿ ಅಳಿದುಳಿದಿರುವ ಸಾಲುಗಳನ್ನು ಕೂಡಿಸಿ ಓದಿದರೆ ಅದರ ಅರ್ಥ ಹೀಗಿದೆ :

[ ಶ್ರಾವಕನ ಮನಸ್ಸಿನ ಮೃದುವಾದ ಭಾವವಿಕಾರಗಳನ್ನು ಸೂಚಿಸುವ ಹಿನ್ನೆಲೆಯ ವಾದನ ಆರಂಭವಾಗುತ್ತದೆ: ಮಂದ್ರತಾರಕಗಳ ಮಿಶ್ರಣದ, ಖಂಡಖಂಡವಾದ, ತಂತ್ರೀವಾದ್ಯದ ಚಂಚಲ ತಾನಗಳು. ]

ಪ್ರಸಾರಕಿ : (ಮುಂದುವರಿಸುತ್ತ) "... ಉಚ್ಚಪ್ರಕೃತಿಯ ಕವಿವರೇಣ್ಯರು .... ಹೃದಯವನ್ನು ಜ್ಯೋತಿರ್ಮಯಗೊಳಿಸುತ್ತಾರೆ ... ವಸಂತಪೂರ್ಣಿಮೆಯ ಆನಂದೋತ್ಸವದಂದು ಗಾಯನ ವಿನೋದಗೋಷ್ಠಿಗಳಲ್ಲಿ ಜನರು ಜಾತೀಪುಷ್ಪಗಳಿಂದ ಅಲಂಕೃತರಾಗಿ ನಲಿಯುತ್ತಾರೆ ... "

[ ಹಿನ್ನೆಲೆಯ ವಾದನ ಕ್ಷಯಿಸುತ್ತದೆ. ]

ಪ್ರಸಾರಕಿ : (ಮುಂದುವರಿಸುತ್ತ) ಈ ಶಾಸನದ ಭಾಷಾರೂಪ ಮತ್ತು ಇತರ ಆಧಾರಗಳಿಂದ ಈ ಗುಹೆ ಇಂದಿಗೆ ಸುಮಾರು ಎರಡು ಸಾವಿರದ ಇನ್ನೂರು ವರ್ಷಗಳ ಹಿಂದೆ ನಿರ್ಮಿತವಾದುದೆಂದು ನಿರ್ಧರಿಸಲಾಗಿದೆ.

" ಸೀತಾಬೆಂಗ " ಗುಹೆಯ ನೈಋತ್ಯ ಭಾಗದಲ್ಲಿ ಸುಮಾರು ನೂರು ಅಡಿ ಸಮೀಪಕ್ಕೆ ಮತ್ತೊಂದು ಗುಹೆಯಿದೆ. ಇದನ್ನು ಅಲ್ಲಿನ ಜನ 'ಜೋಗಿಮಾರ' ಎಂದು ಕರೆಯುತ್ತಾರೆ. ಈ ಗುಹೆಯ ಒಳಗೆ ಸುಂದರವಾದ ಅನೇಕಾನೇಕ ವರ್ಣರಂಜಿತ ಭಿತ್ತಿಚಿತ್ರಗಳಿವೆ. ಈ ಗುಹೆಯೂ 'ಸೀತಾಬೆಂಗ'ದ ಕಾಲದಲ್ಲಿಯೇ ನಿರ್ಮಿತವಾದುದೆಂದು ಸಿದ್ಧವಾಗಿರುವುದರಿಂದ, ಈಗ ದೊರೆತಿರುವ ಭಾರತೀಯ ಭಿತ್ತಿಚಿತ್ರಗಳಲ್ಲೆಲ್ಲ ಇವೇ ಅತ್ಯಂತ ಪುರಾತನವಾದವುಗಳಾಗಿವೆ.

'ಸೀತಾಬೆಂಗ'ದ ಶಾಸನ ರಚಿತವಾದ ಕಾಲದಲ್ಲೆ ರಚಿತವಾದ ಮತ್ತೊಂದು ಶಾಸನ " ಜೋಗಿಮಾರ " ಗುಹೆಯಲ್ಲಿ ದೊರೆತಿದೆ ...

[ ಪುನಃ, ಪೂರ್ವೋಕ್ತ ರೀತಿಯ ವಾದ್ಯತಾನಗಳು ವೃದ್ಧಿಸಿ ಬರುತ್ತವೆ. ]

ಪ್ರಸಾರಕಿ : (ಮುಂದುವರಿಸುತ್ತ) ಅದು ದೇವದತ್ತ ಎಂಬ ಅಲ್ಲಿನ ಪ್ರಸಿದ್ಧ ರೂಪದಕ್ಷ – ಅಥವಾ ಚಿತ್ರಕಾರ – ನ ಹಾಗೂ ಸುತನುಕಾ ಎಂಬ ಪ್ರಸಿದ್ಧ ನರ್ತಕಿಯ ಹೆಸರುಗಳನ್ನು ಉಲ್ಲೇಖಿಸುತ್ತದೆ. ಶಾಸನ ಜೀರ್ಣವಾಗಿದ್ದು ಅದರಲ್ಲಿ ಮತ್ತಾವ ವಿವರಗಳೂ ತಿಳಿಯದಂತಿವೆ ...

[ಕೊನೆಯ ಸಾಲು ಕ್ಷೀಣಿಸುತ್ತ ಹೋಗಿ ಕೊನೆಯಲ್ಲಿ ಅಶ್ರಾವ್ಯವಾಗುತ್ತದೆ. ಚಂಚಲ ತಾನಗಳು ವೃದ್ಧಿಸಿ ಮುನ್ನೆಲೆಯಲ್ಲಿ ವಿಜೃಂಭಿಸಲಾರಂಭಿಸುತ್ತವೆ: ಶ್ರಾವಕನ ಭಾವಲಹರಿಯ ಪ್ರತೀಕವಾದ ವಾದನ: ಕುಣಿವ ಕುಪ್ಪಳಿಸುವ ಏರುವ ಹಾರುವ ಚಿತ್ರತಾನಗಳು ಅಲೆಯಲೆಯಾಗಿ ಬಂದು ಒಮ್ಮೆಲೆ ಬೃಹದಾಕಾರವಾಗಿ, ಮಗುಚಿ, ಪುನಃ ಹಠಾತ್ತಾಗಿ ನಿಂತುಬಿಡುತ್ತವೆ. ಕ್ಷಣ ನೀರವ.

ಮತ್ತೆ— ವೃದ್ಧಿಸಿ ಬರುವ ತೀವ್ರಗತಿಯ ಲಾಸ್ಯದ ಕಿಂಕಿಣೀಝಣತ್ಕೃತಿ; ಅದನ್ನು ಹಿನ್ನೆಲೆಗೆ ಸರಿಸಿ ವೃದ್ಧಿಗೊಳ್ಳುವ, ಆನಂದೋತ್ಸವದ ಅನೇಕ ರಾಗ ತಾಲಗಳ ವಿಚಿತ್ರ ಮಿಶ್ರಣ; ಹೆಣ್ಣು ಗಂಡುಗಳ ಅಸ್ಪಷ್ಟ ಹರ್ಷಧ್ವನಿಗಳು, ಖಂಡಗಾಯನಗಳು, ಸಾಧುವಾದಗಳು; ಇವುಗಳ ಮಥನದಿಂದ ಹುಟ್ಟಿತೆಂಬಂತೆ ತೋರುವ ಕೇಂದ್ರಸ್ಥಿತವಾದ ಸ್ತ್ರೀಕಂಠವೊಂದರ ಮಾರ್ದವಪೂರ್ಣವಾದ ಆಲಾಪನ.* .... ಆನಂದೋತ್ಸವದ ಉತ್ಸಾಹ ಹಿಂದೆ ಸರಿದು ಸ್ತ್ರೀಕಂಠದ ಮೃದು ಆಲಾಪನವೊಂದೇ ಕ್ಷಣಕಾಲ ಶ್ರವಣಕೇಂದ್ರದಲ್ಲಿ ವಿಹರಿಸಿ ಮುಕ್ತಾಯಗೊಳ್ಳುತ್ತದೆ.

ಅನಂತರ— ನೂಪುರಗಳನ್ನು ಸರಿಪಡಿಸಿಕೊಳ್ಳುತ್ತಿರುವ ಸದ್ದು. ]

## ೨. ಸಾಯಂಸಂಧ್ಯೆಯೆಂಬ ಪ್ರಥಮದೃಶ್ಯ

[ ಆರಂಭದಲ್ಲಿ ನೂಪುರಗಳನ್ನು ಸರಿಪಡಿಸಿಕೊಳ್ಳುತ್ತಿರುವ ಸದ್ದು ]

**ಸುತನುಕಾ :** ಸುಸಂಗದೆ ...

* ಈ ಆಲಾಪನೆಯ ಮೂಲ ಗೀತ ಪ್ರಾಯಃ ಹೀಗೆ :
'ಸರಸವಸಂತೇ ಸಾಯಂಕಾಲೇ ಜ್ಯೋತ್ಸ್ನಾಮೃತರಸವರ್ಷೇ।
ಕೋಕಿಲಕೂಜನಸಿಂಚಿತಚಂಚಲ ಮಾರುತ ಹರ್ಷೋತ್ಕರ್ಷೇ।' ಇತ್ಯಾದಿ.

ಸುಸಂಗತಾ : (ಒಳಗಿನಿಂದ) ಬಂದೆ ಅಜ್ಜುಕಾ ...

[ ಹೆಜ್ಜೆಯ ಸದ್ದು ವೃದ್ಧಿಸುವುದು. ]

ಸುಸಂಗತಾ : (ಅತ್ಯಾಶ್ಚರ್ಯದಿಂದ) ಅಜ್ಜುಕಾ !

ಸುತನುಕಾ : (ಮೆಲುನಗೆಯೊಡನೆ) ಅಷ್ಟೊಂದು ಆಶ್ಚರ್ಯ !

ಸುಸಂಗತಾ : ಈ ಅಲಂಕಾರದಲ್ಲಿ ನಿನ್ನ ಸೌಂದರ್ಯ ಎಷ್ಟು ಅದ್ಭುತವಾಗಿದೆ ಅಜ್ಜುಕಾ !

ಸುತನುಕಾ : ಹೀಗೆಯೇ ಸ್ತೋತ್ರಮಾಡುತ್ತ ನಿಂತಿರುತ್ತೀಯಾ ?

ಸುಸಂಗತಾ : ಅಶೋಕಮಾಲಿಕೆಯಲ್ಲವೆ ?

ಸುತನುಕಾ : (ನಕ್ಕು) ಈ ಅಲಂಕಾರಕ್ಕೆ ಅಶೋಕ !—ಹಲಾ, ನಿನಗೆ ಅಲಂಕಾರ ಸಂಗ್ರಹದ ಶಿಕ್ಷೆ ಸಾಲದು. ದತ್ತಕನ 'ಅಲಂಕಾರಪ್ರಕರಣ'ವನ್ನು ಮತ್ತೊಮ್ಮೆ ಪಾಠಮಾಡಿಸಬೇಕು. ... ಹೋಗು : ಶಿರೀಷಮಾಲಿಕೆ, ಸಂಗಡ ಮಂದಾರದ ಶೇಖರಕ.

[ ಹೆಜ್ಜೆ ಕ್ಷಯಿಸುವುದು. ನೂಪುರಗಳ ಸದ್ದಿನಿಂದ ಸುತನುಕಾ ನಾಲ್ಕು ಹೆಜ್ಜೆ ದೂರ, ಪ್ರಾಯಃ, ವಾತಾಯನದ ಬಳಿ— ಹೋದದ್ದು ಸೂಚಿತವಾಗುತ್ತದೆ. ಪೂರ್ವೋಕ್ತ ಆಲಾಪನವನ್ನು ಆಕೆ ತುಟಿಯೊಳಗೇ ಹೇಳಿಕೊಳ್ಳುತ್ತಿರುವುದು ಕೇಳಿಸುತ್ತದೆ. ಪುನಃ ಸುಸಂಗತಾಳ ಹೆಜ್ಜೆ ವೃದ್ಧಿಸಿದಂತೆ ಆಲಾಪನ ನಿಲ್ಲುತ್ತದೆ. ನೂಪುರಶಬ್ದ ಆಕೆ ಪೀಠಕ್ಕೆ ಮರಳಿದುದನ್ನು ಸೂಚಿಸುತ್ತದೆ. ]

ಸುತನುಕಾ : ( ಮರಳುತ್ತ, ಅರ್ಧ ತನ್ನಲ್ಲೆ ) ವಸಂತಪೂರ್ಣಿಮೆಗೆ ಯಥಾಯೋಗ್ಯವಾದ ಸಂಧ್ಯೆ !

ಸುಸಂಗತಾ : ( ಅರೆನಗುವಿನೊಡನೆ ) ಇಂದಿನ ಪ್ರಾತಸ್ಸಂಧ್ಯೆ ಮಾತ್ರ ವಸಂತ ಪೂರ್ಣಿಮೆಗೆ ಅಯೋಗ್ಯವಾಗಿತ್ತು !

[ ಸುತನುಕಾ ಪೀಠದಲ್ಲಿ ಕುಳಿತ ಸದ್ದು. ]

ಸುಸಂಗತಾ : ತೊಡಿಸಲೆ ಅಜ್ಜುಕಾ ?

ಸುತನುಕಾ : ಹ್ಞು ... ಶೇಖರಕವನ್ನಿಲ್ಲಿ ಕೊಡು.

ಸುಸಂಗತಾ : ಪ್ರಾತಃಕಾಲದಿಂದ ನೀನು ಅಸ್ವಸ್ಥಳಾಗಿದ್ದುದನ್ನು ಕಂಡು ನಾನು ಎಷ್ಟು ಭೀತಳಾಗಿದ್ದೆ !

ಸುತನುಕಾ : ಈಗ ?

ಸುಸಂಗತಾ : ಈಗ ಸ್ವಸ್ಥಳಾಗಿದ್ದೀಯೆ, ಮಾತ್ರವಲ್ಲ, ಉಲ್ಲಸಿತಳಾಗಿದ್ದೀಯೆ, ಉತ್ಸಾಹಿತಳಾಗಿದ್ದೀಯೆ.

ಸುತನುಕಾ : ವಸಂತಪೂರ್ಣಿಮೆಯ ಪ್ರಭಾವ ಮತ್ತು ಪ್ರಾಯಶಃ ಈ ನೇಪಥ್ಯದ

ಪರಿಣಾಮ.

ಸುಸಂಗತಾ : ... ಅಜ್ಜುಕಾ, ಇಂದು ನೀನು ಈ ವಸಂತಾಲಂಕಾರವನ್ನು ಧರಿಸುವುದಿಲ್ಲವೆಂದಾಗ ನನಗೆ ಎಷ್ಟು ಖೇದವಾಗಿತ್ತು ಬಲ್ಲೆಯಾ ?

ಸುತನುಕಾ : ನಗರದ ರಸಿಕ ಶಿಖಾಮಣಿಗಳಿಗೆ ರಾತ್ರಿ ಆಗಬಹುದಾಗಿದ್ದ ಖೇದ ಕ್ಕಿಂತ ?

ಸುಸಂಗತಾ : ಪರಿಹಾಸ ಮಾಡುತ್ತಿದ್ದೀಯೆ ಅಜ್ಜುಕಾ. ಆದರೆ ಈ ಗ್ರಾಮಬಾಲಿಕೆಗೆ ಇದೇ ದೊಡ್ಡ ಸಂಪತ್ತು ... ಹೆಚ್ಚು ನೋಡಿದವಳಲ್ಲ, ಆದರೂ ನನಗೆ ದೃಢ ವಿದೆ : ಇಂಥ ಅಮೂಲ್ಯ ಅಲಂಕಾರ ಇನ್ನಾವುದೇ ನರ್ತಕಿಯಲ್ಲಿಯೂ ಇರ ಲಾರದು ... ಇಂಥ ಗಂಧರ್ವಸಮಾನವಾದ ವಸಂತನೇಪಥ್ಯದಲ್ಲಿ ನಿನ್ನನ್ನು ನೋಡುವುದು ಸಂವತ್ಸರದಲ್ಲಿ ಒಮ್ಮೆ ಮಾತ್ರವಲ್ಲವೆ ? ... ದೇವರು ನನಗೆ ಸ್ತ್ರೀಜನ್ಮವನ್ನು ಕೊಟ್ಟರೂ ಅಸೂಯೆಯನ್ನಾಗಲಿ, ಅದಕ್ಕೆ ಮೂಲವಾದ ಸಂಪತ್ತನ್ನಾಗಲಿ ಕೊಡಲಿಲ್ಲ ಅಜ್ಜುಕಾ ! ...

ಸುತನುಕಾ : ಮುಗ್ಧೆ, ಈ ನೇಪಥ್ಯದಲ್ಲಿ ನನಗೆ ಅಭಿಮಾನವಿಲ್ಲವೆಂದು ಭಾವಿಸಿದೆ ಯೇನು ? ನನ್ನ ಜೀವನದಲ್ಲಿ ನರ್ತನ ಕೂಡ ಎಷ್ಟೋ ವೇಳೆ ಕೊಡಲಾರದ ರಸಾನುಭೂತಿಯನ್ನು ಈ ಅಲಂಕಾರ ಕೊಟ್ಟಿದೆ ... ಐದು ವರ್ಷಗಳ ಹಿಂದೆ ಈ ಅಲಂಕಾರವನ್ನು ಸಿದ್ಧ ಮಾಡಿಸಿದಾಗ ಆಗಿನ ನನ್ನ ಸಂಪತ್ತೆಲ್ಲವನ್ನೂ ನೀರಿನಂತೆ ವ್ಯಯ ಮಾಡಿದ್ದೇನೆ. ಮೌಲ್ಯವೊಂದೇ ಅಲ್ಲ ಸುಸಂಗದೆ ; ಈ ಅಲಂಕಾರ ಕಲ್ಪನೆಗೆ ರೂಪದಕ್ಷ ದೇವದತ್ತರು ಎಷ್ಟು ಶ್ರಮ ವಹಿಸಿದ ರೆಂಬುದು ನನಗೊಬ್ಬಳಿಗೆ ಗೊತ್ತು ... ಇನ್ನಾರು ಇಂಥ ಅಲಂಕಾರವನ್ನು ಕಲ್ಪಿಸಬಲ್ಲರು ? ನೇಪಥ್ಯದಲ್ಲಿ ಆಕೃತಿಕಲ್ಪನವೆಂಬ ನೂತನ ಅಂಶವನ್ನು ಇಂದು ಅನ್ಯರು ಅರ್ಥಮಾಡಿಕೊಳ್ಳುವುದೂ ಅಸಾಧ್ಯ.

ಸುಸಂಗತಾ : ಆರ್ಯ ದೇವದತ್ತರು ಪ್ರಥಮ ತಮ್ಮ ಸ್ನೇಹದಿಂದ ಹೆಣೆದ ಈ ಅಲಂಕಾರವನ್ನು ಅನಂತರ ವರ್ಷವರ್ಷವೂ ತಮ್ಮ ಸ್ಪರ್ಧೆಯ ಝುಳದಿಂದ ಉಜ್ವಲಗೊಳಿಸುತ್ತಿದ್ದಾರೆ, ಅಲ್ಲವೆ ?

ಸುತನುಕಾ : (ಮೃದುಹಾಸದೊಡನೆ) ನನ್ನ ಮಾತನ್ನೆ ನನಗೆ ಪ್ರಯೋಗಿಸುತ್ತಿದ್ದೀಯೆ!

ಸುಸಂಗತಾ : ಸ್ಮರಿಸಿಕೊಡುತ್ತಿದ್ದೇನೆ.

ಸುತನುಕಾ : ನನ್ನ ಪ್ರಖ್ಯಾತ ಜೀವನದ ಐದು ವಸಂತಪೂರ್ಣಿಮೆಗಳ ಯಶಃಶ್ರೀ ಯಿಂದ ಈ ನೇಪಥ್ಯ ಅನರ್ಘ್ಯವಾಗಿದೆ.

ಸುಸಂಗತಾ : ಅಲ್ಲದಿದ್ದರೆ, ಕಳೆದ ಸಂವತ್ಸರದಲ್ಲಿ ಈ ಅಲಂಕಾರ ಚೋರರಿಂದ ಅಪಹೃತವಾದಾಗ ಅದನ್ನು ಶೋಧಿಸಲು ನಿನ್ನ ಅರ್ಧ ಸಂಪತ್ತನ್ನೆ ವ್ಯಯ ಮಾಡುತ್ತಿದ್ದೆಯಾ ?

ಸುತನುಕಾ : ( ನಕ್ಕು ) ಹ್ಞಾ, ಕಳೆದ ವರ್ಷದ ಮಾಘ ಅಮಾವಾಸ್ಯೆ ಇನ್ನೂ

ನಿನ್ನ ಸ್ಮರಣೆಯಲ್ಲಿದೆ ! ಇಂದು ಆ ಸ್ಮರಣೆ ಬಂದಾಗಲೇ ಈ ಅಲಂಕಾರವನ್ನು ಧರಿಸುವ ಧೃಢವಾಯಿತು.

**ಸುಸಂಗತಾ :** ಸಂಧ್ಯಾಕಾಲ ಸಮೀಪವಾದಂತೆ ಎಲ್ಲವೂ ಶುಭ್ರಮುಖವಾಗುತ್ತಿವೆ... ಅಜ್ಜುಕಾ, ಈ ಎಲ್ಲ ಶುಭಗಳೂ ಇಂದಿನ ರಾತ್ರಿಯ ನಿನ್ನ ನರ್ತನಪ್ರಯೋಗದ ಅದ್ಭುತ ಯಶಸ್ಸನ್ನೆ ಸೂಚಿಸುತ್ತವೆ.

**ಸುತನುಕಾ :** ಮುಗ್ಧೆ ಜನ್ಮನಕ್ಷತ್ರದಲ್ಲೆ ಯಶಸ್ಸಿನ ಶುಭವನ್ನು ತಂದವಳು ನಾನು !

**ಸುಸಂಗತಾ :** ಆದರೆ ಪ್ರಾತಃಕಾಲದಿಂದ ನೀನು ಅಸ್ವಸ್ಥಳಾಗಿದ್ದುದನ್ನು ಕಂಡು ನಾನೇನು ತರ್ಕಿಸಿದೆ ಗೊತ್ತೆ ಅಜ್ಜುಕಾ ? ನರ್ತನದ ಭೀತಿಯಿಂದಲೇ ನಿನಗೆ ಅಸ್ವಸ್ಥತೆ ಉಂಟಾಯಿತೆಂದು.

**ಸುತನುಕಾ :** ( ವಿಹಸಿತದೊಡನೆ ) ಭಲಾ !

**ಸುಸಂಗತಾ :** ಸತ್ಯ ಅಜ್ಜುಕಾ. ಭರತಾಚಾರ್ಯರೇ ಹೇಳಲಿಲ್ಲವೆ, ಆರ್ಯಾವರ್ತದಲ್ಲಿ ಈ ಪರ್ಯಂತ ಇಂಥ ಜಟಿಲನರ್ತನ ವಿಧಾನವನ್ನು ಯೋಜಿಸಿದವರಿಲ್ಲವೆಂದು?

**ಸುತನುಕಾ :** ನೀನು ಇಲ್ಲಿಗೆ ಬಂದು ಎಷ್ಟು ವರ್ಷಗಳಾದವು ಹಲಾ ?

**ಸುಸಂಗತಾ :** ಏಕೆ, ಮೂರು ವರ್ಷಗಳಾಯಿತಲ್ಲವೆ ?

**ಸುತನುಕಾ :** ಈ ಮೂರು ವಸಂತಪೂರ್ಣಿಮೆಗಳಲ್ಲೂ ನನ್ನ ನರ್ತನವನ್ನು ನೋಡಿದ್ದೀಯೆ.

**ಸುಸಂಗತಾ :** ನಿಜ ಅಜ್ಜುಕಾ. ಈ ಮೂರು ವಸಂತಪೂರ್ಣಿಮೆಗಳಲ್ಲೂ ನಾನು ಇಂಥದೇ ಮಾತು ಹೇಳಿದ್ದೇನೆ ; ನನ್ನ ಭಯವನ್ನು ನಿನ್ನಲ್ಲಿ ಕಾಣಲೆತ್ನಿಸಿದ್ದೇನೆ. ನೀನು ಮಾತ್ರ — ಈ ಮೂರು ವರ್ಷಗಳಲ್ಲಿ ಹಿಂದಿನ ಐದು ವರ್ಷಗಳಿಂದಲೂ ಹೀಗೇ ಸ್ಪರ್ಧಿಸಿ ಯಶಸ್ಸು ಪಡೆದಿದ್ದೀಯೆ... ಆದರೂ ಇಂದಿನ ಪ್ರಯೋಗ ಜಟಿಲ ಮಾತ್ರವಲ್ಲ, ಅಪಾಯಕಾರಿಯೂ ಆಗಿದೆಯೆಂದು ಭರತಾಚಾರ್ಯರೇ ಸ್ವತಃ ಹೇಳಿದ್ದಾರಲ್ಲವೆ ?

**ಸುತನುಕಾ :** ಹಲಾ, ನಿಶ್ಚಯವಾಗಿಯೂ ಇಂದಿನ ನನ್ನ ಅಲಂಕಾರ ಅದ್ಭುತವಾಗಿದೆಯೆ ?

**ಸುಸಂಗತಾ :** ಪುನಃ ಹಾಸ್ಯ !

**ಸುತನುಕಾ :** ಹಾಸ್ಯವಲ್ಲ ಸುಸಂಗದೆ .... ಆ ಅದ್ಭುತವನ್ನು ನಿನ್ನ ಮುಖದಿಂದಲೇ ಕೇಳಿ ತೃಪ್ತಿಹೊಂದಲೆ ?

**ಸುಸಂಗತಾ :** ನನ್ನ ಮುಖದಿಂದ ಏಕೆ, ರಾತ್ರಿ ಮಗಧದ ರಸಿಕ ಶ್ರೀಮಂತರ ಮುಖದಿಂದಲೇ ಕೇಳಿ ತೃಪ್ತಿಹೊಂದುವೆ.

**ಸುತನುಕಾ :** ನನಗೆ ಈಗಲೇ ಚಪಲ !

**ಸುಸಂಗತಾ :** ಸಾಕ್ಷಿಗೆ ಯಾರನ್ನು ಕರೆತರಲಿ ?

**ಸುತನುಕಾ :** ನಿನಗೆ ನೇಪಥ್ಯಾಲಂಕಾರದಲ್ಲಿ ಮಾತ್ರವಲ್ಲ, ಕಾವ್ಯಾಲಂಕಾರದಲ್ಲಿಯೂ

ಶಿಕ್ಷೆ ಬೇಕು ! .... ಮಣಿದರ್ಪಣ ತರುತ್ತೀಯಾ ?

ಸುಸಂಗತಾ : ಓ, ಅದಕ್ಕಾಗಿ ಇಷ್ಟು ವೃತ್ತವರ್ತನ ! ತರುತ್ತೇನೆ ಅಜ್ಜುಕಾ.

[ ಹೆಜ್ಜೆ ಕ್ಷಯಿಸುತ್ತದೆ ; ಕ್ಷಣಾರ್ಧ ಮೌನ ; ಹೆಜ್ಜೆ ವೃದ್ಧಿಸುತ್ತದೆ. ]

ಸುಸಂಗತಾ : ( ಪ್ರವೇಶಿಸುತ್ತ ).... ನನಗೆ ಒಂದು ಸಂದೇಹ ಅಜ್ಜುಕಾ....

ಸುತನುಕಾ : ನನ್ನ ಸಂದೇಹವನ್ನು ಮೊದಲು ಪರಿಹರಿಸಿಕೊಳ್ಳುತ್ತೇನೆ, ಆ ದರ್ಪಣವನ್ನಿಲ್ಲಿ ತಾ.

ಸುಸಂಗತಾ : ನೋಡು ಅಜ್ಜುಕಾ, ನಾನು ಹೇಳಿದುದು ಸತ್ಯವೆ ?

ಸುತನುಕಾ : ನಿಷ್ಕಾರಣ ಅಸತ್ಯ ನುಡಿಯಬಲ್ಲ ಕವಿತಾಶಕ್ತಿ ನಿನಗೆಲ್ಲಿಂದ ಬರಬೇಕು, ಪಾಪ ! .... ಈಗ ಹೊರಡಲಿ ನಿನ್ನ ಸಂದೇಹ.

ಸುಸಂಗತಾ : ನೀನು ಪೂರ್ವಾಹ್ನದಲ್ಲಿ ನಿರಾಕರಿಸಿದವಳು ಅನಂತರ ಈ ಅಲಂಕಾರವನ್ನು ಧರಿಸಿದೆ, ಅಸ್ವಸ್ಥಳಾಗಿದ್ದವಳು ಉಲ್ಲಸಿತಳಾದೆ....

ಸುತನುಕಾ : ಭಲಾ, ಮುಕ್ತವಿಷಯಗ್ರಹಣಾಲಂಕಾರ !.... ಮುಂದೆ ?

ಸುಸಂಗತಾ : ಈ ಪರಿವರ್ತನೆಗೆಲ್ಲ ನಾನೇ — ಈ ಮುಗ್ಧಳೇ — ಕಾರಣಳಿರಬೇಕು ಎಂಬ ಅನುಶಯ ನನಗೆ.

ಸುತನುಕಾ : ಅಭಿನಂದನ ... ಅಲ್ಲ, ಅಭಿವಂದನ !

ಸುಸಂಗತಾ ! ಎರಡು ಘಳಿಗೆಗಳ ಹಿಂದೆ ನಾನೇ ಅಲ್ಲವೆ, ನಿನಗೆ ನಿನ್ನ ಪ್ರತಿಸ್ಪರ್ಧಿ ರೂಪದಕ್ಷ ದೇವದತ್ತರ ಪುನರಾಗಮನದ ವಾರ್ತೆ ತಿಳಿಸಿದವಳು ?

ಸುತನುಕಾ : ಅವರ ಪುನರಾಗಮನದ ವಾರ್ತೆ ತಿಳಿದೇ ನಾನು ಉಲ್ಲಸಿತಳಾದೆನೆಂದು ನಿನ್ನ ಅನುಶಯವಲ್ಲವೆ ? .... ಸತ್ಯ. ಅವರು ಅಂದು ಇಲ್ಲಿಂದ ಅಜ್ಞಾತವಾಗಿ ಪಲಾಯನಮಾಡಿದಾಗ ನಾನು ರೋದಿಸುತ್ತ ಕುಳಿತಿದ್ದೆನಲ್ಲ !

ಸುಸಂಗತಾ : ಅ .... ಅ .... ಹಾಗಲ್ಲ ಅಜ್ಜುಕಾ, .... ಕೇವಲ ವಿನೋದಕ್ಕಾಗಿ ಹೊಂದಿಸಿದೆ....

ಸುತನುಕಾ : ( ಸ್ವಲ್ಪಕಾಲ ಮೌನವಾಗಿದ್ದು ) ಅಥವಾ ವಿನೋದವೇಕೆ, ಅದೇ ವಸ್ತುಸ್ಥಿತಿಯಿರಬಹುದು.

ಸುಸಂಗತಾ : ನಿನ್ನ ಪಾದದಾಣೆ ಅಜ್ಜುಕಾ, ನಾನು ಹೇಳಿದುದು ಹಾಸ್ಯಕ್ಕಾಗಿ....

ಸುತನುಕಾ : ಬಾಲಿಕೆ, ಹಾಸ್ಯವಲ್ಲ. ಪ್ರಾಯಶಃ, ವಾಸ್ತವಾಂಶಗಳಲ್ಲಿ ಅದೂ ಒಂದು .... ಜೀವನದ ಕ್ಷಣಕ್ಷಣಗಳನ್ನೂ ನ್ಯಾಸವಾಗಿಟ್ಟು ದೀರ್ಘಕಾಲ ಸಾಧಿಸಿದ ಇಂಥ ದಿವ್ಯನೃತ್ಯವನ್ನು ಈ ವೈಭವಾಕಾಂಕ್ಷಿ – ಯುದ್ಧಪ್ರಿಯ ಪ್ರಭುಗಳ ವಿಲಾಸಕ್ಕಾಗಿ ಅಥವಾ ರಸಿಕಂಮನ್ಯರಾದ ಮಗಧದ ಮೂರ್ಖ ಶ್ರೀಮಂತರಿಗಾಗಿ ಪ್ರಯೋಗಿಸುತ್ತಿರುವೆನೆಂದು ಭಾವಿಸಿದೆಯಾ ? — ಹಾಗಿದ್ದರೆ ಈ ಸುತನುಕಾಳ ಪಾದಕಿಂಕಿಣೀಯೋಗ ಪರಿಸಮಾಪ್ತಿಗೊಂಡು

ಎಷ್ಟೋ ವರ್ಷಗಳಾಗಿರುತ್ತಿದ್ದವು .... ನಾನು ನರ್ತಿಸುವುದು ನನ್ನ ಸಮಾನ ಸ್ಪರ್ಧಿಗಳಾದ ಆರ್ಯ-ದೇವದತ್ತರು ಆಶ್ಚರ್ಯಮೂಕರಾಗುವ ಸಲುವಾಗಿ, ಆಚಾರ್ಯ ಗರ್ಗದೇವರು ಅಭಿಮಾನಪೂರ್ಣರಾಗಿ ಸಾಧುವಾದ ಮಾಡುವ ಸಲುವಾಗಿ, ಕವಿ ಚಂದ್ರಕೀರ್ತಿಭಾನುದತ್ತರು ಆರ್ದ್ರನಯರಾಗಿ ಶಿರಃಸಮ್ಮತ ಸೂಚಿಸುವ ಸಲುವಾಗಿ.

[ ಒಳಗಿನಿಂದ ಕೂಗು : ಕುಟ್ಟನಿ ! ಸುಸಂಗದೆ ! ... ಏ ಮೂರ್ಖೆ ! ... ]

ಸುತನುಕಾ : ಅಂಬ ಇಷ್ಟು ಬೇಗ ಜಾಗ್ರೃತಳಾಗಿಬಿಟ್ಟಳೆ ? — ವಸಂತಪೂರ್ಣಿಮೆಯ ವೈಚಿತ್ರ್ಯವಿರಬೇಕು !... ಹೋಗು, ಮತ್ತೆ ಹೇಷಾರವ ಆರಂಭವಾದೀತು.

[ ಹೆಜ್ಜೆಯ ಸದ್ದು ಕ್ಷಯಿಸುವುದು. ಅನಂತರ, ಮತ್ತೊಂದು — ಸುತನುಕಾಳದು ಹೆಜ್ಜೆ ತುಸು ದೂರ ಹೋಗಿ — ಪ್ರಾಯಃ ದ್ವಾರದ ಬಳಿ — ನಿಂತುದನ್ನು ಸೂಚಿಸುವ ನೂಪುರರವ. ಅಲ್ಲಿಂದಲೇ —

ಸುತನುಕಾ : ಬಂಧುಲ ...

ಬಂಧುಲ : ( ಹೊರಗಿನಿಂದ ) ತಾಯಿ ....

ಸುತನುಕಾ : ಜತ್ತಗನಿಗೆ ತಿಳಿಸು : ಇನ್ನೊಂದು ಘಳಿಗೆಗೆ ರಥ ಸಿದ್ಧವಾಗಿರಲಿ.

ಬಂಧುಲ : ಆಗಲಿ ತಾಯಿ.

[ ಪುನಃ ಸುತನುಕಾ ಸ್ವಸ್ಥಾನಕ್ಕೆ ಮರಳಿದುದನ್ನು ಸೂಚಿಸುವ ನೂಪುರದ ಸದ್ದು. ಅನಂತರ ವೃದ್ಧಿಸುವ–ಸುಸಂಗತಾಳ–ಹೆಜ್ಜೆಯ ಸದ್ದು. ]

ಸುಸಂಗತಾ : ಹ್ಞು ! ಎಂತೆಂತಹ ವಿಲಕ್ಷಣ ಪುರುಷರಿರುತ್ತಾರೆ ಈ ಲೋಕದಲ್ಲಿ !

ಸುತನುಕಾ : ಸ್ವಗತವೊ ಆಕಾಶಭಾಷಿತವೊ ? ...

ಸುಸಂಗತಾ : ಇಲ್ಲ ಅಜ್ಜುಕಾ. ಅತ್ತಿಯೂ ಈಗ ಮಾತ್ರ ಎದ್ದಳು. ನಿನ್ನ ಸ್ವಸ್ಥತೆಯನ್ನು ಪ್ರಶ್ನಿಸಿದಳು. ಈಗ ಉಲ್ಲಸಿತಳಾಗಿದ್ದಾಳೆ ಎಂದೆ ... ಪ್ರಸಾಧನ ಸಾಹಿತ್ಯಗಳನ್ನು ತೆಗೆದುಕೊಟ್ಟು ಬಂದೆ.

ಸುತನುಕಾ : ... ಅದಾಯಿತು, ಮತ್ತೇನೋ ನಿನ್ನೊಳಗೆ ಆಡುತ್ತ ಬಂದೆಯಲ್ಲ ...

ಸುಸಂಗತಾ : ಅದೇ ರೂಪದಕ್ಷ ದೇವದತ್ತರನ್ನು ಕುರಿತು ಚಿಂತಿಸುತ್ತಿದ್ದೆ ... ಎಂತಹ ವಿಲಕ್ಷಣ ಪುರುಷ ! ... ಈ ವಯಸ್ಸಿನಲ್ಲೆ ಅವರ ಪ್ರತಿಭೆಯೇನು, ಪ್ರಸಿದ್ಧಿಯೇನು ! ... ಕಾಶ್ಮೀರದ ಪ್ರಖ್ಯಾತ ರೂಪದಕ್ಷ ಭದ್ರಸೇನರು ಇವರ ರೂಪಕಲ್ಪನಗಳನ್ನು ನೋಡಿ ‘ ಆರ್ಯಾವರ್ತದಲ್ಲಿ ಅದ್ವಿತೀಯ ರೂಪದಕ್ಷನೆಂಬ ನನ್ನ ಕೀರ್ತಿ ಇಂದು ಈ ವೃದ್ಧಾಪ್ಯದಲ್ಲಿ ಕುಮಾರ ದೇವದತ್ತನಿಂದ ಪರಾಭವ ಹೊಂದಿತು ’ ಎಂದು ಪ್ರಶಂಸಿಸಿರುವಾಗ ! .... ಅಧಿಕಪ್ರಸಂಗವೆ ಅಜ್ಜುಕಾ ? ...

ಸುತನುಕಾ : ಅಪಾತ್ರವಲ್ಲದ ಕಿರ್ತನ ಅಧಿಕಪ್ರಸಂಗವಲ್ಲವೆಂದು ತಿಳಿಯುತ್ತೇನೆ.

ಸುಸಂಗತಾ : ಪ್ರಸ್ತುತವಾಯಿತೆಂದು ಹೇಳುತ್ತಿದ್ದೇನೆ .... ನಮ್ಮ ಪ್ರಭುಗಳಿಗೆ ಆರ್ಯ ದೇವದತ್ತರಲ್ಲಿ ಎಷ್ಟೊಂದು ಗೌರವ ವಾತ್ಸಲ್ಯ ! ಅವರನ್ನು ಮಗಧ ದಲ್ಲಿ ಸ್ಥಿರಗೊಳಿಸಿಕೊಳ್ಳುವ ಸಲುವಾಗಿಯೇ ಅಲ್ಲವೆ ಆರ್ಯ ದೇವದತ್ತರ ರೂಪಕಲ್ಪನಗಳಿಗಾಗಿ ಪ್ರಭುಗಳು 'ದ್ಯುಲೋಕಮನೋಹರ'ದಂಥ ಅಮೌಲ್ಯ ವಾಸ್ತುವನ್ನು ನಿರ್ಮಿಸಿಕೊಟ್ಟಿದು ? ನಮ್ಮ 'ಸೀತಾಮಂದಿರ'ದ ನಾಟ್ಯ-ಮಂಟಪವನ್ನು ಬಿಟ್ಟರೆ, ಮಗಧದಲ್ಲಿ 'ದ್ಯುಲೋಕಮನೋಹರ' ದಂಥ ಭವ್ಯವಾಸ್ತು ಮತ್ತಾವುದಿದೆ ?

ಸುತನುಕಾ : 'ಸೀತಾಮಂದಿರ' ಪ್ರಭುಗಳ ಪೂರ್ವಜರಿಂದ ನಿರ್ಮಿತವಾದದ್ದು. ತತ್ಸಮವಾದ ವಾಸ್ತುವೊಂದನ್ನು ತಾವೂ ನಿರ್ಮಿಸಬೇಕೆಂಬ ಆಕಾಂಕ್ಷೆ ಪ್ರಭುಗಳಿಗಿತ್ತು.

ಸುಸಂಗತಾ : .... ಅಥವಾ ನನ್ನ ಕೇಳಿಕೆಯಲ್ಲೂ ದೋಷ ಇದ್ದೀತು .... ಆದರೂ ಅಂಥ ಭವ್ಯವಾಸ್ತುವನ್ನು ದೇವದತ್ತರ ಆಲೇಖ್ಯಗಳಿಗೆಂದೇ ಮೀಸಲಾಗಿ ಕೊಡ ಲಿಲ್ಲವೆ ? ಅಂಥದೊಂದು ಬಂಧನವಿಲ್ಲದಿದ್ದರೆ, ಅಷ್ಟು ದಿನಗಳಾದರೂ, ದೇವ ದತ್ತರನ್ನು ಇಲ್ಲಿಯೇ ಉಳಿಸಿಕೊಳ್ಳಲು ಯಾರಿಗೆ ಸಾಧ್ಯವಿತ್ತು ?

ಸುತನುಕಾ : ( ಮುಗುಳುನಗೆಯೊಡನೆ ) ದೇವದತ್ತರು ವಿಲಕ್ಷಣಪುರುಷರೆಂಬುದು ನಿನ್ನ ಆರಂಭವಾಗಿತ್ತು !

ಸುಸಂಗತಾ : ಅದನ್ನೆ ಹೇಳಲು ಹೊರಟಿದ್ದೇನೆ ....

ಸುತನುಕಾ : ಓ, ಇದು ಕೀರ್ತನಭೂಮಿಕೆ !

ಸುಸಂಗತಾ : .... ಪ್ರಭುಗಳು ಅಪಾರಸಂಪತ್ತನ್ನು ವ್ಯಯಿಸಿ 'ದ್ಯುಲೋಕಮನೋ ಹರ'ವನ್ನು ನಿರ್ಮಿಸಿದರು. ಆದರೆ ಪ್ರಭುಗಳ ಅಂಥ ಅಮೌಲ್ಯ ವಿಭವ ಕೂಡ ರೂಪದಕ್ಷರ ಆಲೇಖ್ಯಗಳ ಅಲಂಕಾರದಲ್ಲಿ ಆವೃತವಾಗಿ ಅದೃಶ್ಯ ವಾಗಿ ಹೋಯಿತಲ್ಲವೆ ? ಇಂದು ಪ್ರಭುಗಳ ಸಂಪತ್ತಿಯ ಪ್ರಸರಣದಿಂದ ಅಲ್ಲ, ರೂಪದಕ್ಷರ ಆಲೇಖ್ಯಗಳಿಂದ ಆ ಮಂದಿರ ಅನರ್ಘ್ಯವಾಗಿದೆ, 'ದ್ಯುಲೋಕಮನೋಹರ'ವೆಂಬ ಅಂಕಿತಕ್ಕೆ ಅನ್ವರ್ಥವಾಗಿದೆ.

ಸುತನುಕಾ : ಇನ್ನೂ 'ಪ್ರಾಸಂಗಿಕ'ದಿಂದ 'ಆಧಿಕಾರಿ'ಕ್ಕೆ ಬಂದಿಲ್ಲವೆಂದು ತೋರುತ್ತದೆ !

ಸುಸಂಗತಾ : ಈಯೆಲ್ಲ ಪ್ರತಿಭೆ ಕೀರ್ತಿಗಳ ಸಂಗಡ ಈಚೆ ಅವರ ಬುದ್ಧಿವೈಕಲ್ಯವೂ ಬೆರೆತುಕೊಂಡಿದೆಯಲ್ಲ,— ಅದಕ್ಕಾಗಿ ಹೇಳುತ್ತಿದ್ದೇನೆ ಅಜ್ಜುಕಾ, ವಿಲಕ್ಷಣ ಎಂದು.

ಸುತನುಕಾ : ಭಲಾ, ರೂಪದಕ್ಷರ ಕೀರ್ತಿಗೆ ಬುದ್ಧಿವೈಕಲ್ಯದ ಕಿರೀಟವನ್ನೂ ತೊಡಿಸಿದ್ದೀಯೆ !

ಸುಸಂಗತಾ : ಅದೇನು ನನ್ನ ಕಲ್ಪನೆಯೆ ? ಕಳೆದ ಎರಡು ವರ್ಷಗಳಿಂದ ಅವರ ಬುದ್ಧಿ ವಿಕಲವಾಗುತ್ತಿರುವುದನು ಈ ನಗರದಲ್ಲಿ — ಏಕೆ, ಮಗಧರಾಜ್ಯ ದಲ್ಲಿ — ತಿಳಿಯದವರಾರು ? ....

ಸುತನುಕಾ : ಹ್ಞು ....

ಸುಸಂಗತಾ : ಈ ಬುದ್ಧಿವೈಕಲ್ಯಕ್ಕೆ ನನಗೆ ಒಂದು ಕಾರಣ ಹೊಳೆದಿದೆ ಅಜ್ಜುಕಾ ...

ಸುತನುಕಾ : ಕಾರ್ಯವನ್ನೆ ಕಲ್ಪಿಸಬಲ್ಲ ನಿಪುಣೆ ನೀನು, ಕಾರಣವನ್ನು ಕಲ್ಪಿಸ ಲಾರೆಯಾ ? ....

ಸುಸಂಗತಾ : ಹಾಸ್ಯವಲ್ಲ ಅಜ್ಜುಕಾ .... ನಮ್ಮ ಕುಲದ ಮಾತು ಬೇರೆ. ಆದರೆ ಅವರು ಸದ್ವಂಶದಲ್ಲಿ ಜನಿಸಿದವರು. ಅವರ ಸಂಸ್ಕಾರಕ್ರಮಗಳು ನಮ್ಮ ಹಾಗಲ್ಲ .... ಈ ವೇಳೆಗಾಗಲೇ ಅವರಿಗೆ ವಿವಾಹವಾಗಬೇಕಿತ್ತು. ಕುಲ ಸಂಪ್ರದಾಯಗಳನ್ನು ಮೀರಿ ಅವರು ಇನ್ನೂ ವಿವಾಹವಾಗದೆ ಉಳಿದಿದ್ದಾರೆ... ಈಗೀಗ ಕುಲಸಂಪ್ರದಾಯಗಳೇ ವಿಪರ್ಯಯಗೊಳ್ಳುತ್ತಿವೆ. ಈ ಮಗಧ ವಂತೂ ಅದಕ್ಕೆ ಪ್ರಸಿದ್ಧವಾಗಿ ಹೋಗಿದೆ .... ಹೀಗಾದರೆ ಬುದ್ಧಿವೈಕಲ್ಯವಲ್ಲದೆ ಮತ್ತೇನಾದೀತು ?

ಸುತನುಕಾ : ಹೇಗೂ ಅನಿರೀಕ್ಷಿತವಾಗಿ ಇಂದೇ ರೂಪದಕ್ಷರು ನಗರಕ್ಕೆ ಮರಳಿ ದ್ದಾರೆ. ನಿನ್ನನ್ನು ಅವರಲ್ಲಿಗೆ ನಿಯೋಗ ಕಳುಹಿಸುತ್ತೇನೆ. ಅವರಿಗೆ ತಕ್ಕ ಉಪದೇಶ ಕೊಟ್ಟು, ಒಬ್ಬ ಕುಲವಧುವನ್ನು ಸಂಗ್ರಹಿಸಿ ...

ಸುಸಂಗತಾ : ನನ್ನ ಮಾತಿಗೆಲ್ಲ ಪರಿಹಾಸವಿದ್ದೇಯಿದೆ ... ಅಜ್ಜುಕಾ, ಈ ವಿಷಯ ಗಳನ್ನೆಲ್ಲ ಎಷ್ಟು ದೀರ್ಘವಾಗಿ ಚಿಂತಿಸಿದ್ದೇನೆ ಬಲ್ಲೆಯಾ ? ... ಆದರೆ ನಾನು ಯಾರಲ್ಲಿ ಹೇಳಬೇಕು ? ... ಇಂದೇನೊ – ಅಪೂರ್ವವಾಗಿ – ನೀನು ಈ ಅಲ್ಪಳ ಮಾತಿಗೆ ಕಿವಿಗೊಟ್ಟಿದ್ದೀಯೆ, ಎಲ್ಲವನ್ನು ನಿನ್ನ ಕಿವಿಯಲ್ಲಿ ಸುರಿಯುತ್ತಿ ದ್ದೇನೆ ... ಮೇಲಾಗಿ, ಅವರ ಬುದ್ಧಿ ವಿಕಲವಾಗಲು ಇನ್ನೂ ಒಂದು ಕಾರಣ ವಿದೆ : ಅವರು ತಮ್ಮ ರೂಪಕಲ್ಪನಗಳನ್ನು ಅಭಿನಯಿಸಲು, ಮೊದಲು ಈಗ ಐದು ವರ್ಷಗಳ ಹಿಂದೆ – ನಿನ್ನನ್ನು ಆಹ್ವಾನಿಸಿದಾಗ ಕೇವಲ ಸ್ನೇಹದಿಂದ ಆಹ್ವಾನಿಸಿದರು. ಆದರೆ ಅನಂತರ ವರ್ಷವರ್ಷವೂ ಅದನ್ನೊಂದು ಸ್ಪರ್ಧೆ ಯನ್ನಾಗಿಯೇ ಮಾಡಿಬಿಟ್ಟರು ... ನೀವಿಬ್ಬರೂ ನಿಮ್ಮ ನಿಮ್ಮ ಕಲೆಗಳಲ್ಲಿ ಅದ್ವಿ ತೀಯರಾದವರು, ಸ್ನೇಹ ಇರಬೇಕಾದದ್ದೇ. ಆದರೆ ಈ ಸ್ಪರ್ಧೆ ! .... ದೈವದತ್ತವಾದ ಪ್ರತಿಭೆಯನ್ನು ಅವರು ಎಂದು ಹೀಗೆ ಸ್ಪರ್ಧೆಗೆ ನ್ಯಾಸವಾಗಿ ಟ್ಟರೊ ಅಂದೇ ಅವರ ಗ್ರಹಗಳು ವ್ಯಂಗ್ಯವಾದವು. ಅವರ ಬುದ್ಧಿ ವಿಕಲ ವಾಗಲು ಆರಂಭವಾಯಿತು ...

ಸುತನುಕಾ : ಕುಶಲವಾಗಿ ಯೋಜಿಸಿದ್ದೀಯೆ ! ... ನನ್ನ ಗ್ರಹಗಳೇಕೆ ವ್ಯಂಗ್ಯವಾಗ ಲಿಲ್ಲ ಹಲಾ ? ಸ್ಪರ್ಧೆಯಲ್ಲಿ ಪಕ್ಷವಿಪಕ್ಷವಾಗಿ ನಾವಿಬ್ಬರೂ ಸ್ಪರ್ಧಿಸಲಿಲ್ಲವೆ ?

ಸುಸಂಗತಾ : ನೀನು ಸ್ಪರ್ಧೆಯನ್ನು ಆರಂಭಿಸಿದವಳಲ್ಲ, ಸ್ವೀಕರಿಸಿದವಳು ಅಷ್ಟೆ. ... ಆರ್ಯವಾಕ್ಯವೇ ಇದೆಯಲ್ಲವೆ, ಸರಸ್ವತಿಯ ಕೃಪೆಗೆ ನೂರು ಜನ್ಮಗಳ ತಪೋಬಲ ಬೇಕು, ಅವಕೃಪೆಗೆ ಒಂದು ಕ್ಷಣದ ದೋಷ ಸಾಕು–ಎಂದು? ... ಕಳೆದ ಎರಡು ವರ್ಷಗಳಲ್ಲಿ ತೀವ್ರಗೊಂಡ ಈ ಸ್ಪರ್ಧೆ ಹಿಂದಿನ ವಸಂತ ಪೂರ್ಣಿಮೆಯಲ್ಲಂತೂ ದ್ವೇಷಾಸೂಯೆಗಳ ಮೂಲವಾಗಿಹೋಯಿತು ... ಅವರ ಬುದ್ಧಿ ಸಂಪೂರ್ಣ ವಿಕಲವಾದದ್ದು ಆಗಲೆ. ಅಜ್ಜುಕಾ, ಕಳೆದ ವಸಂತಪೂರ್ಣಿಮೆಯಲ್ಲಿ ಅವರು ನಿನ್ನಲ್ಲಿ ಎಷ್ಟು ರೂಕ್ಷವಾಗಿ ವರ್ತಿಸಿದರು! ... ಬುದ್ಧಿವೈಕಲ್ಯ ಉಲ್ಬಣಿಸತಲ್ಲದಿದ್ದರೆ ವಸಂತಪೂರ್ಣಿಮೆಯಾಗಿ ಮಾಸ ಕಳೆಯುವುದರೊಳಗೆ ಅವರೇಕೆ ಹಾಗೆ ಅಜ್ಞಾತವಾಗಿ ಪಲಾಯನಮಾಡುತ್ತಿದ್ದರು? ... ದ್ವೇಷದಿಂದ ಬುದ್ಧಿ ವಿಕಲವಾದರೆ ಆ ಬುದ್ಧಿವೈಕಲ್ಯದಿಂದ ಪುನಃ ದ್ವೇಷ ದ್ವಿಗುಣಗೊಳ್ಳುವುದಂತೆ. ಎಷ್ಟು ಸತ್ಯ! ಮಾಘ ಅಮಾವಾಸ್ಯೆ ಆ ರಾತ್ರಿಯಲ್ಲಿ ಅಜ್ಞಾತವಾಗಿ ಬಂದರು, ಆ ಒಂದೇ ರಾತ್ರಿಯೊಳಗೆ "ದ್ಯುಲೋಕಮನೋಹರ'ದಲ್ಲಿ ಪುನಃ ಸ್ಪರ್ಧೆಗೆಂದು ಅಂಥ ಅದ್ಭುತ ಚಿತ್ರವನ್ನು ರಚಿಸಿ, ಬೆಳಗಾಗುವಾಗ ಮತ್ತೆ ಪಲಾಯನಮಾಡಿದರು ... ಇದು ಶೋಚನೀಯ ಅಜ್ಜುಕಾ : ಒಂದೇ ರಾತ್ರಿಯಲ್ಲಿ ಅಂಥ ರೂಪವನ್ನು ಕಲ್ಪಿಸಿ ಚಿತ್ರಿಸುವ ಬುದ್ಧಿಗೂ ಇಂಥ ವಿಕಲತೆ! ಭರತಾಚಾರ್ಯರಂಥ ಗುರುಗಳಲ್ಲದಿದ್ದರೆ, ನಿನ್ನಂಥ ನರ್ತಕಿಯಲ್ಲದಿದ್ದರೆ ಈ ಆರ್ಯಾವರ್ತದಲ್ಲಿ ಮತ್ತಾರು ಅಂಥ ಅದ್ಭುತರೂಪವನ್ನು ಅಭಿನಯಿಸುವುದು ಸಾಧ್ಯವಿತ್ತು!

ಸುತನುಕಾ : "ಪತಾಕಾವೃತ್ತ"ವಿರಬೇಕು ಈ ನನ್ನ ಕೀರ್ತನ!

ಸುಸಂಗತಾ : ಅದೇ ದ್ವೇಷದ ಹಂಬಲದಲ್ಲಿ, ಇಂದು ಸರಿಯಾಗಿ, ಪುನಃ ಆಗಮಿಸಿದ್ದಾರೆ. ...

ಸುತನುಕಾ : (ಅಸಹ್ಯವೆಂಬಂತೆ) ಹಲಾ, ನನ್ನ ಅವತಂಸ ಕೂಡ ಭಾರವಾಗುತ್ತಿದೆ!

ಸುಸಂಗತಾ : ಮಂದಾರದ ಅವತಂಸ ತರುತ್ತೇನೆ ಅಜ್ಜುಕಾ.

ಸುತನುಕಾ : ಮೂರ್ಖೆ! (ದೊಡ್ಡದಾಗಿ ನಗುವಳು)

ಸುಸಂಗತಾ : ಓ, ನನ್ನ ಮಾತು ಕೇಳಿ! ...

ಸುತನುಕಾ : (ಒಮ್ಮೆಲೆ ಭಾವಪರಿವರ್ತನವಾದಂತೆ) ... ಹಲಾ, ನನಗೆ ಏಕಾಂತ ಬೇಕು.

ಸುಸಂಗತಾ : ಅಜ್ಜುಕಾ! ... ಅಧಿಕಪ್ರಸಂಗವನ್ನು ಮನ್ನಿಸು ಅಜ್ಜುಕಾ ...

[ ಹೆಜ್ಜೆಯ ಸದ್ದು ಕ್ಷೀಣಿಸುವುದು. ಅನಂತರ ಸುತನುಕಾ ಎದ್ದು ಆಚೀಚೆ ತಿರುಗುವುದನ್ನು ಸೂಚಿಸುವ ನೂಪುರರವ. ನೂಪುರರವ ಕ್ರಮೇಣ ಕಿಂಕಿಣೀಝಣತ್ಕೃತಿಯಾಗಿ ಪರಿವರ್ತನಗೊಂಡು ವಿಜೃಂಭಿಸಲಾರಂಭಿಸುತ್ತದೆ. ನಿಡುಸುಯ್ಲು. ಸುತನುಕಾ ಮರಳಿ ಬಂದು ಪೀಠಕ್ಕೆ ಒರಗಿದ ಸದ್ದು. ಗೆಜ್ಜೆಯ ವಿಜೃಂಭಣ ಮುಂದುವರಿದಿರಲು ನಡುವೆ ತಂತ್ರೀನಾದವೊಂದು ಉನ್ಮತ್ತಭ್ರಮರವೆಂಬಂತೆ ಮೊರೆಯತೊಡಗುತ್ತದೆ. ಜೊತೆಗೆ,

ಅದುಮಿದ ಭಾವಗಳು ಒಮ್ಮೆಲೆ ವಿಶೃಂಖಲವಾಗಿ, ಸುತನುಕಾ ಬಿಕ್ಕಳಿಸುವ ಸದ್ದು. ಆ ತೀವ್ರಾವಸ್ಥೆಯಲ್ಲಿಯೇ — ]

ಕುಟ್ಟಿನಿ : (ಒಳಗಿನಿಂದ) ಪುತ್ತಿಯಾ ! ... ಪುತ್ತಿಯಾ ! ...

[ ಗೆಜ್ಜೆಯ ವಿಜೃಂಭಣ ತಂತಿಯ ಮೊರೆತ ತಟಕ್ಕನೆ ಕಡಿದುಹೋಗುವುದು. ]

ಕುಟ್ಟಿನಿ : (ಒಳಗಿನಿಂದ) ಪುತ್ತಿಯಾ ! ...
ಸುತನುಕಾ : ಹಲಾ ! ... ಹಲಾ ! ...

[ ವೃದ್ಧಿಸುವ ಹೆಜ್ಜೆಯ ಸದ್ದು. ]

ಸುಸಂಗತಾ : ಅಜ್ಜುಕಾ ...

[ ಅಷ್ಟರಲ್ಲಿ ಮತ್ತೊಂದು ಹೆಜ್ಜೆ–ಕುಟ್ಟಿನಿಯದು–ವೃದ್ಧಿಸುತ್ತದೆ. ]

ಕುಟ್ಟಿನಿ : ಪುತ್ತಿಯಾ ! ...
ಸುತನುಕಾ : ಸುಸಂಗದಾಳನ್ನು ಕಳಿಸುತ್ತೇನೆ ಅಂಬ.
ಕುಟ್ಟಿನಿ : ಆ ಮೂರ್ಖೆಯನ್ನು ಯಾರು ಕೇಳಿದರು ? ... ಪುತ್ತಿಯಾ, ಆ ! ಈ ಅಲಂಕಾರದಲ್ಲಿ ನಿನ್ನನ್ನು ಕಂಡು ಎಷ್ಟು ಆನಂದವಾಗುತ್ತದೆ ಬಲ್ಲೆಯಾ ? ... ಸುಸಂಗದೆ, ಈ ಅಲಂಕಾರದಲ್ಲಿ ನನ್ನ ಪುತ್ರಿ ಬೆಳಗುತ್ತಿರುವಾಗ... ಈ ದೇಶದ ಪರಮಸುಂದರಿಯರನ್ನೆಲ್ಲ ತಂದು ಇವಳ ಪಾದದಲ್ಲಿ ನಿವಾಳಿಸಿ ಎಸೆಯಬೇಕು!
ಸುತನುಕಾ : ಅಂಬ, ಹೊರಗೆ ಬಂಧುಲ ಹುಂಜಗಳ ಕಾಳಗ ಅರಂಭಿಸಿದ್ದಾನೆ.
ಕುಟ್ಟಿನಿ : (ಗಮನಿಸದೆ) ... ಎಷ್ಟು ಅನರ್ಘವಾದ ನೇಪಥ್ಯ ಇದು ! ... ನನ್ನ ಕಾಲದಲ್ಲಿ ನಾನು ಅಷ್ಟೆಲ್ಲ ವೈಭವದಲ್ಲಿ ಮೆರೆದಿದ್ದರೂ ಇಂಥ ಆಭರಣವನ್ನು ಒಂದು ದಿನ ಧರಿಸಲಿಲ್ಲ ... ಈ ಮೂರ್ಖೆ ಸುಸಂಗದಾ ಆಗ ಹೇಳುತ್ತಿದ್ದಳು, ನಿನ್ನ ಈ ಅಲಂಕಾರಗಳನ್ನು ಚೋರರು ಅಪಹರಿಸಿದಾಗ, ಈ ಅಲಂಕಾರವನ್ನು ಶೋಧಿಸಿ ತರಲು ನೀನು ವ್ಯಯಿಸಿದ್ದರಲ್ಲಿ ಅರ್ಧಭಾಗ ವ್ಯಯಿಸಿದ್ದರೆ ನೂತನ ಅಲಂಕಾರವನ್ನೆ ಮಾಡಿಸಬಹುದಿತ್ತಂತೆ.
ಸುಸಂಗತಾ : ನಾನೆಲ್ಲಿ ಹಾಗೆ ಹೇಳಿದ್ದೆ ಅತ್ತಿಯಾ ?
ಕುಟ್ಟಿನಿ : ಸುಮ್ಮನಿರು ಮೂರ್ಖೆ ! ಪ್ರತಿವಾದ ಮಾಡಬೇಡ. ನಾನೇನು ಸುಳ್ಳಾಡುವವಳೆ ? ... ಪಾಪ ! ಆ ಗಾಂವಗನ್ನಿಯಾಗೆ* ಇವುಗಳ ಬೆಲೆಯಲ್ಲಿ ತಿಳಿಯಬೇಕು ? ... ಪುತ್ತಿಯಾ, ಇದೆಲ್ಲವೂ ನನಗೆ ಪ್ರಿಯುವೇ. ಆದರೆ, —
ಸುಸಂಗತಾ : ಅತ್ತಿಯಾಳ ನಿದ್ರೆಯ ವೇಳೆಯಲ್ಲಿ ಅಜ್ಜುಕಾ ನೃತ್ಯವಾದನಗಳಿಂದ

---

* ಗಾಂವಗನ್ನಿಯಾ = ಗ್ರಾಮಕನ್ನಿಕಾ ( ? ).

ನಿದ್ರಾಭಂಗಮಾಡುವುದು ಮಾತ್ರ ಅಪ್ರಿಯ !

ಸುತನುಕಾ: ಎಂದಿಗೂ ಇಲ್ಲ. ಸಗ್ಗಭಂಡನೇ* ಬಂದು ಛೀಛಿಟ್ಟರೂ ಅವಳ ನಿದ್ರಾಭಂಗವಾಗದು !

ಕುಟ್ಟಿನಿ: ಹಾಳು ನಿದ್ರೆ ! ನಿಮಗೆಲ್ಲ ಅದೊಂದು ಪರಿಹಾಸ, ನನಗೆ ವ್ಯಾಧಿ ! ... ಈಚೆಗಂತೂ ನನಗೆ ನಿದ್ರೆಯೂ ಸರಿಯಾಗಿ ಬರುವುದಿಲ್ಲ. ಅದು ಹಾಳಾಗಲಿ ! ... ಆ ವಿಷಯವಲ್ಲ ನಾನು ಹೇಳುತ್ತಿದ್ದುದು ... ಹ್ಞಾ, ಅದೇನೋ ಹೇಳು- ತ್ತಿದ್ದೆನಲ್ಲ, ಹಾಳು, ಅಲ್ಲೆ ಮರೆತುಹೋಯಿತು ... ಸುಸಂಗದೆ ! ...

ಸುಸಂಗತಾ: ... "ಇದೆಲ್ಲವೂ ನನಗೆ ಪ್ರಿಯವೆ. ಆದರೆ ... "

ಕುಟ್ಟಿನಿ: ಹ್ಞಾ ! ಇದೆಲ್ಲವೂ ನನಗೆ ಪ್ರಿಯವೇ. ಆದರೆ ... ನಿನಗೆ ಬೇಕೆನ್ನು ವಷ್ಟು ನರ್ತನ ಅಭ್ಯಾಸ ಮಾಡು, ಬೇಕೆನ್ನುವಷ್ಟು ಪ್ರಯೋಗ ಮಾಡು. ಹೇಗೆ ಬೇಕು ಹಾಗೆ ನಿಃಶೃಂಖಲಳಾಗಿ ನಲಿ ! ... ಆದರೆ ಇಂಥ ಸ್ಪರ್ಧೆ ಮಾತ್ರ ಬೇಡ. ನಿನಗಿಂತ ಎಷ್ಟೋ ಹೆಚ್ಚು ಸಂವತ್ಸರಗಳನ್ನುಂಡ ನನ್ನ ಅನುಭವದಿಂದ ಹೇಳುತ್ತಿದ್ದೇನೆ: ಈ ಸ್ಪರ್ಧೆ ಬೇಡ ... ಆರಂಭದಲ್ಲಿಯೇನೋ ಸ್ನೇಹದಿಂದ ನಡೆಯಿತು. ಆದರೆ ಅದೇ ಈಗ ಎಂಥ ದ್ವೇಷಕ್ಕೆ ಕಾರಣವಾಗಿದೆ ನೋಡು ! ಕಳೆದ ವಸಂತಪೂರ್ಣಿಮೆಯ ಅಪಪ್ರಸಂಗಗಳಿಂದಲೇ ನೀನು ತಿಳಿದುಕೊಳ್ಳ ಬೇಕಿತ್ತು ! ... ನಮ್ಮ ಕುಲದ ಜನಕ್ಕೆ ದ್ವೇಷವೊಂದಲ್ಲದೆ ಬೇರೆ ಶತ್ರು ವೆಂಬುದೇ ಇಲ್ಲ. ಅದೂ ಸದ್ವಂಶದ ದ್ವೇಷ ! ... ರೂಪದಕ್ಷ ದೇವದತ್ತರು ಆಗ ಅಜ್ಞಾತವಾಗಿ ಪಲಾಯನ ಮಾಡಿದ್ದೇಕೆ ? ಮತ್ತೆ ಆ ಅಮಾವಾಸ್ಯೆಯ ರಾತ್ರಿಯಲ್ಲಿ ಅಜ್ಞಾತವಾಗಿಯೇ ಬಂದು ಅಜ್ಞಾತವಾಗಿಯೇ ಸ್ಪರ್ಧೆಯನ್ನು ಆರಂಭಿಸಿ ಪಲಾಯನ ಮಾಡಿದ್ದೇಕೆ ?

ಸುಸಂಗತಾ: ಅವರು ಇಂದು ಮತ್ತೆ ನಗರಕ್ಕೆ ಮರಳಿದ್ದಾರಂತೆ ಅತ್ತಿಯಾ.

ಕುಟ್ಟಿನಿ: ನಿಜವೆ ?— ಹ್ಞಾ . ಇವೆಲ್ಲ ಏಕೆ ? ಈ ರಹಸ್ಯಗಳು ನಿನಗೆ ತಿಳಿಯುವುದಿಲ್ಲ ಪುತ್ತಿಯಾ. ಅವರು ನಿನ್ನ ಮೇಲೆ ಅಭಿಚಾರಕ್ರಿಯೆಗಳನ್ನು ಪ್ರಯೋಗಿಸುತ್ತಿರ ಬೇಕು ! ಇಲ್ಲದಿದ್ದರೆ ಹೀಗೇಕೆ ಅಜ್ಞಾತರಹಸ್ಯವಾಗಿ ವರ್ತಿಸುತ್ತಿದ್ದರು ? ... ಅಲ್ಲದೆ, ನನಗೆ ಆ ಪ್ರಬಲವಾದ ಸಂಶಯ ಇನ್ನೂ ದೂರವಾಗಿಲ್ಲ: ಮಾಘ ಅಮಾವಾಸ್ಯೆಯ ದಿನವೇ ಅವರು ಅಜ್ಞಾತವಾಗಿ ನಗರಕ್ಕೆ ಬಂದದ್ದು ಮತ್ತು ಅದೇ ದಿನವೇ ನಿನ್ನ ಈ ಅಲಂಕಾರಗಳು ಅಪಹೃತವಾದದ್ದು ! ಅಪಹರಿಸಿ ದವರು ಚೋರರೆಂಬುದು ಸಿದ್ಧವಾಯಿತು, ನಿಜ. ಆದರೆ ಆ ಚೋರರ ಹಿಂದೆ ರೂಪದಕ್ಷರ ಅಭಿಚಾರಹಸ್ತವಿರಬಾರದೇ ? ... ನನಗೇನೋ ಇವೆಲ್ಲ ಭೀಕರ ವಾಗಿ ತೋರುತ್ತವೆ ! ... ಅದಕ್ಕೇ ಭರತಾಚಾರ್ಯರಲ್ಲಿಯೂ ವಿಜ್ಞಾಪಿಸಿ-

* ಸಗ್ಗಭಂಡ = ಸ್ವರ್ಗದ (ಯಮನ) ಕೋಣ.

ಕೊಂಡೆ. ಆದರೆ ಈ ಪಾಪಿಯ ಮಾತು ಆ ಮಹನೀಯರ ಕಿವಿಗೂ ಮುಟ್ಟ-
ಲಿಲ್ಲ.... ಪುತ್ರಿಯಾ, ನೀನು ಮತ್ತೇನನ್ನೋ ಚಿಂತಿಸುತ್ತಿದ್ದೀಯೆ, ನನ್ನ
ಮಾತುಗಳನ್ನು ಕೇಳುವದೇ ಇಲ್ಲ.

ಸುತನುಕಾ: ಸುಸಂಗದೆ, ಬಂಧುಲನಿಗೆ ಆಚಾರ್ಯಪಾದರ ಸಮಯವನ್ನು ತಿಳಿದು-
ಬರುವಂತೆ ಹೇಳು.

[ ಹೆಜ್ಜೆಯ ಸದ್ದು ಕ್ಷಯಿಸುವುದು. ]

ಕುಟ್ಟಿನಿ: ಹ್ಞಾ, ನನ್ನ ಮಾತೇ ಬೇಡವಾಗಿದೆ ನಿನಗೆ.

ಸುತನುಕಾ: ಅಂಬ, ಇಂದು ನಿನಗೆ ಅರ್ಧನಿದ್ರೆಯಲ್ಲೆ ಎಚ್ಚರವಾಯಿತು...
ಹೋಗಲಿ, ಸ್ವಲ್ಪ ಒಳಗೆ ಹೋಗುತ್ತೀಯಾ ?

ಕುಟ್ಟಿನಿ: ಹೋಗುತ್ತೇನೆ ತಾಯಿ, ಅಗತ್ಯ ಹೋಗುತ್ತೇನೆ !... ನನ್ನ ಮಾತೆಂಬುದು
ನಿನಗೆ ಯಃಕಶ್ಚಿತ್ ಪದಾರ್ಥವಾಗಿಹೋಗಿದೆ. ನಿನಗೆ ಮಾತ್ರವೇನು, ಇಲ್ಲಿ
ಎಲ್ಲರಿಗೂ ಹಾಗೆಯೇ ! ಚೇಟರು ಕೂಡ ನನ್ನ ಮಾತು ಕೇಳುವುದಿಲ್ಲ...
ಆ ಗಾಂವಗನ್ನಿಯಾ ಸುಸಂಗದಾಳೇ ನನ್ನ ಮಾತು ಕೇಳುವುದಿಲ್ಲ. ಏನೋ
ದೂರದ ಬಂಧು, ಅನಾಥೆ ಎಂದು ನಾನೇ ಅವಳನ್ನು ಕರೆತಂದೆ. ಅಂಥವ-
ಳಿಗೂ ಈಗ ನಾನೊಂದು ಯಃಕಶ್ಚಿತ್ ಪದಾರ್ಥ !.... ಮುಖ್ಯವಾಗಿ ....
ಹಾಳಾಗಿಹೋಗಲಿ ! ನನಗೇಕೆ ? ... ಹೋಗಿ ಹುಂಜದ ಕಾಳಗವನ್ನಾದರೂ
ನೋಡುತ್ತೇನೆ !

[ ಹೆಜ್ಜೆಯ ಸದ್ದು ಕ್ಷಯಿಸುವುದು. ಏನನ್ನೋ ಸ್ಮರಿಸಿಕೊಂಡು ಇರಬೇಕು, ಸುತನುಕಾ
ತನ್ನಷ್ಟಕ್ಕೇ ಪಕಪಕ ನಗುವ ಸದ್ದು. ಅಷ್ಟರಲ್ಲಿ ಹೆಜ್ಜೆ ವೃದ್ಧಿಸುವುದು. ]

ಸುಸಂಗತಾ: ಅಜ್ಜುಕಾ, ಯಾರೋ ಬಂದಿದ್ದಾರೆ ಹೊರಗೆ— ಯಾರು ಊಹಿಸು-
ತ್ತೀಯಾ ?

ಸುತನುಕಾ: ( ಅತ್ಯಾಶ್ಚರ್ಯದಿಂದ) ಆ್ಞ !? ನಿಜವೆ ?!...

ಸುಸಂಗತಾ: ಊಹಿಸಿದೆಯಾ ?

ಸುತನುಕಾ: ಹೇಳು ಹಲಾ.

ಸುಸಂಗತಾ: ಆರ್ಯ ಚಂದ್ರಕೀರ್ತಿಗಳು ಆಗಮಿಸಿದ್ದಾರೆ.

ಸುತನುಕಾ: ( ಉತ್ಸಾಹ ಕುಗ್ಗಿದ ಧ್ವನಿಯಲ್ಲಿ ) ಚಂದ್ರಕೀರ್ತಿಗಳೆ ?

ಸುಸಂಗತಾ: ಮತ್ತಾರೆಂದು ...

ಸುತನುಕಾ: ಬರಮಾಡು.

[ ಹೆಜ್ಜೆ ಕ್ಷಯಿಸುವುದು, ಅನಂತರ ಎರಡು ಹೆಜ್ಜೆಗಳು ವೃದ್ಧಿಸುತ್ತಿರಲು — ]

ಸುತನುಕಾ: ಅಭಿವಾದಿಸುತ್ತೇನೆ ಆರ್ಯ. ಹೀಗೆ ದಯಮಾಡಿ.

ಚಂದ್ರಕೀರ್ತಿ : ಕವಿಯಲ್ಲಿ ಯುಕ್ತವಾದದ್ದು ಅಭಿನಂದನ, ಅಭಿವಾದನವಲ್ಲ ನಾಯಿಕೆ.

ಸುತನುಕಾ : ಒಳ್ಳೆಯದು ಆರ್ಯ. ( ಮೆಲುನಗೆಯೊಡನೆ) ಅಭಿವಂದನಾಪೂರ್ವಕ ಅಭಿನಂದನಗಳು ... ಪೀಠ ಅಲಂಕೃತವಾಗಲಿ ... ಹಲಾ ...

[ ಹೆಜ್ಜೆ ಕ್ಷಯಿಸುವುದು.]

ಚಂದ್ರಕೀರ್ತಿ : ಅಲ್ಲದೆ, ಯಾರಾದರೂ — ಮುಖ್ಯವಾಗಿ ನಿನ್ನಂಥ ಸುಂದರ ಪ್ರಮದೆಯರು — ನನಗೆ ಅಭಿವಾದನ ಮಾಡಿದರೆ ನನ್ನ ವಯಃಸ್ಥಿತಿಯನ್ನು ಕುರಿತು ನನಗೇ ಸಂಶಯವುಂಟಾಗುತ್ತದೆ !

[ ಇಬ್ಬರೂ ನಗುತ್ತಿರಲು ಹೆಜ್ಜೆಯ ಸಪ್ಪು ವೃದ್ಧಿಸುವದು. ]

ಸುತನಕಾ : ಇಲ್ಲಿ ಕೊಡು.... ತಾಂಬೂಲವನ್ನು ಸ್ವೀಕರಿಸಿ ಆರ್ಯ.

ಚಂದ್ರಕೀರ್ತಿ : ಭಲಾ ! ನನಗೆ ಪ್ರಿಯವಾದ ಉಪಾಯನವನ್ನೆ ಕೊಡುತ್ತಿದ್ದೀಯೆ.... ನಾಯಿಕೆ, ಈ ನಗರದ ಜನ ಇದೊಂದು ಅಂಶದಲ್ಲಿ ಅರಸಿಕರು. ಅದೇ ಕಾನ್ಯಕುಬ್ಜರನ್ನು ನೋಡಬೇಕು : ತಾಂಬೂಲದ ಕಲೆ ಅವರ ಗೃಹಸಮಾಜಗಳಲ್ಲಿನ ಒಂದು ಅವಿಭಾಜ್ಯ ಅಂಗವಾಗಿ ಹೋಗಿದೆ. ತಾಂಬೂಲ ಕಟ್ಟುವುದರಲ್ಲಿ ಕೂಡ ಅವರಿಗೆ ಎಷ್ಟು ಶ್ರದ್ಧೆ ! ಅವರ ದೃಷ್ಟಿಯಲ್ಲಿ ಯಾವ ಶಿಲ್ಪಕ್ಕೂ ಕಡಿಮೆಯಿಲ್ಲದ್ದು ಈ ನಖಶಿಲ್ಪ.

ಸುತನುಕಾ : ಹಾಗಿದ್ದರೆ ಈ ಸುಸಂಗದಾಳನ್ನೊಮ್ಮೆ ಅಲ್ಲಿ ಕಳಿಸಬೇಕು, ತಾಂಬೂಲ ಕಲೆಯಲ್ಲಿ ಶಿಕ್ಷಿತಳಾಗಿ ಬರಲು.

ಸುಸಂಗತಾ : ಈ ರಾಜ್ಯದಿಂದ ಆ ರಾಜ್ಯಕ್ಕೆ ! — ಇಷ್ಟೊಂದು ದೂರದ ಕಲ್ಪನೆಯಿಂದಲೇ ನಾನು ಭೀತಳಾಗುತ್ತೇನೆ.... ಆರ್ಯರು ಪ್ರವಾಸ ಹೋದದ್ದು ಅಲ್ಲಿಗೇ ಎಂದು ಭಾವಿಸುತ್ತೇನೆ.

ಚಂದ್ರಕೀರ್ತಿ : ಅಲ್ಲಿಗೂ.

ಸುತನುಕಾ : ಅಂಥ ಹತ್ತು ನಗರಗಳಲ್ಲಿ ಸಂಚರಿಸಿ ಬಂದಿರಬೇಕು ಅವರು.

ಸುಸಂಗತಾ : ವರ್ಷದ ಬಹುದಿನಗಳಲ್ಲಿ ಆರ್ಯರು ಸಂಚಾರದಲ್ಲೆ ನಿರತರಾಗಿರುತ್ತಾರೆ.

ಚಂದ್ರಕೀರ್ತಿ : ನಿವಾಸಕ್ಕಿಂತ ಪ್ರವಾಸವೇ ಹಿತ.

ಸುತನುಕಾ : ಅಥವಾ — ಕವಿಗಳಿಗೆ ನಿವಾಸಶೃಂಗಾರಕ್ಕಿಂತ ಪ್ರವಾಸಶೃಂಗಾರವೇ ಪ್ರಿಯ ಎನ್ನಬಹುದಲ್ಲವೆ ?

ಚಂದ್ರಕೀರ್ತಿ : ಗೃಹಸ್ಥನಲ್ಲದೆ ಕೇವಲ ಗೃಹವಾನ್ ಆಗಿರುವ ನನಗೆ ಅಂಥ ದ್ವಂದ್ವವೆಲ್ಲಿ ?— ಬೇಕಿದ್ದರೆ ಹೀಗೆನ್ನು : ನಿವಾಸವಿಪ್ರಯೋಗಕ್ಕಿಂತ ಪ್ರವಾಸ ವಿಪ್ರಯೋಗವೇ ಪ್ರಿಯ ಎಂದು !

[ ಚಂದ್ರ ಮತ್ತು ಸುತನು ನಗುವರು, ಅವರನ್ನು ಹಿಂಬಾಲಿಸಿ ಸುಸಂಗದೆಯೂ ನಗುವಳು ]

ಸುಸಂಗತಾ : ವಸಂತಪೂರ್ಣಿಮೆಗೆ ಸರಿಯಾಗಿ ಆರ್ಯರು ನಗರಕ್ಕೆ ಆಗಮಿಸಿ ದಂತಾಯಿತು.

ಚಂದ್ರಕೀರ್ತಿ : ಅನ್ಯಥಾ ವಂಚಿತನಾಗುತ್ತಿದ್ದೆ.

ಸುಸಂಗತಾ : ಆರ್ಯರು ಹೊರಡುವಾಗ ಈ ಬಾರಿ ಅಜ್ಜುಕಾಳ ನೃತ್ಯ ಅನಿರೀಕ್ಷಿತ ವಾಗಿತ್ತು.

ಸುತನುಕಾ : ಮುಗ್ಧೆ, ನಿನ್ನ ಅಜ್ಜುಕಾಳ ನೃತ್ಯವೇ ವಸಂತಪೂರ್ಣಿಮೆಯೆಂದು ಭಾವಿಸಿದೆಯೇನು ?

ಚಂದ್ರಕೀರ್ತಿ : ಆಕೆ ಸರಿಯಾಗಿ ತರ್ಕಿಸಿದ್ದಾಳೆ, ನಾಯಿಕೆ .... ನಾನು ಪ್ರವಾಸ ಹೊರಟಾಗ ಪ್ರಭುಗಳು ಅಸ್ವಸ್ಥರಾಗಿದ್ದರು ; ರಾಜ್ಯದಲ್ಲಿ ಅಶಾಂತಿಯು ಸೂಚನೆಯಿತ್ತು. ಆದರೆ, ಈ ನಗರದ ವೈಚಿತ್ರ್ಯ ತಿಳಿದ ನನಗೆ, ವಸಂತ ಪೂರ್ಣಿಮೆ ಬಂದಿತೆಂದರೆ ಮತ್ತೆಲ್ಲ ವಿಸ್ಮೃತವಾಗಿ ನಗರ ಆನಂದ ನಂದನವಾಗಿ ಬಿಡುವುದೆಂಬ ಭರವಸವಿತ್ತು .... ನಿಶ್ಚಯವಾಗಿಯೂ ಅನಿರೀಕ್ಷಿತವಾದದ್ದು ನಿನ್ನ ಸ್ಪರ್ಧಾನೃತ್ಯ.

ಸುತನಕಾ : ರೂಪದಕ್ಷರು ಕೃಪೆಮಾಡಿದರೆನ್ನುತ್ತೇನೆ.

ಸುಸಂಗತಾ : ಕಳೆದ ಮಾಘ ಅಮವಾಸ್ಯೆಯ ರಾತ್ರಿಯಲ್ಲಿ ಆರ್ಯ ದೇವದತ್ತರು ಅಜ್ಞಾತವಾಗಿ ನಗರಕ್ಕೆ ಆಗಮಿಸಿದರು. ಅದೇ ರಾತ್ರಿ 'ದ್ಯುಲೋಕಮನೋಹರ'ದ ಭಿತ್ತಿಯ ಮೇಲೆ ಅದ್ಭುತ ವರ್ಣಚಿತ್ರವೊಂದನ್ನು ರಚಿಸಿದರು. ವಸಂತಪೂರ್ಣಿಮೆಯೆಂದು ಆ ಆಲೇಖ್ಯದ ಅಭಿನಯಸ್ಪರ್ಧೆಗಾಗಿ ಎಂದಿನಂತೆ ಅಜ್ಜುಕಾಳನ್ನು ಆಹ್ವಾನಿಸುವ ಪತ್ರಿಕೆಯೊಂದನ್ನು ಇಲ್ಲಿಗೆ ಕಳಿಸಿ, ಮಾರನೆಯ ದಿನ ಪ್ರಾತಃಕಾಲ ಅವರು ಅದೃಶ್ಯರಾಗಿದ್ದರು.

ಸುತನುಕಾ : ಹಲಾ ಆರ್ಯರು ನಗರಕ್ಕೆ ಆಗಮಿಸಿಯೂ ಈ ವಾರ್ತೆಗಳನ್ನೆಲ್ಲ ಸಂಗ್ರಹಿಸಿಲ್ಲವೆಂದು ಭಾವಿಸಿದಿಯೇನು ?

ಚಂದ್ರಕೀರ್ತಿ : ವಾರ್ತೆ ತಿಳಿಯಿತು. ಇಂದು, ರೂಪದಕ್ಷ ಪುನಃ ನಗರಕ್ಕೆ ಆಗಮಿಸಿದ ಅತ್ಯಾಶ್ಚರ್ಯದ ವಾರ್ತೆಯೂ ತಿಳಿಯಿತು. ನಗರದ ತುಂಬ ಈ ವಾರ್ತೆಗಳೇ ಚಿತ್ರವಿಚಿತ್ರವಾಗಿ ಪ್ರಸರಿಸುತ್ತಿವೆ.

ಸುತನುಕಾ : ಇಲ್ಲಿಗೂ ಜನರ ಜಿಹ್ವೋದ್ಧೃತಿಯಿಂದ ಚ್ಯುತರಾಗಲಿಲ್ಲ ನಾವಿಬ್ಬರು !

ಚಂದ್ರಕೀರ್ತಿ : ನಗರಪರಿಭ್ರಮಣದಲ್ಲಿ ಪ್ರತ್ಯಕ್ಷ ನೋಡಿದ್ದೇನೆ ನಾಯಿಕೆ : ಇಂದಿನ ಉತ್ಸವದ ಕುತೂಹಲಸಮಸ್ತವೂ ಸೀತಾಮಂದಿರ ಹಾಗೂ ದ್ಯುಲೋಕ ಮನೋಹರಗಳ ಮುಖದಲ್ಲಿ ಪ್ರಭಾವಲಯ ರಚಿಸಿದೆ. ನಾಟ್ಯಮಂದಿರಗಳ ರೂಪಮಂದಿರಗಳ ಮಧ್ಯಂತರದಲ್ಲಿ ಪ್ರೇಂಖಾವಿಲಾಸಗೊಳಿಸುತ್ತಿರುವ ನಿಮ್ಮಿಬ್ಬರ ವಾರ್ತಾಕೌತುಕಕ್ಕೆ ಇಂದಿನ ಆನಂದಕೋಲಾಹಲವೆಲ್ಲ ಹಿನ್ನೆಲೆ

ಮಾತ್ರವಾಗಿದೆ....ನಾಯಿಕೆ, ಜನರ ಹರ್ಷಸಮೃದ್ಧಿಯಲ್ಲಿ ತಾವು ಅಗಣ್ಯರಾಗಿ ಹೋಗಿರುವೆವೆಂದು ಸಂಕಟಪಟ್ಟುಕೊಳ್ಳುತ್ತಿರುವ ನಮ್ಮಂಥ ಚಂಡಪ್ರಚಂಡ ಕವಿಗಾಯಕರು ಮಾತ್ರ ನಿಮ್ಮಿಬ್ಬರ ಭಾಗ್ಯದಿಂದ ಅಸೂಯೆಗೊಳ್ಳುತ್ತಿದ್ದಾರೆ.

ಸುಸಂಗತಾ : ಆರ್ಯರು ಕೂಡಾ ?

ಚಂದ್ರಕೀರ್ತಿ : ನಾಯಿಕೆಯನ್ನು ಕೇಳು, ಹೇಳುತ್ತಾಳೆ : ಉತ್ತಮ ಕವಿಯ ಪ್ರಪ್ರಥಮ ಲಕ್ಷಣ ಅಸೂಯೆ !

ಸುತನುಕಾ : ಆರ್ಯರಂಥವರೂ ಅಸೂಯೆಗೊಂಡಿದ್ದರೆ ಈ ನರ್ತಕಿ ಅದೊಂದು ಅಲಂಕೃತಿಯೆಂದು ಭಾವಿಸುತ್ತಿದ್ದಳು.

ಸುಸಂಗತಾ : ಪ್ರಾತಃಕಾಲ ಭಟ್ಟಿಶಂಕರರ ಶಿಷ್ಯೆ ಸುಕೇಶಿಯ ನಾಟ್ಯಪ್ರದರ್ಶನ ವಿದ್ದಿತಲ್ಲವೆ? ಆರ್ಯರು ಉಪಸ್ಥಿತರಿದ್ದರೇನು ?

ಚಂದ್ರಕೀರ್ತಿ : ಈ ದಿನವೆಲ್ಲ ಉತ್ಸವಕ್ಕೆಂದೇ ನನ್ನನ್ನು ಅರ್ಪಿಸಿಕೊಂಡಿದ್ದೇನೆ.... ಪ್ರಾತಃಕಾಲ 'ಸ್ವಪ್ನೋರ್ವಶೀಯ'ವೆಂಬ ಅಂಕದ ಪ್ರಯೋಗವಿತ್ತು. ಭಟ್ಟಿ ಶಂಕರರ ಶಿಷ್ಯೆ ಕರುಣನೇಪಥ್ಯದಲ್ಲಿ ಶೋಭಿಸುತ್ತಾಳೆ.... ಅನಂತರ ಮಧ್ಯಾಹ್ನ, ಗಾಯನಗೋಷ್ಠಿಯ ಮಲ್ಲಯುದ್ಧದಲ್ಲೂ ಉಪಸ್ಥಿತನಿದ್ದೆ ! (**ಸುತನುಕಾಳು** ನಗು ವಳು; **ಅನಂತರ ಸುಸಂಗತಾ ಕೂಡ** ನಗುವಳು.) ಅಪರಾಹ್ನ ಪ್ರಭುಗಳ ಕಾವ್ಯ ಗೋಷ್ಠಿಯಲ್ಲಿಯೂ ಅಂತರ್ಯಗೋಷ್ಠಿಯಲ್ಲಿಯೂ ಭಾಗವಹಿಸಿದ್ದೆ .... ಅಲ್ಲಿಯೇ ರೂಪದಕ್ಷನ ದರ್ಶನವಾಯಿತು.

ಸುತನುಕಾ : ಓ, ಹಾಗಾದರೆ ಮಿತ್ರಸಮಾಗಮವಾಗಿದೆ !

ಚಂದ್ರಕೀರ್ತಿ : ಪ್ರಭುಗಳ ಅಂತರ್ಯಗೋಷ್ಠಿಯಲ್ಲಿ ಆತನ ದರ್ಶನವಾಯಿತು ; ಸಂಭಾಷಣಕ್ಕೆ ಅವಸರ ಒದಗಲಿಲ್ಲ. ಅಲ್ಲಿಂದ ನೇರ ಇಲ್ಲಿಗೆ ಬಂದೆ .... ಮುಖ್ಯವಾಗಿ ನನಗೆ ರೂಪದಕ್ಷನ ಕಥೆಯಲ್ಲಿ ಆಸಕ್ತಿಯಿತ್ತು. ಅದಕ್ಕಾಗಿಯೇ ನಿನ್ನನ್ನು ಕುರಿತು ಬಂದೆ.

ಸುತನುಕಾ : ಆರ್ಯರ ಇಚ್ಛೆಯನ್ನು ಪೂರೈಸುವಲ್ಲಿ ರೂಪದಕ್ಷರೇ ನನಗಿಂತ ಸಮರ್ಥರು.

ಚಂದ್ರಕೀರ್ತಿ : ನಾಯಿಕೆ, ಕವಿಯ ಉಕ್ತಿಮಾತ್ರ ವ್ಯಂಗ್ಯವೆಂದು ಭಾವಿಸಿರುವೆಯಾ? ಆತನ ದೃಷ್ಟಿಯೂ ವ್ಯಂಗ್ಯ! .... ನಾನು ಸಮೂಹದ ಕಣ್ಣಿನಲ್ಲಿ ವ್ಯಕ್ತಿಯನ್ನು ಕಾಣಬೆತ್ನಿಸುವವನು, ವ್ಯಕ್ತಿಯ ಕಣ್ಣಿನಲ್ಲಿ ಸಮೂಹವನ್ನು ಅರ್ಥಮಾಡಿ ಕೊಳ್ಳಲೆತ್ನಿಸುವವನು. ಅದಕ್ಕಾಗಿಯೇ ನಿಮ್ಮಿಬ್ಬರನ್ನು ಕುರಿತ ಜನವಾಕ್ಯ ಗಳು ನನ್ನನ್ನು ಆಕರ್ಷಿಸಿದವು. ಪ್ರತ್ಯಕ್ಷದರ್ಶನಕ್ಕಿಂತ ಪರೋಕ್ಷದರ್ಶನ ನನಗೆ ಪ್ರಿಯ. ನನ್ನ ಕಣ್ಣುಗಳು ನನ್ನ ಅಹಂಕಾರದ ಛಾಯೆಯಿಲ್ಲದೆ ಏನನ್ನು ತೋರಿಸಬಲ್ಲವು ? ಅದಕ್ಕಾಗಿಯೇ ನೋಡುವುದನ್ನು ಕಾಲಾಂತರ ದೇಶಾಂತರ ಅಕ್ಷ್ಯಂತರಗಳಿಂದ ನೋಡಲಿಚ್ಛಿಸುತ್ತೇನೆ .... ನಾಯಿಕೆ, ರೂಪದಕ್ಷನಲ್ಲಿ

ಹೇಗೂ ಹೋಗುತ್ತೇನೆ. ಆದರೆ ನಾನು ಆತನಿಂದ ಕೇಳಲಿಚ್ಛಿಸುವ ಕಥೆಯೇ ಬೇರೆ !

ಸುತನುಕಾ : ಆರ್ಯ, ಪ್ರಥಮದಲ್ಲಿ ಜನರು ನಮ್ಮಿಬ್ಬರ ಪ್ರಣಯವನ್ನು ತಾವೇ ಕಲ್ಪಿಸಿಕೊಂಡು ಆದ್ರ್ರಜಿಹ್ವೆಗಳಲ್ಲಿ ಆಡಿಕೊಳ್ಳುತ್ತಿದ್ದರಂತೆ. ಅನಂತರ ಅವರ ಮಾತುಗಳಲ್ಲಿ ಆಶ್ಚರ್ಯದ ಕಥಾನಕಗಳು ಬೆರೆತುವಂತೆ. ಈಚೆ, ಪ್ರಣಯಕ್ಕೆ ಬದಲು ದ್ವೇಷವನ್ನು ಕಲ್ಪಿಸಿ ಜನ ಆಡಿಕೊಳ್ಳುತ್ತಿರುವರೆಂದೂ ಕೇಳಿದ್ದೇನೆ. ಪ್ರಾಯಶಃ, ನೀವು ಈ ಮಾತುಗಳನ್ನು ಕೇಳಿ ಹಾಗೂ ನಮ್ಮಿಬ್ಬರಲ್ಲಿ ಬೆಳೆಯುತ್ತಿರುವ ವಿಲಕ್ಷಣ ಸ್ಪರ್ಧೆಯನ್ನು ಗಮನಿಸಿ ಇವುಗಳ ಹಿಂದೆ ದೀರ್ಘರಮ್ಯ ಕಥೆಯೊಂದನ್ನು ನಿರೀಕ್ಷಿಸಿರುವಿರೆಂದು ತರ್ಕಿಸುತ್ತೇನೆ. ಆದರೆ, ( **ಮುಗುಳುನಗೆಯೊಡನೆ** ) ಆರ್ಯರ ನೂತನಕಾವ್ಯಕ್ಕೆ ವಸ್ತುವಾಗಬಲ್ಲ ಅಂಥ ಯಾವ ಕಥೆಯೂ ಘಟಿಸಲಿಲ್ಲ ! .... ಮೊದಲಿಗೆ ನಮ್ಮಿಬ್ಬರಲ್ಲಿ ಸ್ನೇಹವಿತ್ತು ; ಅದರಿಂದ ಮೊದಲಾದ ಸ್ಪರ್ಧೆ ಮುಂದುವರಿಯುತ್ತಿದೆ, ಇಷ್ಟೇ ಕಥೆ.

ಚಂದ್ರಕೀರ್ತಿ : ರೂಪದಕ್ಷ ಅಜ್ಞಾತನಾಗಿ ನಗರಕ್ಕೆ ಬಂದುಹೋದದ್ದು ?

ಸುತನುಕಾ : ಅದು ಅವರ ಆಗಮನನಿರ್ಗಮನದಷ್ಟೇ ಅಜ್ಞಾತ ! ಕಳೆದ ಮಾಘ ಅಮಾವಾಸ್ಯೆಯ ರಾತ್ರಿ ಅವರು ನಗರದಲ್ಲಿ ಬಂದಿದ್ದರೆಂಬುದು ಮತ್ತು ಅದೇ ರಾತ್ರಿ 'ದ್ಯುಲೋಕಮನೋಹರ'ದಲ್ಲಿ ಆಲೇಖ್ಯವೊಂದನ್ನು ರಚಿಸಿದ್ದರೆಂಬುದು ನನಗೆ ತಿಳಿದದ್ದು ಅನಂತರ ಪ್ರಾತಃಕಾಲದಲ್ಲಿ, ಅವರ ಹ್ರಸ್ವಪತ್ರಿಕೆಯೊಂದು ಇಲ್ಲಿ ಬಂದಾಗ.

ಸುಸಂಗತಾ : ಆರ್ಯರಿಗೆ ಹೇಳಬಹುದಾದ ಕೌತುಕವೆಂದರೆ, ಅದೇ ರಾತ್ರಿ ಅಜ್ಜುಕಾಳ ಈ ಅನರ್ಘ ವಸಂತಾಭರಣಗಳು ಅಪಹೃತವಾಗಿದ್ದವು.

ಸುತನುಕಾ : ಅದು ಕಾಕತಾಲೀಯ ಆರ್ಯ. ಆಭರಣಗಳನ್ನು ಚೋರರು ಅಪಹರಿಸಿದ್ದರು. ಮತ್ತೊಂದು ವಾರದಲ್ಲಿ ನಗರಪಾಲಕರ ಶ್ರಮದಿಂದ ಚೋರರೂ ಸಂಗಡ ಆಭರಣಗಳೂ ದೊರೆತವು .... ಹಲಾ, ಒಳಗೆ ನರ್ತನ ಸಾಹಿತ್ಯಗಳನ್ನು ಸಿದ್ಧಪಡಿಸುವುದಿದೆ.

[ಹೆಜ್ಜೆ ಕ್ಷಯಿಸುವುದು. ಈತನಕ ಇದ್ದ ಹಿನ್ನೆಲೆಯ ವಾದ್ಯಗಳು ಬದಲಾಗಿ ಮುಂದಿನ ಪ್ರಸಂಗಕ್ಕೆ ತಕ್ಕ ಚಿತ್ರವಾದ್ಯಗಳು ಆರಂಭವಾಗುವುವು.]

ಸುತನುಕಾ : ಆರ್ಯ, ಸುಸಂಗದಾಳ ಅಪಪ್ರಸಂಗದಿಂದ ವ್ಯಥಿತಳಾಗಿದ್ದೇನೆ, ಕ್ಷಮೆಯಾಚಿಸುತ್ತಿದ್ದೇನೆ. ರೂಪದಕ್ಷರ ಶೀಲಸಂಪತ್ತಿನೆದುರು ಇಂಥ ಮಾತು ಎಷ್ಟು ಹೀನವೆಂಬುದನ್ನು ನಾನು ಬಲ್ಲೆ.

ಚಂದ್ರಕೀರ್ತಿ : ನಾನು ಅದನ್ನು ಚಿಂತಿಸುತ್ತಿಲ್ಲ, ನಿನ್ನ ಕಥನವನ್ನೆ ಚಿಂತಿಸುತ್ತಿದ್ದೇನೆ ನಾಯಿಕೆ. ಕಥನ ತುಂಬ ಹ್ರಸ್ವವಾಯಿತು, ರೂಕ್ಷವಾಯಿತು .... ಅಥವಾ, ಆ ಕುರಿತ ನನ್ನ ಪ್ರಶ್ನೆವೇ ರೂಕ್ಷವಾಗಿತ್ತು ....

ಸುತನುಕಾ : ಆರ್ಯ, ಅನ್ಯಥಾ ಭಾವಿಸಬಾರದು. ರೂಪದಕ್ಷರಲ್ಲಿ ನನಗೆ ಅತ್ಯಂತ ಗೌರವವಿದೆ. ತದ್ಭಾವಗಳನ್ನು ವರ್ಣಿಸುವಲ್ಲಿ ನಾನು ಅಶಕ್ತಳು.

ಚಂದ್ರಕೀರ್ತಿ : ಆತನನ್ನು ಯಾರು ತಾನೇ ಗೌರವಿಸದೆ ಇರಬಲ್ಲರು ನಾಯಿಕೆ ?— ಅದೊಂದು ಪ್ರತಿಭೋನ್ಮತ್ತ ವಿದ್ಯುಚ್ಚೇತನ !

ಸುತನುಕಾ : ಇಂದಿಗೂ, ರೂಪದಕ್ಷರ ಆಕರ್ಷಣೀಯ ವ್ಯಕ್ತಿತ್ವದ ಯಾವ ಅಂಶವೂ ನನಗೆ ಅಪ್ರಿಯವೆನಿಸಿದುದಿಲ್ಲ, ಅವರ ದೈತ್ಯಾಹಂಕಾರವೊಂದಲ್ಲದೆ.

ಚಂದ್ರಕೀರ್ತಿ : ಅಹಂಕಾರ ? ....

ಸುತನುಕಾ : (ಈಷದುದ್ವೇಗದಿಂದ) ಈ ಒಂದು ಅಂಶದಲ್ಲಿ ಬೇರೆ ಯಾರಿಗಿಂತ ಸಮೀಪದ ಅನುಭೂತಿ ನನಗಿದೆ ಆರ್ಯ ... ಸಾಮಾನ್ಯ ಅಹಂಕಾರವೆ ?... ಅದು ಒಮ್ಮೊಮ್ಮೆ ಉತ್ತೇಜಿತವಾಗಿ ಮನುಷ್ಯಗಾತ್ರದಲ್ಲಿ ಆಸುರೀಗುಣದ ಪರಮಾವಧಿಗೆ ಒಂದು ಅಸಾಧಾರಣ ನಿದರ್ಶನವನ್ನೊದಗಿಸಿಕೊಡುತ್ತದೆ ! ಅಂಥ ಸಮಯದಲ್ಲಿ ಅವರು ಹಿಂಸ್ರಪಶುವಾಗುತ್ತಾರೆ, ಅನೂಹ್ಯ ರಾಕ್ಷಸ ರಾಗುತ್ತಾರೆ !

ಚಂದ್ರಕೀರ್ತಿ : ನಿನ್ನ ಇಂಥ ಅನುಭೂತಿಗಾಗಿ ನನ್ನ ಪ್ರಾಮಾಣಿಕ ಅನುಕಂಪನ ವಿದೆ ನಾಯಿಕೆ. ನಿನ್ನ ಅನುಭೂತಿಯನ್ನು ತಿರಸ್ಕರಿಸುವ ಇಚ್ಛೆಯಿಂದಲ್ಲ — ಆದರೂ ಇದೊಂದು ಮಾತನ್ನು ಸ್ಪಷ್ಟ ಹೇಳುತ್ತೇನೆ : ರೂಪದಕ್ಷನಲ್ಲಿ ಅಂಥ ಅಹಂಕಾರವನ್ನು ನಾನು ಕಾಣಲಿಲ್ಲ.

ಸುತನುಕಾ : ( ಈ ಮತ್ತು ಮುಂದಿನ ಮಾತುಗಳಲ್ಲಿ ಸುತನುಕಾ ಮತ್ತಷ್ಟು ಉದ್ವೇಜಿತ ಳಾಗಿ ತೋರುತ್ತಾಳೆ.) ನೀವು ಕಾಣಲಿಲ್ಲ, ಜಗತ್ತೇ ಕಾಣಲಾರದು ! ಆದರೆ ನಾನೊಬ್ಬಳು, ಈ ಹತಭಾಗ್ಯೆಯೊಬ್ಬಳು ಸ್ಪಷ್ಟ ಪ್ರತ್ಯಕ್ಷ ಅನುಭವಿಸಿದ್ದೇನೆ ... ಸ್ಮರಿಸಿಕೊಂಡರೆ ನನ್ನ ಅಂತಃಕರಣವೆಲ್ಲ ರೋಮಾಂಚಗೊಳ್ಳುತ್ತದೆ ! ಚಿತ್ತ ಕ್ರೋಶಕ್ರೋಶ ದೂರ ಸಿಡಿದು ನಿಲ್ಲುತ್ತದೆ ... ಓಹ್ ! ನಾನು ಅದನ್ನು ವರ್ಣಿಸುವುದೂ ಅಸಾಧ್ಯ, ನೀವು ಗ್ರಹಿಸುವುದಂತೂ ಅತ್ಯಂತ ಅಸಾಧ್ಯ !

ಚಂದ್ರಕೀರ್ತಿ : ಒಮ್ಮೆ ರೂಪದಕ್ಷನೂ ನಿನ್ನ ಪ್ರತಿಯಾಗಿ ಇಂಥದೇ ಮಾತು ಗಳನ್ನು ಹೇಳಬಹುದು—ಆಗ ?

ಸುತನುಕಾ : ನನ್ನ ಮಾತಿಗೆ ಅವರೇ ಪ್ರಮಾಣ ಕೊಟ್ಟರೆಂದು ಭಾವಿಸುತ್ತೇನೆ. — ಅಥವಾ, ಅವರು ಇಚ್ಛೆ ಬಂದಂತೆ ಹೇಳಿಕೊಳ್ಳಲಿ, ನನಗೆ ಅವರ ಮಾತಿನಲ್ಲಿ ಅಥವಾ ಅವರಲ್ಲಿ . . ಕ್ಷಮಿಸಬೇಕು ಆರ್ಯ, ನನ್ನ ಆಂತರ್ಯಜುಗುಪ್ಸೆಯನ್ನು ಉತ್ತೇಜನಗೊಳಿಸಬಾರದಾಗಿ ಪ್ರಾರ್ಥಿಸುತ್ತೇನೆ.

ಚಂದ್ರಕೀರ್ತಿ : ನಾಯಿಕೆ, ನಿನ್ನ ಭಾವಗಳು ನಿರಾಧಾರ ಕಲ್ಪಿತಗಳಲ್ಲವೆಂದು ಸಿದ್ಧ ಮಾಡಿಕೊಳ್ಳಲು ಮಾತ್ರ ನಾನು ಪ್ರಶ್ನೆಮಾಡುತ್ತಿದ್ದೇನೆ.

ಸುತನುಕಾ : ಆರ್ಯ, ನನ್ನ ಭಾವಗಳು ನಿರಾಧಾರವಲ್ಲವೆಂಬುದಕ್ಕೆ ನಿಮಗೆ ನಿದ-

ರ್ಶನ ಬೇಕಲ್ಲವೆ? ... ಒಂದು ಅಕಾಲಕ್ಷಣದಲ್ಲಿ ದೀರ್ಘವತ್ಸರಗಳ ನಿದರ್ಶನ ಕೇಳುತ್ತಿದ್ದೀರಿ! ಒಮ್ಮೊಮ್ಮೆ, ಅಹೋರಾತ್ರಿಗಳ ಕ್ಷಣಕ್ಷಣದಲ್ಲಿಯೂ ನನ್ನನ್ನು ಉನ್ಮತ್ತತೆಯ ನರಕರೌರವದಲ್ಲಿ ಹಿಂಸಿಸಿದ ಆ ಅಹಂಕಾರಕ್ಕೆ ಈಗ ಯಾವ ನಿದರ್ಶನವನ್ನು ಕೊಡಲಿ? ... ಪ್ರತ್ಯಕ್ಷ ನೋಡಿದ ಈ ಚಂದ್ರ-ಶಾಲೆಯ ಯುವಯುವಗಳು, ಈ ವಸಂತನೇಪಥ್ಯದ ತಂತುತಂತುಗಳು ಮೂಕ ನಿರ್ಜೀವವಾಗಿರುವಾಗ ಮತ್ತಾವ ನಿದರ್ಶನವನ್ನು ಕೊಡಲಿ? ... ಅಥವಾ, ಆರ್ಯ, ಇನ್ನು ಅತ್ಯಲ್ಪ ಅವಕಾಶದಲ್ಲಿ ನನ್ನ ಅಂತರ್ಗೋಪಿತ ಪ್ರತಿಶೋಧವೇ ಅದಕ್ಕೆ ನಿದರ್ಶನ ಕೊಡುತ್ತದೆ.

ಚಂದ್ರಕೀರ್ತಿ : ಚಕ್ಷುಹೀನವಾದ ಪ್ರತಿಶೋಧದ ನಿದರ್ಶನ ?

ಸುತನುಕಾ : ಆರ್ಯ, ದೀರ್ಘಕಾಲದಿಂದ ಗುಹಾಗೋಪಿತವಾಗಿರುವ ನನ್ನ ಪ್ರತಿಶೋಧವನ್ನು ಉತ್ಪಾಟನ ಮಾಡಲೆತ್ನಿಸುತ್ತಿದ್ದೀರಿ ನೀವು !

ಚಂದ್ರಕೀರ್ತಿ : ನಾಯಿಕೆ, ನಿಮ್ಮಿಬ್ಬರಲ್ಲಿ ಪಕ್ಷಪ್ರತಿಪಕ್ಷಗಳನ್ನು ಕಲ್ಪಿಸಿ ಯಾರೊಬ್ಬರನ್ನು ಪೋಷಿಸಬೇಕೆಂಬುದು ನನ್ನ ಇಚ್ಛೆಯಲ್ಲ .... ರೂಪದಕ್ಷ ನನಗೆ ಪ್ರಿಯ, ಸತ್ಯ. ಆದರೆ ನಾನು ಈಗ ಮಾತನಾಡುತ್ತಿರುವುದು ಪ್ರಿಯಾಪ್ರಿಯತೆಯ ಆಚೆಯಿಂದ.

ಸುತನುಕಾ : ಆರ್ಯ, ಬಹುಶಃ ನಾನು ಉತ್ತೇಜಿತಳಾಗಿದ್ದೇನೆ. ನನ್ನ ವಾಣಿ ದರಿದ್ರವಾಗಿದೆ.... ಅಥವಾ, ನಾನು ಸರ್ವಸ್ವ ದರಿದ್ರಳಾಗಿದ್ದೇನೆ- ಈ ದಾರಿದ್ರ್ಯಾಂಧಕಾರದ ಚೂಲಜ್ವಾಲೆಯನ್ನು ಮಾತ್ರ ನಾನು ಸ್ಪಷ್ಟ ಕಾಣುತ್ತಿದ್ದೇನೆ. ಆ ಔಜ್ವಲ್ಯದಲ್ಲಿನ ರೂಪದಕ್ಷರ ಪರಿಹಾಸಪ್ರತಿಮೆ ನನ್ನ ಏಕೈಕ ಲಕ್ಷ್ಯವಾಗಿದೆ .... ನನ್ನ ಜೀವನಸಮಸ್ತವನ್ನೂ ನ್ಯಾಸವಾಗಿಟ್ಟು ಆ ಪರಿಹಾಸವನ್ನು ಶತಚೂರ್ಣಗೊಳಿಸುತ್ತೇನೆ.

ಚಂದ್ರಕೀರ್ತಿ : ಸ್ಥಿರಳಾಗು ನಾಯಿಕೆ .... ಒಂದು ವರ್ಷದ ಅವಧಿಯಲ್ಲಿ ಇಂದು ಮಾತ್ರ ನಾನು ರೂಪದಕ್ಷನನ್ನು ನೋಡಿದೆ. ನಾಗರಕಪ್ರಮದೆಯರ ಅಕ್ಷಿಲೋಭಕ್ಕೆ ಅಲಂಕಾರವಾಗಿ ಶೋಭಿಸುತ್ತಿದ್ದ ಆತನ ಶರೀರಸೌಷ್ಠವ ಅಂಗಕಾಂತಿ ನಿನಗೆ ಅಪರಿಚಿತವೆ ? ಅಂಥ ಗಾತ್ರ ಇಂದು ಏನಾಗಿದೆ ಬಲ್ಲೆಯಾ ? ಹನ್ನೆರಡು ಮಾಸಗಳಲ್ಲಿ ಹನ್ನೆರಡು ಹಿಂಸ್ರವತ್ಸರಗಳ ವಕ್ತ್ರಕುಹರವನ್ನು ದಾಟಿ ಬಂದ ರೂಪದಕ್ಷ ಇಂದು ಅಕಾಲವೃದ್ಧನಾಗಿದ್ದಾನೆ, ಜೀರ್ಣನಾಗಿದ್ದಾನೆ.

ಸುತನುಕಾ : ( ಈಷದ್ಗದ್ಗದಸ್ವರದಲ್ಲಿ ) ಆರ್ಯ ...

ಚಂದ್ರಕೀರ್ತಿ ... ಮುಖ ಜಪಾಕುಸುಮದಂತೆ ಪಾಂಡುರವಾಗಿದೆ, ಜೀರ್ಣಫಲದಂತೆ ರೇಖಿತವಾಗಿದೆ; ಗಾತ್ರ ಶುಷ್ಕಕಾಷ್ಠದಂತೆ ಆಕುಂಚಿತವಾಗಿದೆ ... ಆ ಅಕ್ಷಿತೇಜಸ್ಸಿನಿಂದಲ್ಲದೆ ಇಂದು ಆತನನ್ನು ಗುರುತಿಸುವುದು ಕೂಡ ಅಸಾಧ್ಯ !

ಸುತನುಕಾ : ( ಪೂರ್ಣ ಗದ್ಗದಳಾಗಿ ) ಆರ್ಯ, ಈ ನಿರ್ಭಾಗ್ಯಳನ್ನು ನೀವೂ ನಿಷ್ಠುರಳೆಂದು ಭಾವಿಸುವಿರಾ ?

ಚಂದ್ರಕೀರ್ತಿ : ಅನಗತ್ಯವಾಗಿ ನಾನೇಕೆ ಹಾಗೆ ಭಾವಿಸಲಿ ?

ಸುತನುಕಾ : ಸತ್ಯ ಆರ್ಯ. ನೀವು ಸ್ವತಃ ಏನನ್ನೂ ಭಾವಿಸುವುದಿಲ್ಲ ! ಅನ್ಯರ ಮಾನಸಸರಸ್ಸಿನ ಭಾವತರಂಗಗಳಲ್ಲಿ ನಿರ್ಭಾವರಾಗಿಯೇ ಕ್ರೀಡಿಸುವವರು ನೀವು ! ... ( ನಿಟ್ಟುಸಿರಿಡುವಳು. )

[ ಹೆಜ್ಜೆ ವೃದ್ಧಿಸುವುದು ; ಹಿನ್ನೆಲೆಯ ವಾದ್ಯಗಳು ಪಲ್ಲಟಿಸಿ ಯಥಾಪೂರ್ವವಾಗುವುವು ]

ಸುಸಂಗತಾ : ಅಜ್ಜುಕಾ, ದೀಪವನ್ನಿರಿಸಿದ್ದೇನೆ.

ಸುತನುಕಾ : ಓ, ಇಷ್ಟು ಬೇಗ ಸೂರ್ಯಾಸ್ತಮಯವಾಗಿದೆ ! ... ಹಲಾ ...

ಸುಸಂಗತಾ : ಇನ್ನೊಂದು ದೀಪ ತರುತ್ತೇನೆ.

ಸುತನುಕಾ : ಬೇಡ, ಬಂಧುಲನನ್ನು ನೋಡು.

[ ಹೆಜ್ಜೆ ಕ್ಷಯಿಸುವುದು ]

ಸುತನುಕಾ : ... ಇಂದಿನ ನೃತ್ಯದ ಯಶಸ್ಸಿಗಾಗಿ ನನ್ನನ್ನು ಆಶೀರ್ವದಿಸುವುದಿಲ್ಲವೆ ಆರ್ಯ ?

ಚಂದ್ರಕೀರ್ತಿ : ನಿನ್ನನ್ನು ಅಭಿನಂದಿಸಲೆಂದು ಬಂದವನು ನಾನು — ಒಳ್ಳೆಯದು, ಆಶೀರ್ವದಿಸುತ್ತೇನೆ. ಮಧುಹೃದಯದ ಪೂರ್ಣಕುಂಭವನ್ನು ಚೆಲ್ಲಿ ಆಶೀರ್ವದಿಸುತ್ತೇನೆ : ಜೀವನದ ಜಯಸಮಸ್ತವನ್ನೂ ವರ್ಧಿಸಲಿ ನಿನ್ನ ಇಂದಿನ ವಿಜಯ !

ಸುತನುಕಾ : ನನ್ನ ನೃತ್ಯಜೀವನದ ಅನಲ್ಪಕಾಲದಲ್ಲಿ ಆಚಾರ್ಯಪಾದರೊಬ್ಬರನ್ನು ಬಿಟ್ಟು ಬೇರೊಬ್ಬರನ್ನು ಆಶೀರ್ವಾದಕ್ಕಾಗಿ ಪ್ರಾರ್ಥಿಸುತ್ತಿರುವುದು ಇದು ಎರಡನೆಯ ಬಾರಿ ಮಾತ್ರ ! ಆರ್ಯ, ಅನುಗ್ರಹವಾಯಿತು .... ಮತ್ತು, ಆರ್ಯ, ನನಗೇ ಆಶ್ಚರ್ಯವಾಗುತ್ತಿದೆ : ಒಂದು ಕ್ಷಣದಲ್ಲಿ ಅತ್ಯಪೂರ್ವವಾಗಿ ಎಷ್ಟೊಂದು ಉತ್ತೇಜಿತಳಾಗಿಬಿಟ್ಟಿದ್ದೆ ನಾನು !

ಚಂದ್ರಕೀರ್ತಿ : ನಾಯಿಕ, ನನ್ನ ನೂತನ ಕಾವ್ಯವನ್ನು ನನಗಿಂತ ಮಧುರವಾಗಿ ಕಥಿಸಬಲ್ಲೆ ನೀನು !....ಒಳ್ಳೆಯದು, ಮತ್ತೆ ಅವಕಾಶಪಡೆಯುತ್ತೇನೆ....ಪಕ್ಷಿ ಕೋಶವನ್ನು ಅನಾವೃತಗೊಳಿಸಿ ಲಘುವಾಗಿದ್ದೀಯೆ ; ಇಂದಿನ ನೃತ್ಯದಲ್ಲಿ ಈ ಲಾಘವವನ್ನೂ ನಿರೀಕ್ಷಿಸುತ್ತೇನೆ.

[ ಹೆಜ್ಜೆ ವೃದ್ಧಿಸುವುದು. ]

ಸುಸಂಗತಾ : ಪ್ರದೋಷಪೂಜೆಯನ್ನು ಮುಗಿಸಿ ಆಚಾರ್ಯಪಾದರೇ ಇಲ್ಲಿ ದಯೆ ಮಾಡುವರಂತೆ.

ಚಂದ್ರಕೀರ್ತಿ : ನಾನಿನ್ನು ಹೊರಡುತ್ತೇನೆ ನಾಯಿಕೆ.

ಸುತನುಕಾ : ಆಚಾರ್ಯಪಾದರ ದರ್ಶನಮಾಡಿ ಹೋಗಬಹುದಲ್ಲವೆ ?
ಚಂದ್ರಕೀರ್ತಿ ( ಸಹಾಸ ) ಮತ್ಸ್ಯಾವತಾರ ನೃಸಿಂಹಾವತಾರಗಳ ಸಮಾಗಮ ! ?
ಸುತನುಕಾ : ಪ್ರಹೇಲಿಕೆ ಅರ್ಥವಾಗಲಿಲ್ಲ.
ಚಂದ್ರಕೀರ್ತಿ : ವೇದೋದ್ಧರಣಕ್ಕಾಗಿ ಬಂದ ನೂತನ ಅವತಾರ ನಿಮ್ಮ ಆಚಾರ್ಯ ಪಾದರದು ; ನಾನು ಹೇಗೂ ಕವಿ, ಪ್ರಿಯಜನರ ಹೃದಯವನ್ನೆ ಭೇದಿಸುವವನು! ... ಕೇವಲ ಪರಿಹಾಸ ನಾಯಿಕೆ, ಆಚಾರ್ಯಪಾದರನ್ನು ನಿಂದಿಸುತ್ತಿರುವನೆಂದು ಭಾವಿಸಬೇಡ.
ಸುತನಕಾ : ಹಲಾ ....

[ ಹೆಜ್ಜೆ ಕ್ಷಯಿಸಿ ಅನಂತರ ವೃದ್ಧಿಸುವುದು. ]

ಸುತನುಕಾ : ಆರ್ಯ, ಅಲ್ಪ ಫಲೋಪಹಾರಗಳನ್ನು ಸ್ವೀಕರಿಸಬೇಕು.
ಚಂದ್ರಕೀರ್ತಿ : ಒಳ್ಳೆಯದು, ... ಬರುತ್ತೇನೆ.

[ ಹೆಜ್ಜೆ ಕ್ಷಯಿಸುವುದು. ]

ಸುತನುಕಾ : ಹಲಾ, ಆಚಾರ್ಯಪಾದರ ಮಾರ್ಗವನ್ನು ನಿರೀಕ್ಷಿಸುತ್ತಿರು.

[ ಹೆಜ್ಜೆ ಕ್ಷೀಣಿಸುವುದು. ]

ಸುತನುಕಾ : ( ಸ್ವಗತ ) ... ಗುಹೆಯಲ್ಲಿಯೂ ಗಂಧರ್ವಲೋಕವನ್ನು ಬೆಳಗಿಸುವ ಕವಿಯೆ, ನಿನಗೆ ಸರ್ವತ್ರ ಜಯವಿರಲಿ! ... ಆದರೆ ಪ್ರತ್ಯಕ್ಷದ ಕರ್ತವ್ಯದಿಂದ ವಿಸ್ಮೃತಳಾಗಲಾರೆ ! ... ರಾತ್ರಿ ಕಳೆದು ನಿನ್ನ ಸಮೀಪಕ್ಕೇ ಬರುತ್ತೇನೆ ಕವಿಯೆ ! ... ನನ್ನ ಸಲುವಾಗಿ ಪ್ರಾರ್ಥಿಸುತ್ತೇನೆ, ... ಅನ್ಯರೊಬ್ಬರ ಸಲುವಾಗಿಯೂ ಪ್ರಾರ್ಥಿಸುತ್ತೇನೆ, ... ಅನ್ಯರೆಲ್ಲರ ಸಲುವಾಗಿ ಕೂಡ ಪ್ರಾರ್ಥಿಸುತ್ತೇನೆ : ನಿನಗೆ ಸರ್ವತ್ರ ವಿಜಯವಿರಲಿ ! ...

[ ಹೆಜ್ಜೆ ವೃದ್ಧಿಸುವುದು ]

ಸುಸಂಗತಾ : ಆಚಾರ್ಯಪಾದರ ಆಗಮನವಾಗುತ್ತಿದೆ ಅಜ್ಜುಕಾ.
ಸುತನುಕಾ : ಬರಮಾಡು.

[ ಹೆಜ್ಜೆ ಕ್ಷಯಿಸಿ ಅನಂತರ ಎರಡು ಹೆಜ್ಜೆಗಳು ವೃದ್ಧಿಸುವುವು. ಪುನಃ, ಮತ್ತೊಂದು ಕ್ಷಯಿಸುವುದು ]

ಸುತನುಕಾ : (ಸಸಂಭ್ರಮ) ಶಿಷ್ಯೆ ಅಭಿವಾದಿಸುತ್ತಾಳೆ ಆಚಾರ್ಯ.
ಆಚಾರ್ಯ : ಏಳು ವತ್ಸೆ. ನಿನಗೆ ಭದ್ರವಾಗಲಿ.

[ ಹೆಜ್ಜೆ ವೃದ್ಧಿಸುವುದು. ]

ಸುತನುಕಾ : ಅರ್ಘ್ಯಾದಿಗಳನ್ನು ಸ್ವೀಕರಿಸುವ ಕೃಪೆಯಾಗಲಿ.

ಆಚಾರ್ಯ : ಸ್ವಸ್ತಿ. ರಸವತಿಯಾಗು, ಯಶಸ್ವತಿಯಾಗು.
ಸುತನುಕಾ : ... ಪೀಠ ಅಲಂಕೃತವಾಗಲಿ. ಹಲಾ ...

[ ಹೆಜ್ಜೆ ಹಾಕುವುದು. ]

ಆಚಾರ್ಯ : ವತ್ಸೆ, ಪೂರ್ವಪ್ರಯೋಗ ಕುಶಲವೆ ?
ಸುತನುಕಾ : ಆಚಾರ್ಯಪಾದರ ಆಶೀರ್ವಾದದಿಂದ.
ಆಚಾರ್ಯ : ಅಸ್ತು .... ವತ್ಸೆ, ನಿನಗೆ ಅಜ್ಞಾತವಲ್ಲ : ಇಂದಿನ ನೃತ್ಯಯೋಜನೆ ಭರತ ಶಾಸ್ತ್ರಕ್ಕೆ ಅಲಂಕಾರಪ್ರಾಯವಾಗುವಂಥದು, ಪಂಡಿತಜಿಹ್ವೆಗಳ ಮುಕ್ತಾ ಫಲವಾಗುವಂಥದು, ಸಾಮಾಜಿಕರಿಗೆ ರಸನಿಕೇತನವೆನಿಸುವಂಥದು. ಇದರ ರೂಪಕಲ್ಪನದಲ್ಲಿ ರೂಪದಕ್ಷ ದೇವದತ್ತನ ಕೌಶಲ ಪರೀಕ್ಷೆಯಾಗಿದೆ, ನೃತ್ಯ ಯೋಜನೆಯಲ್ಲಿ, ಶಿಕ್ಷೆಯಲ್ಲಿ ನಿನ್ನ ಆಚಾರ್ಯನ ಸಾಮರ್ಥ್ಯ ಪರೀಕ್ಷೆಯಾಗಿದೆ; ಇನ್ನು ಇದರ ಪ್ರಯೋಗದಲ್ಲಿ ನಿನ್ನ ಸತ್ತ್ವಪರೀಕ್ಷೆಯಾಗಲಿದೆ.
ಸುತನುಕಾ : ಆಚಾರ್ಯಪಾದಗಳನ್ನು ಗೌರವಪೂರ್ವಕ ಸ್ಮರಿಸಿ ಈ ಶಿಷ್ಯೆ ವಿನಯ ದಿಂದ ವಿಜ್ಞಾಪಿಸುತ್ತಾಳೆ : ಆಚಾರ್ಯಪಾದರ ಕೃಪೆಯಿಂದ ಮಗಧಸಾಮ್ರಾಜ್ಯದ ನಾಯಿಕಾಮಣಿಯೆನಿಸಿಕೊಂಡ ಈ ಸುತನುಕಾ ಇಂದು, ಈ ಪ್ರಯೋಗ ದಲ್ಲಿ, ಭರತಶಾಸ್ತ್ರಪ್ರಯೋಕ್ತೃಗಳ ಅಕ್ಷಿಮಣಿಯಾಗುವಳೆಂಬ ವಿಶ್ವಾಸವಿದೆ.
ಆಚಾರ್ಯ : ಭಲಾ ! ನಾನಿದನ್ನು ಪ್ರಶಂಸಿಸುತ್ತೇನೆ .... ಆದರೆ, ವತ್ಸೆ, ಜಾಗೃತಿಗಾಗಿ ಹೇಳುತ್ತಿದ್ದೇನೆ, ಅವಿಶ್ವಾಸಕ್ಕಾಗಿಯಲ್ಲ : ಇಂದು ನಿನ್ನ ಉಚ್ಚಗ್ರಹಗಳು ವ್ಯಂಗ್ಯವಾಗಿವೆ. ಭೀತಿ ಬೇಡ. ತಕ್ಕ ಉಪಶಮನವೂ ನಡೆದಿದೆ. ಜಾಗೃತಳಾಗಿ ಏಕೋದ್ದೃಢದೃಷ್ಟಿಯಿಂದ ಪ್ರವೃತ್ತಳಾಗು. ಯಶಸ್ವತಿಯಾಗುವೆ.
ಸುತನುಕಾ : ಆಚಾರ್ಯಪಾದರ ಆಶೀರ್ವಾದವಲಯದಲ್ಲಿ ರಕ್ಷಿತಳಾಗಿರುವವಳನ್ನು ಗ್ರಹದೃಷ್ಟಿಯ ವ್ಯಂಗ್ಯ ತಾಕಲಾರದೆಂದು ನನ್ನ ದೃಢ.
ಆಚಾರ್ಯ : ವಿಶ್ವಸ್ತನಾಗಿದ್ದೇನೆ. ನಿನಗೆ ಭದ್ರವಾಗಲಿ ! ... ವತ್ಸೆ, ನಿನ್ನ ಮನನ ಕ್ಕೆಂದು ಪುನಃಸ್ಮರಣ ಇದು : ನಮ್ಮ ಲಕ್ಷ್ಯ ಸಾಮಾಜಿಕರ ಸಾಧುವಾದವಲ್ಲ, ಸದ್ಯಃಪರಕೀರ್ತಿಯಲ್ಲ. ಜಗತ್ತಿನ ವ್ಯವಹೃತಿಗಳಿಂದ ಬಹುಭಾಗ ನಿರ್ಲಿಪ್ತಿಯನ್ನು ಸಾಧಿಸಿರುವ ನಿನ್ನ ಆಚಾರ್ಯ ಅಂಥ ಅಲ್ಪ ಲಕ್ಷ್ಯಕ್ಕಾಗಿ ಪ್ರಾಪಂಚಿಕಯಾತ್ರೆ-ಯಲ್ಲಿ ಪ್ರವೃತ್ತನಾಗುತ್ತಿರಲಿಲ್ಲ. ನಮ್ಮ ಲಕ್ಷ್ಯ ಮಹತ್ತಮವಾದುದು ... ದೇವಪವಿತ್ರವಾದ ಆರ್ಯಾವರ್ತದ ಪುಣ್ಯಭೂಮಿಯಲ್ಲಿ ಇಂದು ಪಾಖಂಡಿ ಗಳು ಹುಟ್ಟಿ ವೇದಗಳನ್ನು ಖಿಲಗೊಳಿಸುವೆವೆಂದು ಕಟಿಬದ್ಧರಾಗಿದ್ದಾರೆ. ವೇದಗಳು ನಿಖಿಲವಾದರೂ ವೇದಭಾವವನ್ನು ಅವರು ಖಿಲಗೊಳಿಸಬಲ್ಲರು. ವೇದಭಾವ ಸಂಪೂರ್ಣ ನಷ್ಟವಾಯಿತೆಂದರೆ ಅಂಥ ಜನರಿಗೆ ಹಾಗೂ ಅಂಥ ದೇಶಕ್ಕೆ ಬ್ರಹ್ಮಾಂಡವೇ ನಷ್ಟವಾಗುತ್ತದೆ ... ಇಂಥ ಪರ್ವಕಾಲದಲ್ಲಿ ವೇದದ

ಪುನರುದ್ಧೃತಿಗಾಗಿ — ಅರ್ಥಾತ್ ವೇದಭಾವದ ಪುನರುದ್ಧೃತಿಗಾಗಿ — ದೀಕ್ಷೆ ತೊಟ್ಟವರು ನಾವು ... ವತ್ಸೆ ....

ಸುತನುಕಾ : ಮನನಮಾಡುತ್ತಿದ್ದೇನೆ.

ಆಚಾರ್ಯ : ಅಸ್ತು ... ಸಾರ್ವಕಾಲಿಕ ಜ್ಞಾನ ವೇದಗಳಲ್ಲಿ ಬೀಜರೂಪವಾಗಿ ಸಂಚಿತವಾಗಿದೆ. ವೇದಗಳನ್ನು ಬಿಟ್ಟು ಅನ್ಯಥಾ ಶುದ್ಧಜ್ಞಾನವಿಲ್ಲ, ಅರ್ಥಾತ್ ಅನ್ಯಥಾ ಯಾವುದೂ ಇಲ್ಲ ! ಸಂಪೂರ್ಣ ನಿರ್ಲಿಪ್ತರಾಗಿದ್ದ ಆರ್ಯಮಹರ್ಷಿಗಳು ಕೂಡ ವೇದಸಂಗ್ರಹಕ್ಕಾಗಿಯೇ ಕಾರ್ಯಪ್ರವೃತ್ತರಾಗಿದ್ದರು. ಅದಕ್ಕಾಗಿಯೆ ಪುರಾಣೋಪವೇದಗಳನ್ನು ರಚಿಸಿದರು.. ತತ್ಪರಂಪರೆಯ ಭರತ ಸಂತತಿಯಲ್ಲಿ ಬಂದವರು ನಾವು. ನಾಟ್ಯವೇದದ ಮೂಲಕವಾಗಿ ವೇದಭಾವ ಪ್ರಸರಣವೇ ವೇದಭಾವ ಪುನಸ್ಸ್ಥಾಪನವೇ ನಮ್ಮ ಏಕೈಕ ಲಕ್ಷ್ಯ ... ವತ್ಸೆ.

ಸುತನುಕಾ : ಯಥಾಮತಿ ಗ್ರಹಿಸಿದ್ದೇನೆ.

ಆಚಾರ್ಯ : ಅಸ್ತು .... ಈ ಪರ್ಯಂತದ ಶಿಕ್ಷೆಯನ್ನು ಸ್ಮರಣದಲ್ಲಿಟ್ಟುಕೊಂಡು ಇಂದಿನ ಕರ್ತವ್ಯದಲ್ಲಿ ಪ್ರವೃತ್ತಳಾಗು. ನಿಶ್ಚಯವಾಗಿಯೂ ಯಶಸ್ವತಿಯಾಗುವೆ .... ಅತಿ ಮುಖ್ಯವಾದದ್ದು ಏಕೋದೃಢ ಲಕ್ಷ್ಯ.

ಸುತನುಕಾ : ಸಾಧಿಸುತ್ತೇನೆ ಆಚಾರ್ಯ.

ಆಚಾರ್ಯ : ಇಂದಿನ ನೃತ್ಯಯೋಜನೆಯಲ್ಲಿ ವ್ಯಾಯಾಮಬಾಹುಲ್ಯವಿದೆ. ಕಷ್ಟ ಮಾತ್ರವಲ್ಲ ಅಪಾಯಕರವೂ ಆದ ವಾಯ್ಯಾಮ. ಆದರೆ ಅಷ್ಟುಮಾತ್ರದಿಂದ ಈ ನೃತ್ಯ ಅಪೂರ್ವವಾಗದು. ಈ ವ್ಯಾಯಾಮವೆಲ್ಲ ರಸಕ್ಕಾಗಿ ತನ್ನನ್ನು ಉಪ-ಸರ್ಜಿಸಿಕೊಳ್ಳುವಲ್ಲಿ ಯಶಸ್ವಿಯಾದರೆ ಇಂದಿನ ನೃತ್ಯ ಅಪೂರ್ವ ಮಾತ್ರವಲ್ಲ, ಅದ್ಭುತವೂ ಆದೀತು ... ಅಸ್ತು. ಅಗತ್ಯವಾದುದನ್ನೆಲ್ಲ ಹಿಂದೆಯೇ ತಿಳಿಸಿದ್ದೇನೆ. ಒಂದೊಂದೂ ಲಕ್ಷ್ಯದಲ್ಲಿರಲಿ .... ಆಕಾಶಕೀಚಾರಿಗಳ ಪ್ರಯೋಗದಲ್ಲಿ ಜಾಗ್ರತಳಾಗಿರು.

ಸುತನುಕಾ : ಆಚಾರ್ಯಪಾದರು ಆಶೀರ್ವದಿಸಬೇಕು.

ಆಚಾರ್ಯ : ನಿನ್ನನ್ನು ಆಶೀರ್ವದಿಸಿ ಹೋಗಲೆಂದೇ ಬಂದಿದ್ದೇನೆ ... ಅಲ್ಲದೆ ಇಂದಿನ ಪ್ರಯೋಗದಲ್ಲಿ ನಾನು ಉಪಸ್ಥಿತನಿರುವುದಿಲ್ಲ.

ಸುತನುಕಾ : ಆಚಾರ್ಯ ...

ಆಚಾರ್ಯ : ಆ ಕುರಿತು ಪ್ರಶ್ನೆ ಬೇಡ. ನಿನಗಾಗಿಯೇ ಅದು ಅಗತ್ಯವಾಗಿದೆ ... ಮತ್ತು, ಇಗೋ ... ಈ ಯಂತ್ರ ನಿನ್ನಲ್ಲಿರಲಿ. ನರ್ತನ ಪೂರ್ವದಲ್ಲಿ ಇಷ್ಟ ದೈವತನ್ನು ಸ್ಮರಿಸಿ ದೇಹದಲ್ಲಿ ಧರಿಸತಕ್ಕದ್ದು.

ಸುತನುಕಾ : ಆಜ್ಞೆ ... ಆರ್ಯ ದೇವದತ್ತರು ನಗರಕ್ಕೆ ಮರಳಿರುವ ವಾರ್ತೆ ಆಚಾರ್ಯಪಾದರಿಗೆ ಅಜ್ಞಾತವಲ್ಲವೆಂದು ಭಾವಿಸುತ್ತೇನೆ.

ಆಚಾರ್ಯ : ಹ್ಞು ... ವತ್ಸೆ, ನಾನು ಹೊರಡುತ್ತೇನೆ. ಪುನಃ ಸ್ಮರಿಸುತ್ತೇನೆ: ನಿನ್ನ

ಲಕ್ಷ್ಯ ಸದಾ ಜಾಗೃತವಾಗಿರಲಿ, ಏಕೋದೃಢವಿರಲಿ. ಕರ್ಣಗಳಲ್ಲಿ ಓಂಕಾರ ವೊಂದೇ ವಿಜೃಂಭಿಸುತ್ತಿರಲಿ.

ಸುತನುಕಾ : ಆಶೀರ್ವಾದಕ್ಕಾಗಿ ಅಭಿವಾದಿಸುತ್ತೇನೆ ....

ಆಚಾರ್ಯ : ಸ್ವಸ್ತಿ. ಏಳು. ಯಶಃಶ್ರೀಯುತಳಾಗು ....

ಸುತನುಕಾ : ಪ್ರಾತಃಕಾಲ ದರ್ಶನ ಪಡೆಯುತ್ತೇನೆ.

ಆಚಾರ್ಯ : ಅಸ್ತು.

[ಎರಡು ಹೆಜ್ಜೆಗಳು ಕ್ಷಯಿಸಿ ಕ್ಷಣಾನಂತರ ಒಂದು ವೃದ್ಧಿಸುವುದು]

ಸುತನುಕಾ : ಹಲಾ ...

[ಹೆಜ್ಜೆ ವೃದ್ಧಿಸುವುದು.]

ಸುಸಂಗತಾ : ಅಜ್ಜುಕಾ, ಆಚಾರ್ಯಪಾದರು ಇಲ್ಲಿ ಬರುವ ಮೊದಲಲ್ಲಿ ರೂಪದಕ್ಷರು ಅವರ ದರ್ಶನಕ್ಕಾಗಿ ಹೋಗಿದ್ದರಂತೆ.

ಸುತನುಕಾ : ಆ ?! ... ಯಾರು ಹೇಳಿದರು ?

ಸುಸಂಗತಾ : ಆಚಾರ್ಯಪಾದರ ಚೇಟಿ ಹೇಳಿದ. ಕಾರಣ ತಿಳಿಯಲಿಲ್ಲ.

ಸುತನುಕಾ : (ನಿಟ್ಟುಸಿರಿಡುವಳು) ... ಹೊರಡಲು ಸಮಯವಾಗುತ್ತಿದೆ.

ಸುಸಂಗತಾ : ರಥ ಸಿದ್ಧವಾಗಿದೆ. ಒಳಗೆ ಸಲಕರಣೆಗಳೂ ಸಿದ್ಧವಾಗಿವೆ.

ಸುತನುಕಾ : ಒಳ್ಳೆಯದು. ನೀನು ಹೊರಗೆ ನೀರಿಕ್ಷಿಸುತ್ತಿರು.

ಸುಸಂಗತಾ : ಯಾರಾದರೂ ಬರುತ್ತಾರೆಯೆ ?

ಸುತನುಕಾ : ನಾನು ಸಿದ್ಧಳಾಗುತ್ತೇನೆ.

[ಹೆಜ್ಜೆ ಕ್ಷಯಿಸುವುದು.]

ಸುತನುಕಾ : (ನಿಟ್ಟುಸಿರಿಡುವಳು, ಅನಂತರ, ಸ್ವಗತ) ... 'ಮಾಯವೊ ಮಂತ್ರವೊ ಯಾರಿಗೆ ಅರ್ಥವಾಗಬೇಕು ?' ... 'ನಿನಗೆ ವಿಕಲವ್ಯಾಮೋಹ !' ... '....ಹ್ಞಾ, ಅವನ್ನೆಲ್ಲ ಚಿಂತಿಸಲು ಈಗ ಸಮಯವಿಲ್ಲ! ನಿನ್ನ ಏಕೋದೃಢ ಪ್ರತ್ಯಕ್ಷಲಕ್ಷ್ಯ ನರ್ತನ !' ...

[ಆಕೆ ಒಳಕ್ಕೆ ತೆರಳುವುದನ್ನು ಸೂಚಿಸುವ ನೂಪುರರವ, ಹಿನ್ನೆಲೆಯ ವಾದ್ಯಾದಿಗಳು ಸ್ತಬ್ಧವಾಗಿ ನೂಪುರರವವೊಂದು ಕ್ಷಯಿಸುತ್ತ ಹೋಗುವ ಸದ್ದು ಬಹುಕಾಲ ಕೇಳಿಸುತ್ತಲೇ ಇರುವುದು. ಅನಂತರ, ನೂಪುರರವ ಕಿಂಕಿಣೀಝಣತ್ಕೃತಿಯಾಗಿ ಪರಿವರ್ತನಗೊಂಡು,ವೃದ್ಧಿಸುತ್ತ ಬಂದು, ತಟಕ್ಕನೆ ತೀವ್ರಗತಿಯಲ್ಲಿ ವಿಜೃಂಭಿಸಿ ದ್ರುತನರ್ತನವನ್ನು ಸೂಚಿಸುವುದು. ಕ್ಷಣಾಂತರ ಎಲ್ಲವೂ ಸ್ತಬ್ಧವಾಗಿ ಒಂದುಕ್ಷಣ ನೀರವ.]

## ೩. ಖಂಡರಾತ್ರಿಯೆಂಬ ದೃಶ್ಯಸೇತು

[ಒಂದು ಕ್ಷಣ ನೀರವದ ಅನಂತರ — ಮನೆಯ ಒಳಭಾಗದಲ್ಲಿಂಬಂತೆ ಸುಸಂಗತಾಳ ಕೂಗು —"ಅತ್ತಿಯಾ! ಅತ್ತಿಯಾ! ....." ಅದೇ ಕೂಗು ಮನೆಯ ಒಳಭಾಗವನ್ನೆಲ್ಲ ಸುತ್ತುತ್ತಿರುವಂತೆ, ಬೇರೆ ಬೇರೆ ಕಡೆಗಳಿಂದ ಮತ್ತೆ ಮತ್ತೆ ಕೇಳಿಬರುತ್ತದೆ. ಪುನಃ ಹೊರಭಾಗದಲ್ಲಿನ್ನುವಂತೆ — ಸುಸಂಗತಾ: "ಬಂಧುಲ, ಅತ್ತಿಯಾ ಹೊರಗೆ ಹೋಗಿಲ್ಲ ವಷ್ಟೆ?" ಬಂಧುಲ: "ಇಲ್ಲ ತಾಯಿ, ನಾನು ನೋಡಿದಾಗ – ಘಳಿಗೆಯ ಹಿಂದೆ – ಚಂದ್ರ ಸಾಲೆಯಲ್ಲಿದ್ದರು", ಹೆಜ್ಜೆಗಳು ಶ್ರವಣಕೇಂದ್ರವಾದ ಚಂದ್ರಸಾಲೆಯತ್ತ ವೃದ್ಧಿಸಿ ಬರುವುವು.]

ಸುಸಂಗತಾ: ಅತ್ತಿಯಾ! ಅತ್ತಿಯಾ!! .... ಥೂ! ಇದೇನು ಹಾಳು ನಿದ್ರೆಯೊ ಇವಳಿಗೆ! .... ಅತ್ತಿಯಾ! .... ಅತ್ತಿಯಾ! ....

ಕುಟ್ಟನಿ: ಆ್ಞ .... ಯಾರೆ? ....

ಸುಸಂಗತಾ: ನಾನು! ಏಳು ಅತ್ತಿಯಾ. ಕಣ್ಣುಬಿಟ್ಟು ನೋಡು — ನಾನು!

ಕುಟ್ಟನಿ: ಥೂ, ಹಾಳು ಹುಡುಗಿ! ... ನಿನಗೆ ಸಮಯಾಸಮಯವೊಂದೂ ತಿಳಿಯದು! ... ಈ ಅರ್ಧರಾತ್ರಿಯಲ್ಲಿ ...

ಸುಸಂಗತಾ: ಏಳು ಅತ್ತಿಯಾ! ... ಇದು ಅರ್ಧರಾತ್ರಿಯಲ್ಲ, ಇನ್ನೂ ರಾತ್ರಿಯ ಎರಡು ಪ್ರಹರ ಕಳೆದಿಲ್ಲ ... ಇಲ್ಲಿ ಕೇಳು ... ಅಜ್ಜುಕಾ ...

ಕುಟ್ಟನಿ: ... ಈಗ ಬೇಡ ... ಪ್ರಾತಃಕಾಲ ...

ಸುಸಂಗತಾ: ಅತ್ತಿಯಾ! .... ಜಾಗೃತಳಾಗು. ಇಲ್ಲಿ ಕೇಳು: ಅಚಾತುರ್ಯವಾಗಿ ಹೋಯಿತು! .... ಕೇಳುತ್ತಿದ್ದೀಯ? .... ಅಜ್ಜುಕಾ ....

ಕುಟ್ಟನಿ: ಥೂ, ಈ ಹಾಳು ಮನೆಯಲ್ಲಿ ನನಗೆ ನಿದ್ರೆಯಲ್ಲಿಯೂ ಸೌಖ್ಯವಿಲ್ಲ! .... ಅದೇನು, ಏನಾಗಬೇಕಂತೆ ನಿನ್ನ ಅಜ್ಜುಕಾಳಿಗೆ?

ಸುಸಂಗತಾ ಅಚಾತುರ್ಯವಾಗಿಹೋಯಿತು, ಅತ್ತಿಯಾ! ಅಜ್ಜುಕಾ ನರ್ತನ ಮಧ್ಯೆ ರಂಗದ ಮೇಲೆ ಸ್ಖಲಿತಳಾಗಿ ಬಿದ್ದುಬಿಟ್ಟಿದ್ದಾಳೆ. ಪ್ರಬಲ ಆಘಾತ-ವಾಗಿದೆ. ಏಳು, ಹೋಗೋಣ.

ಕುಟ್ಟನಿ: ಅಯ್ಯೋ! ಅಯ್ಯೋ!! .... ಅಯ್ಯೋ ದುರ್ಮುಖಿ, ಇದೇನು ವಾರ್ತೆ ಹೇಳುತ್ತಿದ್ದೀಯೇ! .... ನಾನೇನು ಸ್ವಪ್ನದಲ್ಲಿದ್ದೇನೆಯೇ? ....

ಸುಸಂಗತಾ: ವಿಲಂಬ ಮಾಡಬೇಡ ಅತ್ತಿಯಾ! .... ಏಳು ಹೋಗೋಣ ತ್ವರಿತವಾಗಿ!

ಕುಟ್ಟನಿ: ಅಯ್ಯೋ! ಅಯ್ಯೋ!! .... ಇದೇನು ದುರ್ವಾರ್ತೆ ಕೇಳುತ್ತಿದ್ದೇನೆಯೆ!.... ಸ್ವಾಮೀ, ಈಶ್ವರಾ! .. ನಾನು ಮೊದಲೇ ಹೇಳಿದ್ದೆ ಬೇಡವೆಂದು ... ನನಗೆ ಮೊದಲೇ ತಿಳಿದಿತ್ತು ... ಅಯ್ಯೋ! ಏನು ಗತಿಯಾಯಿತೇ! ... ಆ ದೇವ

ದತ್ತನ ಅಭಿಚಾರ ಫಲಿಸಿತು ! ... ಮೂರ್ಖೆ, ನಡೆ, ವಿಲಂಬಮಾಡಬೇಡ, ಬೇಗ!...ಕೂಡಲೇ ಪ್ರತ್ಯಭಿಚಾರ ಮಾಡಿಸಬೇಕು. .ಬರುವಾಗ ಮಾರ್ಗದಲ್ಲಿ ತಿಳಿಸಿ ಬಂದೆಯಾ ?

ಸುಸಂಗತಾ : ಹೌದು ಅತ್ತಿಯಾ, ಮೊದಲೇ ಆಚಾರ್ಯಪಾದರಲ್ಲಿಗೆ ಹೋಗಿದ್ದೆ. ಅವರು ಯಜ್ಞವೇದಿಕೆಯಲ್ಲಿದ್ದರಂತೆ. ಹೇಳಿಕಳುಹಿಸಿದೆ. ಅವರು ಈಗ ಬರುವುದಿಲ್ಲವೆಂದು ತೋರುತ್ತದೆ.

ಕುಟ್ಟಿನಿ : ಅಯ್ಯೊ, ಎಂಥ ಶತಮೂರ್ಖಳೇ ನೀನು ! .... ಆಚಾರ್ಯಪಾದರನ್ನು ಯಾರು ಕೇಳಿದರು ? .. . ಕಾಪಾಲಿಗಳನ್ನು ನೋಡಲಿಲ್ಲವೆ ?.... ಇಲ್ಲಿಯೇ ವಿಲಂಬ ಮಾಡುತ್ತೀಯೆ ನೀನು ! ನಡೆ, ಬೇಗ ಹೋಗೋಣ .... ಈ ಅರ್ಧ ರಾತ್ರಿಯಲ್ಲಿ ಅವರೇನು ಬರುತ್ತಾರೆಯೋ ....

ಸುಸಂಗತಾ : ನೋಡೋಣ ನಡೆ, ಅತ್ತಿಯಾ.

ಕುಟ್ಟಿನಿ : ಹ್ಞು, ನಡೆ, ಮತ್ತೆ ವಿಲಂಬಮಾಡಬೇಡ ! ....

[ಆತುರದಿಂದ ಹೆಜ್ಜೆಗಳು ಕ್ಷಯಿಸುವವು. ಅವರ ಆತುರವನ್ನು ಅನುಸರಿಸಿ ಹಿನ್ನೆಲೆಯ ವಾದ್ಯಗಳು ತ್ವರೆಗೊಂಡು ನಿಲ್ಲುತ್ತವೆ. ಪುನಃ ದೃಶ್ಯಚ್ಛೇದವನ್ನು ಸೂಚಿಸುವ ಕ್ಷಣ ನೀರವ.]

## ೪. ಪ್ರಾತಸ್ಸಂಧ್ಯೆಯೆಂಬ ದ್ವಿತೀಯ ದೃಶ್ಯ

[ದೃಶ್ಯಾಂತರ ಸೂಚಿತವಾದ ಅನಂತರ — ಪ್ರಾತಃಪೂರ್ವವನ್ನು ಸೂಚಿಸುವ ಮೃದುಮಂದ್ರ ವಾದ್ಯವಾದನ. ಮುಂದೆ ಉದ್ದಕ್ಕೂ ಸುತನುಕಾಳ ಧ್ವನಿಯಲ್ಲಿ ತ್ರಾಸ ತೋರುತ್ತದೆ.]

ಸುತನುಕಾ : ಹಲಾ....

ಸುಸಂಗತಾ : ಇಲ್ಲೇ ಇದ್ದೇನೆ. ಈಗ ಸ್ವಲ್ಪ ಸ್ವಸ್ಥವೆ ಅಜ್ಜುಕಾ?

ಸುತನುಕಾ : ಸೂರ್ಯೋದಯವಾಯಿತೆ ?

ಸುಸಂಗತಾ : ಅದೇ ಸಮಯ.

ಸುತನುಕಾ : ಇಂದಿನ ಪ್ರಾತಃಪೂರ್ವ ಎಷ್ಟು ಮಧುರವಾಗಿತ್ತು ! .... ಎಂತೆಂತಹ ರಾಗಾನುರಾಗಗಳು, ಭಾವಾನುಭಾವಗಳು ! ... ಇಂಥ ಉಜ್ವಲ ರಾಗಲಯಗಳನ್ನು ನನ್ನ ಅತ್ಯದ್ಭುತ ನರ್ತನಗಳಲ್ಲಿ ಕೂಡ ಪರಿಭಾವಿಸಿದುದಿಲ್ಲ ! ...

ಸುಸಂಗತಾ : ಈಗ ಸ್ವಲ್ಪ ಸ್ವಸ್ಥವೆ ಅಜ್ಜುಕಾ ?

ಸುತನುಕಾ : ಸ್ವಸ್ಥಳಾಗಿದ್ದೇನೆ. ಮಾತ್ರವಲ್ಲ ಸುಸಂಗದೆ, ಮನಸ್ಸು ಪ್ರಾತಃಸಂಧ್ಯೆಯಂತೆಯೇ ಪ್ರಸನ್ನವಾಗಿದೆ, ಉಲ್ಲಸಿತವಾಗಿದೆ...ಈ ನಿರ್ಭಾಗ್ಯೆಯಿಂದ ರಾತ್ರಿಯೆಲ್ಲ ನೀವು ಸಂಭ್ರಮಗೊಂಡಿರಿ.

ಸುಸಂಗತಾ : ನಿನ್ನ ತ್ರಾಸದ ಮುಂದೆ ಅದೊಂದು ವಿಶೇಷವೆ ?

ಸುತನುಕಾ : ರಾತ್ರಿ ನನ್ನ ಸ್ಥಿತಿಯಿಂದ ನೀವೆಲ್ಲಾ ಭೀತರಾಗಿಬಿಟ್ಟಿರಬೇಕು ! (ಮೃದುವಾಗಿ ನಗುವಳು)

ಸುಸಂಗತಾ : ಆಗದಿರುತ್ತದೆಯೆ ಅಜ್ಜುಕಾ ?

ಸುತನುಕಾ : ... ಚಂದ್ರಕೀರ್ತಿಗಳು ಅಷ್ಟು ಧೀರರೆಂದು ನಾನು ಭಾವಿಸಿರಲಿಲ್ಲ.

ಸುಸಂಗತಾ: ಅವರೊಬ್ಬರಿದ್ದುದು ಜೊತೆಯಲ್ಲಿ ನೂರು ಜನ ಇದ್ದಂತಿತ್ತು ಅಜ್ಜುಕಾ. ಅಲ್ಲದಿದ್ದರೆ ನಮ್ಮ ಸ್ಥಿತಿ ಏನಾಗುತ್ತಿತ್ತೊ!...ಅದೆಂತಹ ಸ್ಥಿರ ಅವರಿಗೆ!..ನಾಟ್ಯ ಮಂದಿರದಿಂದ ನನ್ನನ್ನು ಕರೆತರುವಾಗ ಸಂಸ್ಥಾನಕರು ಸಂಗಡ ಸೇವಕರನ್ನು ಕಳಿಸಲಿದ್ದರು. ಆದರೆ ಆರ್ಯ ಚಂದ್ರಕೀರ್ತಿಗಳೇ ಬೇಡವೆಂದು ನಿವಾರಿಸಿದರು.

ಸುತನುಕಾ : ರಾತ್ರಿಯೆಲ್ಲ ಅವರು ಇಲ್ಲಿ ಇದ್ದರೆಂದೇ ನಾನೀಗ ಸ್ವಸ್ಥಳಾಗಿದ್ದೇನೆ. ಇಲ್ಲದಿದ್ದರೆ ನಿಶ್ಚಯವಾಗಿ ನನ್ನ ಸ್ಥಿತಿ ಉಲ್ಬಣಗೊಳ್ಳುತ್ತಿತ್ತು.

ಸುಸಂಗತಾ : ಈ ಹತಭಾಗ್ಯೆಯಿದ್ದುದೂ ವ್ಯರ್ಥವಾಯಿತು. ರಾತ್ರಿಯೆಲ್ಲ ಆರ್ಯ ಚಂದ್ರಕೀರ್ತಿಗಳೇ ನಿನ್ನ ಸೇವೆ ಮಾಡಿದರು ... ಮಧ್ಯರಾತ್ರಿ ಸಮೀಪಿಸಿದಾಗ ಆರ್ಯರು ನನ್ನನ್ನು ಬಲವಂತದಿಂದ ನಿದ್ರೆಗೆ ಕಳುಹಿಸಿದರು. ಆ ಅವಸ್ಥೆಯಲ್ಲಿ ಎಲ್ಲಿಯ ನಿದ್ರೆ ಅಜ್ಜುಕಾ ? — ಆರ್ಯರ ಬಲವಂತಕ್ಕೆ ಒಳಗೆ ಹೋಗಿ ಕುಳಿತೆ ... ಈಗ ಜಾವದ ಹಿಂದೆ, ತಾವು ಹೋಗುವಾಗ ಮಾತ್ರ ನನ್ನನ್ನು ಕರೆದು ಇಲ್ಲಿ ಬಿಟ್ಟು ಹೋದರು.

ಸುತನುಕಾ : ಆಗಿನ ಅರ್ಧಸ್ಮೃತಿಯ ಅವಸ್ಥೆಯಲ್ಲಿ ನಾನು ಹೇಳಲಾಗದುದನ್ನು ಚಂದ್ರಕೀರ್ತಿಗಳು ಅರಿತರು ... ನಿನಗೆ ತಿಳಿಯದು ಸುಸಂಗತೆ : ಈ ಒಂದು ರಾತ್ರಿಯಾದರೂ ಆರ್ಯರ ಸೇವೆ ನನಗೆ ಅತ್ಯವಶ್ಯವಾಗಿತ್ತು ... ಶತೇಶತ ಕವಿಜೀವ ಅವರದು ! ಹಾಗಲ್ಲದಿದ್ದರೆ ಅವರಿಗೆ ಈ ಗುಹೆ ನಿಚ್ಚಳ ಪುಷ್ಕರಣಿಯಂತೆ ಕಾಣಬೇಕಿತ್ತು ಹೇಗೆ ? ... ಐದು ವರ್ಷಗಳ ಗುಪ್ತ ನಿಧಿಯ ಈ ರಹಸ್ಯಸ್ಥಾನ ನನಗೇ ಅಜ್ಞಾತವಾಗಿತ್ತು. ಎಷ್ಟು ಶುಲಭದಲ್ಲಿ ಅದನ್ನು ಶೋಧಿಸಿದರು ! ... (ನೋವಿನ ಮೆಲುನಗುವಿನೊಡನೆ, ಸ್ವಗತವೆಂಬಂತೆ) ಚೋರಶಿಖಾಮಣಿ !! ... ಸುಸಂಗತೆ, ಈ ರಹಸ್ಯ ಅರ್ಥಮಾಡಿಕೊಳ್ಳಬಲ್ಲೆಯೇನು ? : ಒಂದು ವೇಳೆ ರಾತ್ರಿ ಈ ನನ್ನ ನೇಪಥ್ಯವನ್ನು ಬದಲಿಸಿದ್ದರೆ ಅಥವಾ ನನ್ನನ್ನು ಈ ಚಂದ್ರಶಾಲೆಯಲ್ಲದೆ ಬೇರೆಡೆಗೆ ಕೊಂಡೊಯ್ದಿದ್ದರೆ, ಬಹುಶಃ, ಈಗ ಹೀಗಿರುತ್ತಿರಲಿಲ್ಲ ನಾನು ! ..

ಸುಸಂಗತಾ : .... ಸಾಮಾನ್ಯ ಆಘಾತವೆ ? ಪಾದದ ವಿಗಾತ್ರವನ್ನು ನೋಡಿಯೇ ನನಗೆ ಭಯವಾಗುತ್ತದೆ ! ... ವೈದ್ಯ ಸಂಶಯಿಸಿದಂತೆ ಅಸ್ಥಿಭಂಗವಾಗಿರದಿದ್ದರೆ ಸಾಕು .... ಈಗ ವೇದನೆ ಹೇಗಿದೆ ಅಜ್ಜುಕಾ ?

ಸುತನುಕಾ : ನನಗೆ ಅದರ ಸ್ಮೃತಿಯೇ ಇಲ್ಲ ! .... ಮುಗ್ಧೆ, ಈಗಿನ ನನ್ನ ಹೃದಯ

ಲಾಘವವನ್ನು ಹೇಗೆ ಹೇಳಲಿ ನಿನಗೆ ? .... ಶರನ್ಮೇಘದ ತೂಲರಾಶಿ ! .... ಮಂಥನಾನಂತರ ಕ್ಷೀರಫೇನ ! .... ಓಹ್, .... ಐದು ವರ್ಷಗಳಿಂದ ನನಗೆ ಅರಿವಿಲ್ಲದೆಯೇ ಗುಹೆಯಲ್ಲಿ ಸಂಗೋಪನ ಮಾಡಿಕೊಂಡಿದ್ದ ಸ್ಮೃತಿಸಂಪ-ತ್ತಿನ ಭಾರವನ್ನೆಲ್ಲ ಅವರು ಒಂದು ಕ್ಷಣದಲ್ಲಿ ದೋಚಿ ಸೂರೆಮಾಡಿ-ಬಿಟ್ಟರು ! .... ನನ್ನೆದುರಿನ ನೆಲ ಆ ಸಂಪತ್ತಿನಿಂದ ಸಂಕೀರ್ಣಗೊಂಡ ನಂದನ ವಾಗಿ ಹೋಗಿತ್ತು ! .... ಓ, ನನ್ನ ಹೃದಯ ಹೂವಿನಷ್ಟು ಹಗುರವಾಗಿ ಹೊಯಿತು ! .... ಕಾಲಿಗೆ ಚೆಲ್ಲದ ಆ ಸಂಪತ್ತನ್ನು ರೂಪದಕ್ಷ ದೇವದತ್ತರು ನೋಡಬೇಕಿತ್ತು ಸುಸಂಗದೆ ! .... ಈಗ ಐದು ವರ್ಷಗಳ ಹಿಂದೆ, ಇಂಥದೇ ವಸಂತಪೂರ್ಣಿಮೆಯ ಕ್ಷೀರರಾತ್ರಿಯಲ್ಲಿ ....(ನಿಟ್ಟುಸಿರಿಟ್ಟು).... ಈ ರಾತ್ರಿಯೂ ಹಾಗೆಯೇ ಕುಳಿತು,ದೀನಳೊಬ್ಬಳು ತನ್ನ ಪಾದಕ್ಕೆ ಉಪಾಯನವಾಗಿ ಚೆಲ್ಲಿದ ಸಂಪತ್ತನ್ನು ಆ ಹತಭಾಗ್ಯ ನೋಡಬೇಕಿತ್ತು ! .... (ತ್ರಾಸದಿಂದ ನಿಟ್ಟುಸಿರು ಬಿಟ್ಟು ನೀರವಳಾಗುವಳು. ಕ್ಷಣಾನಂತರ ತುಂಬ ಬಳಲಿಕೆಯಿಂದೆಂಬಂತೆ— ) ಸುಸಂಗದೆ ....

ಸುಸಂಗತಾ : ತ್ರಾಸವಾಯಿತೆ ಅಜ್ಜುಕಾ ? ... ಏನಾದರೂ ಪೇಯ ತರಲೆ ?

ಸುತನುಕಾ : ಈ ಘಟನೆಯ ಅನಂತರ ರಾತ್ರಿ ರೂಪದಕ್ಷರನ್ನು ನೋಡಿದ್ದೆಯಾ ?

ಸುಸಂಗತಾ : ರಾತ್ರಿಯ ಪ್ರಕ್ಷುಬ್ಧದಲ್ಲಿ ಅವರು ಯಾರ ಕಣ್ಣಿಗೂ ಕಾಣಿಸಲಿಲ್ಲ. ಪ್ರಭುಗಳು ನಿನ್ನನ್ನು ನೋಡಿ ತೆರಳುವಾಗ ಮೂರುಮೂರು ಬಾರಿ ಅವರನ್ನು ಕೇಳಿದರಂತೆ. ಅನಂತರ ನೇಪಥ್ಯಗೃಹದಲ್ಲಿ ನಾನು ನಿನ್ನ ಶುಶ್ರೂಷೆ ಮಾಡು-ತ್ತಿದ್ದಾಗ ಚಂದನಕನಿಂದ ಈ ವಾರ್ತೆ ತಿಳಿಯಿತು ...

ಸುತನುಕಾ : ಹೇಳು ಸುಸಂಗದೆ. ಈ ನಿರ್ಭಾಗ್ಯಳ ಹೃದಯ ಪಾಷಾಣಕಠಿನ-ವಾಗಿದೆ.

ಸುಸಂಗತಾ : ಅವರು ನಾಟ್ಯಗೃಹದ ಬಹಿರುದ್ಯಾನದಲ್ಲಿ ತಮಾಲವೃಕ್ಷದ ಕೆಳಗೆ ನಿಶ್ಚೇಷ್ಟಿತರಾಗಿ ಬಿದ್ದಿದ್ದರಂತೆ. ಕೇಳಿದ ಸಂಸ್ಥಾನಕ ಮಧುರವರ್ಮರು ಅಲ್ಲಿಗೆ ಹೋಗಿ ಶುಶ್ರೂಷೆಮಾಡಿದರಂತೆ .. ನಾಟ್ಯಗೃಹದಲ್ಲಿ ಹಾಗೆ ಕೂಗಿಕೊಂಡುದು ಮತ್ತು ಅನಂತರ ಇಲ್ಲಿ ನಿಶ್ಚೇಷ್ಟಿತರಾಗಿದ್ದುದು ಇವನ್ನು ಕಂಡು 'ಕ್ಷೀಬ' ೧-ರಿದ್ದಿರಬಹುದೆಂಬ ಸಂಶಯವಾಯಿತಂತೆ.

ಸುತನುಕಾ : ಮೂರ್ಖರು ! ...

ಸುಸಂಗತಾ : ... ಪರೀಕ್ಷಿಸಿದಾಗ ಅಲ್ಲವೆಂದು ತಿಳಿಯಿತಂತೆ ... ಅನಂತರ ಬೋಧೆ-ಯಾದೊಡನೆಯೇ ಅವರು ತಾವು ಸ್ವಸ್ಥರಾಗಿರುವುದಾಗಿ ಹೇಳಿ ಜೋತೆಯಲ್ಲಿ ತಮ್ಮ ಚೇಟನನ್ನು ಉಳಿಸಿಕೊಂಡು ಉಳಿದವರನ್ನೆಲ್ಲ ಅಪವಾರಿಸಿದರಂತೆ ... ಬಹುಕಾಲ ಅಲ್ಲಿಯೇ ಕುಳಿತಿದ್ದರಂತೆ ...

೧ - ಕ್ಷೀಬ= ಪಾನಪ್ರಮತ್ತ.

[ ಸುತನುಕಾ ನರಳಿ ನಿಟ್ಟುಸಿರಿಡುವಳು; ಸುಸಂಗತಾ ಕಥನ ನಿಲ್ಲಿಸುವಳು. ]

ಸುತನುಕಾ : ನಿಲ್ಲಿಸಬೇಡ ಹಲಾ.

ಸುಸಂಗತಾ : ನಾನು ವಾರ್ತೆ ತಿಳಿಯಲು ಇಲ್ಲಿಗೆ ಬಂದು ಪುನಃ ನಾಟ್ಯಗೃಹಕ್ಕೆ ಮರಳಿದಾಗ ಮತ್ತೆ ಚಂದನಕನೇ ಹೇಳಿದ : ಅವರು ನೇಪಥ್ಯಗೃಹಕ್ಕೆ ಬಂದು ಸ್ವಲ್ಪ ಹೊತ್ತು ನಿನ್ನ ಸಮೀಪದಲ್ಲಿ ವ್ಯಜನಕವನ್ನು ಹಿಡಿದು ಕುಳಿತಿದ್ದರಂತೆ.

ಸುತನುಕಾ : ಆಗ ಜೀವಮುದ್ರಿತವಾಗಿದ್ದ ಈ ನಿರ್ಭಾಗ್ಯಳ ಕಣ್ಣುಗಳು ಅನಂತರ ತೆರೆದವು ... ಮುಂದೆ ?

ಸುಸಂಗತಾ : ನಾವು ಅಲ್ಲಿ ಬರುವ ವೇಳೆಗೆ ಅವರು ನಿರ್ಗಮಿಸಿದ್ದರು .. ಅಲ್ಲಿದ್ದವರು ಆಗಿನ ಅವರ ಸ್ಥಿತಿಯನ್ನು ಕಂಡು ಮಾತನಾಡುವುದಕ್ಕೂ ಭಯಗೊಂಡರಂತೆ.

ಸುತನುಕಾ : (ಅತ್ಯಂತ ತ್ರಾಸದಿಂದ) ಸುಸಂಗದೆ !

ಸುಸಂಗತಾ : ತ್ರಾಸವಾಯಿತೆ ಅಜ್ಜುಕಾ ? .... ಸ್ವಲ್ಪ ಹಾಗೆಯೇ ವಿಶ್ರಮಿಸಿಕೊ. ಪೇಯ ತರುತ್ತೇನೆ.

ಸುತನುಕಾ : ಅಯ್ಯೋ ಮೂರ್ಖ ಬಾಲಿಕೆ ! ... ( ಸ್ವಲ್ಪಕಾಲ ನೀರವಳಾಗಿದ್ದು ) ಸುಸಂಗದೆ, ನನ್ನ ವೀಣೆಯನ್ನು ತೆಗೆದುಕೊಂಡು ಬಾ.

ಸುಸಂಗತಾ : ವೀಣೆ ?

ಸುತನುಕಾ : (ಆಜ್ಞೆಯೆಂಬಂತೆ) ಹ್ಞು !

[ ಹೆಜ್ಜೆ ಕ್ಷಯಿಸಿ, ಅನಂತರ ವೃದ್ಧಿಸುವುದು. ]

ಸುಸಂಗತಾ : ಅಜ್ಜುಕಾ ....

ಸುತನುಕಾ : ಹ್ಞು. ಅಲ್ಲಿ ಕುಳಿತು ವಾದಿಸು : 'ಸರಸವಸಂತೇ ಸಾಯಂಕಾಲೇ ..'

[ ವೀಣೆ ಅಣಿಗೊಳಿಸಿಕೊಂಡು ಸೂಚಿತ ಗೀತವನ್ನು ವಾದಿಸಲಾರಂಭಿಸುವಳು. ]

ಸುತನುಕಾ : (ಸ್ವಲ್ಪಕಾಲಾನಂತರ) .... ಪ್ರಕಾಶ ಅತಿಯಾಯಿತು. ವಾತಾಯನವನ್ನು ಮುಚ್ಚಿ ಬಾ.

[ಹೆಜ್ಜೆಯ, ಅನಂತರ ವಾತಾಯನ ಮುಚ್ಚಿದ, ಪುನಃ ಹೆಜ್ಜೆಯ ಸಪ್ಪಳ]

ಸುತನುಕಾ : ಹ್ಞು. ಆರಂಭವಾಗಲಿ.

[ ಪುನಃ ವೀಣಾವಾದನ, ಈಷತ್ಕಾಲಾನಂತರ ]

ಸುತನುಕಾ : ಅಕುಶಲೆ, ಸಾಕು ನಿಲ್ಲಿಸು .... ಪಾಪ, ನೀನೇನು ವಾದಿಸಬಲ್ಲೆ !....

ರಾತ್ರಿ ಚಂದ್ರಕೀರ್ತಿಗಳು ಮುಹೂರ್ತಕಾಲ ವೀಣಾವಾದನ ಮಾಡಿದರು, .. ಇದೇ ಗೀತ — ಕೇಳಿದೆಯಾ ?

ಸುಸಂಗತಾ : ಅಜ್ಜುಕಾ ....

ಸುತನುಕಾ : ವೀಣೆಯನ್ನು ಅಲ್ಲಿಟ್ಟು ಸ್ವಲ್ಪ ಹೊರಗೆ ಹೋಗು ! ಒಂದು ಕ್ಷಣ ಏಕಾಂತ .... ವಿಶ್ರಾಂತಿ ಬೇಕು ನನಗೆ.

[ ಆಚೀಚೆ ಚಲಿಸುವ ಹೆಜ್ಜೆಯ ಸದ್ದು ]

ಸುತನುಕಾ : ಛೆ, ವಾತಾಯನವನ್ನು ತೆರೆಯಬೇಡ .... ನನಗೀಗ ಅಂಧಕಾರ ಬೇಕು ! ... ಪಾತಾಲ-ಗುಹೆಯಂಥ ಅಂಧಕಾರ ಬೇಕು ! .... ಹೋಗು.

[ ಹೆಜ್ಜೆ ಕ್ಷಯಿಸುವುದು. ಹಿನ್ನೆಲೆಯಲ್ಲಿ ವೀಣೆಯ ಝೇಂಕೃತಿ ಆರಂಭವಾಗಿ ಮೇಲಿನ ಗೀತ ನುಡಿಯತೊಡಗುವುದು. ಅದಕ್ಕೆ ಹೊಂದಿ, ಕಿಂಕಿಣೀಝಣತ್ಕೃತಿ ವೃದ್ಧಿಸಿ ದ್ರುತಗತಿಯಲ್ಲಿ ವಿಜೃಂಭಿಸುವುದು, ತನ್ಮಧ್ಯೆ ಹಠಾತ್ತಾಗಿ ಪುರುಷಕಂಠದ ಕೂಗು : "ಅಹೋ ! ಜಾಗ್ರತ !!" ಕಿಂಕಿಣಿ ತಾಳ ತಪ್ಪಿ ತಡವರಿಸುವುದು. ವೀಣಾರವ ಹುಚ್ಚು-ವರಿಯುವುದು. ತಾಳ ಶ್ರುತಿಗಳು ತಪ್ಪಿ ಕೋಲಾಹಲವಾದಂತಾಗಲು —]

ಸುತನುಕಾ : ಹಲಾ ...

[ ಹೆಜ್ಜೆ ವೃದ್ಧಿಸುವುದು ]

ಸುಸಂಗತಾ : ಕರೆದೆಯಾ, ಅಜ್ಜುಕಾ ? ...

ಸುತನುಕಾ : ಹ್ಞ ... ಈ ಏಕಾಂತ ಎಷ್ಟು ಅಸಹ್ಯ ! ... ನಾನಿನ್ನು ಏಕಾಂಗಿ-ಯಾಗಿರಲಾರೆ ಹಲಾ, ಗುಹೆಯಲ್ಲಿರಲಾರೆ ! ... ಬಾ, ನನ್ನ ಸಮೀಪ, ... ತೀರ ಸಮೀಪ, ... ಕುಳಿತುಕೋ ... ಅಂಧಕಾರ ಬೇಡ, ವಾತಾಯನವನ್ನು ತೆರೆದು ಬಾ.

[ಹೆಜ್ಜೆಯ, ವಾತಾಯನ ತೆರೆದ ಮತ್ತೆ ಹೆಜ್ಜೆಯ ಸದ್ದು]

ಸುತನುಕಾ : ಬಾ, ಇನ್ನೂ ಸಮೀಪ ... ಹ್ಞಾ, ಹಾಗೆ ! ... ಕುಳಿತುಕೋ ... (ಅತೀವ ಮೃದುಸ್ವರದಲ್ಲಿ) ... 'ಸರಸವಸಂತೇ ಸಾಯಂಕಾಲೇ ಜ್ಯೋತ್ಸ್ನಾಮೃತರಸವರ್ಷೇ' ... ನನ್ನದೇ ಅಗ್ನಿಗೀತ ಅದು ! ಆದರೂ ನನಗೆ ಅರ್ಥವಾದದ್ದು ಕಳೆದ ರಾತ್ರಿ, ಚಂದ್ರಕೀರ್ತಿಗಳು ವೀಣೆಯಲ್ಲಿ ಮಿಡಿಸಿದಾಗ ! ... ಮಾಕಂದಗುಹೆಯಲ್ಲಿ ಕೋಕಿಲ ಏಕಪ್ರಕಾರ ಕೂಜಿಸುತ್ತದೆ, ಅಂಧಕಾರ ಕಂಪಿಸಿ ಕಂಪಿಸಿ ಸ್ವೇದ ಸುರಿಸುವಂತೆ — ಕೇಳಿದ್ದಿಯೇನು ? ... 'ಸರಸ ವಸಂತೇ ಸಾಯಂಕಾಲೇ ... ' — ಓಹ್, ಅದೊಂದು ಅಭಿಜ್ಞಾನ ಸೂಚನದಿಂದ ಆರ್ಯರು ನನ್ನ ಅಜ್ಞಾತಪಾತಾಲವನ್ನು ಉಜ್ಜ್ವಲಗೊಳಿಸಿಬಿಟ್ಟರು !..

**ಸುಸಂಗತಾ :** ಅಜ್ಜುಕಾ, ರೂಪದಕ್ಷರ ವಾರ್ತೆ ತಿಳಿದುಬರಲು ಬಂಧುಲನನ್ನು ಕಳುಹಿಸಲೆ ?

**ಸುತನುಕಾ :** ಬಂಧುಲ ಬೇಡ. ನೀನೇ ಹೋಗಬೇಕು ... ಹೌದು, ರೂಪದಕ್ಷರ ವಾರ್ತೆ ಈಗ ಅಗತ್ಯವಾಗಿದೆ ... ನೆನ್ನೆ ರಾತ್ರಿ ನೃತ್ಯದ ತುರೀಯಾವಸ್ಥೆಯಲ್ಲಿ, ಒಮ್ಮೆ, ಒಂದೇ ನಿಮಿಷ ಕಾಲದಲ್ಲಿ, ರೂಪದಕ್ಷರ ವಿದ್ಯುದೃಷ್ಟಿ ಜನ್ಮಜನ್ಮಾಂತರದ ಆ ಅದ್ಭುತ ಕಥೆಯನ್ನು ಸ್ಫೋಟಗೊಳಿಸಿತು ... ( ಪೇಲವನಾದ ಮೃದು ಹಾಸ್ಯದೊಡನೆ ) ಸ್ಫೋಟ ಅನುಭವಿಸಿದ ನಾವು ಕಥೆಯನ್ನು ಅನುಭವಿಸಲಿಲ್ಲ! ... ಅದೇ ಕಥೆಯನ್ನು ಚಂದ್ರಕೀರ್ತಿಗಳು ನಿರ್ಲಿಪ್ತರಾಗಿ ನುಡಿಸಿ ಭಾವ ಕಳೆದು ನಡೆದರು... ಅದರ ಅನುಭೂತಿ ಅವರಿಗೆ ಅನಗತ್ಯವಾಗಿತ್ತು... ಮತ್ತು, ಈ ಜಗತ್ತಿನಲ್ಲಿ ರೂಪದಕ್ಷರೊಬ್ಬರಲ್ಲದೆ ಮತ್ತಾರು ಆ ಕಥೆಯನ್ನು ಅನುಭವಿಸಬಲ್ಲರು ? ... ಅವರಿಗೆ ಆ ಕಥೆಯನ್ನು ನಿವೇದಿಸಬೇಕಾಗಿದೆ ...

**ಸುಸಂಗತಾ :** ನಾನೇ ಹೋಗುವುದೆ ?

**ಸುತನುಕಾ :** .... ಕಥೆ ಮರ್ತ್ಯವಾಗಲೆಂದು ಚಂದ್ರಕೀರ್ತಿಗಳು ಕೇಳಿದರು, ಸಾರ್ಥಕವಾಗಲೆಂದು ರೂಪದಕ್ಷರು ಕೇಳಲಿ ... ಮತ್ತು ... ಅನಂತರ ... ಹ್ಞಾ — ಹಲಾ, ಆಚಾರ್ಯಪಾದರಿಗೆ ವಾರ್ತೆ ತಿಳಿಸಿದ್ದೆಯಾ ?

**ಸುಸಂಗತಾ :** ಹೌದು ಅಜ್ಜುಕಾ. ಅತ್ತಿಯಾಳಿಗೆ ತಿಳಿಸುವ ಮೊದಲೇ ಆಚಾರ್ಯಪಾದರಲ್ಲಿ ಹೋಗಿದ್ದೆ. ಆಗ ಅವರು ಯಜ್ಞವೇದಿಕೆಯಲ್ಲಿದ್ದರಂತೆ. ವಾರ್ತೆ ಹೇಳಿ ಕಳುಹಿಸಿದೆ. ಅವರಿಂದ ಉತ್ತರ ಬರಲಿಲ್ಲ. ಅವರು ನೇಪಥ್ಯಗೃಹಕ್ಕೆ ಬರಲಾರರೆಂದು ಭಾವಿಸಿ ಅಲ್ಲಿಂದ ಹೊರಟೆ.

**ಸುತನುಕಾ :** ಯಂತ್ರ ಧರಿಸಿರಲಿಲ್ಲನೆಂಬುದನ್ನು ಅವರಿಗೆ ತಿಳಿಸಿಬಿಟ್ಟೆಯಾ ?

**ಸುಸಂಗತಾ :** ಯಾವ ಯಂತ್ರ ? — ನನಗೆ ತಿಳಿಯದು.

**ಸುತನುಕಾ :** ಓ, ಏನೋ ಹೇಳುತ್ತಿದ್ದೇನೆ ನಾನು ! ... ಹ್ಞಾ, ಹೋಗಿ ರೂಪದಕ್ಷರ ವಾರ್ತೆ ತಿಳಿದು ಬಾ.

**ಸುಸಂಗತಾ :** ನಾನೇ ಹೋಗುವುದೆ? ... ನಿಮಗೆ ... ? .

**ಸುತನುಕಾ :** ಅಗತ್ಯಕ್ಕೆ ಬಂಧುಲನಿದ್ದಾನೆ, ಹೋಗು.

[ಹೆಜ್ಜೆಯ ಸದ್ದು ಕ್ಷೀಣಿಸುವುದು.]

**ಸುತನುಕಾ :** (ಸ್ವಗತ) .... ಕೊನೆಯದಾಗಿ, ಈ ಕಥೆಯ ಕೆಲವು ಅಂಶಗಳನ್ನಾದರೂ ನಿಮ್ಮಲ್ಲಿ ನಿವೇದಿಸಿಕೊಳ್ಳುವುದಿದೆ ಆಚಾರ್ಯ! ... ಆದರೆ ಕಿಂಕಿಣಿಯ ವ್ಯಥೆಯಲ್ಲೂ ಪ್ರಣವದ ಕಥೆ ಕೇಳುವ ನಿಮಗೆ ಈ ಪ್ರಣಯದ ಕಥೆ ಅರ್ಥವಾದೀತೆ ? ....

[ಆತುರದಿಂದ ಹೆಜ್ಜೆಯ ಸದ್ದು ವೃದ್ಧಿಸುವುದು.]

ಸುಸಂಗತಾ : ಅಜ್ಜುಕಾ, ಆಚಾರ್ಯಪಾದರ ಆಗಮನವಾಗುತ್ತಿದೆ !
ಸುತನುಕಾ : ಆ ?! .... ಇರಲಿ. ಸದ್ಯ ನೀನು ಇಲ್ಲಿಯೇ ಇರು. ಆಚಾರ್ಯಪಾದರನ್ನು ಬರಮಾಡಿ ಹೋಗಬೇಕು.
ಸುಸಂಗತಾ : ಆಗಮಿಸಿರಬೇಕು, ಕರೆತರುತ್ತೇನೆ.

[ಹೆಜ್ಜೆ ಕ್ಷಯಿಸಿ ಅನಂತರ ಎರಡು ಹೆಜ್ಜೆಗಳು ವೃದ್ಧಿಸುವುವು; ಪುನಃ, ಒಂದು ಕ್ಷಯಿಸುವುದು ]

ಸುತನುಕಾ : (ಸಸಂಭ್ರಮ) ದಯವಾಗಲಿ ಆಚಾರ್ಯ .... ಅಪರಾಧ ಪರಿಮಾರ್ಜಿತವಾಗಲಿ. ಏಳಲೂ ಅಶಕ್ತಳಾಗಿ ಹೀಗೆಯೇ ಅಭಿವಾದಿಸುತ್ತಿದ್ದೇನೆ ....
ಆಚಾರ್ಯ : ಸಂಭ್ರಮ ಬೇಡ.
ಸುತನುಕಾ : ಪೀಠ ಅಲಂಕೃತವಾಗಲಿ.
ಆಚಾರ್ಯ : ಅಸ್ತು.

[ಹೆಜ್ಜೆ ವೃದ್ಧಿಸುವುದು.]

ಸುತನುಕಾ : .... ಸ್ವೀಕೃತವಾಗಲಿ. ಆಚಾರ್ಯ.
ಆಚಾರ್ಯ : ಅಸ್ತು.

[ಒಂದು ಕ್ಷಣ ನೀರವ]

ಸುತನುಕಾ : (ಮೆಲುದನಿಯಲ್ಲಿ) ಹಲಾ ...
ಸುಸಂಗತಾ : (ಮೆಲುದನಿಯಲ್ಲಿ) .... ಶೀಘ್ರ ಬರುತ್ತೇನೆ. ಬಂಧುಲನಿಗೆ ತಿಳಿದಿದೆ.
ಸುತನುಕಾ : ಹ್ಞು.

[ಹೆಜ್ಜೆ ಕ್ಷೀಣಿಸುವುದು. ಪುನಃ ಈಷತ್ಕಾಲ ನೀರವ. ಅನಂತರ — ]

ಸುತನುಕಾ : ಅಜ್ಞ ಬಾಲಿಕೆಯಿಂದ ಅಪರಾಧವಾಗಿದ್ದರೆ ಅದು ಕ್ಷಮಾರ್ಹವೆಂದು ಭಾವಿಸುತ್ತೇನೆ.
ಆಚಾರ್ಯ : ಸಾಮಾನ್ಯ ಅಪರಾಧವಲ್ಲ, — ಗುರುತಿರಸ್ಕೃತಿ, ಬ್ರಹ್ಮವಂಚನ !
ಸುತನುಕಾ : (ಅರ್ಧ ಗದ್ಗದಳಾಗಿ) ಆಚಾರ್ಯಪಾದರ ಕರುಣೆಗಾಗಿ ಕಾತರಳಾಗಿದ್ದೇನೆ ಈ ಅಜ್ಞೆ.
ಆಚಾರ್ಯ : ಕ್ಷಮಾಕರುಣೆಗಳು ಅಜ್ಞತೆಯಲ್ಲಿ, ಅವಜ್ಞತೆಯಲ್ಲಲ್ಲ.
ಸುತನುಕಾ : (ಗದ್ಗದಳಾಗಿ) ಆಚಾರ್ಯಪಾದರ ವಾತ್ಸಲ್ಯದ ಸ್ನಿಗ್ಧಛಾಯೆಯಲ್ಲಿ ಅಕ್ಷಿನಿಮೀಲನ ಮಾಡಿದ ಶಿಶು ಇದು .... ಸಾಮಾನ್ಯ ಗಣಿಕೆಯಾಗಿದ್ದ

ನನ್ನನ್ನು .... ಇಂದು ಜನ ಪ್ರಶಂಸಿಸುವಂತೆ .... ನಾಯಿಕಾ-ಶಿರೋಮಣಿಯನ್ನಾಗಿ ಮಾಡಿದವರು ತಾವು, ಕಾವ್ಯಾದಿ ವಿದ್ಯಾಕುಶಲೆಯನ್ನಾಗಿ ಮಾಡಿದವರು ತಾವು .... ಗುರುವೇ, ಯಾವ ತಮ್ಮ ಕರುಣೆಯ ಕ್ಷೀರಾನ್ನವನ್ನು ಪಡೆದು ಬೆಳೆದೆನೋ ಅದು ಸಾಕ್ಷಿಯಾಗಿ, ತಮ್ಮ ಪೂಜ್ಯ ಪಾದಗಳ ಸಾಕ್ಷಿಯಾಗಿ ಪ್ರತಿಜ್ಞೆಮಾಡಿ ಹೇಳುತ್ತೇನೆ: ಈ ದೀನ ಶಿಷ್ಯೆ ಆಚಾರ್ಯಪಾದಗಳಿಗೆ ಸ್ವಪ್ನೇಪಿ ಅವಜ್ಞೆ ಚಿಂತಿಸಿದವಳಲ್ಲ .... ಅವಜ್ಞೆಯಲ್ಲ ಗುರುವೇ, ..... ಅಥವಾ ಅಜ್ಞತೆಯೂ ಅಲ್ಲದಿರಬಹುದು .... ನಾನು ಅಸಹಾಯಳಾಗಿದ್ದೆ, ಪರವಶಳಾಗಿದ್ದೆ ....

ಆಚಾರ್ಯ : ಹ್ಞ.

ಸುತನುಕಾ: (ಕಿಂಚಿತ್ಸ್ಥಿರಳಾಗಿ) ಆಚಾರ್ಯಪಾದಗಳ ಅನುಗ್ರಹಧೂಲಿಯನ್ನು ದೀರ್ಘ ಧರಿಸಿದ್ದ ಈ ಶಿರಸ್ಸು, ಅಗತ್ಯಸಮಯದಲ್ಲಿ, ಅದೇ ಪಾದಗಳ ಆಗ್ರಹವನ್ನೂ ಅನುಗ್ರಹವೆಂದೇ ಧರಿಸುತ್ತದೆ .... ಆಚಾರ್ಯ ಇಷ್ಟು ದಿನ ನನಗೇ ಅಜ್ಞಾತವಾಗಿದ್ದ ನನ್ನ ರಹಸ್ಯರಮ್ಯಕಥೆಯೊಂದನ್ನು ತಮ್ಮಲ್ಲಿ ನಿವೇದಿಸಿಕೊಳ್ಳುವುದಿತ್ತು. ಆದರೆ ಇದು ವಿಷಮಸಮಯ .... ಬೇಡ. ಆಚಾರ್ಯಪಾದರ ವಾತ್ಸಲ್ಯ ಈ ದೀನಳ ಕಿಂಚಿದನುಭೂತಿಯನ್ನಾದರೂ ಅವಧರಿಸಲಿ .... ಅನಂತರದ ಆಗ್ರಹಾನುಗ್ರಹಗಳೆರಡಕ್ಕೂ ಸಿದ್ಧಳಾಗಿರುತ್ತಾಳೆ ಈ ದೀನೆ.

ಆಚಾರ್ಯ : ಬ್ರಹ್ಮೋಪಾಸಕನಿಗೆ ಯಾವ ಕ್ಷುದ್ರಳ ಯಾವ ಅವಭಾಸವನ್ನು ಕೇಳಬೇಕೆಂಬ ಅಗತ್ಯವಿಲ್ಲ. ಭದ್ರವಾದ ಓಂಕಾರ ಸದಾ ಆತನ ಕರ್ಣಗಳಲ್ಲಿ ಝೇಂಕರಿಸುತ್ತಿರುತ್ತದೆ.

ಸುತನುಕಾ : ಆಚಾರ್ಯರ ಆಜ್ಞಾಮರ್ಯಾದೆಯನ್ನು ಉಲ್ಲಂಘಿಸುವುದಿಲ್ಲ ಈ ಶಿಷ್ಯೆ.

ಆಚಾರ್ಯ : .... ಅಸ್ತು. ಅದೇನು, ಹೇಳು.

ಸುತನುಕಾ : (ಕ್ಷಣಾರ್ಧ ನೀರವಳಾಗಿ, ನಿಟ್ಟುಸಿರುಬಿಟ್ಟು, ಅನಂತರ –) ಗುರುವೆ, ಅಜ್ಞಳ ಅವಿನಯ ನಿರ್ಲಜ್ಜೆಗಳು ಪರಿಮಾರ್ಜಿತವಾಗಲಿ .... ಆಚಾರ್ಯಪಾದಗಳಲ್ಲಿ ಈ ದೀನಳು ... ಇದೇ ಮೊದಲ ಬಾರಿಗೆ ಹಾಗೂ ಇದೇ ಕೊನೆಯ ಬಾರಿಗೆ ... ತನ್ನ ಅಂತಃಕರಣವನ್ನು ಅನಾವೃತಗೊಳಿಸುತ್ತಾಳೆ.

[ಪುನಃ, ಕ್ಷಣಾರ್ಧ ನೀರವ]

(ನಿರ್ಲಿಪ್ತಳೆಂಬಂತೆ) .... ಕಳೆದ ರಾತ್ರಿಯಲ್ಲಿ, ಎಂದರೆ ... ಮನ್ಮಥ ಸಂವತ್ಸರದ ವಸಂತಪೂರ್ಣಿಮೆಯ ರಾತ್ರಿಯಲ್ಲಿ, ಹಿಂದಿನ ಅನೇಕ ವರ್ಷಗಳಲ್ಲಿ ಹೇಗೋ ಹಾಗೆಯೇ, ಚತುರ್ವೇದ-ಸಮುದ್ರ ಸಾಮುದ್ರಿಕ-ಭರತಾರ್ಣವ-ತಿಮಿಂಗಿಲ ಭರತಾಚಾರ್ಯ ಗರ್ಗರದೇವರ ದೀನ ಶಿಷ್ಯೆ, ಮಗಧಸಾಮ್ರಾಜ್ಯದ ಕಲಾನಿಕೇತನವಾದ ಸೀತಾಮಂದಿರದ ನಾಟ್ಯರಂಗದಲ್ಲಿ ಪದವಿಟ್ಟಳು .... ಪೂರ್ವರಂಗದ

ವಿಧಿವತ್ತಾಗಿ ನೆರವೇರಿತು; ಚಮತ್ಕಾರವಾದ ಆರಂಭವೇ ಸಾಮಾಜಿಕರ ಮನಸ್ಸನ್ನು ಸೂರೆಗೊಂಡು ಸಾಧುವಾದಗಳ ಮಳೆಗರೆಯಿಸಿತು .... ನರ್ತನ ಅದ್ಭುತವಾಗಿ ಮುಂದುವರಿಯುತ್ತ ನವಖಂಡಗಳು ಯಶಸ್ವಿಯಾಗಿ ಮುಕ್ತಾಯಗೊಂಡವು .... ಕೊನೆಯದಾಗಿ, ದಶಮಖಂಡ ಆರಂಭವಾಯಿತು. ಆರಂಭದ ಭೌಮಚಾರಿಗಳ ಮಂಡಲ ಕ್ರಮಕ್ರಮವಾಗಿ ಮುಂದುವರಿಯುತ್ತಿತ್ತು. ಒಮ್ಮೆಗೇ ಗೀತದ ಗತಿ ತೀವ್ರವಾಯಿತು. ಮೃದಂಗಗಳು ಮೇಘಗರ್ಜನೆಯಂತೆ ಮೊಳಗಿದವು .... ಭೌಮಚಾರಿಗಳ ಮಂಡಲ ಮುಗಿದು ಆಕಾಶಕೀಚಾರಿಗಳು ಆರಂಭವಾದವು .... ಸಾಮಾಜಿಕರು ಲಿಖಿತ ಮೂರ್ತಿಗಳಂತೆ ಉತ್ಕೀರ್ಣ ಪ್ರತಿಮೆಗಳಂತೆ, ಸ್ತಬ್ಧಜ್ವಾಲೆಗಳೆಂಬಂತೆ ಮಂತ್ರಮುಗ್ಧರಾಗಿ ಕುಳಿತಿದ್ದರು .... ತೃತೀಯ ಆಕಾಶಕೀಚಾರಿ ಆರಂಭವಾದೊಡನೆಯೇ ಸಾಮಾಜಿಕಗೃಹದ ಅಲೌಕಿಕ ಜ್ಯೋತಿಯೊಂದರಿಂದ ನರ್ತಕಿಯ ಕಣ್ಣುಗಳು ಒಮ್ಮೆಲೇ ಕೋರೈಸಿಹೋದವು. ಅದರೊಡನೆಯೇ 'ಅಹೋ! ಜಾಗೃತ!' ಎಂಬ ತೀವ್ರ ಆರ್ತಕಂಠವೊಂದು ಕೂಡಿಬಂದು, ಒಂದು ನಿಮಿಷಕಾಲದಲ್ಲಿ ವಿಚಿತ್ರ ಸ್ಫೋಟವಾಗಿಹೋಯಿತು! .... ಆ ಸ್ಫೋಟದೊಡನೆಯೇ ನರ್ತಕಿ ಬೇರೊಂದು ಲೋಕ ಸೇರಿದ್ದಳು. ಅಲ್ಲಿ, ಸುಮನೋಹರ ಚಂದ್ರಿಕಾವಾದ್ಯಗಳ ನಡುವೆ, ಅದ್ವಿತೀಯರಾಗಿ ಕುಳಿತಿದ್ದ ರೂಪದಕ್ಷ ದೇವದತ್ತರ ಸಮ್ಮುಖದಲ್ಲಿ ಮಧುರಲಾಸ್ಯ ಆರಂಭವಾಗಿತ್ತು .... ಲಾಸ್ಯಾಂತ್ಯದಲ್ಲಿ, ಮತ್ತೊಂದು ದುರ್ಮುಹೂರ್ತ ಒದಗಿಬರಲು, ನರ್ತಕಿ ನೇಪಥ್ಯಗೃಹದಲ್ಲಿ ಭಗ್ನಪಾದಳಾಗಿ ಬಿದ್ದಳು .... (ಕಥನ ನಿಲ್ಲಿಸಿ ನಿಡುಸುಯ್ಯುವಳು. ದೀರ್ಘನೀರವ.)

ಆಚಾರ್ಯ : (ನೀರವಾನಂತರ) ನೀನು ಕ್ಷುದ್ರಳು. ರಸೋಪಾಸನಕ್ಕೆ ಬೇಕಾದ ಸ್ಥೈರ್ಯ ನಿನ್ನಲ್ಲಿ ತಿಲಾಂಶವೂ ಇಲ್ಲ.... ನಿನ್ನಂಥ ಅಲ್ಪಳಿಗೆ ಶಿಕ್ಷಣ ಕೊಡಲು ಯಃಕಶ್ಚಿತ್ ಲಂಪಟವಿಟ ಸಾಕಿತ್ತು .... ನಾನು ವಂಚಿತನಾದೆ .... ಅಸ್ತು. ವಿಧಿಲಿಖಿತ ಹಾಗಿದೆ. ಜೀವನದೀರ್ಘವೂ ಹೀಗೆಯೇ ವಂಚಿತವಾಗುತ್ತಿದ್ದೇನೆ .... ಮೂರ್ಖೆ, ನೀನು ತಿಳಿಯಲಾರೆ, ಒಂದು ಕ್ಷಣದ ಅಹಂಕೃತಿಯಲ್ಲಿ ಈ ಬ್ರಹ್ಮೋಪಾಸಕನನ್ನು ಎಂತಹ ಅಂಧಂತಮ ಕೂಪಕ್ಕೆ ತಳ್ಳಿದೆಯೆಂಬುದನ್ನು .... ಸರ್ವತ್ರ ವಂಚಿತನಾಗಿಯೂ ವಿಚಲಿತನಾಗದೆ ಈ ವೃದ್ಧಾಪ್ಯದಲ್ಲಿ ಕೊನೆಯ ಆಲಂಬನವಾಗಿ ನಿನ್ನನ್ನು ಸ್ವೀಕರಿಸಿದೆ .... ಧಿಕ್! ಇನ್ನೆಂದಿಗೂ ಹೀಗೆ ವಂಚಿತನಾಗುವುದಿಲ್ಲ. ಇನ್ನೆಂದಿಗೂ ಈ ನೇಪಥ್ಯಕರಲ್ಲಿ, ಅದರಲ್ಲಿಯೂ ಸ್ತ್ರೀಯರಲ್ಲಿ ವಿಶ್ವಾಸವಿಡುವುದಿಲ್ಲ .... ಆಯಿತು, ಇಂಥ ವಂಚಕರಿಂದ ತುಂಬಿದ ಭರತಸಂಸ್ಕೃತಿಗೆ ಇನ್ನು ನಿಸ್ತಾರವಿಲ್ಲ! .... ಪರಮಗುರು ಭರತಮಹರ್ಷಿಗಳ ಸಾಕ್ಷಿ, ಭಗವಾನ್ ಮಹೇಶ್ವರನ ಸಾಕ್ಷಿ, ವೇದಮೂಲನಾದ

ಪಿತಾಮಹ ಸಾಕ್ಷಿ — ಈ ದಿನವೇ ಪ್ರಥಮವಾಗಿ ಇನ್ನು ಮುಂದೆ ಭರತ ಶಾಸ್ತ್ರವನ್ನು ಸ್ವಪ್ನೇಪಿ ಸ್ಮರಿಸುವುದಿಲ್ಲ ....

ಸುತನುಕಾ : ಗುರುವೇ, ಗುರುವೇ .... ಈ ಅಲ್ಪಳಲ್ಲಿನ ಕೋಪಕ್ಕಾಗಿ ಇಂಥ ಘೋರ ಪ್ರತಿಜ್ಞ ಬೇಡ .... ಬೇಡ ಗುರುವೇ !

ಆಚಾರ್ಯ : ಪ್ರತಿಜ್ಞ ಸಂಕಲ್ಪಗಳೆಲ್ಲ ಆಗಲೇ ಮುಗಿದಿವೆ. ನಿನ್ನ ಶಿಕ್ಷಾವ್ಯಾಜದಲ್ಲಿ ರಚಿತವಾದ ಗ್ರಂಥವನ್ನು ಪ್ರಾತರ್ಯಜ್ಞದಲ್ಲಿ ಪೂರ್ಣಾಹುತಿ ಕೊಟ್ಟು, ಉದಯೋನ್ಮುಖನಾದ ಭಗವಾನ್ ಸೂರ್ಯದೇವನ ಸಮ್ಮುಖದಲ್ಲಿ ಆಗಲೇ ಸಂಕಲ್ಪ ಕೊಂಡುದಾಯಿತು.

ಸುತನುಕಾ : ಯಾವ ಗ್ರಂಥ ಆಚಾರ್ಯ ? ಮಹರ್ಷಿಗಳ ನಾಟ್ಯಶಾಸ್ತ್ರಕ್ಕೆ ತಾವು ರಚಿಸಿದ ಆ ಅಮೋಘ ವ್ಯಾಖ್ಯೆಯಲ್ಲವಷ್ಟೆ ?

ಆಚಾರ್ಯ : ಅದೇ.

ಸುತನುಕಾ : ಅಯ್ಯೋ ! .... ಆಚಾರ್ಯ, ಎಂಥ ಪ್ರಮಾದಕ್ಕೆ ಕಾರಣಳಾದೆ ನಾನು! ವಿಶಾಲ ಪೃಥ್ವಿಯಲ್ಲಿ ಕಾಲದ ನಿರವಧಿಯಲ್ಲಿ ನಾಟ್ಯಶಾಸ್ತ್ರದ ಸಂಗಡಲೇ ವಿರಾಜಿಸಲಿದ್ದ ಆ ಅಮೋಘ ಗ್ರಂಥ ನನ್ನಿಂದಾಗಿ ನಷ್ಟವಾಗಬೇಕಾಯಿತೆ?.... ಈ ಸಾಮಾನ್ಯಳಿಗೆ ಅಂಥ ಅನಂತಕಾಲದ ಶಾಪವೆ ? .... ಈ ಅಲ್ಪಳಿಗೆ ತಾವು ಅಷ್ಟೊಂದು ಮಹತ್ವ ಕಲ್ಪಿಸಬಾರದಿತ್ತು ಗುರುವೇ !

ಆಚಾರ್ಯ : ಅದನ್ನು ವಿಲಂಬವಾಗಿ, ಈಗ, ಗ್ರಹಿಸಿದ್ದೇನೆ ! .... ಅಸ್ತು. ಸಂಭಾಷಣದಿಂದ ಉತ್ತರೋತ್ತರವೂ ಕಲುಷಿತನಾಗಲು ಇಚ್ಛೆಯಿಲ್ಲ .... ಒಟ್ಟಿನಲ್ಲಿ ನೀನು ಕ್ಷುದ್ರಳು .... ಈಗಲಾದರೂ ತಿಳಿದುಕೋ : ವೇದೋತ್ತೇಜಿತ ಉಜ್ಜ್ವಲ ಜೀವಿಗಳಿಗೆ ಮಾತ್ರ ರಸಲೋಕದಲ್ಲಿ ಪ್ರವೇಶವುಂಟು, ನಿನ್ನಂಥ ಅಹಂಕಾರದ ಸ್ವಲಂಕೃತ ಸ್ವರ್ಣಕುಂಭಗಳಿಗಲ್ಲ ! .... ನಿನ್ನಂಥ ಕ್ಷುದ್ರಳು ಈ ಬ್ರಹ್ಮೋಪಾಸಕನ ಆಗ್ರಹಾನುಗ್ರಹಗಳಿಗಲ್ಲ, ಔದಾಸೀನ್ಯಕ್ಕೆ ಮಾತ್ರ ಪಾತ್ರಳು ! .... ಅಪಾತ್ರದಲ್ಲಿ ವಿದ್ಯಾದಾನ ಮಾಡಿದ ದೋಷಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ .... ಧಿಕ್, ಧಿಕ್, ಧಿಕ್ ನಿನ್ನಂಥ ಕಲಾಮನ್ಯರಿಗೆ !

[ ಹೆಜ್ಜೆ ಭರದಿಂದ ಕ್ಷಯಿಸುತ್ತದೆ ]

ಸುತನುಕಾ : ಆಚಾರ್ಯ ... ಆಚಾರ್ಯ ...

[ಆಕೆ ಸಂಭ್ರಮದಿಂದ ಮೇಲಕ್ಕೆದ್ದು ಹಾಗೆಯೇ ನೆಲಕ್ಕೆ ಕುಸಿದ ಸದ್ದು. ಹಲವಾರು ವಾದ್ಯಗಳ ತೀವ್ರ ಕೋಲಾಹಲ, ಪಕ್ಷಪ್ರತಿಪಕ್ಷವಾಗಿ ಎಂಬಂತೆ ಝೇಂಕರಿಸುವ ಕಾಂಸ್ಯಕಿಂಕಿಣಿಗಳ ನಾದ. ಇವೆಲ್ಲವನ್ನೂ ಹಿಂದೆ ಸರಿಸಿ ತಾನೇತಾನಾಗಿ ಕಿವಿ ಕೊರೆಯುವ ವೀಣೆಯ ತೀವ್ರತಾರಕ ವಾದನ: 'ಸರಸ ವಸಂತೇ ...' ಕ್ಷಣಕಾಲದ ಅನಂತರ ಎಲ್ಲವೂ ಕ್ಷೀಣಿಸುತ್ತಿರಲು ಸುತನುಕಾ ಎದ್ದು ಕುಳಿತ ಸದ್ದು. ಅನಂತರ ಆಕೆ ಬಿಕ್ಕಿ ಬಿಕ್ಕಿ ಅಳುತ್ತ-

ರುವ ಸಪ್ಪಳ. ಪುನಃ ಆಕೆಯ ಅಳುವನ್ನು ಸುತ್ತಿಸುತ್ತಿ ಮೇಲೇರುವ ಪೂರ್ವೋಕ್ತ ರಾಗ ಅಷ್ಟರಲ್ಲಿ ಹೊರಗಿನೆಂಬಂತೆ —

ಸುಸಂಗತಾ : ಬಂಧುಲ ...

ಅದನ್ನು ಕೇಳಿ ಸುತನುಕಾ ಸಾವರಿಸಿಕೊಳ್ಳುವ ಸದ್ದು, ವೃದ್ಧಿಸುವ ಹೆಜ್ಜೆ.]

ಸುಸಂಗತಾ : ಅತ್ತಿಯಾ !

ಸುತನುಕಾ : ಜಾಗೃತಳಾಗಿ ಬಿಟ್ಟಾಳು, ನೋಡು .... ಬೇಗ ಹೋಗು.

[ಹೆಜ್ಜೆ ಕ್ಷಯಿಸಿ ಕ್ಷಣಾನಂತರ ಪುನಃ ವೃದ್ಧಿಸುವುದು.]

ಸುಸಂಗತಾ : ಅಜ್ಜುಕಾ ...

ಸುತನುಕಾ : ಏನು ವಾರ್ತೆ ಹೇಳು.

ಸುಸಂಗತಾ : ಈ ಪಾಪಿಷ್ಟೆಯನ್ನು ಕೇಳಬೇಡ ಅಜ್ಜುಕಾ ... ನನಗೆ ವಿಶ್ವಸನೀಯವಾದ ವಾರ್ತೆ ದೊರೆಯಲೇ ಇಲ್ಲ.

[ಒಳಗಿನಿಂದೆಂಬಂತೆ ಕುಟ್ಟಿಕಿಯ ಕೂಗು : ಏ ಬಂಧುಲ ! ಆ ಹುಂಜ ಹಾರಿಹೋಗುತ್ತಿದೆ, ನೋಡು, ಹಿಡಿದುಕೊ ! ... ಮನೆಯೆಲ್ಲಾ ರಕ್ತ ! ... ]

ಸುಸಂಗತಾ : ಸ್ವಪ್ನದಲ್ಲಿನ ಅವಭೋಧೆ, ಅಷ್ಟೆ ... ಈಗ ನಿದ್ರಿಸುತ್ತಿದ್ದಾಳೆ.

ಸುತನುಕಾ : ಪುಣ್ಯ !

ಸುಸಂಗತಾ : ಆಚಾರ್ಯಪಾದರು ....

ಸುನನುಕಾ : ಈಗ ಮಾತ್ರ ಹೋದರು ... ಹಲಾ, ಆಚಾರ್ಯಪಾದರ ಸಾಂತ್ವನದಿಂದ ಸ್ಥಿರಳಾದೆ ... ಇನ್ನು ನನಗೆ ಆಚಾರ್ಯಪಾದರಲ್ಲಿಯಲ್ಲದೆ ಬೇರೆ ಆಸಕ್ತಿಯಿಲ್ಲ .... ಪ್ರಾಯಶಃ, ಅಂಥದೊಂದು ಆಘಾತ ವಿಧಿಲಿಖಿತವಾಗಿತ್ತು. ಆಯಿತು ! ... ಹಿಂದಿನಂತೆ ಮುಂದೆಯೂ ಜಗತ್ತಿನ ಲೀಲಾರೂಪಕದಲ್ಲಿ ನಾನೊಬ್ಬಳು ಕೇವಲ ಸಾಮಾಜಿಕಳು, ತಟಸ್ಥಳು ! — ಜಗತ್ತಿನ ಸಮಸ್ತ ವ್ಯವಹೃತಿಗಳಿಂದಲೂ ಉದಾಸೀನಳು, ನಿರ್ಲಿಪ್ತಳು.

ಸುಸಂಗತಾ : ಉತ್ತೇಜಿತಳಾಗಬೇಡ ಅಜ್ಜುಕಾ. ರೂಪದಕ್ಷರ ವಾರ್ತೆ ಈಷತ್ ಕೇಳಿದೆ ....

ಸುತನುಕಾ : ಮುಗ್ಧೆ, ವಸಂತಪೂರ್ಣಿಮಾ ರಾತ್ರಿ ಕಳೆಯಿತು! .... ಅದೇ ಮೊದಲ ಬಾರಿ ಹಾಗೂ ಅದೇ ಕೊನೆಯ ಬಾರಿ ನಾನು ಉತ್ತೇಜಿತಳಾದುದು .... ಈಗ ರೂಪದಕ್ಷರ ವಾರ್ತೆಯೂ ನನಗೆ ಕೇವಲ ವಾರ್ತೆ !

ಸುಸಂಗತಾ : .... ಮಾರ್ಗಮಧ್ಯೆಯೇ ವಾರ್ತೆ ದೊರೆಯಿತು: ರೂಪದಕ್ಷರ ಚೇಟಿ ಇತ್ತಲಾಗಿ ಬರುತ್ತಿದ್ದ. ಆತ ಹೊರಟದ್ದು ಇಲ್ಲಿ ಬರುವ ಸಲುವಾಗಿಯೇ....

ರೂಪದಕ್ಷರು ರಾತ್ರಿ ನೇಪಥ್ಯಗ್ರಹದಿಂದ ಹೊರಟು ಪುನಃ ಸೀತಾ-ಮಂದಿರದ ಪಾರ್ಶ್ವೋದ್ಯಾನದಲ್ಲಿಯೇ ಬಹುಕಾಲ ನಿಶ್ಚಲರಾಗಿಕುಳಿತಿದ್ದರಂತೆ. ಅನಂತರ, ನಾವು ನಿನ್ನನ್ನು ಕರೆದುಕೊಂಡು ಅಲ್ಲಿಂದ ಹೊರಟಾಗ ಅವರೂ ನಮ್ಮ ರಥವನ್ನು ಹಿಂಬಾಲಿಸಿದರಂತೆ. ಚೇಟಿ ಉದ್ದಕ್ಕೂ ಅವರ ಜೊತೆಯಲ್ಲಿ ಇದ್ದನಂತೆ .... ನಮ್ಮ ಉದ್ಯಾನಿಕೆಯ ದ್ವಾರಕ್ಕೆ ಬರುವಾಗ ಅಲ್ಲಿ ಆರ್ಯ ಚಂದ್ರಕೀರ್ತಿಗಳು ರಥವನ್ನು ಒಳಗೆ ಕಳುಹಿಸಿ ತಾವೂ ಒಳಕ್ಕೆ ಬಂದುದು ಕಾಣಿಸಿತಂತೆ. ತತ್‌ಕ್ಷಣವೇ ರೂಪದಕ್ಷರು 'ಕಾರ್ಯವಾಯಿತು. ನಡೆ' ಎಂದು ಚೇಟನನ್ನು ಕರೆದುಕೊಂಡು ಹೊರಟರಂತೆ. ಸ್ವಲ್ಪ ದೂರ ನಡೆದ ಮೇಲೆ ತಿರುಗಿ, 'ಪುನಃ ಅಲ್ಲಿಗೇ ಹೋಗೋಣ ನಡೆ' ಎಂದರಂತೆ. ಪುನಃ ಇಲ್ಲಿಗೆ ಬಂದು ನಮ್ಮ ಉದ್ಯಾನಿಕೆಯ ದ್ವಾರದಲ್ಲಿ ಮೌನವಾಗಿ ಕುಳಿತಿದ್ದರಂತೆ. ಪ್ರಹರ ಕಳೆದರೂ ಅವರು ಹಾಗೆಯೇ ನಿಶ್ಚಲ ಕುಳಿತಿದ್ದರಂತೆ.... ಅಜ್ಜುಕಾ....

**ಸುತನುಕಾ** : (ಭಾವವಿಪ್ಲವವನ್ನು ಹತ್ತಿಕ್ಕುತ್ತ) ಹೇಳು.

**ಸುಸಂಗತಾ** : ... ಹಾಗೆಯೇ ನಿಶ್ಚಲ ಕುಳಿತಿದ್ದರಂತೆ ... ಪ್ರಾತಃಕಾಲಕ್ಕೆ ಪ್ರಹರ ವಿರುವಾಗ, ಆರ್ಯ ಚಂದ್ರಕೀರ್ತಿಗಳು ಇಲ್ಲಿಂದ ಹೊರಟೊಡನೆಯೇ, ಅವರನ್ನೆ ಒಮ್ಮೆ ದುರುಗುಟ್ಟಿ ನೋಡಿ, ಚೇಟನಿಗೆ 'ಈಗ ಕಾರ್ಯವಾಯಿತು, ನಡೆ' ಎಂದರಂತೆ ... ಆತನನ್ನು ಕರೆದುಕೊಂಡು ನೇರ ದ್ಯುಲೋಕಮನೋಹರಕ್ಕೆ ನಡೆದರಂತೆ. ಅಲ್ಲಿ ಚೇಟ ದೀಪ ಸಿದ್ಧ ಮಾಡಿದನಂತೆ. ಅನಂತರ ಅವರು ತಮ್ಮ ಆಲೇಖ್ಯ ಸಾಹಿತ್ಯಗಳನ್ನು ತರಿಸಿಕೊಂಡು ಚೇಟನನ್ನು ಬಲವಂತದಿಂದ ನಿದ್ರೆಗೆ ಕಳುಹಿಸಿದರಂತೆ ... ಅದಕ್ಕೆ ಮೊದಲು, ಚೇಟನಿಗೆ, ತಾವು ಇಂದಿನ ನೃತ್ಯ-ಪ್ರಯೋಗವನ್ನು ನಿಲ್ಲಿಸಲು ಶ್ರಮಿಸಿದುದನ್ನು ಆಚಾರ್ಯರಲ್ಲಿ ತಮ್ಮ ಶ್ರಮ ವ್ಯರ್ಥವಾದುದನ್ನು ತಿಳಿಸಿ, 'ಅದು ಯೋಗ್ಯವೇ !' ಎನ್ನುತ್ತ ರೋದಿಸ ತೊಡಗಿದರಂತೆ. ಅನಂತರ, 'ಪ್ರಾತಃಕಾಲ ಆದ್ಯಂತ ಘಟನೆಗಳನ್ನೆಲ್ಲ ನರ್ತಕಿಗೆ ತಿಳಿಸಿಬರಬೇಕು' ಎಂದು ಚೇಟನಿಗೆ ಆಜ್ಞಾಪಿಸಿದರಂತೆ ... ಪ್ರಾತಃಕಾಲ ಈಗ, ಘಳಿಗೆ ಪೂರ್ವದಲ್ಲಿ ಚೇಟ ಎದ್ದು ನೋಡುವಾಗ ರೂಪದಕ್ಷರ ಎದುರಿನಲ್ಲಿ ಭಿತ್ತಿಯ ಮೇಲೆ ನರ್ತಕಿಯೊಬ್ಬಳ ನೃತ್ಯಪಾದಗಳು .... ಅಷ್ಟೇ .... ಚಿತ್ರಿತವಾಗಿದ್ದುವಂತೆ ... ಅವರು ಮಾತ್ರ ಅಲ್ಲಿಯೇ ...

**ಸುತನುಕಾ** : ಅಯ್ಯೋ ! ...

[ ಆಕೆ ಮೂರ್ಛಿತಳಾದದ್ದು ಸೂಚಿತವಾಗುತ್ತದೆ. ಶುಶ್ರೂಷೆಯ ಸದ್ದು. ಸ್ವಲ್ಪ ಕಾಲಾನಂತರ ಉಚ್ಛ್ವಾಸದ ಗತಿಯ ಮೂಲಕ ಆಕೆಗೆ ಬೋಧೆಯಾದದ್ದು ಸೂಚಿತ ವಾಗುತ್ತದೆ.

**ಸುಸಂಗತಾ** : ಅಜ್ಜುಕಾ, ... ಹಾ, ಹಾಗೆಯೇ ಸ್ವಲ್ಪ ವಿಶ್ರಮಿಸು ... ಏಳಬೇಡ.

ಸುತನುಕಾ : ಸ್ಥಿರಳಾಗಿದ್ದೇನೆ ಹಲಾ ... ಭೀತಳಾಗಬೇಡ.

ಸುಸಂಗತಾ : ನಾನು ಪಾಪಿಷ್ಠೆ ಅಜ್ಜುಕಾ ... ಆದ್ಯಂತ ಘಟನೆಗಳನ್ನು ನಿಮಗೆ ಚೇಟನಿಂದ ಪ್ರತಿಜ್ಞ ಮಾಡಿಸಿಕೊಂಡಿದ್ದರಂತೆ. ಅದಕ್ಕಾಗಿ ಈ ಪಾಪಿಷ್ಠೆ ದುರ್ವಾರ್ತೆಯನ್ನು ತಿಳಿಸಬೇಕಾಯಿತು.

ಸುತನುಕಾ : ಸುಸಂಗದೆ, ರೂಪದಕ್ಷರ ಮರಣವಾರ್ತೆಯ ಸಂಗಡ ನಾನೂ ಒಂದು ವಾರ್ತೆ ಹೇಳುತ್ತೇನೆ. ಕೇಳು: ಆಚಾರ್ಯಪಾದರು ನನ್ನನ್ನು ನಿಂದಿಸಿ ಧಿಕ್ಕರಿಸಿ ತ್ಯಜಿಸಿ ಹೊರಟುಹೋದರು.

ಸುಸಂಗತಾ : ಅಜ್ಜುಕಾ ....

ಸುತನುಕಾ : ನಿನ್ನ ವಾರ್ತೆಗೆ ವಿನಿಮಯವಾಗಿ !

[ ಒಂದು ಕ್ಷಣ ನೀರವ. ]

ಸುತನುಕಾ : ಹಲಾ. ಸೀತಾಮಂದಿರಕ್ಕೂ ದ್ಯುಲೋಕಮನೋಹರಕ್ಕೂ ಎಷ್ಟು ಸಮೀಪ !

ಸುಸಂಗತಾ : (ಮೌನ.)

ಸುತನುಕಾ : ಮುಗ್ಧೆ, ಅಂಧಕಾರದಲ್ಲಿ ದೂರ ಸಮೀಪಗಳ ಭೇದವೇ? ... — ಹೋಗು. ವಾತಾಯನವನ್ನು ಮುಚ್ಚಿ ಬಾ ... ಉತ್ಸವದ ದಿನಗಳನ್ನು ಗುಹೆಯಲ್ಲಿ ಕಳೆದವಳಿಗೆ ಇಂಥ ದುರ್ದಿನದಲ್ಲಿ ಪ್ರಕಾಶವೇಕೆ ?

ಸುಸಂಗತಾ : ಅಜ್ಜುಕಾ —

ಸುತನುಕಾ : ಮೃತ್ಯುಭಯವೆ ? ... ಮೂರ್ಖ ಬಾಲಿಕೆ, ಹೋಗು. ವಾತಾಯನವನ್ನು ಮುಚ್ಚಿ ಬಾ. ಭಯ ಬೇಡ, ನಾನು ಸ್ಥಿರಳಾಗಿದ್ದೇನೆ. .... ಹೋಗು.

[ಹೆಜ್ಜೆಯ, ವಾತಾಯನದ, ಪುನಃ ಹೆಜ್ಜೆಯ ಸದ್ದು.]

ಸುತನುಕಾ : ಬಾ, ಸಮೀಪ ಕುಳಿತುಕೋ ... ಮೂರ್ಖಳೆ, ಮೃತ್ಯುಭಯವೇ?... ನಾನು ಮೃತಳಾಗುವೆನೆಂದು ...

ಸುಸಂಗತಾ : ಬೇಡ, ಬೇಡ ಅಜ್ಜುಕಾ.

ಸುತನುಕಾ : ಸ್ಥಿರಳಾಗು ಬಾಲಿಕೆ ! ... ರೂಪದಕ್ಷ ಆಚಾರ್ಯ ದೇವದತ್ತರು ದ್ಯುಲೋಕಮನೋಹರದಲ್ಲಿ ರೂಪಕಲ್ಪನದಲ್ಲಿಯೇ ಮೃತ್ಯುವಿನ ಆವಾಹನ ಮಾಡಿಕೊಂಡರು ...

ಸುಸಂಗತಾ : (ಮೌನ),

ಸುತನುಕಾ : ಭೀತಳಾಗಬೇಡ. ನಾನು ಇಷ್ಟು ಶೀಘ್ರ ಮೃತಳಾಗಲಾರೆ .... ನಾನೀಗ ಪ್ರಾಯಶಃ ಕ್ಷುಬ್ಧಳಾಗಿದ್ದೇನೆ .... ಪುನಃ ಸ್ವಸ್ಥಳಾಗುತ್ತೇನೆ, ಸ್ಥಿರಳಾಗುತ್ತೇನೆ. ನನ್ನ ಪಾದಗಳು ಯಥಾಪೂರ್ವ ಕುಶಲವಾಗುತ್ತವೆ.... ಋತು

ಬಂದು ಋತು ಕಳೆಯುತ್ತದೆ .... ಕೊನೆಗೊಮ್ಮೆ ವಸಂತಋತು ಆಗಮಿಸುತ್ತದೆ .... ವಸಂತಪೌರ್ಣಿಮೆ ಪ್ರಾಪ್ತವಾಗುತ್ತದೆ .... ಆ ವಸಂತಪೌರ್ಣಿಮಿಯ ಕ್ಷೀರ ರಾತ್ರಿಯಲ್ಲಿ ಸುತನುಕಾಳ ಕೀರ್ತಿನಿಕೇತನವಾದ ಸೀತಾನಿವಾ. ಸದ ಶುಭರಂಗದ ಮೇಲೆ ಲಘುಪಾದಗಳ ಚಿತ್ರವಿನ್ಯಾಸದಿಂದ ಈ ನರ್ತಕಿ ಪ್ರವೇಶಿಸುತ್ತಾಳೆ .... ಸಾಮಾಜಿಕರು ಸಾಧುವಾದಗಳ ಸುರಿಮಳೆಗರೆಯುತ್ತಾರೆ .... ಗೀತವಾದ್ಯಗಳು ಆನಂದಸಮುದ್ರದ ಉತ್ತೇಜಿತ ವೀಚಿಗಳಂತೆ ಹುಯ್ಯಲಿಡುತ್ತವೆ.... ಪ್ರತ್ಯಕ್ಷವಿದ್ದು ಅಲಭ್ಯನಾದ ಬಂಧಿತಪ್ರಿಯನ ಆರ್ತ ನೇತ್ರಗಳ ಮೂಕಸಂಕಟವನ್ನು ಕೇಳಿ ಆಕ್ರಂದಿಸುವ ಪ್ರಿಯಳಂತೆ,ನರ್ತಕಿಯ ಪಾದಕಿಂಕಿಣಿಗಳು ವಾದ್ಯಝೇಂಕೃತಿಗೆ ಪ್ರತಿಝೇಂಕೃತಿ ಕೊಟ್ಟು ಕೋಲಾಹಲ ವೆಬ್ಬಿಸುತ್ತವೆ ... ಅನಂತರ ... ರಾಗ ಲಯದಲ್ಲಿ ಲೀನವಾಗುತ್ತದೆ ... ಲಯ ನರ್ತನದಲ್ಲಿ ಲೀನವಾಗುತ್ತದೆ, ... ನರ್ತನ ಭಾವದಲ್ಲಿ ಲೀನವಾಗುತ್ತದೆ, ... ಭಾವ ಪ್ರೇಮದಲ್ಲಿ ಲೀನವಾಗುತ್ತದೆ, .... ಪ್ರೇಮ ಓಂಕಾರದಲ್ಲಿ ಲೀನವಾಗುತ್ತದೆ ....

[ಕೊನೆಕೊನೆಗೆ ಕ್ಷೀಣವಾಗುತ್ತ ಬಂದ ಮಾತು ಮತ್ತು ಹಿನ್ನೆಲೆಯ ವಾದನ ಅಶ್ರಾವ್ಯವಾಗಿ ಒಂದು ಕ್ಷಣ ನೀರವ. ಅನಂತರ ಮತ್ತೆ — ವಿವಿಧ ವಾದ್ಯಗಳು ರಾಗಕೋಲಾಹಲದಲ್ಲಿ ಮೊರೆಯುತ್ತಿರಲು — ]

# ಗಾನಪ್ರಿಯ

ಅಥವಾ

# ಬಡಪಾಯಿ ಬ್ರಹ್ಮರಾಕ್ಷಸ

( ಒಂದು ಹೊಸ ಪ್ರಯೋಗ )

ಪಾತ್ರಗಳು :

ಹೆಂಡತಿ ( ಮಾಲತಿ )
ಗಂಡ ( ಮಾಧವಶರ್ಮ )
ಗೊಗ್ಗರು ದನಿ
ಬ್ರಹ್ಮರಾಕ್ಷಸ
ಡಂಗುರದವ
ಪಹರೆ
ಮಂತ್ರವಾದಿ
ರಾಜ
ರಾಜಕುಮಾರಿ
ನಾಗಸ್ವರ ವಿದ್ವಾನ್.

[ ಒಂದು ತಮಿಳು ಜಾನಪದ ಕತೆಯನ್ನು ಓದಿದಾಗ ಇಲ್ಲಿನ ಸನ್ನಿವೇಶ ಪ್ರೇರಿತವಾಯಿತು. — ಲೇಖಕ ]

ಮಾಲತಿ : ಅಲ್ಲಾ, ಏನೂಂದ್ರೆ ಹೀಗೆ ಮೂಗು ಹಿಡ್ಕೊಂಡು ಮೂಲೆಗುಂಪಾಗಿ ಕೂತರೆ ಹೇಗೆ? ಯಾವುದಾದರೂ ಮೋಟು-ಗೋಡೆ ಹಿಂದಾದರೂ ನಿಂತ್ಕೊಳ್ಳಿ ಹೋಗಿ !

ಮಾಧವ : ಏನು ? ಮೋಟು-ಗೋಡೆ ಹಿಂದೇನೇ ? ನೋಡಿಲ್ಲಿ, ನಿಂತ್ಕೊಂಡೆ !

ಮಾಲತಿ : ಏನಿದು, ನನ್ನ ಪಕ್ಕದಲ್ಲಿ ನಿಂತುಕೊಂಡ್ಬಿಟ್ಟಿರಲ್ಲ ... ಇಲ್ಲೆಲ್ಲಿದೆ ಮೋಟು ಗೋಡೆ ?

ಮಾಧವ : ( ನಕ್ಕು ) ಮಾತಾಡ್ತಾ ಇದ್ಯಲ್ಲ, ಮೋಟುಗೋಡೆ ! ಅದಕ್ಕೇನು ಅಷ್ಟು ದೂರ ಹುಡುಕ್ಕೊಂಡು ಹೋಗಬೇಕೇ ? ಅಗ್ನಿಸಾಕ್ಷಿಯಾಗಿ ಕೈಹಿಡಿದು, ತಾಲಿಕಟ್ಟಿ ಮದುವೆ ಮಾಡಿಕೊಂಡಿಲ್ಲವೇನೇ, ನಿನ್ನ ! " ಕೆತ್ತೆ ಎಲ್ಲಿ ಅಂದರೆ, ಮೋಟುಗೋಡೆ ಹಿಂದೆ " ಅನ್ನೊ ಹಾಗೆ, ' ಈ ಗಾರ್ಧಭಶರ್ಮ ಎಲ್ಲಿ ? ' ಅಂದ್ರೆ, ಈ ಮೋಟುಗೋಡೆ ಮಾಲತೀ ಸೆರಗನಲ್ಲಿ ' !

ಮಾಲತಿ : ( ರೇಗಿ ) ನಿಮ್ಮ ಬುದ್ಧೀ ಎಲ್ಲ ಇಂತದ್ದರಲ್ಲೇ ಖರ್ಚು ಮಾಡಿ .... ಹೆಂಡತೀನ ಮೋಟುಗೋಡೆ ಅನ್ನೋದರಲ್ಲಿ !

ಮಾಧವ: ಇಂತದ್ದರಲ್ಲಿ ಬುದ್ಧಿ **ಖರ್ಚಾ**ಗೊಲ್ಲ ಕಣೆ, ಮಸೆದು ಹರಿತ ಆಗುತ್ತೆ ! ಕತ್ತಿ ! ಕತ್ತಿ ಇದ್ದಹಾಗೆ ಬುದ್ಧಿ ! ಉಪಯೋಗಿಸಿದರೆ ಕೂರಸಿ ಇಟ್ಟರೆ ಕಬ್ಬಿಣ ....

ಮಾಲತಿ : ಹಾಗೆಂತ ಮೋಟುಗೋಡೆ ಮೇಲೇ ಮಸೀತೀರಲ್ಲ ?

ಮಾಧವ : ಇವತ್ತು ಮೋಟುಗೋಡೆ, ನಾಳೆ ಮಹಾಪರ್ವತ — ಇಂದ್ರನ ವಜ್ರಾಯುಧನೂ, ಒಂದು ಕಾಲದಲ್ಲಿ ಕಬ್ಬಿಣದ ತುಂಡಾಗಿತ್ತು ಕಣೆ ....

ಮಾಲತಿ : ನೋಡೋಣ, ನೋಡೋಣ — ಏನು ಮಾಡ್ತೀರೋ, ನಿಮ್ಮ ವಜ್ರಾಯುಧ ಇಟ್ಕೊಂಡು ! ಕೈಲಿರಬೇಕಾದ ವಜ್ರ ಎಲ್ಲ ತಲೇಲಿ ತುಂಬಿಕೊಂಡಿದೆ. ಅದೂ ಎಂತಹ ವಜ್ರ ಅಹಹಾ .... ಮರವಜ್ರ ! .... ಸರಿ, ಸಂಧ್ಯಾವಂದನೆ ಮಾಡ್ಕೊಂಬನ್ನಿ — ಕೂಳು ಬಸಿಕೋತೀರಂತೆ. ಮಾತಿನಲ್ಲಿ ಬೇಳೆ ಬೇಯೋದಿಲ್ಲ, ಸೀದುಹೋಗುತ್ತೆ ; ಒಳಗೆ ಹೊಗ್ತೀನಿ ಏನಾಗಿದೆಯೋ?

ಮಾಧವ : ಕಾಸಿಲ್ಲದ ಗಂಡ, ಮೂದಲಿಸಿ ಮುಖ ಮುರಿಯೋ ಹೆಂಡತಿ ! ಏನಾದರೂ ಮಾಡಿ, ತಲೇಲಿರೋ ವಜ್ರಾನ ಕೈಗೆ ಒರಿಸಿಕೋ ಬೇಕಲ್ಲ .... ಇಲ್ಲದಿದ್ದರೆ ಮಸೆದಿದ್ದೆಲ್ಲ ಮಣ್ಣು ಕತ್ತರಿ ಸೊಕ್ಕಾಗತ್ತೆ ! ಇರಲಿ, ಇರಲಿ.

[ ಹೀಗೇಂತ ಮನಸ್ಸುಮಾಡಿಕೊಂಡು, ಊರ ಹೊರಗಿನ ಕೊಳ್ಳಕ್ಕೆ ಸಂಧ್ಯಾವಂದನೆ ಮಾಡೋಣ ಅಂತ ಹೋದ. ಗಾಯತ್ರಿ ಜಪಿಸುತ್ತಿರುವಾಗ.... ]

ಮಾಧವ : ಓಂಭೂರ್ಭುವಸ್ಸುವಃ

ಗೊಗ್ಗರುದನಿ : (ನಿಧಾನವಾಗಿ) ಆ ನೀರಿಗೆ ಕೈ ಹಾಕಬೇಡ, ಜೀವದ ಮೇಲೆ ಆಸೆ ಇದ್ದರೆ ಇಲ್ಲಿಂದ ಹೊರಡು.

ಮಾಧವ : (ಅರ್ಘ್ಯಕ್ಕೇ ನಿಲ್ಲಿಸಿ) ಯಾರದು ? ... ಗಂಟಲು ಕಟ್ಟಿಕೊಂಡಿದೆಯೇ ?

[ ಮಾರ್ದನಿ ]

ಯಾರೂ ಇಲ್ಲವೇ ? ... ಸರಿಯೆ, ಈ ಬುದ್ಧೀಗೇ ಏನೋ ಭ್ರಮೆ ಬಂದಿದೆ. ಸಂಧ್ಯಾವಂದನೆ ತೀರಿಸಿ ಹೋಗೋಣಂತೆ. (ನೀರನ್ನು ಕೈಗೆತ್ತಿಕೊಳ್ಳುವನು.)

ಗೊಗ್ಗರುದನಿ : ಇಲ್ಲಿ ಸಂಧ್ಯಾವಂದನೆ ಮಾಡಬಾರದು. ಹೊರಡು !

ಮಾಧವ : ಸರಿಹೋಯ್ತು ಇದ್ಯಾಕೋ! (ಗಾಳಿಗೆ) ಯಾರಯ್ಯ ನೀನು, ಗೊಗ್ಗಯ್ಯ, ಬೆದರಿಸ್ತಾ ಇದೀಯಾ ? ಹೊಳೆ ನೀರಿಗೆ ದೊಣೆನಾಯಕನ ಅಪ್ಪಣೇನೇ ? (ಗಟ್ಟಿಯಾಗಿ, ರೇಗಿ) ಏ ದೊಣೆನಾಯಕ, ಹೀಗೆಲ್ಲ ಬೆದರಿಕೆ ಹಾಕಬೇಡ. ಬೆದರೋದಿಲ್ಲ ಈ ಹಾರವ, ಗಟ್ಟಿಕುಳ ! ... [ಮಾರ್ದನಿ]
(ತನಗೇ) ಅರೆ, ಇದೇನಿದು ಹುಚ್ಚು ನನ್ನದು ... ಯಾರೂ ಇಲ್ಲ ಇಲ್ಲಿ, ಗಾಳೀಗೆ ಗುದ್ದುತಾ ಇದೇನಿ ! ಹೊಟ್ಟೇಲಿ ತಾಳ ಹಾಕಿದರೆ, ಬುದ್ಧಿ ಹೀಗೆಲ್ಲ ಕುಣಿಯುತ್ತೆ ! ಬೇಗ ಹೋಗಿ, ಹೊಟ್ಟೇಗೆ ಹವಿಸ್ಸು ಹಾಕಬೇಕು. ಹುಂ, ಹೋಗೋಣ.

ಗೊಗ್ಗರುದನಿ : (ಸ್ವಲ್ಪ ತಗ್ಗಿಸಿ) ಹೋಗಬೇಡ ಬ್ರಾಹ್ಮಣ. ನಿಲ್ಲು.

ಮಾಧವ : (ರೇಗಿ) ಯಾರಯ್ಯ ನೀನು, ಎಲ್ಲಿ ಅವಿತುಕೊಂಡಿದೀ ? ಎಂತಹ ಅನಿಷ್ಟ ಶಕುನಿ ನೀನು, ನಾನು ಮಾಡೋದನ್ನೆಲ್ಲ ಬೇಡಾಬೇಡಾಂತ ತಡೆಹಾಕ್ತೀ ... ಎಲ್ಲಿದೀಯಾ ?

ಗೊಗ್ಗರುದನಿ : (ಮೆಲ್ಲಗೆ) ಮೇಲೆ, ಈ ಅರಳೀಮರದ ಮೇಲಿದೀನಿ. ನಿನಗೆ ಕಾಣಿಸೋ ಹಾಗಿಲ್ಲ. ನಾನು ... ಬ್ರಹ್ಮರಾಕ್ಷಸ.

ಮಾಧವ : (ಸಂಶಯಾತ್ಮ) ಈಗಿನ ಕಾಲದಲ್ಲಿ ನಿಜವಾದ ಬ್ರಾಹ್ಮಣರೂ ಇಲ್ಲ, ಬ್ರಹ್ಮರಾಕ್ಷಸರೂ ಇಲ್ಲ ಅಂತ ಯಾರೋ ಹೇಳಿದ್ದರು.

ಗೊಗ್ಗರುದನಿ : ಬ್ರಾಹ್ಮಣ, ಅದೆಲ್ಲ ಸುಳ್ಳು. ನೀನು ಬ್ರಾಹ್ಮಣ, ನಾನು ಬ್ರಹ್ಮ-ರಾಕ್ಷಸ ... ನಾನೂ ಬ್ರಾಹ್ಮಣನಾಗಿದ್ದೆ, ಹೋದಜನ್ಮದಲ್ಲಿ.

ಮಾಧವ : (ಕುಹಕ) ಸರಿಯೆ, ನೀನು ಹೋದಜನ್ಮದಲ್ಲಿ ಬ್ರಾಹ್ಮಣ, ಈ ಜನ್ಮದಲ್ಲಿ ಬ್ರಹ್ಮರಾಕ್ಷಸ. ನಾನು ಈ ಜನ್ಮದಲ್ಲಿ ಬ್ರಾಹ್ಮಣ, ಮುಂದಿನ ಜನ್ಮದಲ್ಲಿ ಬ್ರಾಹ್ಮಣರನ್ನು ಬೆದರಿಸೋ ಬ್ರಹ್ಮರಾಕ್ಷಸ. ಸದ್ಗತಿಯೇ ಬಂದಹಾಗಾಯ್ತು.

ಗೊಗ್ಗರುದನಿ : (ನೊಂದು) ಬ್ರಾಹ್ಮಣ, ಹಾಸ್ಯ ಮಾಡಬೇಡ, ಕಷ್ಟ ಪಡೋವರನ್ನ ಕಂಡು ಹಾಸ್ಯಮಾಡಬೇಡ. ಅಳೋವರನ್ನ ಕಂಡು ನಕ್ಕರೆ, ನಗೋವರನ್ನ ಕಂಡು ಅಳಬೇಕಾಗುತ್ತೆ.

ಮಾಧವ : ಒಳ್ಳೇ ವೇದಾಂತ ಸಂಪಾದಿಸೀದಿಯಲ್ಲ, ಪರವಾಯಿಲ್ಲ. ನೆಲದ ಮೇಲೆ

ಇರೋ ಬ್ರಾಹ್ಮಣರಿಗಿಂತ, ಮರದ ಮೇಲಿರೋ ಬ್ರಹ್ಮರಾಕ್ಷಸರೇ ವಾಸಿ, ವೇದಾಂತದಲ್ಲಿ.

ಗೊಗ್ಗರುದನಿ: ಹೌದು, ಹೌದು. ವೇದಾಂತ ಕಲಿತುಕೋಬೇಕಾಗುತ್ತೆ. (ದಿಟ್ಟನೆ ಅಂಗಲಾಚಿ) ನನ್ನ ಕತೆ ಸ್ವಲ್ಪ ಕೇಳಬಾರದೇ ?

ಮಾಧವ: (ಅಸಡ್ಡೆ) ಊಟಕ್ಕೆ ಮೊದಲು ಕತೆ ಕೇಳಿದರೆ ಸ್ವಾರಸ್ಯ ಕಡಿಮೆ ... ಕತೇನೇ ಅರ್ಥವಾಗೊಲ್ಲ .... ಹೊಟ್ಟೆ ಹಸೀತಾ ಇದೆ, — ಹಾರವ ಬೇರೆ.

ಗೊಗ್ಗರುದನಿ: ಸ್ವಲ್ಪ ಕೇಳಿಬಿಡು. ಬಹಳ ಕಷ್ಟದಲ್ಲಿದೇನೆ.

ಮಾಧವ: ಏನಪ್ಪ ಅಂತಾ ಕಷ್ಟ? ಮರದ ಮೇಲೆ ವಾಸ, ಸುಖವಾಗಿ. ಕುರೂಪ ಹೊಟ್ಟೆನೋವು, ಹಸಿವು, ಹಲ್ಲುನೋವು ಅನ್ನೋದಕ್ಕೆ ದೇಹವೇ ಇಲ್ಲ. ನಾನೂ ನಿನ್ನ ಹಾಗಿದ್ದರೆ .... ಯಾರಿಗೂ ಕಾಣಿಸಿಕೊಳ್ಳದೆ, ಸಾಲಗಾರರ ಕಣ್ಣಿಗೆಲ್ಲ ಮಣ್ಣೆರಸ್ತಾ, ಇದ್ದೆ ...

ಬ್ರಹ್ಮರಾಕ್ಷಸ: ಹಾಗೆಲ್ಲ ಅನ್ಬೇಡಪ್ಪ. ದೇಹ ಕಾಣಿಸೊಲ್ಲ ಅಷ್ಟೆ ... ಬುದ್ಧಿವಂತ ನೀನು, ನನ್ನ ಹಾಗೆ ಆಗಿಬಿಡಬೇಡ. ನಾನು ಈ ಮರ ಬಿಟ್ಟು ಅಲುಗಾಡೋ ಹಾಗಿಲ್ಲ. (ನಿಟ್ಟುಸಿರು, ಇಡೀ ಮರ ಅಲುಗುವುದು) ... ನಮ್ಮ ಕಷ್ಟ ಕೇಳೋವರು ಯಾರಿದಾರೆ? ಯಾರು ತಾನೇ ಇದಾರೆ? (ಬ್ರಹ್ಮರಾಕ್ಷಸ ಅಳಲಾರಂಭಿಸುವನು)

ಮಾಧವ: (ಸಂತೈಸುತ್ತ) ಛೆ ಛೆ, ಇಷ್ಟು ದೊಡ್ಡವನಾಗಿ ಅಳೋದೇ ? ಬ್ರಹ್ಮರಾಕ್ಷಸರು ಬೆದರಿಕೆ ಹಾಕಿ, ಹಾರಾಡಿಸೋ ಬದಲು, ಹೀಗೆ, ಹುಡುಗರ ಹಾಗೆ ಅತ್ತುಬಿಡೋದೇ! .... ಅಳಬೇಡ, ಹೋಗಲಿ ... ಈ ಮರ ಬಹಳ ಅಲ್ಲಾಡ್ತಾ ಇದೆ ... ಸ್ವಲ್ಪ ಸುಮ್ಮನಿರು. ಹೋಗಲಿ, ಏನಾಗಿದೆ ನಿನಗೆ, ಹೇಳು, ಕೇಳ್ತೀನಿ.

ಬ್ರಹ್ಮರಾಕ್ಷಸ: (ಕಣ್ಣೊರಸಿಕೊಂಡು ಮುದುಕಿಯ ಹಾಗೆ) ಕೇಳ್ತೀಯೇನಪ್ಪ, ಈ ಬಡಪಾಯಿ ಬ್ರಹ್ಮರಾಕ್ಷಸನ ಕತೇನ ... ಮಿಕ್ಕ ಜನ ಎಲ್ಲ ನನ್ನ ಧ್ವನಿ ಕೇಳಿದರೆ ಬೆದರ್ಕೊಂಡು, ಎದ್ನೊ ಬಿದ್ನೊ ಅಂತ ಓಡಿಹೋಗ್ತಾರೆ. (ನೆನಪಾಗಿ) ಮೊನ್ನೆ ಶೆಟ್ಟಿ ಒಬ್ಬ ಓಡಿಹೋಗುವಾಗ, ಹ ಹ್ಹ ಪಂಚೆ ಕಾಲಿಗೆ ಸಿಕ್ಕೊಂಡು ... ಹ ಹ್ಹ ಹ್ಹ (ಗಟ್ಟಿಯಾಗಿ, ನಗುವನು)

ಮಾಧವ: ಒಳ್ಳೇ ಬ್ರಹ್ಮರಾಕ್ಷಸನ ಸಹವಾಸ! ಕ್ಷಣಚಿತ್ತ, ಕ್ಷಣಪಿತ್ತ ... ಒಂದು ನಿಮಿಷ ಅಳು, ಒಂದು ನಿಮಿಷ ನಗು! ಮರದ ಕೆಳಗಿರೋ ನಮಗೆ, ಇದು ಅತ್ತರೂ ಎಲೆ ಉದುರುತ್ತೆ, ನಕ್ಕರಂತೂ ಎಲೆಗಳ ಸುರಿಮಳೆ!

ಬ್ರಹ್ಮರಾಕ್ಷಸ: (ನಗುವುದನ್ನು ಥಟ್ಟನೆ ನಿಲ್ಲಿಸಿ) ನಗು ಬಂದು ಬಿಡ್ತು ... (ನಿಟ್ಟುಸಿರು) ಹೀಗೆ ನಕ್ಕೇ ಈ ಗತೀಗೆ ಬಂದೆ .... ಹುಂ! ನನ್ನ ಕಷ್ಟ ಹೇಳಿಬಿಡ್ತೀನಿ .... ನೀನೊಬ್ಬನೇ ಹೆದರದೆ ನಿಂತುಕೊಂಡವನು, ನಿನ್ನಿಂದಲೇ ನನ್ನ ಕಷ್ಟ ಪಾರು

ಮಾಡೋದು ಸಾಧ್ಯ. (ಆರ್ತನಾಗಿ) ನೀನೇ, ನೀನೆ, ... ನೀನೇ ಕಾಪಾಡ ಬೇಕು. ...

ಮಾಧವ: ( ಬೇಸರಪಟ್ಟು ) ಏನು ಕಷ್ಟ ಅಂತಲೇ ಹೇಳಲಿಲ್ಲ. ( ಊಹಿಸಿ ) ಹೆಂಡತಿ ಕಾಟವೇನಯ್ಯ ?

ಬ್ರಹ್ಮರಾಕ್ಷಸ: ( ಬಚ್ಚಿಟ್ಟ ಆಸೆ ಉಸುರುವ ಹಾಗೆ) ಹೆಂಡತಿ ಕಾಟ, ಸ್ವರ್ಗಸದೃಶ ...

ಮಾಧವ: ( ಅರ್ಥವಾಗಿ ) ಮದುವೆ ಆಗಿಲ್ಲ, ಪಾಪ, ಬ್ರಹ್ಮಚಾರೀಂತ ಕಾಣುತ್ತೆ ( ಮತ್ತೆ ಊಹಿಸಿ ) ಹೋಗಲಿ, ಮದುವೆ ಮಾಡ್ಕೊಬೇಕೇನಯ್ಯ ?

ಬ್ರಹ್ಮರಾಕ್ಷಸ: ಕಾಣಿಸೋ ಮೈ ಇದ್ದರೆ ಮದುವೆ ! ಈ ಸ್ಥಿತೀಲಿ, — ಮರಕ್ಕೆಲ್ಲಿ ಮದುವೆ ? ಹುಂ.

ಮಾಧವ: ( ಬೇಜಾರಾಗಿ ) ಒಳ್ಳೇ ಮಾತು ಬೆಳಸ್ತೀಯಲ್ಲ. ಬೇಗ ಹೇಳಪ್ಪ, ಈಗ ಏನಾಗಿದೆ ? ಅಂಥಾ ಕಷ್ಟ ಏನು ಬಂದು ಕವಿದುಕೊಂಡಿದೆ ?

ಬ್ರಹ್ಮರಾಕ್ಷಸ: ( ತಟ್ಟನೆ, ಸ್ವರ ಬದಲಾಯಿಸಿ, ವಿವರಿಸುತ್ತ ) ಆ ಕೊಳ ಇದೆಯಲ್ಲ ?

ಮಾಧವ: ಇದೆ !

ಬ್ರಹ್ಮರಾಕ್ಷಸ: ಅದರಾಚೆ ಒಂದು ಸಣ್ಣ ಮನೆ ಕಾಣೋದಿಲ್ಲವೆ ? ಸುಣ್ಣ ಬಣ್ಣ ಏನೂ ಇಲ್ಲದೆ, ಅರ್ಧ ಕಟ್ಟಿಬಿಟ್ಟು ಮರೆತುಹೋದಹಾಗೆ !

ಮಾಧವ: ಹಾಂ ! ಕಾಣಿಸ್ತು, ಅದಕ್ಕೇನು ? ( ಸ್ವಲ್ಪ ವ್ಯಂಗ್ಯ ) ತಾವು ಅಲ್ಲೀಗೆ ಹೋಗಬೇಕೋ ? ದೆವ್ವಕ್ಕೆ ತಕ್ಕಹಾಗೆ ಮಾಡಿಸಿದಾರೆ ಮನೇನ !

ಬ್ರಹ್ಮರಾಕ್ಷಸ: ( ಏಕೊ ರೇಗಿ ) ಹೌದು ಹೌದು ಆ ದೆವ್ವಕ್ಕೆ ತಕ್ಕಹಾಗೆ ಮಾಡಿಸಿ ದಾರೆ ! ( ಕೂಗಿ ) ಪಿಶಾಚಿ ! ಪಿಶಾಚಿ !

ಮಾಧವ: ಏನು ? ಇನ್ನೊಂದು ಪಿಶಾಚೀನೇ ? ( ವಿಚಾರಿಸುತ್ತ ) ಹೆಣ್ಣೊ, ಗಂಡೋ ?

ಬ್ರಹ್ಮರಾಕ್ಷಸ: ( ವ್ಯಂಗ್ಯ ಗಮನಿಸದೆ ) ಗಂಡು ! ಅಲ್ಲೊಬ್ಬ, ಈ ಹೊತ್ತಿಗೆ ಸರಿ ಯಾಗಿ ನಾಗಸ್ವರ ಬಾರಿಸ್ತಾನೆ, ಪಿಶಾಚಿ !

ಮಾಧವ: ( ಕುತೂಹಲ ) ನಾಗಸ್ವರ ಬಾರಿಸ್ತಾನೆಯೆ ಪಿಶಾಚಿ ?

ಬ್ರಹ್ಮರಾಕ್ಷಸ: ಹೌದು ನಾಗಸ್ವರ ಬಾರಿಸ್ತಾನೆ. ನರಕಸ್ವರ, ಅಪಸ್ವರದ ಕಾರವ ! ಅಲ್ಲ, ಅವನು ಬಾರಿಸೋದು ನಾಗಸ್ವರವಲ್ಲ–ನನ್ನ ಕಿವಿ ಒಳಗೆ ಸಲಾಕಿ ಹಾಕಿ ಅಗೆದು, ನನ್ನ ಮೆದುಳಿನಮೇಲೆ ರಿಂಗಣಗುಣಿತ ಕುಣೀತಾನೆ ! ಪಿಶಾಚಿ !

ಮಾಧವ: ( ಇದೇನು ಮಹಾ ! ಎನ್ನುವ ಹಾಗೆ) ನಾಗಸ್ವರಕ್ಕೇ ಇಷ್ಟೆಲ್ಲ ಶಬ್ದ ಸಂಪತ್ತು ಖರ್ಚು ಮಾಡ್ತೀಯಲ್ಲ .... ಏನೋ ಮಹಾಕಷ್ಟ ಅಂದು ಕೊಂಡಿದ್ದೆ .... ( ವಿವರಿಸಿ ) ನಾವು ಮದುವೆಮಾಡಿಕೊಳ್ಳೋವಾಗೆಲ್ಲ ಕೇಳ್ತೀವಿ, ಈ ನಾಗಸ್ವರಾನ. ನಾನು ಬ್ರಾಹ್ಮಣ ಬೇರೆ, ಮದುವೆ ಮಾಡಿ ಸೋನು. ಧಾರೆಮಂತ್ರ ಹೇಳಬೇಕಾದರೆ, ಬಲವೆಲ್ಲ ಬಿಟ್ಟು, ತಲೆಗೆ ಬಂದ

ಹಾಗೆ ಬಾರಿಸಿಬಿಡು" ಅಂತ ಅವನಿಗೆ ಬೆನ್ನು ಚಪ್ಪರಿಸ್ತೀವಿ. ಯಾಕೆ ಗೊತ್ತೆ ? ಮಂತ್ರ ತಪ್ಪಾದರೂ, ಗದ್ದಲದಲ್ಲಿ ಕೇಳಿಸ್ದಿರಲಿ ಅಂತ ! ನಾಗ ಸ್ವರದೇನು ನಮ್ಮ ಆಪ್ತ ಬಂಧು !

ಬ್ರಹ್ಮರಾಕ್ಷಸ : ಹುಂ, ನಿಮ್ಮ ಆಪ್ತಬಂಧು ನಾ ಕಾಣೆನೇ? ನಾನೂ ಬ್ರಾಹ್ಮಣನಾಗಿದ್ದೆನಲ್ಲವೇ, ನನಗೆ ಗೊತ್ತಿಲ್ಲವೆ ? ಆದರೆ — **ಇವನು !** ಇವನು, — ಈ ಸಂಗೀತದ ಯಮದೂತ. ಈ ಅಪಸ್ವರದ ಶೂಲ, ಈ ರಸಾಭಾಸದ ಕಾದ ಸೀಸದ ಝರಿ ! ಇವನ ಹಾಗೆ ನಾ ಯಾರನ್ನೂ ಕೇಳಿಲ್ಲಪ್ಪ ... ಇವನ ಭೈರವಿ ರಾಗ, ಕಾಳಭೈರವಿ ! ಇವನ ಹಂಸಧ್ವನಿ — ಕಂಸಧ್ವನಿ ! ಇವನು ತೋಡಿ ಬಾರಿಸ್ದಾಗ, ನನ್ನ ಎದೆ ರಕ್ತಾನೇ ತೋಡಿ ತೋಡಿ ಸ್ನಾನಮಾಡ್ತಿರೋ ಹಾಗೆ, ನನಗೆ ಚಿತ್ರಹಿಂಸೆ ಆಗುತ್ತೆ ! **ಒಂದೊಂದು** ರಾಗ ಬಾರಿಸಿದಾಗಲೇ ಹೀಗೆ — ಇನ್ನು ರಾಗಮಾಲಿಕೆ ಬಾರಿಸ್ತಾನೆ ... ರಾಗಮಾಲಿಕೆ ಅಲ್ಲ, ರಾಗಗಳ ರುಂಡಮಾಲಿಕೆ, ಬ್ರಾಹ್ಮಣ ! **ತೋಡಿ** ಒಳಗೆ **ಭೈರವಿ** ಹೊಕ್ಕು, ಅದರ ಹೊಟ್ಟೆ ಸೀಳಿ, ಅದರ ನರಗಳನ್ನು ಬಿಡಿಸಿ, **ಹಿಂದೋಳ**ಕ್ಕೆ ಮಾಲೆಹಾಕಿ, ಬಲಿಗೆ ಕೋಣನ್ನ ಒಯ್ಯೊ ಹಾಗೆ, ಈ ರಾಗಗಳ ರುಂಡಮಾಲೆ ಹಾಕಿದ ಹಿಂದೋಳಾನ ಅಟ್ಟಿಕೊಂಡು ಹೋಗ್ತಾನಯ್ಯ! ... (ಅಂಗಲಾಚಿ) ಬ್ರಾಹ್ಮಣ, ಬ್ರಾಹ್ಮಣ, ನನ್ನ ಬಿಡಿಸು ಇಲ್ಲಿಂದ ಬಿಡಿಸು !

ಮಾಧವ : (ಆಶ್ಚರಿ) ಕೋಪಕ್ಕೆ ವೇಗವಿದೆಯೇ ಹೊರತು ವ್ಯಾಕರಣವಿಲ್ಲ—ಏನು ಉಪಮೆಗಳು ! ... ಅಲ್ಲ, ಪರವಾಯಿಲ್ಲ, ರಾಕ್ಷಸನಾದರೂ ಸಂಗೀತಜ್ಞಾನ ಜೋರಾಗಿದೆ ... ಆದರೂ, ಈ ನಾಗಸ್ವರಕ್ಕೆ ಹೆದರ್ಕೊಂಬಿಡೋದೇ, ಮನುಷ್ಯರೇ ಹೆದರೊಲ್ಲ !

ಬ್ರಹ್ಮರಾಕ್ಷಸ : (ರೇಗಿ) ಮನುಷ್ಯರೂ ನನ್ನಷ್ಟು ಸಂಗೀತ ಬಲ್ಲವರಾಗಿದ್ದಾರೆ, ಹೆದರ್ತಾ ಇದ್ದರು : ಹೆದರೋದ್ದಲ್ಲ, ಹುಚ್ಚೆದ್ದು ಇವನ್ನ ಕೊಂದು ಸಂಗೀತ ಸರಸ್ವತೀಗೆ ಸಂತರ್ಪಣೆ ಮಾಡಿಸ್ತಾ ಇದ್ರು ! ಹಾಳು, ಸರಸ್ವತಿ ಸೌಮ್ಯ ದೇವತೆ ! ಮಹಾಕಾಳಿ ಆಗಿದ್ದಿದ್ದರೆ, ತೋರಿಸ್ತಾ ಇದ್ದಳು ಗತೀನ, ಈ ಮಹಿಷಾಸುರನಿಗೆ ! ... ಹಾಳು ! **ಹಾಳು !** ಶಾಪಕ್ಕೆ ಆಳಾಗಿ ಈ ಮರದಲ್ಲಿ ಮಿಕಮಿಕಾಂತ ಒದ್ದಾಡಬೇಕಾಗಿದೆ ... ಹುಂ.

ಮಾಧವ : (ಕುತೂಹಲ) ಶಾಪ ? ... ಏನು ಶಾಪ ?

ಬ್ರಹ್ಮರಾಕ್ಷಸ : ಈ ಸಂಕಟದಲ್ಲಿ ನನ್ನಕತೆ ಹೇಳೋದ್ನೇ ಮರೆತುಬಿಟ್ನಲ್ಲ. ಹೋದ ಜನ್ಮದಲ್ಲಿ ನಾನು ಬ್ರಾಹ್ಮಣನಾಗಿದ್ದೇಂತೆ ಹೇಳಿದೆನಲ್ಲ — ಗಾನಪ್ರಿಯ ಅಂತ ನನ್ನ ಹೆಸ್ರು ; ಸಂಗೀತಶಾಸ್ತ್ರದ ಎಲ್ಲ ಸೂಕ್ಷ್ಮಗಳನ್ನೂ ಕಲಿತುಕೊಂಡಿದ್ದೆ; ಕಲಿತ ವಿದ್ಯೇನ ಯಾರಿಗೂ ಹೇಳಿಕೊಡದೆ ಲೋಭಿಯಾಗಿದ್ದೆ. ಜತೇಗೆ, ಯಾರೇನು ಹಾಡಿದರೂ ಅವರ ತಪ್ನೆಲ್ಲ ಎತ್ತಿ ತೋರಿಸ್ತಾ ಇದ್ದೆ ... ನನಗೆ,

ಒಂದು ಸ್ವಲ್ಪ ಅಪಸ್ವರಾನೂ ಸಹಿಸೋದಿಲ್ಲ, ಏನು ಮಾಡಲಿ ? ಅದಕ್ಕೇ, ಅಷ್ಟೆಲ್ಲ ಸಂಗೀತ ಕಲೀಬಾರದು — ಕಿವಿ ಸೂಕ್ಷ್ಮವಾಗಿ, ಎಲ್ಲಿ ಹೋದರೂ ಅಪಸ್ವರ ಕೇಳಿಸಿ ನರಕಯಾತನೆ ಆಗುತ್ತೆ. ನೋಡು, ನಿನಗೇನಾದರೂ ಅನ್ನಿಸತ್ಯೆ ?

ಮಾಧವ: ( ತನಗೆ ) ಪರವಾಯಿಲ್ಲ, 'ಸಂಗೀತದ ಗಂಧವಿಲ್ಲ' ಅಂತ ಅವಮಾನ ಮಾಡೇಬಿಟ್ಟೆ; ಈ ಬ್ರಹ್ಮೇತಿ ! ಹೋಗಲಿ, ಅವನ ಯಾತನೇನೂ ತಪ್ಪಿತು ನಮಗೆ ! ... ( ಮುಂದುವರಿಸಿ ) ಸರಿಯೇ, ಆ ಮೇಲೇನಾಯಿತು ?

ಬ್ರಹ್ಮರಾಕ್ಷಸ: ಒಂದು ದಿನ, ಒಬ್ಬ ಸನ್ಯಾಸಿ ಬೀದೀಲಿ ಶ್ಲೋಕ ಹೇಳಿಕೊಂಡು ಬಂದ, ಅವನ ಹಾಹಾಕಾರ ಕೇಳಲಾರದೆ, ಅವನ್ನ ಹಿಡಿದು ಚೆಚ್ಚಿಬಿಟ್ಟೆ. ಅವನು ಪರಮೇಶ್ವರನ ಭಕ್ತನಂತೆ; ಪರಮೇಶ್ವರನಿಗೆ ಕೋಪ ಬಂತು, ಬ್ರಹ್ಮರಾಕ್ಷಸನಾಗು ಅಂತ ಶಪಿಸಿಬಿಟ್ಟ ... ಕಿವಿಡು ದೇವರು ! ಭಕ್ತಿ ಇದ್ದರೆ ಸಾಕು, ಸ್ವರಶುದ್ಧಿ ಅವನಿಗೆ ಬೇಡ ... ನೋಡೀಗ **ಅಂತಹ** ಗಾನಪ್ರಿಯ, ಇವತ್ತು ಬ್ರಹ್ಮರಾಕ್ಷಸನಾಗಿ — ಈ ನಾಗಸ್ವರದ ನರಕದೂತನ ಕೈಗೆ ಸಿಕ್ಕಿ ನರಳ್ತಾ ಇದೀನಿ ... ( ಉದ್ವೇಗ ) ಬ್ರಾಹ್ಮಣ, ಬಿಡಿಸಪ್ಪ, ಬಿಡಿಸು. ಅದೋ ... ಅದೋ ನೋಡು ... ( ದೂರದಲ್ಲಿ ತೆಳ್ಳಗೆ ನಾಗಸ್ವರ )

ಮಾಧವ: ( **ಸೂಕ್ಷ್ಮ ಸಾಲದು; ಕೇಳಿಸಲಿಲ್ಲ** ) ಎಲ್ಲಿ ... ಎಲ್ಲಿ ... ಏನು ? ಓಹೋ ನಾಗಸ್ವರವೇ ... ಎಷ್ಟು ಸೂಕ್ಷ್ಮವಯ್ಯ ನಿನ್ನ ಕಿವಿ !

ಬ್ರಹ್ಮರಾಕ್ಷಸ: ಶುರು ಆಯಿತು, ... ಬಿಡಿಸು ಬಿಡಿಸು, ಬ್ರಾಹ್ಮಣ ! ಈಗ ಹೀಗಿದೆ — ಇನ್ನೂ ಶ್ರುತಿ ನೋಡ್ತಾ ಇದಾನೆ. ಇನ್ನೇನು ಶುರು ಆಯ್ತು. ಬಿಡಿಸು, ಕಾಪಾಡು ! ಈ ಮೂರು ದಿನದಿಂದ ನರಕಯಾತನೆ ತಾಳಲಾರೆ ! ನಾಗರಹಾವು ಕೊಲ್ಲುತ್ತೆ; ಈ ನಾಗಸ್ವರ ಕೊಲ್ಲೋದಿಲ್ಲ, ಚಿತ್ರಹಿಂಸೆ ಮಾಡುತ್ತೆ ! ಬಿಡಿಸು ... ( ಭಯವಿಹ್ವಲನಾಗಿ ) ನೋಡು, ನೋಡು, ಶುರು ಆಯ್ತು ...

[ ನಾಗಸ್ವರ ಗಟ್ಟಿಯಾಗಿ ಕೇಳಿಸಲಾರಂಭಿಸುವುದು. ಎಲ್ಲರೀತಿಯ ಅಪಸ್ವರಗಳೂ ಹೊರಳಿ ನರಳಿ, ಆಕಾಶ-ಭೂಮಿಗಳನ್ನು ಕೊರೆಕೊರೆದು, ಸ್ಪಂದನಸ್ಪಂದನವಾಗಿ ಆಕ್ರಂದನಸ್ವರ ಮೊಳಗಿಬರುವುದು. ]

ಮಾಧವ: ( **ಆಲಿಸಿ** ) ಇದು, ಸ್ವಲ್ಪ ಕಷ್ಟವೇ, ನನಗೂ — ಇನ್ನು ನಿನ್ನಂತಹ ಗಾನ ಪ್ರಿಯನಿಗೆ, ಮರಣಾನಂದವೇ ! ( **ಪುನಃ ಹಳೇಪ್ರಶ್ನೆಗೆ ಬಂದು** ) ಸರಿ, ಈಗ ನಿನಗೇ ಈ ಮರಾನ ಬಿಟ್ಟುಹೋಗೋದಕ್ಕೆ ಬರೋದಿಲ್ವೆ ? ಬ್ರಹ್ಮರಾಕ್ಷಸ ನೀನು !

ಬ್ರಹ್ಮರಾಕ್ಷಸ: ( **ನೊಂದು** ) ಹಾರಾಡೋದಕ್ಕೆ ನಾನೇನು ಪಿಶಾಚಿನೇ ? ದೆವ್ವ ಭೂತ ಪ್ರೇತ ಭೇತಾಳ ಪಿಶಾಚಿಗಳು ತಾವೇ ಓಡಾಡಬಲ್ಲವು. ( **ಜಂಬದಿಂದ** )

ನಾನು ... ಬ್ರಹ್ಮರಾಕ್ಷಸ, ಬ್ರಹ್ಮ ಬಲದಿಂದ ಚಲಿಸಬೇಕಾದವನು.

ಮಾಧವ: ಹಾಗಾದರೆ ಚಲಿಸು. ಏನು ಕಷ್ಟ ನಿನಗೆ ? ಹೀಗೆ ನರಕ ನರಕಾಂತ ಗೋಳಾಡಿಕೊಂಡು, ಈ ಅರಳೀಮರಕ್ಕೆ ಯಾಕೆ ಜೋತುಬಿದ್ದಿದೀ ?

ಬ್ರಹ್ಮರಾಕ್ಷಸ: ( ತುಸು ನೊಂದು ) ನನ್ನ ಬ್ರಹ್ಮ ಬಲ ತೀರಿಹೋಯಿತು. ನೀನು ಕೊಟ್ಟರೆ ಚಲಿಸ್ತೀನಿ. ಇಲ್ಲದಿದ್ದರೆ, ( ಉದ್ವೇಗ ) ಇಲ್ಲೇ ಅನಂತಕಾಲದ ವರೆಗೂ ಕೊಳೆಯುತ್ತ, ಈ ನಾಗಸ್ವರದಿಂದ ಹಣ್ಣಾಗಿ ಹುಣ್ಣಾಗಿ .... ಅನಂತ ಕಾಲದ ವರೆಗೂ .... ಈ ರೌರವದಲ್ಲಿ ಸವೆಯಬೇಕಲ್ಲಾ. ಸಹಿಸಲಾರೆ, ಸಹಿಸ ಲಾರೆ ! (ನಾಗಸ್ವರ) ಆಪದ್ಬಾಂಧವ, ಬಿಡಿಸು, ಬಿಡಿಸು, ನಿನಗೇನು ಬೇಕಾ- ದರೂ ಮಾಡ್ತೇನೆ, ನಿನ್ನ ಬ್ರಹ್ಮಬಲದಲ್ಲಿ ಸ್ವಲ್ಪ ಕೊಡು, ನಾಲ್ಕು ಗಾವುದ ದೂರನಾದರೂ ಹೋಗ್ತೇನೆ !

ಮಾಧವ : (ತನ್ನ ಶಕ್ತಿ ಅರಿತು) ಆಯಿತು ಕೊಡೋಣಂತೆ. ಕೊಟ್ಟರೆ ... ನೀನೇನು ನನಗೆ ಕೊಡ್ತೀಯಾ ? ರಾಜ್ಯ ... ಭೂಮಿ ... ಒಡವೆ ... ಮಂತ್ರಶಕ್ತಿ ... ಏನು ಕೊಡಬಲ್ಲೆ ?

ಬ್ರಹ್ಮರಾಕ್ಷಸ : ( ಮತ್ತೆ ಅಭಿಮಾನಕ್ಕೇ ಕುಂದಾದಂತೆ ) ನಾನು ಬ್ರಹ್ಮರಾಕ್ಷಸ. ಭೂತ ಭೇತಾಳವಲ್ಲ—ರಾಜ್ಯ ಒಡವೆ ಮಂತ್ರಶಕ್ತಿ ಕೊಡೋದಕ್ಕೆ ! ಬ್ರಾಹ್ಮಣ ನಾಗಿದ್ದನು, — ಕೃತಜ್ಞತೆ ... ಆಶೀರ್ವಾದ ... ವೇದವಿದ್ಯೆ — ಇವು ಎಷ್ಟು ಬೇಕಾದರೂ ಕೊಡಬಲ್ಲೆ.

ಮಾಧವ : (ತಿರಸ್ಕಾರ) ಕೃತಜ್ಞತೆ, ಆಶೀರ್ವಾದ, ವೇದವಿದ್ಯೆ ... ನಾನೂ ಬ್ರಾಹ್ಮಣ. ನನ್ನ ಹತ್ತಿರನೂ ಇವೆಲ್ಲ ಸರಕು ಬೇಕಾದ ಹಾಗಿವೆ. ನನ್ನ ಹತ್ರ ಇಲ್ಲದೇ ಇರೋದಾಗಿ, ಧನ ಕನಕ ವಸ್ತ್ರಾದಿಗಳು, ಏನಾದರೂ ಕೊಟ್ಟರೆ, ಏನೋ... ನೋಡಬಹುದು.

ಬ್ರಹ್ಮರಾಕ್ಷಸ : ನನ್ನ ಸಂಗೀತಜ್ಞಾನದಲ್ಲಿ ಸ್ವಲ್ಪ ಕೊಡ್ತೀನಲ್ಲ ...

ಮಾಧವ : ಬೇಡಪ್ಪ ಬೇಡ, ನಿನ್ನ ಹಾಗೆ ನಾನೂ ಕಿವಿ ಸೂಕ್ಷ್ಮ ಮಾಡಿಕೊಂಡು, ' ಅದು ಅಪಸ್ವರ — ಇದು ಅಪಶ್ರುತಿ ' ಅಂತ ನರಕಯಾತನೆ ಪಡಲೆ ? ಈಗ ನನ್ನ ಹೆಂಡತಿ, ಗುಳ್ಳೆನರಿ ಊಳಿಟ್ಟಹಾಗೆ, ಹಸೆಹಾಡಿದರೂ ನನಗೆ ಕರ್ಣಾಮೃತ ... ಬೇಡಪ್ಪ ಬೇಡ. ಧನ; ಕನಕ; ವಸ್ತ್ರ; ಭೂಮಿ; ಪದರಿ — ಇವು ನನಗೆ ಬೇಕು.

ಬ್ರಹ್ಮರಾಕ್ಷಸ : ( ಮುಖ ಮುರಿಯುವ ಹಾಗೆ ) ನೀನು ಬ್ರಾಹ್ಮಣನೇ, ಇದಕ್ಕೆಲ್ಲ ಆಸೆಪಡುತ್ತೀ ? ಬ್ರಾಹ್ಮಣನಲ್ಲ, ವೈಶ್ಯ ! ಛಿ, ಹೀಗೆ ಚೌಕಶಿ ಮಾಡ್ತೀಯಲ್ಲ— ನನ್ನ ಜೀವ ಇಲ್ಲಿ ಬೇಯ್ತಾ ಇದ್ದರೆ ! [ ನಾಗಸ್ವರದ ವಿಕಾರ ಕೇಕಾರವ] ಅಯ್ಯೋ, ಅಯ್ಯೋ, ಬಿಡಿಸು, ಬಿಡಿಸು ... ಇವನು ಊದುತ್ತ ಇರೋದು ನಾಗಸ್ವರವಲ್ಲ, ಪ್ರಳಯಕಾಲದ ಕಹಳೆ ! ( ತನಗೆ ತಾನೇ ಕನಿಕರಪಟ್ಟು )

ಅಯ್ಯೋ ಎಂತಹ ನಿಸ್ಸಹಾಯ ನಾನು, ಹೇಳವನಾದೆನಲ್ಲ, ಎಂತಹ ಪಾಪಿ ಜನ್ಮ ! [ ನಾಗಸ್ವರ ]

ಮಾಧವ : ( ವಿಚಾರಿಸುತ್ತ ) ಹಾಗಾದರೆ ನಿನಗೆ ಏನೇನೂ ಶಕ್ತಿ ಇಲ್ಲವೆ ?

ಬ್ರಹ್ಮರಾಕ್ಷಸ : ಶಕ್ತಿಮಂತ್ರಗಳೆಲ್ಲ ದೆಯ್ಯ ಭೂತಗಳಿಗೆ. ಬ್ರಹ್ಮರಾಕ್ಷಸರಿಗಿರುವುದು ಒಂದೇ ಶಕ್ತಿ.

ಮಾಧವ : ಅಂದರೆ ?

ಬ್ರಹ್ಮರಾಕ್ಷಸ : ಮರಗಳನ್ನೂ, ಕೆಲವು ಸಾರಿ ಮನುಷ್ಯರನ್ನೂ ಹಿಡಿದುಕೊಳ್ಳುವುದು. ಬ್ರಹ್ಮವಿಲ್ಲದ ನನಗೆ ಆ ಶಕ್ತಿಯೂ ಇಲ್ಲ ! ( ಅಳುತ್ತ ) ಹೆಳವ, ಹೆಳವ, ಹೆಳವ ನಾನು ! ಗಾನಪ್ರಿಯ, ಈ ಕರ್ಣಕಠೋರ ನರಕದಲ್ಲಿ ಕೈಕಾಲಿಲ್ಲದ ಹೆಳವ ! ( ಬಿಕ್ಕಿ ಬಿಕ್ಕಿ ಅಳುವನು )

ಮಾಧವ : ( ಗಮನಿಸದೆ ಯೋಚಿಸುತ್ತ ) ಮರಗಳನ್ನೂ, ಮನುಷ್ಯರನ್ನೂ ಹಿಡಿದು-ಕೊಳ್ಳೋ ಶಕ್ತಿ, ಅಷ್ಟೇನೇ ? ( ಥಟ್ಟನೆ ) ಗಾನಪ್ರಿಯ, ಅಳಬೇಡ. ನಿನ್ನನ್ನು ಬಿಡಿಸುತ್ತೇನೆ. ಆದರೆ, ನೀನು ಒಂದೇ ಒಂದು ಕೆಲಸ ಮಾಡಿಕೊಡಬೇಕು.

ಬ್ರಹ್ಮರಾಕ್ಷಸ : ( ಬಿಕ್ಕಿ ) ನಾನೇನೂ ಮಾಡಲಾರೆ, ನಾನೇನೂ ಮಾಡಲಾರೆ ! ನಾನು ಹೆಳವ ! ಕೈಕಾಲಿಲ್ಲದ ರುಂಡ-ಮುಂಡ !

ಮಾಧವ : ( ಸ್ವಲ್ಪ ರೇಗಿ ) ನಿನ್ನ ಈಗಲೇ ಬಿಡಿಸುತ್ತೇನೆ, ಅಳು ನಿಲ್ಲಿಸು ... ಥು, ಮೈಯೆಲ್ಲಾ ಎಲೆ ಉದರಿಸಿ ಬಿಟ್ಟೆ ! (ಕೊಡವಿ ಕೊಳ್ಳುವನು)

ಬ್ರಹ್ಮರಾಕ್ಷಸ : (ನಿಲ್ಲಿಸಿ) ಬಿಡಿಸುತ್ತೀಯಾ ? ಬ್ರಾಹ್ಮಣ ಶ್ರೇಷ್ಠನೇ, ನಿಜವಾಗಿಯೂ ಬಿಡಿಸುತ್ತೀಯಾ ? ಎಂತಹ ನರಕದಿಂದ ನನಗೆ ಬಿಡುಗಡೆ ಆಗ್ತಾ ಇದೆ ಅನ್ನೋದನ್ನ ನೀ ಕಾಣೆ ...

ಮಾಧವ : ಆದರೆ, ನನಗೆ ಕೀರ್ತಿ, ಕಾಣಿಕೆಗಳು ಬರೋ ಹಾಗೆ ಒಂದು ಕೆಲಸ ಮಾಡಬೇಕು ನೀನು.

ಬ್ರಹ್ಮರಾಕ್ಷಸ : (ನಿರಾಶ) ನಾನು ಮೊದಲೇ ಹೇಳಿದೆನಲ್ಲ ; ನಾನು ಬ್ರಹ್ಮರಾಕ್ಷಸ, ಉಚ್ಚಕುಲದ ಪ್ರೇತ, ಯಾವ ಮಂತ್ರ ತಂತ್ರವೂ ಬರದು ಅಂತ.

ಮಾಧವ : ನೀನು ಈ ಮರಾನ ಹಿಡಿದುಕೊಂಡ ಹಾಗೆ, ಮನುಷ್ಯರನ್ನೂ ಹಿಡಿದು ಕೊಳ್ತೀ ತಾನೆ ?

ಬ್ರಹ್ಮರಾಕ್ಷಸ : ಅದೇ ನನ್ನ ಕೆಲಸ ... ಸೂಕ್ಷ್ಮದೇಹಿಯಾದ ನಾನು, ಮರ ಮನುಷ್ಯರ ಪರಕಾಯ ಪ್ರವೇಶಮಾಡಿ, ಅಲೆಯೋ ನನ್ನ ಆತ್ಮಕ್ಕೊಂದು ಗೂಡು ಹುಡುಕಿ ಕೊಡಬೇಕು.

ಮಾಧವ : (ಆತುರನಾಗಿ) ಹಾಗಾದರೆ, ಈಗಲೇ ಬಿಡಿಸುತ್ತೇನೆ. ಕೂಡಲೇ ಹೋಗಿ, ಈ ಮಹಿಷಪುರಿಯ ರಾಜಕುಮಾರಿಯನ್ನು ಹಿಡಿದುಕೊಳ್ಳುತ್ತೀಯಾ ?

ಬ್ರಹ್ಮರಾಕ್ಷಸ : (ಒಪ್ಪದೆ) ಬ್ರಾಹ್ಮಣ, ನಾನು ಬ್ರಹ್ಮಚಾರಿ. ಸ್ತ್ರೀ ಸಹವಾಸ ನನಗೆ ಬೇಡ.

ಮಾಧವ : (ಒಪ್ಪಿಸುತ್ತ, ಪುರೋಹಿತ ಸಹಜವಾಗಿ) ಅಲ್ಲ, ನೀನೇನೂ ಮದುವೆಮಾಡಿ ಕೊಳ್ಳಬೇಡ ಕಣಯ್ಯ. ಒಂದೆರಡು ದಿನ ಆ ಹುಡುಗೀನ ಹಿಡಿದುಕೋ — ನಾನು ಬರೋವರೆಗೆ, ಅಷ್ಟೆ.

ಬ್ರಹ್ಮರಾಕ್ಷಸ : ಮಂತ್ರವಾದಿಗಳು ಬಂದು, ಬೇರಿನ ಸೊಪ್ಪಿನಲ್ಲಿ ಹೊಡೆದು ಬಡಿದು ಹಿಂಸೆಮಾಡಿದರೆ, ನಾನು ಸಹಿಸಲಾರೆ!

ಮಾಧವ : (ರೇಗಿ) ಸಹಿಸದಿದ್ದರೆ ಹಾಳಾಗಿಹೋಗು ! ಈ ನಾಗಸ್ವರ ಕೇಳಿಕೊಂಡು ಆನಂದವಾಗಿರು ಇಲ್ಲೇ. ಬೇಡ ಅಂದವರು ಯಾರು ?

[ ನಾಗಸ್ವರ, ಮತ್ತೆ ಮೊಳಗಿಬರುವದು ]

ಬ್ರಹ್ಮರಾಕ್ಷಸ : (ಅಂಗಲಾಚಿ) ಬೇಡ, ಬೇಡ ... ಹೇಳಿದ ಹಾಗೆ ಕೇಳುತ್ತೇನೆ, ಬ್ರಾಹ್ಮಣ. ನೀನೇ ಗತಿ.

ಮಾಧವ : ಹಾಗಾದರೆ ಸರಿ. ನಿನ್ನ ಕೈಲಾಗದ ಕೆಲಸವೇನೂ ಅಲ್ಲ. ಇಲ್ಲಿಂದ ನನ್ನ ಬ್ರಹ್ಮಬಲಾನ ಪಡೆದುಕೊಂಡು ಹೋಗಿ, ಮಹಿಷಪುರದ ಕಿರಿಯ ರಾಜ-ಕುಮಾರಿಯನ್ನ ಹಿಡಿದುಕೊಳ್ಳಬೇಕು – ತಿಳೀತೇ ?

ಬ್ರಹ್ಮರಾಕ್ಷಸ : (ಬಿಟ್ಟರೆ ಸಾಕೆಂದು) ತಿಳಿಯಿತು, ತಿಳಿಯಿತು. ಬೇಗ ... ಬೇಗ ... ಅವನು ರಾಗಮಾಲಿಕೆ ಬಾರಿಸುತ್ತಿದಾನೆ, – ಪ್ರಳಯ ಕಹಳೆ, – ಮುಖಾರಿ ರಾಗ ! ಬಿಡಿಸು, ಬಿಡಿಸು, ಆಪದ್ಬಾಂಧವ ! ಆದದ್ದಾಗಲಿ ಇಲ್ಲಿಂದ ಬಿಡಿಸು!

ಮಾಧವ : ಇದೋ ... "ಬ್ರಹ್ಮಬಲಂ ಬಲಂ, ಬ್ರಹ್ಮ ತೇಜೋಬಲಂ ಬಲಂ !" ಹಿಡಿ ಹಿಡಿ ! ಬ್ರಹ್ಮರಾಕ್ಷಸ, ಹಿಡಿ ಬ್ರಹ್ಮಬಲವನ್ನ ! ಓಡು ! (ಕೂಗಿ ಎಚ್ಚರಿಕೆ ಹೇಳಿ) ರಾಜಕುಮಾರೀನೇ ಹಿಡಿದುಕೋ, ಯಾವಳೋ ಚೇಟೀನ ಹಿಡಿದುಬಿಟ್ಟೀಯೆ !

ಬ್ರಹ್ಮರಾಕ್ಷಸ : ದಮ್ಮಯ್ಯ, ನಿನ್ನ ದಯದಲ್ಲಿ ಬದುಕಿದೆ ! ಇದೋ, ಓಡಿದೆ. ಓಡಿದೆ! ಬಿಡುಗಡೆಯಾಯ್ತು, ಬಿಡುಗಡೆ !

[ ದೊಡ್ಡ ಶಬ್ದ ಮಾಡಿಕೊಂಡು ಓಡಿಹೋಗುವುದು. ]

( ನಾಗಸ್ವರವಿನ್ನೂ ನಡೆಯುತ್ತಿದೆ. )

ಮಾಧವ : ಏನೇನೋ ವಿಚಿತ್ರ ನಡೀತು ! ಅಂತೂ ವಜ್ರಾಯುಧ ಮಸೆದಿದ್ದಾಯಿತು ... ಈ ನಾಗಸ್ವರದೋನ ಗಂಟಲಗಾಳಿ ಸೇದಿಹೋಗಬಾರದೇ ? ... ಛೆ, ಛೆ, ಅವನಿಲ್ಲದ್ದರೆ ಬ್ರಹ್ಮರಾಕ್ಷಸ ಎಲ್ಲಿ ನನ್ನ ಕೈಗೆ ಸಿಕ್ತಿದ್ದ ... ಕಿವೀಗೆ ಬಿರಟೆ ಮಾಡಿಸಿಬಿಡೋದು ವಾಸಿ ... ಹುಂ ... ಇನ್ನು ಹೊಟ್ಟೆಗೆ ಹವಿಸ್ಸು ಹಾಕಬೇಕು. ಅವಳು ಬೇರೆ ಕಾದಿರ್ತಾಳೆ .... ( ಹೋಗುವನು).

**ಅಂದು ಸಂಜೆ**

ಮಾಲತಿ : ಏನೇ ಮಾಲತಿ, ಹೊರಗಡೆ ಡಂಗುರ ಏನಾದರೂ ಕೇಳಿಸಿದರೆ ತಕ್ಷಣ ಬಂದು ಹೇಳು .... ಏನೂ ?

ಮಾಧವ : ಏನೂಂದ್ರೆ, ಮಧ್ಯಾಹ್ನ ಪುಷ್ಕರಣಿಯಿಂದ ಮನೆಗೆ ಬಂದಾಗಿನಿಂದ, ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ, ಇರೋ ಮೂರಡಿ ಅಂಗಳದಲ್ಲಿ ಶತಪಥ ತಿರುಗ್ತ ಇದೀರಲ್ಲ .... ನಿಜವಾಗಿ, ಏನಾಯ್ತು ನಿಮಗೆ ? ಪೊರಕೆ ಸುಟ್ಟು, ದೃಷ್ಟಿ ಪರಿಹಾರನಾದ್ರೂ ಮಾಡೋಣ್ವೆ ?

ಮಾಧವ : ( ಹತ್ತನೇ ಸಾರಿ ) ನಾ ಹೇಳಿದೆನಲ್ಲ — ಬ್ರಹ್ಮರಾಕ್ಷಸನ್ನ ನೋಡಿದೆ ; ಅವನ್ನ ಮರದಿಂದ ಬಿಡಿಸಿದೆ ; ಬಹುಮಾನಕ್ಕೋಸ್ಕರ ಕಾಯ್ತಾ ಇದೀನಿ ಅಂತ .... ನೀನು ನಂಬೋದಿಲ್ಲ ; ಪೊರಕೆ ಸುಡ್ತೀನಂತೀಯಾ ! .... ಶಾಲು ಜೋಡಿ, ರತ್ನದ ನಂಕಿ ಹಾಕ್ಕೊಂಡು, ಚಿನ್ನದ ಪಲ್ಲಕ್ಕೀಲಿ ದವಾಲಿ ಬೋಯಿಗಳ ಹತ್ತರ ಹೊರಿಸಿಕೊಂಡು, ಇವತ್ತು ರಾತ್ರಿ ಅರಮನೆಯಿಂದ ಬಂದಾಗ ಮೂರ್ಛೆ ಬೀಳಬೇಡ, ಹೇಳಿದೀನಿ !

ಡಂಗುರ : ( **ಹೊರಗಡೆ ತಮಟೆ ಬಡಿದು** ) ಮಹಿಷಪುರಿಯ ಮಹಾಜನಗಳೇ, ಕೇಳಿ ಕೇಳೀ ೯ .... ಶ್ರೀಮನ್ಮಹಾರಾಜ, ಗಂಡಾಗುಂಡಿಗಳೊಡೆಯ, ರಾಜರಾಜರ ರಾಜ, ನಮ್ಮ ರಾಜ್ಯದ ಗಂಡ, ಶ್ರೀ ರಾಜರಾಜೇಂದ್ರ ಜೋಳರ ಅಪ್ಪಣೆಯ ಡಂಗುರವನ್ನು ಕೇಳೀ ೯ ( **ತಮಟೆ** )

ಮಾಲತಿ : ಡಂಗುರ ಹೊಡೀತಾ ಇದಾನೇಂದ್ರೆ !

ಮಾಧವ : ಇಷ್ಟೊತ್ತಾಯ್ತು ತಿಳಿಯೋಕೆ ? ಕಿವಿ ಬಲುಸೂಕ್ಷ್ಮ ನಿನಗೆ.

ಡಂಗುರ : (**ಹೊರಗೆ**) ಅಂತಃಪುರದ ಪಟ್ಟದರಸಿ ಮಹಾರಾಣಿ ಶ್ರೀಸುಮಕೋಮಲ ದಾಸಿಕಾಸನ್ನಿಧಾನದ ಕಿಕ್ಕಿರಿಯ ಪುತ್ರಿ, ರಾಜಕುಮಾರಿ ಶ್ರೀ ಕಮಲ ಲೋಚನಾ ಸಣ್ಣ ಸನ್ನಿಧಾನಕ್ಕೆ ಭೂತಭೇತಾಳಗಳಾವುದೋ ಹಿಡಿದು ಕೊಂಡಿವೆ. ಊರಿನಲ್ಲಿ ಮಂತ್ರತಂತ್ರಾದಿಗಳನ್ನು ಬಲ್ಲ ಯಾರಿದ್ದರೂ, ಕೂಡಲೇ ಅರಮನೆಗೆ ಬಂದು, ರಾಜಕುಮಾರಿಯನ್ನು ಭೂತಗ್ರಹಣದಿಂದ ಬಿಡಿಸಿದವರಿಗೆ — ಜಹಗೀರು ಜಾಹಿರಿ, ಧನ, ಕನಕವಸ್ತ್ರಾದಿಗಳನ್ನೂ, ರಾಜಕುಮಾರಿಯನ್ನೂ ಕೊಟ್ಟು, ಸನ್ಮಾನಮಾಡುವುದು—ಕೇಳಿ ... (**ದೂರ ಹೋಗುವುದು**)

ಮಾಧವ : ಪರವಾಗಿಲ್ಲ, ಬ್ರಹ್ಮರಾಕ್ಷಸ. ಬೇಗಲೇ ಮಾಡಿದಾನೆ ಕೆಲಸ. ಲೇ ಎಲ್ಲೇ, ನಿನ್ನ ಮದುವೇಲಿ ಕೊಟ್ಟ ಜರಿಪಂಚೆ, ರೇಷಿಮೆ ಉತ್ತರೀಯ, ಕೆಂಪು ಶಾಲು ಎಲ್ಲ ತೊಗೊಂಬಾ.

ಮಾಲತಿ : ಭೂತ ಬಿಡಿಸೋಕೆ ನೀವು ಹೋಗ್ತೀರಾ ? ಬಿಡಿಸೋ ಬದಲು ಹಿಡ ಕೊಂಡಿತು ನಿಮ್ಮನ್ನ ! ಇದೆಲ್ಲಿ ಕಲಿತಿರೀ ಈ ಭೂತವಿದ್ಯೇನ !

ಮಾಧವ : ಇವತ್ತು ಬೆಳಗ್ಗೆ. ಅಲ್ಲ ಕಣೆ, ಮೋಟುಗೋಡೆ ಮಾಲತೀ, ನೋಡ್ತಾ ಇರು. ಈ ಮೋಟುಗೋಡೇ ಮೇಲೇ ಕಿನ್‌ಕಾಪು, ಚೀನಾಂಬರ ಪೀತಾಂಬರ ಗಳನ್ನು ಹರವಿಹಾಕೋಣಂತೆ ...

ಮಾಲತಿ : ಹಾಗಾದರೆ ಬಿಡಿಸೇ ಬಿಡ್ತೀರಾ ?

ಮಾಧವ : ಖಂಡಿತ. ಬ್ರಹ್ಮರಾಕ್ಷಸ ನನ್ನ ಸ್ನೇಹಿತ; ನನ್ನ ನೋಡಿದರೆ ಬಿಟ್ಟು ಹೋಗುತ್ತಾನೆ.

ಮಾಲತಿ : (ಅಳುತ್ತ) ಹಾಗಾದರೆ ... ಹಾಗಾದರೆ ...

ಮಾಧವ : ಯಾಕೇ ಅಳ್ತೀಯಾ ? ರೇಶಿಮೆ ಶೀರೆ, ರತ್ನದ ವಂಕಿ ಬೇಡವೇನೆ ?

ಮಾಲತಿ : ಅಲ್ಲ ... ಅ ... ಅ ... ಭೂತ ಬಿಡಿಸಿದವರಿಗೆ (ಬಿಕ್ಕಿ) ಜಹಗೀರಿನ ಜತೇಗೆ, ರಾಜಕುಮಾರೀನೂ ಕೊಡ್ತೀನಿಂತ ... ಡಂಗುರ ... ಅ ... ಅ ...

ಮಾಧವ : ಅಯ್ಯೊ ಪೆಚ್ಚೇ, ಇಷ್ಟೇನೇ ? ಒಂದು ಮದುವೆ ಸಾಲದೇನೇ ನನಗೆ ? ಅದೂ ಈ ರಾಜಕುಮಾರಿ ಕಮಲಲೋಚನೆ ಕಣ್ಣಿಗೆ ಹೂ ಬಿದ್ದ ಹುಡುಗಿ.. ಛಿ ಅಳಬೇಡ ... ಭೂತ ಬಿಡಸೊಕೇ ಹೋಗ್ತಾ ಇದೀನಿ, ಆ ಭೂತ ಬಿಡಿಸಿ ಈ ಭೂತದ ಕೈಗೆ ಸಿಕ್ಕೊಳ್ತೀನೇನೇ ? ... (ಪ್ರೀತಿಯಿಂದ) ನಾನು ಮಾದವ, ನೀನು ಮಾಲತಿ; ಗಾರ್ದಭಶರ್ಮನಿಗೆ ಮೋಟುಗೋಡೇ ಮಾಲತೀನೇ ಗತಿ ಕಣೆ ಮಾಲತೀ !

ಮಾಲತಿ : (ಸ್ವಲ್ಪ ಬಿಕ್ಕುತ್ತ) ಇನ್ಮೇಲೆ "ಮೋಟುಗೋಡೆ ಹತ್ತಿರ ಹೋಗಿ" ಅನ್ನೋದಿಲ್ಲ ಅಂದ್ರೇ ...

ಮಾಧವ : ಇನ್ಮೇಲೆ, 'ಮೋಟುಗೋಡೆ ಹತ್ರ ಬನ್ನಿ' ಅಂತ ಅನ್ನು, ತಿಳಿತೇನೇ ಮೋಟುಗೋಡೆ ಮಾಲತೀ .. ಇನ್ನು ಹೋಗ್ತೀನಿ ... (ಬಟ್ಟೆಹಾಕಿಕೊಳ್ಳುತ್ತ) ಈಗ, ಈ ಹರಕಲು ಪಂಚೆ ಮುಚ್ಕೋ ಹಾಗೆ ಈ ಉತ್ತರೀಯದ ಮಡಿಕೆ ಹಾಗೇ ! ಈ ಉತ್ತರೀಯದ ಹರಕು ಮುಚ್ಕೋದಕ್ಕೆ ಈ ಕೆಂಪು ಶಾಲಿನ ಹೊದಿಕೆ. ಈ ಕೆಂಪು ಶಾಲಿನ ಈ ಕಿಂಡಿ ಮುಚ್ಕೋದಕ್ಕೆ ಅದರ ಮೇಲೆ ಹೀಗೆ ಕೈ ಇಟ್ಕೊಳ್ಳೋದು ... ನಗಬೇಡ ... ಹೋಗೋವಾಗ, ಹೀಗೆ ! ಬರೋವಾಗ, — ನೋಡ್ತಾ ಇರು !

## ರಾಜಕುಮಾರಿಯ ಅಂತಃಪುರ

ಮಾಧವ : (ಪಹರೆಗೆ) ರಾಜಕುಮಾರಿಯವರ ಭೂತಗ್ರಹಣವನ್ನು ಬಿಡಿಸುವ ಬ್ರಾಹ್ಮಣ ಬಂದಿದ್ದಾನೆಂದು ರಾಜರಿಗೆ ಹೇಳು, ಕೂಡಲೆ !

ಪಹರೆ : (ತಿರಸ್ಕಾರ) ಒಳಗಡೆ, ಯಾರು ಯಾರೋ ಮಲಯಾಳದ ಮಂತ್ರವಾದಿಗ

ಳೆಲ್ಲ ಬಂದಿದಾರೆ. ಹರಕುಪಂಚೆ ಹಾರುವಯ್ಯನೋರಿಗೆಲ್ಲ ಒಳಗೆ ಬಿಡ್ತಾರೋ ಇಲ್ಲವೋ. ಸುಮ್ಮನೆ ಯಾಕೆ ನಿಮಗೆ ತ್ರಾಸ ?

ಮಾಧವ : (ಜಬರ್ಾಗಿ) ಹೇಳು ಹೋಗಯ್ಯ, ಸುಮ್ಮನೆ ತಲೆಹರಟೆ ಮಾಡಬೇಡ. ಮಹಾರಾಜರಿಂದ ಮುಂದೆ ಶಿಕ್ಷೆ ಆದೀತು.

ಪಹರೆ : (ಕೊಡವಿ) ಹುಂ ! ಹಾರವಯ್ಯ ಬೆದರಿಕೆ ಹಾಕ್ತಾನೆ ! (ತಿರುಗಿ) ಅರರೆ ! ಮಂತ್ರವಾದಿಗಳು ... ಓಡೋಡಿ ಬರ್ತಿದಾರೆ. ಏನಾಯ್ತೊ ಏನು ಕತೆಯೋ? ಯಾಕೆ ಸ್ವಾಮಿಾ ? . .

ಮಂತ್ರವಾದಿ : (ಏದುತ್ತ ಬಂದು) ನನ್ನ ಕೈಲಾಗೊಲ್ಲಪ್ಪ, ನನ್ನ ಕೈಲಾಗೊಲ್ಲ. ಇದು ಯಾವುದೋ ಬ್ರಹ್ಮರಾಕ್ಷಸ ! ಭೂತ ಕೆಂಬೂತ ಪೆಡಂಬೂತ ಭೇತಾಳ ದೆಯ್ಯ ಪ್ರೇತ ಪಿಶಾಚಿ ಎಲ್ಲಾನೂ ಬಿಡಿಸಿದೀನಿ. ಇದು ...ಇದು... ಅದೇನು ರಂಪ, ಏನು ಮಾತು — ಹಾಡು ಬೇರೆ ಹೇಳುತ್ತೆ ! ಆಗೋದಿಲ್ಲಪ್ಪ, ಪ್ರಾಣ ಉಳಿಸಿಕೊಂಡಿದ್ದೇ ಹೆಚ್ಚು, ಮೆಟರೆ ಹಿಸಕ್ಕೋಕೇ ಬಂದಿತ್ತು, ಉಸ್ಸಪ್ಪ (ಹೋಗುವನು.)

ಪಹರೆ : ಹಾರವಯ್ಯನೋರೇ — ಇನ್ನು ನೋಡಬೇಕೂಂತೀರಾ ?

ಮಾಧವ : ನೋಡ್ತೀನಿ ಬಿಡಯ್ಯ.

ಪಹರೆ : ಸರಿ, ತಮ್ಮಿಷ್ಟ, ಬನ್ನಿ ...

ರಾಜ : (ಬಂದು) ಇನ್ಯಾರಿದಾರೆ? ... ಬ್ರಾಹ್ಮಣವರ್ಯ, ಊರಿನ ಎಲ್ಲ ಮಂತ್ರವಾದಿಗಳೂ ಸೋತು ಹೋದರು. ಇದೇನು ವಿಪತ್ತು ಬಂದಿತು! ನನ್ನ ಆರು ರಾಜಕುಮಾರಿಯರಿಗೂ ಹೀಗೇಯೇ ಲಗ್ನ ಮಾಡಿಸಿದ್ದೇನೆ. ಮನೆಯ ಸಂಪ್ರದಾಯದ ಹಾಗೆ, ದೆವ್ವಗಳೆಲ್ಲ, ಹಿಡಿದರೂ ನಾಲ್ಕು ದಿನಪಿದ್ದು ಹೋಗುತ್ತಿದ್ದುವು. ಈ ಕಡೆಯ ಕುಮಾರಿಗೆ, ... ಇದೇನೋ ಬ್ರಹ್ಮರಾಕ್ಷಸನಂತೆ ! ಅದೇನು ತಿನ್ನುತ್ತದೆ ! ಒಂದು ಹರಿವಾಣ ಲಡ್ಡುಗೆ, ಎರಡು ನಿಮಿಷದಲ್ಲಿ ಖಾಲಿ ! ಪಾಯಸವನ್ನಂತೂ, ಗಂಗಾಳಕ್ಕೆ ಗಂಗಾಳವನ್ನೇ ಬಗ್ಗಿಸಿಕೊಳ್ಳುತ್ತಿದ್ದಾಳೆ ... ಇನ್ನು ಮಂಡಿಗೆ, ಸಂಡಿಗೆ, ಹಪ್ಪಳ ! ನಮ್ಮ ಬಾಣಸದ ಮನೆ ಬರಿದಾಗುತ್ತಿದೆ, ಅಡಿಗೆಯವರು ಓಡಿಹೋಗುವುದರಲ್ಲಿದ್ದಾರೆ !

ಮಾಧವ : (ಸ್ವಗತ) ನಮ್ಮ ಬ್ರಹ್ಮರಾಕ್ಷಸನಿಗೆ ಪೂರ್ವಜನ್ಮದ ವಾಸನೆ, ಪಾಪ ! ಅರಳಿಮರದಿಂದ ಅರಮನೆಗೆ ಬಂದರೆ ಆಗುವುದೇ ಹೀಗೆ !

ರಾಜ : ತಾವೂ ಭೂತ ಬಿಡಿಸಲು ಬಂದಿರಾ ? ಇಷ್ಟೆಲ್ಲ ಮಲಯಾಳದ ಮಂತ್ರವಾದಿ ಜಂಬೂದ್ವೀಪದ ಇಂದ್ರಜಾಲಕರು ಸೋತಲ್ಲಿ, ನೀವು ಗೆಲ್ಲುವ ಭರವಸೆ ನಿಮಗಿದೆಯೇ ?

ಮಾಧವ : ಅದಿರಲಿ, ಈಗ ಹಿಡಿದಿರುವ ಭೂತ ಆಗಾಗ ಹಾಡುತ್ತದೆಯೇ ?

ರಾಜ : (ಆಶ್ಚರ್ಯ) ನಿಮಗೆ ಹೇಗೆ ತಿಳಿಯಿತು ? ಊಟವಾದ ಮೇಲೆ ಮನಬಂದ ಹಾಗೆ ಹಾಡುತ್ತದೆ. ತಾಳ ಹಾಕಿ ಹಾಕಿ ಕುಮಾರಿಯ ಕೈ ಬೆರಳು ಬಾತು. ಕೊಂಡಿವೆ. ನಿದ್ದೆಯ ಗೊರಕೆಯಲ್ಲಿ ಕೂಡ ಸಪ್ತಸ್ವರದ ಆರೋಹಣ ಕೇಳಿ. ಬರುತ್ತಿದೆ.

ಮಾಧವ : (ತೃಪ್ತಿ) ಹಾಗಾದರೆ, ಆಯಿತು. ನನ್ನನ್ನು ಅಲ್ಲಿಗೆ ಕರೆದೊಯ್ಯಿ.

ರಾಜ : ಆದರೆ ನಿಮಗಿದು ಹೇಗೆ ತಿಳಿಯಿತು ಸ್ವಾಮಿ ?

ಮಾಧವ : (ಗಂಭೀರವಾಗಿ) ಬ್ರಹ್ಮ ಬಲಂ ಬಲಂ, ಬ್ರಹ್ಮಬಲಂ ತೇಜೋಬಲಂ !

ರಾಜ : (ಅರ್ಥವಾದ ಹಾಗೆ) ಬನ್ನಿ ಬನ್ನಿ, ಕೂಡಲೇ ಏನಾದರೂ ಮಾಡಿ ಬಿಡಿಸಬೇಕು. ಏನು ಬೇಕಾದರೂ ಕೊಡುತ್ತೇನೆ.

ಮಾಧವ : (ಗಂಭೀರವಾಗಿ) ನನನ್ನು ರಾಜಕುಮಾರಿಯ ಹತ್ತಿರ ಬಿಟ್ಟು ಹೋಗಿ. ನಾನು ಕರೆಕಳಿಸುವವರೆಗೂ ಯಾರೂ ಅಲ್ಲಿ ತಲೆ ಹಾಕಬಾರದು.

ರಾಜ : ಆಗಲಿ, ಬ್ರಾಹ್ಮಣಶ್ರೇಷ್ಠರೇ, ಇದೇ ಬಾಗಿಲು, (ತೆಗೆದು) ಕುಮಾರಿಯ ಕೋಣೆ ! (ತೆಗೆದೊಡನೆ, ಒಳಗಿನ ಸದ್ದುಗಳು, ಹಾಡು ಕುರುಕುವುದು)

ಮಾಧವ : ಇನ್ನು ಹತ್ತು ನಿಮಿಷದಲ್ಲಿ ಇಲ್ಲಿಗೆ ಬನ್ನಿ. ರಾಜಕುಮಾರಿಯನ್ನು ಒಪ್ಪಿಸಿ ಕೊಳ್ಳಿ. (ಬಾಗಿಲು ಹಾಕಿ) ಹ್ರಾ ಹ್ರಿ ಹ್ರೂ, ಛೂಮಂತರ ಕಾಳಿ ( ನೋಡಿ) ಇವರೆಲ್ಲ ಹೋದರೋ ? ಹುಂ, ಏನಯ್ಯ ಗಾನಪ್ರಿಯ ?

ರಾಜಕುಮಾರಿ : ಲಡ್ಡು ಲಡ್ಡೂ !
ಸಾ ಸರಿಗಮಪದನಿಸಾ !
ಒಡ್ಡು ಒಡ್ಡೊ !
ಹೊಟ್ಟೆತುಂಬ ಲಡ್ಡು ಲಡ್ಡು !
ಗಮರಿಸನಿದಪಾ !

ಮಾಧವ : ( ಗಟ್ಟಿಯಾಗಿ ) ಗಾನಪ್ರಿಯಾ ! ಬ್ರಹ್ಮರಾಕ್ಷಸ ಗಾನಪ್ರಿಯಾ ? ನಿನ್ನ ಸ್ನೇಹಿತ, ನಾನು, ಬಂದಿದ್ದೇನೆ. ಕೊಟ್ಟ ಮಾತಿನಂತೆ ಬಿಟ್ಟುಹೋಗು.

ಹುಡುಗಿಯೊಳಗಿನಿಂದ ಬ್ರಹ್ಮರಾಕ್ಷಸನ ಗೊಗ್ಗರುದನಿ : ಬ್ರಾಹ್ಮಣ, ನಿನ್ನಿಂದ ನನಗೆ ಬಹಳ ಉಪಕಾರವಾಯಿತು. ಅರಳಿಮರದ ಮೇಲೆ ಗಾಳಿ ಕುಡಿದೂ ಕುಡಿದೂ ಬೆಂಡಾಗಿದ್ದ ನಾನು, ಇಲ್ಲಿ (ರಾಗವಾಗಿ) ಲಡ್ಡು ಮಂಡಿಗೆ ಹಪ್ಪಳ ಸಂಡಿಗೆ ಒಬ್ಬಟ್ಟು ಹೋಳಿಗೆ ಪಾಯಸ ಪರಮಾನ್ನಗಳನ್ನೂ ... ತಿಂದು ತೇಗುತ್ತಿದ್ದೇನೆ. ಪೂರ್ವಜನ್ಮದ ಸುಕೃತ ! ಅಲ್ಲದೆ, ಈ ಹುಡುಗಿಗೆ ಎಂತಹ ಕಂಠ ! ಆಹಹಾ, ಜೇನುತುಪ್ಪದ ಕಂಠ ! ಒಂದು ಕೀರ್ತನೆ ಹಾಡಿಸುತ್ತೇನೆ, ಕೇಳು ! (ಹುಡುಗಿಯ ಕಂಠದಲ್ಲಿ ; ಯಾರು ಬಲ್ಲರೋ ...)

ಮಾಧವ : (ವ್ಯಂಗ್ಯ) ಬ್ರಹ್ಮಚಾರಿ ಬ್ರಹ್ಮರಾಕ್ಷಸ ! ಸ್ತ್ರೀಸಹವಾಸದ ನೆರಳಿಗೇ ಹೆದರಿದವನು, ಅಲ್ವೆ ? ಈಗ ನೋಡು !

ಬ್ರಹ್ಮರಾಕ್ಷಸ : ಹೊದ ಜನ್ಮವೆಲ್ಲ ವ್ಯರ್ಥವಾಯಿತು – ವ್ಯರ್ಥವಾಯಿತು ! ಇದೀಗ ನನಗೆ ಸರಿಯಾದ ನೆಲೆ. ಎಂತಹ ಸುಪ್ಪತ್ತಿಗೆ ಹಾಸಿಗೆ ! ಕಿನ್‌ಕಾಪಿನ ಪರದೆ, ಚಿನ್ನದ ಪಾತ್ರೆಯಲ್ಲಿ ಮಧು, ಕೇಳಿದಾಗ ಲಡ್ಡು, ಹಾಡುವುದಕ್ಕೆ ಸೊಗಸಾದ ಇನಿದನಿ ! ಇಂತಹ ಶಾರೀರ ಹೋದ ಜನ್ಮದಲ್ಲೇ ಇದ್ದಿದ್ದರೆ. ನಾನು ಅಷ್ಟೆಲ್ಲ ಶಾಸ್ತ್ರ ಕಲೀತಿದ್ನೆ, ವಿಮರ್ಶಕ ಆಗತಿದ್ನೆ ? ... ಇದೀಗ ಸ್ವರ್ಗ !

ಮಾಧವ : ಇದೇನು, ರಾಜಕುಮಾರೀನ ಬಿಡೋ ಮನಸ್ಸಿದ್ದ ಹಾಗೆ ಕಾಣಲಿಲ್ಲ. ನಿನಗೆ ...

ಬ್ರಹ್ಮರಾಕ್ಷಸ : (ರಾಜಕುಮಾರಿಯ ದನಿಯಲ್ಲಿ) ಹೊರಡೋ ಹೊರಡೋ ! ಹೊರ ಡುತ್ತೀಯೊ, ಕರುಳು ಬಗೆದುಬಿಡಲೋ ! ಬಂದ, ಶಿವಪೂಜೇಲಿ ಕರಡಿ ಬ್ರಾಹ್ಮಣ !

ಲಡ್ಡು ಲಡ್ಡೂ
ಒಡ್ಡು ಒಡ್ಡೂ ... ಸಾಸರಿಗಮಪದನಿಸಾ

ಮಾಧವ : ಇದೇನು ವಿಪರೀತ ! ನಂ ಕೈಗೆ ಬಂದ ತುತ್ತು, ಇವನ ಬಾಯಿಗೆ ಬಿತ್ತೊ ? ... ಥೀ ಬ್ರಹ್ಮರಾಕ್ಷಸ, ನಾಚಿಕೆ ಆಗೋದಿಲ್ವೆ ನಿನಗೆ ? ಇವತ್ತು ಬೆಳಿಗ್ಗೆ ತಾನೇ, ಕೃತಜ್ಞತೆ ಕೊಡ್ತೀನೀಂದೆ – ಕಡೆಗೆ ಅದೂ ಇಲ್ಲವೇ ?

ಬ್ರಹ್ಮರಾಕ್ಷಸ : (ಗೊಗ್ಗರುದನಿಯಲ್ಲಿ ಚೀರಿ ನಕ್ಕು) ಸಿಕ್ಕಿದವರಿಗೆ ಸೀರುಂಡೆ ! ಆ ಅರಳಿ ಮರದಿಂದ ಬಿಡಿಸಿದ್ದಕ್ಕೆ ಎಂದೆಂದಿಗೂ ಋಣೀ, ಆದರೆ ಹ ಹ್ಹ ಹ್ಹ.. ಇಲ್ಲಿಂದ ನೀನೇನು ಮಾಡಿದರೂ ಹೋಗಲಾರೆ, ಕ್ಷಮಿಸಿಬಿಡು ... ಬೇಕು ಅಂದರೆ, ಸ್ವಲ್ಪ ಸಂಗೀತವಿದ್ಯೆ ಕೊಡುತ್ತೇನೆ. ಹಾಡಿ ಬದುಕಿಕೋ.

ಮಾಧವ : ಇಷ್ಟಕ್ಕೆ ಬಂತೋ ನಿನ್ನ ಪ್ರತಾಪ. ಮಾಡಿಸ್ತೀನಿ. ನನಗೆ ಬೆಳಿಗ್ಗೆ ತಾನೇ ಅಂಗಲಾಚಿದೆ, ಕಾಲು ಕಟ್ಟಿದೆ.

ಬ್ರಹ್ಮರಾಕ್ಷಸ : (ಗಟ್ಟಿಯಾಗಿ ನಕ್ಕು) ಕಾರ್ಯವಾಸಿ ಕತ್ತೆಕಾಲು ಕಟ್ಟು !

ಮಾಧವ : (ನಿರಾಶನಾಗಿ) ಇಲ್ಲೂ ಕತ್ತೆಪಟ್ಟ ಸಿಕ್ಕಿತೇ ? ಛೆ, ನರಮನುಷ್ಯರಿಗಷ್ಟೇ ಕೃತಜ್ಞತೆ ಇಲ್ಲ ಅಂದುಕೊಂಡಿದ್ದೆ, ಭೂತ ಪ್ರೇತಗಳಿಗೂ ಇಲ್ಲವೇ ? ನಂಬಿ ದವನ ಮೈ ಬೆತ್ತಲೆ ...

ಬ್ರಹ್ಮರಾಕ್ಷಸ : ನೀನು ಬೇಕಾದದ್ದು ಮಾಡು. ನಾನಿಲ್ಲಿಂದ ಹೋಗೋದಿಲ್ಲ. ನಾಲ್ಕು ಜನ್ಮದಲ್ಲಿ ಸಿಕ್ಕದ ಸುಖ ನನಗಿಲ್ಲಿ ಸಿಕ್ಕಿದೆ. ಅರಮನೆ ಅಡಿಗೇಯವನು ಸೊಗ ಸಾಗಿ ಅಡಿಗೆ ಮಾಡ್ತಾನೆ. ಜತೆಗೆ ಎಂತಹ ಕಂಠ !

ಹುಡುಗಿಯ ದನಿ : ಮಂಡಿಗೆ ಸಂಡಿಗೆ
ಕಾಯಿ ಹೋಳಿಗೆ ಹಪ್ಪಳ
ಸಾ ಸರಿಗ ಸರಿಗ ಸರಿ !

ಮಾಧವ : (ಥಟ್ಟನೆ) ರಾಗ ಹಾಡ್ತೀಯಾ ಅಲ್ವೆ, ಗಾನಪ್ರಿಯ! ಹಾಡಿಸ್ತೀನಿ ಇರು ! (ಬಾಗಿಲು ತೆಗೆದು) ಏ—ಯಾರಲ್ಲಿ ? ಕೂಡಲೇ ... ಊರ ಪಡುವಲಲ್ಲಿರೋ ಪುಷ್ಕರಣಿ ಆಚೆ ದಡದಲ್ಲಿ, ಒಬ್ಬ ನಾಗಸ್ವರ ಬಾರಿಸೋನಿದಾನೆ. ಕರೆದು ತಾ, ಕೂಡಲೇ. ನಾಗಸ್ವರ ಇಲ್ಲದೆ ಮಂತ್ರ ಫಲಿಸೋದಿಲ್ಲ.

ಪಹರಿ : ಹತ್ತಿರದಲ್ಲಿರೋವರು ಯಾರೂ ಆಗಬಾರದಾ ?

ಮಾಧವ : ಊಹುಂ. ಅವನೇ ಆಗಬೇಕು. ಅವನ ಹಾಗೆ ಬಾರಿಸೋವರು ಇನ್ನು ಈ ಲೋಕದಲ್ಲಿಲ್ಲ. ಮಂತ್ರದ್ದು ಅವನ ನಾಗಸ್ವರ. ಕೂಡಲೇ !

ಪಹರಿ : ಆಗಲಿ, ಈಗಲೇ ಕರೀತೀನಿ ...

ಮಾಧವ : ಕೇಳಿಸಿತೋ ಗಾನಪ್ರಿಯ !

ಬ್ರಹ್ಮರಾಕ್ಷಸ : (ನಡುಗುತ್ತ) ಅವನ್ನ, ಅವನ್ನ ! ಬೇಡ, ಬ್ರಾಹ್ಮಣ, ಬೇಡ ! ಇನ್ನು ಸ್ವಲ್ಪ ದಿನವಿದ್ದು ಹೊರಟುಹೋಗ್ತೀನಿ. ನಾನೇ ಹೋಗ್ತೀನಿ.

ಮಾಧವ : ಕೂಡಲೇ ಹೊರಡು. ನಿನ್ನಲ್ಲಿ, ಕೊಟ್ಟ ಮಾತಿಗೆ ಬೆಲೆ ಇಲ್ಲ. ಈಗಲೇ !

ಬ್ರಹ್ಮರಾಕ್ಷಸ : (ಬೇಡಿ) ಇನ್ನು ಸ್ವಲ್ಪ ದಿನ ... ನಾಲ್ಕುದಿನವಾದರೂ ಸುಖ ಪಡ್ತೀನಿ. ನಿನ್ನ ಹಾಗೆ ನಾನೂ ಬ್ರಾಹ್ಮಣನಲ್ಲವೇ ?

ಮಾಧವ : ಕೃತಘ್ನ ! ಬಿಟ್ಹೋಡ್ತೀಯೋ, ಇಲ್ಲವೋ ? ಇರಲಿ, ಅವನೇ ಬರ್ತಾನೆ! ಮಂತ್ರವಾದಿ ! — ಕಂತೆಗೆ ತಕ್ಕ ಬೊಂತೆ ! ಅರೆರೆ, ಮೂರ್ಛೆ ಹೋದಳಲ್ಲ ರಾಜಕುಮಾರಿ ! (ಬೀಸುವನು)

ಬ್ರಹ್ಮರಾಕ್ಷಸ : (ಕ್ಷೀಣನಾಗಿ) ಬ್ರಾಹ್ಮಣ, ಆಪದ್ಬಾಂಧವ — ಒಂದು ಸಾರಿ ಬದುಕಿಸಿದೆ. ಇನ್ನೊಂದು ಸಾರಿ ಬದುಕಿಸು. ನನ್ನನ್ನು ಬಿಟ್ಟುಬಿಡು. ನನ್ನ ಪಾಡಿಗೆ ಇಲ್ಲಿ ಸ್ವಲ್ಪ ದಿನ ಸುಖರಾಗಿರುತ್ತೇನೆ... ನನ್ನ ಸಂಗೀತ ಜ್ಞಾನವನ್ನೆಲ್ಲ ನಿನಗೇ ಕೊಡುತ್ತೇನೆ.

ಮಾಧವ : ಛಿ, ಈಗಲೂ ಕುಟಿಲವೆ ? ನೀನು ಸಂಗೀತಜ್ಞಾನವನ್ನೆಲ್ಲ ನನಗೆ ಕೊಟ್ಟ ಮೇಲೆ ಆ ನಾಗಸ್ವರದೋನು ಏನೇನು ಬಾರಿಸಿದರೂ ನಿನಗೆ ತಟ್ಹೋಹಾಗಿಲ್ಲ ಅಲ್ಲವೆ ? ಇಲ್ಲಿ ಯಾರೇನುಶಂಖ ಬಾರಿಸಿದರೂ ನೀನು ಸುಖವಾಗಿರಬಹುದು ಅಲ್ಲವೆ ? ... (ರೇಗಿ), ಹೊರಡುತ್ತಿಯೋ ಇಲ್ಲವೊ.

ಬ್ರಹ್ಮರಾಕ್ಷಸ : (ಮೆಲ್ಲಗೆ) ಈ ಸುಖವನ್ನೆಲ್ಲ ಬಿಟ್ಟು ಎಲ್ಲಿಗೆ ಹೋಗಲಿ ? (ಥಟ್ಟನೆ ಹುಮ್ಮಸ್ಸಿನಿಂದ) ಇರಲಿ, ಬ್ರಾಹ್ಮಣ ನನ್ನನ್ನು ಕೆಣಕಬೇಡ. ಇವಳನ್ನು ಬಿಟ್ಟರೆ ನಿನ್ನನ್ನೇ ಹತ್ತಿ ಹಿಡಿದುಕೊಳ್ಳುತ್ತೇನೆ. ನೀ ಕೊಟ್ಟ ಬಲದಲ್ಲಿ ಅಷ್ಟಿನ್ನೂ ಉಳಿದಿದೆ ! ಅರಮನೆ ಇಲ್ಲದಿದ್ದರೆ, ಗುರುಮನೆ ಆಯಿತು. ಅರಳಿಮರ ತಪ್ಪಿತಲ್ಲ. ಇನ್ನು ನೀನು ಹೊರಡು, ಕೂಡಲೇ ... ಇಲ್ಲದಿದ್ದರೇ .. ? ಹ ಹ್ಹ ಹ್ಹಾ ...

ಪಹರೆ : (ಬಂದು) ಸ್ವಾಮಿ, ನಾಗಸ್ವರದವನು ಬಂದಿದ್ದಾನೆ. ಅವನ ಜತೆಗೆ ಅವನ ತಮ್ಮಂದಿರಿಬ್ಬರೂ ಬಂದಿದ್ದಾರೆ.

ಮಾಧವ : ಕೂಡಲೇ ಅವರಿಗಿಷ್ಟವಾದ ರಾಗಮಾಲಿಕೆ ಬಾರಿಸಹೇಳು. "ಅರಮನೆ ಓಲಗ, ಮೂರು ಜನರೂ ಒಟ್ಟಿಗೆ ಬಾರಿಸಿ," ಅಂತ ಹೇಳು ... (ಆಹ್ವಾನಿಸುತ್ತ) ಬಾ, ಗಾನಪ್ರಿಯ, ನನ್ನ ಹಿಡಿದುಕೋ. ನನ್ನನ್ನು ಹಿಡಿದ ಮೇಲೆ, ಈ ಪ್ರಳಯದ ಕಹಳೆಯಿಂದ ನಿನ್ನನ್ನು ಬಿಡಿಸೋರು ಯಾರು ಬರ್ತಾರೆ, ನೋಡ್ಕೊಳ್ಳೋಣ ಬಾ, (ಆನಂದದಿಂದ) ಆಹಾ, ಎಂತಹ ಸೊಗಸಾದ ರಾಗಮಾಲಿಕೆ! ಕೇಳಿಸಿತೇ ?

[ಹೊರಗಡೆ ನಿರರ್ಗಳವಾಗಿ, ಹರಿದು ಬರುವ ಅಪಸ್ವರದ ಹುಚ್ಚುಹೊಳೆ]

ಬ್ರಹ್ಮರಾಕ್ಷಸ : ಹೋದೆ, ಹೋದೆ ... ಅಯ್ಯೋ ... (ವಿಕಾರವಾಗಿ ಅತ್ತು, ಬ್ರಹ್ಮ ರಾಕ್ಷಸ ಪಲಾಯನವಾಗುವನು).

ರಾಜಕುಮಾರಿ : (ಎದ್ದು) ಏನು ... ಏನು ? ನನಗೇನಾಗಿತ್ತು ? ನಾನೆಲ್ಲಿದ್ದೇನೆ ? (ಮಾಧವನನ್ನು ನೋಡಿ, ಇಂತಹ ಕತೆಯ ಮಿಕ್ಕೆಲ್ಲ ರಾಜಕುಮಾರಿಯರ ಹಾಗೆ) ಮನ್ಮಥಾಕಾರನಾದ ಮೋಹನಾಂಗನೇ, ನೀನು ಯಾರು ?

ಮಾಧವ : (ಬೆದರಿ) ನಿಮಗೆ ... ಯಾವುದೋ ಭೂತ ಬಡಿದಿತ್ತು ... ನನ್ನ ರೆಟ್ಟೆ ಹಿಡಿಕೋಬೇಡಿ, ರಾಜಕುಮಾರಿ ... ಸ್ವಲ್ಪ ತಾಳಿ, ಬಂದೆ ... ಏ ಪಹರೆಯವನೆ, ಚೇಟಿಯರನ್ನು ಕರೆ, ರಾಜಕುಮಾರೀನ ನೋಡಿಕೊಳ್ಳಬೇಕು. ಈಗಲೇ ಹೊರಗೆ ಬಿಡಬಾರದು ...

ರಾಜಕುಮಾರಿ : ಮೋಹನಾಂಗ, ನಾನೂ ಬರುವೆ ತಾಳಿರಿ (ಎನ್ನುವಾಗ, ಮಾಧವ ಬಾಗಿಲು ಹಾಕುವನು).

ಮಾಧವ : ಸಧ್ಯ .... ರಾಜಕುಮಾರಿ ಒಳಗೆ ಕ್ಷೇಮ, ನಾನು ಹೊರಗೆ ಇಲ್ಲಿ ಕ್ಷೇಮ .... (ಪಹರೆಗೆ) ಬ್ರಹ್ಮರಾಕ್ಷಸ ತೊಲಗಿದ ಅಂತ ಹೇಳು ರಾಜರಿಗೆ.

ಪಹರೆ : ತೊಲಗಿದನೇ .... (ನೈಜ್ಯವಾಗಿ) ಆಗ ಏನೋ ಅಂದುಬಿಟ್ಟೆ, ಬುದ್ಧಿ. ಏನ್ನೂ ಮಹಾರಾಜರ ಹತ್ತಿರ ಹೇಳಿಬಿಡಬಾರದು, ಹೊಟ್ಟೇಗೆ ಹಾಕ್ಕೊಳ್ಳಬೇಕು.

ಮಾಧವ : ಆಗಲಿ, ನಾ ಹೇಳಿದ್ದು ಮೊದಲು ಮಾಡು .... ಇದೋ ರಾಜರೇ ಬಂದರು. ಬಂದ ಕೆಲಸವಾಯಿತು, ಪ್ರಭು. ಒಳಗೆ ಸುಖವಾಗಿದ್ದಾಳೆ, ತಮ್ಮ ಕುಮಾರಿ. ಚೇಟಿಯುವರಿಗೆ ಹೇಳಿಕಳಿಸಿ. ಈಗಲೇ ಹೊರಗೆ ಬಿಡಬೇಡಿ, ಈಗ ತಾನೇ ಭೂತ ಬಿಟ್ಟ ಹಸೀ ಮೈ, ಇನ್ನೇನಾದರೂ ಭೂತ ಹಿಡಿಕೊಂಡೀತು.

ರಾಜ : ಸ್ವಾಮಿ, ಡಂಗುರ ಹೇಳಿದಂತೆ, ಅರಮನೆ ಸಂಪ್ರದಾಯದಂತೆ ರಾಜಕುಮಾರಿಯನ್ನು ತಾವೇ ಪಾಣಿಗ್ರಹಣ ಮಾಡಿಕೊಳ್ಳಬೇಕು.

ಮಾಧವ : (ಬೆಚ್ಚಿ) ಛೆ ಛೆ, ಉಂಟೆ, ಉಂಟೇ? (ನವಿರಾಗಿ) ಯಾರಾದರೂ, ಕಮಲ-ಲೋಚನ ಕುಮಾರಿಗೆ ರೂಪಗುಣಸಂಪತ್ತಿನಲ್ಲಿ ಅನುರೂಪನಾದ ವರನನ್ನು ಹುಡುಕಿಸಿ ಮದುವೆ ಮಾಡಿಸಿ ಅವಳಿಗೆಂದೇ ಬ್ರಹ್ಮಸೃಷ್ಟಿಯಲ್ಲಿ ಗಂಡೊಂದು ಕಾದಿರುತ್ತದೆ ... ಆ ಗಂಡು ನಾನಲ್ಲ. ಈಗ ಅದರ ಬದಲು ನನ್ನದೊಂದು ಸಣ್ಣ ಬಿನ್ನಹ ಪೂರೈಸಿಕೊಡಬೇಕು.

ರಾಜ : (ತೃಪ್ತಿಯಿಂದ) ರಾಜಕುಮಾರಿಯನ್ನೇ ಬಿಟ್ಟುಕೊಟ್ಟು ತಾವು ಏನು ಬಿನ್ನಹ ಕೇಳಿದರೂ ಸಣ್ಣದೇ ಸರಿ.

ಮಾಧವ : ಹೊರಗಡೆ ವಿಕಾರಸ್ವರದಲ್ಲಿ ಕೇಕಾರವಮಾಡುತ್ತಿರುವ ನಾಗಸ್ವರ ವಿದ್ವಾಂಸನನ್ನ ನಿಲ್ಲಿಸಹೇಳಬೇಕು.

ಪಹರೆ : ಇದೋ ನಾನೇ ಹೋದೆ, ಕಿವಿ ಕೊಳೀತಾ ಇದೆ, ಇವನ ಕೊಯ್ಞ್ಯ ಪಯ್ಞ್ಯ ಸಂಗೀತಕ್ಕೆ !

ಮಾಧವ : ಹಾಗೇ ಅವನ್ನ ಇಲ್ಲಿ ಬರೊಕ್ಕೆ ಹೇಳು. ಮಹಾರಾಜರೇ, ಅವನಿಗೆ ಸಾಕಷ್ಟು ಉಡುಗೊರೆಯಿತ್ತು, ಅವನನ್ನು ನನ್ನ ಊಳಿಗದವನನ್ನಾಗಿ ನೇಮಿಸಿ. ಬೇರೆಲ್ಲಾದರೂ ಹೋದಾನು.

ರಾಜ : ಅವನನ್ನೇ ? ಈ ಕರ್ಣ ಕಠೋರನನ್ನೇ ? ನಿಮ್ಮ ಊಳಿಗಕ್ಕೇ ?

ಮಾಧವ : ಅವನನ್ನೇ, ಮಹಾಸ್ವಾಮಿ. ಅವನಿಲ್ಲದೆ ನನ್ನ ಮಂತ್ರ ಫಲಿಸುವುದಿಲ್ಲ. ಅವನ ನಾಗಸ್ವರಕ್ಕೆ ಅಂತಹ ಶಕ್ತಿಯುಂಟು. ನಾಗಸ್ವರ ಬಾರಿಸಿದಾಗ ನಾಗರ ಹಾವುಗಳು ಹೆಡೆಯೆತ್ತಿ ಆಡುತ್ತವೆಯಂತೆ; ಇವನು ಬಾರಿಸಿದರೆ, ಬಾಲ ಮಡಿಸಿ ಭೂಮಿಯ ಮಡಿಲಿನೊಳಗೆ ಮುದುರಿಕೊಳ್ಳುತ್ತವೆ.

ರಾಜ : ಇಷ್ಟಾದರೂ ಇವನು ನಿಮಗೆ ಬೇಕೆ ?

ಮಾಧವ : ಈ ಮಂಗಳ ವಾದ್ಯ ಮದುವೆ-ಪುರೋಹಿತರ, ದೆವ್ವ ಬಿಡಿಸುವ ಮಂತ್ರ ವಾದಿಗಳ ಆಪ್ತಬಂಧು, ಪ್ರಭು ...

ರಾಜ : ಇದೋ ಚಿನ್ನದ ಪಲ್ಲಕ್ಕಿಯೂ ಬೋಯಿಗಳೂ ಸಿದ್ಧರಾಗಿದ್ದಾರೆ. ಹಿಂದೆಯೇ ಉಡುಗೊರೆಯ ಪರಿಚಾರಕರು ಧನಕನಕವಸ್ತ್ರಾದಿಗಳನ್ನು ತರುತ್ತಾರೆ — ಗಾಡಿಗೆ ಆನೆ ಕಟ್ಟುತ್ತಿದಾರೆ.

ಪಹರೆ : ನಾಗಸ್ವರದೋನು ಬಂದ.

ಮಾಧವ : ಇವತ್ತಿನಿಂದ, ನೀನು ನನ್ನ ಊಳಿಗದವನು. ತಿಳೀತೆ ?

ನಾಗಸ್ವರ ವಿದ್ವಾನ್ : ನಮ್ಮ ಸಂಗೀತಸಾಧನೆ ತಮಗೆ ಪ್ರೀತಿಯಾಯಿತೇ ಬುದ್ಧಿ. ದಿನವೂ ಬಂದು ಬಾರಿಸುತ್ತೇನೆ.

ಮಾಧವ : ಛೆ ಛೆ, ಅಪಾರ್ಥ ಮಾಡಿಕೊಳ್ಳಬೇಡ ನಿನಗೆ ಸಂಬಳ ಕೊಡುವುದು ನಾಗಸ್ವರ ಬಾರಿಸುವುದಕ್ಕಲ್ಲ, ಬಾರಿಸದಿರುವುದಕ್ಕೆ. ತಿಳೀತೇ? ನನಗೆ ಭೂತದಯೆ ಬಹಳ.

ಮಾಧವ : (ಶೀವಿ) ಬೋಯಿ, ಇನ್ನು ಹೊರಡು. ಅಪ್ಪಣೆಯಾಗಲಿ. ಬರುತ್ತೇನೆ, ಪ್ರಭು.

ರಾಜ : ತುಂಬ ಉಪಕಾರವಾಯಿತು, ನಮಸ್ಕಾರ. (ಸ್ವಗತ) ವಿಚಿತ್ರ ಬ್ರಾಹ್ಮಣ ! ನಾಗಸ್ವರ ಬಾರಿಸದೇ ಇರುವುದಕ್ಕೆ ಸಂಬಳ ಕೊಡುತ್ತಾನಂತೆ. ಸಂಗೀತಪ್ರಿಯನೇ ಸರಿ !

ರೇಡಿಯೋ-ನಾಟಕಗಳು

# ಬೆಂಗಳೂರು: ಹಾಸು-ಹೊಕ್ಕು

( ಒಂದು ಶಬ್ದ ಚಿತ್ರ )

ಪಾತ್ರಗಳು

ಪ್ರಕಟನಕಾರ
ನಿರೂಪಕ
ಒಬ್ಬ ವೃದ್ಧ
ಇನ್ನೊಬ್ಬ ವೃದ್ಧ
ಒಬ್ಬ ಗಾಡಿಯುವ
ಧ್ವನಿ–೧
ಧ್ವನಿ–೨

ಮುದುಕಿ
ಫ್ರೂಟ್‌ಲಾಯರಿ
ರೈತ
ಸ್ತ್ರೀ ಧ್ವನಿ
ಸಾವಿತ್ರಮ್ಮ
ಸಾಹುಕಾರ
ದಳ್ಳಾಳಿ
ಮಾರವಾಡಿ
ಒಬ್ಬ ವೈಶ್ಯ
ಇನ್ನೊಬ್ಬ ವೈಶ್ಯ
ಯುವಕ—೧
ಪದ್ಮನಾಭನ್
ಚಿಕ್ಕ ಹುಡುಗ
ಇನ್ನೊಬ್ಬ—೧
ರಾಜಕಾರಣಿ
ಕುಸ್ತಿ ಪ್ರೇಕ್ಷಕ
ಇನ್ನೊಬ್ಬ—೨
ಒಬ್ಬ—೧
ಹೆಂಗಸು
ಗಂಡಸು
ಒಬ್ಬಿಬ್ಬರು
ಒಬ್ಬ-೨
ಇನ್ನೊಬ್ಬ-೩
ಗೃಹಿಣಿ
ಹೆಣ್ಣುಮಗು
ಚಿಕ್ಕ ಗಂಡುಮಗು
ಯುವಕ-೨
ಯುವತಿ
ಒಬ್ಬ-೩
ಟಾಮ್
ಧ್ವನಿ
ಬಾಯ್
ಒಬ್ಬ ಯುವಕ
ಇನ್ನೊಬ್ಬ ಯುವಕ
ಪಾದ್ರಿ



ಪ್ರಕಟನಕಾರ : ಬೆಂಗಳೂರು ! ಒಂದು ಧ್ವನಿಚಿತ್ರ ಇದು. 'ಧ್ವನಿಚಿತ್ರ' ಏಕೆ – ರೇಡಿಯೋ-ನಾಟಕ ಎನ್ನೋಣ. ನಾಟಕ ? ಹೌದು, ನಾಟಕ. ಪರದೆ, ಅಂಕ, ಮುಖವಾಡ, ಬಣ್ಣವಿಲ್ಲದಿರಬಹುದು, ಆದರೆ ಪಾತ್ರಧಾರಿಗಳಿದ್ದಾರೆ. ನಾಯಕ ನಾಯಕಿಯರಿದ್ದಾರೆ - ಅವರನ್ನು ಹುಡುಕಿ ತೆಗೆಯುವುದು ಕಷ್ಟವಾಗ ಬಹುದು. ಖಳನಾಯಕ-ಒಬ್ಬನಲ್ಲ, ಹಲವಾರು-ಹುಡುಕುವುದು ಬೇಡ ಅವರನ್ನು. ಒಟ್ಟಾರೆ ಈ ನಾಯಕ ನಾಯಕಿಯರು, ಉಪಪಾತ್ರಗಳು, ವಿದೂಷಕ ಎಲ್ಲ ಸೇರಿ ಒಂದೇ ಉಂಡೆಯಾಗಿ ಉರುಳುತ್ತ 'ಬೆಂಗಳೂರ'ನ್ನು ಒಂದು ಸಜೀವ ರಂಗಭೂಮಿ ಯಾಗಿ ಮಾಡಿದ್ದಾರೆ. ಕೇಳಿ ಇನ್ನು – ಬೆಂಗಳೂರು ! .... ....

[ ಕೊನೆಯ 'ಬೆಂಗಳೂರು' ಎನ್ನುವಷ್ಟರಲ್ಲಿ, ವಿಶೇಷ ಜನವಾಹನಸಮೂಹದ ಗೋಜನ್ನು ಸೂಚಿಸಲೋ ಎಂಬಂತೆ ಹಿನ್ನೆಲೆಯಲ್ಲಿ ಸಂಗೀತ ಪ್ರಾರಂಭಿಸಿ, ಮುಂದಿನ ಮಾತಿನ ಹಿಂದೆ ನೆಲೆಸುತ್ತದೆ.]

ನಿರೂಪಕ : ಕಣ್ಣಿಗೆ ಕಾಣದ ಕನ್ನಡ ಮಿತ್ರರೆ, ನೀವು ಎಲ್ಲೆಲ್ಲಿ ಕುಳಿತು ಕೇಳುತ್ತಿರುವಿರೋ ನನಗೆ ತಿಳಿಯದು. ಪಶ್ಚಿಮ ಕರೆನಾಡ ತೋಟಗಾರರು ನೀವಾಗಿರಬಹುದು. ದಟ್ಟಕಾಡಿನ ನಡುವೆ ದಿಟ್ಟರಾಗಿ ನೆಲೆಸಿರುವ ಮಲೆನಾಡಿನ ಪುತ್ರರಾಗಿರಬಹುದು ನೀವು. ಬಿಳಿಗಿರಿ ರಂಗನ, ಅಥವಾ ಘಾಟಿ–ಸುಬ್ರಹ್ಮಣ್ಯನ ಆಶ್ರಮದಲ್ಲಿ ಗುಡ್ಡ ಗಾಡಿನ ಮಧ್ಯೆ ನೆಲೆಸಿದ ಕೃಷಿಕರಿರಬಹುದು ನೀವು. ಕೊಡಗಿನ ಕಾವೇರಿ ತಾಯಿಯ ನೀರು ಕುಡಿದು ಹಿಗ್ಗುವ ಬಯಲು ಸೀಮೆಯ ಮಕ್ಕಳಿರಬಹುದು ನೀವು. ಕಣಿವೆಯಾಚೆ ಬಿಸಿಲು ಕಾಸಿ ಬೇಸಾಯ ಮಾಡುವ ಕಷ್ಟಜೀವಿಗಳಿರ ಬಹುದು ನೀವು ....ಬನ್ನಿ ....ಬನ್ನಿ ನನ್ನೊಂದಿಗೆ. ನೀವೆಲ್ಲ ನೋಡಿದ, ನೋಡ ಲಿರುವ, ನೋಡಬಯಸುವ ಈ ಕಲ್ಯಾಣಪುರಿಯನ್ನು ಇನ್ನೊಂದು ಸಲ ಹಾಸು ಹೊಕ್ಕಾಗಿ ನೋಡುವಿರಂತೆ.

[ ಸಂಗೀತ ಉಕ್ಕಿ, ಸ್ವಲ್ಪಕಾಲವಿದ್ದು ಅಡಗುತ್ತದೆ ]

ನಿರೂಪಕ : ಈಗ ಇದೊಂದು ನಗರ........

ನಾನೂರು ವರ್ಷಗಳ ಹಿಂದೆ, ಪುಟ್ಟ ಮಣ್ಣಿನ ಕೋಟೆ ಕಟ್ಟಿ, ಸುತ್ತಿನ ಜಾಗಕ್ಕೆ 'ಬೆಂಗಳೂರು' ಎಂಬ ಹೆಸರಿಟ್ಟು, ನಾಲ್ಕು ದಿಕ್ಕಿಗೆ ನಾಲ್ಕು ಮಂಟಪ ಕಟ್ಟಿ, "ಸಾಕು ಊರು ಇಷ್ಟು ಬೆಳೆದರೆ" ಎಂದನಂತೆ ಆ ಭೂಪ ಕೆಂಪೇಗೌಡ. ಇಂದು ಅವನಿಟ್ಟ ಗಡಿ ದಾಟಿ, ಆ ಮಂಟಪಗಳನ್ನೇ ಮರೆ ಮಾಡಿ, ಸುತ್ತಮುತ್ತಲಿನ ಹಳ್ಳಿ ಕೇರಿಗಳನ್ನೂ ಆವರಿಸಿ ಅರಗಿಸಿಕೊಂಡು, ಕಟ್ಟಿದವನ ಕನಸನ್ನು ಮೀರಿ ಬೆಳೆದಿದೆ ಈ ಊರು.

ಇದು ಬೆಳೆದ ಕಾರಣ ?

ಬನ್ನಿ, ತಿಳಿಯುವಿರಂತೆ, ಈ ಗುಂಪಿನಲ್ಲಿ ಕಲೆತು ವಿಚಾರಿಸಿ ನೋಡೋಣ. ಸ್ವಾಮಿ,.... ನೀವು.... ನೀನಲ್ಲ, ನೀವು .... ಹಾಂ, ನೀವು ಬಹುಶಃ ಮೈಸೂರು, ನಂಜನಗೂಡು ಕಡೆಯಿಂದ ರೈಲಲ್ಲಿ ಬಂದವರೇನೋ. ನೀವು.... ಮುಂಡಾಸು ನೋಡಿದರೆ ಹುಬ್ಬಳ್ಳಿಯ ಕಡೆಯವರಿದ್ದ ಹಾಗಿದ್ದೀರಿ. ಹೌದೋ ? ನೀವೂ ರೈಲಿನಲ್ಲಿ ಬಂದವರೇ. ನೀವೂ.... ನೀವೂ ರೈಲಿನಲ್ಲಿ ಬಳ್ಳಾರಿಯ ಕಡೆಯಿಂದ ಬಂದಿದ್ದೀರಿ. ನೀವಂತೂ ಕಣಿವೆಯ ಕೆಳಗಿಂದ ಮದರಾಸು ರೈಲಲ್ಲಿ ಬಂದು ಈಗ ಇಳಿದವರಂತಿದ್ದೀರಿ. ನೀವು, ಹತ್ತಿರದವರೇ, ಚಿಕ್ಕಬಳ್ಳಾಪುರದ ಪುಟ್ಟ ರೈಲಲ್ಲಿ ಬಂದವರು. ನೀವೆಲ್ಲ ? ಹದಿನಾರು ದಿಕ್ಕುಗಳಿಂದ ಧೂಳು ಕಾರುತ್ತ ಬಂದ ಕಿಕ್ಕಿರಿದ ಬಸ್ಸುಗಳಿಂದಿಳಿದವರು, ಅಲ್ಲವೇ ? ಬಿಡಿ...ಹಾಂ ! ಸ್ವಾಮಿ, ನಿಮ್ಮ ಕೈಚೀಲದ ಮೇಲಿದೆ ಗುರುತು....ನೀವು ಇದೇ ತಾನೇ ವಿಮಾನದಲ್ಲಿ ಬಂದಿಳಿದವರಲ್ಲವೇ ? ಸ್ವಲ್ಪ ನಿಲ್ಲಿ, ಹಾಗಾದರೆ, ಒಂದೇ ನಿಮಿಷ, ಹಾರುವ ವಿಮಾನ ಊರು ಸಮೀಪಿಸುವ ಮುಂಚೆ ಗವಾಕ್ಷದಿಂದ ನೋಡುತ್ತಿದ್ದಿರೇನು ನೀವು ?

[ ಹಾರುವ ವಿಮಾನದೊಳಗಿನ ಇಂಜಿನ್ ಶಬ್ದ ಮುಂದಿ ಬರುತ್ತದೆ ]

ಹಾಗಾದರೆ ನೀವು ಕಂಡಿರಬೇಕು. ಎಲ್ಲಿ ಸ್ವಲ್ಪ ಜ್ಞಾಪಿಸಿಕೊಳ್ಳಿ........ ನೀವು ಮೇಲಿಂದ ನೋಡಿದ ಹೊಂಡಗಳು — ಬೆಂಗಳೂರಿನ ಪ್ರಖ್ಯಾತ ಕೆಂಪಾಂಬುಧಿ, ಅಗ್ರಹಾರದ ಕೆರೆಗಳು, ಇದು ನೀರಿಲ್ಲದ ಮಿಲ್ಲರ ಕೆರೆ, ಅದು ಎಡಿಯೂರ ಕೆರೆ; ಮಳೆ ತುಂಬಿದ ಧರ್ಮಾಂಬುಧಿ, ಸ್ಯಾಂಕಿ ಕೆರೆ; ಇದು ಸಂಪಂಗಿ ಕೆರೆ. ಆಚೆ, ಅಗರ, ಕೋರಮಂಗಲ, ಕೋಡಿಹಳ್ಳಿ ಕೆರೆಗಳು. ಈಚೆ, ಕಾಡರ್ಜನ ಹಳ್ಳಿ, ಹೆಬ್ಬಾಳ, ಹೊಸಘಟ್ಟದ ಕೆರೆಗಳು. ಬಹುಶಃ ಗುಡ್ಡಗಳ ನಡುವೆ ಅಡಗಿದ ತಿಪ್ಪಗೊಂಡನಹಳ್ಳಿ ಕೆರೆ ನಿಮಗೆ ಕಂಡಿತೋ ಇಲ್ಲವೋ .... ಇವು ಈ ನಗರದ ಸುತ್ತಣ ಹಸುರಿನ ಒಡ್ಯಾಣಕ್ಕೆ ಕಾರಣ – ನಗರದ ಒಳಗಿನ ವೃಕ್ಷ ಸಂಪತ್ತಿಯ ಆಗರ. ಹಾಗೇ, ನೀವು ನೋಡಿರಬಹುದು. ಬೆಳ್ಳಬೆಳ್ಳಗೆ, ಅಲ್ಲಲ್ಲಿ ತಲೆಯೆತ್ತಿ ನಿಂತ ಬಂಡೆಗಳ ಸಾಲುಗಳು .... ಬಸವನ ಗುಡಿಯಿಂದ ಮಡಿವಾಳದ ವರೆಗೆ, ಈ ಕಡೆ ಮಲ್ಲೇಶ್ವರದಿಂದ ಮಿಲ್ಲರ ಕೆರೆಯ ವರೆಗೆ–ಇವು, ಇವಲ್ಲದೆ ಊರ ಸುತ್ತಿ ಕಾಣುವ ಬೆಟ್ಟದ ಸಾಲುಗಳು.... ಇಲ್ಲಿನ ಸೌಧಗಳ ನಿರ್ಮಾಣಕ್ಕೆ ಚಪ್ಪಡಿಗಳನ್ನ ಒದಗಿಸಿವೆ, ಹಳೆಯ ಚಜ್ಜಾಕೆದ ಛತ್ರ ಚಾವಡಿಗಳಿಗೂ ಇವುಗಳದೇ ಆಸ್ತಿವಾರ. ಇಂದಿನ ವಿಧಾನಸೌಧ, ಸಿಲ್ವರ್-ಜೂಬಿಲೀ ಟೆಕ್ನಲಾಜಿಕಲ್ ಇನ್‌ಸ್ಟಿಟ್ಯೂಟ್' 'ಟೌನ್ ಹಲ್'ನಂಥ ಭವ್ಯಮಂದಿರಗಳಿಗೂ ಇವುಗಳದೇ ಆಧಾರ. ಈ ಬಂಡೆಗಳ ಚೂರಾಗಿ ಉಳಿಸಿದ ಸಣ್ಣ ಜೆಣಚುಕಲ್ಲುಗಳೇ ಊರಿನ ನೂರಾರು ಮೈಲಿಯುದ್ದದ

ಥಳಥಳಿಸುವ ರಸ್ತೆಗಳಿಗೆ ಅಡಿಪಾಯ. ಇದೇ ಜೆಣಚುಕಲ್ಲುಗಳೇ ಕರಗಿ ಕೆಮ್ಮಣ್ಣಾಗಿ, 'ನೆಲ ಕೆರೆದರೆ ಬಂಗಾರ' ಎನ್ನುವಷ್ಟು ಫಲವತ್ತಾದ ಮೇಲ್ಮಣ್ಣು ಹರಡಿದೆ ಊರ ಒಳಗೆ-ಹೊರಗೆ. ಹದನಾದ ಮಣ್ಣು – ಹದನಾದ ಮಳೆ; ಸಾಲವೇನು ಕಾರಣ, ಊರು ಹರಡುವದಕ್ಕೆ !

[ವಿಮಾನದ ಶಬ್ದ ಅಳಿಯುವುದು]

ಪ್ಲೇನ್ ಹಾಗಿರಲಿ .... ಈ ಎತ್ತರದ ದಿಟ್ಟದಿಂದ ನೋಡೋಣ ಇನ್ನು .... ಇಲ್ಲವೇ, ತಾತಾವಿಜ್ಞಾನಮಂದಿರದ ಎತ್ತರದ ಗೋಪುರದಿಂದಲೋ, ಇತ್ತ 'ಬ್ಯೂಗಲ್ ರಾಕ್'ನ ಮಂಟಪದಿಂದಲೋ, ಇಲ್ಲವೆ ನರಹರಿರಾಯನ ಗುಡ್ಡದ ತುದಿಯಿಂದಲೋ ನಿಂತು ನೋಡೋಣಾಗಲಿ – ನೂರಾರು ವರ್ಷಗಳಾದ ಬೆಂಗಳೂರಿಗೆ ಬಂದು ನೆಲೆಸುತ್ತಿರುವ ಜನಸ್ತೋಮ ಹೇಗೆ ಹೇಗೆ ಎಲ್ಲೆಲ್ಲಿ ಬಂದು ನಿಂತಿತು ಎನ್ನುವದರ ಪರಿಚಯವಾದೀತು. ಈಕಡೆ ನೋಡಿ; ಮೈಸೂರು ಹೆಂಚುಗಳ ವತಾರದ ಮನೆಗಳು – ಅಲ್ಲಿ, ಮರಗಳ ನಡುವೆ ಮಂಗಳೂರು ಹೆಂಚುಗಳ ಸುವ್ಯವಸ್ಥಿತ ಚಾವಣಿಗಳು – ಇವೆಲ್ಲ ಮಧ್ಯಮ ವರ್ಗದ, ಅಸಂಖ್ಯಾತ, ಕಾರಕೂನರು, ಉಪಾಧ್ಯಾಯರು, ವಕೀಲರು, ವೈದ್ಯರು, ಇಂಜನಿಯರುಗಳು, ಸಣ್ಣಪುಟ್ಟ ವ್ಯಾಪಾರಸ್ಥರು .... ಇವರುಗಳ ವಾಸಸ್ಥಳಗಳು. ಈ R. C. C. ಮನೆಗಳು ಹೊಸ ಕಟ್ಟಡಗಳು – ಹೊಸ ಬಡಾವಣೆಗಳು. ಆ ಸಾಲುಮರಗಳ ಮಧ್ಯೆ ಇಣಿಕಿ ನೋಡುವ ಮಾಳಿಗೆಯ ಮನೆಗಳು ಉನ್ನತ ಅಧಿಕಾರಿಗಳು – ಗಣ್ಯವರ್ತಕರು – ಪ್ರಮುಖ ಪ್ರಜೆಗಳ ನಿವಾಸಗಳು. ಚಪ್ಪಟೆಯಾದ ಈ ತಾರಸೀಮನೆಗಳು ಹಳೆಯ ಪೇಟೆಯ ವಿಶೇಷ–ಬಿಸಿಲದಿನಗಳಲ್ಲಿ ರಾತ್ರಿ, ಈ ಮನೆಗಳ ನಿವಾಸಿಗಳೆಲ್ಲ ತಮ್ಮ ಮಂಚ, ಹಾಸಿಗೆಗಳ ಸಮೇತ ಬೀದಿಗೆ ಓಡಿ ಬರುತ್ತಾರೆ. ಇವು ಹಣ್ಣು ಹಂಪಲು ತರಕಾರಿಗಳನ್ನು ಬೆಳೆಸ ಹೊರಟು ಅಲ್ಲಲ್ಲೇ ಬೀಡು ಬಿಟ್ಟವರ ಸಣ್ಣ ಮನೆಗಳು –. ಗುಡಿಸಲುಗಳು, ಹುಲ್ಲು ಹುಲುಸಾಗಿ ಬೆಳೆಯುತ್ತಿದ್ದ ಕಾರಣ ಕುರಿಮೇಕೆಗಳನ್ನ ಸಾಕುತ್ತಾ ನೆಲೆಸಿದವರ ಬಿಡಾರಗಳಿವು ....

ಹೀಗೇ .... ಹೆಚ್ಚಿನ ವ್ಯಾಪಾರವನ್ನರಸುತ್ತ ಬಂದು ನೆಲೆಸಿದ ವರ್ತಕರು... ಕಟ್ಟಡಗಳು, ರಸ್ತೆಗಳು, ಕಾರ್ಖಾನೆಗಳ ನಿರ್ಮಾಣಕ್ಕಾಗಿ ಬಂದಂಥ ಕಲ್ಲೊಡ್ಡರು, ಕೂಲಿಗಳು, ಸೈನಿಕವೃತ್ತಿಗಳು, ಅವರ ಪರಿವಾರ, ಅವರುಗಳ ಅವಶ್ಯಕತೆಗಳನ್ನು ಪೂರೈಸಹೊರಟು ಹಿಂಬಾಲಿಸಿದವರು .... ಹತ್ತಿರದ ದೂರದ ಊರುಗಳಿಂದ ವಿದ್ಯಾಭ್ಯಾಸಕ್ಕೆ, ಕಚೇರಿ ಕೆಲಸಕ್ಕೆ, ಬಂದು ನಿಂತವರು, ಗಿರಣಿಗಳು, ದೊಡ್ಡ ಕಾರ್ಖಾನೆಗಳು, ಕಾರ್ಯಾಲಯಗಳಲ್ಲಿ ಕೆಲಸ ಪಡೆದ

ಜನರ ಗುಂಪುಗಳು, ಎರಡು ಕೋಟಿ ಜನರ ಮೇಲ್ವಿಚಾರಣೆಯ ಹೊಣೆ ಹೊತ್ತ ಸರ್ಕಾರದ ಮುಖ್ಯ ಕಚೇರಿಗಳ ಅಧಿಕಾರವರ್ಗ.... ಈ ಎಲ್ಲರ ದೈನಂದಿನ ಆಹಾರ ವಸನ–ವಸತಿಗಳನ್ನ ಒದಗಿಸಿ ಊರು ಸರಿಯಾಗಿ ಉಸಿರಾಡುವಂತೆ ಮಾಡುವ ವಿವಿಧ ವೃತ್ತಿಯವರು .... ಹೀಗಲ್ಲದೆ, ಬೇರೆ ಯಾವ ಕಾರಣವಿಲ್ಲದಿದ್ದರೂ, ವರ್ಷದ ಸರಾಸರಿಯ ೭೫ ಫಾರನ್‌–ಹೀಟ್ ಶಾಖದ ಹಿತವಾದ ಉಷ್ಣಾಂಶ ಸಾವಿರಾರು ಮಂದಿ ಬೆಂಗಳೂರಿಗೆ ವಲಸೆ ಬರಲು ಮುಖ್ಯ ಕಾರಣವಾಯ್ತು. ಹೀಗೆ ಒಂದು ಸಲ ಈ ಊರಿನ ಆಕರ್ಷಣೆಗೆ ಒಳಪಟ್ಟವರು ಮತ್ತೆ .ಬೇರೆಕಡೆಗೆ ಕಾಲಿಡುವ ಯೋಚನೆಯನ್ನು ಸಹ ಮಾಡಲಾರರು !

ಒಬ್ಬ ವೃದ್ಧ : ಅಲ್ಲ ಸುಬ್ರಾಯ್ರೆ, ಅದ್ರೂ ಈ ತೇಗದ ಮರ ಈ ಪಾಟೆ ದುಬಾರಿ ಆಗ್ಹೋದ್ರೆ, ಹ್ಯಾಗೆ ನಾವು ಮನೆ ಕಟ್ಟಿ ಮುಗಿಸೋದೂಂತ !

ಇನ್ನೊಬ್ಬ ವೃದ್ಧ : ಅದ್ಯಾಕೆ ಹೇಳ್ತೀರಿ. ನನ್ನಲ್ಲಿ ಇದ್ದಬಿದ್ದ ಕಾಸೆಲ್ಲ ಖರ್ಚಾಗಿ, ಕೋಲಾರದ ಸೈಟು ಮಾರಿವೆ. ಆ ದುಡ್ಡು ಮುಗಿದ್ಹೋಗಿ, ಈಗ ಸೊಸೈಟೀಗೆ ಬರೆದಿದ್ದೀನಿ, ಸಾಲಕ್ಕೆ....ಏನಾದರಾಗಲಿ, ಬೆಂಗಳೂರು ಬಿಟ್ಟು ನಾವಿನ್ನು ಎಲ್ಲಿ ಹೋಗೋದು ಹೇಳಿ ! ಈ ಹವ, ಈ ಗಾಳಿ, ಈ ನೀರು, ಇನ್ನೆಲ್ಲಿ ಹೋದ್ರೆ ತಾನೆ ಸಿಗುತ್ತೆ ಹೇಳಿ ! ನಾಲ್ಕು ಕಾಸು ಜಾಸ್ತಿ ಆದ್ರೆ ಆಕ್ಕೊಳ್ಳಲಿ ಇಲ್ಲೇ ಸ್ಥಿರ ನಾನಂತೂ.

ನಿರೂಪಕ : ಬೆಂಗಳೂರಿನ ಹವಾದ ಸಲುವಾಗಿಯೇ, ಕೆಂಪೇಗೌಡ ಇಲ್ಲಿ ತನ್ನ ಕೋಟೆ ಕಟ್ಟಿದ್ದು. ಮುನ್ನೂರು ವರ್ಷವಾದ ಮೇಲೆ, ಈ ಪ್ರಸ್ಥಭೂಮಿಯ ನೈಸರ್ಗಿಕ ಗುಣಗಳನ್ನ ಕಂಡ ಬ್ರಿಟಿಷ್‌ರು ಶ್ರೀರಂಗಪಟ್ಟಣದಿಂದ ತಮ್ಮ ಕಂಟೋ-ನ್ಮೆಂಟನ್ನ ಇಲ್ಲಿಗೆ ವರ್ಗಮಾಡಿದರು. ಈ ಮುನ್ನೂರು ವರ್ಷಗಳಲ್ಲಿ, ಬಿಜಾಪುರದ ಸುಲ್ತಾನರು, ಮರಾಟರು, ಮೈಸೂರರಸರು, ಮೊಗಲರು (ನಾಲ್ಕಾರು ದಿನ ಮಾತ್ರ) ಹೈದರ, ಟಿಪ್ಪು ··· ಹೀಗೆ ಆರೇಳು ಸಲ ಕೈ ಬದಲಾಯಿಸಿತು ಬೆಂಗಳೂರು ಕೋಟೆ — ಅದರ ಸುತ್ತಿನ ವ್ಯಾಪಾರಕೇಂದ್ರ.

.... ಇವರನ್ನೆಲ್ಲ ಆಕರ್ಷಿಸಿದ್ದು ಇಲ್ಲಿನ ಸಮಶೀತೋಷ್ಣ ಹವ ಮಾತ್ರವಲ್ಲ; ಊರ ಸುತ್ತಿನ ಹಸಿರು ನೆಲ. ಪ್ರತಿದಿನ ಸಾವಿರಾರು ಗಾಡಿ ತುಂಬುವಷ್ಟು ದಿನಸಿ, ಧಾನ್ಯ, ಹಾಲು–ಮೊಸರು, ಫಲ–ಪುಷ್ಪ, ಮಾಂಸ–ತರಕಾರಿಗಳನ್ನ ಹತ್ತಾರು ದಿಕ್ಕಿನಿಂದ ಭರ್ತಿ ಮಾಡುವದನ್ನು ನೋಡಿದ್ದೀರೇನು ?

[ಜಕ್ಕಡಿಗಾಡಿಗಳ ಶಬ್ದ ಕೇಳಿಬರುತ್ತದೆ]

ಒಬ್ಬ ಗಾಡಿಯವ : [ಹಾಡುತ್ತಾನೆ]

ಕೋಟೇಯ ಮನೆಯೋಳೇ

ಕೋಗಿಲೆ ದನಿಯೋಳೇ
ರಾಟೇಯ ವಾಲೇ ಕಿವಿಯೋಳೇ, ಗೆಣೆಕಾತಿ,
ದಾಟಿ ಬರಲಾರೆ ದನಿ ತೋರೇ ....

ನಿರೂಪಕ: ಬೆಳಗಿನ ಜಾವದ ಐದು ಗಂಟೆಯ ಈ ದನಿ, ಮಲ್ಲೇಶ್ವರ ಯಶವಂತಪುರಗಳ ನಡುವಿನ ರಸ್ತೆಯಲ್ಲಿ ಮನೆ ಮಾಡಿರುವವರಿಗೆ ಚಿರಪರಿಚಿತವಾದದ್ದು. ಈ ಗಾಡಿಗಳು, ಲಾರಿಗಳು, ಪ್ರತಿದಿನ ಸುತ್ತಮುತ್ತಲಿಂದ ತುಂಬಿ ತರುವ ಕೋಸು ಬಟಾಣೆ, ಬೆಂಡೆ–ಬದನೆ-ಹುರುಳಿಕಾಯಿ, ಈರುಳ್ಳಿ; ಬೆಳ್ಳುಳ್ಳಿ, ಕುಂಬಳಕಾಯಿ, ಸೋರೆಕಾಯಿ, ಪಡವಲಕಾಯಿ, ಗೆಣಸು - ಮೆಣಸಿನಕಾಯಿಗಳ ರಾಶಿಗಳನ್ನು ಬೆಂಗಳೂರಿನ ದಶಲಕ್ಷ ನಿವಾಸಿಗಳು, ಒತ್ತುವ ಕಾಗದ ನೀರು ಹೀರುವಂತೆ ಹೀರಿಬಿಡುತ್ತಾರೆ. ಇವಲ್ಲದೆ ಹತ್ತಿರದ ಸಿದ್ಧಾಪುರ, ಹೆಸರುಘಟ್ಟಗಳಿಂದ ಸುರಿಯುವ ಟೊಮೆಟೊ, ಬಾಳೆಹಣ್ಣು, ದ್ರಾಕ್ಷಿ, ಸೇಬು, ಸೀಬೆ, ಕಲ್ಲಂಗಡಿ, ಪಪ್ಪಾಯ, ಹಲಸಿನಹಣ್ಣುಗಳು ಊರಿನ ಮಾರ್ಕೆಟ್ಟುಗಳನ್ನು ಸೇರುವದರೊಳಗೆ ಖಾಲಿಯಾಗುತ್ತಿರುತ್ತವೆ, ಬಕಾಸುರನ ಮನೆಸೇರಿದಂತೆ...

ಊರಿನ ಸುತ್ತ ಇರುವ ಸ್ಟೋರುಗಳು, ಅಕ್ಕಿ, ರಾಗಿ, ಜೋಳ, ನವಣೆ, ಅಲಸಂದಿ, ಅವರೆ, ಹೆಸರು, ಹುರಳಿ, ತೊಗರಿ, ಉದ್ದು ಕಡಲೆಗಳನ್ನು ಒದಗಿಸುತ್ತವೆ. ಕುರಿ ಕೋಳಿಗಳ ಫಾರ್ಮುಗಳಿಂದ ಮಾಂಸ-ಮೊಟ್ಟೆಗಳು ಬಂದು ತುಂಬಿದರೆ ಊರಿನ ಬೆಸ್ತರ ಹತ್ತಿರದ ಕೆರೆಗಳಿಂದ ಹತ್ತಾರು ವಿಧದ ಮೀನುಗಳನ್ನು ಹಿಡಿದು ತುಂಬುತ್ತಾರೆ ಮಾರ್ಕೆಟ್ಟಿಗೆ. ಇಷ್ಟಾದರೂ ಬೆಂಗಳೂರಿನ ಹಸಿವೆ ಇಂಗುವುದಿಲ್ಲ. ಇಪ್ಪತ್ತು ಮೂವತ್ತು ಮೈಲಿಗಳ ಸುತ್ತಿನಲ್ಲಿರುವ ಚಿಕ್ಕ ಊರುಗಳಿಂದೆಲ್ಲಾ ಎಡೆಬಿಡದೆ ದವಸಧಾನ್ಯಗಳು ಬಂದು ಸುರಿಯುತ್ತದೆ. ಬೆಂಗಳೂರನ್ನು ಬೆಳೆಸುವ ಜನಸಮುದಾಯಕ್ಕಾಗಿ.

ದೂರದ ಊರಿನಲ್ಲಿ ಕಾಲುಚಾಚಿ ಕುಳಿತು ಕೇಳುತ್ತಿರುವ ಮಹನೀಯರೆ, ಆಶ್ಚರ್ಯವಲ್ಲವೆ ನಿಮಗೆ? ಇದೇನು ಇಹಲೋಕದ ನಗರವೋ, ಊಹೆಗೆ ಸಿಗದ ಕನಸಿನ ಅವಿಶ್ರಾಂತ ಲೋಕವೋ! ಹಗಲು-ರಾತ್ರಿ ಹರಿಯುವ ಈ ವಾಹನ ಪ್ರವಾಹ! ಹೊತ್ತು ಹರಿಯುದ ಮುಂಚೆ ಬುತ್ತಿ ಕಟ್ಟಿಕೊಂಡು ಮನೆಬಿಟ್ಟೋಡುವ ಜನ! ಇಪ್ಪತ್ತುನಾಲ್ಕು ಗಂಟೆಯೂ ಅರ್ಭಟಿಸಿ ಹೊಗೆಯುಗುಳುವ ಯಂತ್ರಾಗಾರಗಳ ಸಮೂಹ! ಇವೆಲ್ಲಕ್ಕೂ ಒಂದು ಕಾರಣಸೂತ್ರವಿದೆಯೆ? ಈ ಊರಿನ ಈ ಎಡೆಬಿಡದ ಚಟುವಟಿಕೆ ಯಾರಿಗಾಗಿ? ಈ ಜನ ಯಾರು? ಇವರ ವೃತ್ತಿಯೇನು? ಇವರ ದಿನರಾತ್ರಿಯ ದುಡಿಮೆ ಏತಕ್ಕಾಗಿ? ಈ ಹುಚ್ಚು ಹೊಳೆಯಲ್ಲಿ ತೇಲಿ ಹೋಗುತ್ತಿರುವವರಿಗೆ ಒಂದು ವ್ಯಕ್ತಿತ್ವ ಎನ್ನುವುದಿದೆಯೆ? ಇದನ್ನೆಲ್ಲ ತಿಳಿಯಬೇಕಾದರೆ ಅಲ್ಲಲ್ಲಿ

ಹೊಂಚು ಕೇಳಿಯೇ ನೋಡಬೇಕು.

[ ಮತ್ತೆ ಜನವಾಹನಸಮೂಹವನ್ನು ಸೂಚಿಸುವ ಸಂಗೀತ... ಅದರೊಂದಿಗೆ ಊರ ಗದ್ದಲ ಮಿಳಿತವಾಗಿ, ಸ್ವಲ್ಪಹೊತ್ತು ಕೇಳಿಬಂದು ಕ್ರಮೇಣ ಮುಂದಿನ ಮಾತಿನ ಹಿಂದೆ ಅಡಗುತ್ತದೆ. ]

ಧ್ವನಿ ೧ : (ದೂರಕ್ಕೆ ಕೂಗುವಂತೆ) ಯೋ, ಮುಕ್ಯಾಲಣ್ಣ ! ಎಲ್ಲೀಗಂಟ ಓಯ್ತೀ ?

ಧ್ವನಿ ೨ : (ದೂರದಿಂದ) ಯಾರ್ಲಾ, ಬತ್ತಿಯೇನು ? ಇಲ್ಲೀ ಯಿಲಂಕದ್ತಾಕೋಗ್ಬ ರಾನಾಂತ... ಪೊಲ ಏನಾಗಯ್ತೊ ನೋಡಾಣಾಂತ.

ಧ್ವನಿ ೧ : ಬತ್ತೀನ್ಯಾರ್ಲಾ, ನನ್ಗೂ ಪೊಸಿ ಕೆಲ್ಸ ಅಯ್ತೆ ಅಲ್ಲಿಗೆ. ಇಲ್ಕೊಡ ಒಂದು ಪೈಂಟು.

ಧ್ವನಿ ೨ : ಏನ್ಲಾ ಅದು ನಿಂದು, ಲಾಪೈಂಟು ?

ಧ್ವನಿ ೧ : ಸೈ, ನಿಂದೊಂದ್ಬುಡು, ಲಾಪೈಂಟೂ ಇಲ್ಲ ಏನೂ ಇಲ್ಲ. ಬೈಸ್ಕಲ್ ತಗಂ ಡೋಗಾನಾಂದೆ.

ಧ್ವನಿ ೨ : ಪೂ ನಡಿ, ಅಂಗೇ ಮಾಡಾನ.

ಧ್ವನಿ ೧ : ಬಾ ಮತ್ಬರ್ಬೀರಿನ ..ದ್ವಾಸೆ ಕಾಪಿ ಕುಡ್ಕಂಡೋಗಾನಾ....

ನಿರೂಪಕ : ದೋಸೆ ಕಾಫಿಗಳ ರುಚಿ ಕಂಡು ಪಟ್ಟಣದಲ್ಲಿ ನೆಲೆಸಿದರೂ, ಕಟ್ಟಿ ಕೊಂಡ ಹೊಲ-ಗದ್ದೆಗಳು ಕೈ ಬಿಟ್ಟಾವೇನು ಅಷ್ಟು ಸುಲಭವಾಗಿ! ಒಬ್ಬೊಬ್ಬ ರಿಗೆ ಒಂದೊಂದು ತಾಪತ್ರಯ ಬೇಕೇ ಬೇಕಲ್ಲಾ....

ಮುದುಕಿ : ಸೀತಮ್ಮಾ, ಮೈ ಹುಷಾರಾಗಿ ನೋಡ್ಕೊ. ಇಷ್ಟರಮಟ್ಟಿಗೆ ಮನಸ್ಸು ಮಾಡಿ ತೌರುಮನೇಗೆ ಕಳಿಸಿದರಲ್ಲ ಕಡೆಗೂ. ನಾನಂತೂ ಬಂದು ನೋಡೋ ಹಾಗೇ ಇಲ್ಲಿಗೆ – ಅದೇನು ಹತ್ತಿರವೆ ಹಾಳುಕೊಂಪೆ.... ? ಅಥವಾ ಬಂದ್ರೂ ನಾನೇನು ಮಾಡೋಕಾಗುತ್ತೆ ಅಲ್ಲಿ ? ಅಲ್ಲೇನು ಒಂದು ಆಸ್ಪತ್ರೀನೇ ಒಂದು ದೊಡ್ಡ ಡಾಕ್ಟರೇ, ಶಾಪೇ...ಬಡುಕೊಂಡ್ರು ! ಏನೂಂತ ನಿಮ್ಮಾವಂದಿರು ಅಲ್ಲಿ ಮನೆ ಕಟ್ಟಿದ್ರೊ....

ನಿರೂಪಕ : ಬಸ್ ನಿಲ್ದಾಣದಲ್ಲಿ ಈ ದೃಶ್ಯ. ಅಲ್ಲಿಂದ ಬಹಳ ದೂರವಿಲ್ಲ ಡಿಸ್ಟ್ರಿಕ್ಟ್ ಕೋರ್ಟು....

ಘೂಟ್‌ಲಾಯರಿ : ಆಲ್ಕಣಯ್ಯಾ, ಸೋಮವಾರವೇ ಬಂದ್ಬಿಡೂಂತ ಹೇಳಿ ಕಳಿಸಿ ರ್ಲಿಲ್ವೆ ನಾನು ? ಈಗ ನೋಡು, ಲಾಯ್ರು, ತುಮಕೂರಿಗೆ ಹೊರಟೋದ್ರು, ಕೇಸ್ನ ಅಡ್ಜರ್ನ್ ಮಾಡಿಬಿಟ್ಟ....

ರೈತ : ಅಲ್ರ ಬುದ್ಧಿ...ಅಡ್ಜನ್ರ್ನು, ಅಡ್ಜನ್ರ್ನು ಅಂತ ಎಷ್ಟು ಸಲ ಅಲೆಯೋದ್ರುಹಳ್ಳಿಗೂ ದಿಳ್ಳಿಗೂ ನಾವುಗಳು. ನಮಗೇನು....

ಫೊ. ಲಾಯರ್ : ಇಲ್ನೋಡು, ಬೋರಣ್ಣ (ಪುಸಲಾಯಿಸಿ) ಸುಸ್ತಾಗಿ ಬಂದಿದ್ದೀ- ಮೊದಲು ಉಡುಪಿ ಹೋಟೆಲ ತನಕ ಹೋಗಿ....

ನಿರೂಪಕ : ಮಾರ್ಕೆಟ್ಟುಗಳು ತುಂಬಿ ಬೀದಿಯ ಇಕ್ಕೆಲಗಳಿಗೂ ತುಳುಕಿದಂತ ಸ್ಥಳ ಗಳಲ್ಲಿ ಚೀಲ ಹಿಡಿದ ಮಹಿಳೆಯರು....

ಸ್ತ್ರೀ ಧ್ವನಿ : ಯಾಕೆ ಸಾವಿತ್ರಮ್ಮನವರೇ, ಮನೇಲಿ ಯಾರೂ ಇಲ್ಲವೇ ಹುಡುಗರು ? ನೀವೇ ಕುಕ್ಕೆ ಹೊರಿಸ್ಕೊಂಡು ಹೊರಟ್ಟಿಟ್ರಲ್ಲ, ತರ್ಕಾರಿಗೆ ! ಏನು ವಿಶೇಷ ?

ಸಾವಿತ್ರಮ್ಮ : ವಿಶೇಷ ಏನ್ಬಂತು ಹೇಳಿ....ಗೊತ್ತಲ್ಲ ನಿಮಗೆ, ನಮ್ಮನೆ ಸಮಾ ಚಾರ. ಬರೋರು ಹೋಗೋರು ಒಬ್ಬರೇ, ಇಬ್ಬರೇ ? ಇವರ ಸೋದರಮಾವ ಹೈಕೋರ್ಟಿನ ಕೆಲಸಕ್ಕೆಂತ ಬಂದಿದಾರೆ. ಎಕ್ಸರೇ ತೆಗಿಸಬೇಕೊಂತ ನನ್ನ ತಂಗಿ ಬಂದಿದಾಳೆ ಶಿವಮೊಗ್ಗಿಯಿಂದ. ಸಾಲದ್ದಕ್ಕೆ ನಮ್ಮ ಅಳಿಯನಕಡೆ ಸಂಬಂಧೀ ಕರು ಇವತ್ತು ಬರ್ತಾರೆ-ಅವರಿಗೇನೊ ಕಚೇರಿ ಕೆಲಸ ಇದೇಯಂತೆ. ಬೀಗರ ಔತಣವಾದರೂ ಮಾಡಲೇಬೇಕಲ್ಲ. ಎಲ್ಲ ನಡಿಬೇಕಲ್ಲಾ ಮ್ಮಾ...

ನಿರೂಪಕ : ಬರುವವರು ಹೋಗುವವರು ಎಂದರಲ್ಲ ಆಕೆ ? ಎಂಥೆಂಥವರು ಬಂದು ಹೋಗುತ್ತಾರೆ ಬೆಂಗಳೂರಿಗೆ ಎನ್ನುವುದು ಇಲ್ಲಿರುವವರಿಗೇ ಗೊತ್ತು. ದೇಶ ಪರ್ಯಟನ ಮಾಡುವ ಭಾರತೀಯರೆಲ್ಲ ಬೆಂಗಳೂರು ಮುಟ್ಟದೆ...ಬೆಂಗಳೂರಿನ ಮಸಾಲೆದೋಸೆ, ಕಾಫಿಯ ರುಚಿ ನೋಡದೆ, ಜಟಕಾಪ್ರವಾಸ ಅನುಭವಿಸದೆ, ಲಾಲಬಾಗ್, ಕಬ್ಬನ್‌ಪಾರ್ಕ್‌ಗಳ ಪುಷ್ಪವನಗಳಲ್ಲಿ ವಿಹರಿಸದೆ, ಸಿಟಿ ಮಾರ್ಕೆಟ್ ರಸೆಲ್-ಮಾರ್ಕೆಟ್‌ಗಳ ಪೈಪೋಟಿ ವ್ಯಾಪಾರದಲ್ಲಿ ಮರುಳಾಗದೆ ಹೋದವರುಂಟೆ? ವಿದೇಶಗಳಿಂದ ಬರುವ ರಾಜಅತಿಥಿಗಳನ್ನಂತೂ ಬೆಂಗಳೂರು ಸುತ್ತಿ ತೋರಿಸದೆ ಹಿಂತಿರುಗಿಸುವದಿಲ್ಲ. ಲಾಲ್‌ಬಾಗಿನ ಗಾಜಿನಮಂಟಪ ವೊಂದೇ ಸಾಕು—ಇಲ್ಲಿಯವರೆಗೆ ಅಂಥ ಎಷ್ಟುಮಂದಿ ಜಗದ್ವಿಖ್ಯಾತ ನಾಯ ಕರ ಪೌರಸನ್ಮಾನಕ್ಕೆ ಆಸ್ಥಾನವಾಗಿದೆಯೊ ! ಆದರೆ ಆ ಪ್ರೆಸಿಡೆಂಟುಗಳು, ಪ್ರಧಾನ ಮಂತ್ರಿಗಳು ನನ್ನ ನಿಮ್ಮಷ್ಟು ವಿರಾಮ ಪಡೆದವರಲ್ಲ, ಊರಿನ ಜನ ತೆಯ ಜತೆಗೆ ಸೇರಿ ಅವರ ಸ್ನೇಹ ಮಾಡುವದಕ್ಕೆ. ಬನ್ನಿ, ಸ್ವಲ್ಪ ಮಂಡಿಪೇಟೆ ಗಳ ದಿನಸಿ ಮೂಟೆಗಳ ಘಾಟು ಕುಡಿದು ನುಗ್ಗಿ ನೋಡೋಣ....

ಸಾಹುಕಾರರು : (ಫೋನಿನಲ್ಲಿ) ಹಾಂ ? ಹೂ, ಹೌದು...ಕೊಬ್ಬರಿ ಎಣ್ಣೇನೇ, ಹೇಳ್ತಿ ರೋದು, ಮುವತ್ತೆಂಟು ರೂಪಾಯಿಯೊಂತ....ಆ ? ಅಷ್ಟೆ, ಅಷ್ಟೆ....ಹೂ, ಬೇಗ ವಿಚಾರಿಸಿ ಕೂಡಲೇ ಫೋನ್ ಮಾಡಿ....

ನಿರೂಪಕ : ಅದೇ ಒಂದು ಜಗತ್ತು ! ಬೆಂಗಳೂರಿನ ವ್ಯಾಪಾರ-ಕೇಂದ್ರದಲ್ಲಿ ಹಾಸಿ ಹರಿಯುವ ಲಕ್ಷಾಂತರ ರೂಪಾಯಿಗಳು ಏನು ತರುತ್ತವೆ - ಏನು ಹೊರು

ತ್ತವೆ, ಎನ್ನುವದನ್ನು ಎಣಿಸಹೊರಟರೆ ಕೊನೆಯಿರುವದಿಲ್ಲ. ಇಲ್ಲಿನ ಚಟು-ವಟಿಕೆ ಬೆಳಿಗ್ಗೆ ಎಂಟರಿಂದ ರಾತ್ರಿ ಒಂಬತ್ತರವರೆಗೆ ನಡೆದಿರುತ್ತೆ. ಪೇಟೆಯ ಉದ್ದಕ್ಕೂ ನಡೆದು ಎರಡೂ ಕಡೆಯೂ ಕಣ್ಣು ಹಾಯಿಸಿ ನೋಡಿದರೆ ಇದರ ವೈವಿಧ್ಯ ತಿಳಿದೀತು. ಆದರೆ ಅರಳೇಪೇಟೆಯಲ್ಲಿ ಹತ್ತಿ, ಬಳೆಪೇಟೆಯಲ್ಲಿ ಬಳೆ, ಅಕ್ಕಿಪೇಟೆಯಲ್ಲಿ ಅಕ್ಕಿ ಹುಡುಕುತ್ತ ಹೊರಟೀರಿ! ಇಲ್ಲೆಲ್ಲ ಏನಾದರೂ ಸಿಕ್ಕೀತು ಕೊಳ್ಳುವವರಿಗೆ....ಮನೆತುಂಬುವ ತಿನಸು, ಪಾತ್ರೆ ಹಾಸಿಗೆಗಳಿಂದ ಹಿಡಿದು, ಹಳೆಯ ಮೋಟಾರುಗಾಡಿಗಳ ವರೆಗೆ! ಈ ವ್ಯಾಪಾರಗಳಲ್ಲಿ ಮುಳುಗಿದ ಮನಷ್ಯರೂ ಅಷ್ಟೇ ನೂರೆಂಟು ಬಗೆಯವರು....ರಸೆಲ್ ಮಾರ್ಕೆಟ್ಟಿನ ಹಿಂದೆ ಈ ಒಬ್ಬ ದಳ್ಳಾಳಿ ಏನು ಹೇಳುತ್ತಿದ್ದಾನೆ?

ದಳ್ಳಾಳಿ : (ತಮಿಳು) ಏಂಪಾ, ಉಣ್ಣ್ಕೋ ಎನ್ನಾ ಸಿಕ್ಕಿರೆ? ಒಣ್ಣಾರ ರೂಬಾ-ಕುಡ್ತುಟ್ಟು ಪೋಯೇಂ!

ನಿರೂಪಕ : ಒಣ್ಣಾರ ರೂಬಾ, ಎಂದರೆ ಪ್ರಾಯಶಃ ಒಂದೂವರೆ ಸಾವಿರ ಇರಬೇಕು ಆತನ ಭಾಷೆಯಲ್ಲಿ. ಅದರಲ್ಲಿ ಮುನ್ನೂರರ ಲಾಭದ ದೃಷ್ಟಿಯೂ ಇದ್ದೀತು! ಇನ್ನೊಬ್ಬ, ಅವನ ಮಿತ್ರ, ಇವನು....ಮಾರವಾಡಿ....

ಮಾರವಾಡಿ : ಈರಪ್ಪ....ನಿಮ್ದು ಒಡವೆ ನಮ್ಗೆ ಬೇಡಾ. ಅದ್ರೆ ಬಡ್ಡಿ ಜಾದಾ ಆಗೋಯ್ತಪ್ಪಾ. ಈ ಪರ್ಕಾರ ಫಷ್ಟ್ ತಾರೀಖಿಗೆ ಬಡ್ಡಿ ಎಷ್ಟಾಗೋಗಯ್ತೆ ಗೊತ್ತಾ? ಲೆಕ್ಕಾ ಮಾಡು ಥೋಡಾ....

ನಿರೂಪಕ : ಕೇವಲ ಹತ್ತು ಹದಿನೈದು ರೂಪಾಯಿಗಳ ಬಂಡವಾಳದಿಂದ ಪ್ರಾರಂಭಿಸಿ ಲೇವಾದೇವಿ ವ್ಯಾಪಾರ ಕಟ್ಟಿದವನು ಆತ. ಅವನಂತೆ ಉತ್ತರದಿಂದ ಬಂದ ಸಿಂಧಿ ನಿರಾಶ್ರಿತರು, ಬೆವರು ಸುರಿಸಿ ಹಣ ಸಂಪಾದಿಸಿ ಈಗ ನೂರು ಮಂದಿಗೆ ಆಶ್ರಯ ಕೊಡುವ ಸ್ಥಿತಿಯಲ್ಲಿದ್ದಾರೆ. ಇಲ್ಲಿ ಸಂಪಾದಿಸಿದ ಹಣವನ್ನು ಇಲ್ಲೇ ಮಾಳಿಗೆಮನೆ, ಹೋಟಲುಗಳು ಕಟ್ಟಿ ಸಂಪದಭಿವೃದ್ಧಿ ಮಾಡಿಕೊಂಡಿರುವ ಗುಜರಾತಿಗಳಿದ್ದಾರೆ, ಈ ವ್ಯಾಪಾರೀವೃಂದದಲ್ಲಿ. ಅತಿ ಸ್ವಲ್ಪ ಹಣದಿಂದ ಕಾಲ ಹರಣ ಮಾಡುತ್ತ ಕ್ರಮೇಣ ಹತ್ತುಜನರಿಗೆ ಸಾಲಕೊಡುವ ಶಕ್ತಿ ಗಳಿಸಿದ ಕಾಬೂಲಿವಾಲಾಗಳಿದ್ದಾರೆ, ಈ ತುಂಬಿದ ಪೇಟೆಗಳಲ್ಲಿ. ಯಾವ ವ್ಯವಹಾರ ಕೈಗೆ ತೆಗೆದುಕೊಂಡರೂ ಅದನ್ನು ಬಂಗಾರವಾಗಿ ಮಾಡುವ ಹಸ್ತಗುಣವುಳ್ಳ ಸ್ಥಳೀಯ ವೈಶ್ಯ ಮಹನೀಯರಂತೂ ಎಲ್ಲ ಪೇಟೆಗಳಲ್ಲೂ ಇದ್ದಾರೆ.

ಒಬ್ಬ ವೈಶ್ಯ : (ತೆಲುಗು) ಏಮಂಡೀ, ಚೂಸ್ತಿರಾ, ವಾಳ್ಳು. ಬಂಗಾರುಪೇಟೆ ವೆಂಕಟೇಶಶೆಟ್ಟಿ ವಾಳ್ಳು, ಕೂತರು ಪೆಳ್ಳಿಕಿ ನಲಭೈವೇಯಿಲು ಖರ್ಚ ಚೇಸ್ತಾರಂಟ? ಪರವಾಲೇದೇ ಅನುಕೊಂಟ್ನಿ, ನೆನ್ನ ಮೊನ್ನ ವಚ್ಚಿನ ವಾಳ್ಳು, ವಾಳ್ಳಿ ಇಟ್ಲಾ ಅಂತೇ ಇಂಕ ಏಮಿ....

ಇನ್ನೊಬ್ಬ ವೈಶ್ಯ : ನೇನು ಅಪ್ಪುಡೇ ಚೆಪ್ಪಿತ್ನೇ! ಮಾ ಬಡ್ಜೆಟ್ಟ್ನಿ ನಲಭೈಯ್ಯೈದು ವೇಯಿ ರೂಪಾಯಿಕ್ಕಿ ಎಕ್ಕಿಟ್ಟೆಯನ್ನು ಮೂನ್ನಿ. ಊಕ್ತಿ ಔತುಂದಾ, ಮಳ್ಳಿ ....ಆ, ಗಂಗಯ್ಯ ಟೈಂ ಎಂಕ ?

ಒಬ್ಬ ವೈಶ್ಯ : ಟೈಮಾ....ಇಕ, ಕೊತ್ತ ವಾಚು, ಅದೆಟ್ಲ ಚೂಡವಲ್ನೊ ಇಂಕ ತೆಲೀದು....ಮೀರೇ ಚೂಸ್ಕೂನಿ ನಾಕೂ ಚೆಪ್ಪಂಡಿ ಅಟ್ಲನೇ....

ನಿರೂಪಕ : ಶೆಟ್ಟರ ಪುತ್ರ ಬೆಂಗಳೂರ ಪುತ್ರನಾಗಿ, ಓದುಬರೆಹ ಚೆನ್ನಾಗಿ ಕಲಿತು ವಿದ್ಯೆಯ ಬಲದಿಂದ ಸ್ವಾವಲಂಬಿಯಾಗಿ ಕುಟುಂಬಕ್ಕೆ ಒಂದು ಹೊಸ ಹಾದಿಯನ್ನೆ ತೋರಿಸಿ ಯ[illegible] ಒಂದಲ್ಲ ಒಂದು ಕಾರ್ಖಾನೆಯಲ್ಲಿ ದುಡಿಯುತ್ತಿರಬಹುದೇನೋ!

ಯುವಕ : ಏನ್ರಿ, ಪದ್ಮನಾಭನ್, [illegible]ಸು ಬಸ್ಸೇ ಲೇಟೋ, ನಾವೇ ಮುಂಚೆ ಬಂದುಬಿಟ್ಟೆವೋ?

ಪದ್ಮನಾಭನ್ : ಬರ್ರಿ ಬಿಡಿ ನಿಧಾನವಾಗಿ. ದಿನಾ ಐದು ನಿಮಿಷ ಮುಂಚೇನೇ ಹೋಗಿ ರಿಪೋರ್ಟ ಮಾಡ್ಕೋತಿರಬೇಕಾದ್ರೆ ಒಂದಿನ ಎರಡು ನಿಮಿಷ ಲೇಟಾದ್ರೇನು ಉಳಿದು ಹೋಗೋದೂಂತೀನಿ !

ಯುವಕ : ನಿಮಗೇನು ಪರವಾಯಿಲ್ಲ. ಶನಿ, ನಮ್ಮ ಹೊಸ ಫೋರ್ಮನ್ ಯಮ ದೂತ ಅರ್ಧಗಂಟೆ ಮುಂಚೇನೇ ಬಂದು ಕೂತಿರತಾನೆ, ತನ್ನಿಂದಲೇ ಫ್ಯಾಕ್ಟರಿ ನಡಿಯೋದೂಂತ....

ಪದ್ಮನಾಭನ್ : ಮೊನ್ನೆ ಹೇಳಿದ್ನೇನು ನಿಮಗೆ? ನಮ್ಮ ಅಸಿಸ್ಟಂಟ ಮ್ಯಾನೇಜರರಿಗೇ ತಿರುಗಿಸಿ ಕೊಟ್ಬಿಟ್ಟೆ. ಮೂರುದಿನ ಮುಟ್ಟಿನೋಡಬೇಕು ಹಾಗೆ. ನಮ್ಮ ಮೆಷಿನ್ ಷಾಪಿನಲ್ಲಿ ಪ್ರತಿ ತಿಂಗಳೂ ಶೇಕಡ ೧೦ ರಷ್ಟು ಓವರಟೈಂ ಕೆಲಸ ಮಾಡಿದ್ದೀವಿ, ನಿಮಗೆ ತಿಳಿದ ಹಾಗೆ.... ಹಾಗಿರೋವಾಗ, ಮೊನ್ನೆ, ಹಾಗೇ ನನ್ನ ಟೇಬಲ್ ಹತ್ರ ಬಂದ ಇವ, ಶಿಸ್ತುಗಾರ ಪುಟ್ಟಸ್ವಾಮಿ ಶುರುಮಾಡಿದ, ಯಥಾಪ್ರಕಾರ.... ನಾನೂ ಸುಮ್ನೆ ಕೇಳೋಷ್ಟು ಕೇಳ್ದೆ........

ನಿರೂಪಕ : ಯಂತ್ರಯುಗವಲ್ಲವೇ ಇದು! ಇಂಥ ಸಾವಿರಾರು ಯುವಕರ ಅವಿಶ್ರಾಂತ ಸೇವೆಯಿಂದಲ್ಲವೇ ಬೆಂಗಳೂರಿನ ನೂರೆಂಟು ಕಾರ್ಖಾನೆಗಳು ಸಮಗತಿಯಿಂದ ಸಾಗಬೇಕಾದರೆ ! ಇಪ್ಪತ್ತುನಾಲ್ಕು ಗಂಟೆಗಳು ಅಬ್ಬರಿಸುತ್ತಿರುವ ಅವುಗಳ ಯಂತ್ರಗಳ ಬಾಯಿಗೆ ಹತ್ತಿ, ರೇಷ್ಮೆಗೂಡು, ಹಸಿಮಣ್ಣು, ಎಣ್ಣೆ ಬೀಜ ಗಳು, ಹೊಗೆಸೊಪ್ಪು, ಮರಳು, ಇವುಗಳ ಮಣಗಟ್ಟಲೆ ಆಹುತಿಯಾಗು ತ್ತಿದ್ದರಲ್ಲವೆ, ಮೈಲು ಮೈಲುಗಳುದ್ದದ ಬಟ್ಟೆ, ಪಿಂಗಾಣಿ, ಗಾಜು, ಸಾಮಾನು, ಸಿಗರೇಟು ಇಂಥ ದಿನಬಳಕೆಯ ಸಾಮಗ್ರಿಗಳು ಹೊರಗೆ ಬಂದಾವು. ಬಟ್ಟೆಗಳೇ ಪ್ರತಿವರ್ಷ ಒಂದು ಕೋಟಿ ರೂಪಾಯಿಗಳಷ್ಟು ಬೆಂಗಳೂರಿಂದಾಚೆಗೆ

ಹೊರಬೀಳುತ್ತದೆ.... ಈ ಉದ್ಯಮಗಳೆಲ್ಲ ಗಲಿವರನ ಮುಂದಿನ ಕುಬ್ಜರಂತಾಗುತ್ತವೆ — ರಾಷ್ಟ್ರೀಯ ಯೋಜನೆಗಳಾದ ಹಿಂದೂಸ್ಥಾನ್ ಏರ್‌ಕ್ರಾಫ್ಟ್, ಇಂಡಿಯನ್ ಟೆಲಿಫೋನ್ ಇಂಡಸ್ಟ್ರೀಸ್, ಹಿಂದುಸ್ಥಾನ್ ಮೆಷೀನ್ ಟೂಲ್ಸ್, ಭಾರತ ಇಲೆಕ್ಟ್ರಾನಿಕ್ಸ್ ಇವುಗಳ ಮುಂದೆ. ಬೆಳಗಾದರೆ ಬೆಂಗಳೂರಿನ ಇಪ್ಪತ್ತು ಇಪ್ಪತ್ತೈದು ಸಾವಿರ ಯುವಕ ಯುವತಿಯರು ಈ ಉದ್ಯಮಗಳನ್ನು ನಡೆಸಲು ಹೊರಟಿರುತ್ತಾರೆ.... ಆದರಿಂದಲೇ ಅವರ ಚಿಂತೆ, ಅವರ ಮಾತು, ತಮ್ಮ ಯಂತ್ರಾಗಾರಗಳನ್ನ ಕುರಿತೇ ಆಗಿರುತ್ತದೆ. ಅವರ ನಡೆ ಕ್ಲುಪ್ತವಾಗಿ ಒಮ್ಮುಖವಾಗಿ ತೋರುತ್ತದೆ. ಅವರ ಗುರಿ ಮುಖ್ಯವಾಗಿ ತಂತಮ್ಮ, ತಮ್ಮವರ ಏಳಿಗೆಯ ಮೂಲಕ ಇಡೀ ದೇಶದ ಮೇಲ್ಮೆಯನ್ನು ಸಾಧಿಸುವುದೇ ಆಗಿದೆ.... ಅವರ ಮನೆ ಮಕ್ಕಳು ಯಂತ್ರಯುಗದ ಮಕ್ಕಳು; ಯಾಂತ್ರಿಕ ನಾಗರಿಕತೆಯ ಉಕ್ಕಿನ ಬಲೆ ಅವರ ಪಾಠಪ್ರವಚನಗಳ ಹಿನ್ನೆಲೆ....

[ಮೇಲೆ ವಿಮಾನವೊಂದು ಹಾರಿಬರುತ್ತದೆ.]

ಚಿಕ್ಕ ಹುಡುಗ : ಲೋ, ಒನ್ ಬೈ ಟು ಕಾಫಿ ಬೆಟ್ಟು, ಅದು ಯಾವ ಪ್ಲೇನು ಹೇಳ್ಬಿಡು?

ಇನ್ನೊಬ್ಬ : ಸೈ ಕಣೊ! ಅದು.......ಡಕೋಟಾ.

ಚಿಕ್ಕ ಹುಡುಗ : ನಿನ್ತಲೆ! ಡಕೋಟಾಗೆ ಎರಡೆಂಜಿನ್ನು. ಇದಕ್ಕೆ ಎಷ್ಟು ನೋಡು, ಕಾಣಲ್ವಾ ಕಣ್ಣಿಗೆ ?

ಇನ್ನೊಬ್ಬ : ಹಂಗಾರೆ....ಜೆಟ್ಟು ಇದು.

ಚಿಕ್ಕ ಹುಡುಗ : ಬಲೆ ಕಂಡುಬಿಟ್ಟ ಇವನು ಜೆಟ್ಟನ್ನ! ಜೆಟ್ಟಿನ ಸ್ಪೀಡು ಎಷ್ಟುಹೇಳು....

ಇನ್ನೊಬ್ಬ : ಎಷ್ಟಪ್ಪ ಜೆಟ್ಟಿನ ಸ್ಪೀಡು ನೀ ಹೇಳು ?

ಚಿಕ್ಕ ಹುಡುಗ : ಸೌಂಡಿನ ಸ್ಪೀಡೆಷ್ಟು ?

ಇನ್ನೊಬ್ಬ : ಏಳ್ನೂರು ಮೈಲಿನೋ ಎಷ್ಟೋ........

ಚಿಕ್ಕ ಹುಡುಗ : ಸೂಪರ್‌ಸಾನಿಕ್ ಜೆಟ್ಟಿನ ಸ್ಪೀಡು ಸಾವಿರದ ಇನ್ನೂರು ಮೈಲಿ ಮಿಸ್ಟರ್ !

ಇನ್ನೊಬ್ಬ : ಬೆಳಕಿನ ಸ್ಪೀಡು ಗೊತ್ತಾ ನಿನಗೆ ಹಂಗಾದ್ರೆ ?

ಚಿಕ್ಕ ಹುಡುಗ : ಅದೇನು ಮಹಾ! ಒಂದು ಲಕ್ಷ ಎಂಬತ್ತು ಆರು ಸಾವಿರ ಮೈಲಿ ಸೆಕೆಂಡಿಗೆ ......

ಇನ್ನೊಬ್ಬ : ಅದಕ್ಕಿಂತ ಸ್ಪೀಡು ಬೇರೆ ಯಾವ್ದೂ ಇಲ್ಲ ಅಲ್ವಾ ?.......

ನಿರೂಪಕ : ಇವೆ. ಬಹುಶಃ ಇವರ ಊಹೆ ಕನಸುಗಳ ಸ್ಪೀಡು ಅದನ್ನ ಮೀರಿಸಬಲ್ಲವು ಅವರ ಮನಸ್ಸಿನ ಓಟವನ್ನ ನಾವಂತೂ ಹಿಂಬಾಲಿಸಲಾರೆವು. ಭೂಲೋಕದ ಸ್ಪೀಡುಗಳು ಸಾಕು ನಮಗೆ !

[ ಕಾರ್ಖಾನೆಯು ಸಿಳ್ಳು ಕೂಗುತ್ತಿರುವಂತೆಯೇ ಸಾವಿರ ಕಾರ್ಮಿಕರು ಕೆಲಸ ಮುಗಿಸಿ ಒಟ್ಟಿಗೆ ಆಚೆಗೆ ನಡೆಯುವ ಸಡಗರದ ಶಬ್ದ ಬೆರೆಯುತ್ತದೆ.]

ನಿರೂಪಕ : ಸಾವಿರ ತಲೆ-ಎರಡು ಸಾವಿರ ಕೈ ಕಾಲುಗಳು ಈ ವಿರಾಟ ಪುರುಷ ಸಾಗುತ್ತಿರುವ ನೋಟ ಬೇಕಾದರೆ ಒಂದಲ್ಲ ಒಂದು ದೊಡ್ಡ ಗಿರಣಿಯ ಬಳಿ ನಿಲ್ಲಬೇಕು. ಹಿಂದಿರುಗುವ ಹಾದಿಯಲ್ಲಿ ಏನೋ ಕೆಲಸವಾಗಿ ಆಚೀಚೆಗೆ ಒಬ್ಬರು ಇಬ್ಬರು ಹೊರಳಿದರೆ — ಹೌದು, ಇವರೂ ನಮ್ಮಂತೆಯೇ ಪುರಜನರು ಎನ್ನುವುದು ನೆನಪಾದೀತು. ಆದರೆ ಇವರೆಲ್ಲ ವ್ಯಕ್ತಿಗಳು; ವ್ಯಕ್ತಿಗಳಾಗಿ ತಮ್ಮ ತಮ್ಮದೇ ಆದ ಕಷ್ಟ ಸುಖಗಳನ್ನನುಭವಿಸುತ್ತ ಸಮಷ್ಟಿಯಲ್ಲಿ ಕಲೆತು ನೈಪುಣ್ಯತೆ ಕಾರ್ಮಿಕರೆನಿಸಿಕೊಳ್ಳುವವರು....ಕರ್ಮಯೋಗಿಗಳಲ್ಲವೇನು ಇವರೆಲ್ಲ ? ....ಇವರನ್ನ ಕಲಸಿ ಕಾರ್ಮಿಕರನ್ನಾಗಿ ಮಾಡುವ ಯಂತ್ರವಲ್ಲದೆ, ಇನ್ನೊಂದು ಶಕ್ತಿ ಇವರ ಮೇಲೆ ಹತೋಟಿ ಪಡೆದಿದೆ. ಇವರ ಸಾಂಘಿಕ ಜೀತನವನ್ನು ಕೆದಕಿ ಕೆರಳಿಸಿ ಇವರನ್ನ ನಿಜವಾಗಿ ಸಾವಿರ ತಲೆ ಎರಡು ಸಾವಿರ ಕೈ ಕಾಲುಗಳ ವಿರಾಟ ಪುರುಷನಾಗಿ ಮಾಡುವ ಶಕ್ತಿ ಅದು ಮೈಕ್ರೊಫೋನಿನೆದುರು ಉಸಿರುವ ರಾಜಕಾರಣಿಯ ಧ್ವನಿ!

ರಾಜಕಾರಣಿ : [ಲೌಡಸ್ಪೀಕರಿನಲ್ಲಿ ಆತನ ಧ್ವನಿ] ಅಧ್ಯರಿಂದ – ಮಿತ್ರರೇ, ಒಗ್ಗಟ್ಟಾಗಿ, ಒಂದೇ ದೃಷ್ಟಿಯಿಟ್ಟು ಮುಂದೆ ನುಗ್ಗಬೇಕು ನೀವು. ನಿಮಗೊಂದು ಹಕ್ಕಿದೆ, ಮರೆಯಬೇಡಿ, ಅದೇ ಮುಷ್ಕರ ಹೂಡುವ ಹಕ್ಕು. ನ್ಯಾಯವಾದ ಕಾರಣಕ್ಕೆ ಮುಷ್ಕರ ಹೂಡುವದು ಎಲ್ಲರ ಮನ್ನಣೆಯನ್ನು ಪಡೆದ ಹಕ್ಕು. ಮುಷ್ಕರ ! ದಬ್ಬಾಳಿಕೆಗೆ ಮದ್ದು ಅದೊಂದೇ, ಮುಷ್ಕರ ! ......

ನಿರೂಪಕ : ಏನು ಜನ – ಎಂಥ ವೈವಿಧ್ಯ, ಅಲ್ಲವೇ ? ನೀವಿವರೆಲ್ಲರ ಸ್ಥೂಲಪರಿಚಯ ಮಾಡಿಕೊಳ್ಳುವುದು ಸುಲಭ. ಒಂದಲ್ಲ ಒಂದು ವಾಹನವಿದೆ ಊರು ಸುತ್ತುವುದಕ್ಕೆ – ಹೈ ಹೈ ಕಾರದ ಜಟಕಾ, ನಮ್ಮೆಲ್ಲರ ತಾತ ಮುತ್ತಾತಂದಿರ ಕಾಲದಿಂದಲೂ ಇದ್ದೇ ಇದೆ; ಗಂಟೆಗೆರಡಾಣೆ ಕೊಟ್ಟು ಬಾಡಿಗೆಗೆ ಬೈಸಿಕಲ್ ತೆಗೆದುಕೊಳ್ಳಿ, ಚಕ್ರದಲ್ಲಿ ಗಾಳಿಯಿದೆಯೋ ಚನ್ನಾಗಿ ನೋಡಿಕೊಂಡುಬಿಡಿ; ಇಲ್ಲವೇ ಭದ್ರವಾಗಿ ಹಿಡಿದು ಕೂರುವ ಧೈರ್ಯವಿರುವವರು ಇತ್ತೀಚಿನ ಭಯಾನಕ ಸೃಷ್ಟಿ – ಆಟೋರಿಕ್ಷಾವನ್ನು ಹಿಡಿಯಿರಿ; ಜೇಬಿನಲ್ಲಿ ಹಣ ಭರ್ತಿಯಿದ್ದು, ಗುಂಡಿಗೆ ಬಲವಾಗಿರುವವರು, ವಾಯುವೇಗದ ಟ್ಯಾಕ್ಸಿ ಹತ್ತಬಹುದು; ಇಲ್ಲದಿದ್ದರೆ ಬಸ್ಸಂತೂ ಇದ್ದೇ ಇವೆ–ಹೊತ್ತು ಹೇರಳವಾಗಿದ್ದರೆ ನಂಬರ ಹನ್ನೊಂದರ ಬಸ್ಸಿನಲ್ಲಿ ಕೂತು ಅರ್ಧ ಊರೆಲ್ಲ ಸುತ್ತಿಬಿಡಬಹುದು. ಹೀಗೆ ಊರು ನೋಡಿದರೆ ಸಾರ್ಥಕವೇನು ? ಏನು ನೋಡಿದ ಹಾಗಾಯಿತು ? ....

ದೂರದ ಊರಿನಿಂದ ಬಂದು ನೋಡಿದ ಮಿತ್ರರೇ, ಬೆಳಿಗ್ಗೆ ಚಳಿಯನ್ನು ಗಮನಿಸಿರಿ ತಲೆಗೆ ಶಾಲು ಸುತ್ತಿ ಕೈಲಿ ಕೋಲು ಹಿಡಿದು ಹೊರಟ ಪೆನ್ಷನ್‌ದಾರ

ರೊಂದಿಗೆ ವಾಕಿಂಗ್ ಹೊರಟಲ್ಲವೆ, ಮಂಜು ಮುಸುಕಿನಲ್ಲಿ ಬೇವು, ಸಂಪಿಗೆ, ಸಪೋಟಾ, ಅತ್ತಿ, ಯುಫೋರ್ಬಿಯಾ, ಅರಳಿ, ಸಿಲ್ವರ ಬರ್ಚ, ಕಾನಿಫರ್ ಗಳಲ್ಲದೆ, ಕೆಂಪು ನೀಲಿ ಹಳದಿ ಹೂಗಳ ಹಾಸಿಗೆಯನ್ನೇ ಚೆಲ್ಲಿದ ಲಾಲ್‌ಬಾಗ್ ಕಬ್ಬನ್ ಪಾರ್ಕುಗಳ ಹೂಮರಗಳ ಸೌಂದರ್ಯವನ್ನೆಲ್ಲಿ ಕಂಡೀರಿ?....ಇಲ್ಲದಿದ್ದರೆ ಆ ಮರಗಳನ್ನಾಶ್ರಯಿಸಿದ ಗಿಳಿ, ಕೋಗಿಲೆ, ಮೈನಾ, ಗೊರವಂಕ, ಗೀಜುಗ, ಗುಬ್ಬಿ, ಸಾರಂಗಗಳ ಕೊರಳಿನ ಇಂಪು ನಿಮ್ಮ ಕಿವಿಗೆ ಹೇಗೆ ಬಿದ್ದೀತು ? .... ಬೆಳಕು ಹರಿಯುವ ಮುಂಚೆ, ಮುಂಬರುವ ಓಲಂಪಿಕ್ ಸ್ಪರ್ಧೆಗಳ ಸಲುವಾಗಿ ಓಟದ ಅಭ್ಯಾಸದಲ್ಲಿ ಮಗ್ನನಾಗಿ ಓಡುತ್ತಿರುವ ಹುಡುಗನೊಂದಿಗೆ ಓಡಿದಲ್ಲದೆ, ಅಲಸೂರು ಕೆರೆಯ ಮೇಲೆ ಬೀಸಿ ಬರುವ ತಿಳಿಗಾಳಿಯ ಅನುಭವ ನಿಮಗೆ ಹೇಗಾದೀತು ? .... ಹಾಗೆ ಮೇಲುಸಿರಿಟ್ಟು ಓಡಿಬಂದಲ್ಲದೆ, ಅಯ್ಯರ್ ಹೋಟಲಿನ ಬೆಳಗಿನ ಬಿಸಿ ಇಡ್ಲಿ, ಮೋಳಗಾಪುಡಿ ಪೂರ್ಣಸ್ವಾದನೆ ನಿಮಗಾದೀತೇನು ? ....ಬೇಸಿಗೆ ಮೊದಲಿಟ್ಟ ದಿನಗಳಲ್ಲಿ ಮಧ್ಯಾಹ್ನ ಹೊಂಗೆಯ ಮರದಡಿಯಲ್ಲಿ ಪರೀಕ್ಷೆಗೆ ಓದುತ್ತಿರುವ ವಿದ್ಯಾರ್ಥಿಯ ಜೊತೆಗೆ ಕಾಲು ಚಾಚಿ ಕತ್ತೆತ್ತಿ ನೋಡಿದರೆ ತಾನೆ ಬೆಣ್ಣೆಮುದ್ದೆಗಳಂತೆ ಆಕಾಶದಲ್ಲಿ ತೇಲುತ್ತಿರುವ ಬೆಂಗಳೂರಿನ ಬಿಳಿಮೋಡಗಳ ಮನಮೋಹಕತೆ ನಿಮಗೆ ತಿಳಿಯುವುದು ? .... ರಾತ್ರಿ ತುಂತುರುಮಳೆ ಸುರಿದಾಗ, ತಲೆ ನೆನೆಯುವದನ್ನು ಗಮನಿಸದೆ ನಡೆದು ಹೋಗಿ ಒಂದಾಣೆಯ 'ಚಾ' ಕುಡಿದು ಬಂದರಲ್ಲವೆ 'ಕಾಕಾ' ಹೋಟಲಿನವನ ನಳಪಾಕದ ಕೈಚಳಕ ತಿಳಿಯುವಿರಿ ? .... ಸುಟ್ಟ ಮುಸುಕಿನ ಜೋಳವನ್ನೋ, 'ಗರಮಾಗರಮ್' ಕಡಲೆಯನ್ನೋ ಜಗಿಯುತ್ತ, ಫಕ್ಕದ ಹಳ್ಳಿಯವನೊಂದಿಗೆ ಬೀಡಿಯ ಪ್ರಸ್ತಾಪ ಮಾಡಿ ಕೂತರಲ್ಲವೆ, ರಾತ್ರಿ ಹನ್ನೊಂದು ಗಂಟೆಗೆ 'ಕರಗ' ಬರುವುದನ್ನ ತೂಕಡಿಸದೆ ಕಾಣುವ ಯೋಗ ಪಡೆದೀರಿ ? ....ದೊಡ್ಡಣ್ಣ ಹಾಲ್‌ನಲ್ಲಿ ಎರಡು ಜತೆ ಭಾರೀ ಕುಸ್ತಿ ಪಂದ್ಯ ನೋಡಿ ನೂಕು ನುಗ್ಗಲಿನಲ್ಲಿ ಹೊರಬಿದ್ದರಲ್ಲವೆ, ಗೆದ್ದವರ ಕಡೆಯ ಆಟಾಟೋಪ, ಸೋತವರ ಕಡೆಯ ಅನುತಾಪಗಳನ್ನು ಅರ್ಥ ಮಾಡಿಕೊಂಡೀರಿ !........

[ಗುಜುಗುಂಪಲು]

ಕುಸ್ತಿಪ್ರೇಕ್ಷಕ: ( ಉರ್ದು? ) ದೇಖ್ಯಾ ಹಮಾರಾ ಷಾಗಿರ್ದು ಕೈಸಾ ಲಡ್ಯಾ ? ಓ ಬೇವಾರ್ಸಿ, ಬೇನಾಮ್‌ವಾಲಾ ಪೈಲ್ವಾನ್ಕೊ ಚಟ್ನಿ ಕರ್ದಿಯಾನಾ ? ಖೂಟ್ ಮಾರ್‍ಯಾರೇ, ಕ್ಯಾ ಬೋಲ್ತಿ ?

ಇನ್ನೊಬ್ಬ: ಅರೇ ಥೋಡ ಭಯ್. ತುಮೋ ಕಯ್ಕು ಫಿಕರ್ ಕರ್ತೀ ? ಅಬ್ಬೀ ಹೈನಾ, ಪರ್ಸೂಂ ದೇಖೋ, ಕ್ಯಾ ಹೋತೀ ... ....

ನಿರೂಪಕ: ಜಿದ್ದು ತುಂಬಿದ ಫುಟ್‌ಬಾಲ್‌ಪಂದ್ಯ ನೋಡಿ ಬಂದಲ್ಲದೆ, ಪಾಪ, ಅಂಪೈರಿನ ಎದೆಹೊಡೆತದ ಅರಿವು ನಿಮಗೆ ಹೇಗಾದೀತು! ಪ್ರೇಕ್ಷಕವೃಂದದಲ್ಲಿನ ಕಾವು ಎಷ್ಟಿರುತ್ತೆ ಗೊತ್ತೇನು?

[ಮತ್ತೆ ಗುಜುಗುಂಪಲು; ದೊಡ್ಡ ಗುಂಪು]

ಒಬ್ಬ: ಲೋ ಜಂಬಣ್ಣ, ನೀನೊಂದ್ನಿಮಿಷ ಸುಮ್ನೆ ಇದ್ದಿದ್ರೆ, ಅವನ್ನ ಹಿಡಿಕೊಂಡು ತದಕ್ಬಾಕಿಬಿಡ್ತಿದ್ದೆ ನೋಡು! ನಾವೂ ನೋಡಿದ್ದೀವಿ ಫಾಲು ಮಾಡೋದನ್ನ; ಆದ್ರೆ ಹಿಂಗೆ ಹಿಂದಿನಿಂದ ಟಾಂಗ್ ಕೊಟ್ನಲ್ಲ ಆ ನನ್ಮಗ! ಅಂಪೈರು ಅನ್ನಿಸ್ಕೊಂಡೋನು ಏನು ಕಳ್ಳೆಕಾಯಿ ತಿಂತಿದ್ನಾ, ಏನ್ಮಾಡ್ತಿದ್ದ ಅಂತ!

ನಿರೂಪಕ: ಫುಟ್‌ಬಾಲ್, ಹಾಕಿಗಳಲ್ಲಿ ಅಂತರಾಷ್ಟ್ರೀಯ ಕೀರ್ತಿ ಪಡೆದ ಎಷ್ಟೋ ಮಂದಿ ಕ್ರಿಡಾಪಟುಗಳಿಗೆ ಬೆಂಗಳೂರು ತವರುಮನೆ. ಅದಕ್ಕೇ ಅಲ್ಲವೆ ಹೊರ ಊರಿನ ಎಳೆಯ ಮಿತ್ರರೇ, ನೀವು ಹವಣಿಸುವುದು "ನಾನೂ ಏರ್ ಕ್ರಾಫ್ಟಿನ ಹಾಕಿ ಟೀಮಿನಲ್ಲೊ, ಸೆಂಟ್ರಲ್ ಕಾಲೇಜಿನ ಕ್ರಿಕೆಟ್ ಟೀಮಿನಲ್ಲೋ, ದೇವಾಂಗ ಯೂನಿಯನ್ನಿನ ಬ್ಯಾಸ್ಕೆಟ್‌ಬಾಲ್ ಟೀಮಿನಲ್ಲೋ ಸೇರಿ ಆಡುತ್ತಿದ್ದರೆ, ಈ ವೇಳೆಗೆ ನನಗೂ ನಕ್ಷತ್ರಪಟ್ಟ ಬಂದಿರುತ್ತಿತ್ತೋ ಎಂಬುದಾಗಿ? ನಿಮ್ಮ ಕಸರತ್ತು ಚೆನ್ನಾಗಿ ನಡೆಯಲಿ, ಆಗ ನಿಮ್ಮ ಕನಸು ನನಸಾಗಬಹುದು! .... ಅದಿರಲಿ .... ಬೆಂಗಳೂರಿನ ರಸ್ತೆಗಳನ್ನು ಅಲೆದು ಜನರನ್ನ ಪರಿಚಯ ಮಾಡಿಕೊಳ್ಳುವುದಕ್ಕಲ್ಲವೆ ನಾವು ಹೊರಟದ್ದು? ಅದನ್ನೆ ಮರೆತೇವು? ... ಕೋಪತಾಪಗಳ ಗುಡಾಣವಾಗಬಹುದಲ್ಲವೇ ಮನುಷ್ಯದೇಹ? .... ದುಡಿದು ದಣಿದುಬಂದ, ಪಿತ್ತ ಕೆರಳಿದ ಈ ಗಂಡಸಿನ ಆಕ್ರೋಶದ ಧ್ವನಿ ಕೇಳಲು ನೀವು ಬೊಂಬು ಬಜಾರಿನ ಕತ್ತಲೆಯ ಮೂಲೆಗಳಲ್ಲಿ ಹೊಂಚು ಹಾಕಬೇಕಾದೀತು!....

ಗಂಡಸು :– (ತೆಲುಗು) ಏಮೇ ಪೋತಾನ್ನೇನು ಮರಿ ಇಕ್ಕಡ್ನಿಂಚಿ ಸೀದಾ ವಸ್ತಾವಾ ಇಂಟನಿ.

ಹೆಂಗಸು : (ಮೌನ. ಬರಿಯ ಬಳೆ ಶಬ್ದ)

ಗಂಡಸು : ವಸ್ತಾವೇಮೋ ವಿನಲೇದಾ ಚೆಪ್ಪಂದಿ?

ಹೆಂಗಸು : ನೇನು ರಾನು ಈ ಪೊದ್ದು

ಗಂಡಸು : ಏಮಿ! (ಹೊಡೆಯುತ್ತ) ರಾನಂಟಾವಾ!

ಹೆಂಗಸು : ರಾನು — ರಾನೂ — ರಾನು!

ಗಂಡಸು : (ಹೊಡೆತ) ತೊಕ್ಕೇಸ್ತಾನು! ರಾನಂಟಾವಾ? ಏಮಿ ಅನ್ಕೊಂಟಿನಿ?

ಹೆಂಗಸು : (ವಿಕಾರವಾಗಿ ಒಂದು ಕೂಗು ಹಾಕುವಳು)
ಒಬ್ಬಿಬ್ಬರು : (ಹೆಣಗಾಟದಲ್ಲಿ ಸೇರಿ, ಕೆಟ್ಟಬಾಯಿ ಸೇರಿಸುವರು)
ಗಂಡಸು : ಚಿದೇಸ್ತಾನು! ಎವರನ್ಕೋನ್ನಾವು ನನ್ನು ? ಹೂಂ.... ಹಾ? ....

[ಕ್ರಮೇಣ ನಿಷ್ಕ್ರಮಣ]

ನಿರೂಪಕ: ಅದೊಂದು ಪ್ರಪಂಚ. ಕತ್ತಲೆಯಾಯ್ತೆಂದರೆ ಈ ವಿಚಿತ್ರಗಳೆಲ್ಲ ಪ್ರಾರಂಭ. ಇನ್ನೊಂದು ಪ್ರಪಂಚ ಕಾಣುವುದಾದರೆ, ಹಳೆಯ ಬೆಂಗಳೂರಿನ ಗಲ್ಲಿಗಳೊಳಕ್ಕೆ ನುಗ್ಗಿ ಸ್ವಲ್ಪ ನೆರಳಿನ ಮರೆಯಲ್ಲೇ ಓಡಾಡುತ್ತ ಇರಿ..ಅಲ್ಲಿ..

ಒಬ್ಬ : ಎತ್ಲಾಗಯ್ಯಾ ಹೊರಟಿದ್ದೀರಿ ....
ಇನ್ನೊಬ್ಬ : (ಅವಶ್ಯವಿಲ್ಲದೆಯೇ ಕೆಮ್ಮಿ) ಯಾಕೆ ಸ್ವಾಮಿ ?
ಒಬ್ಬ : ಇವಳು . . .
ಇನ್ನೊಬ್ಬ : ಇಪ್ಪತ್ನೇನಂಬರ್ ರೂಮಿಗೆ ಹೋಗ್ತಿದೀವಿ . . . ಖಾಯಂ ಆಗಿದೆ . .
ಒಬ್ಬ : ನಿಲ್ಲಯ್ಯಾ ಸಾಕು ಕಂಡಿದೀನಿ. ಓಹೋಹೊ! — ಎಲ್ಲಿ ಇತ್ಲಾಗೆ ಕರಿ ದೀಪದ ಕೆಳಗೆ, ಸ್ವಲ್ಪ.

ನಿರೂಪಕ : ಅದೇ ಒಂದು ಪ್ರಪಂಚ. ಅಲ್ಲಿ ಮೈಮರೆತವರಿಗೆ, ರಾತ್ರಿಯ ತಂಗಾಳಿಯಲ್ಲಿ, ಶುಭ್ರ ನೀಲಾಕಾಶದ ಕೆಳಗೆ, ತಮ್ಮ ಮನೆಮುಂದಿನ ಹಚ್ಚ ಹುಲ್ಲಿನ ಮೇಲೆ ಎಲೆಯಡಿಕೆ ಮೆಲ್ಲುತ್ತಿರುವ ಗೃಹಸ್ಥನ ತೃಪ್ತ್ಯತಿರೇಕ ಹೇಗೆ ತಿಳಿದೀತು!

ಗೃಹಿಣಿ: ಹೇಳಮ್ಮ, ನೀನು ಜಾಣೆ .... ಅದ್ಯಾವ ಹಾಡು, ನೀನಿವತ್ತು, ಕಲಿತದ್ದು ಕಾನ್ವೆಂಟಿನಲ್ಲಿ ?

ಹೆಣ್ಣುಮಗು : (ರಾಗವಾಗಿ) Baa Baa Black Sheep
Have you any wool ?
Yes sir yes sir
Three Bags full ;
One for the master
One

ಚಿಕ್ಕ ಗಂಡುಮಗು : (ಅಡ್ಡಹಾಕಿ) ಅಮ್ಮ, ಅಮ್ಮ, ನಾನು ಹೇಳ್ತೀನಮ್ಮ. ನಮ್ಮ ಸ್ಕೂಲಲ್ಲಿ ಹೇಳಿಕೊಟ್ಟಿದ್ದು ಹಾಡು....(ಒಪ್ಪಿಗೆಗೆ ಕಾಯದೆ)....ಖಂಡವಿದೆಕೊ, ಮಾಂಸವಿದೆಕೊ, ಗುಂಡಿಗೆಯ ಬಿಸಿರಕ್ತವಿದೆಕೋ, ಚಂಡವ್ಯಾಘ್ರನೆ ನೀನಿದೆಲ್ಲವ, ಉಂಡು ಸಂತಸದಿಂದಿರೂऽऽ....

ನಿರೂಪಕ : ಅದೂ ಒಂದು ಸಂಸಾರವಾದರೆ, ಇಗೋ, ಇದನ್ನ ಒಂದು ಸಂಸಾರ ವೆನ್ನೋಣವೇನು....?

ಯುವಕ : (ಬಾಗಿಲು ತಟ್ಟಿ) ನಾಯುಡು, ಮಿಸ್ಟರ್ ನಾಯ್ಡು....

ಯುವತಿ : (ಬಾಗಿಲು ತೆರೆದು) ನೀವೇನಾ?..ಇಲ್ಲವಲ್ಲ ಅವರು, ನೈಟ್‌ಡ್ಯೂಟಿ ಇವತ್ತು.

ಯುವಕ : ಗೊತ್ತು. ಅಷ್ಟೂ ಗೊತ್ತಿಲ್ಲದೆ ...

ಯುವತಿ : (ಕೋಪ ನಟಿಸಿ) ಹೌದು ಹೌದು, ಗೊತ್ತಂತೆ ಆಹಾಹಾ, ಮುಖ ತೋರಿಸಿ ಮೂರು ತಿಂಗಳಾಯ್ತು, ಎಲ್ಲಿಗೆ ಹೋಗಿತ್ತೊ ರಾಯರ ಸವಾರಿ !

ಯುವಕ : ನಾ ಹೇಳಿರಲಿಲ್ವೆ ? ಎರಡು ತಿಂಗಳ ಟೂರಿಗೆ....

ಯುವತಿ : ಸರಿಸರಿ....ಇದ್ದೇ ಇವೆ ನಿಮ್ಮ ಸಬೂಬು. ನನಗೋ ಬೇಜಾರೋ ಬೇಜಾರಿಲ್ಲಿ....ಅದಿರ್‍ಲಿ, ಬೀದಿಲಿ ಯಾಕೆ ನಿಂತು ಮಾತಾಡ್ತಿದೀರಿ, ನಡೀರಿ ಒಳಗೆ....

ನಿರೂಪಕ : ಹೌದು ಅವಳು ಹೇಳುವುದು ಸರಿ. ಬೀದಿಯ ಬೆಳಕಿನ ಸಾಕ್ಷ್ಯವೇತಕ್ಕೆ ನಿಮ್ಮ ಹಾದರಕ್ಕೆ! ಹೋಗಿ ಕಣ್ಮರೆಯಾಗಿ....ಬೆಳಕಿನ ರಾಜ್ಯ ನಮಗಿರಲಿ. ಆ ಕಡೆ, ಸೌತಪೆರೇಡಿನ ಕಣ್ಣು ಕುಕ್ಕುವ ನಿಯಾನ್ ದೀಪಗಳನ್ನು ಬಿಟ್ಟು, ಬ್ರಿಗೇಡ್ ರೋಡಿಗೆ ತಿರುಗೋಣ....

[ಅತ್ತಿಂದಿತ್ತ ಬೂಟ್ಸ್ ಕಾಲುಗಳ ಓಡಾಟದ ಸಪ್ಪಳವಿರುತ್ತೆ]

ಒಬ್ಬ : Hayo, Tom !

ಟಾಮ್ : Hayo Johnny ! Hayo Darling, What a bloody boring night, man ? How about you darling ? Doing anything to-night ?

ಒಬ್ಬ : No she can go with you..

ಟಾಮ್ : O. K. Come on, we will have a glass of beer first Then you disappear, Johnny..

ನಿರೂಪಕ : ಇಲ್ಲೂ ಅದೇ ಗೋಷ್ಠಿಯೇನು ! ಅಯ್ಯೊ ಹಣೆಬರೆಹವೇ !....ಹೇಗಾದರೂ ಬನ್ನಿ ಈ ಹೋಟಲು ಹೊಕ್ಕು ನೋಡೋಣ....

[ಪಿಂಗಾಣಿ, ಗಾಜುಗಳ ಶಬ್ದದೊಂದಿಗೆ, ಏನೋ ಮಾತುಗಳು ಕೇಳಿಬರುತ್ತವೆ]

ಬಾರು ತುಂಬಿದೆ; ತೃಪ್ತಿ ತುಂಬಿವೆ ಎಲ್ಲಾ ಗಿರಾಕಿಗಳ ಮುಖದಲ್ಲೂ; ಕ್ಯಾಷಿಯರಿನ ಗಲ್ಲಾ ಕೂಡ ತುಂಬಿ ತುಳುಕಿದೆ....ಏನು ಕಾರಣ ಇವರೆಲ್ಲರ ಸಂಭ್ರಮಕ್ಕೆ ? ನೋಡೋಣ....ಹರೆಯದ ವಯಸ್ಸಿನ ಈ ಇಬ್ಬರಿಗೂ ಇದೇ ತಾನೇ ಮೆಡಿಕಲ್ ಪರೀಕ್ಷೆಯಲ್ಲಿ ತೇರ್ಗಡೆಯಾದಂತಿದೆ....ಇವನು ಒಬ್ಬಂಟಿಗ, ಎಲ್ಲೋ ರಾತ್ರಿಯ ಶಿಕಾರಿಯ ಹೊಂಗನಸಿನಲ್ಲಿ ಮುಳುಗಿರುವಂತಿದೆ.....ಅಲ್ಲಿ, ಅವನು ? ಮನೆಯಲ್ಲಿ ಏನೋ ಮನಸ್ತಾಪ, ಮರೆಯುವದಕ್ಕೋಸ್ಕರ ಬಂದಂತಿವೆ....ಇವರಿಬ್ಬರೂ ಬಹುಶಃ ಸೆಕೆಂಡ್‌ಹ್ಯಾಂಡ್ ಕಾರು-ವ್ಯಾಪಾರಿಗಳು; ಯಾರಿಗೋ ಭಾರಿ 'ಟೋಪಿ' ಹಾಕಿದ ಸಂತೃಪ್ತಿಯಲ್ಲಿ ಚೆನ್ನಾಗಿ ರಮಿಸುತ್ತಿದ್ದಾರೆ....ಇಲ್ಲೊಂದ

ಸಣ್ಣ 'ಪಾರ್ಟಿ' ವರ್ಗವಾದ ಸಹೋದ್ಯೋಗಿಯನ್ನ ಬೀಳ್ಕೊಡುವುದಕ್ಕಾಗಿ..
ಇವನೇನು, ಔಷಧಿ ಕಂಪನಿ ಯಾವುದೋ ಒಂದರ ಪ್ರತಿನಿಧಿ ಇರಬೇಕು-
ಒಳ್ಳೆಯ 'ಆರ್ಡರ್' 'ಬುಕ್' ಮಾಡಿದಂತಿದೆ ಈ ದಿನ !....ಇವ ? ಓಹೋ
ಎದುರಿಗಿರುವವನ ಭಾವೀ ಭಾವನೇನೋ !....ಇವನಿಗೆ ಯಾವ ವಿಶೇಷ ಕಾರ
ಣವೂ ಇಲ್ಲ-ದಿನವೂ ಇದೇ ವೇಳೆಗೆ, ಇದೇ ಮೂಲೆಯಲ್ಲಿ ಕೂತು, ಇದೇ
ಆರ್ಡರ್ ಕೊಡುವ ವ್ಯಕ್ತಿ ಇವನು !... ಇರಲಿ; ಈ ಒಬ್ಬನಿಗೇನೋ ಮನ
ಸ್ಸಿನ ಕಳವಳವಿದ್ದ ಹಾಗಿದೆ....ಕುಡಿದದ್ದರಲ್ಲಿ ಏನೂ ತೃಪ್ತಿಯಾದಂತಿಲ್ಲ....

ಧ್ವನಿ : ಬಾಯ್ !

ಬಾಯ್ : ಸಾರ್ ?

ಧ್ವನಿ : (ತಮಿಳು ?) ಇನ್ನು ಒರು ಬುಡ್ಡಿ ಕೊಡುವಾ. ಇನ್ನಿಕೆ ನಾವೂಟುಕ್ ಪೋವಲೆ

ಬಾಯ್ : ಏನ್ಸಾರ್ ? ಎನ್ನ ಆಯಿಡ್ಚಿ ?

ಧ್ವನಿ : ಎನ್ನ ಆಯಿಡ್ಚಾ ? ಏಂಪಾ ಕೇಕರೆ ? ಇದಿಪಾರು, ಏನ್ ಮೇಲೆ ಪೋಯಿಡಿಚಿ
ಪಾಕೆಟ್ಟುಲೆ ಒರು ದಮ್ಮಿ ಇಲ್ಲೆ.... ನೇರೇ ಪೋಯಿ ಮದ್ರಾಸು ರೈಲ್ ಕೀಳೆ
ತಲೈ ಕುಡ್ತುಂಡ ರೇಂಪಾ ! ...

ಬಾಯ್ : ಏನ್ಸಾರ್, ಅಪ್ಪಡಿ ಪೇಶರಿಂಗ. ಒರು ವೇಲೆ ಪುಡ್ಚಿನ್ನು ಇವಳೊವ್ ವೆರ್ತ
ಪಡ್ರೀಂಗ ! ನಾನ್ ಇರ್ಕರೇ ಪಾರುಂಗ ಸಾರ್. ಇದೇ ಊರ್ಲೆ ಮೂಣು
ಟ್ಯಾಕ್ಸಿ ವೆಚ್ಚಿ, ಮಾಸಂ ರೆಂಡಾಯಿರ ರೂಬಾ ಸಂಪಾದಿಚ್ಚಿಕಿಟ್ಟಿರುನ್ದೇ, ಅಲ್ಲಾಂ
ಪೋಚಿ, ರೋಸಿರಿ, ಕಮ್ಮಿ ಪಿಳೆಯೂಟ್ಟಲೆ, ಸಟ್ಟಾ ವ್ಯಾಪಾರತ್ಲೆ. ಅಪ್ರಂ,
ಪಾರುಂಗ ಸಾರ್, ಸಾರ್ಜಂಟ್ಸ್ ಮೆಸ್ಸಿಲೆ, ಸ್ಟುವರ್ಡಾ ಪೀಲೆ ಕಡೆಚ್ಚಿ. ಮುನ್ನೂ
ರ್‍ರೂಬಾ ಶಂಬಳಂ. ನಲ್ಲಾ ತಣ್ಣಿ ಪೋಟುಟು ಜಾಲಿಯಾ ಇರ್‌ನ್‌ದೇ ಸಾರ್.
ಎಂ ವೆಳಿಯೂಟು ಜಾಸ್ತಿ ಆಯಿ ಪೋಯಿಟ್ಟು, ಅಂಗೋರ್‌ನ್ದುಂ ವೆರಟಿ
ಪುಟ್ಟಾಂಗ ! ಅಪ್ರಂ ಪಾರುಂಗ, ಒರ್ರೋರು ವರ್ಸಂ ಒರೋರು ಮೇಲೆ ಪಾರ್ತಟ್ಟಿ
ಇಪ್ಪೊ ಇಂಗೇ ಇರ್ಕೆ.... ರೈಲ್ ಕೀಳೆ ತಲೆ ಕುಡ್ತುಟಾ, ಎವಂ ಕೇಕರ್ವಾಂ
ಸಾರ್, ಯಾರಕ್ಕ ನಷ್ಟಂ ? ಪೊಂಡಾಟಿ ಕುಳಂದೇಂಗಳೇ ಯಾರುಂಗ ಕಾಪಾತ್ತು
ಮಂಗ ಅಪ್ರಂ ? .....

ನಿರೂಪಕ : ಯಾರೆಷ್ಟು ನರಳಿದರೂ ಊರೇನು ಕರುಣಿಸುತ್ತೇನು ? ಅವರವರ ಹಣೆ
ಬರೆಹ ಎನ್ನುವ ಮಾತೇ ! ಶಕ್ತಿ, ಯುಕ್ತಿಯುಳ್ಳವ ಬದುಕಿಕೊಂಡ. ಹೇಡಿ
ಗಳನ್ನ, ಕೈಲಾಗದವನನ್ನ ನಿರ್ದಯೆಯಿಂದ ತುಳಿದು ತರಿದುಕೊಂಡು ಮುನ್ನುಗ್ಗು
ತ್ತಿರುತ್ತೆ ನಾಗರಿಕ-ಯಂತ್ರ ! ..... ದುಡಿಯುವವರಿಗೆ ಅವಕಾಶವೇನು ಕಮ್ಮಿ ?
ಬೆಂಗಳೂರಿನಲ್ಲಿ ನಾಲ್ವತ್ತು ಐವತ್ತು ವಿಧದ ಭಾರೀ ಉದ್ಯಮಗಳು ಕಾದು ಕುಳಿ
ತಿವೆ, ಕಲಿತವರನ್ನು ಆಹ್ವಾನಿಸುತ್ತ. ನಾಲ್ಕಕ್ಷರ ಕಲಿತು ಊರು ಬಿಟ್ಟು ಹೊರಗೆ

ಹೋಗಲು ಸಿದ್ಧವಿಲ್ಲದವರನ್ನೂ ಒಂದಲ್ಲ ಒಂದು ಕಚೇರಿ, ಕಾರ್ಖಾನೆ ಕೈ ಬೀಸಿ ಕರೆಯುತ್ತದೆ..... ಟೈಪಿಂಗ ಕಲಿತವರಂತೂ ಉದ್ಯೋಗಕ್ಕೆ ಕಾಯಬೇಕಾಗಿಯೇ ಇಲ್ಲ. ಹೆಚ್ಚು ಓದುಬರಹವಿಲ್ಲದವರು ಜೀವನೋಪಾಯಕ್ಕೆ ಅನುಸರಿಸಿರುವ ಮಾರ್ಗಗಳೇನು ಒಂದೇ ಎರಡೇ ! ಒಂದು ಸಾವಿರ ರೀತಿಯಲ್ಲಿ ಇವರೆಲ್ಲ ನಗರ ಜೀವನದಲ್ಲಿ ಹೆಣೆದುಕೊಂಡು ಬೆಂಗಳೂರಿಗೆ ಅದರ ವಿಶಿಷ್ಟರೂಪವನ್ನು ಕೊಟ್ಟಿದ್ದಾರೆ. ಬೆಂಗಳೂರಿನಲ್ಲಿ ಹೆಚ್ಚು ಓದಿದವರಂತೂ ಇಡೀ ದೇಶದ ಎಲ್ಲೆಲ್ಲೂ ಉದ್ಯೋಗ ದೊರಕಿಸಿಕೊಂಡು ಹರಡಿದ್ದಾರೆ...... ತಮ್ಮ ಕಣ್ಣೆದುರಿಗೆ, ತಮ್ಮದೇ ವೃತ್ತಿಯಲ್ಲಿ ತಮ್ಮ ಮುಂದಿನ ಪೀಳಿಗೆಯನ್ನು ಕೂರಿಸಿ ನೋಡಬೇಕೆಂಬ ತಂದೆಯರ ಹಂಬಲ ದೂರವಾಗುತ್ತಿದೆ. ಬೆಂಗಳೂರ ಹುಡುಗರ ಸುದ್ದಿ ಎಲ್ಲೆಲ್ಲಿಂದಲೋ ಬರಬೇಕು, ಈಗೆಲ್ಲಿ.....

ಒಬ್ಬ ಯುವಕ : ಲೋ, ಆ ವಿಶ್ವನಾಥ ಎಲ್ಲೊ ? ಕಾಣಲೇ ಇಲ್ಲ ಬಲು ದಿನದಿಂದ- ಅವನೇ ಥರ್ಡ ಇಯರ್ ಮೆಕ್ಯಾನಿಕಲ್‌ನಲ್ಲಿದ್ದನಲ್ಲಪ್ಪ, ಶೋಣೆಯ......?

ಇನ್ನೊಬ್ಬ ಯುವಕ : ಯಾರು ? ಆ ಸೋಡಾವಾಟರ್‌ಬಾಟಲ್ ಕನ್ನಡಕದೋನಾ ? ಅರೆ, ಅವನೀಗ ದೊಡ್ಡ ಇಂಜಿನೀರಪ್ಪಾ, ಸಿಂಧ್ರಿ ಕಾರ್ಖಾನೇಲಿ !

ಒಬ್ಬ ಯುವಕ : ಆ, ಇವನು, ಜಗ್ಗೂರಾಯ ? ದಿನಾ ಹೆಣ್ಣುಮಕ್ಕಳ ಕಾಲೇಜಿನ ಹತ್ರ ಠಲಾಯಿಸಿ, ಉಗಿಸ್ಕೊಂಡು......

ಇನ್ನೊಬ್ಬ ಯುವಕ : ಓ ಅವನೇ ರೋಮಿಯೋ ! ಅರೆ, ಅವನು ಈಗ ಬಲೆ ಸಭ್ಯನಾಗಿಬಿಟ್ಟಿದಾನಪ್ಪ. ಈಗ ಅದ್ಯಾವುದೋ ಸ್ಕಾಲರ್‌ಶಿಪ್ ಸಿಕ್ಕಿ ಜರ್ಮನಿಗೆ ಬೇರೆ ಹೊರಟಿದಾನೆ ! ಮಾವನ ದುಡ್ಡೂನ್ನು, ಆದರೂ ಅದೃಷ್ಟ ನೋಡು..... ಹ್ಯಾಗೆ ಹೊಡೀತು ಅವನಿಗೆ ! ಆ ಇವನೆಲ್ಲಯ್ಯ ಸೊಟ್ಟಮೋರೆ ಸೋಮಣ್ಣ ? ಮೊನ್ನೆ ಯಾರೋ ಹೇಳ್ತಿದ್ರು, ಜಯನಗರದಲ್ಲಿ ಮನೆ ಕಟ್ಟಿದ್ನಂತೆ ? ಹಿಡಿದು ಒಂದು 'ಪಾರ್ಟಿ' ಕೀಳಬೇಕಲ್ಲ ?

ಒಬ್ಬ ಯುವಕ: ಆ ಬಕ್ರಿ ಎಲ್ಕೊಡ್ತಾನೆ ಬಿಡು ಪಾರ್ಟೀನ. ಅವನು ಯಾವುದೋ ಬಿಸಿನೆಸ್ ಮಾಡಿ ಚೆನ್ನಾಗಿ ದುಡ್ಡು ಸಂಪಾದಿಸಿಬಿಟ್ನಪ್ಪ.... ಯಾವ ಬಿಸಿನೆಸ್ಸೂ ಅಂತೀಯಾ ? ..... ಈ ಎಲೆಕ್ಟ್ರಿಕ್ ಕಂಬಗಳಲ್ಲಿ ಪಿಂಗಾಣಿ ಇನ್‌ಸ್ಯುಲೇಟರ್‌ಗಳನ್ನ ಸಿಕ್ಕಿಸೋಕೆ ಮರದ ಗೂಟಗಳಿರೋಲ್ವೆ ? ..... ಆ ತುಂಡುಗಳನ್ನ ಲಕ್ಷ ಗಟ್ಟಲೆ ತಯಾರುಮಾಡೋ ಕಾಂಟ್ರಾಕ್ಟು ಹೊಡೆದುಬಿಟ್ಟ, ಹ್ಯಾಗೋ ! ಜಾಲಹಳ್ಳಿ, ಆಗರ, ನೀಲಸಂದ್ರ ಅಲ್ಲೆಲ್ಲ ಮಿಲಿಟರಿ ಏರಿಯಾದಲ್ಲೆಲ್ಲ ಇವನದೇ ಸಪ್ಲೈ.

ಇನ್ನೊಬ್ಬ ಯುವಕ: ಪರವಾಯಿಲ್ಲಯ್ಯ ಭೂಪ !

ಒಬ್ಬ ಯುವಕ: ಅವನ ತಮ್ಮನಿಗೆ ಇಲ್ಲೇ ಇನ್‌ಡಿಯನ್ ಇನ್‌ಸ್ಟಿಟ್ಯೂಟಿನಲ್ಲಿ, ಹೈ ವೋಲ್ಟೇಜ್ ಪವರ್ ಡಿಪಾರ್ಟಮೆಂಟಿನಲ್ಲಿ ಸೀಟು ಸಿಕ್ಕಿಬಿಡ್ತು....

ಇನ್ನೊಬ್ಬ ಯುವಕ: ಅಂತೂ ಅವರಪ್ಪನಿಗೆ ನೆಮ್ಮದಿಯಾಯ್ತು ಇನ್ನು. ಇಬ್ರನ್ನೂ ಹ್ಯಾಗಪ್ಪ ಓದಿಸೋದು ಅಂತ ಕಷ್ಟಪಡ್ತಿದ್ರು. ಕಣ್ಣೆದುರಿಗೇ ಇಬ್ರೂ ಮುಂದಕ್ಕೆ ಬಂದ್ರು.....

ನಿರೂಪಕ: ಬೆಂಗಳೂರೇ ತಮಗೆ ಶಾಶ್ವತ ಎಂಬ ನಂಬಿಕೆಯಲ್ಲಿ ಅಲ್ಲೇ ಮನೆಮಾರು ಗಳನ್ನ ಕಟ್ಟಿಕೊಂಡು, ಆಮೇಲೆ ಮಕ್ಕಳ ಜತೆಯಲ್ಲಿರಬೇಕೆಂಬ ಆಸೆಯಿಂದ ಊರೂರಿಗೆ ಹೋಗಿ ವಾಸಮಾಡಿ ನೋಡಿ, ಮತ್ತೆ ಇಲ್ಲಿಗೆ ಓಡಿ ಬರುವವರು ಬಹಳ ಮಂದಿ. ಎಲ್ಲಿಗೆ ಹೋದರೂ ಹಿಂದಕ್ಕೇ ಎಳೆಯುತ್ತೆ—ಈ ನೆಲ, ಈ ತಂಪು, ಈ ನೆಮ್ಮದಿ. ಎಂಥ ಕರಗಿದ ಮೈಗೂ ಇಲ್ಲಿದೆ ಪುಷ್ಟಿ. ಎಂಥ ಕದಡಿದ ಮನ ಸ್ಸಿಗೂ ಇಲ್ಲಿ ಸಿಗಬಹುದು ಶಾಂತಿ.

[ಗುಡಿಯ ಗಂಟೆಗಳ ಶಬ್ದ ದೂರದಲ್ಲಿ ಪ್ರಾರಂಭವಾಗಿ, ಸ್ವಲ್ಪ ಹತ್ತಿರವಾಗುತ್ತದೆ]

ದೇವರಲ್ಲಿ ನಂಬಿಕೆ ನಿಮಗಿರಬಹುದು—ಇಲ್ಲದಿರಬಹುದು. ಆದರೆ ನಂಬಿ ಪ್ರಾರ್ಥಿಸುವವರ ಕಡೆಗೊಮ್ಮೆ ನೋಡೋಣ ಬನ್ನಿ. ಬಸವನಗುಡಿಯ ಬಸ ವೇಶ್ವರ, ಗಂಗಾಧರೇಶ್ವರ ದೇವಾಲಯಗಳಲ್ಲದೇ ಅಲ್ಲಿ ನಾಲ್ಕಾರು ಸಣ್ಣ ಪುಟ್ಟ ದೇವಾಲಯಗಳು ಒಂದೇ ಗೊಂಚಲಾಗಿ ನಿಂತಿವೆ. ಮಲ್ಲೇಶ್ವರದ ಹಳೆಯ ಮಲ್ಲಿಕಾರ್ಜುನ ದೇವಾಲಯವನ್ನ ಬಿಟ್ಟು ಪಾರ್ಕ್ ರಸ್ತೆಗಳ ಕಡೆ ಬಂದರೆ, ಅಲ್ಲಿ ದೇವಸ್ಥಾನಗಳ ಒಂದು ಸಾಲು ಸಾಲೇ ಇವೆ. ಈ ಪ್ರವೇಶಗಳಿಗೆ ಬಂದು ಹೋಗುವ ಜನ — ಅವರೇನು ಐಶ್ವರ್ಯವಂತರಲ್ಲವೆಂದು ಕಾಣುತ್ತೆ. ಆದರೆ ಸಂಜೆ ಅವರು ಹೊರಟಿರುವ ಠೀವಿಯನ್ನ ನೋಡಿದರೆ — ನಡೆಯಲ್ಲಿ ಸ್ಥೈರ್ಯ ವಿದೆ, ಮಾತಿನಲ್ಲಿ ಗಾಂಭೀರ್ಯವಿದೆ, ಅವರ ಮುಖದಲ್ಲಿ ಗೆಲುವಿದೆ, ಕಣ್ಣಿನಲ್ಲಿ ಆಸೆಯು ಹೊಳಪಿದೆ ! ಜೀವನವನ್ನೆದುರಿಸಿ ಹೋರಾಡುವ ಚೈತನ್ಯ ಅವರಲ್ಲಿ ತುಂಬಿದೆ....ಅವರೆಲ್ಲ ಅದೇತರಲ್ಲೋ ಪೂರ್ಣತೃಪ್ತಿ ಹುಡುಕುತ್ತ ಹೊರಟಿರು ವಂತಿದೆ—ಇಲ್ಲವೇ ಪಡೆದ ತೃಪ್ತಿಗೆ ಕಾಣಿಕೆ ಅರ್ಪಿಸಲು ಹೊರಟಂತಿದೆ....

[ಗಂಟೆಗಳು ಸ್ವಲ್ಪ ಹೆಚ್ಚಾಗಿ, ಮತ್ತೆ ಹಿಂದೆ ಅಡಗುತ್ತವೆ.]

ಬರಿಯ ಅರ್ಪಣೆ ಮಾಡಿ ಕೈಮುಗಿದು ಬರುವವರಿಗಿಂತ, ಒಂದಿಲ್ಲ ಒಂದು ಉತ್ಸವ ಸಮಾರಂಭಕ್ಕಾಗಿ ಹೋಗಿ ಬರುತ್ತಿರುವವರ ಸಂಖ್ಯೆ ಹೆಚ್ಚು. ಅದ ರಲ್ಲೂ, ರಾಮನವಮಿಯಂಥ ಒಂದು ಉತ್ಸವವಾದರಾಯಿತು, ಊರಿನಲ್ಲಿ ಎಲ್ಲಾ ಲೌಡ್‌ಸ್ಪೀಕರುಗಳಿಗೂ ಸಂಗೀತ ಸುರಿಯುವುದೇ ಕೆಲಸ....

[ಲೌಡಸ್ಪೀಕರಿನಲ್ಲಿ ಸಂಗೀತ ಸ್ವಲ್ಪ ಕೇಳಿ ಬಂದು ಅಡಗುವುದು]

ಉತ್ಸವವಿರಲಿ ಇಲ್ಲದಿರಲಿ, ಈ ಶೈವ ವೈಷ್ಣವ ದೇವಾಲಯಗಳಲ್ಲೆಲ್ಲ ಜನ ತುಂಬಿದ್ದಾರೆ. ಹಾಗೇ ದಿಗಂಬರ ಶ್ವೇತಾಂಬರ ಜೈನ ದೇವಾಲಯಗಳಲ್ಲೂ ಜನ. ಕ್ವೀನ್ಸ್ ರಸ್ತೆಯ ಪಾರಸಿ ದೇವಾಲಯ, ಕೆನ್ನಿಂಗ್ಟನ್ ರಸ್ತೆಯ ಸಿಕ್ಖ್ ಗುರುದ್ವಾರಾ, ಎಲ್ಲೆಲ್ಲೂ ಆಯಾ ಪಂಥದ ಜನ ತುಂಬೇ ಇದ್ದಾರೆ.

[ರಾಮಕೃಷ್ಣಾಶ್ರಮದಲ್ಲಿ ಪ್ರಾರ್ಥನೆ — ಸ್ವಲ್ಪ ಕೇಳಿಸಿ ಬಂದು, ಹಿನ್ನೆಲೆಗೆ ಹೋಗುವುದು.]

....ಸರ್ವಧರ್ಮ ಸಮನ್ವಯಾಚಾರ್ಯ ಶ್ರೀ ರಾಮಕೃಷ್ಣ ಪರಮಹಂಸರ ಮಂದಿರದಲ್ಲಿ ಅರ್ಚನೆ—ಪ್ರಾರ್ಥನೆ ದಿನವೂ ನಡೆದಿರುತ್ತದೆ. ಅಲ್ಲೂ ಜನ ತುಂಬಿಯೇ ಇದ್ದಾರೆ....

[ಕಥಾಕಾಲಕ್ಷೇಪವೊಂದು ನಡೆಯುತ್ತಿದೆ — ಒಂದೆರಡು ವಾಕ್ಯಗಳು—ಅಥವಾ ಒಂದು ಸಾಲು ಹಾಡು ಮಾತ್ರ ಕೇಳಿ ಮರೆಯಾಗುವುದು.]

....ಒಂದು ಸಾವಿರ ಜನರಿರಬಹುದೇ, ಈ ಚಪ್ಪರದ ಕೆಳಗೆ? ಕಥಾವಸ್ತು 'ಲಂಕಾದಹನ'. ಅದೇ ರಾಮಾಯಣ !....

[ಭಾರತ ವಾಚನದ ಒಂದೇ ಸಾಲು ಕೇಳಿ ಬಂದು ಮರೆಯಾಗುತ್ತದೆ].

....ಪ್ರಾಯಶಃ ಇದು ಕನ್ನಡ ಸಾಹಿತ್ಯ-ಪರಿಷನ್ಮಂದಿರದಲ್ಲಿ ನಡೆಯುತ್ತಿರುವ ಸಮಾರಂಭ. ಅಲ್ಲೂ ತುಂಬಿದೆ, ಜನ. ಕೇಳಿದ ಭಾರತದ ಪರ್ವಗಳನ್ನೇ ಕೇಳುತ್ತದೆ ಮತ್ತೆ; ಅದೇ ಕುಮಾರವ್ಯಾಸ, ಅದೇ ಜನಮೇಜಯ—ಆದರೆ ಜನ ನಿಶ್ಶಬ್ದ.... ಒಂದಲ್ಲ ಒಂದು, ಪ್ರಾರ್ಥನಾಮಂದಿರವೇ ! ಒಂದೊಂದರ ಲ್ಲಿಯೂ ಒಂದೊಂದು ರೂಪದ ಪಾರಾಯಣವೇ....ದೊಡ್ಡ ದೊಡ್ಡ ಮಸೀದಿ ಗಳೇ ಇಪ್ಪತ್ತಿವೆ. ಸಣ್ಣ ಸಣ್ಣವು ಹಲವಾರಿವೆ, ಪ್ರಾರ್ಥನೆಯ ಸಮಯಕ್ಕೆ ಎಲ್ಲದರಲ್ಲಿಯೂ ಜನ ಕೂಡಿರುತ್ತಾರೆ....ಮೂವತ್ತರ ಮೇಲ್ಪಟ್ಟು ಅಂದವಾದ ಚರ್ಚುಗಳಿವೆ. ಭಾನುವಾರ ಬೆಳಗಾದರೆ, ವಾರದ ಬೇಸರವನ್ನೆಲ್ಲ ಬದಿಗಿಟ್ಟು, ಮಿನುಗುವ ಬಟ್ಟೆಬರೆ ಧರಿಸಿ ಸಾಲುಸಾಲಾಗಿ ಜನ ಬಂದು ಎಲ್ಲದರಲ್ಲೂ ತುಂಬುತ್ತಾರೆ....

ಪಾದ್ರಿ : [ನಿಧಾನವಾಗಿ, ಗಂಭೀರವಾಗಿ]

The Lord Jesus christ said,
Let not your heart
be troubled;
Ye believe in God,

believe also in Me.

Peace I leave with you
My peace
I give unto you;
Not as the world giveth
give I unto you.

Let not your heart
be troubled
neither let it be afraid.

[ಮತ್ತೆ ಗುಡಿಗಂಟೆಗಳ ಶಬ್ದ ಕೇಳಬಂದು, ಸ್ಪಷ್ಟವಾಗಿ, ಆದರೆ ಮೆದುವಾಗಿ ಹಿನ್ನೆಲೆಯಲ್ಲಿ ನೆಲೆಸುತ್ತದೆ]

ನಿರೂಪಕ : ಈ ಎಲ್ಲ ಪ್ರಾರ್ಥನಾಮಂದಿರಗಳಿರಲಿ, ಮನೆಯಲ್ಲೇ ಶುಚಿ ಜೀವನದ ಸುಲಭಪೂಜೆ ಮಾಡಿ ಸಮಾಜವನ್ನು ಬೆಳಗಿಸುವವರೂ ನಿಮ್ಮ ಕಣ್ಣಿಗೆ ಬಿದ್ದಾರು . . . ಯಾವ ದೈವವನ್ನೂ ಗುರುತಿಸದೆ ಸತ್ಯ, ಸೌಂದರ್ಯಗಳ ಆರಾಧಕರಾಗಿರುವ ಭಾವನಾಜೀವಿಗಳೂ ನಿಮ್ಮ ಕಣ್ಣಿಗೆ ಬಿದ್ದಾರು . . . . ಕಲೆಯ ದಾರಿ ಹಿಡಿದು, ಬೇರೆ ಯಾವ ಧರ್ಮದ ಯೋಚನೆಯನ್ನು ಮಾಡದೆ ತಮ್ಮನ್ನೂ ರಸಿಕರನ್ನೂ ದೈವಶಕ್ತಿಯ ಆಕರ್ಷಣೆಗೆ ಒಳಪಡಿಸುವ ಸಂಗೀತ, ನೃತ್ಯ, ನಾಟಕ, ಚಿತ್ರಕಲೆಗಳ ಉಪಾಸಕರನ್ನು ಬೆಂಗಳೂರಿನಲ್ಲಿ ಒಂದಲ್ಲ ಒಂದು ಕಡೆ ನೀವು ಕಾಣಬಲ್ಲಿರಿ .... .

[ ಘಂಟಾನಾದ ಸ್ವಲ್ಪ ಹೆಚ್ಚಾಗಿ ಕ್ರಮೇಣ ಹಿನ್ನೆಲೆಗೆ ಹಿಂತಿರುಗುತ್ತದೆ. ]

ಈ ಎಲ್ಲ ದೇವಾಲಯಗಳಿಂದ, ಇವರೆಲ್ಲ ಉರಿಸುವ ನಂದಾದೀಪಗಳ ಪ್ರಭೆಯಿಂದ, ಯಾರೂ ಗುರುತಿಸದೆ, ಯಾರ ಕಿವಿಗೂ ಬೀಳದೆ, ಯಾರ ಹಂಗಿಗೂ ಕಾಯದೆ, ಏಳುತ್ತಲಿರಬೇಕು, ಒಂದು ಆಶೀರ್ವಚನ.... . . .

[ ಘಂಟಾನಾದ ಬಹಳ ದೂರವಾಗಿ, ವೀಣೆಯಲ್ಲಿ ಶ್ರೀ ರಾಗದ ತಾನ ಕೇಳಿ ಬರುತ್ತದೆ. ಅದೂ ಕ್ರಮೇಣ ಹಿನ್ನೆಲೆಯಲ್ಲಿ ಉಳಿಯುತ್ತದೆ. ]

ಒಂದು ಗಂಭೀರವಾಣಿ : ಶಾಂತಿ ನಗರವೇ, ಜಯವಾಗಲಿ ನಿನಗೆ. ಚಿರಾಯುವಾಗಿರು ನೀನು, ಚಿರನೂತನವಾಗಿರು. ಪುರಾತನ ಆಧುನಿಕ, ಎರಡು ಜೀವನಮಾರ್ಗಗಳೂ ಕೂಡಿ ಬೆರೆಯಬಲ್ಲವೆಂಬ ಸತ್ಯವನ್ನು ನೆರೆಯ ಜನರಿಗೆ ಹೀಗೆ ರೂಢಿಸಿ ತೋರಿಸುತ್ತಿರು. ಹತ್ತಾರು ಭಾಷೆಗಳ, ಹತ್ತಾರು ವೇಷ ಭೂಷಣಗಳ, ಹತ್ತಾರು ಭಿನ್ನ ನಂಬಿಕೆಗಳ ಜನರ ಸಹಬಾಳ್ವೆ, ಶಾಂತಿಜೀವನದ ಆದರ್ಶವನ್ನು ಹೀಗೇ

ಜಗತ್ತಿಲ್ಲಿ ಕೇಳುವಂತೆ ಮೊಳಗುತ್ತಿರು. ನಿನ್ನ ಪೌರರಲ್ಲಿ ಕಾಣುವ ಅವಿಶ್ರಾಂತತೆ ಕ್ರಿಯಾಸ್ಫೂರ್ತಿಗಳು ನಮ್ಮ ಹೊಸನಾಡ, ಹೊಸ ಸಮಾಜದ, ನಿರ್ಮಾಣಕ್ಕೆ ಕಾಣಿಕೆಯಾಗಲಿ. ನಿನ್ನ ಒಡಕು ಬಿರುಕು ಅಪಸ್ವರಗಳೇನಿದ್ದರೂ ಕ್ಷಣಿಕವಾದವೆನ್ನು ವವನ್ನು ತೋರಿಸಿ, ನಿನ್ನ ನಿಜ ಪ್ರತಿಭೆ ಶಾಶ್ವತವಾದುದೆನ್ನುವುದನ್ನು ಸಾರುತ್ತಿರು. ನೀನು ಬೆಳಗಿ ಒಡೆಯ ನಾಡನ್ನು ಬೆಳಗಿಸು. ಚಿರಾಯುವಾಗು.... ಚಿರನೂತನ ವಾಗು.....

[ವೀಣಾನಾದ ಮೊರೆಯುತ್ತ ಬಂದು ಕೊನೆಯ ಒಂದೆರಡು ಪದಗಳನ್ನು ಆವರಿಸಿ ಕೊಳ್ಳುತ್ತದೆ. ಸಂಗೀತ ಕ್ರಮೇಣ ಹಿನ್ನೆಲೆಗೆ ಸರಿಯುತ್ತಿರುವಂತೆಯೇ .... ]

ನಿರೂಪಕ : ಊರನ್ನು ಹೊಕ್ಕು ತೋರಿಸುವುದಕ್ಕಾಗಿ ನಿಮ್ಮನ್ನಿಲ್ಲಿ ಕರೆತಂದ ನನ್ನ ಕೆಲಸ ಇಲ್ಲಿಗೆ ಮುಗಿಯಿತು. ಕನ್ನಡಮಿತ್ರರೆ, ಎಲ್ಲೆಲ್ಲಿ ಕುಳಿತು ನೀವು ಕೇಳುತ್ತಿರು ವಿರೋ, ಅಲ್ಲಲ್ಲಿಗೇ ಇದೋ – ನಮೋ ನಮಃ !

# ಚೇಳು! ಅಜ್ಜಾ! ಚೇಳೂ!!

ಪಾತ್ರಗಳು :

ನರಸೇಗೌಡ: ಕುರುಡ, ವೃದ್ಧ. ವಯಸ್ಸು ೭೦.

ಲಚ್ಮಕ್ಕ: ನರಸೇಗೌಡನ ಮಗಳು, ವಯಸ್ಸು ೩೦.

ರಂಗು: ಲಚ್ಮಕ್ಕನ ಮಗ, ವಯಸ್ಸು ೧೦.

ರಂಗುವಿನ ಸ್ನೇಹಿತರು : ಸಮ ವಯಸ್ಕರು.

[ ದೃಶ್ಯ ೧ ]

[ ಸ್ಥಳ : ರಾಮನಗರ. ಬಡಜನರು ವಾಸಮಾಡುವ ಒಂದು ಕುಟೀರ. ನರಸೇಗೌಡ, ಲಚ್ಮಕ್ಕ ಮಾತನಾಡುತ್ತ ಕುಳಿತಿರುವರು. ಸಮಯ ಸಂಜೆ. ]

ಲಚ್ಮಕ್ಕ : ಅಪ್ಪಾ, ಇನ್ನೇಸು ದಿನ ಇಂಗೆ ಕೊರಗ್ತಿರ್ತೀಯಾ....ಅನ್ನ ನಿದ್ದೆ ಬಿಟ್ಟು. ಸತ್ತೋದೋರು ಇಂದಕ್ಬರೊ ಅಂಗಿದ್ರೆ ಏಟು ದಿನ ಆದ್ರೂ ಕೊರಗ್ಬೋದೇಳು. ನಿನಗೂ ಆದ್ರೆ ನನ್ನ ಬೆನ್ನಾಗುಟ್ಲಿಲ್ವೆ ಔನು? ನನಗಿಲ್ವೆ ದುಖ್ಖ? ಮದ್ವೆ ಆಗಿ ಬಾಳಿ ವಂಶಕ್ಕೊಂದು ಕಡ್ಡೀನಾದ್ರೂ ಉಳಿಸ್ಬಿಟ್ಟೋದ್ನಾ ಅವನು? ಯಾಕೆಲ್ಲಾ ಎಷ್ಟೆಷ್ಟೇಳಿದ್ರೂ ಕೇಳಿದ್ನಾ? ನಾನೂ ಕೈ ಇಡ್ಕೊಂಡು ಕೇಳ್ಕೊಂಡೆ 'ತಮ್ಮಯ್ಯಾ ಲಗ್ನ ಮಾಡ್ಕೊ' ಅಂತೇಳಿ. ಅವನ್ಮನಸಿಗ್ಬರ್ಲಿಲ್ಲ....ಹುಂ ಮದ್ವೆ ಮಾಡ್ಕೊಳ್ದಿದ್ದದ್ದೇ ಒಳ್ಳೇದಾಯ್ತೇಳು. ಸದ್ಯ ಆವಳ್ಗೋಳ್ನ ಎಂಗ್ನೋಡ್ಕೋಕಾಯ್ತಿತ್ತು?

ನ. ಗೌಡ : ಅದೆಲ್ಲಿ ಕಾದಿತ್ತು ಲಚ್ಮಿ ಅವನ್ಗೆ ಆ ಸಣ್ಣೆ ಜರ. ಮೂರೇ ದಿನ ಬೀಮ್ನಂಗಿದ್ದೋನು ಕಣ್ಮುಚ್ಕೊಂಬುಟ್ಟ. ನನ್ನನ್ಯಾಕಿರಿಸ್ಬಿಟ್ಟೋದ ಯಮ ಈ ಎಳ್ಡು ಕಣ್ಣೂ ಕಾಣ್ದಿದ್ದೋನ್ನಾ? ಅಯ್ಯೊ! ಅವನಿದ್ದು ನಾನೋಗಿದ್ರೆ ಎಷ್ಟು ಸಂದಾಕಿರ್ತಿತ್ತು. ನಾನಲ್ವೆ ಓಗ್ಬೇಕಾಗಿದ್ದೋನು? ನನ್ನನ್ಯಾಕಿರಿಸ್ಬಿಟ್ಟೋಯ್ತು ಸಾವು?

ಲಚ್ಮಕ್ಕ : ಅಪ್ಪಾ ಬಾ ಅಂದ್ರೆ ಬರ್ತದಾ? ಓಗು ಅಂದ್ರೆ ಓಯ್ತದಾ? ಅದು. ಅವರವ್ರ ಕರ್ಮ ಸವೀಬೇಕಲ್ವಾ? ಅಪ್ಪಾ ನೀನಿನ್ನು ಮಾಗಡೀಗೋಗೊ ಯೋಚ್ನೆ ಮಾಡ್ಬೇಡ. ಯಾರವ್ರೆ ನಿನಗಿನ್ನಲ್ಲಿ? ಒಲಾನೆಲ್ಲ ಯಾರ್ಗಾದ್ರು ವಾರಕ್ಕೊ ಗುತ್ಗೇಗೊ ಕೊಟ್ರೆ ಆಯ್ತೇಳು. ಬಂದಷ್ಟು ಬರಲಿ. ಇರಿಯರ್ಕಟ್ಟಿದ್ಮನೇಂತ ನಿನ್ಗೆ ಮನಸ್ಕೊರಗಿದ್ರೆ ಯಾರಾದ್ರೂ ಬಡವ್ರು ದೀಪ ಅಚ್ಕೊಂಡಿರ್ತೀವಿ ಅಂಬೋರ್ಗೆ ಕೊಟ್ಬಿಡೋಣ. ಇನ್ನಮಗ್ಯಾರವ್ರೆ ಅಲ್ಲಿ? ನೀನಿಲ್ಲೇ ಇದ್ರೆ ನಮ್ಗೂ ಮನ್ಯಾಗೊಂದು ದೊಡ್ಡ ಜೀವಾಂತ ನೆಮ್ಮದಿ ಇರ್ತೈತೆ. ಅವ್ರೂ ಅಂಗೇ ಏಳಿದ್ರು 'ನಿಮ್ಮಪ್ಪನ್ನ ಇಲ್ಲೇ ಇರಿಸ್ಕೊಂಬಿಡು. ಒಲ ಕುಯ್ಲು ಎಲ್ಲಾ ಮುಗಿದ್ಮೇಲೆ ಬೆಂಗಳೂರ್ಗೆ ಕರ್ಕೊಂಡೋಗಿ ಕಣ್ಣಾಸ್ಪತ್ರೇಲಿ ಕಣ್ಣಿನ್ಪೊರೇನ ತೆಗಿಸ್ಬಿಡೋಣಾಂತ.......'

ನ. ಗೌಡ : ಅಯ್ಯೋ ನನಗಿನ್ನ ಕಣ್ಣೇಕೆ ಮಗಾ; ಕಣ್ಗೊಳ್ಗಿಂತ ಎಚ್ಚಾಗಿದ್ದೋನ್ನ ಕಳ್ಕೊಂಡ್ಮ್ಯಾಕೆ? ಇಂಗೇ ಉಡುಗೋಗ್ಲಿ ಈ ಪಾಪಿ ಜೀವ. ಇನ್ನೆಷ್ಟು ಕರ್ಮ ಸವೀಬೇಕೋ! ಎಂಗೆ ಪೂರೈಸ್ತದೊ?

ಲಚ್ಮಕ್ಕ : ಅಪ್ಪಾ ನಿನಗೀ ಮುಪ್ಪಾಗ....ಈ ದುಃಖದಾಗ ವಿರಾಗ ಬರೋದೆ ಸೈ. ಎಂಗೊ 'ರಾಮ' 'ಕಿಷ್ಣ'....'ಶಿವಾ' ಅಂತ ದಿನಾ ಕಳೀಬೇಕಲ್ವ?

ನ. ಗೌಡ : ಎಂಗೊ ಎಂತೊ ಶಿವ ಬೇಗ್ನೆ ಕಣ್ಮುಚಿಸಿದ್ರೆ ಸಾಕು. ಕಣ್ಣಿಲ್ಲ ಜೀವ ನಂದು. ನಿಮ್ಗೆಲ್ಲಾ ಏಸು ತೊಂದ್ರೇನೊ ಏನೊ?

ಲಚ್ಮಕ್ಕ : ಐ! ಬುಡು....ಅದ್ಯಾಕಂಗಂದೀಯ ಅಪ್ಪಾ! ನಿನಗೀ ಮುಪ್ನಾಗ ಸೇವೆ ಮಾಡೋದು ನಮಗೊಂದ್ಭಾಗ್ಯ ಅಲ್ವಾ? ನಾವಿನ್ನೆನ್ಮಾನೆ ಮಾಡೇವು ನಿನ್ಗೆ?

ನ. ಗೌಡ : ಓಗ್ಲಿ ಅದು....ಚಿಕ್ಕೋನೆಲ್ಲಿ. ಇಸ್ಕೂಲಿಂದ ಈವತ್ತು ಊಟಕ್ಬರ್ನಿಲ್ವಾ?

ಲಚ್ಮಕ್ಕ : ಯಾಕ್ಬರ್ನಿಲ್ಲಾ! ಬಂದಿದ್ನಲ್ಲಾ. ಇಸ್ಕೂಲಿಂದ ಬಂದೋನು ಊಟ ಮಾಡಿ ಇಸ್ಕೂಲಲ್ಲಿ ಸರ್ಸೋತಿ ಪೂಜೇಂತ ನನ್ನತ್ರ ಎಲ್ಡಾಣೆ ಗಿಲ್ಟುಕೊಂಡೋದ. ಇನ್ನೇನು ಇಸ್ಕೂಲ್ಬಿಡೊ ಒತ್ತು........ಕಾಪೀಂತ ಓಡ್ಬರ್ತಾನೆ. ಮನ್ಯಾಗಿದ್ದಾ ಲ್ನೆಲ್ಲಾ ಆ ಕರೇ ಮಾಳ ಉರುಳ್ಸಿ ಕುಡ್ದೋಗ್ಬಿಡ್ತು. ಅಲಕ್ಕನ ಮನ್ಯಾಗೂ ಇನ್ನ ಆಲು ಸಿಕ್ತೈತೊ ಇಲ್ವೊ....ಓಗ್ಬರ್ತೀನಿ. ಅಷ್ಟ್ರಲ್ಲೆ ಅವನು ಇಸ್ಕೂಲಿಂದ ಬಂದ್ರೆ ಅವನ್ಗೇಳು 'ಒಲೆ ಅತ್ರ ತಾಟ್ನಾಗ ರೊಟ್ಟಿ ಇಟ್ಟೀನ್ನಿ. ತಿಂದ್ಬಿಟ್ಟೋಗ್ಲಿ ಆಡ್ಕೋಣಾಕೆ. ಅಲ್ಲಾ ದಿನ್ದಿನಾನೂ, ಇವತ್ತು ಸರ್ಕಸ್ಸು....ಇವತ್ತು ನಾಟ್ಕ.... ನಾಳೆ ಸಿನೀಮ....ಇನ್ನೊಂದಿವ್ಸ ಯಕ್ಷಿಣೀಂತ ಎಲ್ಡಾಣೆ....ನಾಲ್ಕಾಣೆ ಗಿಲ್ಟು ಕೊಂಡು ಓಯ್ತಾನೆ. ಪುಸ್ತಕಳ್ದೋಯ್ತು, ಒಸ ಪುಸ್ತಕೊಂಡ್ಕೋಬೇಕು ಅಂತೇಳಿ ರೂಪಾಯಿ ರೂಪಾಯಿ ಇಸ್ಕೋಂಡೊಯ್ತಾನೆ. ಏನ್ ಲೆಖ್ಖಾ ಶಾರಾನೇ ಇಲ್ಲಾ ದುಡ್ಡು. ಇಂಗೆ ದುಡ್ಸುರ್ದ್ದು ದುಡ್ಸುರ್ದ್ರೆ ಇವರ್ಗೆ ಇದ್ಯಾ ಏಳಿಸ್ಬೇಕಂದ್ರೆ ಮುಂದಕ್ಕೆ ಒಲ, ಮನೆ ಎಲ್ಲಾ ಮಾರ್ಬಿಡಬೇಕಾಯ್ತದೆ. ಈ ಉಡುಗನ್ಗೆ ಸ್ನೇಯಿತ್ರೂ ಬಾಳ ಆಗೋದ್ರು. ಮನ್ಯಾಗೇ ಸೇರೋದಿಲ್ಲ. ಪುಸ್ತಕ ಇಡ್ಕೊಂಡು ಕುತ್ಕೊಳ್ಳೋದೇ ಅಪ್ರೂಪ ಆಗೋಯ್ತು. ಇವ್ರಂತೂ ಏನೂಂತ ಕೇಳೋದಿಲ್ಲ. ಅವನು ಆಡಿದ್ದೆ ಆಟ ಆಗೋಗ್ಬಿಟ್ಟೈತೆ.

ನ. ಗೌಡ : ಇನ್ನೂ ಆಡೋ ಮಗಾ ಅಲ್ವಾ ಅದು. ಇಂಗೇ ನಿಧಾನ್ವಾಗಿ ಬುದ್ಧಿ ಬರ್ಬೇಕು....ಬರ್ತೈತೆ. ಸಿಟ್ಮಾಡ್ಕೊಂಡ್ರೆ ಆಯ್ತುದಾ? ಒಳ್ಳೆ ಮಾತ್ನಲ್ಲೆ ಏಳ್ಬೇಕು. ನಾನೇಳ್ತಿದ್ದೆ....ಆದ್ರೆ ನನ್ನತ್ರಕ್ಕೇ ಬರೊಲ್ಲ ಅವನು. ಕರದ್ರೂ ಬರೊಲ್ಲ. ದೂರ್ದಲ್ಲೇ ನಿಂತ್ಕೊಂಡು ಜವಾಬ್ ಕೊಡ್ತಾನೆ ಒರ್ತು ಅತ್ರ ಬರೊಲ್ಲ. ಏನೊ' ಶಿವ ಅವನ್ನಾದ್ರೂ ಕೊಟ್ಟವನಲ್ಲ. ಅವನೇ ಎಲ್ಲಾನೂ ಇನ್ಮೇಗೆ ನಂಗೆ.

ಲಚ್ಮಕ್ಕ : ಅಪ್ಪಾ ಅವನೂ ಒಂದೇ ಕಣ್ಣು ನಮ್ಗೆ. ಎರ್ಗೆ ಎಷ್ಟೊಂದು ಕಷ್ಟಾಯ್ತು ಅಂತ ಗೊತ್ತೈತಲ್ಲ ನಿಂಗೆ. ಆಸ್ಪತ್ರೇಲಿ ಎತ್ತಿದ್ದಲ್ವಾ ಅವನ್ನ. ಡಾಕ್ಟ್ರು ಏಳ್ಬಿಟ್ರು ಆ ದಿನಾನೆ 'ಲಚ್ಮಕ್ಕ ಚನ್ನಾಗ್ಕಾಪಾಡ್ಕೋ ಈ ಮಗಾನ. ಇನ್ಮೇಗೆ ನಿಂಗೆ ಮಕ್ಕಳು ಆಯೊಕಿಲ್ಲಾಂತ.'

ನ. ಗೌಡ : ಶಿವ ಕೊಟ್ಟಷ್ಟೆ ಸಾಕು. ಒಳ್ಳೆ ರತ್ನ ಒಂದಿದ್ರೆ ಸಾಲ್ದಾ? ಅದ್ನೆ ಜೋಪಾಣ ಪಡಸ್ಕೊಂಡ್ರೆ ಸರಿ.

ಲಚ್ಮಕ್ಕ : ಅದೆಂಗೆ ಜೋಪಾನ ಮಾಡ್ಕೊಳ್ಳೋದೊ ನಾಕಾಣೆ....ಉಂ....ಆಲಕ್ಕನ ಮನೇಗೊಗ್ಬರ್ತೀನಿ. ಅಷ್ಟುಲ್ಲಿ ಮಗ ಬಂದ್ರೆ 'ರೊಟ್ಟಿ ತಿನ್ಬಿಟ್ಟು ಓಗೂ !, ಅಂತೇಳು.

ನ. ಗೌಡ : ಯೋಳ್ತೀನಿ.

[ ರಂಗು ಶಾಲೆಯಿಂದ ಬಂದ. ( ಸರಸರನೆ ಬಂದ ಶಬ್ದವಾಗುವುದು ) ಬಂದವನು ಪುಸ್ತಕಗಳ ಕಟ್ಟನ್ನು ರಪ್ಪನೆ ಮೂಲೆಯಲ್ಲಿ ಸೆದು, ]

ರಂಗು : .... ಯಮ್ಮಾ ....ಮ್ಮಾ.... ಅಸಿವಾಯ್ತದೆ .... ನಾನು ಆಟಕ್ಕೋಗ್ಬೇಕು.

ನ. ಗೌಡ : ಯಾರದು ರಂಗೂನಾ ?

ರಂಗು : ಔದಜ್ಜಾ— ಅಮ್ಮ ಎಲ್ಗೋಗವ್ಳೆ ?

ನ. ಗೌಡ : ಮಠ ಈಟೊತ್ಗೇ ಮುಗಿದೋಯ್ತಾ ?

ರಂಗು : ಮುಗೀದೆ ಏನ್ಮತ್ತೆ ? ಐದ್ಗಂಟೆ ಯಾವಾಗ಼್ೋ ಆಗೋಯ್ತು. ನಿಂಗೆಂ ಗೊತ್ತಾಯ್ತುದೆ. ಪಾಪ .... ಎಳ್ಡು ಕಣ್ಣೂ ಇಲ್ಲ.

ನ. ಗೌಡ : ಔದ್ಮಗ. ಶಿವ ನನ್ಕಣ್ಣೂ ಕಿತ್ಕೊಂಡ. ಜೀವ್ನಾನೂ ಕಿತ್ಕೊಂಡ.

ರಂಗು : ಯಜ್ಜ ನಿಂಗೆ ಕಣ್ಣು ಸುತ್ರಾಂ ಕಾಣಾಕಿಲ್ವ ?

ನ. ಗೌಡ : ಸುತ್ರಾಂ ಕಾಣಾಕಿಲ್ಲ ಮಗ. ನೀನೆಂಗಿದ್ದೀಯೊ ಕಾಣ್ದಾಂಗಿದ್ದೇನಪ್ಪ. ನಂಗೆ ಅಗ್ಲು ಒಂದೆ ರಾತ್ರೀನೂ ಒಂದೆ.

ರಂಗು : ಯಜ್ಜ ನಾನು ನಿನ್ನತ್ರ ಬಂದು ನಿಂತ್ರೇನೂ ತಿಳಿಯಾಕಿಲ್ವ ನಿಂಗೆ ?

ನ. ಗೌಡ : ತಿಳಿಯಾಕಿಲ್ಲ ಮಗ. ನನ್ಕಯ್ಯೇ ನನಿಗ್ಕಾಣಾಕಿಲ್ಲ.

ರಂಗು : ಅಯ್ಯೋ ಪಾಪ ! ನಿಂಗೆ ಬಲು ಕಷ್ಟ ಅಲ್ವಾ ಇಂಗಿರೋದು ?

ನ. ಗೌಡ : ಏನ್ಮಾಡೋಕಾಯ್ತದೆ ಮಗ. ನಾನ್ಕೇಳಿ ಬಂದ ಪುಣ್ಯ ಅಷ್ಟೆ. ನೀನು ದಿನಾ ಬಂದು ತಾತ್ನತ್ರ ಒಂದೆಲ್ಡು ನಿಮ್ಸ ಮಾತಾಡಿದ್ರೆ ನಂಗೆ ಏಸ್ಟು ಸಂತೋಸ ಆಯ್ತದೆ ಮಗ !

ರಂಗು : ಅಂಗೇ ಆಗ಼್ೇಳು. ಅದ್ಕೇನಂತೆ? ಅಮ್ಮ ಎಲ್ಹೋದ್ಲು ?

ನ. ಗೌಡ : ನಿನ್ನವ್ವೆ ಒಲೆ ಅತ್ರ ತಾಟ್ನಾಗ ರೊಟ್ಟಿ ಮುಚ್ಚಿ ಮಡ್ಗ್ಯಾಳೆ. ನೀನ್ಬಂದ್ರೆ ಯೇಳೂ ಅಂದಿದ್ಳು. ಉಂಡ್ಬಿಟ್ಟು ಆಟಕ್ಕೊಗ್ಮಗಾ.

ರಂಗು : ಕಾಪಿ ಮಾಡಿಟ್ಟಿಲ್ವಾ ?

ನ. ಗೌಡ : ಆಲು ಮಾಳ ಕುಡ್ದೋಯ್ತು. ಅದ್ಕೆ ಆಲಕ್ಕನ ಮನೇಗೋಗವ್ಳೆ ಆಲ್ ತರಾಕೆ. ಸಿಕ್ಲಿಲ್ಲಾಂತ ಕಾಣ್ತೈತೆ. ಓಗ್ಲಿ ರೊಟ್ಟಿ ತಿಂದು, ನೀರ್ಕುಡ್ದು ಓಗು. ನಾಳೆಯಿಂದ ಕಾಪಿ ಮಾಡ್ಸಿಟ್ಟಿರತೀನಿ ಮಗ್ಗೆ.

ರಂಗು : ಅಂಗೇ ಆಗ್ಲಿ ಯಜ್ಜ.

[ರಂಗು ರೊಟ್ಟಿಯನ್ನು ತಿಂದು ಮುಗಿಸಿದ. ತಿನ್ನುತ್ತಿರುವಾಗ ಅವನ ತಲೆಯಲ್ಲಿ ಏನೇನೋ ಯೋಚನೆಗಳು ಹೊಳೆದುವು. ತಿಂದುಬಿಟ್ಟು ಸ್ವಲ್ಪವೂ ಸದ್ದು ಮಾಡದೆ ನಡೆದು ಬಂದು ಅಜ್ಜನ ಎದುರಿನಲ್ಲಿ ನಿಂತ. ಸದ್ದು ಮಾಡದೆ, ಕೂತಿದ್ದ ಗೌಡನ ಸುತ್ತಲೂ ನಡೆದು ಮತ್ತೆ ಗೌಡನ ಎದುರಿನಲ್ಲಿ ನಿಂತ. ತನ್ನ ಮುಖವನ್ನು ಗೌಡನ ಮುಖದ ಬಳಿಗೇ ಕೊಂಡು ಹೋದ. ಗೌಡನ ಕಣ್ಣುಗಳಲ್ಲಿ ತನ್ನ ದೃಷ್ಟಿಯನ್ನು ನೆಟ್ಟು ನೋಡಿದ. ಕೊನೆಗೆ ರಂಗುವಿಗೆ ನಿರ್ಧಾರವಾಯಿತು, ಅಜ್ಜನಿಗೆ ಸುತರಾಂ ಕಣ್ಣು ಕಾಣುವದಿಲ್ಲವೆಂದು. ಅಷ್ಟರಲ್ಲಿ ಗೌಡ ಗಟ್ಟಿಯಾಗಿ ಕೂಗಿ ಕೇಳಿದ. ]

ನ. ಗೌಡ : ಮಗಾ ರೊಟ್ಟಿ ತಿಂದಾಯ್ತಾ ? ಇಕಾ ಕಾಪಿ ಕುಡೀಬೇಕೆಂದಿದ್ರೆ ನಾನು ಕಾಸು ಕೊಡ್ತೀನಿ. ಓಟ್ಲಾಗ್ಕುಡ್ದ್ಕೋಗು.

[ ರಂಗು ತಕ್ಷಣವೇ ದೂರಕ್ಕೆ ಓಡಿ ಹೋದ. ಅಲ್ಲಿ ನಿಂತು ]

ರಂಗು : ಅಂ. ಏನಂಪೆ ಯಜ್ಜ. ಇದೋ ಬತ್ತೀನಿ. ಎಳ್ಡಾಣೆ ಸಾಕಜ್ಜಾ.

[ ರಂಗು ಅಜ್ಜನ ಬಳಿಗೆ ಬಂದು, ಅತಿ ಭಯ ಪಟ್ಟ ಧ್ವನಿಯಲ್ಲಿ ಹೇಳಿದ ]

ರಂಗು : ಅಯ್ ಯಜ್ಜಾ ! .... ಕದಲ್ಬೇಡ....ಕದಲ್ಬೇಡ. ಚೇಳೊಂದು ಕುಂತೈತೆ ನಿನ್ನ ಬಲದ ಬುಜದ ಮ್ಯಾಗೆ....ಕದಲ್ಬೇಡ....ಅಂಗೇ ಇರು ಯಜ್ಜಾ.

ನ. ಗೌಡ : ( ಭಯದಿಂದ ) ಮಗಾ....ಮಗಾ ! ....ಅದ್ನ ಆಚೆಗ್ತಳ್ಳೊ....ಜಜ್ಜಾಕು ಜಜ್ಜಾಕೂ.

ರಂಗು : ಅಜ್ಜ, ನೀ ಸುಮ್ನಿರು....ಎದರ್ಬೇಡ....ಅಗೋ ! ಅಯ್....ನಿನ್ನ ತೊಡೇ ಮೇಕೆ ಇಳಿದು ಬಂತು. ಚಿಕ್ಕದು ಅಜ್ಜ....ಮರಿ....ಪಾಪ ಸಣ್ಮರಿ.

ನ. ಗೌಡ : ಆವೂ, ಚೇಳೂ ಚಿಕ್ಕಾದ್ರೆ ಏನು ? ದೊಡ್ಡಾದ್ರೆ ಏನು ? ಜಜ್ಜಾಕು.... ಅಯ್ಯೋ....ಕಡಿದ್ಬುಡ್ತೈತಲ್ಲಾ....ಮೊದ್ಲು ಜಜ್ಜಾಕು ಮಗಾ !

[ ರಂಗು ಅಲ್ಲಿಯೆ ಬಿದ್ದಿದ್ದ ಯಾವದೊ ಹಳೆಯ ಪುಸ್ತಕದಿಂದ ಅದನ್ನು ಅಜ್ಜನ ತೊಡೆಯ ಮೇಲಿಂದ ನೆಲಕ್ಕೆ ಗುಡಿಸಿ, 'ಪಟಪಟ'ನೆ ನೆಲದ ಮೇಲೆ ಪುಸ್ತಕದಿಂದ ಬಡಿದು ಶಬ್ದ ಮಾಡಿ...]

ರಂಗು : ಸತ್ತೋಯ್ತು ಅಜ್ಜಾ....ಅಜ್ಜಬಜ್ಜಿ ಆಗೋಯ್ತು.

ನ. ಗೌಡ : ( ಭಯದಿಂದ ನಡುಗುತ್ತಿದ್ದ ಧ್ವನಿಯಲ್ಲಿ ) ಕೊಂದ್ಬಿಡು ಮಗಾ ಚೆನ್ನಾಗಿ ಕೊಂದ್ಬಿಡು.

ರಂಗ : ಇನ್ನೆಲ್ಲೈತೆ ಅದು ! ಚಟ್ಣಿಆಗೋಯ್ತು.

ನ. ಗೌಡ : ಆಟಾಗೋಗ್ಲಿ ಅದು. ನೀನೊಳ್ಳೆ ಮಗೆ.... ಇಕ ಇಡಿ ( ನರಸೇಗೌಡ ತನ್ನ ಬಳಿಯಲ್ಲೆ ಯಾವಾಗಲೂ ಇಟ್ಟುಕೊಂಡಿರುತ್ತಿದ್ದ ಹಣದ ಚೀಲವನ್ನು ಬಿಚ್ಚಿ)..(ಆಣೆ, ಪಾವಲಿಗಳ ಸದ್ದು) ಇಕಾ .... ಎಲ್ಡಾಣೆ. ಓಗು ಮಗ ಜಿಲೇಬಿ. ಕೊಂಡ್ಕೊಂಡು ತಿನ್ನೋಗು....ಅಬ್ಬ! ಈವತ್ತು ನನ್ಜೀವ ಉಳ್ಕೊಂಡ್ತು.

ರಂಗು : ಕೊಡಜ್ಜ. ( ಇಸುಕೊಂಡು ) .... ಓಯ್ತೀನಜ್ಜ....

[ Musical gap for 3 Seconds] [ ರಂಗು ಉಲ್ಲಾಸದಿಂದ ಹಾಡುತ್ತಾನೆ]

ಬೆಕ್ಕಿನ್ಮ್ಯಾಲೊಂದ್ಗೋಣಿ ಹೇರಿಕೊಂಡಿಲೀ ಸತೆಂಗೆಹೊಂಟಿತ್ತು.
ಗೌಡನ್ಮ್ಯಾಲೊಂದ್ಕೋಳಿ ಕುಂತು ಕೊಂಡ್ಹಾಳಿ ಸವಾರಿ ಹೊಂಟಿತ್ತು.

[ ಹಾಡಿದ ನಂತರ ] ಅಲ್ಲಾ ಈಟು ದೊಡ್ಡ ದೈಯ್ಯಾ ಇದ್ದಂಗೆ ಇದ್ದಾನೆ ಈ ಯಜ್ಜಾ. ಒಂದ್ಸೇಳ್ಮರಿ ಅಂದ್ರೆ ಇಂಗೆ ಎದರಿ ಬೀಳ್ತಾನಲ್ಲಾ....ಇನ್ಮೇಲ್ಕೈತೆ ಅಬ್ಬ ನಂಗೆ. ಕಾಸು ಮೋಸ್ತಾಗದೆ ಮುದಕ್ನತ್ರ.... ( ಪುನಃ ಹಾಡುತ್ತಾ ಹೊರಟು ಹೋಗುತ್ತಾನೆ )

Musical Bridge

[ Announce ಒಂದು ವಾರ ಕಳೆಯಿತು. ರಂಗುವು ಅವನ ಇಬ್ಬರು ಸ್ನೇಹಿತರು ಶಾಲೆಯಿಂದ ಮನೆಗೆ ಬರುತ್ತಾ ದಾರಿಯಲ್ಲಿ ಉಡುಪಿ ಹೋಟಲೊಂದರಲ್ಲಿ ಇತರ ಮಿಠಾಯಿ ಸಾಮಾನುಗಳ ನಡುವೆ, ತಟ್ಟೆಯಲ್ಲಿ ಪೇರಿಸಿಟ್ಟಿರುವ ಲಾಡು ಉಂಡೆಗಳನ್ನು ನೋಡಿ, ಅವರಿಗೆ ಬಾಯಲ್ಲಿ ನೀರೂರುತ್ತದೆ. ]

ಒಬ್ಬಹುಡುಗ : ಲೆ ರಂಗ ನೋಡೊ ಈವತ್ತು ಓಟ್ಲನಾಗ ಲಾಡು ಉಂಡೆ ಮಾಡಿ ಪೇರ್ಸಿ ಇಟ್ಟವ್ರೆ. ಎಷ್ಟು ಶೆಂದಾಗವೊ ! ತಿನ್ಬೇಕೂಂತ ಆಶೆ ಆಯ್ತದೆ. ಏನ್ಮಾಡೋಣೊ ?

ಇನ್ನೊಬ್ಬ : ನನ್ನತ್ರ ಒಂದಾಣೆ ಐತೆ, ನಿನ್ನತ್ರ ಏನೈತೊ ?

ರಂಗು : ಲೋ ಲಾಡು ಉಂಡೆ ಒಂದೊಂದಕ್ಕೆರಡಾಣೆ ಕಾಣ್ರೊ !

ಒಬ್ಬ ಹುಡುಗ : ಎರಡು ಬಾಯ್ಗಾಯಾಕಿಲ್ಲ ಎಲ್ಡಾಣೇನ ?

ಇನ್ನೊಬ್ಬ : ರಾಗಿ ಮುದ್ದೆ ಅಲ್ವೊ ಅದು ಲಾಡು ಕಾಣೊ

ಒಬ್ಬ : ಲೊ ಏನ್ಮಾಡೋಣ್ರೊ ?

ರಂಗು : ತಾಳ್ರೊ ಯೋಚ್ನೆ ಮಾಡ್ತಾ ಇದ್ದೀನಿ. ಲ್ರೋ ಬನ್ರೋ ನನ್ನ ಕುರುಡಜ್ಜನ ಕೈಯಿಂದ ಎಂಗಾರ ಒರಡಿಸ್ತೀನಿ ಕಾಸ್ನ.

Musical Bridge

[ನರಸೇಗೌಡ ಒಬ್ಬನೇ ಒಂದು ಹಳೇ ಕುರ್ಚಿಯಲ್ಲಿ ಕುಳಿತಿರುತ್ತಾನೆ. ರಂಗುವೂ ಅವನ ಇಬ್ಬರು ಸ್ನೇಹಿತರೂ ಮಾತನಾಡುತ್ತಾ ಗೌಡನ ಬಳಿಗೆ ಬರುತ್ತಾರೆ.]

ನ.ಗೌಡ : ಯಾರು ? ರಂಗೂನಾ ಆದ್ಯಾರು ನಿನ್ಜೊತೇಲಿ ? ಇಸ್ಕೋಲ ಆಯ್ತಾ ?
ರಂಗು : ಓ ಆಯ್ತಜ್ಜ. ಚೆನ್ನ, ಪುಟ್ಟ ಇಬ್ರೂ ನನ್ಜೊತೇಗಾಡೋಕ್ಬಂದವ್ರೆ.
ನ.ಗೌಡ : ಒಳ್ಳೇದಪ್ಪಾ, ಕತ್ಲಾಗೋಕ್ಮುಂಚೇನೆ ಬಂದ್ಬುಡಿ. ಮಗಾ ನೀನು ದಿನ್ನಿ ನಾನು ಒತ್ಮಾಡ್ಕೊಂಡ್ಬರ್‍ತೀಯಂತ ನಿಮ್ಮಮ್ಮ ರಾದ್ಯಾಂತ ಮಾಡ್ತಾಳೆ. ಬೇಗ್ಬಂದ್ಬಿಡು ಮಗಾ.
ರಂಗು : ಇಲ್ಲೆ ಮನೆ ತಾವೆ ಆಡ್ಕೊಳ್ತೀವೇಳು.
ನ.ಗೌಡ : ಅಂ ! ಅಂಗೇ ಮಾಡ್ರಿ ಅಸೀರ್‍ಶರ ಎಲ್ಲೊ ಬಿಚ್ಕೊಂಡೋಗ್ತೈತೆ ಅಂತ ಉಡೀಕ್ಕೊಂಡೋಗವ್ಳೆ ನಿಮ್ಮಮ್ಮ. ಎಲ್ಲಾರೂನೂ ಇಲ್ಲೆ ಆಡ್ಕೊಳ್ಳಿ.
ರಂಗು : ಯಜ್ಜಾ ನೀನು ಲಾಡು ಉಂಡೆ ಎಂದಾದ್ರು ತಿಂದಿದ್ದೀಯ?
ನ.ಗೌಡ : ಎಸ್ಟೋ ವರ್ಷಗಳಾದ್ವು ಮಗ
ರಂಗು : ಶೆಂದಾಗಿತ್ತ ! ರುಸಿಯಾಗಿತ್ತ ?
ನ.ಗೌಡ : ಲಾಡು ಉಂಡೆ ಶೆಂದಾಗಿರಾಕಿಲ್ವಾ ? ಬೇಸಾಗಿತ್ತು....ಬೇಸಾಗಿತ್ತು.
ರಂಗು : ಯಜ್ಜ ಈಒತ್ತು ಉಡುಪಿ ಅಯ್ನ ಓಟ್ಲಾಗೆ ಲಾಡು ಉಂಡೆ ಮಾಡಿ ಕಟ್ಟಿ ತುಂಬ ಪೇರ್‍ಸಿ ಇಟ್ಟವ್ರೆ. ನಾನ್ತಿಂದಿದ್ದೇ ಇಲ್ಲ ಅಜ್ಜ. ನಾಕಾಣೆ ಕೊಡಜ್ಜ. ನಿಂಗೊಂದುಂಡೆ ತಂದ್ಕೊಡ್ತೀನಿ. ಆದ್ರಾಗೆ ಒಂದ್ಬೀಟು ನನೀಗ್ಕೊಡು ?
ನ.ಗೌಡ : (ನಸುನಗುತ್ತ) ಮಗ್ಗೆ ಲಾಡು ತಿನ್ಬೇಕೊಂತ ಆಸೆ ಆಯ್ತದೇನು ? ಇಕಾ ನೀವೆಷ್ಟು ಜನ ಇದ್ದೀರಿ ?
ರಂಗು : ಮೂರ್‍ಜನ ಅಷ್ಟೇ ಯಜ್ಜಾ.
ನ. ಗೌಡ : ಇಕಾ ಎಂಟಾಣೆ. ಎಲ್ಲಾರು ಓಗಿ ತಿಂದು ಬರ್ರಿ. ನಂಗೆ ಈವತ್ತು ಬೇಡ. ಇನ್ನೊಂದಿನ ತರೀಸ್ಕೊಂತೀನಿ.
ರಂಗು : ಯಜ್ಜಾ ನೀ ಬಲು ಒಳ್ಳೇನು, ಬಲು ಒಳ್ಳೇನು ಅಜ್ಜಾ ನೀ.

[ರಂಗು ಸ್ನೇಹಿತರೊಂದಿಗೆ ಹೊರಟು ಹೋಗುತ್ತಾನೆ]

Musical Bridge

[ಅದೇ ದಿನ ರಾತ್ರಿ ಗೌಡನೂ ಮಗಳೂ ಕುಳಿತುಕೊಂಡು ಮಾತನಾಡುತ್ತಿದ್ದಾರೆ]

ಲಚ್ಮಕ್ಕ : ಅಪ್ಪಾ ನೀನು ಕಾಸ್ಕೊಟ್ಟು ಕಾಸ್ಕೊಟ್ಟು ಅವನ್ನ ಕೆಡಸ್ತಿದ್ಬಿ. ಏನೇನೊ ತಿಂದ್ಬಂದು ಆಸಿವಿಲ್ಲಾಂತ ಉಣ್ದೆ ಮಲಗ್ಬಿಟ್ಟಾನೆ.
ನ. ಗೌಡ : ಅಯ್ ಬುಡು, ನಾನೇನ್ ಕೊಟ್ಟೆ ಪಾಪ. ಮಗ್ಗೆ ಲಾಡು ತಿನ್ಬೇಕೊಂತ ಆಸೆಯಾಯ್ತು. ಅವನ ಸ್ನೇಯಿತ್ರೂ ಇದ್ರು. ಎಲ್ಲಾರೂ ತಿನ್ಲಿ ಅಂತ ನಾಕಾರಾಣೆ ಕೊಟ್ಟೆ. ಕಾಸ್ಕೊಡ್ದಿದ್ರೆ ಕದ್ಯೋತ್ಕಲೀತಾರೆ ಲಚ್ಮಿ. ಕಾಳು ಕಡಿ ಕದ್ವು ಮಾರಿದ್ರೆ ನೀನೇನ್ಮಾಡ್ತೆ ಆಗ ?

ಲಚ್ಮಕ್ಕ: ನಾನು ಕೊಡಾಕಿಲ್ವ ನನ್ನತ್ರೂ ಗಿಲ್ಬುತಾನೆ, ನಿನ್ನತ್ರೂ ಗಿಲ್ಬುತಾನೆ. ಇಂಗೆ ಕಳ್ಳೆ ಇಟ್ಟೆಂದೂ, ಅಕ್ಕಿ ಇಟ್ಟೆಂದೂ ಎಲ್ಲಾ ತಿಂದ್ರೆ ಮೈಗಾಯ್ತದಾ? ಕಳ್ಳು ಕಟ್ಟಾಕಿಲ್ವಾ? ನೀನಿನ್ಮೇಲೆ ಅವನಿಗ್ಯಾಸ್ಕೊಡಬೇಡ. ದುಶ್ಚಾಳಿ ಬಿದ್ದೋಯ್ತದೆ ಆಮೇಲೆ.

ನ. ಗೌಡ: ಅದೂ ನಿಜ ಏಳು. ಅಂಗೂ ಕೆಟ್ಟೋಯ್ತಾರೆ ಏನೊ ನಮಿಗ್ನಮಿಗೊಂದಿ ಸ್ವಾಸ ಬೆಳೀಲೀಂತ ಅವನ್ನ ಅತ್ರಕ್ಕೆ ಕರ್ದು ಕಾಸ್ಕೊಟ್ಟೆ. ಅಂಗಾದ್ರೂ ಅತ್ರಕ್ ಬರುವೊಲ್ಲ. ತಾತ್ನತ್ರ ಕುಂತ್ಕೊಂಡ್ನಾಕು ಮಾತಾಡ್ವೊಲ್ಲ. ಅತ್ರಕ್ಕರದ್ರೆ ದೂರ್ದಿಂದ್ಲೆ ಜವಾಬ್ ಕೊಟ್ಟು ಒಂಟೋಯ್ತಾನೆ. ಯಾಕೊ ನನಗನ್ನ ಚಾಳೀನೆ ತಿಳೀವಲ್ದು. ಈ ಕಾಲ್ದ ಉಡುಗ್ರು. ಇರೇರ್ನ ಕಂಡ್ರೆ ಮರ್ವ್ಯಾದೀನೇ ಇಲ್ಲ. ಈ ಉಡುಗರ್ಗೆ ಸಿಕ್ಸೇನೇ ಸಂದಾಗಿಲ್ಲ ನೋಡು ಲಚ್ಮಿ. ಮಠದಾಗ ಏನೇಳ್ಕೊಡ್ತಾರೊ ಇವ್ರು ಏನ್ಕಲೀತಾರೊ ಶಿವನ್ಗೇ ಬೆಳ್ಕು.

ಲಚ್ಮಕ್ಕ: ನಂಗೂ ಅಂಗೇ ಅನ್ನಿಸ್ತದೆ. ಮೂರೊತ್ತೂ ಆಟ, ಆಟ, ಆಟ.. ಪುಸ್ತಕ ಇಡ್ದು ಓದೋದೇ ಕಾಣೆ. ಇಂತಾವು ಏರು ಗೊಬ್ರ ಕೈಯಾಗಾದ್ರೂ ಮುಟ್ತಾವಾ ಇನ್ಮ್ಯಾಕೆ! ಇತ್ಲಾಗ ಇದೂ ಇಲ್ಲ ಅತ್ಲಾಗ ಅದೂ ಇಲ್ಲಾಂತೋದ್ರೆ ಏನ್ಗತಿ?

ನ. ಗೌಡ: ಅಯ್! ಲಚ್ಮಿ ಇನ್ನೂ ಚಿಕ್ಕೋನಲ್ವಾ. ದೋಟು ಬುದ್ದಿ ಬಂದ್ರೆ ಎಲ್ಲಾ ತಿಳ್ಕೋಂತಾನೆ.

ಲಚ್ಮಕ್ಕ: ಎಂಗೊ ಅಪ್ಪ. ಮೊನ್ನೆ ಒಲ್ದಲ್ಲಿ ಕೆಲ್ಸ ಮಾಡ್ತಾ ಅವ್ರೆ ನಿಮ್ಮಪ್ಪ ಇಟ್ಟೊ ನೀರು ಕೊಟ್ಬುಟ್ಬಾರೊ ಅಂದ್ರೆ, ನನಗ್ ಒತ್ತಿಲ್ಲ ನೀನೇ ತಗೊಂಡೋಗಿಟ್ಬಾ ಅಂತಾನಲ್ಲಾ ಇವ್ನ!....ಸ್ನೇಯಿತುರ್ರು ಬಾಳ ಆಗೋಗವ್ರೆ ಇವ್ನಿಗೆ ಇಸ್ಕೂಲ್ಗೂ ಸಜ್ಞಾಗಿ ಬರ್ತಾಇಲ್ಲ ಅಂತ ಯೋಳಿದ್ರಂತೆ ಮಠದಯ್ನೋರು. ಇನ್ನವ್ರಿಗೆ ಕೋಪ ಬಂದ್ಬಿಟ್ರೆ ಕಣ್ಣೂ ಮೂಗೂ ತಿಳೀದಂಗೆ ಚಚ್ಚಿಕ್ಬಿಡ್ತಾರೆ ಅವನ್ನ. ಈ ಸಂಗ್ತಕ್ಕೆ ಷ್ಟೂಂತ ಬಾಯ್ಮುಚ್ಕೊಂಡಿರ್ಬೇಕ್ ನಾನು ಯೋಳ್ನೀನು?

ನ. ಗೌಡ: ನಾನೆಲ್ಲ ಯೋಳ್ತೀನಿ ನಿಧಾನ್ವಾಗಿ ಕೂಡಿಸ್ಕೊಂಡು. ನೀನಾತ್ರಪಡ್ಬೇಡ. ಒಳ್ಳೆ ಮಾತ್ನಲ್ಲೇ ಯೋಳ್ಬೇಕು. ಸುಮ್ನೆ ಬಡಿದ್ರೆ ಮೊಂಡು ಬಿದ್ದು ಓಯ್ತಾರೆ.

ಲಚ್ಮಕ್ಕ: ಗಿಡಾನ ಸಣ್ಣಾಗಿರೊವಾಗ್ಲೆ ಬಗ್ಗಿಸ್ಬೇಕಲ್ವಾ. ಆ ಮೊಲೆಂಗಾಯ್ತದೆ?

Musical Bridge

[ಮೂರು ದಿನಗಳು ಕಳೆದುವು. ಆ ದಿನವೂ ತಾಯಿ ಮನೆಯಲ್ಲಿಲ್ಲದ ಹೊತ್ತನ್ನು ಸಾಧಿಸಿ ರಂಗು ಅಜ್ಜನ ಹತ್ತಿರಕ್ಕೆ ಬಂದ. ]

ರಂಗು: ಬೋ ಬಿಸಿಲು ಅಜ್ಜಾ. ಕುಡ್ಯೋಕ್ನೀರು ತಂದ್ಕೊಡ್ಲಾ?

ನ.ಗೌಡ: ಬೇಡ ಮಗ ನಂಗ್ಯಾವ್ರು ಇಲ್ಲ.

ರಂಗು : ಮಜ್ಗೆ ತಂದ್ಕೊಡ್ಲಾ....ತಣ್ಗೆ ?

ನ.ಗೌಡ : ಏನೂ ಬೇಡ ಮಗಾ, ಬೇಕಾದ್ರೆ ಕೇಳ್ತೇನಿ.

ರಂಗು : ಯಜ್ಜಾ !

ನ.ಗೌಡ : ಏನ್ಮಗಾ ?

ರಂಗು : ಯಜ್ಜಾ ನೀನೇನಂತಿಯೊ ? ನಂಗೊಂದೆಂಟಾಣೆ ಕೊಟ್ಟೇಯಾ ?

ನ.ಗೌಡ : ಯಾಕ್ಮಗಾ....ನಿಂಗೆಂಟಾಣೆ ?

ರಂಗು : ಯಜ್ಜಾ ಉಡುಗರೆಲ್ಲಾ ಓಯ್ತಾರೆ. ಚೆನ್ನಪಟ್ಣದ ಉರಸ್ ಅಬ್ಬಕ್ಕೆ ಬಾಣ ಬಿರುಸು ಜೋಸಂದಾಗಿ ನಡೀತೈತಂತೆ. ನಾನೂ ಓಗ್ಬೇಕಜ್ಜ. ಆಶೆ ಅಯ್ತದೆ.

ನ.ಗೌಡ : ನನ್ನತ್ರ ಚಿಲ್ರೆ ಇಲ್ಲಾಪ್ಪ. ದೊಡ್ಡ ನೋಟೈತೆ. ನಾನದ್ನ ಈಗ ಮುರ್ಸಾಕಿಲ್ಲ. ನಿಮ್ಮಮ್ಮ ಎಲ್ಲೋ ಓಗವ್ಳೆ. ಬಂದ್ಮ್ಯಾಗೆ ಕೇಳಿ ದುಡ್ಡಿಸ್ಕೊಂಡೋಗು.

ರಂಗು : ಓಗ್ಲಿ ನಾಕಾಣೆ ಕೊಡಜ್ಜ.

ನ.ಗೌಡ : ಏಳಿದ್ನಲ್ಲಾ ನನ್ತಾವ ಎಲ್ಡಾಣೆ ಚಿಲ್ರೇನೂ ಇಲ್ಲಾಂತ,

ರಂಗು : (ದುಃಖದಿಂದ) ಅಮ್ಮನ್ನ ಬೆಳಿಗ್ಗೇನೆ ಕೇಳ್ದೆ ಅಜ್ಜ . ಓಗ್ಬೇಡ ಚೆನ್ನಪಟ್ಣದಾಗೆ ಈಗ ಪಿಳೇಕೈತೆ ಅಂದುಬಿಟ್ಲು. ಅಜ್ಜ, ನನ್ನ ಸ್ನೇಯಿತ್ರೆಲ್ಲಾ ಓಯ್ತಾರೆ. ನಾನೋಗ್ಬೇಡ್ವಾ ?

ನ.ಗೌಡ: ಅಮ್ಮನ್ಮಾತ್ಗೆ ಗೊರ್ವ ಕೊಡ್ಬೇಕು ಮಗಾ. ನಿಂಗೊಳ್ಳೆದಕ್ಕಾನೆ ಅವ್ಳೇಳೋದು?

ರಂಗು : ಯಜ್ಜ ಅಮ್ಮ ಯೇಟೋತ್ಗೆ ಬತ್ತಾಳೆ ?

ನ.ಗೌಡ : ಯೆಂಗೇಳ್ಲಪ್ಪಾ ನಾನು. ಒಲಕ್ಕೋಗವ್ಳೇನೊ ಒಲ್ದಾಗ ಕೆಲ್ಸ ಎಷ್ಟೈತೋ, ಇಟ್ಟೊ ಎಸಳೂಮಾಡಿ ನಿನ್ಗೇಂತ ಗಂಗ್ಳದಾಗ ಮುಚ್ಚಿಮಡಗವ್ಳೆ. ಅಸಿವಾಯ್ತಿದೆ: ಉಂಡ್ಕೊ ಮಗಾ.

ರಂಗು : (ಭಯದಿಂದ ಗಟ್ಟಿಯಾಗಿ ಅರಚುತ್ತಾನೆ) ಅಯ್ಯೋ ಅಜ್ಜಾ ಅಜ್ಜಾ.... ಅಬ್ಬಬ್ಬ, ಇದೆಲ್ಬಂತು ಇಷ್ಟು ದೊಡ್ಡ ಮಂಡ್ರಗಪ್ಪೆ. ಅಜ್ಜಾ ನಿನ್ಕುರ್ಚಿ ಮ್ಯಾಕೆ ಅತ್ತಾ ಐತೆ. ಇನ್ನೇನ್ಗತಿ ಯಜ್ಜಾ ! ಕೈ ಇಡಬ್ಯಾಡ! ಇದ್ಕಚ್ಚಿದ್ರೆ ಬದ್ಕೋ ಅಂಗೇ ಇಲ್ಲ.

ನ.ಗೌಡ : ಅಯ್ಯೋ ! ಬಡ್ಡಾಕು ಬಡ್ಡಾಕು ...ಬಡ್ಡಾಕು ಮಗಾ.

ರಂಗು : ಅದು ನಿನ್ನ ಕುರ್ಚಿ ಮ್ಯಾಗೈತೆ ಈಗ ನಿನ್ನ ಮೈಮ್ಯಾಗೇನಲ್ಲ.

ನ.ಗೌಡ : (ಕಿರುಚುತ್ತಾನೆ) ಬಡಿ ಮಗ ಮೊದ್ಲು ಬಡ್ಡಾಕು. ನಿನ್ನ ದಮ್ಮಯ್ಯ ಮಗಾ ಮೊದ್ಲು ಬಡ್ಡಾಕು (ಕಿರಲುತ್ತಾನೆ)

ರಂಗು : (ಉತ್ಸಾಹದಿಂದ) ಬಡ್ಡಾಕ್ಬಿಡ್ತೇನಿ ಈಗ್ಲೆ. ಬಡ್ಡಾಕಿದ್ರೆ ಏನ್ಕೊಡ್ತೀಯಜ್ಜ ಯೇಳು ಜೇಗ ಯೇಳ್ಬಿಡು.

ನ.ಗೌಡ : (ಮಹಾ ಭೀತಿಯಿಂದ) ಏನ್ಬೇಕು ? ಎಷ್ಟ್ಬೇಕು ? ಅಯ್ಯೋ ಬಡಿ ಮಗ, ಮೊದ್ಲು ಬಡ್ಡಾಕು.

ರಂಗು : ಅಜ್ಜಾ ಕುರ್ಚಿ ಬಿಟ್ಟು ನಿನ್ನ ಬೆನ್ನ ಮ್ಯಾಕೆ ಅತ್ತಾ ಐತೆ. ಎಂಟಾಣೆ ಕೊಟ್ಟೇಯ ಅಜ್ಜ ಚಚ್ಚಾಕ್ಬಿಡ್ತೀನಿ.

ನ. ಗೌಡ : ಕೊಡ್ತೀನ್ಮಗ. ರಾಮ್ದೇವ್ರಾಣ್ಗೂ ಕೊಡ್ತೀನೆ. ಮೊದ್ಲು ಚಚ್ಚಾಕು ಅಯ್ಯಯ್ಯಾ ಶ್ಯ ಶ್ಯ ....

[ರಂಗು ಪುಸ್ತಕದ ಕೊನೆಯಿಂದ ಅಜ್ಜನ ಬೆನ್ನನ್ನು ಸರ್ರನೆ ಸವರಿ ಕುರ್ಚಿಯ ಬೆನ್ನಿನ ಮೇಲೆ ರಪರಪನೆ ಬಡಿದು ಅನಂತರ ನೆಲದ ಮೇಲೆ ಆರೆಂಟಾವರ್ತಿ ರವರಪನೆ ಬಡಿದು]

ಅಬ್ಬ ! ಸತ್ತಿತು ದೈಯ್ಯ. ಕೊಡಜ್ಜಾ ಎಂಟಾಣೆ ಕೊಡು..... ಅಯ್ ಇನ್ನೂ ಮೆದಲ್ತೀಯಾ ? ಬೇಗ ಕೊಡಜ್ಜಾ ಎಂಟಾಣೆ. ಇನ್ನೂ ಚೆನ್ನಾಗಿ ಚೆಟ್ನಿ ಮಾಡ್ಬಿಡ್ತೀನಿದ್ನ ( ರಪರಪನೆ ನೆಲವನ್ನು ಮತ್ತೆ ಆರೆಂಟಾವರ್ತಿ ಹೊಡೆದು ) .... ಆಂ.... ಓಡ್ತೀಯಾ ? ಇನ್ನೆಂಗೊಡೀಯಾ ನೀನು ನನ್ನ ಕೈಗೆ ಸಿಕ್ಕ ಮ್ಯಾಕೆ (ಮತ್ತೆ ಬಡಿಯುತ್ತಾನೆ) .... ಆಯ್ತಜ್ಜ .... ಚಟ್ನಿ ಚಟ್ನಿ ಆಗೋಯ್ತು. ತುಂಡ್ತುಂಡಾಗೋಯ್ತು. ಒಂಟೋಯ್ತು ಯಮಲೋಕಕ್ಕೆ. ಅಜ್ಜ ಇದ್ದಾಗ ನಿನ್ನಚ್ಚಿಟ್ಟಿದ್ರೆ ನೀನ್ಬೇರೆ ಬದಕ್ತಿರ್ಲಿಲ್ಲ. ಓಯ್ತು ಪೀಡೆ. (ನರಸೇಗೌಡ ನಡುಗುತ್ತಿದ್ದ ಕೈಗಳಿಂದ ಸಂಚಿಯನ್ನು ಬಿಚ್ಚುತ್ತಾನೆ. ನಡುಗುತ್ತಿದ್ದ ಅವನ ಕೈಗಳಲ್ಲಿ ಸಂಚಿ ನಿಲ್ಲದೆ ನಾಣ್ಯಗಳೆಲ್ಲಾ ನೆಲದ ಮೇಲೆ ಸುರಿದು ಹೋಗುತ್ತವೆ.)

ರಂಗು : ಇರಜ್ಜಾ. ಎಲ್ಲಾ ಆರಿಸ್ಕೊಡ್ತೀನಿ....

[ರಂಗುವು ಆರಿಸಿ ಕೊಡುತ್ತಾನೆ. ಕೊಡುವ ಮೊದಲು ಅದರಲ್ಲಿದ್ದ ಎಂಟಾಣೆ ನಾಣ್ಯ ಒಂದನ್ನು ತನ್ನ ಜೇಬಿಗೆ ಬಿಟ್ಟುಕೊಳ್ಳುತ್ತಾನೆ. ]

ರಂಗು : ಕೋ ಅಜ್ಜ. ಯಲ್ಲಾನೂವೆ.

[ ಎಲ್ಲಾ ಕೈಯಲ್ಲಿ ತೆಗೆದುಕೊಂಡು ಒಂದೊಂದಾಗಿ ಮುಟ್ಟಿ ಮುಟ್ಟಿ ಸಂಚಿಯಲ್ಲಿ ಹಾಕುತ್ತ ಐದ್ರೂಪಾಯ್ ಚಿಲ್ರೆ ನಿಮ್ಮಮ್ಮಂದು ಒಂದೆಂಟಾಣೆ ಬಿಲ್ಲೆ ಕಾಣ್ಸಾಕ್ಹಿಲ್ಲಲ್ಲ]

ರಂಗು : (ಅಲ್ಪ ಭೀತಿಯಿಂದ) ಎಲ್ಲಾನೂ ಆಯ್ದು ಕೊಟ್ಟು ಬಿಟ್ಟೆ. ನೀನೇ ಯಾವ್ದ ಕ್ಯಾದ್ರು ಕೊಟ್ಟಿರ್ಬೇಕು. ಶಂದಾಗ್ನಾಪ್ಕ ಮಾಡ್ಕೊ. ನನಗ್ ಕೊಡಜ್ಜಾ.... ಕೊಟ್ಬಿಡು.

ನ. ಗೌಡ : ಇಕಾ ಮಗ ಇಕಾ. ನಿಮ್ಮಮ್ಮನ್ನತ್ರ ಯೋಳ್ಬೇಡ, ನಾನ್ಕೊಟ್ಟೇಂತ.

ರಂಗು : (ಇಸುಗೊಂಡು) ಇನ್ನೆಲ್ಡಾಣೆ ಕೊಡಜ್ಜಾ. ನೋಡು ಎಂತಾ ದೊಡ್ಡ ದೈಯ್ಯಾನ ಬಡ್ದಾಕ್ಬಿಟ್ಟಿದ್ದೀನಿ.

ನ. ಗೌಡ : ಸಾಕು ಮಗಾ. ಇನ್ನೊಂದಿವ್ಸ ಕೊಡ್ತೀನಿ.

ರಂಗು : ಅಂಗೇ ಮಾಡಜ್ಜ. ನೀನು ಬಲು ಒಳ್ಳೇನು. ನೀನು ಬಲು ಒಳ್ಳೇನು ಅಜ್ಜ. ಇದ್ನ ದೂರ ಬಿಸಾಕ್ಬಿಟ್ಟು ಬರ್ತೀನಿ.

ನ. ಗೌಡ : ಊಂ ದೂರ ಓಗಿ ಮಗ.

ರಂಗು : (ಓಡಿ ಹೋಗಿ ಬಂದ ಆಯಾಸವನ್ನು ನಟಿಸುತ್ತ) ಓಗಿದ್ಬಂದೆ ಅಜ್ಜ. ಇದರ್ಮನೆ ಆಳಾಗೆ. ಒಂದ್ಗೇಣುದ್ದ ಇತ್ತಜ್ಜ.

ನ. ಗೌಡ : ಅದ್ನೆಲ್ಲ ಯೋಳ್ಬ್ಯಾಡ ನನ್ತಾವ. ಆಮ್ಯಾಕೆ ರಾತ್ರಿನೆಲ್ಲ ನಿದ್ದೇನೆ ಬರಾಕಿಲ್ಲ.

ರಂಗು : ಅದ್ಯಾಕಜ್ಜ, ಚೇಳು ಅಂದ್ರ ಅಷ್ಟು ಭಯ ನಿಂಗೆ ?

ನ. ಗೌಡ : ನಂಗೆ ಮೊದ್ಲಿಂದೂ ಅಂಗೇನೆ. ಚಿಕ್ಕಂದಿನಲ್ಲಿ ಅವ್ನ ಎಲ್ನೋಡಿದ್ರೆ ಅಲ್ಲೆ ಇಡ್ದು ಚಚ್ಚಾಕ್ಬಿಡ್ತಿದ್ದೆ. ಅವೇ ಈಗ....ನನ್ಕಣ್ಣು ಓದ್ಮ್ಯಾಕೆ ಇಂಗ್ಬಂದು ನನ್ಜೀವಾನ ತಿಂತಾವೆ.

ರಂಗು : ನೀನಂಜ್ಬೇಡ ಅಜ್ಜ. ನಾನು ಈ ಮನ್ಯಾಗಿರೊ ಚೇಳುಗಳ್ನ ಮಂಡ್ರಗಪ್ಪೆಗೊಳ್ನ ಒಂದೊಂದಾಗಿ ಉಡ್ಕಿ ಉಡ್ಕಿ ಚಚ್ಚಾಕ್ಬಿಡ್ತೀನಿ, ನಿನ್ಗಾಗಿ ಮಾಡ್ತೇನಜ್ಜ. ನೀನೇನೂ ಜಾಸ್ತಿ ಕೊಡಬ್ಯಾಡ್ಕನಂಗೆ. ಒಂದೊಂದು ಚೇಳ್ಗೆ ಒಂಮೊಂದಾಣೇನೇ ಕೊಡು. ಎಚ್ಗೆ ಕೊಡಬ್ಯಾಡ.

ನ. ಗೌಡ : (ರಂಗುನ ಮಾತುಗಳನ್ನು ಕೇಳಿ ಗುಕ್ಕು ಹಿಡಿದಂತಾಗಿ) ಅಂಗೇ ಆಗ್ಲಿ ಈಗ ಓದ್ಕೊ ಓಗು. ನಾನು ಎಂಟಾಣೆ ಕೊಟ್ಟೇಂತ ನಿಮ್ಮವ್ವನತ್ರ ಯೇಳ್ಬ್ಯಾಡ.

ರಂಗು : (ಸಂತೋಷದಿಂದ ಹಿಗ್ಗುತ್ತ) ನಾನ್ಯಾಕೇಳ್ಲಿ. ಇದೆಲ್ಲ ನಮ್ಮನಮ್ಮಲ್ಲೇ ಇರತಕ್ಕದ್ದಲ್ವಾ ?

[ Musical Bridge—Announce ಮತ್ತೆ ಎಂಟು ದಿನಗಳು ಕಳೆದವು. ]

[ ಒಂದು ದಿನ ಸಂಜೆ ಗೌಡ ಕುರ್ಚಿಯಲ್ಲಿ ತನ್ನ ಯಥಾ ಸ್ಥಾನದಲ್ಲಿ ಕುಳಿತಿದ್ದ. ರಂಗುವು ಬಂದು ಅಜ್ಜನನ್ನು ಮಾತನಾಡಿಸಿದ...]

ರಂಗು : ಓ ಯಜ್ಜಾ....ಯಾಕಜ್ಜಾ ಅಂಗ್ಕೂತಿದ್ದೀಯ ? ಜೀವಕ್ಸರಿ ಇಲ್ವ ?

ನ. ಗೌಡ : ಏನೂ ಇಲ್ಲ ಮಗ ಅಂಗೇ ಒರೀಕೊಂಡೆ ನಿದ್ದೆ ಬಂದಂಗಾತು. ಕಣ್ಮುಚ್ಕೊಂಡೆ.

ರಂಗು : ಮುಚ್ಕೊಂಡಿದ್ರೇನು ! ತಕ್ಕೊಂಡಿದ್ರೇನು ? ಎರಡೂ ಒಂದೇ ಅಲ್ವಾ ನಿಂಗೆ ?

ನ. ಗೌಡ : ಔದ್ಮಗಾ ಎರಡೂ ಒಂದೇ ನಂಗೆ.

ರಂಗು : ಚಂಜೆ ಆಗ್ತಾ ಬಂತು, ಅಮ್ಮ ಇನ್ನೂ ಮನೇಗೆ ಬಂದಿಲ್ವಲ್ಲಾ ?

ನ. ಗೌಡ : ಬತ್ತಾಳೇಳು. ನೀ ಬಾ ಇಲ್ಲಿ ಕುಂತ್ಕೊ ಮಗ.

ರಂಗು : ಅಜ್ಜಾ, ಥು ! ಇಲ್ಲಿ ಬೊ ಕಸಾ ಬಿದ್ದೈತೆ. ಗುಡಸಾರ ಗುಡಸ್ತೀನಜ್ಜ.

ನ. ಗೌಡ : ಅಂಗೇ, ಮಾಡು. ನಿಮ್ಮಮ್ಮನ್ಗೆ ಏಟೊಂದು ಮನೆ ಕೆಲ್ಸ. ನೀನು ಒಂದು ಎಲಡು ಚಿಕ್ಕ ಕೆಲ್ಸಗಳ್ನ ಮಾಡ್ಕೊಟ್ರೆ ಅವ್ಳಿಗೆ ಎಷ್ಟೊ ಸಂತೋಸ ವಾಯ್ತದೆ.

ರಂಗು : ( ಸಾಮಾನನ್ನ ಅತ್ತ ಇತ್ತ ಎತ್ತಿಟ್ಟು ಗುಡಿಸುವ ಶಬ್ದ ) ಅಜ್ಜ....ಅಜ್ಜ ಇಲ್ನೋಡಜ್ಜ ಮೂರು ಚೇಳ್ಮರಿಗ್ಳು ಒಂದೇ ತಾವ.

ನ. ಗೌಡ : ಚಚ್ಚಾಕು, ಮೊದ್ಲ ಚಚ್ಚಾಕ್ಬುಡು.

ರಂಗು : ( ಪರಕೆಯಿಂದ ರಪರಪನೆ ನೆಲದ ಮೇಲೆ ಹೊಡೆಯುತ್ತಾನೆ. ಗುಡಿಸುತ್ತಾ) ಎಲ್ಲಾ ಈಗ್ತಾನೆ ಉಟ್ಕೊಂಡ್ವು ಅಜ್ಜ. ಇದ್ರ ಅಮ್ಮಾನೂ ಇಲ್ಲೆ ಎಲ್ಲೊ ಇರ್ಬೇಕಜ್ಜ. ಅಬ್ಬಬ್ಬಾ ಎಷ್ಟೊಂದು ಚೇಳುಗಳ್ನ ಬಡ್ದಾಕಿದ್ದೀನಿ ಯಜ್ಜಾ. ಈಗ ಮನ್ಯಾಗ ಅಷ್ಟೊಂದು ಚೇಳುಗಳಿಲ್ಲ....ಆದ್ರೂ ಅವೆ ಅಲ್ಲೊಂದು ಇಲ್ಲೊಂದು. ಅದ್ನೆಲ್ಲಾ ಇಡ್ದು ಇಡ್ದು ಜಜ್ಜಾಕ್ಬಿಡಬೇಕು. ಅಲ್ವೆ ಅಜ್ಜ ? ಇನ್ಮ್ಯಾಕೆ ಇನ್ನೂ ಚೆನ್ನಾಗಿ ಉಡ್ಕಿ ಉಡ್ಕಿ ಜಜ್ಜಾಕ್ಬಿಡ್ತೀನಿ. ಅದ್ರಾಗೂ ಇದು ಬಿಸಿಲ್ಕಾಲ....ಗಳ್ಗೋಳ್ಮನೆ. ಅವಕ್ಕೆ ಒಲೆ ಪಸಂದು. ಅಜ್ಜ ಇನ್ಮ್ಯಾಲೆ ಎಲ್ಡೆಲ್ಡಾಣೆ ಕೊಡಜ್ಜ. ಉಡ್ಕೋಕೆ ಬಲು ಕಸ್ಟ ಆಯ್ತದೆ. ಅಜ್ಜಾ ಇದರ ತಾಯಿ ಚೇಳೂ ಈ ಕೋಣ್ಯಾಗೇ ಇರಬೇಕಲ್ವ? ಯೋಳಜ್ಜ, ಈಗ್ಲೆ ಉಡ್ಕಿ ಜಜ್ಜಾಕ್ಬಿಡ್ತೀನಿ. ನಾಕಾಣೆ ಕೊಡ್ತೀಯೇನಜ್ಜ ?

ನ. ಗೌಡ : ( ರಂಗುವಿನ ಮನೋಭಾವವನ್ನರಿತುಕೊಂಡು, ಸಿಟ್ಟಿನಿಂದ ) ಓಗೋ, ಎದ್ದೋಗು,ಎದ್ದೋಗೋ ಇಲ್ಲಿಂದ ಸಣೇಸ್ವರ. ಇನ್ಮ್ಯಾಲೆ ಈ ಕೋಣೆಗೆ ಬಂದೀಯೆ, ಒಂಟೋಗು....ಬರ್ಲಿ ನಿನ್ನೆತ್ತೋಳು 'ಎಂತಾ ಮಗನ ಅಡಿದಿದ್ದೀಯಾಂತ ಕೇಳೇಬುಡ್ತೀನಿ' ಕಣ್ಣಿಲ್ದ ನನ್ನ ಇಂಗ ಗೋಳೊಯ್ಕಂತೀಯಾ ?....ಎದ್ದೋಗಾಚೆ....

ರಂಗು : ನಂಗೇನು ? ರಾತ್ರಿ ನಿಂಗೇ ಬಂದ ಮರ್ಕೊಂತವೆ. ಒಂಟೋಯ್ತೀನೇಳು.

[ ರಂಗುವು ಸರಸರನೆ ಹೊರಟು ಹೋಗುತ್ತಾನೆ.]

[ Music 5 Seconds ]

ನ. ಗೌಡ : (ದುಃಖದಿಂದ) ಒಂದಕ್ಕ ತಪ್ಪಿದ್ರೆ ಇನ್ನೊಂದಾ ನನ್ಗೆ ಇಂದೆಂತಾ ಗಾಶಾರಾ ನಂದು ? ಈ ಉಡುಗನ್ಮ್ಯಾಲೆ ಬವ ಇಟ್ಟು ಅತ್ರ ಕರ್ದ್ರೆ, ಇವನು ಗಂಟುಕಳ್ಳ ಆಗ್ಬೇಕಾ ! ಅಯ್ಯೋ ! ನಾನಿನ್ನೇನ್ಮಾಡ್ಲಿ ? ( ಗಟ್ಟಿಯಾಗಿ ಕೂಗಿ ಕರೆಯುತ್ತಾನೆ) ....ಮಗಾ....ಮಗಾ....ರಂಗಾ....ಬಾಪ್ಪಾ ಬಾರೋ ಅಜ್ಜನಿಗೆ ಸಿಟ್ಬರೋ ಅಂಗೆ ಮಾಡ್ಬೇಡ್ವೊ....ಇಕ....ಇಕಳ್ಳೋ....ನಾಕಾಣೆ ತಗೊಳ್ಳೊ....ಬಾಪ್ಪಾ, ಬಾರೊ ಮಗಾ.

ರಂಗು : [ ಸ್ವಲ್ಪ ದೂರದಿಂದಲೆ ] ಊಂ........ನಂಗೇನ್ಬೇಡ ಓಗು. ಕಣ್ಣಿಲ್ಲ ಪಾಪ ಚೇಳ್ಗೋಳು ಕಚ್ಚಿಬಿಡ್ತಾವೇಂತ ಇಡ್ದು ಬಡಿದಾಕಿದ್ರೆ..........ನೀನು ಸುಳ್ಳೊಂತೆಂದ್ಕೊಂಬಿಟ್ಟಿದ್ದೀಯಾ ! ನನ್ಗೇನು ? ಈವತ್ರಾತ್ರೀನೆ ಕಚ್ಲಿ ಸಾವಿರ ಚೇಳುಗ್ಳು ನಿನ್ನ.

ನ. ಗೌಡ : ಮಗಾ !....ಮಗಾ....ಅಂಗೆಲ್ಲ ಸಾಪ ಇಡ್ಬಾರ್ದು ದೊಡ್ಡೋರ್ಗೆ. ಕಾಸ್ನೇಕಾದ್ರೆ ನ್ಯಾಯವಾಗಿ ಕೇಳು. ಸುಳ್ಳೇಳೀ ಏಳೀ ಕಾಸು ಸಂಪಾದಿಸ್ಬಾರ್ದೊ. ಅದ್ರಿಂದ ಒಳ್ಳೇದಾಗೋಲ್ಲ. ಇಲ್ಬಾರೊ ಮಗಾ, ನಂಗೂ ಬಲು ಬೇಸ್ರ ಆಯ್ತುದೆ.... ನಾಕಾಣೆ ಇಟ್ಕೊ.

ರಂಗು : ( ಬಳಿಗೆ ಬಂದು ) ಅಂಗಾರೆ ಕೊಡು.

ನ. ಗೌಡ : ಯಾಕೆ ಮಗಾ ನೀನಿಂಗಾಡೀಯ ? ಈ ಮನೆ, ಒಲಗ್ಳು, ಕರಾವು ನಾನ್ಸತ್ತ ಮ್ಯಾಕೆ, ನನ್ನೋವೂ ಎಲ್ಲಾ ನಿಂಗೇ.ಅಲ್ವೆ. ಓದಿ ಚೆನ್ನಾಗಿ ಬುದ್ವಂತ್ನಾಗಿ ಇವ್ನೆಲ್ಲಾ ಇಟ್ಕೊಂಡು ನೀನ್ಬಾಳ್ಬೇಕಲ್ವಾ ? ಅಜ್ಜನಿಗೆ ಇಂಗೆ ಕಷ್ಟ ಕೊಡ್ಬಾರ್ದು ಮಗ – ಓಗು........ನಿಮ್ಮಮ್ಮ ಬರ್‍ತಾಳೆ........ಪಾಪ, ಬೆಳಿಗ್ಗೆ ಇಂದ ಒಲ್ದಲ್ಲಿ ದುಡ್ದು....ಓದ್ಕೋತಿರು....ಎಲ್ಲೂ ಓಗ್ಬೇಡ ಮಗ.

ರಂಗು : ಇಲ್ಲ ಅಜ್ಜ- ಎಲ್ಲೂ ಓಯಾಕಿಲ್ಲ. ಇಲ್ಲೇ ಇರ್‍ತೀನಿ.

ನ. ಗೌಡ : ( ಸಂತೋಷದಿಂದ ) ಅದು ಒಳ್ಳೆ ಮಗ, ರತ್ನದಂತೋನು. ದೇವ್ರು ನೂರ್ವರ್ಸ ಶಂದಾಗಿಟ್ಟಿರ್‍ಲಿ ನಿನ್ನ. (ರಂಗುವು ಹೋಗುತ್ತಾನೆ.)

Musical Bridge

[ರಾತ್ರಿ ಗೌಡನು ಮಲಗಿರುತ್ತಾನೆ.-ನಿದ್ದೆ ಬರ್‍ದೆ ಹಾಸಿಗೆಯಲ್ಲಿ ಹೊರಳಾಡುತ್ತಾನೆ.]

ನ. ಗೌಡ : ಯಾಕೊ ನಿದ್ರೆ ಬರ್‍ತಿಲ್ಲು. ಸಕೆ ಬಾಳ. ಈ ಒದ್ಕೆ ತೆಗಿದ್ರೆ ಸೊಲ್ಪ ತಣ್ಣಗಿರ್‍ತದೆ. (ಹೊದಿಕೆಯನ್ನು ದೂರ ಒಗಿಯುತ್ತಾನೆ.)

[ Very soft Music-lulls him to sleep. ]

[ ನ. ಗೌಡ ಗೊರಕೆ ಹೊಡೆಯಲು ಮೊದಲು ಮಾಡುತ್ತಾನೆ. ಗೌಡನಿಗೆ ಭಯಂಕರ-ವಾದ ಸ್ವಪ್ನವಾಗುತ್ತದೆ. ಅವನು ಗಟ್ಟಿಯಾಗಿ ಚೀರುತ್ತ ಏಳುತ್ತಾನೆ. ಬಟ್ಟೆ ಬರೆ ಹಾಸಿಗೆ ಇವುಗಳನ್ನು ಕೊಡವುತ್ತಾನೆ. ]

ಅಯ್ಯಯ್ಯೊ ಅಯ್ಯಯ್ಯೊ ಸಾವ್ರ-ಸಾವ್ರ ಚೇಳುಗಳು. ಮೈಮೇಲೆಲ್ಲ ಅರಿದಾಡ್ತಾವೆ. ಮೂಗ್ನೊಳಕ್ಕೋಗ್ಬಿಟ್ವು ಬಾಯೊಳಗ್ಹೋಗ್ಬಿಟ್ವು ಅಯ್ಯಯ್ಯೊ ಮೈನೆಲ್ಲ ಕಚ್ಚಿ ಬಿಟ್ವು ನಾನುಳ್ಯಾಕಿಲ್ಲ ಅಯ್ಯಯ್ಯೊ ಅಯ್ಯಯ್ಯೋ.....

ಲಚ್ಮಕ್ಕ : ( ಓಡಿ ಬಂದು ) ಅಪ್ಪಾ, ಅಪ್ಪಾ! ಅಪ್ಪಾ! ಏನಾತು ಏನಾತಪ್ಪಾ, ಇದ್ದ್ಯಾಕ್ಕಿಂಗ ಕೂಗ್ತಿ-ಯಪ್ಪಾ, ಯೋಳಪ್ಪಾ ಏನಾತೂ ?

ನ. ಗೌಡ : ( ಭಯದಿಂದ ) ಅಯ್ಯಯ್ಯಪ್ಪಾ ಲಚ್ಮಿ....ಲಚ್ಮೀ. ನಾ ಸತ್ತೆ ನಾ ಸತ್ತೆ. ಕಾಣಾಕಿಲ್ವಾ ನಿಂಗೆ ನೋಡು ನೋಡು ಎಸ್ಟೊಂದು ಚೇಳುಗ್ಳು ನನ್ನ ಕಿತ್ತು

ತಿಂತಿವೆ....ಉಡ್ಗ ಯೋಳ್ದಂಗೆ ಆತು. ಸಾವ್ರ ಸಾವ್ರ ಚೇಳುಗ್ಳು ಲಚ್ಮೀ ನನ್ನಬ್ದ್ಕಿಸು ನನ್ನಬ್ದ್ಕಿಸೂ.

ಲಚ್ಮಕ್ಕ : ( ದುಃಸ್ವಪ್ನವಿದೆಂಬುದನ್ನು ಅರಿತು ) ಅಪ್ಪಾ ನಾನೆಲ್ಲಾನೂ ಕೊಂದಾಕ್ಬಿಡ್ತೀನಿ. ಒಂದು ಪಿಳ್ಳೆ ಉಳೀದಂಗೆ ಚಚ್ಚಾಕ್ಬಿಡ್ತೀನಿ ಇದೊ ಸತ್ವು, ಸತ್ವು (ಹರಕೆಯಿಂದ ರವರಪನೆ ನೂರಾರು ಏಟುಗಳನ್ನು ಹೊಡೆದು, ಎಲ್ಲವನ್ನೂ ಗುಡಿಸುವಳಂತೆ ಮಾಡಿ) ಅಪ್ಪಾ ನೋಡು ಎಲ್ಲಾನೂ ಎಲ್ಲಾನೂ ಒಂದ್ಬಿಡ್ದೆ ಕೊಂದಾಕ್ಬಿಟ್ಟೆ ಉಡ್ಕಿ ಉಡ್ಕಿ ಕೊಂದಾಕ್ಬಿಟ್ಟೆ....ಇನ್ನ ಈ ಮನೇಗೆ ಒಂದೇ ಒಂದು ಚೇಳಿಲ್ಲ. ಒಂದ್ಪಿಳ್ಳೆ ಕೂಡ ಇಲ್ಲ. ಯೋಳೋದಕ್ಕೆ ಎಸರಿಲ್ದಂತೆ ಮಾಡ್ಬಿಟ್ಟೆ....ಇಕಾ ನಿನ್ನ ಆಸ್ಗೇನೂ ಚೆನ್ನಾಗಿ ಒದರಿ ಆಕ್ತೀನಿ.

ನ. ಗೌಡ : ಲಚ್ಮೀ, ಇನ್ನಾಯಾಕಿಲ್ಲ. ಇನ್ನಾಯಾಕೇ ಇಲ್ಲ—ನಾನಿನ್ನಬ್ದ್ಕಿರೋಕಾ ಯಾಕಿಲ್ಲ. ಈ ಪಾಟಿ ಚೇಳುಗೊಳ್ನಡ್ವೆ ನಾನೆಂಗೊಕಿರ್ಲಿ ಜೀವಾನ? ನಿಮ್ಮನ್ನ ಕಚ್ಚೋದಿಲ್ಲ ಎಲ್ಲಾ ನನ್ನೆ ಬಂದ್ಕಚ್ತಾವೆ.

ಲಚ್ಮಕ್ಕ : ಇನ್ನೆಲ್ಲಿವೆ ಚೇಳುಗ್ಳು? ಎಲ್ಲಾನೂ ಚಚ್ಚಾಕ್ಬಿಟ್ಟೆ.

ನ. ಗೌಡ : ಇನ್ನೂ ಅವೆ ಲಚ್ಮಿ, ಇನ್ನೂ ಅವೆ.

ಲಚ್ಮಕ್ಕ : ಇನ್ನ ಸಾಚ್ಟಿಯೋಳಾಕೊಂದಿಲ್ಲ ಅಪ್ಪಾ, ಎಲ್ಲಾ ನಿರ್ಮೂಲ ಆಗೋಯ್ತು. ನೀನಿನ್ಮಲಕ್ಕೊ ಆಪ್ಪಾ, ನಾನು ಇಲ್ಲೆ ಕುಂತಿರ್ತೀನಿ ನಿನ್ತಾವೇನೆ.

ನ. ಗೌಡ : ಇನ್ನೆಲ್ಲಿ ಬರ್ತೈತೆ ನಿದ್ದೆ? ಇನ್ನೆಂಗೆ ಬರ್ತದೆ ನಿದ್ದೆ? ನನ್ಮೇಲೇ ಆಟ ಸಾಧಿಸ್ತಾವಲ್ಲಾ ಈ ಚೇಳುಗ್ಳು? ನನ್ಕರ್ಮ....ನನ್ಕರ್ಮ ನಾನು ಚಿಕ್ಕಂದ್ನಾಗ ಕೊಂದಾಕಿದ ಒಂದೊಂದು ಚೇಳೂ ಈಗ ಸಾವ್ರ ಸಾವ್ರವಾಗಿ, ಇಂಗೆ ರಾತ್ರಿ ಅಗಲೂ ನನ್ನ ಜೀವಾನ ತಿಂತಾವೆ. ಏನ್ಮಾಡ್ಲಿ, ಇನ್ನೇನ್ಮಾಡ್ಲೀ ಕಣ್ಮುಚಿದ್ರೆ ಬಂದ್ಬಿಡ್ತಾವಲ್ಲಾ, ಒಂದೊಂದೂ ಎಗ್ಗಣದ್ದಪ್ಪ....ಕೊಂಡಿಗಳ್ನ ಕಲ್ಯಾಗೆ ಉಜ್ಜೀ.... ಉಜ್ಜೀ ಕೆಂಪ್ಗೆ ಚೂಪ್ಮಾಡ್ಕೊಂಡು....ನನ್ಕಚ್ತಾಕೆ.

ಲಚ್ಮಕ್ಕ : ನಾನಿಲ್ಲೇ ಕುಂತಿರ್ತೀನಿ ತಾವು-ಎಂಗ್ಬಂದಾವು ಅವು! ನೀನೇನೂ ಯೋಚ್ನೆ ಮಾಡ್ಬೇಡ ನಿದ್ದೆವೋಗು ಅಪ್ಪಾ. [ ಗೌಡನು ನಿದ್ದೆ ಹೋಗುತ್ತಾನೆ. ಲಚ್ಮಕ್ಕನೂ ಒಂದು ಬದಿಯಲ್ಲಿ ಮುದುರಿಕೊಳ್ಳುತ್ತಾಳೆ. ]

Musical Bridge

[ನ.ಗೌಡ, ಮೈ ಮುರಿಯುತ್ತಾ ಎಚ್ಚರಗೊಂಡು ಆಕಳಿಸುತ್ತಾನೆ].

ಲಚ್ಮಕ್ಕ : ಅಪ್ಪಾ ನಿದ್ದೆ ಓದ್ಯಾ?

ನ.ಗೌಡ : ಏನ್ ನಿದ್ದೆನೋ ಲಚ್ಮಿ! ನಿನ್ನಾಕ್ವಿಲ್ಬಿಟ್ಟು ನಾನೇ ನಿದ್ದೆ ಓಗ್ಲಿ?

ಲಚ್ಮಕ್ಕ: ಅಪ್ಪಾ ಈವತ್ತು ಬೆಟ್ಟದಲ್ಲಿ ರಾಮದೇವ್ರ ಜಾತ್ರೆ. ಅವ್ರೂ ನಾನೂ ಆರಿಸ್ಕೊಂಡಿದ್ದೀವಿ. ಸಾನ ಮಾಡ್ಕೊಂಡು, ಓಗಿ ಪೂಜೆ ಮಾಡಿಸ್ಕೊಂಡು

ಮದ್ಯಾಣ್ಣಕ್ಬಂದ್ಬಿಡ್ತೀವಿ. ಅಡ್ಗೆಮಾಡಿ ನಿನ್ಗೂಟಾ ಇಲ್ಲೇ ಇಟ್ಟಿಟ್ಟೋಯ್ತೀನಿ. ಚಿಕ್ಕೋನು ಪರೀಕ್ಸೆ ಐತಂದ. ಮನೇಲಿ ಓಮ್ಕೊಳ್ತಿರ್ಲಿ.

ನ.ಗೌಡ : ಅಂಗೇ ನನ್ನಾಷ್ಕೆಸೂ ಒಸ್ಸಿ ಕೈಮುಗ್ದು ಬಾ.

ಲಚ್ಮಕ್ಕ : ಅಟ್ಟೇಗೆಲ್ಲಾ ಬೀಗ ಆಕ್ಕೊಂಡೋಯ್ತೀನಿ. ಆಕ್ಕಪಕ್ಕೋರೂ ಯಾದೂ ಇರಾಕಿಲ್ಲ. ಚಿಕ್ಕೋನ್ಗೆ ಏಳ್ಬಿಟ್ಟೊಗ್ತೀನಿ. ಮನ್ಯಾಗೇ ಇದು ಎಲ್ಲೂ ಓಗ್ಬೇಡಾಂತೇಂದು.

ನ.ಗೌಡ : ಅಂಗೇ ಮಾಡು ಲಚ್ಮಿ....... ( ಲಚ್ಮಕ್ಕ ಹೋಗುತ್ತಾಳೆ )

Musical Bridge

[ ಬೀದಿಯಲ್ಲಿ ರಂಗು ಮತ್ತು ಸಿದ್ದ ]

ರಂಗು : ಏ ಸಿದ್ದ ಸಿಕ್ತೇನೊ ಒಂದಾದ್ರೂ ?

ಸಿದ್ದ : ನಿನ್ನೆಯಲ್ಲಾ ಉಡ್ಕಿ ಉಡ್ಕಿ ಸಾಕಾಗೋಯ್ತು ನಮಗ್ಬೇಕಾದಾಗ ಒಂದೂ ಕಣ್ಣಿಗೆ ಬೀಳಾಕಿಲ್ಲ. ಯಾವುದೊ ಸಣ್ಣದೊಂದು ಚೇಳು ಸಗಣಿ ಕುಪ್ಪ್ಯಾಗ ಸಿಗ್ತು. ಇಡಿಯೋವಾಗ ಅದರ ಕೊಂಡಿ ಮುರ್ದೋಯ್ತು.

ರಂಗು : ಒಳ್ಳೆದಾಯ್ತೇಳು ಎಲ್ಲದು ?

ಸಿದ್ದ : ಇಗೋ ಈ ಬೆಂಕಿಪೊಟ್ಣದಲ್ಲಿ. ಇಲ್ನೋಡು, ಪಾಪ ! ಮುದುರ್ಕೊಂಡು ಕುಂತೈತೆ. ( ತೋರಿಸುತ್ತಾನೆ )

ರಂಗು : ಏನೊ ಮೆದ್ಯಾಕೆ ಇಲ್ವಲ್ಲೊ. ಲೊ ಸತ್ತೋಗೈತೊ ಪಾಪ.

ಸಿದ್ದ : ನಾನೇನ್ಮಾಡ್ಲಿ ಇನ್ನೊಂದನ್ನ ಎಲ್ಲಿ ಉಡುಕ್ಲಿ ಈಗ. ನನ್ಕೈಲಾಗೋಕಿಲ್ಲಪ್ಪ.

ರಂಗು : ಓಗ್ಲಿ ಬಿಡು ಇದ್ರಿಂದ್ಲೇ ಆಟ ಆಡಿಸ್ಬುಡೋಣ. ಆ ಮುದುಕನ್ನ.

ಸಿದ್ದ : ಅಂಗೇ ಸೈ.

ರಂಗು : ನೋಡಪ್ಪ ನೀನು ಯಾತರ್ದೂ ಸದ್ದಾಮೃಡ್ದೆ ಇರ್ಬೇಕು. ನಗು ಬಂದ್ರೆ ಅಂಗೇ ಅಲ್ಕಚ್ಕೊಂಡು ತಡ್ಕೊ. ಏನಂತೀಯ ? ಈವತ್ತು ಏನಿಲ್ಲಾಂದ್ರೂ ಒಂದ್ರೂಪಾಯಿ ಗಿಟ್ಟಸ್ಬಿಡ್ತೀನಿ ಆ ಕುಳ್ಡನ ಅತ್ರ. ಲೋ ಸಿದ್ದ ಚಂಚಿ ತುಂಬ ಅಣ ಇಟ್ಕೊಂಡೌನೆ ಆ ಮುದಿಯ. ಎಂಗಾರೆ ಒಡೀಬ್ಬಿಡ್ಬೇಕು ಅದ್ನ ದೊಟು ರೋಟಾಗಿ. ಏ ಎಲ್ಲಾದ್ರೂ ಬಾಯ್ ಬಿಟ್ಟೇಯೇ. ಕತ್ತು ಮುರ್ದಾಕ್ಬಿಡ್ತೀನಿ. ನಿನ್ಗೆ ನೋಡ್ಕೊ.

ಸಿದ್ದ : ನಾನ್ಯಾಕೇಳ್ಲಿ ? ನಾ ಯೆಳೋನಲ್ಲ .

ರಂಗು : ಸದ್ದಿಲ್ದೆ ಬಾ ನನ್ಜೊತೇಲಿ. ಒಳ್ಳೆ ಒಂದು ನಾಟ್ಕ ತೋರಿಸ್ತೀನಿ ನಿಂಗೆ. (ನಿಷ್ಕ್ರಮಿಸುವರು)

## Musical Bridge

[ ಮಧ್ಯಾಹ್ನದ ವೇಳೆ. ನ. ಗೌಡ ಊಟ ಮುಗಿಸಿ ಕುರ್ಚಿಯಲ್ಲಿ ಕುಳಿತಿದ್ದಾನೆ. ರಂಗನೂ ಸಿದ್ದನೂ ಮೆಲ್ಲಗೆ ಬರುತ್ತಾರೆ. ] .

ರಂಗು : ( ಪಿಸು ಮಾತಿನಲ್ಲಿ ) ಲೇ ಸಿದ್ದ ನೀ ಬಾಕ್ಲತ್ಲೇ ನಿಂತಿರು ತಮಾಷೆ ನೋಡ್ತ. ಒಳಕ್ಕೆ ಬರ್ಬೇಡ. ಸದ್ದು ಮಾಡಬ್ಯಾಡ ತಿಳೀತೆ ?

ಸಿದ್ದ : ಅಂಗೇ ಆಗ್ಲಿ. ಇಲ್ಲೇ ನಿಂತಿರ್ತೀನಿ.

ರಂಗು : ( ಒಳಗೆ ಬಂದು ದೊಡ್ಡ ಧ್ವನಿಯಲ್ಲಿ ) ಉಂಡೇನಜ್ಜಾ ? ಎಲೆ ಅಡ್ಕಿ ಕುಟ್ಟಿ ಕೊಡ್ಲಾ ?

ನ. ಗೌಡ : ಏನೂ ಬೇಡ ಮಗಾ. ಈಟೊತ್ತು ಎಲ್ಲೋಗಿದ್ದೆ? ಪರೀಕ್ಸೆ ಅಂತೀಯ ಪಾಟಗಳೋದ್ಕೊಂಡು ಮನ್ಯಾಗೇ ಇರು. ಮನೇಲಿ ಯಾರೂ ಇಲ್ಲಾಂತ ಗೊತ್ತಿಲ್ವ ನಿಂಕೆ ?

ರಂಗು : ನಾನೆಲ್ಲೋಗಿದ್ದೆ ? ಇಲ್ಲೆ ಓದ್ಕೋತಾ ಇದ್ದೆ. (ಏನನ್ನೋ ಹುಡುಕುತ್ತಿರುವಂತೆ ನಟಿಸಿ ) ಅಯ್ಯಯ್ಯೋ ! ಅಜ್ಜಾ! ಇನ್ನೇನ್ಗತಿ ದೊಡ್ಡ ಕೆಂಚೇಳು ಅಜ್ಜ ಕುರ್ಚಿ ಬೆನ್ನ ಮ್ಯಾಗೆ – ಅಯ್ಯಯ್ಯೋ. ಮ್ಯಾಗೆ ಅತ್ತಾವರೆ....

ನ. ಗೌಡ : (ಬಲು ಸಿಟ್ಟಿನಿಂದ) ಓಗೊ ಆರಾಮ ! ಓಗ್ತೀಯೊ ಇಲ್ವೊ ಇಲ್ಲಿಂದ ?

ರಂಗ : ನಿಜ್ವಾಗೂ ಅಜ್ಜ ದೇವ್ರಾಣ್ಗೂ. ಅಯ್ಯಬ್ಬಾ. ತಾಯ್ಚೇಳು ಅಜ್ಜಾ ಒಟ್ಟೆ ತುಂಬ ಮರಿ ಅವೆ.

ನ. ಗೌಡ : ಓಗ್ತೀಯೊ ಇಲ್ವೊ ? ದೈಯ್ಯ. ತಿರ್ಗ ಚೇಸ್ಟೆ ಮಾಡ್ತೀಯಾ ?

ರಂಗು : ನಂಗೇನು, ಓಯ್ತೀನೇಳು. ಈಗ ನಿನ್ನ ಬುಜದ್ಮ್ಯಾಕೇ ಅತ್ಬಿಡ್ತು. ಚೇಳುಗಳ್ಗೆ ನಿನ್ನ ಮೈ ವಾಸ್ನೇಂದ್ರೆ ಬೊ ಇಸ್ಟ.

[ ಗೌಡನಿಗೆ ಈಗ ಇರಬಹುದೇನೋ ಅನ್ನಿಸಿತು. ಭುಜದ ಮೇಲೆ ಕೈಯಾಡಿಸಿ ಕೊಡವಿದ. ಅವನ ಕೈಗೆ ಏನೂ ಸಿಗಲಿಲ್ಲ. ಗೌಡ ಈಗ ಸಿಟ್ಟಿನಿಂದ ಅಬ್ಬರಿಸಿದ. –]

ನ. ಗೌಡ : ಅಯ್— ಚಂಡಾಲ. ದೇವ್ರು ನನ್ನ ಕಣ್ಣುಗಳ್ನಾನ ಉಳಿಸಿದ್ರೆ ಈಗ ನಿನ್ನ ಸಿಗಿದು ತ್ವಾರಣ ಕಟ್ಬಿಡ್ತಿದ್ದೆ. ಬರೋ ಪಾಪ ಬರ್ಲೀಂತ.

[ರಂಗು ಸಿದ್ದನನ್ನು ನೋಡಿ ಹಲ್ಲು ಕಿರಿದ. ಸಿದ್ದನೂ ಹಲ್ಲು ಕಿರಿದ. ರಂಗು ಚಿಂಕಿ ಪೊಟ್ಟದಲ್ಲಿಟ್ಟುಕೊಂಡಿದ್ದ ಸತ್ತ ಚೇಳನ್ನು ಗೌಡನ ಎಡಗೈ ಮೇಲ್ಭಾಗದಲ್ಲಿ ಕೆಡವಿದ. ರಂಗು ಗಟ್ಟಿಯಾಗಿ ಕೂಗಿ ಹೇಳಿದ —]

ರಂಗು : ಅಯ್ಯಯ್ಯೋ ನೋಡಜ್ಜ. ನಾನು ಸುಳ್ಳೇಳ್ತೀನೇನೊ. ಈಗ ನಿನ್ನ ಕೈಮ್ಯಾಕೇ ಬಂದ್ಬಿಡ್ತು. ಮುಟ್ಬೇಡ ಅಜ್ಜ ಕಚ್ಚಿಬಿಟ್ಟೀತು.

[ ಹುಡುಗರಿಬ್ಬರಿಗೂ ನಗು ಉಕ್ಕಿಬಂತು. ತಡೆಯಲಾರದೆ 'ಪಿಸಪಿಸನೆ' ಸ್ವಲ್ಪ ನಕ್ಕರು. ಆ ನಗು ಗೌಡನ ಕಿವಿಯನ್ನು ಸೋಕದೆ ಹೋಗಲಿಲ್ಲ. ಗೌಡ ತನ್ನಬಲಗೈಯ ಒಂದು ಪೆಟ್ಟಿನಿಂದ ಎಡಗೈ ಮೇಲೆ ಬಿದ್ದಿದ್ದ ಸತ್ತ ಚೇಳನ್ನು ಜಜ್ಜಿ ಕೈಯನ್ನು ಒದರಿ, ಗೌಡನ ಹೃದಯವನ್ನೇ ಈಗ ಚೇಳು ಕುಟುಕಿದಂತಾಯಿತು. ಗೌಡ ಸಿಟ್ಟಿನಿಂದ 'ಥರಥರ' ಕಂಪಿಸಿ ಹೋದ. ಸರ್ರನೆ ಎದ್ದು ಬಾಕಲ ಕಡೆಗೆ ಹೋದ. ಅಲ್ಲಿ ನಿಂತಿದ್ದ ಸಿದ್ದ ಓಡಿ ಹೋದ. ಒಳಗೆ ಇದ್ದ ರಂಗ ಹೊರಗೆ ಹೋಗದಂತೆ ಗೌಡ ಬಾಗಿಲನ್ನು ಮುಚ್ಚಿ ಮೇಲ್ಗಡೆ ವಾಸ್ಕಾಲ ನೆತ್ತಿಗೆ ಹಾಕಿದ್ದ ಕೊಂಡಿಗೆ ಬಾಗಿಲಚಿಲಕವನ್ನು ಸಿಕ್ಕಿಸಿಬಿಟ್ಟ. ಆ ಚಿಲಕವು ಎತ್ತರದಲ್ಲಿದ್ದುದರಿಂದ ರಂಗುವಿಗೆ ಎಟುಕುತ್ತಿರಲಿಲ್ಲ. ರಂಗುವು ಈಗ ಆ ಕೋಣೆಯಲ್ಲಿ ಬಂದಿಯಾದ. ಗೌಡನು ದಪ್ಪವಾದ ತನ್ನ ಬಿದಿರು ಡೊಣ್ಣೆಯನ್ನು ಬಲವಾಗಿ ಬೀಸುತ್ತ, ಭಯಂಕರವಾಗಿ ಅಬ್ಬರಿಸುತ್ತ, ಡೊಣ್ಣೆ ಯನ್ನು ಬೀಸಿ ಬೀಸಿ ಹೊಡೆಯುತ್ತ ಎಡವಿ ಬೀಳುವುದನ್ನೂ ಲೆಕ್ಕಿಸದೆ, ಉನ್ಮತ್ತ ನಂತೆ ಕೋಣೆಯೆಲ್ಲೆಲ್ಲಾ ಓಡಾಡಿದ. ಪಾತ್ರೆ ಪದಾರ್ಥಗಳು ಸಾಮಾನುಗಳು ಎಲ್ಲವೂ ಉರುಳಿ, ಒಡೆದು ಹೋದವು. ಗೌಡನಿಗೆ ಬಿದ್ದು ಎದ್ದು ನಾಲ್ಕಾರು ಕಡೆ ಘಾಯಗಳಾದುವು. ರಂಗುವು ತನ್ನ ದುಸ್ಥಿತಿಯನ್ನೀಗ ಅರಿತ. ಮೈಗೆ ಬೆಂಕಿ ಹತ್ತಿದವನಂತೆ ಚೀರುತ್ತ ಕೋಣೆಯಲ್ಲೆಲ್ಲಾ ಚೀರುತ್ತ ಓಡಾಡಿದ. ಗೌಡನು ಚೀರಿದ ಕಡೆಗೆ ಧಾವಿಸಿ ಡೊಣ್ಣೆಯನ್ನು ಬೀಸಿ ಹೊಡಿಯುತ್ತ ಬಂದ. ಗೌಡನ ಕೋಪ ಅತಿ ರೌದ್ರಕ್ಕೆ ಏರಿತ್ತು. ರಂಗುವು 'ಅಯ್ಯೋ...ಅಯ್ಯೋ... ಅಯ್ಯಯ್ಯೋ...' ಎಂದು ಕೂಗುತ್ತ, ಬೀಸಿ ಬರುತ್ತಿರುವ ಏಟುಗಳನ್ನು ಜಿಂಕೆಯಂತೆ ನೆಗೆದು ನಿವಾರಿಸಿ ಕೊಳ್ಳುತ್ತ ಬಾಗಿಲ ಚಿಲಕವನ್ನು ಎಟುಕಿಸಿಕೊಳ್ಳಲು ಪ್ರಯತ್ನಪಡುತ್ತಾನೆ. ಈ ಶಬ್ದ ಈ ಆರ್ಭಟಗಳನ್ನು ಕೇಳಿ ಹೊರಗಿನವರು ಬಂದು ಬಾಗಿಲನ್ನು 'ಧಿಮಿಧಿಮಿ' ಗುದ್ದಿ ಕೂಗುತ್ತಾರೆ. 'ಯಾರ್‍ರಿ ಒಳಗೆ-ಯಾರ್‍ರೀ-ಬಾಗಿಲು ತೆಗೆಯಿರಿ. ಯಾಕ್ರೀ-ಯಾರನ್ರೀ ಹಾಗೆ ಕೊಲ್ತಿದ್ದೀರಾ ತೆಗೀರಿ ಬಾಗಿಲು ತೆಗೀರಿ' ಎಂದು ಬಾಗಿಲನ್ನು ತೆಗೆಯಿಸಲು ಪ್ರಯತ್ನಪಡುತ್ತಾರೆ. ರಂಗುವು ಓಡಿಬಂದು ಚಿಲುಕವನ್ನು ಎಟುಕಿಸಿಕೊಳ್ಳಲು ಪ್ರಯತ್ನಪಡುತ್ತಾನೆ. ಗೌಡನು ಚಿಲುಕದ ಶಬ್ದವನ್ನು ಕೇಳಿ ಆ ಕಡೆಗೆ ಧಾವಿಸಿ ಡೊಣ್ಣೆ ಯನ್ನು ಬಾಗಿಲಿಗೆ ಬೀಸಿ ಹೊಡೆಯುತ್ತಾನೆ. ಒಂದುಸಲ ರಂಗುವು ಚಿಲುಕವನ್ನು ಎಟು ಕಿಸಿಕೊಳ್ಳುತ್ತಾನೆ. ಅ ಕ್ಷಣವೇ ಗೌಡನ ಡೊಣ್ಣೆಯ ಪೆಟ್ಟು ರಂಗುವಿನ ತೊಡೆಗೆ ಬಲ ವಾಗಿ ತಾಗಿ ರಂಗುವಿನ ತೊಡೆಎಲುಬು ಮುರಿಯುತ್ತದೆ. ರಂಗುವು ಆ ಪೆಟ್ಟಿಗೆ ಆಯ್ಯೋ ಅಜ್ಜ-ನಾ-ಸತ್ತೆ ಸತ್ತೆ-ನಾ-ಸತ್ತೆ ಎಂದು ದೊಪ್ಪನೆ ಬೀಳುತ್ತಾನೆ. ಆಗಲೆ ಹೊರಗಿನ ಜನರು ಬಾಗಿಲನ್ನು ತೆರೆದುಕೊಂಡು ಒಳಕ್ಕೆ ಪ್ರವೇಶಿಸುತ್ತಾರೆ. ಗೌಡನು ರಂಗುವಿಗೆ ಆ ದೈನ್ಯ ಧ್ವನಿಯನ್ನು ಕೇಳಿ ತಾನು ಮಮ್ಮಗನ ತಲೆಯನ್ನೇ ಒಡೆದುಬಿಟ್ಟೆನೆಂಬ ಅನುಭವವಾಗುತ್ತದೆ...ಗೌಡನು "ಅಯ್ಯೋ... ಮಗಾ... ಮಗಾ... ಮಗಾ..." ಎಂದು ಕೂಗುತ್ತಾ ತಾನು ಕೆಳಗೆ ಬಿದ್ದು ಬಿಡುತ್ತಾನೆ. ದೊಣ್ಣೆ ಅವನ ಕೈಯಿಂದ ಜಾರಿ ಹೋಗುತ್ತದೆ. ಗೌಡನ ಬಾಯಲ್ಲಿ ಮೂಗಿನಲ್ಲಿ ನೆತ್ತರ ಹೊರಟು ಗೌಡ ಸಾಯುತ್ತಾನೆ].

ಒಬ್ಬ ಪೌರ : ಅಯ್ಯೋ-ಓಯ್ಯು-ಓಯ್ಯು. ದೊಡ್ಡ ಪರಾಣ. ಹೃದ್ಯ ಒಡೆದ್ಹೋಯ್ತು. ಈ ಕಣ್ಣಿಲ್ದ ಮುದ್ಕನಿಗೆ ಈ ಗತಿ ಬರ್ಬೇಕೆ. ಉಡುಗನ್ಗೆ ತೊಡೇಗೆ ಏಟು ಬಿದ್ದದೆ. ಅವನು ನಿಂತ್ಕೊಳ್ಳಾರ.

ಇನ್ನೊಬ್ಬ : (ಹುಡುಗನನ್ನು ಎಬ್ಬಿಸಿ ನಿಲ್ಲಿಸುವುದಕ್ಕೆ ಹೋಗಿ ತೊಡೆಯೆಲುಬು ಮುರಿದು ಹೋಗಿರುವುದನ್ನು ಕಾಣುತ್ತಾನೆ.) ನಿಂತ್ಕೊ ಮಗ–ನಿಂತ್ಕೊ ಎಲ್ಲೇಟ್ಬಿತ್ತು.

ರಂಗು : ಅಯ್ಯೊ–ನಾ ನಿಲ್ಲಲಾರೆ–ನಿಲ್ಲಾರೆ–ನನ್ತೊಡೆ ಮುರ್ದೋಯ್ತು. ನಾ ಸತ್ತೆ.... ಅಯ್ಯೊ ನಾ ಸತ್ತೆ. (ಆಗ ಲಚ್ಮಕ್ಕ, ಲಚ್ಮಕ್ಕನ ಗಂಡ ಇಬ್ಬರೂ ಜಾತ್ರೆಯಿಂದ ಬಂದವರು ಪ್ರವೇಶಿಸುತ್ತಾರೆ.)

ಒಬ್ಬ : ಅಯ್ಯೊ ಲಚ್ಮಕ್ಕ, ಎಲ್ಲೋಗಿದ್ದೆ ಅವ್ವಾ ನೀನು? ಗೌಡ್ರು ಸತ್ತೋದ್ರು, ಮೊಗ್ಗೆ ತೊಡೆ ಮುರೀತು. ಏನೇನಾಯ್ತೋ! ಶಿವನ್ಗೆ ಬೆಳಕು.

ಲಚ್ಮಕ್ಕ : ಅಯ್ಯೊ ಅಪ್ಪಾ, ಅಪ್ಪಾ ಇಂಗೊಗ್ಬೇಕೇ ನಿನ್ಜೀವ. ಮಗಾ-ಮಗಾ-ಏನ್ಮಾಡ್ಬಿಟ್ಟೆ–ಏನ್ಮಾಡ್ಬಿಟ್ಟೆ.

[ ಮೂರ್ಛೆ ಬೀಳುತ್ತಾಳೆ. ]

